

ಕರ್ನಾಟಕ ಸರಕಾರ

ಕಾದಂಬರಿ



# ಮೊದಲನೋಟ

ತ.ರಾ.ಸುಬ್ಬರಾವ್

ಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ



55

# ಮೊದಲ ನೋಟ

ತ. ರಾ. ಸು.



ವಿಶ್ವ ಕನ್ನಡ ಸಮ್ಮೇಳನ
14-3, ಎ, ನೃಪತುಂಗ ರಸ್ತೆ,
ಬೆಂಗಳೂರು-560 002.

**MODALANOTA—A KANNADA NOVEL by Ta. Ra. Subbarao (Ta.Ra.Su.) published by K. Jayacharya, K. A. S., Additional) Director of Kannada & Culture (Viswa Kannada Sammelana 14/3A, Nrupatunga Road, Bangalore-560 002.**
**Pages 703** **5000 Copies**





**IInd Edition.**



ಸ. ... ಶ್ (ಜಾಬ್)
ಕೊಪ್ಪಿ ... ಹುಬ್ಬಳ್ಳಿ.

**ಆರ್. ಗುಂಡೂರಾವ್**
ಮುಖ್ಯಮಂತ್ರಿ



ವಿಧಾನಸೌಧ
ಬೆಂಗಳೂರು

**ದಿನಾಂಕ: ೧೮–೯–೮೨**

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚಾರಿತ್ರ್ಯಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚಾರಿತ್ರ್ಯಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ದೀರ್ಘಕಾಲ ಇದರ ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ.

ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲೀಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿ ರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸಮೃದ್ಧವಾದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತಹ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೋತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯಮಂತ್ರಿ

## ಯಾರು ನೀನು? ನೀನಾರು?

ಬಾಳಬೀದಿಗಳಲ್ಲಿ ಅಲೆದಾಡುತ್ತಿರುವಾಗ, ಎಷ್ಟೋ ಸಾವಿರಬಾರಿ. ಈ ಪ್ರಶ್ನೆ ಬಂದು ನನ್ನ ಕಿವಿಯ ಕದವನ್ನು ತಟ್ಟಿದೆ.

ಎಷ್ಟೋಬಾರಿ ನಾನು ಆ ಪ್ರಶ್ನೆಗೆ ಉತ್ತರ ಕೊಟ್ಟಿದ್ದೇನೆ: ಎಷ್ಟೋ ಬಾರಿ ಆ ಪ್ರಶ್ನೆಗೆ ಏನು ಉತ್ತರ ಕೊಡಲಿ ಎಂದು ಯೋಚಿಸಿದೇನೆ; ಎಷ್ಟೋ, ಬಾರಿ, ಆ ಪ್ರಶ್ನೆ ನನ್ನನ್ನು 'ನಾನು ಯಾರು?' ಎಂಬ ಯೋಚನೆಗೆ ಕೆರಳಿಸಿದೆ

'ಯಾರು? ನಾನು ಯಾರು?

ನಾನು–ಈ ಎರಡಕ್ಷರದ ನಾನು–ಜಗತ್ತಿನಲ್ಲಿಯ ಎಲ್ಲದಕ್ಕೂ ನಾನು ನನ್ನದು, ನನ್ನವರು, ನನಗೆ ಬೇಕಾದದ್ದು, ನನಗೆ ಬೇಡವಾದದ್ದು, ಎನ್ನುವ ನನ್ನದೇ ಆದ ವಿಶೇಷಣವನ್ನು ಹಚ್ಚಿನೋಡುವ ಚಿಂತಿಸುವ, ಪ್ರೀತಿಸುವ ದ್ವೇಷಿಸುವ, ಬೆಲೆಕಟ್ಟುವ 'ನಾನು'—

ನಾನು ಯಾರು?

ನಾನು ಯಾರು ಎನ್ನುವುದನ್ನು ನನಗೇ ಹೇಳಿಕೊಡಬೇಡಿ. ಈ ಪ್ರಶ್ನೆಗೆ ನಿಮ್ಮ ತುಟಿಗಳ ಮೇಲೆ ಇಣುಕುತ್ತಿರುವ ಉತ್ತರವನ್ನು ನಾನು ಬಲ್ಲೆ. ಅದುನಾನೇ ಹೇಳಿದ ಮಾತು. ನನ್ನ ಪ್ರಶ್ನೆಗೆ ನಾನೇ ನಿಮಗೆ ಹೇಳಿಕೊಟ್ಟ ನಿಜ, ನೂರಾರು ಬಾರಿ ಹೇಳಿಕೊಟ್ಟು ಪಾಠ ಮಾಡಿಸಿದ ಉತ್ತರ. ಅದನ್ನೇ ನನಗೆ ಹೇಳುವ ಅವಸರ ಬೇಡ.

ನೀವು ಹೇಳುವ ಆ 'ನಾನು' ಯಾರೆಂಬುದನ್ನು ನಾನು ಬಲ್ಲೆ.

ನೀವು ಕೇಳುವುದು ಇಷ್ಟೇತಾನೇ. ಪ್ರಶ್ನೆ ಕೇಳುವ ನಿಮ್ಮ ಹಾಗೆಯೇ, ಇಂಥ ಪ್ರಶ್ನೆಗೆ ಉತ್ತರ ಕೊಟ್ಟ ನಿಮ್ಮಂತಹ ಲಕ್ಷಾಂತರ, ಕೋಟ್ಯಾಂತರ, ಶತಕೋಟ್ಯಾಂತರ ಜನರಂತೆಯೇ–

ನಾನೂ ಉತ್ತರ ಕೊಟ್ಟಿದ್ದೇನೆ—

ಹೆಸರು—ಡಿ. ಆರ್. ವೆಂಕಟದಾಸಪ್ಪ.

ತಂದೆಯ ಹೆಸರು—ಡಿ. ವಿ. ರಾಮಚಂದ್ರಯ್ಯ

ಊರು—ದೇವೀಕೆರೆ

ಜಿಲ್ಲೆ—ಚಿತ್ರದುರ್ಗ

ಜಾತಿ—ಬ್ರಾಹ್ಮಣ

ವಯಸ್ಸು—ನಲವತ್ತೈದು

ವೃತ್ತಿ—ಮಾಡುತ್ತಿರುವುದೋ, ಮಾಡಬೇಕೆಂದಿರುವುದೋ?

ಆದಾಯ—ಬಂದಷ್ಟು; ಕೊಟ್ಟಷ್ಟು; ನಾನು ತೆಗೆದುಕೊಂಡಷ್ಟು.

ಪ್ರಶ್ನೆ—ಉತ್ತರ: ನೀವು ಕೇಳುವುದು ಇದೇ ಪ್ರಶ್ನೆ; ನಾನು ಕೊಡುವುದು ಇದೇ ಉತ್ತರ. ನಾನು ಒಲ್ಲೆ. ನೀವು ಕೇಳುವುದೂ ಇಷ್ಟೆ—ನೀವು ಪಡೆಯುವುದೂ ಇಷ್ಟೇ.

—ಮೂರ್ಖರು, ಶತಮೂರ್ಖರು. ಇದಕ್ಕಿಂತ ಹೆಚ್ಚೇನೂ ನೀವು ಕೇಳಲಾರಿರಿ; ಇದಕ್ಕಿಂತ ಹೆಚ್ಚೇನೂ ಪಡೆಯಲಾರಿರಿ.

ಆದರೆ—

ನೀವು ಕೇಳುವ ಈ ಮಾಮೂಲು ಪ್ರಶ್ನೆ, ನನ್ನಿಂದ ಏನು ಉತ್ತರ ಬಯಸುವುದೆಂಬುದನ್ನು ನೀವು ಅರಿಯಿರಿ. ನೀವು ಮಾಡುವ ಎಷ್ಟೋ ಕೆಲಸದಂತೆ, ನೀವು ಕೇಳುವ ಪ್ರಶ್ನೆಯ ಅರ್ಥವೂ ನಿಮಗೆ ತಿಳಿಯದು.

ಆದರೆ—

ಬಾಳಬೀದಿಗಳಲ್ಲಿ—ಗುರಿಯರಿತೋ, ಅರಿಯದೆಯೋ ಅಲೆದಾಡುತ್ತಿರುವಾಗ ಎಷ್ಟೋ ಬಾರಿ ಈ ಪ್ರಶ್ನೆ ಬಂದು ನನ್ನ ಕಿವಿಯ ಕದವನ್ನು ತಟ್ಟಿದೆ; ನೀವು ಕೇಳದೆಯೇ, ಅದೇ, ತಾನಾಗಿಯೇ ಬಂದು, ನನ್ನ ಎದೆಯನ್ನು ತಟ್ಟಿ—

'ನಾನು ಯಾರು?' ಎಂಬ ಯೋಚನೆಯನ್ನು ನನ್ನಲ್ಲಿ ಕೆರಳಿಸಿದೆ.

ನಾನು—ಈ ನಾನು—ಯಾರು?

ಎಲ್ಲರಂತೆಯೇ ಸ್ತ್ರೀ ಪುರುಷರಿಬ್ಬರ ಸಂಭೋಗದಲ್ಲಿ, ಅಂಡಾಶಯದ ಆಶ್ರಯದಲ್ಲಿ ರೇತಸ್ಸಿನ ಬಿಂದುವಾಗಿ ಬಿದ್ದು, ಈ ಮೈ, ಈ ಮುಖ, ಈ ಮನಸ್ಸುಗಳನ್ನು ಪಡೆದು ಮೂಡಿಬಂದ—

ನಾನು—ಯಾರು.

ನನಗೆ ಈ ಮೈ, ಈ ಮುಖ, ಈ ಮನಸ್ಸು—ಯಾರಿಂದ ಏತರಿಂದ?

ಈ ಪುರುಷ—ಪ್ರಕೃತಿಯ ಪ್ರಬಲೇಚ್ಛೆಗೆ ವಶನಾಗಿ, ಸಮಾಜ ತನಗೆ ನೀಡಿದ ಸ್ತ್ರೀ ಗರ್ಭದಲ್ಲಿ ನನ್ನ ಜನನವನ್ನು ಪ್ರೇರೇಪಿಸಿದ ಪುರುಷ ಆತನೇ ನನಗೆ ಜನ್ಮದಾತನೇ?

ಈ ಸ್ತ್ರೀ—ಯಾರ ಗರ್ಭ ಅಣುವಿಗೆ ಮನುಷ್ಯರೂಪವಿತ್ತು ಪುರುಷ ನನ್ನಾಗಿ ಮಾಡಿ, ನನ್ನನ್ನು ಹೊರತಂದಿತೋ. ಆ ಗರ್ಭವೇ ನನಗೆ, ಈ ಮೈ ಈ ಮುಖ, ಈ ಮನಸ್ಸು ನೀಡಿತೇ?

ಅಥವಾ—

ಎಂದಿನದೋ. ಯಾರದೋ. ಎಂತಹುದೋ ಬೇಡಿಕೆ. ಬಯಕೆ ಯಾರಯಾರದೋ ನರನಾಡಿಗಳ ದಾರಿಬಲೆಯಲ್ಲಿ. ಯಾರಿಗೂ ಅರಿವಾಗದಂತೆ ನಡೆದುಬಂದು—

ಈ ಸ್ತ್ರೀ—ಈ ಪುರುಷರ ಮೈ ಬೆಸುಗೆಯಲ್ಲಿ ನನ್ನನ್ನು ಪಡೆಯಿತೋ?

ನನ್ನ, ಈ 'ಇಂದಿನ' ಆಗಮನದ ಸಿದ್ಧತೆ ಎಂದು. ನಡೆಯಿತು?

'ನಾನು–ನಾನು ಎನ್ನುವ ಈ ಮೈ. ಈ ಮುಖ. ಈ ಮನಸ್ಸು –ನಿಜ 'ಈ' ಮನಸ್ಸು–ಭಾವ, ರಾಗ, ಬುದ್ಧಿ–ಮನಸ್ಸು ಮೊದಲಾರ ಗರ್ಭದ ತೊಟ್ಟಿಲಲ್ಲಿ ರೂಪು ಪಡೆಯಿತು? ಎಲ್ಲಿ ಮೂಡಿ, ಈ ಪುರುಷನಲ್ಲಿ ಬೀಜ ವಾಗಿ, ಈ ಸ್ತ್ರೀಯಲ್ಲಿ ಕ್ಷೇತ್ರವಾಗಿ ಹುದುಗಿದ್ದು, ಪ್ರಕೃತಿಯ. ಪ್ರಬಲೇಚ್ಛೆ ಯನ್ನು ತನ್ನ ಇಚ್ಛೆಗೆ ಬಾಗಿಸಿ ನನ್ನನ್ನು ಪಡೆಯಿತು?

ಈ ಪ್ರಶ್ನೆಯನ್ನು ನೀವು ನನ್ನನ್ನು ಎಂದೂ ಕೇಳಿಲ್ಲ. ನೀವು ಕೇಳುವ ಪ್ರಶ್ನೆಯಲ್ಲಿ ಎಂದೂ ಈ ಅರ್ಥವಿರಲಿಲ್ಲ.

ಆದರೂ–

ಬಾಳಬೀದಿಗಳಲ್ಲಿ ಅಲೆದಾಡುತ್ತಿರುವಾಗ ಎಷ್ಟೋ ಬಾರಿ ಈ ಪ್ರಶ್ನೆ ಬಂದು ನನ್ನ ಕಿವಿಯ ಕದವನ್ನು ತಟ್ಟಿದೆ. ಉತ್ತರ ಕೊಡಲು ಧಾವಿಸುವ ನಾಲಗೆಯನ್ನು ತಡೆಹಿಡಿದು 'ಆತುರ ಬೇಡ. ಯೋಚಿಸಿ ಉತ್ತರ ಕೊಡು, ಎಂದು ಎಚ್ಚರಿಸಿದೆ.

ಉತ್ತರ ಹೇಳುವ ಆತುರವನ್ನು ತಡೆಹಿಡಿದು ಯೋಚಿಸಿದ್ದೇನೆ— ಹಿಂದೆ, ಹಿಂದೆ, ಆದಷ್ಟು ಹಿಂದೆ, ನನ್ನ ಮಿದುಳಿಗೆ ಸಾಧ್ಯವಿದ್ದಷ್ಟು ಹಿಂದೆ ಗತಕಾಲದ ಗರ್ಭದಲ್ಲಿ ಕೈಚಾಚಿ, ಅಲ್ಲೆಲ್ಲೋ ಹುದುಗಿರುವ ಉತ್ತರವನ್ನು ಹಿಡಿಯಲು ಯತ್ನಿಸಿದ್ದೇನೆ.

ಆತುರ ಬೇಡ—ಹೇಳುತ್ತೇನೆ.

ನನ್ನ ಈ ಮುಖ?—ನನ್ನ ತಾಯಿ ಹೇಳುತ್ತಾಳೆ—ನನ್ನ ತಾತನ ಹಾಗೆ.

ನನ್ನ ಮನಸ್ಸು—ಅದೂ ಅಷ್ಟಿಷ್ಟು ಹಾಗೆಯೇ.

ನನ್ನ ತಾಯಿಗೆ ಗೊತ್ತಿರುವುದಿಷ್ಟು. ಅದಕಾರಣ ಅದಕ್ಕಿಂತಲೂ ಹಿಂದೆ ಹೋಗಲು ನನಗೆ ಶಕ್ತಿಯಿಲ್ಲ.

ನನ್ನ ತಾಯಿ—ನನ್ನ ತಿಳುವಳಿಕೆಗೂ ಅವಳೇ ತಾಯಿ. ಅವಳ ನೆನಪೇ ನನ್ನ ತಿಳುವಳಿಕೆ.

ಇರಬೇಕು—

ಒಂದು ವಿಗ್ರಹ ಪ್ರಜಾಪತಿ ಬ್ರಹ್ಮನ ಹಸ್ತದಲ್ಲಿ ಸಿಡಿದು 'ತಾಯಿ' 'ಪ್ರಾಣ' ಎಂದು ಎರಡಾದಾಗ, ಆ ಎರಡು ಹೆಣ್ಣು—ಗಂಡಾಗಿ ಒಬ್ಬರನ್ನೊಬ್ಬರು ಸಂಭೋಗಿಸಿದಾಗ—

ಅಂದೇ—ಅಂದೇ ಈ 'ನಾನು ಜನ್ಮತಾಳಿರಬೇಕು.

ಆದರೆ ಆ ವಿವರಗಳಾವೂ ನನಗೆ ತಿಳಿಯದು; ನನ್ನ ತಾಯಿಗೂ ತಿಳಿಯದು—

ಅವಳಿಗೆ ಗೊತ್ತಿರುವುದಿಷ್ಟೆ—ನನಗೆ ಗೊತ್ತಿರುವುದೂ ಅಷ್ಟೆ—ನಾನು ಹುಟ್ಟಿದ್ದು ಎರಡು ತಲೆಮಾರುಗಳ ಹಿಂದೆ;

ದೇವೀಕೆರೆಯಲ್ಲಿ...

# ೧

ದೇವೀಕೆರೆ ದೊಡ್ಡ ಊರೇನಲ್ಲ. ಅಂಥ ಕುಗ್ರಾಮವೂ ಅಲ್ಲ. ಸಧ್ಯಕ್ಕೆ ಆರನೂರು–ಏಳನೂರು ಮನೆಗಳ ಹಳ್ಳಿಯಾದರೂ ಹಿಂದೊಂದು ಕಾಲಕ್ಕೆ ಅದು ಸಾಕಷ್ಟು ದೊಡ್ಡ ಊರಾಗಿದ್ದಿರಬೇಕು ಎಂಬುದು ಹಳ್ಳಿಯ ಸುತ್ತಲ ಅವಶೇಷಗಳಿಂದ ಕಂಡುಬರುತ್ತದೆ. ಈಗ ಮೈಸೂರಿನ ಭೂಪಟದಲ್ಲಿ ದೇವೀ ಕೆರೆಯ ಹೆಸರು ಕಂಡುಬರುವುದಿಲ್ಲವಾದರೂ, ಭೂವಿವರಣೆಯಲ್ಲಿ ಅದರ ಬಗ್ಗೆ ಏನೂ ವಿವರ ಸಿಗುವುದಿಲ್ಲವಾದರೂ, ಪಾಳಯಗಾರರ ಕಾಲದಲ್ಲಿ ದೇವೀಕೆರೆ ಪ್ರಾಮುಖ್ಯವಾದ ಊರೇ ಆಗಿತ್ತು. ಚಿತ್ರದುರ್ಗ–ರಾಯದುರ್ಗ ಗಳ ನಡುವಿನ ರಾಜಮಾರ್ಗದಲ್ಲಿದ್ದ ದೇವೀಕೆರೆ ತನ್ನ ಸನ್ನಿವೇಶದಿಂದಾಗಿ ಆಯಕಟ್ಟಿನ ಸ್ಥಳವಾಗಿತ್ತು. ರಾಯದುರ್ಗದ ಪಾಳಯಗಾರರು ಚಿತ್ರ ದುರ್ಗದ ಪಾಳಯಗಾರರ ವೈರಿಗಳಾಗಿದ್ದುದರಿಂದ, ಅವರ ಕಡೆಯ ಸೇನೆ ಯಾವಾಗಲಾದರೂ ದುರ್ಗದತ್ತ ಹೊರಟರೆ, ದೇವೀಕೆರೆಗೆ ಅರ್ಧಮೈಲಿ ದೂರದಲ್ಲಿದ್ದ ಎತ್ತರವಾದ ಗುಡ್ಡದ ತುದಿಯ ಮೇಲೆ ಬೆಂಕಿ ಹೊತ್ತಿಸಿ, ಚಿತ್ರದುರ್ಗದ ಪಾಳಯಗಾರರಿಗೆ ಅಪಾಯ ಸೂಚನೆ ಕೊಡುತ್ತಿದ್ದರಂತೆ. ಹಾಗೇ ಮಾರ್ಗಮಧ್ಯದಲ್ಲಿಯೇ ಶತ್ರುಸೇನೆಯನ್ನು ತಡೆಯುವ ಸಲುವಾಗಿ, ದೇವೀಕೆರೆಯಲ್ಲಿ ಸೈನ್ಯಸಂಗ್ರಹವೂ ಇದ್ದು, ಅಲ್ಲಿಯ ಕೋಟೆಯ ಒಡೆತನ, ಚಿತ್ರದುರ್ಗದ ಪಾಳಯಗಾರರ ನೆಂಟರ ಪರಿವಾರಕ್ಕೆ ಸೇರಿದಾತನೊಬ್ಬನಿಗೆ ಸೇರಿತ್ತು.

ಈಗ ದೇವೀಕೆರೆಯಲ್ಲಿ ಸೇನೆಯೂ ಇಲ್ಲ, ಪಾಳಯಗಾರರೂ ಇಲ್ಲ ವಾದರೂ, ಹಳ್ಳಿಯ ಸುತ್ತಲೂ ತಂಗಟೆ, ಲಂಟಾನಾ, ಪಾಪಾಸುಕಳ್ಳಿಗಳು ಬೆಳೆದು ತುಂಬಿದ ಅಗಳು, ಮುದುಕನ ಹಲ್ಲುಸಾಲಿನಂತೆ ಅಲ್ಲಲ್ಲಿ ಮುರಿದು ಬಿದ್ದ ಮಣ್ಣಿನ ಕೋಟೆಯ ಗೋಡೆ ದೇವೀಕೆರೆಯ ಗತವೈಭವಕ್ಕೆ ಸಾಕ್ಷಿ ಯಾಗಿ ಉಳಿದಿವೆ. ಈಗಲೂ ಹಳ್ಳಿಯ ಶಿವದೇವಾಲಯಕ್ಕೆ ಎದುರಾಗಿ ಸುಮಾರು ಐನೂರು ಗಜ ದೂರದ ಬಯಲಿನಲ್ಲಿರುವ ನೆಲಗಟ್ಟನ್ನು, ಹಳ್ಳಿಯ ಜನ ಅರಮನೆಯಿದ್ದ ಸ್ಥಳ ಎಂದು ತೋರಿಸಿ, ಹಿಂದಿನ ನೆನಪನ್ನು ಉಳಿಸುವ

ಸಲುವಾಗಿಯೋ ಏನೋ, ಆ ಬಯಲಿಗೆ ಅರಮನೆಯ ಬಯಲು ಎಂದು ಕರೆಯುತ್ತಾರೆ. ಇಷ್ಟಲ್ಲದೆ ಹಿಂದೆ ಅಲ್ಲಿ ಏನಿತ್ತೋ, ಹೇಗಿತ್ತೋ ಎಂದು ಈಗ ತಿಳಿಸುವುದಕ್ಕೆ ಬೇರಾವ ಸಾಕ್ಷ್ಯವೂ ಉಳಿದಿಲ್ಲ—ಜನರ ಬಾಯಲ್ಲಿ ಯಾವಾಗಲಾದರೊಮ್ಮೆ ಕೇಳಿಬರುವ, ಯಾವ ಆಧಾರವೂ ಇಲ್ಲದ ಪಾಳೆಯ ಗಾರರ ಕಾಲದ ಕಥೆಗಳನ್ನು ಉಳಿದು.

ದೇವೀಕೆರೆಗೆ ಆ ಹೆಸರು ಬಂದದ್ದು—ಹಳ್ಳಿಯ ಕೆರೆಯ ಬಳಿಯ ದೊಡ್ಡದಾದ ಅಮ್ಮನವರ ದೇವಾಲಯದಿಂದ. ಕಾಲದ ಓಟದಲ್ಲಿ ಹಳ್ಳಿಗೆ ಹಿಂದಿದ್ದ ಪ್ರಾಮುಖ್ಯತೆ ಹೋಗಿದ್ದರೂ, ದೇವಾಲಯದ ಕೀರ್ತಿ ಮಾತ್ರ ಕಡಿಮೆಯಾಗಿಲ್ಲ. ವರ್ಷಕ್ಕೊಮ್ಮೆ ವೈಶಾಖಮಾಸದಲ್ಲಿ ನಡೆಯುವ ಜಾತ್ರೆಗೆ ಸುತ್ತಲ ಸೀಮೆಯ ಇಪ್ಪತ್ತು—ಮೂವತ್ತು ಹಳ್ಳಿಯ ಜನ ಸೇರುತ್ತಾರೆ. ಅಮ್ಮನವರಿಗೆ ಕುರಿ—ಕೋಣದ ಬಲಿಯಾಗುತ್ತದೆ. ಬಯಲ ನಾಟಕಗಳಾಗುತ್ತವೆ. ಕೆರೆಯ ಬಳಿಯ ಮಾವಿನ ತೋಪಿನಲ್ಲಿ ಬೆಂಡು ಬತ್ತಾಸು, ಮಣಿಸರಕು, ಪಾತ್ರೆಗಳ ಅಂಗಡಿಗಳು ಬಂದು ನೆರೆಯುತ್ತವೆ. ಚಿಂದಿಯುಟ್ಟು ಓಡಾಡುವ ಹಳ್ಳಿಯ ಹೆಂಗಸರ ಮೈಮೇಲೆ ಹೊಸ ಸೀರೆ, ರವಿಕೆಗಳು ಕಾಣುತ್ತವೆ. ರೈತರ ಜಿಡ್ಡುಗಟ್ಟಿದ ಅಂಗಿಗಳ ಮೂಲಬಣ್ಣ ಹೇಗಿದ್ದಿರಬಹುದು ಎಂದು ಮಸಕಮಸಕಾಗಿ ಕಾಣುತ್ತದೆ. ಎತ್ತಿನ ಕೊಡುಗಳಿಗೆ ಕಿರುಮಂಜಿ ಬಣ್ಣ, ಕತ್ತಿಗೆ ಗೆಜ್ಜೆಯ ಸರ ಬರುತ್ತದೆ. ದೊಡ್ಡವರೊಂದಿಗೆ ದಂಡಿಯ ಮಂಕಾದ ಮಕ್ಕಳ ಕಣ್ಣಲ್ಲಿ ಅವರ ವಯಸ್ಸನ್ನು ಸೂಚಿಸುವ ನಗೆ ಚಿಮ್ಮುತ್ತದೆ. ಹಳ್ಳಿಯ ರಸಿಕರಿಗೆ ಕಳೆದುಹೋದ ಪ್ರಾಯ ಮರುಕಳಿಸಿ, ಎಲೆಯಡಿಕೆಯಿಂದ ಅವರ ಬಾಯಿ ರಂಗೇರುತ್ತದೆ. ಚಳ್ಳಕೆರೆಯಿಂದ ಹೊಸ ಇಸ್ಪೀಟು ಪ್ಯಾಕುಗಳು ಹಳ್ಳಿಗೆ ಆಗಮಿಸಿ, ಎಷ್ಟೋ ಜನರಿಗೆ, ಒಂದೇ ರಾತ್ರಿಯಲ್ಲಿ ಶ್ರೀಮಂತರಾಗುವ ಕನಸು ಕೆರಳಿಸುತ್ತವೆ. ಮಾದಿಗರ ಕೇರಿಯಿಂದ ದಿನವಿಡೀ ಕೇಳಿಬರುವ ತಮಟೆಯ ಸದ್ದು, ಜೀವಭೀತಿಯಿಂದ ಕೆಟ್ಟ ಸ್ವರದಲ್ಲಿ ಕೂಗಿಕೊಂಡು ಓಡುವ ಹಂದಿಗಳ ಅರಚಾಟ, ಹೆಡದಂಗಡಿಯ ಮುಂದಿನ ಗಜಿಬಿಜಿ, ಜಾತ್ರೆಯ ಕೀರ್ತಿಯನ್ನು ಐದಾರು ಮೈಲಿ ದೂರಕ್ಕೆ ಮೊಳಗಿಸುತ್ತವೆ.

ಆದರೆ ಉಳಿದ ಕಡೆಯ ಜಾತ್ರೆಗಳಿಗಿಂತ ದೇವೀಕೆರೆಯ ಜಾತ್ರೆಯಲ್ಲಿ ಒಂದು ವಿಶೇಷ—ಅದರ ಮೊದಲ ದಿನದ ಪೂಜೆ. ದೇವಿಗೆ ಜಾತ್ರೆಯ

ಕಾಲವಲ್ಲಿ, ಈ ನಾಸ್ತಿಕತೆಯ ಕಾಲದಲ್ಲೂ, ನಾಲ್ಕಾರು, ಕೋಣ ಹತ್ತು ಹನ್ನೆರಡು ಕುರಿಗಳ ಬಲಿ ನಡೆಯುವದಾದರೂ, ಅದೆಲ್ಲಾ ಎರಡನೆಯ ದಿನದಿಂದ. ಮೊದಲ ದಿನ ದೇವಾಲಯದ ಅಸುಪಾಸಿನಲ್ಲೆಲ್ಲೂ ಕೊಲೆ ಸುಳಿಯುವುದಿರಲಿ, ಹೆಂಡದ ವಾಸನೆ ಕೂಡಾ ಬರುವುದಿಲ್ಲ. ಆದಿನ ಶುದ್ಧ ಮಡಿ.

ಹಗಲು ಹರಿಯುವ ಮೊದಲೇ ಹಳ್ಳಿಯ ಪುರೋಹಿತ ಅಚ್ಚಣ್ಣಭಟ್ಟರು ದೇವೀಕೊಳದಲ್ಲಿ ಸ್ನಾನಮಾಡಿ, ಒದ್ದೆಯ ಬಟ್ಟೆಯಲ್ಲೇ ದೇವಸ್ಥಾನಕ್ಕೆ ಬಂದು, ಮಂತ್ರೋದಕದಿಂದ ದೇವಾಲಯ, ಅದರ ಸುತ್ತಲ ಪರಿಸರವನ್ನು ಪ್ರೋಕ್ಷಿಸಿ, ಪವಿತ್ರಗೊಳಿಸಿ, ದೇವಿಗೆ ಶಾಸ್ತ್ರೋಕ್ತವಾದ ಪೂಜೆ, ಅಭಿಷೇಕಗಳನ್ನು ಮಾಡಿಯಾದ ಮೇಲೆ, ಓಲಗ ತಮಟೆ, ಸೂರ್ಯವಾದ್ಯ, ಕಿಂದರಿವಾದ್ಯ, ಹಗಲು ದೀವಟಿಗೆ, ಕಳಶ ಕನ್ನಡಿ ಮೊದಲಾದ ಮರ್ಯಾದೆಗಳೊಡನೆ, ವೆಂಕಟದಾಸಪ್ಪನವರ ಮನೆಯಿಂದ ದೇವಿಯ ಸುವರ್ಣಮೂರ್ತಿ ದೇವಾಲಯಕ್ಕೆ ಬಿಜಯ ಮಾಡುತ್ತದೆ. ಆಗ ಒದ್ದೆಯ ಮಡಿಯುಟ್ಟು, ದೇವಿಯೊಂದಿಗೆ ಬಂದ ವೆಂಕಟದಾಸಪ್ಪನವರು ದೇವಿಗೆ ಪುನಃ ಪೂಜೆ ಕುಂಕುಮಾರ್ಚನೆ ಮಾಡಿದನಂತರ ಅಮ್ಮನವರಿಗೆ ನೈವೇದ್ಯ ಮುತ್ತೈದೆಯರಿಗೆ ಹೂ ವೀಳ್ಯದ ಶಾಸ್ತ್ರ ಮುಗಿದು ಹಗಲು ಪೂಜೆ ಮುಕ್ತಾಯವಾಗುತ್ತದೆ

ಹರಕೆ ಮಾಡಿಕೊಳ್ಳುವುದೂ, ಹರಕೆಯೊಪ್ಪಿಸುವುದೂ ಮೊದಲ ದಿನವೇ. ಶೂದ್ರಾದಿಗಳೂ ಆ ದಿನ ದೇವಾಲಯಕ್ಕೆ ಬರಬೇಕಾದರೆ ಒದ್ದೆ ಮಡಿಯಲ್ಲೇ, ಬರಬೇಕು. ದಿನವಿಡೀ ದೇವೀಭಾಗವತದ ಪಾರಾಯಣ ನಡೆಯುತ್ತದೆ. ಪಾರಾಯಣ ಮಾಡುವವರೂ ಶುದ್ಧ ಒದ್ದೆ ಮಡಿಯಲ್ಲೇ ಇರಬೇಕು. ಪಾರಾಯಣ ಮಾಡುತ್ತಿದ್ದವರ ಉಟ್ಟಬಟ್ಟೆ ಆರುತ್ತಿದ್ದ ಹಾಗೇ, ಆಗತಾನೇ ಕೊಳದಲ್ಲಿ ಮಿಂದು ಬಂದ ಮತ್ತೊಬ್ಬರು ಪಾರಾಯಣವನ್ನು ಮುಂದುವರಿಸುತ್ತಾರೆ. ಬೆಳಿಗ್ಗೆ ಆರು ಗಂಟೆಯ ವೇಳೆಗೆ ಆರಂಭವಾದ ಪಾರಾಯಣ ರಾತ್ರಿ ಹನ್ನೆರಡು ಗಂಟೆಯ ವೇಳೆಗೆ ಮುಗಿಯುತ್ತದೆ.

ಪಾರಾಯಣಾನಂತರ ರಾತ್ರಿಯ ಪೂಜೆ ಆರಂಭವಾಗುತ್ತದೆ. ಆದರೆ ಆ ಕಾಲವಲ್ಲಿ ಯಾರೂ ದೇವಾಲಯದಲ್ಲಿ ಇರುವಂತಿಲ್ಲ. ವೆಂಕಟದಾಸಪ್ಪನವರೊಬ್ಬರೇ ಇದ್ದು, ಮುಚ್ಚಿದ ಬಾಗಿಲ ಹಿಂದೆ ದೇವಿಗೆ ಪೂಜೆ ಸಲ್ಲಿಸು

ತ್ತಾರೆ. ದೇವೀಭಾಗವತದ ಪಾರಾಯಣ ಮಾಡಿದ ಬ್ರಾಹ್ಮಣರೊಬ್ಬರ ಮೈಮೇಲೆ ದೇವಿ ಕಾಣಿಸಿಕೊಂಡಾಗ ವೆಂಕಟದಾಸಪ್ಪನವರ ಪೂಜೆ ಮುಗಿ-ಯಿತು ಎನ್ನುವುದು ಗೊತ್ತಾಗುತ್ತದೆ. ವೆಂಕಟದಾಸಪ್ಪನವರು ಗರ್ಭ ಗುಡಿಯಿಂದ ಹೊರಬಂದು, ದೇವಿ ಕಾಣಿಸಿಕೊಂಡ ಬ್ರಾಹ್ಮಣರಿಗೆ ಪೂಜೆ ಮಾಡಿ, ಅಡ್ಡಬಿದ್ದು 'ತಾಯಿ, ನಿನ್ನಿಂದ ಅಭಯ ಪಡೆಯಲು ಬಯಸಿ ಬಂದಿರುವ ಮಕ್ಕಳಿಗೆ ಅಪ್ಪಣೆ ಕೊಡು, ಎನ್ನುತ್ತಾರೆ. ಆಗ ಹರಕೆ ಹೊತ್ತುಕೊಂಡವರು ಬಂದು ತಮ್ಮ ಹರಕೆಯೊಪ್ಪಿಸಿ, ಅಡ್ಡಬೀಳುತ್ತಾರೆ. ಪ್ರಶ್ನೆ ಕೇಳಬಂದವರು ಹರಕೆಯನ್ನು ಹೇಳಿ; ಪ್ರಶ್ನೆ ಕೇಳಿ ಉತ್ತರ ಪಡೆಯುತ್ತಾರೆ. ಅದಾದಮೇಲೆ ವೆಂಕಟದಾಸಪ್ಪನವರಿಂದ ಪುನಃ ಪೂಜೆ, ಮುತ್ತೈದೆಯರಿಂದ ಆರತಿ ನಡೆದ ಮೇಲೆ ದೇವಿ ಮಾಯವಾಗುತ್ತಾಳೆ. ಬಳಿಕ ವೆಂಕಟದಾಸಪ್ಪನವರು ಹುತ್ತದ ರೂಪದಲ್ಲಿರುವ ದೇವಿಗೆ ಪೂಜೆ ನೈವೇದ್ಯವನ್ನು ಅರ್ಪಿಸಿ, ಬೆಳ್ಳಿಯ ಬಟ್ಟಲಲ್ಲಿ ಹಾಲನ್ನಿಟ್ಟು ಬಂದು ಗರ್ಭ ಗುಡಿಯ ಬಾಗಿಲು ಹಾಕುತ್ತಾರೆ.' ತಾಯಿ ಸರ್ಪರೂಪದಲ್ಲಿ ಬಂದು ಹಾಲು ಕುಡಿದು ಹೋದ ಬಳಿಕ, ಜಾತ್ರೆ ಆರಂಭವಾಗುತ್ತದೆ. ಇದು ಜಾತ್ರೆಯ ಕಟ್ಟಳೆ. ಇಷ್ಟಾಗದೆ ಜಾತ್ರೆ ನಡೆಯುವಂತಿಲ್ಲ. ಎಷ್ಟೋಬಾರಿ ತಾಯಿ ಹಾಲು ಕುಡಿಯದೆ ಜಾತ್ರೆನಿಂತು ಹೋದುದೂ ಉಂಟೆಂದು ಹಳ್ಳಿಯ ಹಳೆಯ ತಲೆಗಳು ಹೇಳುತ್ತಾರೆ. ಹಾಗೆ ಜಾತ್ರೆ ನಿಂತ ವರ್ಷದಲ್ಲಿ ಊರಿನಲ್ಲಿ ಸಿಡುಬೋ, ಕಾಲರಾವೋ ಮತ್ತಾವುದಾದರೂ ರೋಗ ಕಾಣಿಸಿಕೊಳ್ಳುವುದು ಖಂಡಿತ. ಇದರಿಂದಾಗಿಯೆ ಮೊದಲ ದಿನದ ಪೂಜೆ ನಿರಾತಂಕವಾಗಿ ಕಳೆಯುವವರೆಗೂ, ಹಳ್ಳಿಯಲ್ಲಿ ಜನ ನೆರೆದಿದ್ದರೂ ಜಾತ್ರೆಯ ಉತ್ಸಾಹ ಏರುತ್ತಿರಲಿಲ್ಲ. ಮೊದಲ ದಿನ ಸುಗಮವಾಗಿ ಕಳೆಯಿತು ಎಂದ ಕೂಡಲೇ ಹೊಳೆಗೆ ಹೊಸ ನೀರು ಬಂದಂತಾಗಿ, ಡೋಲು ತಮಟೆ, ಉರುಮೆಗಳ ವಾದ್ಯಧ್ವನಿ ಮುಗಿಲಿಗೆ ಮುತ್ತಿಗೆ ಹಾಕುತ್ತಿತ್ತು.

ಹಳ್ಳಿಯ ಇತರ ದೇವತೆಗಳೂ ಹೆಚ್ಚಿನ ಪೂಜೆ ಕಾಣುತ್ತಿದ್ದುದು ಈ ಜಾತ್ರೆಯ ಕಾಲದಲ್ಲೆ. ಉಳಿದ ಕಾಲದಲ್ಲಿ ಅಮ್ಮನವರನ್ನು ಉಳಿದು, ಬೇರೆ ದೇವರೆಲ್ಲರೂ ಬರೀ ತಣ್ಣೀರು ಸ್ನಾನ, ಕಣಗಲಿ ಹೂವಿನ ಪೂಜೆಯಿಂದಲೇ ತೃಪ್ತರಾಗಬೇಕು. ಶಿವನಿಗೆ ನಂದಿವಾಹನ, ವೀರಭದ್ರನಿಗೆ ಅಗ್ನಿಕುಂಡ,

ಕೆರೆಯ ಅಂಗಳದಲ್ಲಿದ್ದ ಜನಪದಿಗೆ ನಂದಿಕೋಲಿನ ಕುಣಿತ—ಈ ಎಲ್ಲ ವಿಶೇಷ ಉಪಚಾರವೂ ಆ ಕಾಲದಲ್ಲೆ. ಒಂದೊಂದು ದಿನ ಒಂದೊಂದು ಗುಡಿಯಲ್ಲಿ ವಿಶೇಷ. ಆದಿನ ಅಮ್ಮನವರು ಆ ಗುಡಿಗೆ ಬಿಜಯ ಮಾಡುವರು. ಕಡೆಯದಿನ ಊರ ದೇವರುಗಳೇ ಅಲ್ಲದೆ, ಸುತ್ತಮುತ್ತಲ ಹಳ್ಳಿಯ, ದೇವಿಯ ಅಂಶಸಂಭೂತರಾದ ಉಳಿದ ಸ್ತ್ರೀ ದೇವತೆಗಳೂ ಅಮ್ಮನವರ ದೇವಾಲಯಕ್ಕೆ ಬಂದು, ಆ ದೇವತೆಗಳ ಪೂಜಾರಿಗಳೆಲ್ಲರೂ ಅಮ್ಮನವರಿಗೆ ಸರದಿಯ ಪ್ರಕಾರ ಪೂಜೆಯೊಪ್ಪಿಸುವರು. ಎಲ್ಲ ಪೂಜೆಗಳೂ ಮುಗಿದ ಬಳಿಕ ಅಮ್ಮನವರಿಗೆ ದೇವಿಯಕೊಳದಲ್ಲಿ ತೆಪ್ಪೋತ್ಸವ. ಕೊಳದ ಬಳಿಯ ಮಂಟಪದಲ್ಲಿ ಅಮ್ಮನವರಿಗೆ ಮಹಾಮಂಗಳಾರತಿಯಾಗಿ ಎಲ್ಲರೂ ಪ್ರಸಾದ ಸ್ವೀಕಾರ ಮಾಡಿದ ನಂತರ, ಹಳ್ಳಿಗೆ ಬಂದ ಪರಸ್ಥಳದ ದೇವತೆಗಳೆಲ್ಲವೂ ತಮ್ಮ ತಮ್ಮ ಊರಿಗೆ ತೆರಳುತ್ತವೆ. ಅದು ಜಾತ್ರೆಗೆ ಬಂದ ಜನರೂ ತಮ್ಮ ತಮ್ಮ ಹಳ್ಳಿಗಳಿಗೆ ಹೊರಡಲು ಸೂಚನೆ. ವೈಶಾಖ ಶುಕ್ಲ ಸಪ್ತಮಿಯ ದಿನ ಆರಂಭವಾದ ಜಾತ್ರೆ ಹುಣ್ಣಿಮೆಯ ದಿನ ಮುಗಿಯುತ್ತದೆ. ದಿನ ಕಳೆದಂತೆ ತುಂಬಿದ ಹಳ್ಳಿ, ಬರಿದಾಗಿ, ಮತ್ತೆ ಬರಿ ಬೀದಿಗಳು ಬೋಳು ಗಾಡಿಯ ಚಕ್ರಧ್ವನಿಯನ್ನು ಪ್ರತಿಧ್ವನಿಸಲಾರಂಭಿಸುತ್ತವೆ.

ಆಗ ಮಂಕಾದ ಹಳ್ಳಿಯ ಮುಖದಲ್ಲಿ ಮತ್ತೆ ಕೊಂಚ ಗೆಲವು ಮೂಡುವುದು ಆಶ್ವೀಜ ಮಾಸದಲ್ಲಿ. ನವರಾತ್ರಿಯ ಒಂಭತ್ತು ದಿನ ದೇವಿಗೆ ವೆಂಕಟದಾಸಪ್ಪನವರ ಮನೆಯಲ್ಲಿ ಅಖಂಡ ಪೂಜೆ ನಡೆಯುತ್ತದೆ. ಅಮ್ಮನವರ ಗುಡಿಯಲ್ಲಿ ಒಂಭತ್ತು ದಿನ ಅಖಂಡ ದೇವೀಭಾಗವತ ಪಾರಾಯಣವಾಗಿ, ಹತ್ತನೆಯ ದಿನ ಶಮೀ ಪೂಜೆ, ಬಾಳೆಯ ಗಿಡ ಕತ್ತರಿಸುವುದು. ಸೀಮೋಲ್ಲಂಘನದ ಕಾರ್ಯಕ್ರಮಗಳು ನಡೆದ ಬಳಿಕ, ಊರಿನವರಿಗೆ, ಆ ಕಾಲಕ್ಕೆ ಬಂದ ಪರಸ್ಥಳದವರಿಗೆ ಎಲ್ಲರಿಗೂ ಊಟವಾಗುತ್ತದೆ. ಆ ಕಾರ್ಯವೂ ಒಂದು ಮರಿಜಾತ್ರೆ ನಡೆದ ಹಾಗೇ ನಡೆಯುತ್ತದೆ.

ಈಗ ದೇವೀಕೆರೆಯ ಹೆಸರು ಉಳಿದಿರುವುದು ಈ ಜಾತ್ರೆಗಳಿಂದ; ದೇವೀಕೆರೆಗೆ ಆ ಹೆಸರು ನೀಡಿದ ಅಮ್ಮನವರಿಂದ; ಅದು ಬಿಟ್ಟರೆ ದೇವಿಯ ಮುಖ್ಯ ಉಪಾಸಕರಾದ ವೆಂಕಟದಾಸಪ್ಪನವರಿಂದ,

೨

ಚಳ್ಳಕೆರೆ ಪ್ರಾಂತದಲ್ಲಿ ವೆಂಕಟದಾಸಪ್ಪನವರ ಹೆಸರು ಜನಜನಿತವಾಗಿತ್ತು. ಆ ಖ್ಯಾತಿಗೆ ಅವರ ದೇವೀ ಉಪಾಸನೆಯಷ್ಟೇ ಅವರ ಬಯಲು ನಾಟಕಗಳನ್ನು ಬರೆಯುವ ಶಕ್ತಿಯೂ ಕಾರಣವಾಗಿತ್ತು. ವೆಂಕಟದಾಸಪ್ಪನವರು ಸುತ್ತಲ ಸೀಮೆಯ ಜನಕ್ಕೆ ಪರಿಚಿತವಾದುದು 'ನಾಟಕದ ದಾಸಣ್ಣ' ಎಂದೇ. ಯುಗಾದಿ, ನವರಾತ್ರಿ, ರಾಮನವಮಿ ಮೊದಲಾದ ಹಬ್ಬಗಳ ದಿನ, ಜಾತ್ರೆಗಳಲ್ಲಿ ಜನ ಆಡುತ್ತಿದ್ದ ನಾಟಕ ದಾಸಣ್ಣನವರದು. ಅವರ ಶನಿಮಹಾತ್ಮೆ, ದೇವೀ ಮಹಾತ್ಮೆ, ರೇಣುಕಾ ವಿಜಯ, ಪಂಚವಟಿ ಮೊದಲಾದ ನಾಟಕಗಳು, ನಾಟಕಗಳಾಗಿ ಜನಪ್ರಿಯವಾಗಿದ್ದಂತೆ, ಅವರ ಹಾಡುಗಳು ಆ ಪ್ರಾಂತದ ಹೆಣ್ಣು ಮಕ್ಕಳ ಬಾಯಲ್ಲೆಲ್ಲಾ ನಲಿಯುತ್ತಿದ್ದವು. ನಾಟಕಗಳೊಂದಿಗೆ ದಾಸಣ್ಣನವರು ಹಸೆಗೆ ಕರೆವ ಹಾಡು, ಉರುಟಣೆಯ ಹಾಡು, ಬೀಗರ ಹಾಡು, ಆರತಿಯ ಹಾಡುಗಳನ್ನೂ ರಚಿಸಿ ಹೆಂಗಸರಿಗೂ 'ದಾಸಣ್ಣನವರು ಮಾಡಿದ ಪದವಿದು ದೇವೀಕೆರೆ ಊರಿನಲಿ' ಎಂಬ ಸಾಲು ಚಿರಪರಿಚಿತವಾಗಿತ್ತು. ಅಷ್ಟೇ ಚಿರಪರಿಚಿತವಾದುದು ಅವರ ಆತಿಥ್ಯ. ಹಳ್ಳಿಯ ಸಾಮಾನ್ಯ ರೈತನಿಂದ ಹಿಡಿದು, ಜಿಲ್ಲೆಯ ಡೆಪ್ಯುಟಿಕಮೀಷನರ್ ಸಾಹೇಬರವರೆಗೂ ಎಲ್ಲರಿಗೂ ದಾಸಣ್ಣನವರ ಆತಿಥ್ಯದ ರುಚಿ ತಿಳಿದಿತ್ತು.

ಹಾಗೆಂದು ದಾಸಣ್ಣನವರು ಶ್ರೀಮಂತರಲ್ಲ, ಬಡವರು. ಅವರಿಗೆ ಇದ್ದ ಆಸ್ತಿಯೆಲ್ಲಾ ಅಮ್ಮನವರ ದೇವಸ್ಥಾನದ ಬಳಿ ಇದ್ದ ನಾಲ್ಕು ಎಕರೆ 'ಗುಡಿ ಹೊಲ'—ಮತ್ತು ಛತ್ರದ ಪಾರುಪತ್ಯ. ಆ ಛತ್ರ ಯಾರು ಕಟ್ಟಿಸಿದರೋ, ಯಾವ ಕಾಲದಲ್ಲಿ ಕಟ್ಟಿಸಿದರೋ, ಅದಕ್ಕೆ ಇದ್ದ ಹೆಸರೇನೋ ಪೂರ್ಣಯ್ಯನ ಛತ್ರ ಎಂದೇ. ಅವರ ಪಾರುಪತ್ತೇಗಾರಿಕೆಗಾಗಿ ದಾಸಣ್ಣನವರಿಗೆ ದೊರೆಯುತ್ತಿದ್ದುದು ಎರಡಾಳಿನ ಊಟದ ಭತ್ಯ; ಅದರ ಮೇಲೆ ದಿನಕ್ಕೆ ಒಂದು ದುಡ್ಡು ಸಂಬಳ. ಇಷ್ಟರಲ್ಲಿ ಅವರ ಜೀವನದ ಆದ್ಯಂತ ಪುಣ್ಯಕಾಲವೂ ನಡೆಯಬೇಕು. ಅವರು, ಅವರ ಹೆಂಡತಿ, ಮಕ್ಕಳು, ಬಂದು ಹೋಗುವ ಅತಿಥಿಗಳು, ಹಬ್ಬ ಹರಿದಿನಗಳಲ್ಲಿ, ಜಾತ್ರೆಕಾಲ ಎಲ್ಲದರ ವೆಚ್ಚಕ್ಕೂ ಇದೇ ಆದಾಯವೇ ಆಗಬೇಕಿತ್ತು.

ದೇವಿ ದಾಸಣ್ಣನವರಿಗೆ ಒಲಿದಂತೆ, ಇಬ್ಬರು ಗಂಡುಮಕ್ಕಳೊಂದಿಗೆ ಮೂರು ಜನ ಹೆಣ್ಣುಮಕ್ಕಳಾಗಿದ್ದರು. ಬೇರೆಯವರಿಗೆ ಎದೆಗೆಡಿಸಲು ಇಷ್ಟೇ ಸಾಕಾಗಿತ್ತಾದರೂ, ಇಷ್ಟು ಜನದ ಅನ್ನ ಬಟ್ಟೆಯ ಸಮಸ್ಯೆಯೇ ಕಂಗೆಡಿಸುವಂಥದಾದರೂ, ದಾಸಣ್ಣನವರಿಗೆ ಆ ಚಿಂತೆಯಿರಲಿಲ್ಲ. ತಮಗೆ ಮಕ್ಕಳ ವರದಾನ ಮಾಡಿದ ದೇವಿ ತಾನೇ ಸಂರಕ್ಷಿಸುತ್ತಾಳೆ ಎಂದು ನಂಬಿದ್ದರು. ತಮ್ಮ ಹೆಂಡತಿ ಮಕ್ಕಳಿಗೆ ಉಪವಾಸವಾದರೂ ಅವರು ಚಿಂತಿಸುತ್ತಿರಲಿಲ್ಲ. ಇದ್ದಷ್ಟನ್ನು ಎಲ್ಲರೂ ಹಂಚಿಕೊಂಡು 'ತಾಯಿ ನೀನೇ ಗತಿ' ಎಂದು ಹೇಳಿ ಮಲಗಲು ಸಿದ್ಧವಿದ್ದರು. ಆದರೆ ಅತಿಥಿಗಳಿಗೆ ಕೊಂಚ ಅತೃಪ್ತಿಯಾದರೂ ಅವರ ಜೀವಕ್ಕೆ ಬೆಂಕಿ ಹೊತ್ತಿಸಿದಂತಾಗುತ್ತಿತ್ತು. ನಂಬಿದವರಿಗೆ ಕದನ್ನವಾದರೂ ಅತಿಥಿಗಳಿಗೆ ಮಾತ್ರ ರಾಜೋಪಚಾರ ವಾಗಲೇಬೇಕು.

ಅತಿಥಿಗಳು—ಅದೂ ಎಂದೋ, ಎಷ್ಟೋ ದಿವಸಕ್ಕೊಮ್ಮೆ ಬರುವವರಲ್ಲ.

ಪ್ರತಿದಿನವೂ ಹಗಲಿನ ಊಟದ ಹೊತ್ತಿಗೆ ಯಾರಾದರೊಬ್ಬರು ಇರಲೇ ಬೇಕು. ಇಲ್ಲವಾದರೆ ಆ ದಿನ ದಾಸಣ್ಣನವರಿಗೆ, ಅವರ ಹೆಂಡತಿ ರಂಗಮ್ಮನಿಗೆ ಉಪವಾಸವೇ ಶರಣು.

ದಾಸಣ್ಣನವರು ಪ್ರತಿನಿತ್ಯ ಬೆಳಗ್ಗೆ ಐದು ಗಂಟೆಗೆ ಎದ್ದು ಕೆರೆಯ ಕಡೆ ಹೊರಟು, ಬಹಿರ್ದೆಶೆಯನ್ನು ತೀರಿಸಿ, ಕೆರೆಯ ಬಯಲಿನಲ್ಲಿದ್ದ ಕಣಗಿಲ ವನದಿಂದ ದೇವರ ಪೂಜೆಗೆ ಹೂವುಗಳನ್ನು ಆಯ್ದುಕೊಂಡು ಮನೆಗೆ ಹಿಂದಿರುಗಿ, ಸ್ನಾನ ಸಂಧ್ಯಾವಂದನೆ ಮುಗಿಸಿ, ದೇವರ ಪೂಜೆಗೆ ಕೂಡುವರು. ಅವರ ಪೂಜೆ, ಪಾರಾಯಣ ಮುಗಿಯುವ ವೇಳೆಗೆ ಹನ್ನೆರಡು ಗಂಟೆಯ ಹೊತ್ತಾಗಿ, ರಂಗಮ್ಮ ಊಟಕ್ಕೆ ಬಡಿಸುವರು. ದೇವರ ನೈವೇದ್ಯವಾದ ಕೂಡಲೇ ದಾಸಪ್ಪನವರೂ ಊಟಕ್ಕೆ ಏಳುವರು. ಅವರು ಊಟಕ್ಕೇಳುವ ಹೊತ್ತಿಗೆ ಯಾರಾದರೂ ಅತಿಥಿಗಳು ಇದ್ದರೆ ಸರಿ. ಇಲ್ಲವಾದರೆ, "ರಂಗು, ಈ ದಿನ ಯಾಕೋ ಯಾರೂ ಬಂದಂತಿಲ್ಲ. ಯಾರಾದರೂ ಬರುತ್ತಿದ್ದಾ ರೇನೋ ನೋಡುತ್ತೇನೆ" ಎಂದು ಒದ್ದೆಯ ವಸ್ತ್ರವನ್ನು ಹೆಗಲಮೇಲೆ ಹಾಕಿಕೊಂಡು, ಹಾಗೇ ಮನೆಯ ಮುಂದಿನ ಅಂಗಳಕ್ಕೆ ಬಂದು, ಅತಿಥಿಗಳ

ಬರುವುದನ್ನೇ ಕಾಯುತ್ತಾ ಜಗುಲಿಯ ಮೇಲೆ ಕುಳಿತುಕೊಳ್ಳುವರು. ಯಾರಾದರೂ ಬಂದು, ಗಂಡ ಬೇಗ ಊಟಕ್ಕೆ ಎದ್ದಾನೇನೋ ಎಂದು ರಂಗಮ್ಮ ತಲೆಬಾಗಿಲ ಬಳಿಯಲ್ಲೇ ಸುಳಿದಾಡುತ್ತಿರುವಳು. ಆ ಹೊತ್ತಿಗೆ ಸರಿಯಾಗಿ ಯಾರಾದರೂ ಬಂದರೋ ಸರಿಯೆ. ಇಲ್ಲವಾದರೆ ರಂಗಮ್ಮ ಹುಡುಗರಿಗೆ ಊಟಕ್ಕೆ ಬಡಿಸಿ, ತಾನೂ ಗಂಡನ ಜೊತೆಗೆ ಕಾಯುತ್ತಾ ಕುಳಿತುಕೊಳ್ಳುವಳು. ಹಾಗೆ ಕಾದ ದಿನ ಎಷ್ಟು ಹೊತ್ತಾದರೂ ಆಯಿತೆ, ಅಥವಾ ಊಟವಿಲ್ಲದೆ ಹಗಲು ಕಳೆದರೂ ಸರಿಯೆ. ವೆಂಕಟದಾಸಪ್ಪನವರು 'ರಂಗೂ, ಅಮ್ಮನಿಗೆ ಈ ದಿನ ನಾನು ಊಟ ಮಾಡುವುದಂ ಮನಸ್ಸಿಲ್ಲ. ಹೋಗಲಿ ಬಿಡು' ಎಂದು ನೈವೇದ್ಯ ಮಾಡಿದ ಹಾಲನ್ನು ಕುಡಿದಂಬಿಟ್ಟು ಅತಿಥಿಗಳಿಗಾಗಿ ಮಾಡಿದ ಅಡಿಗೆಯನ್ನು ಹಸು ಕಾವೇರಿಗೆ ತಿನ್ನಿಸಿ, ಮಲಗಿ ಬಿಡುವರು.

ಕಾವೇರಿ ಅವರ ಮನೆಗೆ ಬಂದದ್ದೂ, ಅತಿಥಿಗಳಿಗಾಗಿಯೇ. ಅತಿಥಿ ಸತ್ಕಾರಕ್ಕಾಗಿ ಇಂದ್ರ ವಸಿಷ್ಠರಿಗೆ ಕಾಮಧೇನುವಿನ ಮಗಳು ನಂದಿನಿಯನ್ನು ಅನುಗ್ರಹಿಸಿದಂತೆ, ಗಿರಿಯಮ್ಮನಪಳ್ಳಿ ಬುಡನಸಾಬಿ ವೆಂಕಟದಾಸಪ್ಪನವರಿಗೆ ಕಾವೇರಿಯನ್ನು ಕೊಟ್ಟಿದ್ದ. ಕಾವೇರಿ ಅವರ ಮನೆಗೆ ಬಂದದ್ದೂ ಒಂದು ಕಥೆಯೇ.

ಬುಡನಸಾಬಿ ವೆಂಕಟದಾಸಪ್ಪನವರ ಆಪ್ತಮಿತ್ರ. ಅವರಿಬ್ಬರಲ್ಲಿ ಗೆಳೆತನ ಹೇಗೆ ಬೆಳೆಯಿತೋ ಅದು ಇಬ್ಬರಿಗೂ ತಿಳಿಯದು. ಹಾಗೆ ನೋಡಿದರೆ, ಅವರಲ್ಲಿ ಸ್ನೇಹ ಬೆಳೆಯಲು ಇದ್ದ ಸಂದರ್ಭವೇ ಕಡಮೆ. ಹೊರನೋಟಕ್ಕೆ ಇಬ್ಬರ ಜೀವನದ ರೀತಿಗಳೂ ಎರಡು ಧ್ರುವಗಳಿದ್ದ ಹಾಗೆ ಇದ್ದವು.

ವೆಂಕಟದಾಸಪ್ಪನವರು, ದುಡ್ಡಿನ ಸಂಬಳದ ಛತ್ರದ ಪಾರುಪತ್ತೇಗಾರರಂ; ಬುಡನಸಾಬಿನ ಜೋಡುಕುದುರೆ ಸಾರೋಟಿನ ಶ್ರೀಮಂತ. ಸುತ್ತಲ ಸೀಮೆಯಲ್ಲೇ ಅಂಥ ಕುದುರೆಗಳನ್ನಿಟ್ಟವರಿರಲಿಲ್ಲ. ಆಮಲ್ದಾರರ ಬಳಿ, ಡೆಪ್ಯುಟಿ ಕಮೀಷನರ್ ಸಾಹೇಬರ ಬಳಿ ಕದುರೆ ಇರುತ್ತಿತ್ತು. ಆದರೆ ಒಂಟಿ ಕುದುರೆ; ಇಂಥ ಜಾತಿಯವಲ್ಲ. ಬುಡನಸಾಬಿಯ ಕುದುರೆಗಳೆರಡೂ ಅಚ್ಚ ಬಿಳಿಯ ಬಣ್ಣದ, ಉತ್ತಮ ಜಾತಿಯ ಕುದುರೆಗಳು. ಒಂದೊಂದೂ

ಸಾವಿರ ರೂಪಾಯಿ ಬೆಲೆಯವು. ಅವುಗಳ ಗುಣವೂ ಅಂಥದೇ: ಬುಡನಸಾಬಿ ಹೇಳುತ್ತಿದ್ದ ಹಾಗೆ 'ಲಕ್ಷ ವರಹದ ಘೋಡಾ.' ಅವು ಓಡಲು ಎಂದೂ ಏಟು ತಿಂದದ್ದಿಲ್ಲ. ಹಾಗೇ ಬುಡನಸಾಬಿಯು ವಿನಹ ಬೇರಾರೂ ಅವುಗಳ ಬಳಿ ಹೋಗುವಂತಲೂ ಇರಲಿಲ್ಲ. ಬುಡನಸಾಬಿಯ ಬೀಬಿಯೇ ಹಿಂದೂ ಹೆಂಗಸರ ಹಾಗೆ ನವರಾತ್ರಿಯಲ್ಲಿ ಕುದುರೆ ಪೂಜೆಯ ದಿನ ಹೋಳಿಗೆ ತಿನ್ನಿಸಲು ಹೋಗಿ ಕೈ ಕಚ್ಚಿಸಿಕೊಂಡು ಹಿಂತಿರುಗಿದ್ದಳು. ಅವಕ್ಕೆ ಹುಲ್ಲು ನೀರನ್ನೂ ಬುಡನಸಾಬಿಯೇ ಹಾಕಬೇಕು. ಆಳು ಅವುಗಳ ಮೈ ಉಜ್ಜು ವಾಗ, ಬುಡನಸಾಬಿ ಅವುಗಳ ಮುಖ ನೇವರಿಸುತ್ತಾ, ಹುಲ್ಲು ತಿನ್ನಿಸುತ್ತಾ ಇರಬೇಕು. ಇಲ್ಲವಾದರೆ, ಮರುಗಳಿಗೆಯೇ ಕುದುರೆಯಾಳಿಗೆ ಸೊಂಟ ಚಿಕಿತ್ಸೆಯಾಗಬೇಕಾಗಿತ್ತು. ಬೇರೆ ಯಾರಾದರೂ ಹತ್ತಿರ ಬಂದರೆ, ಹಿಂಗಾಲುಗಳ ಮೇಲೆ ಎದ್ದುನಿಂತು, ಮುಂಗಾಲುಗಳಿಂದ ಗಾಳಿಯನ್ನು ಬಗೆಯುತ್ತಾ, ಎದಿ ಬಿರಿಯುವ ಹಾಗ ಕೆನೆಯುತ್ತಿದ್ದ ಆ ಕುದುರೆಗಳು, ಬುಡನ್ ಸಾಬಿಯ ಇದುರಿಗೆ ಮಾತ್ರ ಹಸುವಾಗುವಿನ ಹಾಗಾಡುವವು. ಅವನ ಹತ್ತಿರಕ್ಕೆ ಬಂದು ಹಗಲಮೇಲೆ ಕತ್ತು ಹಾಕಿ, ಮೈ–ಮುಖವನ್ನು ಮೂಸಿ, ಮೈಗೆ ಮೈ ತಿಕ್ಕಿ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸುವವು. ಆ ಎರಡು ಕುದುರೆಗಳಲ್ಲಿ ಒಂದಂತೂ—ಟೀಪು ಎಂದು ಅದಕ್ಕೆ ಹೆಸರಿಟ್ಟಿದ್ದ ಬುಡನ ಸಾಬಿ—ಅವನ ಖಾಸಾ ಮಗ.

ಆ ಕುದುರೆಯನ್ನು ಬುಡನಸಾಬಿ ಕೊಂಡ ಕಥೆಯನ್ನು ಕೇಳಿದರೆ, ಆ ಕುದುರೆಗೂ ಅವನಿಗೂ ಏನೋ ಪೂರ್ವಜನ್ಮದ ಸಂಬಂಧವಿರಬೇಕು ಎನಿಸುತ್ತದೆ.

ಬುಡನಸಾಬಿ ಕುದುರೆ ಕೊಂಡುಕೊಳ್ಳಬೇಕೆಂದು ಬೆಂಗಳೂರಿನ ಮಂಡಿಗೆ ಹೋದಾಗ, ಹತ್ತಾರು ಕುದುರೆಗಳ ನಡುವೆ ಇದ್ದ ಟೀಪು ಇವ, ನನ್ನು ಕಂಡ ಕೂಡಲೇ ಹತ್ತಿರ ಬಂದು, ಇವನ ಮೈಯನ್ನು ನೆಕ್ಕುತ್ತಾ ನಿಂತಿತಂತೆ. ತಾನಾಗಿಯೇ ತನ್ನ ಬಳಿ ಬಂದು ನಿಂತ ಟೀಪುವನ್ನು ನೋಡಿದ ಬುಡನಸಾಬಿ 'ಇದೇ ಇರಲಿ, ಬೆಲೆ ಎಷ್ಟು' ಎಂದು ಕೇಳಿದ. ಕುದುರೆಯಾತ ಸಾವಿರರೂಪಾಯಿ ಬೆಲೆಯಾಗುತ್ತದೆ' ಎಂದ. ಬುಡನಸಾಬಿ ಅಷ್ಟು ಬೆಲೆಯ

ಕುದುರೆಯನ್ನು ಕೊಂಡುಕೊಳ್ಳಬೇಕೆಂದು ಲೆಕ್ಕ ಹಾಕಿರಲಿಲ್ಲ. ಬೆಲೆ ಕೇಳಿ ಹಿಂಜರಿದು ಕುದುರೆಯ ಮುಖ ನೋಡಿದ. ಅದು 'ನನ್ನನ್ನು ಬಿಡಬೇಡ' ಎಂಬಂತೆ ಅವನ ಕಡೆ ನೋಡಿತಂತೆ. ಕೂಡಲೇ 'ಆದರೂ ಚಿಂತೆ ಇಲ್ಲ. ಇದೇ ಇರಲಿ' ಎಂದ. ಬುಡನಸಾಬಿ ಬೆಲೆಗೆ ಹೆದರದೆ ಇದ್ದುದನ್ನು ಕಂಡು ಕುದುರೆಯಾತ 'ನೋಡಿ ಸಾಹೇಬರೇ ಬೆಲೆ ಎಷ್ಟಾದರೂ ಆಗಲಿ ಎನ್ನುತ್ತೀರ ನೀವು. ಆದ್ದರಿಂದ ನಿಮ್ಮಲ್ಲಿ ಸುಳ್ಳು ಹೇಳಬಾರದು. ಇರುವ ವಿಷಯ ಹೇಳಿಬಿಡುತ್ತೇನೆ. ಕುದುರೆಯೇನೊ ಒಳ್ಳೆಯ ಜಾತಿಯದೇ. ಓಟ, ನಡಿಗೆ ಎಲ್ಲಾ ಸರಿಯೆ. ಆದರೆ ಬಹಳ 'ರಾಂಗ್' ಮಾಡುತ್ತದೆ. ಒಬ್ಬಿಬ್ಬರು ಸವಾರಿ ಮಾಡಲು ಹೋಗಿ ಕೈಕಾಲು ಮುರಿದುಕೊಂಡಿದ್ದಾರೆ. ಯಾರಿಗೂ ಪಳಗುವುದಲ್ಲ ಇದು. ಎಂದಿದ್ದರೂ ಗುಂಡಿನ ಬಾಯಿಗೆ ತುತ್ತಾಗಿಸುವ ಕುದುರೆ ಇದು. ಇದು ಇರುವ ನಿಜವಾದ ವಿಷಯ, ಇಷ್ಟರ ಮೇಲೆ ನಿಮ್ಮಿಷ್ಟ' ಎಂದ.

ಆತ ಹೇಳಿದುದನ್ನು ಕೇಳಿ ಬುಡನಸಾಬಿಗೂ ಒಂದು ಗಳಿಗೆ ಗಾಬರಿ ಯಾಯಿತು. ಹತ್ತಿರ ಬಂದು ನಿಂತ ಕುದುರೆಯನ್ನು ನೋಡಿದ. ಅವನ ಹೆಗಲ ಮೇಲೆ ಕತ್ತುಹಾಕಿ ಉಜ್ಜುತ್ತಿದ್ದ ಕುದುರೆ ಹಸುಮಗುವಿನಂತೆ ಅವನತ್ತ ಕಣ್ಣು ಅರಳಿಸಿತು. ಅದರ ನೀಳವಾದ ಮೂತಿಯನ್ನು ನೇವರಿಸಿದ. ಅವನ ನೇವರಿಕೆಯಿಂದ ತೃಪ್ತವಾದಂತೆ ಕುದುರೆ ಮತ್ತಷ್ಟು ಹತ್ತಿರ ಸರಿದು ನಿಂತಿತು. ಒಂದುಗಳಿಗೆ ಇದನ್ನು ಕೊಂಡರೆ ಸಾವಿರ ರೂಪಾಯಿ ಕೊಟ್ಟು ತಲೆನೋವು ಕೊಂಡುಕೊಂಡ ಹಾಗಾದೀತೇನೋ ಎಂದು ಹೊಯ್ದಾಡಿದ ಬುಡನಸಾಬಿಯ ಮನಸ್ಸು ನಿಶ್ಚಲವಾಯಿತು. 'ಯಾಕೋ ಇದೇ ನನ್ನ ಪಸಂದು ಮಾಡಿದೆ. ಆದದ್ದಾಗಲಿ. ಇದೇ ಇದ್ದು ಬಿಡಲಿ' ಎಂದ. ಅವನ ಮಾತು ಅರ್ಥವಾದಂತೆ ಕುದುರೆ ಕೆನೆದಿತು. ಬುಡನಸಾಬಿ ಥೈಲಿಯನ್ನು ಬಿಚ್ಚಿ ರೂಪಾಯಿಯನ್ನೆಣಿಸಿ 'ಚಲ್ ಬೇಟಾ' ಎಂದ. ಯಾರ ಬಲವಂತವೂ ಇಲ್ಲದೆ ಕುದುರೆ ಅವನನ್ನು ಹಿಂಬಾಲಿಸಿತು. ಮನೆಗೆ ಬಂದ ಮೇಲೆ ಬುಡನ ಸಾಬಿ ಅದಕ್ಕೆ 'ಟೀಪೂ' ಎಂದು ನಾಮಕರಣ ಮಾಡಿದ. ಅಂದಿನಿಂದ ಟೀಪೂ ಬುಡನಸಾಬಿಯ ಮನೆಯ ಮಗನಾದ.

ಜೋಡಿಕುದುರೆ ಸಾರೋಟನ್ನಿಡಬೇಕೆಂಬ ಆಸೆಯನ್ನು ಕಟ್ಟಿಕೊಂಡ ಬುಡನಸಾಬಿಗೆ, ಟೀಪೂವಿಗೆ ತಕ್ಕ ಜೊತೆ ಹೊಂದಿಸುವುದು ಕಷ್ಟವಾಯಿತು.

ಎರಡು ಮೂರು ಕುದುರೆಗಳನ್ನು ತಂದರೂ, ಅವಕ್ಕೂ ಟೀಪುವಿಗೂ ಗೆಳೆತನ ವಾಗಲಿಲ್ಲ. ಒಂದು ಟೀಪುವಿನೊಂದಿಗೆ ಸರಸವಾಡಲು ಹೋಗಿ ಕಾಲು ಮುರಿದುಕೊಂಡಿತು; ಮತ್ತೊಂದರ ಮೈಯೆಲ್ಲಾ ಗಾಯವಾಯಿತು; ಮೂರನೆಯದು ಲಾಯದಲ್ಲೇ ಏಟು ತಿಂದು, ಮೈಯೆಲ್ಲಾ ರಕ್ತವಾಗಿ ಸತ್ತಿತು. ತಾನೇ ಟೀಪುವಿಗೆ ತಕ್ಕ ಜೊತೆ ಎಂದು ಆರಿಸಿ ತಂದ ಮೂರು ಕುದುರೆಗಳನ್ನೂ ಕಳೆದುಕೊಂಡು ಎರಡು ಸಾವಿರ ರೂಪಾಯಿ ನಷ್ಟವಾಗಿ ಕೊಂಡ ಬುಡನ್‌ಸಾಬಿಗೆ ಏನು ಮಾಡುವುದು ಎಂದು ತೋಚಲಿಲ್ಲ. 'ಸಾರೋಟಿನ ಆಸೆಯನ್ನೇ ಬಿಟ್ಟು ಈ ಹಾಳು ಸೈತಾನನ್ನೂ ಮಾರಿಬಿಡಿ' ಎಂದಳು ಬುಡನಸಾಬಿಯ ಬೀಬಿ. ಆದರೆ ಟೀಪುವನ್ನು ಮಾರುವ ಯೋಚನೆ ಬಂದಕೂಡಲೇ ಬುಡನಸಾಬಿಯ ಕರಳು ಕತ್ತರಿಸಿದಂತಾಗುತ್ತಿತ್ತು. ಆದರೆ ಅದನ್ನು ಇಟ್ಟುಕೊಂಡರೆ ತನ್ನ ಜೋಡಿ ಕುದುರೆ ಸಾರೋಟಿನ ಬಯಕೆ ಬರಿಗನಸಾಗುತ್ತದಲ್ಲಾ ಎಂದೂ ವ್ಯಥೆಯಾಗುತ್ತಿತ್ತು. ಬುಡನಸಾಬಿಗೆ ಎರಡೂ ಬಿಡಲಾಗದ ಬಯಕೆಗಳೇ. ಬಹಳ ದಿನ ಈ ಬಯಕೆಗಳೊಂದಿಗೆ ಹೋರಾಡಿ, ಕಡೆಗೆ 'ಇದು ಕೊನೆಯ ಬಾರಿ ಇನ್ನೊಂದು ಕುದುರೆ ತಂದುಬಿಡುತ್ತೇನೆ. ಅದಕ್ಕೂ ಟೀಪು ಗದ್ದಲ ಮಾಡಿದರೆ, ಟೀಪುವನ್ನೂ ಕೊಂದು ಅದರೊಂದಿಗೇ ಜೋಡು ಕುದುರೆ ಸಾರೋಟಿನ ಬಯಕೆಯನ್ನೂ ಹುಗಿದು ಬಿಡುತ್ತೇನೆ' ಎಂದು ನಿಶ್ಚಯವಾಡಿದ.

ಆದರೆ ನಾಲ್ಕನೆಯ ಬಾರಿ ಬುಡನಸಾಬಿ ಕುದುರೆಯನ್ನು ಆರಿಸಲು ಟೀಪು ಅವಕಾಶ ಕೊಡಲಿಲ್ಲ; ತನಗೆ ಬೇಕಾದ ಜೋಡಿಯನ್ನು ತಾನೇ ಆರಿಸಿಕೊಂಡಿತು. ಕುದುರೆಯನ್ನು ಕೊಳ್ಳುವ ಸಲುವಾಗಿ ಬೆಂಗಳೂರಿಗೆ ಹೋಗಲು, ಚಳ್ಳಕೆರೆಯಿಂದ ಟೀಪುವನ್ನು ಕಟ್ಟಿದ ಗಾಡಿಯಲ್ಲಿ ಹೊರಟ ಬುಡನಸಾಬಿ. ಹಿರಿಯೂರು ಮಾರ್ಗದಲ್ಲಿ ಹತ್ತು ಮೈಲಿ ದೂರ ಹೋಗಿ ದ್ದಾಗ, ಊರಿಂದೂರಿಗೆ ಚಾಕು ಕತ್ತರಿ ಮಾರಾಟ ಮಾಡಿಕೊಂಡು ತಿರುಗು ತ್ತಿದ್ದ ಅರಬ್ಬಿ ಜನಗಳ ಪರಿವಾರವೊಂದು ಇದಿರಾಯಿತು. ಹೆಂಡಿರು ಮಕ್ಕಳೊಂದಿಗೆ ಊರಿಂದೂರಿಗೆ ಸಂಸಾರ ಸಮೇತ ತಿರುಗುವ ಆ ಜನಗಳ ಗುಂಪೊಂದು ರಸ್ತೆಯ ಪಕ್ಕದಲ್ಲೇ ಬಿಡಾರ ಹೂಡಿತ್ತು. ನಾಲ್ಕೈದು ಮಂದಿ ಗಂಡಸರು ಮರದ ಕೆಳಗೆ ಹುಕ್ಕಾ ಸೇದುತ್ತಾ ಕುಳಿತಿದ್ದರು. ಹತ್ತಿರ

ವಲ್ಲೇ ಅವರ ಹೆಂಗಸರು ಅಡಿಗೆ ಮಾಡುತ್ತಿದ್ದರು. ಒಬ್ಬಿಬ್ಬರು ಹೆಂಗಸರು ಡೇರಾದಲ್ಲಿ ಮಕ್ಕಳನ್ನು ಆಟವಾಡಿಸುತ್ತಿದ್ದರು. ಹತ್ತಿರದಲ್ಲೇ ಅವರ ಡೇರಾ, ಸಾಮಾನುಗಳನ್ನು ಹೊರುವ ಎರಡು ಮೂರು ಕುದುರೆಗಳು ಮೇಯುತ್ತಿದ್ದವು. ಆ ಕುದುರೆಗಳನ್ನು ಕಂಡ ಕೂಡಲೇ ಗಾಡಿಯನ್ನೆಳೆದು ಕೊಂಡು ಓಡುತ್ತಿದ್ದ ಟೀಪು ಗಕ್ಕನೆ ನಿಂತು ಕೆನೆಯಿತು. ದಾರಿಯಲ್ಲಿ ಓಡುವಾಗ ಎಂದೂ ನಿಲ್ಲದ ಕುದುರೆ ಹಾಗೆ ನಿಂತುದನ್ನು ಕಂಡು ಗಾಡಿ ಯಲ್ಲಿದ್ದ ಬುಡನ ಸಾಬಿ ಏಕೋ ಎಂದು ಹೊರಗೆ ಇಣಿಕಿ ಹಾಕಿದ. ಟೀಪುವಿನ ಕೂಗನ್ನು ಕೇಳಿದ, ಅರಬರ ಕುದುರೆಗಳ ಪೈಕಿ ಒಂದು ತಾನೂ ಕೆನೆದು ಟೀಪುವಿನ ಹತ್ತಿರ ಓಡಿ ಬಂತು.

ಟೀಪು, ಬುಡನಸಾಬಿ 'ಜಲ್‌ರೆ ಬೇಟಾ' ಎಂದದ್ದನ್ನೂ ಗಮನಿಸದೆ, ಹತ್ತಿರಾದ ಕುದುರೆಯ ಮೈಯನ್ನು ನೆಕ್ಕಿ, ಮುಂದಲೆಯನ್ನು ಮೂಸುತ್ತಾ ನಿಂತೇ ಇತ್ತು. ಆ ಕುದುರೆಯನ್ನು ಬುಡನಸಾಬಿಯೂ ನೋಡಿದ. ಟೀಪುವನ್ನು ಗಾಡಿಗೆ ಕಟ್ಟದಿದ್ದರೆ, ಅವೆರಡರಲ್ಲಿ ತನ್ನ ಟೀಪು ಯಾವುದು ಎಂದು ಪತ್ತೆ ಹಚ್ಚುವುದೇ ಕಷ್ಟವಾಗುವಷ್ಟು ಮಟ್ಟಿಗೆ, ಟೀಪುವನ್ನೇ ಹೋಲುತ್ತಿತ್ತು ಆ ಕುದುರೆ. ಟೀಪುವಿನ ಜೋಡಿಗೆ ತಕ್ಕ ಕುದುರೆ ಅನಿಸಿತು. ಏನಾದರಾಗಲಿ ಇದನ್ನು ಕೊಂಡುಕೊಂಡುಬಿಡಬೇಕೆಂದು ನಿಶ್ಚಯ ಮಾಡಿಯೇ, ಗಾಡಿಯಿಂದ ಕೆಳಗಿಳಿದು, ಮರದ ಕೆಳಗೆ ಹುಕ್ಕಾ ಸೇದುತ್ತಾ ಕುಳಿತಿದ್ದ ಅರಬರ ಬಳಿ ಹೋಗಿ, ಉರ್ದೂ ಭಾಷೆಯಲ್ಲಿ 'ಆ ಕುದುರೆ ಯಾರದು?' ಎಂದು ವಿಚಾರಿಸಿದ. ಗುಂಪಿನ ಮುಖ್ಯಸ್ಥ ಮುಂದೆ ಬಂದು 'ಏನಾಗಬೇಕು?' ಎಂದು ಕೇಳಿದ. 'ಆ ಕುದುರೆಯನ್ನು ನನಗೆ ಬೆಲೆಗೆ ಕೊಡುತ್ತೀಯಾ?' ಎಂದ. ಆ ಕುದುರೆಯ ಬಗ್ಗೆ ಅವನು ಅಷ್ಟು ಉತ್ಸಾಹವನ್ನು ತೋರಿಸಿದ್ದನ್ನು ಕಂಡು ಅರಬರವನು 'ಐನೂರು ರೂಪಾಯಿಯಾದರೆ ಕೊಡುತ್ತೇನೆ. ಕಾಸು ಕಡಿಮೆಯಾದರೆ ಇಲ್ಲ' ಎಂದ. ಬುಡನಸಾಬಿ ಹೆಚ್ಚು ಮಾತು ಬೆಳೆಸದೆ. ಗಾಡಿಗೆ ಹಿಂದಿರುಗಿ, ಐನೂರು ರೂಪಾಯಿ ತಂದು ಎಣಿಸಿಬಿಟ್ಟ. ಆ ಕುದುರೆ ಅವನದಾಯಿತು. ಬೆಂಗಳೂರನ್ನು ಮರೆತು ಆಗಲೇ ಚಳ್ಳಕೆರೆಗೆ ಹಿಂದಿರುಗಿದ.

ಬುಡನಸಾಬಿ ಅರಬರಿಂದ ಕುದುರೆ ತೆಗೆದುಕೊಂಡನೆಂಬುದನ್ನು

ಕೇಳಿದಾಗ ಎಷ್ಟೋ ಜನ ಅವನಿಗೆ ಹೆದರಿಸಿದರು. 'ಇದು ಎಲ್ಲೋ ಕಳ್ಳ ಮಾಲಿರಬೇಕು. ಇಲ್ಲವಾದರೆ ಭಿಕಾರಿಗಳ ಬಳಿ ಇಂಥ ಕುದುರೆ ಎಲ್ಲಿಯದು? ಅರಬರು ಶುದ್ಧ ಕಳ್ಳಕೊರಮರು. ಎಲ್ಲಿಂದಲೊ ಕದ್ದು ತಂದಿದ್ದಿರಬೇಕು ಇದು. ಸುಮ್ಮನೆ ಅವರಿಗೇ ಕೊಟ್ಟುಬಿಡು. ಇಲ್ಲವಾದರೆ ಪೋಲೀಸರ ಕೈಗೆ ಸಿಕ್ಕುಹಾಕಿಕೊಂಡು ನರಳಬೇಕಾಗುತ್ತದೆ' ಎಂದರು. ಮತ್ತೆ ಕೆಲವರು 'ಎಲ್ಲಾ ಬಿಟ್ಟು ಅರಬರ ಕುದುರೆ ಏಕೆ ಕೊಂಡುಕೊಳ್ಳೋಕೆ ಹೋದೆ. ಅವರು ಮಹಾ ಮಾಯಾವಿಗಳು. ಈ ಕುದುರೆಗಳಿಗೂ ಕಳ್ಳತನ ಕಲಿಸಿರುತ್ತಾರಂತೆ. ಇದನ್ನು ನೀನು ಮನೆಗೆ ಸೇರಿಸಿದರೆ, ಒಂದು ದಿನ ಇದೂ ಓಡಿಹೋಗುತ್ತದೆ; ನಿನ್ನ ಟೀಪ್ರೂನೂ ಓಡಿಸಿಕೊಂಡು ಹೋಗುತ್ತದೆ. ಇವರ ಸಹವಾಸ ಒಳ್ಳೆಯದಲ್ಲ' ಎಂದು ಎಚ್ಚರಿಸಿದರು.

ಆದರೆ ಬುಡನಸಾಬಿ ಅವರ ಯಾರ ಮಾತಿಗೂ ಕಿವಿ ಕೊಡಲಿಲ್ಲ. 'ಬಂದದ್ದು ಬರಲಿ ಎಂದು ನಿಶ್ಚಿಂತನಾಗಿದ್ದುಬಿಟ್ಟ. 'ಇಷ್ಟು ದಿನ ನಾನು ತಂದ ಕುದುರೆಗಳನ್ನೆಲ್ಲಾ ಗಾಯಮಾಡಿ ಕೊಂದು ಬಿಟ್ಟ ಕಳ ಸುವ್ವರ್. ಈಗ ತಾನೇ ಆರಿಸಿಕೊಂಡಿದಾನೆ. ಈಗೇನಾದರೂ ಪುಂಡಾಟ ಮಾಡಿದರೆ, ಬೆನ್ನಿನ ಚೆಮುಡಾ ಸುಲಿದು ಬಿಡ್ತೀನೆ' ಎಂದು ಟೀಪ್ರುವನ್ನು ಹೆದರಿಸಿದ. ಆದರೆ ಟೀಪ್ರುವಿನ ಬೆನ್ನ ಚರ್ಮದ ಅದೃಷ್ಟ ಚೆನ್ನಾಗಿತ್ತು. ಬುಡನಸಾಬಿಯ ಬೆದರಿಕೆ ಸತ್ಯವಾಗುವ ಸಂದರ್ಭವೇ ಬರಲಿಲ್ಲ. ಕುದುರೆಗಳೆರಡೂ ಅಣ್ಣ ತಮ್ಮಂದಿರಂತೆ ಅನ್ಯೋನ್ಯವಾಗಿದ್ದವು. ಅರಬರಿಂದ ಕೊಂಡು ತಂದ ಆ ಕುದುರೆಗೆ 'ಅರಬ್ಬೀ' ಎಂದೇ ನಾಮಕರಣವಾಯಿತು. ಟೀಪ್ರೂ, ಅರಬ್ಬಿಯ ಜೋಡಿ ಸೀಮೆಗೇ ಹೆಸರುವಾಸಿಯಾಯಿತು. ಅವುಗಳನ್ನು ಕಟ್ಟಿದ ಸಾರೋಟಿನಲ್ಲಿ ಕುಳಿತು ಬುಡನಸಾಬಿ ಹೋಗುತ್ತಿದ್ದರೆ ಹಳ್ಳಿಯ ಜನ ಬೀದಿಯಲ್ಲಿ ನಿಂತು ಅವನ್ನು ನೋಡಿ ಅಚ್ಚರಿಪಡುವರು. ಅವು ಬುಡನಸಾಬಿಯ ಮನೆಗೆ ಬಂದ ಕಥೆಯನ್ನು ತಮತಮಗೇ ಹೇಳಿಕೊಂಡು 'ಬುಡನಸಾಹೇಬರ ಭಾಗ್ಯ. ಅವರ ಕುದುರೆ ರಾಮಲಕ್ಷ್ಮಣ ಇದ್ದ ಹಾಗಿವೆ' ಎಂದು ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸುವರು. ಹಬ್ಬದ ದಿನ ಹಳ್ಳಿಯವರೆಲ್ಲಾ ಬಂದು ಅವಕ್ಕೆ ದೂರದಿಂದಲೇ ಪೂಜೆ ಮಾಡಿ ಹೋಗುವರು.

ಬುಡನ ಸಾಬಿಗೆ ಆ ಕುದುರೆಗಳ ಮೇಲೆ ಎಷ್ಟು ಪ್ರೀತಿ ಇತ್ತೋ ಅಷ್ಟೇ ಭಕ್ತಿಯೂ ಇತ್ತು; ತನ್ನ ಬಾಳ ಅದೃಷ್ಟವೇ ಆ ಅಶ್ವಗಳ ರೂಪತಾಳಿಬಂದಿವೆ ಎಂದು ನಂಬಿದ್ದ. ಅದು ಅಷ್ಟು ತಪ್ಪಾಗಿಯೂ ಇರಲಿಲ್ಲ. ಅವು ಮನೆಗೆ ಬಂದ ಮೇಲೆ ಅವನ ಸಂಪತ್ತು ಮುಮ್ಮಡಿಯಾಗಿ ಬೆಳೆದಿತ್ತು. ಅವನು ಮುಟ್ಟಿದ ಹೆಂಟೆ ಹೊನ್ನಾಗುತ್ತಿತ್ತು. ರಸ್ತೆ ಕಂಟ್ರಾಕ್ಟಿನಲ್ಲೇ ನಾಲ್ಕಾರು ಲಕ್ಷದ ಕುಳವಾಗಿದ್ದ ಬುಡನಸಾಬಿ, ತನಗೆ ಇಂಥ ಅದೃಷ್ಟವನ್ನು ತಂದ ಕುದುರೆಗಳಿಗೆ ಕೃತಜ್ಞತೆ ಸೂಚಿಸುವುದಕ್ಕಾಗಿಯೋ ಏನೋ ಎಂಬಂತೆ ಅವುಗಳ ಜೀನಿನ ಲೋಹದ ಸಾಮಾನೆಲ್ಲವನ್ನೂ ಬೆಳ್ಳಿಯಲ್ಲೇ ಮಾಡಿಸಿದ್ದ. ಎರಡು ಕುದುರೆಗಳ ಕಿವಿಗೂ ಚಿನ್ನದ ಮುರುವು ಚುಚ್ಚಿಸಿದ್ದ. 'ಹೀಗೇ ನಡೆದರೆ ಅದರ ಕಾಲಿಗೆ ಬೆಳ್ಳಿ ಲಾಳ ಹೊಡೆಸುತ್ತೇನೆ' ಎನ್ನುತ್ತಿದ್ದ. 'ಬೆಳ್ಳಿ ಲಾಳ ಹೊಡಸುವುದೇನು, ಸಾಧ್ಯವಿದ್ದಿದ್ದರೆ, ಕುದುರೆಗಳಿಗೆ ಅದನ್ನು ಜೀರ್ಣಿಸಿಕೊಳ್ಳುವುದು ಸಾಧ್ಯವಿದ್ದಿದ್ದರೆ ಬೆಳ್ಳಿಯ ಹುರುಳಿ, ಚಿನ್ನದ ಕಡಲೆಯನ್ನೇ ತಿನ್ನಿಸುತ್ತಿದ್ದ' ಎಂದುಕೊಳ್ಳುತ್ತಿದ್ದರು, ಆ ಕುದುರೆಗಳ ಬಗ್ಗೆ ಬುಡನಸಾಬಿಗಿದ್ದ ಮಮತೆಯನ್ನು ಅರಿತಿದ್ದ ಜನ.

ಆ ಕುದುರೆಗಳಿಗೂ ಅವನಲ್ಲಿ ಅಷ್ಟೇ ವಿಶ್ವಾಸವಿತ್ತು. ಚಳ್ಳಕೆರೆಯಿಂದ ಮೊಳಕಾಲ್ಮೂರುವರೆಗಿನ ರಸ್ತೆಯ ಕಂಟ್ರಾಕ್ಟು ಬುಡನಸಾಬಿಗೆ ಸೇರಿತ್ತು. ಚಳ್ಳಕೆರೆ, ಮೊಳಕಾಲ್ಮೂರುವಿನ ಸಂತೆಯ ದಿನ ಬುಡನಸಾಬಿ ಕೂಲಿಗಳಿಗೆ ಸಾವಿರಾರು ರೂಪಾಯಿ ಬಟವಾಡೆ ಮಾಡಬೇಕಾಗಿತ್ತು. ಅಷ್ಟು ಹಣವನ್ನು ಥೈಲಿಗಳಲ್ಲಿ ತುಂಬಿಕೊಂಡು ಬುಡನಸಾಬಿ ಒಬ್ಬನೇ ಗಾಡಿಯಲ್ಲಿ ಕುಳಿತು ಹಳ್ಳಿಯಿಂದ ಹಳ್ಳಿಗೆ ಹೋಗಿ ಬಟವಾಡೆ ಮಾಡಿ ಬರುತ್ತಿದ್ದ. ಹಗಲು ರಾತ್ರಿ ಎನ್ನದೆ ಗಾಡಿಯಲ್ಲಿ ಓಡಾಡುತ್ತಿದ್ದ. ಎಷ್ಟೋ ಜನ ಅವನನ್ನು 'ಹೀಗೆ ಭಾರೀ ರಖಮಿನೊಂದಿಗೆ ಒಂಟಿಯಾಗಿ ಪ್ರಯಾಣ ಮಾಡುವುದು ಅಪಾಯಕರ' ಎಂದು ಎಚ್ಚರಿಸಿದರೂ, ಬುಡನಸಾಬಿ ಅದನ್ನು ಕೇಳಿ ನಕ್ಕು ಬಿಡುತ್ತಿದ್ದ. 'ಯಾರಾದರೂ ಮೇಲೆ ಬಿದ್ದರೆ ಹೆದರೋಕೆ ನಾನೇನು ಪುಳಿಚಾರು ಹಾರುವಯ್ಯನಾ. ಕೈಯಲ್ಲಿ ಬಂದೂಕಿರಾಕಿಲ್ವಾ' ಎಂದು ನಿರ್ಭಯವಾಗಿ ಹೇಳುತ್ತಿದ್ದ. ಅವನಿಗೆ ಬಂದೂಕದ ಲೈಸನ್ಸ್ ಇತ್ತು, ಅವನ ಬಳಿ ಬಂದೂಕವೂ ಇತ್ತು, ಆದರೆ ಜನ ಅವನ ಬಂದೂಕಕ್ಕಿಂತ ಹೆಚ್ಚಾಗಿ,

ಆ ಎರಡು ಕುದುರೆಗಳಿಗೆ ಹೆದರುತ್ತಿದ್ದರು. ಬುಡನಸಾಬಿ ಕರೆಯುವ, ಗಾಡಿಯ ಬಳಿ ಸುಳಿಯಲು ಅವರಿಗೆ ಎಷ್ಟು ಎದೆ!

ಒಂದು ಸಲ ಕೂಲಿಗಳಿಗೆ ಹಣ ಬಟವಾಡೆ ಮಾಡುತ್ತಿದ್ದಾಗ, ಒಬ್ಬ ಮುಂಗಡ ಹಣಕ್ಕಾಗಿ ತಕರಾರು ಮಾಡಿ, ಬುಡನಸಾಬಿಯ ಮೇಲೆ ರೇಗಿ ಮಾತನಾಡಿದ. ಅದಕ್ಕೆ ಬುಡನಸಾಬಿ ಉತ್ತರ ಕೊಡುವುದರೊಳಗಾಗಿ ಟೀಪ್ರವೇ ಉತ್ತರ ಕೊಟ್ಟಿತು— ಆ ಕೂಲಿಯ ಜುಟ್ಟಿಗೇ ಬಾಯಿ ಹಾಕಿ. ಅರಬ್ಬನೂ ಕಣ್ಣು ಕೆರಳಿಸಿ ನಿಂತಿದ್ದ— ಮೇಲು ಬೀಳಲು. ಆಗ ಬುಡನಸಾಬಿ ಎದುರಿಗಿದ್ದ ಎಂತ ಆ ಕೂಲಿ ಉಳಿದುಕೊಂಡಿದ್ದ. ಅಂದಿನಿಂದ ಆ ಕುದುರೆಗಳು ಬಳಿ ಇದ್ದರೆ, ಕೂಲಿಗಳು ಧ್ವನಿ ಎತ್ತರಿಸಿ ಮಾತನಾಡಲೂ ಹೆದರುವಂತಾಯಿತು. ಆ ದಿನ ಒಂದು ಮೈಲಿ ದೂರಕ್ಕೂ 'ಅಗೋ— ಬುಡನಸಾಹೇಬರ ಸಾರೋಟು ಬರ್‍ತಾ ಇದೆ' ಎಂದು ಸಾರಿ ಹೇಳುವಂತೆ ಕುದುರೆಗಳೆರಡರ ಕತ್ತಿಗೂ ದೊಡ್ಡ ಗೆಜ್ಜೆಯ ಸರವ ಅಲಂಕಾರವಾಯಿತು. ಆ ದಿನದಿಂದ ಬುಡನಸಾಹೇಬರ ಬಂದೂಕ ಮನೆಯಲ್ಲೇ ಕುಳಿತು ತುಕ್ಕಿಗೆ ಆಹಾರವಾಯಿತು. ಆ ಕುದುರೆಗಳ ವಿಚಾರ ಜಿಲ್ಲೆಗೆಲ್ಲಾ ಹರಡಿತು. 'ಬುಡನ ಸಾಬಿ ಕುದುರೆ' ಎನ್ನುವುದು ಗಾದೆಯ ಮಾತಾಯಿತು.

ಲಕ್ಷಾಧೀಶ್ವರನಾದ ಬುಡನಸಾಬಿಗೂ, ಛತ್ರದ ಪಾರುಪತ್ತೇಗಾರ ವೆಂಕಟದಾಸಪ್ಪನವರಿಗೂ ಸ್ನೇಹ ಬೆಳೆಯಲು ಕಾರಣವಾದುದೂ ಇದೇ ಕುದುರೆಗಳೇ. ಇವು ದೂರದಲ್ಲಿದ್ದ ಧ್ರುವಗಳನ್ನು ಒಂದೆಡೆಗೆ ಸೆಳೆದು ಬೆಸೆದವು.

೩

ಒಮ್ಮೆ ಟೀಪುವಿಗೆ ಇದ್ದಕ್ಕಿದ್ದ ಹಾಗೇ ಏನೋ ಆಗಿ, ಟೀಪು ಹುಲ್ಲು ನೀರು ಬಿಟ್ಟುಬಿಟ್ಟಿತು. ಹೊಟ್ಟೆ ಸಣ್ಣದಾಗಿ ಉಬ್ಬರಿಸಿಕೊಂಡು, ಮೂಗು ಬಾಯಿಗಳಿಂದ ನೊರೆ ಕಾರುವುದಕ್ಕಾರಂಭವಾಯಿತು. ಬುಡನಸಾಬಿಯ ನೆತ್ತಿಯ ಮೇಲೆ ಗುಂಡ್ಡವೇ ಕಳಚಿ ಬಿದ್ದಹಾಗಾಯಿತು. ಹಳ್ಳಿಯ ಜನ ಹೇಳಿದ ಔಷಧವನ್ನೆಲ್ಲಾ ಮಾಡಿದ. ಬಾಯಿಗೆ ಗೊಟ್ಟವಿಟ್ಟು ಔಷಧ ಹುಯಿದ. ಮೂಗಿನಲ್ಲಿ ಹಸಿರು ಹಿಂಡಿದ. ಏನು ಮಾಡಿದರೂ ಟೀಪು ಚೇತರಿಸಿಕೊಳ್ಳಲಿಲ್ಲ. ಹುಲ್ಲು ನೀರು ಮುಟ್ಟದೆ ಮಲಗಿದ ಟೀಪುವನ್ನು ಕಂಡು ಅರಬನೂ ಹುಲ್ಲು ನೀರು ಬಿಟ್ಟು, ಕಂಬನಿಗರೆಯುತ್ತಾ ನಿಂತ. ಅವೆರಡರ ಜೊತೆಗೆ ಬುಡನಸಾಬಿಯೂ ಅನ್ನ ನೀರು ಬಿಟ್ಟ. ಚಳ್ಳಕೆರೆಯಿಂದ ಡಾಕ್ಟರರನ್ನು ಕರೆದುಕೊಂಡು ಬಂದು ತೋರಿಸಿದ. ಸುತ್ತಲ ಹಳ್ಳಿಗಳಿಗೆಲ್ಲಾ ಸುದ್ದಿ ಕಳಿಸಿದ. 'ಟೀಪುವನ್ನು ಗುಣಮಾಡಿದವರಿಗೆ ಚಿನ್ನದ ತೋಡಾ ಬಹುಮಾನ ಕೊಡುತ್ತೇನೆ' ಎಂದು. ಅದರ ಆಸೆಗೆ ಅಷ್ಟಿಷ್ಟು ಪಶುವೈದ್ಯ ತಿಳಿದವರು ತಮಗೆ ತೋಚಿದ ಔಷಧವನ್ನೆಲ್ಲಾ ಮಾಡಿದರು. ಯಾವುದೂ ಸಾರ್ಥಕವಾಗಲಿಲ್ಲ. ದಿನದಿನಕ್ಕೆ ಟೀಪುವಿನ ದೇಹಸ್ಥಿತಿ ಕೆಡುತ್ತಾ ಹೋಯಿತು. ಬುಡನಸಾಬಿ ಪ್ರಪಂಚವನ್ನೇ ಮರೆತು 'ಲಾಯದಲ್ಲೇ ಟೀಪುವಿನ ಬಳಿ ಚಾಪೆ ಹಾಸಿಕೊಂಡು, ಅಳುತ್ತಾ ಮಲಗಿಬಿಟ್ಟ.

ಆ ಹೊತ್ತಿನಲ್ಲಿ ಬುಡನಸಾಬಿಯ ಮನೆಗೆ ಬಂದ ದೇವೀಕೆರೆಯವ ರೊಬ್ಬರು ಅವನಿಗೆ—

'ಇಷ್ಟೆಲ್ಲಾ ಮಾಡಿದಿರಿ ಸಾಹೇಬರೇ, ಹತ್ತಿರದಲ್ಲೇ ಅದಕ್ಕೆ ಒಂದು ಔಷಧವಿದೆ. ಮಾಡಿನೋಡಿ.'

—ಎಂದರು. ಆ ಮಾತು ಕೇಳಿ ಮಲಗಿದ್ದ ಬುಡನಸಾಬಿ ಧಿಗ್ಗನೆ ಎದ್ದು ಕುಳಿತು—

''ಏನು? ಎಲ್ಲಿದೆ? ಹೇಳಿ— ಈಗಲೇ ತರಿಸುತ್ತೇನೆ. ಎಷ್ಟು ಬೆಲೆ ಯಾದರೂ ಚಿಂತೆಯಿಲ್ಲ'—ಎಂದ.

'ಇದು ದುಡ್ಡಿನ ಔಷಧವಲ್ಲ, ಸಾಹೇಬರೇ, ಬರೀ ಭಕ್ತಿಯದು. ದೇವೀಕೆರೆ ಅಮ್ಮನವರಿಗೆ ಹರಿಸಿಕೊಂಡು ವೆಂಕಟದಾಸಪ್ಪನವರ ಮನೆಯಿಂದ ತೀರ್ಥ ತಂದುಹಾಕಿ. ಅದೃಷ್ಟವಿದ್ದರೆ ನಿಮ್ಮ ಕುದುರೆ ಬದುಕಿಕೊಳ್ಳುತ್ತದೆ'—ಎಂದರು.

ಆ ಮಾತು ಕೇಳಿ ಬುಡನಸಾಬಿಯ ಹೃದಯದಲ್ಲಿ ಒಂದುಗಳಿಗೆ ಹೊತ್ತಿದ ಆಶೆಯು ಕುಡಿ ಹಾಗೇ ನಂದಿಹೋಯಿತು. 'ಡಾಕ್ಟರು, ಪಂಡಿತರು ಯಾರ ಕೈಲೂ ಆಗದ್ದು ತೀರ್ಥದಿಂದ ಆದೀತೆ' ಎಂದ. ಅದಕ್ಕೆ ದೇವೀಕೆರೆಯಾತ 'ಹಾಗಲ್ಲ ಸಾಹೇಬರೇ, ನಿಮ್ಮ ಡಾಕ್ಟರು, ವೈದ್ಯರು ಮಾಡಬಹುದಾದದ್ದೆಲ್ಲಾ ಮುಗಿಯಿತು. ಇನ್ನೇನೂ ಉಳಿದಿಲ್ಲ. ನಾನು ಹೇಳುವುದು ದುಡ್ಡಿನದಲ್ಲ, ಕಾಸಿನದಲ್ಲ. ತೀರ್ಥ ತಂದು ಕುಡಿಸಲು ನೀವೇನೂ ಸವೆಯಬೇಕಾಗಿಲ್ಲ. ಆದರೆ ಆಗಲಿ, ಹೋದರೆ ಹೋಗಲಿ—ಇದೂ ಒಂದು ನೋಡಿಬಿಡಿ. ಎಷ್ಟೋ ವೇಳೆ, ಎಂತೆಂಥ ನಿಷ್ಣಾತ ವೈದ್ಯರಿಂದಲೂ ಆಗದ್ದು ಒಂದು ಉದ್ಧರಣೆ ತೀರ್ಥದಿಂದ ಆಗುತ್ತದೆ. ಅಮ್ಮನವರ ಅನುಗ್ರಹದಿಂದ ನೂರಾರು ಜನರ ಪ್ರಾಣ ಉಳಿದಿದೆ. ನಿಮ್ಮ ಕುದುರೆಗೂ ಆಕೆಯ ತೀರ್ಥವೇ ಬೇಕೋ ಏನೋ. ತಂದುಕೊಡಿ, ಗುಣವಾದರೆ ನಿಮ್ಮ ಅದೃಷ್ಟ. ಅದರಿಂದ ಕೆಡಕಂತೂ ಆಗುವುದಿಲ್ಲ.' ಎಂದರು. ಆ ಮಾತು ಕೇಳಿ 'ಎಲ್ಲಾ ಆಯಿತು. ಇದೂ ಒಂದು ಆಗಲಿ. ನೋಡೆ ಬಿಡೋಣ. ಟೀಪೂಸುಲ್ತಾನರ ಆನೆಗೆ ನಂಜುಂಡೇಶ್ವರನಿಂದ ಕಣ್ಣು ಬಂದಹಾಗೆ, ನನ್ನ ಟೀಪು ದೇವಿಯ ತೀರ್ಥದಿಂದ ಬದುಕ ಬಹುದು' ಎಂದು ದೇವೀಕೆರೆಯಿಂದ ತೀರ್ಥತರಲು, ಬುಡನಸಾಬಿ ತಾನೇ ಓಡಿದ.

ಬುಡನಸಾಬಿ ದೇವೀಕೆರೆ ತಲುಪಿದಾಗ ಒಳ್ಳೇ ಮಧ್ಯಾಹ್ನದ ಹೊತ್ತು. ವೆಂಕಟದಾಸಪ್ಪನವರು ಪೂಜೆಮುಗಿಸಿ ಅತಿಥಿಗಳಿಗಾಗಿ ಕಾಯುತ್ತಾ ಮನೆಯ ಮುಂದಿನ ಜಗಲಿಯ ಮೇಲೆ ಕುಳಿತಿದ್ದರು. ಗಿರಿಯಮ್ಮನ ಹಳ್ಳಿಯಿಂದ ವೇಗವಾಗಿ ನಡೆದು ಬಂದ ಬುಡನಸಾಬಿ, ಏದುತ್ತಲೇ ವೆಂಕಟದಾಸಪ್ಪನವರಿಗೆ ಅಡ್ಡ ಬಿದ್ದು—

"ಬುದ್ಧೀ, ನನ್ನ ಟೀಪೂನ ಉಳಿಸಿಕೊಡಬೇಕು'

—ಎಂದು ಹೇಳಿದ. ಹಸುಮಗುವಿನಂತೆ ಅಳುತ್ತ.

ವೆಂಕಟದಾಸಪ್ಪ ಅದುವರೆಗೂ ಬುಡನಸಾಬಿಯ ಹೆಸರು ಕೇಳಿದ್ದರೂ, ಇಬ್ಬರಿಗೂ ಪರಸ್ಪರ ಪರಿಚಯವಿರಲಿಲ್ಲ. ಒಬ್ಬರನ್ನೊಬ್ಬರು ಕಂಡುದು ಅದೇ ಮೊದಲ ಬಾರಿ. ಬುಡನಸಾಬಿಯ ವಿಚಾರದಷ್ಟೇ ಆತನ ಕುದುರೆಗಳ ವಿಚಾರವನ್ನೂ ವೆಂಕಟದಾಸಪ್ಪನವರು ಕೇಳಿದ್ದರು. ಟೀಪುವಿಗೆ ಖಾಯಿಲೆಯಾಗಿರುವುದೂ ಅವರ ಕಿವಿಗೆ ಬಿದ್ದಿತ್ತು. ಕುದುರೆಗೆ ಖಾಯಿಲೆಯೆಂದು ಕಂಬನಿಗರೆಯುತ್ತ, ಆರಡಿಯ ದೇಹವನ್ನು ಗೇಣುದ್ದ ಮಾಡಿಕೊಂಡು ಅಂಗಲಾಚುತ್ತಿರುವ ಬುಡನಸಾಬಿಯನ್ನು ಕಂಡು ಅವರ ಕರುಳಲ್ಲಿ ಕತ್ತರಿಯಾಡಿಸಿದಂತಾಯಿತು. ಅವರ ಕಣ್ಣಲ್ಲೂ ನೀರು ತುಂಬಿತು.

'ಹೆದರಬೇಡಿ ಬನ್ನಿ, ಸಾಹೇಬರೇ, ತಾಯಿ ಇದ್ದಾಳೆ. ಅವಳ ಮೇಲೆ ಭಾರ ಹಾಕಿ. ನನ್ನಿಂದೇನಾಗಬೇಕು ಹೇಳಿ?'—ಎಂದರು.

''ಅಮ್ಮನವರ ತೀರ್ಥ ಕುಡಿದರೆ ನನ್ನ ಟೀಪು ಬದುಕಂತ್ತಾನಂತೆ, ಅಪ್ಪಣೆಯಾಗಬೇಕು'—ಎಂದ ಬುಡನಸಾಬಿ.

ಆ ಮಾತು ಕೇಳಿದ ಕೂಡಲೇ ವೆಂಕಟದಾಸಪ್ಪನವರು ಗಂಭೀರರಾದರು. ಈ ಬಗೆಯ ಬೇಡಿಕೆಯನ್ನು ಅವರು ಎಂದೂ ಯಾರಿಂದಲೂ ಕೇಳಿರಲಿಲ್ಲ. ದೇವಿಯಲ್ಲಿ ಅವರಿಗೆ ಪ್ರಚಂಡಭಕ್ತಿ ಇತ್ತು. ಸರ್ವಶಕ್ತಿಮಯಿಯಾದ ಲೋಕಮಾತೆಯ ದಿವ್ಯಶಕ್ತಿಗೆ ಮೀರಿದುದಾವುದೂ ಇಲ್ಲವೆಂಬ ನಂಬಿಕೆಯೂ ಇತ್ತು. ಆದರೂ ಅಂದಿನವರೆಗೆ ಅವರು ಎಂದೂ ದೇವಿಯ ತೀರ್ಥವನ್ನು ಔಷಧವಾಗಿ ಉಪಯೋಗಿಸಿರಲಿಲ್ಲ; ಅದಕ್ಕೆ ಆ ಬಲವಿರಬಹುದೆಂದೂ ತಿಳಿದಿರಲಿಲ್ಲ. ಜಾತ್ರೆಯ ಕಾಲದಲ್ಲಿ ಎಷ್ಟೋ ಜನ ಹರಸಿಕೊಳ್ಳುತ್ತಿದ್ದರು. ತಮ್ಮ ಅಭೀಷ್ಟ ಸಿದ್ಧಿಯಾಯಿತೆಂದು ಹರಕೆಯೊಪ್ಪಿಸುತ್ತಿದ್ದರು. ದೇವಿಗೆ ಆ ಶಕ್ತಿ ಇದೆ. ಆದರೆ ತನ್ನ ಮನೆಯ ತೀರ್ಥೋದಕಕ್ಕೆ ಆ ಶಕ್ತಿ ಇದೆಯೋ ಎಂಬ ಸಂಶಯ ವೆಂಕಟದಾಸಪ್ಪನವರನ್ನು ಕಾಡತೊಡಗಿತು. ತನ್ನ ಬೇಡಿಕೆಯನ್ನು ಕೇಳಿ ವೆಂಕಟದಾಸಪ್ಪನವರು ಸುಮ್ಮನೆ ಕುಳಿತುದನ್ನು, ಕಂಡು, ಬುಡನ್‌ಸಾಬಿ ಕಂಗಾಲಾದ.

'ಬುದ್ಧಿ ಬಡವನಮೇಲೆ ದಯಾ ಮಾಡಬೇಕು. ಗೊತ್ತು, ಪರಿಚಯ ಇಲ್ಲೋನು ಅಂತ ಕೈ ಬಿಡಬಾರದು, ನಾನೂ ನಿಮ್ಮ ಮಗ್ನೆ. ಟೀಪೂ ಸತ್ತರೆ ನಾನು ಉಳಿಯಾಕಿಲ್ಲ ಬುದ್ಧಿ'

—ಎಂದು ಆರ್ತನಾಗಿ ಹೇಳಿದ. ಅವನ ಆರ್ತತೆ ವೆಂಕಟದಾಸಪ್ಪ ನವರ ಮನಸ್ಸಿನ ಹೋರಾಟವನ್ನು ಕತ್ತರಿಸಿ ಹಾದಿ ತೋರಿಸಿತು.

'ಸಾಹೇಬರೇ ಯಾರನ್ನೂ ಉಳಿಸುವ ಶಕ್ತಿ ನನಗಿಲ್ಲ. ತಾಯಿಯ ಪ್ರೇರಣೆಯಾಯಿತು ಎಂದು ನೀವು ಬಂದಿದ್ದೀರ. ನಾನೂ ಆಕೆಯ ಮೇಲೆ ಭಾರಹಾಕಿ ತೀರ್ಥಕೊಡುತ್ತೇನೆ. ಆದದ್ದಾಗಲಿ'

—ಎಂದು ದೇವರ ಮನೆಗೆ ಹೋಗಿ, ಮಂಟಪದಲ್ಲಿದ್ದ ದೇವಿಗೆ ಅಡ್ಡಬಿದ್ದು—'ತಾಯಿ– ಆ ಮೂಕಜೀವವನ್ನು ಬಳಲಿಸಬೇಡ. ನಿನ್ನ ಮಗ ನಂಬಿ ಕರೆಯುತ್ತಿದ್ದಾನೆ. ಅವನ ಬೇಡಿಕೆಗೆ ಓಕೊಡು ತಾಯಿ. ದಯಾಮಾಯಿಯಾಗು ಲೋಕಮಾತೆ'

—ಎಂದು ಬೇಡಿ. —

'ನೋಡು, ನಾನು ಇಷ್ಟುದಿನ ನಿನ್ನನ್ನು ಪೂಜಿಸಿದ್ದೇನೆ. ನೀನು ಕೊಟ್ಟದ್ದನ್ನು 'ಪ್ರಸಾದ ಎಂದು ಸ್ವೀಕರಿಸಿದ್ದೇನೆ. ಎಂದೂ ಇಂಥದನ್ನುಕೊಡು ಎಂದು ಬೇಡಿಲ್ಲ. ಈಗಲೂ ನನಗಾಗಿ ನಾನು ಏನೂ ಬೇಡುವುದಿಲ್ಲ. ಆದರೆ ಅವನ ಪ್ರಾರ್ಥನೆಯನ್ನು ನೆರವೇರಿಸಲಿಲ್ಲವೋ ನೀನು ಕೆಟ್ಟೆ. ಇನ್ನು ನಾನು ನಿನ್ನನ್ನು ನಂಬುವದಿಲ್ಲ. ನೀನು ಮೋಸಗಾತಿ ಎಂದು ಸಾರುತ್ತೇನೆ. ಯಾರೂ ಇವಳನ್ನು ನಂಬಬೇಡಿ ಎಂದು ಹೇಳುತ್ತೇನೆ. ಕೇಳಿತೇ ನನ್ನ ಮಾತು?'

—ಎಂದು ಹೇಳಿ, ಒಂದು ಬಟ್ಟಲಿನಲ್ಲಿ ತೀರ್ಥ, ಸ್ವಲ್ಪ ಪ್ರಸಾದದ ಹೂವು ಕುಂಕುಮ ತೆಗೆದುಕೊಂಡು—

'ರಂಗೂ, ಪಂಕ್ತಿಗೆ ಬಡಿಸಿ, ನೀನು ಊಟಮಾಡಿಬಿಡು. ನಾನು ಸ್ವಲ್ಪ ಗಿರಿಯಮ್ಮನಹಳ್ಳಿಯವರೆಗೆ ಹೋಗಿ ಬರುತ್ತೇನೆ, ಬರುವುದು ತಡವಾಗಬಹುದು. ನೀನು ಕಾಯಬೇಡ'

—ಎಂದು ಹೆಂಡತಿಗೆ ಹೇಳಿ, ಹೊರಗೆ ಬಂದು—

'ಬನ್ನಿ ಸಾಹೇಬರೇ ಹೋಗೋಣ'

ಎಂದು ಬೀಸುಗಾಲು ಹಾಕುತ್ತ, ಗಿರಿಯಮ್ಮನಹಳ್ಳಿಯತ್ತ ಹೆಜ್ಜೆ

ಹಾಕಿದರು. ಬುಡನಸಾಬಿಯೂ ವೇಗವಾಗಿ ವೆಂಕಟದಾಸಪ್ಪನವರನ್ನು ಹಿಂಬಾಲಿಸಿದ.

ಗಿರಿಯಮ್ಮನಹಳ್ಳಿಯನ್ನು ತಲಪಿದ ವೆಂಕಟದಾಸಪ್ಪನವರು, ನೇರವಾಗಿ ಲಾಯಕ್ಕೇ ಹೋಗಿ, ಬುಸುಗರೆಯುತ್ತಾ, ನೊರೆಕಾರುತ್ತ ಯಾತನೆಯಲ್ಲಿ ಅರೆಗಣ್ಣಾಗಿ ಮಲಗಿದ್ದ ಟೀಪುವನ್ನು ನೋಡಿದರು. ಹಾಗೇ ಅದರ ಬಳಿಯಲ್ಲಿ ಬಳಲಿ ಮಲಗಿದ ಅರಬನನ್ನೂ.

'ಟೀಪು ಮಲಗಿದಾಗಿನಿಂದ ಆ ಸೂಳೇಮಗನೂ ಹುಲ್ಲು ತಿಂದಿಲ್ಲ ಬುದ್ಧಿ'—ಎಂದ ಬುಡನಸಾಬಿ.

ಆ ಎರಡು ಮೂಕಜೀವಿಗಳ ವೇದನೆಯನ್ನು ಕಂಡು ವೆಂಕಟದಾಸಪ್ಪ-ನವರ ಕಣ್ಣಲ್ಲಿ ನೀರಾಡಿತು. 'ಆ ಮೂಕ ಪ್ರಾಣಿಗಳ ಮೇಲೆ ನಿನ್ನ ಶಕ್ತಿ ಪ್ರದರ್ಶನವೇ ತಾಯೀ' ಎಂದುಕೊಂಡು, ಮಲಗಿದ ಟೀಪುವಿನ ಮೈಗೆ ತೀರ್ಥೋದಕವನ್ನು ಸಿಂಪಡಿಸಿ, ಅದರ ಹಣೆಗೆ ಕುಂಕುಮವಿಟ್ಟು, ಹಲ್ಲು ಕಚ್ಚಿಕೊಂಡ ಅದರ ಬಾಯನ್ನು ಬಿಡಿಸಿ, ತೀರ್ಥವನ್ನು ಕುಡಿಸಿ, ಪ್ರಸಾದದ ಕುಂಕುಮ ಹೂವನ್ನು ಹಾಕಿ, ಊದಿಕೊಂಡ ಅದರ ಹೊಟ್ಟೆಯನ್ನು ನೇವರಿಸುತ್ತ ಕುಳಿತುಕೊಂಡರು. ಅವರ ಹೃದಯ 'ತಾಯೀ...ತಾಯೀ... ಬೇಗ ಈ ಮೂಕಜೀವವನ್ನು ಯಾತನೆಯ ಬಂಧನದಿಂದ ಬಿಡುಗಡೆ ಮಾಡು' ಎಂದು ಬೇಡಿತು. 'ಅದು ಎದ್ದು ಹುಲ್ಲು ನೀರು ತೆಗೆದುಕೊಳ್ಳು ವವರೆಗೂ, ನಾನು ಊಟ ಮಾಡುವುದಿಲ್ಲ' ಎಂದು ಶಪಥ ಮಾಡಿ ಕುಳಿತರು. ಬುಡನಸಾಬಿ ಆಸೆ ತುಂಬಿದ ಕಣ್ಣುಗಳಿಂದ ಅವರನ್ನು ನೋಡುತ್ತಾ ಕುಳಿತಿದ್ದ. ಅರಬನೂ ಅವರತ್ತಲೇ ಅರೆಗಣ್ಣರಳಿಸಿ ನೋಡುತ್ತಿದ್ದ.

ಇವರಲ್ಲಿ ಹೊತ್ತು ಎಷ್ಟಾಯಿತೆಂಬ ಪರಿವೆ ಯಾರಿಗೂ ಇರಲಿಲ್ಲ. ಸುಮ್ಮನೆ ಮಲಗಿದ್ದ ಟೀಪೂ ಇದ್ದಕ್ಕಿದ್ದ ಹಾಗೇ ಕಾಲು ಝಾಡಿಸಿತು. ಅದರ ಹೊಟ್ಟೆಯ ಬಿಗಿತ ಸಡಿಲವಾಗಿ, ಮೂತ್ರವಿಸರ್ಜನೆಯಾಯಿತು. ಅದನ್ನು ಕಂಡು ಬುಡನಸಾಬಿಗೆ ವೆಂಕಟದಾಸಪ್ಪನವರಿಗೆ, ಭಗೀರಥನಿಗೆ ಗಂಗೆ ಇಳಿದು ಬಂದಾಗ ಆದಷ್ಟು ಆನಂದವಾಯಿತು. ಟೀಪುವಿನ ಬಾಯಿ ಬುರುಗು ಕಾರುವುದು ನಿಂತು, ಟೀಪು ಅತ್ತಿತ್ತ ಹೊರಳಾಡಿ ಮೇಲೆದ್ದು ನಿಂತಿತು.

ಅದನ್ನು ಕಂಡವನೇ ಬುಡನಸಾಬಿ ಸಂತೋಷದಲ್ಲಿ ಹುಚ್ಚನಾಗಿ

'ಟೀಪೂ...ಬೇಟಾ...ಬೇಟಾ...' ಎಂದು ಚೀರುತ್ತಾ, ಕುಳಿತ ಕಡೆಯಿಂದ ಹಾರಿ ಅವನ ಕತ್ತನ್ನು ಅಪ್ಪಿದ. ಅರಚುತ್ತಾ ಓಡಿಬಂದು, ಟೀಪುವಿನ ಮೈಯುಜ್ಜಿ ಕೆನೆದಿತು. ಆ ಸಂತೋಷದಲ್ಲಿ ವೆಂಕಟದಾಸಪ್ಪನವರೂ ಸಂತೋಷದ ಕಂಬನಿಗರೆಯುತ್ತಾ, ತಾವೂ ಟೀಪುವನ್ನು ತಬ್ಬಿದರು. ಬುಡನಸಾಬಿಯಲ್ಲದೆ ಬೇರೆ ಯಾರೂ ತನ್ನ ಮೈಯನ್ನು ಮುಟ್ಟಲು ಬಿಡದ ಟೀಪು ತನ್ನ ಕತ್ತನ್ನು ಅಪ್ಪಿದ ವೆಂಕಟದಾಸಪ್ಪನವರತ್ತ ನೋಡಿತು. ಅದನ್ನು ನೋಡಿ ಬುಡನಸಾಬಿ—

'ನೋಡು...ನೋಡು...ಚೆನ್ನಾಗಿ ನೋಡು, ಟೀಪು, ಅವರೇ ನಿನ್ನ ಜೀವ ಉಳಿಸಿದ ತಂದೆ'

—ಎಂದ. ಬುಡನಸಾಬಿಯ ಮಾತು ಅರ್ಥವಾದಂತೆ ಟೀಪು ನಾಲಿಗೆ ಚಾಚಿ ವೆಂಕಟದಾಸಪ್ಪನವರ ಮೈಯನ್ನು ನೆಕ್ಕಿತು. ಅವರ ಕೂಗಾಟವನ್ನು ಕೇಳಿ ಒಳಗಿನಿಂದ ಬಂದ ಬುಡನಸಾಬಿಯ ಹೆಂಡತಿ—

'ಸಂತೋಷದಾಗೆ ಹುಚ್ಚು ಹಿಡಿದಿದೆ ನಿಮಗೆ. ಬುದ್ಧಿಯೋರ್ನ ಮುಟ್ಟಿ ಮೈಲಿಗೆ ಮಾಡ್ಬಿಟ್ರಿ'.

—ಎಂದಾಗಲೇ ಆನಂದದಲ್ಲಿ ಮೈಮರೆತ ಅವರಿಬ್ಬರಿಗೂ ಇಹ ಲೋಕದ ಪ್ರಜ್ಞೆ ಬಂದದ್ದು. ಹೆಂಡತಿಯ ಮಾತು ಕೇಳಿ ಬುಡನಸಾಬಿ—

'ಬುದ್ಧಿಯೋರು ಕ್ಷಮಿಸಬೇಕು'

—ಎಂದು ದೂರ ಸರಿದು ನಿಂತ.

'ಕ್ಷಮೆ, ಎಂಥ ಮಾತು ಸಾಹೇಬರೇ. ಆನಂದಕ್ಕೂ ದುಃಖಕ್ಕೂ ಜಾತಿಯ ಸೋಂಕಿಲ್ಲ, ಮಡಿಮೈಲಿಗೆಗಳ ಬಂಧನವಿಲ್ಲ. ನಿಮ್ಮಿಂದ ತಪ್ಪೇನೂ ಆಗಲಿಲ್ಲ. ಸಧ್ಯ—ತಾಯಿಯ ಕೃಪೆಯಿಂದ ಬಂದ ಕೆಲಸ ಆಯಿತು. ಅದೇ ಬಹಳ ದೊಡ್ಡ ಸಂತೋಷ. ಅಪ್ಪಣೆಯಾದರೆ ನಾನಿನ್ನು ಬರುತ್ತೇನೆ'

—ಎಂದರು ವೆಂಕಟದಾಸಪ್ಪನವರು.

'ಒಂದು ಗಳಿಗೆ ತಡೆಯಬೇಕು' ಎಂದು ಬೇಡಿಕೊಂಡು, ಮನೆಯ ಒಳಗೆ ಹೋಗಿ, ಬುಡನಸಾಬಿ ದೊಡ್ಡದೊಂದು ಬೆಳ್ಳಿಯ ಹರಿವಾಣದಲ್ಲಿ ನೂರು ರೂಪಾಯಿಗಳು, ಬಾಳೆಹಣ್ಣು, ವೀಳೆಯದೆಲೆ ಅಡಿಕೆಯನ್ನು ತಂದು ಹರಿವಾಣವನ್ನು ವೆಂಕಟದಾಸಪ್ಪನವರ ಮುಂದಿಟ್ಟು, ನಮಸ್ಕರಿಸಿ

'ಬುದ್ಧಿಯವರು ಒಪ್ಪಿಸಿಕೊಳ್ಳಬೇಕು'—ಎಂದ.

ವೆಂಕಟದಾಸಪ್ಪನವರು ಅದನ್ನು ಮುಟ್ಟದೆ—

'ಇದೆಲ್ಲಾ ಏಕೆ ಸಾಹೇಬರೇ?'—ಎಂದರು.

'ಇವತ್ತು ಮೂರು ಪ್ರಾಣ ಉಳಿಸಿದಿರಿ. ಟೀಪು ಹೋಗಿದ್ದರೆ ಅರಬ್ ಉಳಿಯುತ್ತಿರಲಿಲ್ಲ. ನಾನೂ ಉಳಿಯುತ್ತಿರಲಿಲ್ಲ. ನೀವು ಮಾಡಿದ ಉಪಕಾರಕ್ಕೆ ಇದೂ ಏನೂ ಅಲ್ಲ. ತೆಗೆದುಕೊಂಡು ಉದ್ಧಾರ ಮಾಡಬೇಕು.'

'ಹೆಚ್ಚು ಕಡಮೆ ಎಂದು ಹೇಳಲಿಲ್ಲ ಸಾಹೇಬರೇ, ಇದು ಬೇಡ ನಿಮ್ಮಲ್ಲೇ ಇರಲಿ.'

'ಹಾಗಾಗುವುದಿಲ್ಲ. ನೀವು ತೆಗೆದುಕೊಳ್ಳಬೇಕು'.

ಹಣ ತೆಗೆದುಕೊಳ್ಳಲು ನಾನು ಯಾರು? ನನಗೇನು ಅಧಿಕಾರ?'

'ಅಂದರೆ...'

'ನಿಮ್ಮ ಟೀಪುವಿನ ಪ್ರಾಣ ಉಳಿಸಿದವನು ನಾನಲ್ಲ. ಹುಲು ಮನುಷ್ಯ, ನನಗೆಲ್ಲಿಯದು ಅಂಥ ಶಕ್ತಿ. ಟೀಪುವನ್ನು ಉಳಿಸಿದ್ದು ನಿಮ್ಮ ನಂಬಿಕೆ, ತಾಯಿಯ ಅನುಗ್ರಹ. ಅದಕ್ಕೆ ನಾನು ಹಣ ತೆಗೆದುಕೊಳ್ಳಲೇ? ಆಗುವುದಿಲ್ಲ. ಹಾಗೆಲ್ಲಾ ಮಾಡಿದರೆ ತಾಯಿ ಸುಮ್ಮನಿರುವುದಿಲ್ಲ. ಹಣ್ಣು ಕೊಟ್ಟಿರಿ, ಸಂತೋಷ. ತಗೊಂಡು ಹೋಗಿ ತಾಯಿಗೆ ಅರ್ಪಿಸುತ್ತೇನೆ. ಅಷ್ಟರಮೇಲೂ ನಿಮಗೆ, ತಾಯಿಗೆ ಹೆಚ್ಚಿನ ಸೇವೆ ಮಾಡಿಸಬೇಕು ಎನ್ನುವ ಆಸೆ ಇದ್ದರೆ, ಹೇಗೂ ಇಷ್ಟರಲ್ಲೇ ನವರಾತ್ರಿ ಬರುತ್ತದೆ. ದುರ್ಗಾಷ್ಟ-ಮಿಯ ದಿನ ಊರಿಗೆಲ್ಲಾ ಒಂದು ಊಟ ಹಾಕಿಬಿಡಿ. ಜಾತ್ರೆಯಲ್ಲಿ ಒಂದು ದಿನ ನಿಮ್ಮ ಟೀಪೂ ಬಂದು ತಾಯಿಯ ಸೇವೆ ಮಾಡಲಿ. ತಾಯಿ ಸಂತುಷ್ಟಳಾಗುತ್ತಾಳೆ. ಅಷ್ಟು ಮಾಡಿ. ನಾನಿನ್ನು ಬರುತ್ತೇನೆ. ವಿಶ್ವಾಸವಿರಲಿ'

—ಎಂದು ನಮಸ್ಕಾರ ಹೇಳಿ ಹೊರಟುಬಿಟ್ಟರು. ಬುಡನಸಾಬಿಗೆ ತನ್ನ ಕಣ್ಣು ಕಿವಿಗಳನ್ನು ನಂಬುವುದೇ ಕಷ್ಟವಾಯಿತು. ವೆಂಕಟದಾಸಪ್ಪನವರ ಆರ್ಥಿಕ ಪರಿಸ್ಥಿತಿ ಆತನಿಗೆ ಚೆನ್ನಾಗಿ ಗೊತ್ತಿತ್ತು. ದಿನಕ್ಕೆ ಒಂದು ಮುದ್ದು–ನಾಲ್ಕು ಕಾಸು–ಸಂಬಳ ಪಡೆಯುವ ವೆಂಕಟದಾಸಪ್ಪನವರು ನೂರು

ರೂಪಾಯಿಗಳಿಂದ ಆನಂದಪಡಬಹುದು ಎಂದು ಕೊಡಿದ್ದ. ಆವರೆ ಅವರ ಮಾತು ಕೇಳಿದ ಬಳಿಕ ಅವರಿದುರು ತಾನೇ ಕಡುಬಡವ ಎನಿಸಿತು. ಅವನ ಹೆಂಡತಿಯೂ ಅದೇ ಹೇಳಿದಳು.—

'ಅವರು ಈ ಲೋಕದ ಮನುಷ್ಯರಲ್ಲ' ಎಂದು.

'ಸ್ವರ್ಗಲೋಕದಲ್ಲೂ ಅಂಥವರು ಬಹಳ ಜನ ಸಿಕ್ಕುವುದಿಲ್ಲ.'

—ಎಂದು ಬುಡನಸಾಬಿ ಹೆಂಡತಿಯ ಮಾತಿಗೆ ತನ್ನ ಧ್ವನಿಯನ್ನೂ ಸೇರಿಸಿದ. ಆ ಮಾತು ಹೇಳುವ ಗಳಿಗೆಯಲ್ಲಿ ಬುಡನಸಾಬಿಯ ಹೃದಯ, ಹೊತ್ತು ಬಂದರೆ ಅವರಿಗಾಗಿ ಪ್ರಾಣ ಒಪ್ಪಿಸಂತ್ತೇನೆ ಎಂದು ಶಪಥ ಮಾಡಿತು.

ವೆಂಕಟದಾಸಪ್ಪನವರು ಹೇಳಿದ ಹಾಗೇ ಬುಡನಸಾಬಿ ದುರ್ಗಾಷ್ಟಮಿಯ ದಿನ ದೇವೀಕೆರೆ, ಗಿರಿಯಮ್ಮನಹಳ್ಳಿ—ಎರಡೂ ಹಳ್ಳಿಯ ಜನಕ್ಕೆ ಊಟ ಹಾಕಿಸಿದ. ಆ ವರ್ಷದಿಂದ ಜಾತ್ರೆಯ ಮೊದಲ ದಿನ ವೆಂಕಟದಾಸಪ್ಪನವರ ಮನೆಯಿಂದ ದೇವಾಲಯಕ್ಕೆ ಅಮ್ಮನವರು ಹೋಗುವಾಗ ಉಳಿದ ಮರ್ಯಾದೆಗಳೊಂದಿಗೆ ಟೀಪುವೂ ಸೇರಿತು. ಅಮ್ಮನವರ ಉತ್ಸವಕ್ಕೊಂದು ದೊಡ್ಡ ಬಣ್ಣದ ಕುದುರೆಯನ್ನು ಮಾಡಿಸಿಕೊಟ್ಟು, ಜಾತ್ರೆಯ ಕಾಲದಲ್ಲಿ ಒಂದು ದಿನ ಅಮ್ಮನವರಿಗೆ ಕುದುರೆ ಉತ್ಸವ ನಡೆಯಲು ಬುಡನಸಾಬಿ ಏರ್ಪಾಡು ಮಾಡಿದ.

ಅಂದಿನಿಂದ ವೆಂಕಟದಾಸಪ್ಪ, ಬುಡನಸಾಬಿಗಳಲ್ಲಿ ಅನ್ಯೋನ್ಯ ಸ್ನೇಹ ಬೆಳೆಯಿತು. ಸ್ನೇಹಿತರಿಗಿಂತ ಹೆಚ್ಚಾಗಿ ಅವರು ಸೋದರರಾದರು. ರಂಗಮ್ಮ ಬುಡನಸಾಬಿಯ ಹೆಂಡತಿ ಫಾತಿಮಾಬಿಗೆ 'ಬಹೆನ್' ಆದಳು.

೪

ಪರಿಚಯ ಬೆಳೆದ ಹಾಗೆ ಬುಡನಸಾಬಿಗೆ, ಮೊದಲ ದಿನ ಸೂಕ್ಷ್ಮವಾಗಿ ಕಂಡ ವೆಂಕಟದಾಸಪ್ಪನವರ ಅಂತರಂಗ ವ್ಯಕ್ತಿತ್ವ ಹೆಚ್ಚು ಸಮಗ್ರವಾಗಿ ಗೋಚರವಾಯಿತು. ಗೋಚರವಾದ ಹಾಗೆ ಅವರ ಬಗ್ಗೆ ಗೌರವ, ಇವರು ಮನುಷ್ಯರಲ್ಲ, ದೇವರು ಎನ್ನುವಷ್ಟು ದೂರ ಬೆಳೆಯಿತು. ಎಲ್ಲಕ್ಕಿಂತ ಹೆಚ್ಚಾಗಿ ಬುಡನಸಾಬಿಯ ಮನಸೆಳೆದದ್ದು ವೆಂಕಟದಾಸಪ್ಪನವರ ಅತಿಥಿ ಸತ್ಕಾರ.

ಅತಿಥಿ ಸೇವೆಗೆ ವೆಂಕಟದಾಸಪ್ಪನವರಿಗೆ ಇದ್ದ ಅನುಕೂಲ ಸಾಸಿವೆ ಕಾಳಿನಷ್ಟು; ಆದರೆ ಆಕಾಂಕ್ಷೆ ಆಕಾಶದಷ್ಟು. ಅವರು ತಾವು ಉಪವಾಸ ಇದ್ದಾದರೂ ಅತಿಥಿಗಳಿಗೆ ಮಾಡುವ ಉಪಚಾರವನ್ನು ಕಂಡು ಎಷ್ಟೋ ವೇಳೆ ಬುಡನಸಾಬಿಗೆ ಬಾಯಲ್ಲಿ ಇಟ್ಟ ಅನ್ನ ಗಂಟಲಲ್ಲಿ ಇಳಿಯುತ್ತಿರಲಿಲ್ಲ. ಎಷ್ಟೋ ವೇಳೆ ಇದು ಸಲ್ಲದ ಕೆಲಸ ಎಂದೇ ತೋರಿತ್ತು. ತಾನೇ ಬತ್ತಲೆಯಾದ ಮನುಷ್ಯ ಊರಿಗೆಲ್ಲ ವಸ್ತ್ರದಾನ ಮಾಡುವುದೇಕೆ? ಎಷ್ಟೋ ವೇಳೆ ಪರೋಕ್ಷವಾಗಿ ಈ ಮಾತನ್ನು ಆಡಿಯೂ ತೋರಿಸಿದ್ದ—

'ದಾಸಣ್ಣ—ಎಷ್ಟು ದಿನಾಂತ ಹೀಗೇ ಇರ್ತೀರಿ, ಸಂಸಾರವಂದಿಗರ ಹಾಗೆ ಯೋಚನೆ ಮಾಡಬೇಡವೇ? ನೀವೇನು ಸಂನ್ಯಾಸಿಗಳೆ? ಮನೆ ತುಂಬಾ ಮಕ್ಕಳು. ನಾಳಿನ ಯೋಚನೆ ಮಾಡದೆ ಇದ್ದದ್ದನ್ನೆಲ್ಲಾ ಊರಿಗೆ ಹಂಚಿಬಿಟ್ಟರೆ, ನಾಳೆ ನಿಮ್ಮ ಗತಿ ಏನು, ಮಕ್ಕಳ ಗತಿ ಏನು? ಇಂದು ತಿಂದು ಹೋದೋರು ನಾಳೆ ನಿಮ್ಮ ಅಗತ್ಯಕ್ಕೆ ಒದಗುತ್ತಾರೆಯೋ? ಎಂದು.

'ನೀವಾಡುವ ಮಾತು ನಿಜ. ಸಾಹೇಬರೇ, ನೀವು ಸ್ನೇಹಿತರು. ನನ್ನ ಕಷ್ಟ ಸುಖ ಅಂದರೆ ನೀವೇ ಇಷ್ಟು ಒದ್ದಾಡ್ಕೋತೀರ. ನನ್ನದು ನಿಮಗೇ ಇಷ್ಟು ಚಿಂತೆಯಾದರೆ, ನನಗೆ ಈ ಜನ್ಮ ಕೊಟ್ಟ ತಾಯಿಗೆ ಇನ್ನೆಷ್ಟು ಚಿಂತೆ ಇರಬೇಕು. ನನಗೇನೋ ನನ್ನ ಸಂಸಾರದ್ದೇ ಚಿಂತೆ. ಏನಾಗುತ್ತೋ, ಈ ಭಾರ ಹೇಗೆ ಹೊರಲಿ ಅನ್ನೋ ಭಯ. ಜಗತ್ತಿನ ತಾಯಿ ಅವಳು ನೂರುಕೋಟಿ ಸಂಸಾರ ಹೊರ್ತೋ ಅವಳ ಹೆಗಲಿಗೆ ನನ್ನ ಸಂಸಾರ ಒಂದು

ದೊಡ್ಡ ಭಾರವೆ? ಹೇಗೋಃ ಹೊರುತ್ತಾಳೆ. ಅಫಳಿರೋವರೆಗೂ ನನಗೇಕೆ ಆ ಚಿಂತೆ?'

—ಎಂದು ಮೆದುವಾಗಿ ನಕ್ಕು ಆ ಮಾತು ಮುಗಿಸುವರು ವೆಂಕಟ ದಾಸಪ್ಪ. ಬುಡನಸಾಬಿಯೂ ಆ ಮಾತಿಗೆ ಮರುಮಾತನಾಡಲಾಗದೆ ಸುಮ್ಮನಾದರೂ, ಆ ತರ್ಕ ಅವನಿಗೆ ಹಿಡಿಯುವುದಿಲ್ಲ. ಈ ಸಂನ್ಯಾಸೀನ ಕಟ್ಟಿಕೊಂಡ ಈ ಸಂಸಾರದ ಗತಿ ಏನು ಎಂದು ಚಿಂತಿಸುವನು. ಆಗಾಗ ವೆಂಕಟದಾಸಪ್ಪನವರಿಗೆ ತಿಳಿಯದ ಹಾಗೆ, ಅವರ ಮನೆಗೆ ಕಾಳುಕಡಿ ಸಾಗಿ ಸಲು ಯತ್ನಿಸುವನು. ಆದರೆ ಇದೂ ನಡೆಯುತ್ತಿರಲಿಲ್ಲ. ಪರರಿಂದ ಏನಾದರೂ ತೆಗೆದುಕೊಳ್ಳುವ ವಿಷಯದಲ್ಲಿ ವೆಂಕಟದಾಸಪ್ಪನವರಷ್ಟೇ ರಂಗಮ್ಮನೂ ಕಟ್ಟುನಿಟ್ಟು.

'ಬುಡನ ಅಣ್ಣ, ಇದೆಲ್ಲಾ ಏಕೆ?'—ಎನ್ನುವಳು ರಂಗಮ್ಮ ಅವನು ತಂದ ವಸ್ತುಗಳನ್ನು ಸ್ವೀಕರಿಸದೆಯೆ.

'ಏಕೆ ಅಂದರೆ —ನಮ್ಮ ವಿಶ್ವಾಸ. ನಿಮ್ಮ ಮನೆಗೆ ಬಂದರೆ ಅನ್ನ ಇಡುತ್ತಿರಲ್ಲಾ? ನಾನು ಏಕೆ ಎಂದು ಕೇಳುತ್ತೇನೆಯೋ? ಹಾಗೇ ಇದೂ ಎಂದು ಮೊಂಡತನದ ಉತ್ತರ ಕೊಡುವನು ಬುಡನಸಾಬಿ.

'ಅಂದರೆ—ನಾವು ಅನ್ನ ಇಟ್ಟ ಋಣವನ್ನು, ಈ ಕಾಳು ಕೊಟ್ಟು ತೀರಿಸಬೇಕು ಎಂದು ಇಚ್ಛೆಯೆ?

'ಹಾಗಲ್ಲಾ ಅಕ್ಕಾ,

'ಹಾಗಲ್ಲ ಅಂದರೆ ಮತ್ತೆ ಹೇಗೆ? ನೀವು ಅನ್ನ ಇಟ್ಟಿರಿ—ನಾನು ಕಾಳು ಕೊಟ್ಟೆ. ಅಂದರೆ ನಮ್ಮ ಮನೆಅನ್ನ ಮಾರಾಟದ ಮನೆಯೋ ಅಣ್ಣ?'

—ರಂಗಮ್ಮನ ಮಾತು ಬುಡನಸಾಬಿಯ ಬಾಯಿ ಮುಚ್ಚಿಸುವದು. ಅಲ್ಲೂ ಮಾತು ಸೋತು, ರೇಗಿ—

'ಅಕ್ಕ —ದಾಸಣ್ಣ ಅಂತೂ ಸಂನ್ಯಾಸಿ. ಸಂಸಾರ ಅವರಂಥವರಿಗಲ್ಲ. ವ್ಯವಹಾರಜ್ಞಾನ ಬಿಲ್‌ಕುಲ್ ಇಲ್ಲ. ಅವರಿಗೆ ಇಲ್ಲವಾದರೆ ಹೋಗಲಿ, ಹೆಂಗಸು, ನಿನಗಿರಬೇಡವೇ ಅಕ್ಕಾ. ನೀನೂ ಅವರ ಹಾಗೆ ಇದ್ದು, ನಾಳೆ ಮಕ್ಕಳ ಕೈಲಿ ಚಿಪ್ಪು ಕೊಡುತ್ತೀರಾ?

'ಇಲ್ಲ...'

'ಇಲ್ಲ ಅಂದರೆ ಮತ್ತೇನು ಕೊಡುತ್ತೀರಿ?'

'ನಾವೇನು ಅಷ್ಟು ಬುದ್ಧಿಹೀನರು ಅಂದುಕೊಂಡಿದೀಯ? ಅವರಿಗೆ ಇಡಬೇಕಾದ ಆಸ್ತಿಯ ಅಪ್ಪ ಇಟ್ಟೇ ಇದ್ದಾರೆ.'

'ಏನಿಟ್ಟಿದಾರೋ—ನಾನು ಕಾಣದಂಥಾದ್ದು.'

'ನೀನು ಕಾಣೆ—ಆದರೆ ಅವರು ಆಸ್ತಿ ಇಟ್ಟಿರುವುದು ನಿಜ.'

'ಕಾಣದಿದ್ದರೆ ಹೋಗಲಿ ಹೇಳು. ಕೇಳಿಯಾದರೂ ಸಂತೋಷ ಪಡುತ್ತೇನೆ.'

'ಅವರು ಮಕ್ಕಳಿಗಿಟ್ಟಿರುವ ದೊಡ್ಡ ಆಸ್ತಿ—ನೀವೇ. ನೀನು ನಿನ್ನಂಥ ಅಣ್ಣತಮ್ಮಂದಿರ ವಿಶ್ವಾಸವೇ ನಮ್ಮ ಮಕ್ಕಳ ಆಸ್ತಿ. ಹಣ, ಹೊಲ, ಮನೆ, ಎಲ್ಲಾ ಕಳೆದುಹೋಗಬಹುದು—ಮಕ್ಕಳಿಗೆ ಬುದ್ಧಿಯಿಲ್ಲದೆ ಹೋದರೆ, ಆದರೆ ಈ ಆಸ್ತಿ ಕಳೆಯಲು ಸಾಧ್ಯವೇ? ಇದಕ್ಕಿಂತ ಇನ್ನೇನು ಆಸ್ತಿ ಬೇಕು ಹೇಳು ಅವರಿಗೆ?'

'ನನ್ನ ವಿಶ್ವಾಸ—ನಾಯಿಯ ಮೊಲೆಹಾಲು ಎರಡೂ ಒಂದೇ. ಏನು ಉಪಯೋಗ? ಏನು ಕೊಟ್ಟರೂ ಬೇಡ ಅಂದು, ಬಾಯಲ್ಲಿ ಬೆಲ್ಲದಂಥ ಮಾತಾಡಿದರೆ ಆಯಿತೇ?

'ನೀನು ಕೊಡುತ್ತಿದ್ದ ಹಾಗೇ ತೆಗೆದುಕೊಂಡರೆ ಸ್ನೇಹವೇ?'

'ಕೊಟ್ಟದ್ದೂ ತೆಗೆದುಕೊಳ್ಳಬೇಕು. ಬೇಕಾದರೆ ಕೇಳಿಯೂ ತೆಗೆದು ಕೊಳ್ಳಬೇಕು—ಅದೇ ಸ್ನೇಹ.'

'ನನಗೆ ತೋರಿದರೆ ಅಂತ ಸ್ನೇಹಿತರ ಸುಲಿಗೆಗೆ ಹೊರಟರೆ ಅದಕ್ಕೆ ಮೊದಲೆಲ್ಲಿ, ಕೊನೆಯಲ್ಲಿ? ಅದಕ್ಕಿಂತ ಇದ್ದಷ್ಟರಲ್ಲೇ ಸುಖವಾಗಿರುವುದೇ ಮೇಲಲ್ಲವೇ? ಮನುಷ್ಯನ ಆಸೆಗೆ ಕೊನೆಯಿಲ್ಲ ನೀನು ಕೊಡು, ಬಿಡು—ಅದಕ್ಕೆ ಬೆಲೆ ಇಲ್ಲ ಅಣ್ಣ...'

'ಹಾಗಾದರೆ ಮತ್ಯಾವುದಕ್ಕೆ ಬೆಲೆ?'

'ಕೊಡಬೇಕು ಅನ್ನುವ ಮನಸ್ಸಿದೆಯಲ್ಲಾ—ಅದೇ ವಜ್ರದ ಗಣಿ!'

'ವಜ್ರದ ಗಣಿಯಲ್ಲ, ಕನ್ನಡಿಯಲ್ಲಿನ ಗಂಟು.'

'ನಿನ್ನ ಪಾಲಿಗೆ ಅಷ್ಟೆ. ನನಗೆ ಹಾಗಲ್ಲ.'

'ನಿಮ್ಮ ಪಾಲಿಗೆ ಬಂದಾಗ ಆದಕ್ಕೇನು ಕೋಡು ಮಾಡುಂತ್ತದೆ ಯೇನೋ?'

'ಹೂ.'

'ಹೂ, ನೀವಿಬ್ಬರೂ ಮಾತಾಡೋದು ಚೆನ್ನಾಗಿ ಕಲಿತಿದೀರಿ, ಅಷ್ಟೆ.'

'ಹಾಗಲ್ಲ ಅಣ್ಣ–ನೋಡು–ಕಷ್ಟ ಬಂದಾಗ ನೀನಿದ್ದೀಯ ಅನ್ನೋ ನಂಬಿಕೆಯೇ ಬಂದ ಕಷ್ಟವನ್ನು ಎದುರಿಸೋ ಧೈರ್ಯ ಕೊಡುತ್ತದೆ. ಯಾವ ಕಷ್ಟ ತಾನೇ ಶಾಶ್ವತ ಹೇಳು. ಬರುತ್ತೆ–ಹೋಗುತ್ತೆ. ಬಂದಾಗ ಎದೆಗೆಡದಿರುವ ಹಾಗೆ, ಏನಾದರೂ ನಮ್ಮವರು ಒಬ್ಬರಿದಾರೆ ಎಂಬ ಭರವಸೆ ಯೇ ಸಾಕು. ಹಾಗಲ್ಲದೆ ಏನಾದರೂ ಕೊಟ್ಟೇ ತೀರಿಸಬೇಕು ಎಂದರೆ ಎಲ್ಲಿಗೆ ಕೊನೆ? ಇವರು ನಮ್ಮವರು ಎಂಬ ವಿಶ್ವಾಸ, ಇವರು ನಮ್ಮ ಕಷ್ಟಕ್ಕಾಗುತ್ತಾರೆ ಎಂಬ ನಂಬಿಕೆ–ಆ ಎರಡಿದ್ದರೆ ಸಾಕು. ಅಂಥ ಸ್ನೇಹಿತರೇ ನಮ್ಮ ಪಾಲಿನ ದೇವರು.'

'ಒಳ್ಳೇ ಮಾತಿನಲ್ಲಿ ಈ ಪಾಪೀನೂ ದೇವರ ಮಟ್ಟಕ್ಕೆ ಏರಿಸಿಬಿಟ್ಟೆ'.

'ಹೂ, ದೇವರು ತಾನೇ ಇನ್ನೇನು ಹೆಚ್ಚು ಮಾಡೋದು. ನಾವು ಆವನಿಂದ ಕೇಳೋದೂ ಇಷ್ಟೆ.'

'ಆಂದರೆ...'

ಏನಾದರೂ ಬರಲಿ, ತಾಯಿ ಇದ್ದಾಳೆ ಆಂದುಕೊಂಡರೆ ತೀರಿತಲ್ಲ— ಉರಿಯಾಗಿ ಬಂದ ದುಃಖ ಮಂಜಾಗಿ ಹೋಗುತ್ತೆ. ಏನು ಬಂದರೂ ಆ ಮಹಾತಾಯಿ ಇದಾಳೆ ಆನ್ನೋ ನೆಚ್ಚಿಗೆಯೇ ತಾನೇ ನಮಗೆ ಈ ಸಂಸಾರ ಹೊರಲು ಬಲ ಕೊಡುವುದು... ಹೋಗಲಿ ಬಿಡು. ಬರೀ ಮಾತಾಡಿ ದಣಿಸಿ ಬಿಟ್ಟೆ. ಒಂದು ಲೋಟ ಪಾನಕ ಮಾಡಿಕೊಡುತ್ತೇನೆ ತಾಳು'.

—ಎನ್ನುವಳು ರಂಗಮ್ಮ.

'ಕಂತೆಗೆ ತಕ್ಕ ಬೊಂತೆ! ನೀವಿಬ್ಬರೂ ಸರಿಯಾಗಿ ಸೇರಿದೀರ. ಎಷ್ಟು ಲೋಕ ಹುಡುಕಿ ಪರಮಾತ್ಮ ನಿಮ್ಮಿಬ್ಬರನ್ನೂ ಗಂಟುಹಾಕಿದನೋ! ನಿಮ್ಮನ್ನು ನಂಬಿದವರು ಕೆಟ್ಟರು. ಹೋಗಲಿ...ಹೋಗು... ಪಾನಕಾನೋ, ಕೋಸುಂಬರಿಯೋ ಏನು ಕೊಡ್ತೀಯೋ ಕೊಡು. ಆಷ್ಟಕ್ಕೇ ತಾನೆ ನಾನು ಬರುವುದು'

—ಎನ್ನುವನು ಬುಡನಸಾಬಿ, ತನ್ನ ಅಸಮಾಧಾನವನ್ನು ಮುಚ್ಚಿಡಲು ಯತ್ನಿಸದೆ.

'ಆದಕ್ಕೇನು? ನಿನಗೆ ಬರಬೇಡ ಎಂದವರು ಯಾರು, ದಿನಾ ಬಾ' —ಎಂದು ರಂಗಮ್ಮ ಪಾನಕ ಮಾಡಿಕೊಡಲು ಒಳಗೆ ಹೋಗುವಳು. ಒಳಗೆ ಪಾನಕಕ್ಕೆ ಬೆಲ್ಲವಿದೆಯೇ ಎಂದು ಚಿಂತೆಮಾಡುತ್ತ ಕೂಡುವನು. ಬುಡನಸಾಬಿ.

ವೆಂಕಟದಾಸಪ್ಪನವರ ಮನೆಗೆ ಬಂದು, ಅವರ ಆತಿಥ್ಯ ಸ್ವೀಕರಿಸಿದಾಗಲೆಲ್ಲಾ ಅವನಿಗೆ ಈ ಚಿಂತೆ, ಕೊರಗು ತಪ್ಪಿದ್ದಲ್ಲ. ಆದರೆ ಆ ದಂಪತಿಗಳಿಗೆ ಮಾತ್ರ ಆ ಚಿಂತೆ ಇರಲಿಲ್ಲ. ಒಂದು ದಿನವೂ ಅವರು ಚಿಂತೆ ಮಾಡಿದುದನ್ನು ಬುಡನಸಾಬಿ ನೋಡಿರಲಿಲ್ಲ. ಇದು ಎಂಥಾ ಮಳೆಗಾಳಿಗೂ ಜಗ್ಗದ ಸಂಸಾರ ಎಂದುಕೊಂಡಿದ್ದ.

ಆದರೆ ಒಂದು ದಿನ ಆ ಕಗ್ಗಲ್ಲಿನಲ್ಲೂ ಕಂಬನಿ ಒಸರುವುದನ್ನು ಕಂಡು ಬುಡನಸಾಬಿಯ ಎದೆ ಬಿರಿದುಹೋಯಿತು.

## ೫

ಆ ದಿನ, ವೆಂಕಟದಾಸಪ್ಪನವರ ಮನೆಗೆ ಅಭ್ಯಾಗತರಾಗಿ ಒಂದು ಸಣ್ಣ ಸಂಸಾರವೇ ಬಂದಿತ್ತು. ಹತ್ತಿರದ ಹಳ್ಳಿಯಿಂದ ಚಳ್ಳಕೆರೆಗೆ ಕಾಲು ನಡಿಗೆಯಲ್ಲಿ ಪ್ರಯಾಣ ಮಾಡುತ್ತಿದ್ದ ಗಂಡ ಹೆಂಡತಿ, ಅವರ ಮೂರು–ನಾಲ್ಕು ವರ್ಷದ ಒಂದು ಗಂಡು ಮಗು. ಮಧ್ಯಾಹ್ನದ ಬಿಸಿಲಿಗೆ ಇವರ ಮನೆಯ ಬಳಿ ಬಂದರು. ಆಗತಾನೇ ಪೂಜೆ ಮುಗಿಸಿ, ಬರಬಹುದಾದ ಅತಿಥಿಗಳನ್ನು ಎದುರುಗೊಳ್ಳಲು ಹೊರಬಂದ ವೆಂಕಟದಾಸಪ್ಪನವರು, ಬಿಸಿಲಿನಲ್ಲಿ ಮನೆಯ ಮುಂದಿನ ಜಗಲಿಯ ಮೇಲೆ ಕುಳಿತು ದಣಿವಾರಿಸಿ ಕೊಳ್ಳುತ್ತಿದ್ದ ಈ ಕುಟುಂಬವನ್ನು ಕಂಡು ಅವರು ಯಾರು, ಬಂದ ಕೆಲಸ ಏನೆಂದು ವಿಚಾರಿಸಿ, ಊಟಕ್ಕೆ ಎಬ್ಬಿಸಿದರು. ತಾನೂ ಜಗಲಿಯ ಮೇಲೆ ಕುಳಿತು ಕಾಯುತ್ತಿದ್ದ ಬುಡನಸಾಬಿಗೆ ಅದನ್ನು ಕಂಡು ಭಯವಾಯಿತು. ಒಬ್ಬರಾದರೆ ಸರಿ, ಇಷ್ಟು ಜನವನ್ನೂ ಊಟಕ್ಕೆ ಎಬ್ಬಿಸಿದರೆ ಏನು ಗತಿ ಎಂತ. ಆ ದಂಪತಿಗಳೂ ಏನೋ ನೆಪ ಹೇಳಿ ತಪ್ಪಿಸಿಕೊಳ್ಳಲು ನೋಡಿದರು. ಆದರೆ ವೆಂಕಟದಾಸಪ್ಪನವರು ಒಪ್ಪಲಿಲ್ಲ.

'ರಂಗೂ, ಇವರಿಗೆ ಕೈಕಾಲು ತೊಳೆಯಲು ನೀರು ಕೊಡು. ಹೋಗಿ ತಾಯಿ, ನೀವು ಒಳಗೇ ಹೋಗಿ ಕೈಕಾಲು ತೊಳೆದುಕೊಳ್ಳಿ. ಬಿಸಿಲಿನಲ್ಲಿ ಮಗು ಬಹಳ ದಣಿದಿದೆ'

—ಎಂದು, ಗಂಡನ ಕೂಗು ಕೇಳಿ ನೀರು ತಂದ ರಂಗಮ್ಮನಿಗೆ—

'ಇವರನ್ನು ಒಳಗೆ ಕರೆದುಕೊಂಡು ಹೋಗು ರಂಗು. ಬಹಳ ಸಂಕೋಚದ ಸ್ವಭಾವದವರು. ಇವರಿಗೆ ಬಚ್ಚಲುಮನೆ ತೋರಿಸಿ ಬೇಗ ಎಲೆ ಹಾಕು. ಬಿಸಿಲಿನಲ್ಲಿ ನಡೆದು ಬಂದಿದಾರೆ. ಬಹಳ ದಣಿವಾಗಿರಬೇಕು. ಸ್ನಾನವಾಗದಿದ್ದರೆ ವಿಚಾರಿಸಿ, ಸ್ನಾನಕ್ಕೆ ನೀರು ಕೊಟ್ಟು, ಉಡಲು ಮಡಿ ಕೊಡು. ಹೋಗಿ ಅಮ್ಮ, ಇದು ನಿಮ್ಮ ಮನೆ. ಏನು ಬೇಕಾದರೂ ಕೇಳಿ ತೆಗೆದುಕೊಳ್ಳಿ. ಸಂಕೋಚ ಮಾಡಿಕೊಳ್ಳಬೇಡಿ.'

—ಎಂದ ಅವರು ಬೇರೆ ಮಾತಾಡಲು ಅವಕಾಶ ಕೊಡದೆ ಎಬ್ಬಿಸಿಯೇ ಬಿಟ್ಟರು.

ಆ ಗಂಡ ಹೆಂಡರಿಬ್ಬರೂ ಸ್ನಾನ ಮುಗಿಸಿ ಊಟಕ್ಕೆ ಕುಳಿತರು. ರಂಗಮ್ಮ ತನ್ನ ಮಕ್ಕಳನ್ನು ಪಕ್ಕದ ಮನೆಗೆ ಕಳಿಸಿ, ಬಂದವರಿಗೆ ಮೊದಲು ಎಲೆಹಾಕಿ ಊಟಕ್ಕೆ ಬಡಿಸಿದಳು. ಊಟವೆಲ್ಲಾ ಮುಗಿದು ಮಜ್ಜಿಗೆ ಬಡಿಸುವ ಹೊತ್ತು ಬಂತು. ನಗುತ್ತಾ ತಾಯಿಯೊಂದಿಗೆ ಊಟಮಾಡುತ್ತಿದ್ದ ಮಗು ಎಲೆಗೆ ಮಜ್ಜಿಗೆ ಬಿದ್ದುದನ್ನು ಕಂಡು—

'ನಂಗೆ ಮೊಚರು'.

—ಎಂದಿತು. ಮಗುವಿನ ಮಾತು ಕೇಳಿ ರಂಗಮ್ಮನಿಗೆ ಕರಳು ಹಿಂಡಿದಂತಾಯಿತು. ಅತಿಥಿಗಳಿಗೆ ಬಡಿಸಿಯಾದ ಮೇಲೆ ಅವರಿಗೇ ಸಾಲು ವಷ್ಟು ಮಜ್ಜಿಗೆ ಇರಲಿಲ್ಲ–ಒಳಗೆ. ಇನ್ನು ಮೊಸರೆಲ್ಲಿಂದ ತರುವುದು? ರಂಗಮ್ಮನ ಮನಸ್ಸನ್ನು ಅರಿತುಕೊಂಡ ಗೃಹಿಣಿ ಬೇರೇನೋ ಮಾತಾಡಿ, ಮಗುವಿಗೆ ಮೊಸರಿನ ಮಾತು ಮರೆಸಲು ಯತ್ನಿಸಿದಳು. ಆದರೆ ಮಗು ಆ ಮಾತು ಬಿಡಲಿಲ್ಲ. ಹಟ ಹಿಡಿದು 'ಮೊಚರು...ನಂಗೆ... ಮೊಚರು' ಎಂದು ಅಳುವುದಕ್ಕೆ ಆರಂಭಿಸಿತು. ರಂಗಮ್ಮನ ಧರ್ಮಸಂಕಟ ತಿಳಿದು ಕೊಂಡ ಆ ಹೆಣ್ಣುಮಗಳಿಗೆ ಮಗುವಿನ ಹಟವನ್ನು ಕಂಡು ಸಿಟ್ಟು ಬಂತು

ಹೋದ ಹತ್ತಿರ ಬಂದ ಹತ್ತಿರ ಎಲ್ಲಾ ಹಟಾ ತೆಗೀತೀಯಾ ಕತ್ತೆ'

—ಎಂದು ಮಗುವಿನ ಬೆನ್ನ ಮೇಲೆ ಗುದ್ದಿದಳು. ಏಟು ತಿಂದ ಮಗು ಚೀರಿ ಚೀರಿ ಅಳಲಾರಂಭಿಸಿತು. ಮಗುವಿನ ಅಳುವನ್ನು ಕೇಳಿ, ಅಧರ ತಂದೆ—

'ಅವನದೇನು ಹಟ?' ಎಂದ.

'ಇನ್ನೇನು ಹೋಧ ಹತ್ತಿರ, ಬಂಧ ಹತ್ತಿರ ಅವನಿಗೆ ಮೊಸರೇ ಆಗಬೇಕು. ಕೃಷ್ಣಾ —ಬಾಯಿ ಮುಚ್ಚಿಕೊಂಡು ಊಟ ಮಾಡ್ತೀಯೋ ಇಲ್ಲವೊ?'

—ಎಂದು ಮತ್ತೊಮ್ಮೆ ಮಗುವಿನ ಬೆನ್ನಿನ ಮೇಲೆ ಏಟು ಹಾಕಿದಳು ರಂಗಮ್ಮ ಮಜ್ಜಿಗೆಯ ಪಾತ್ರೆಯನ್ನು ಅಲ್ಲೇ ಬಿಟ್ಟು, ಆ ಏಟು ತಿಂದ ಮಗ. ವನ್ನು ಎತ್ತಿಕೊಂಡಳು. ಮಗುವಿನ ನಡತೆ, ಅಳು, ಏಟು ತಿಂದದ್ದು— ಎಲ್ಲಾ ಸೇರಿ, ಮಗುವಿನ ತಾಯಿಯ ಕಣ್ಣಲ್ಲಿಯೂ ನೀರಾಡಿತು.

'ಮಕ್ಕಳೇ ಹಾಗೇ. ಅದಕ್ಕೇನು ಗೊತ್ತಾಗುತ್ತೆ. ದೇವರ ಹಾಗೆ

ಅವು. ಅವಕ್ಕೆ ಎಲ್ಲರ ಮನೆಯೂ ತವರ್ಮನೆ. ಅದನ್ನೆಲ್ಲಾ ಹಚ್ಚಿಕೊಳ್ಳಬೇಡಿ. ನಗುನಗುತ್ತಾ ಊಟಮಾಡಿ,'

—ಎಂದು ಸಮಾಧಾನ ಹೇಳಿ, ತಾವು ಊಟಕ್ಕೆ ಕೂಡದೆ, ಅವರ ಊಟದ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ವೆಂಕಟದಾಸಪ್ಪನವರು, ಅವರಿಬ್ಬರಿಗೂ ಊಟ ಮಾಡಿಸಿದರು. ರಂಗಮ್ಮ ನೈವೇದ್ಯ ಮಾಡಿದ ಬಾಳೆಯ ಹಣ್ಣನ್ನು ಕೊಟ್ಟು ಮಗುವನ್ನು ರಮಿಸಿ, ಅದು ಮತ್ತೆ ನಗುವ ಹಾಗೆ ಮಾಡಿದಳು.

ಅವರಿಬ್ಬರದೂ ಊಟ, ತಾಂಬೂಲವಾದ ಬಳಿಕ, ಅವರಿಗೆ ಮಲಗಲು ನಡುಮನೆಯಲ್ಲಿ ಚಾಪೆ ಹಾಸಿಕೊಟ್ಟು ಬಂದು, ವೆಂಕಟದಾಸಪ್ಪನವರು, ಮನೆಯಿಂದ ಹೊರಟು, ಎದುರಿಗಿದ್ದ ಛತ್ರದ ಕಟ್ಟೆಯ ಮೇಲೆ ಕುಳಿತುಬಿಟ್ಟರು. ಬುಡನಸಾಬಿ ಕುಳಿತಿರುವುದೂ ಅವರಿಗೆ ನೆನಪಿದ್ದಂತಿರಲಿಲ್ಲ. ಸ್ವಲ್ಪ ಹೊತ್ತಿನಲ್ಲೇ ರಂಗಮ್ಮ ಹೊರಗೆ ಬಂದು, ಬುಡನಸಾಬಿಯ ಮುಂದೆ ನೀರಿನ ತಂಬಿಗೆಯಿಟ್ಟು—

'ಏಳಣ್ಣ—ಕೈಕಾಲು ತೊಳೆದುಕೊಂಡು ಊಟಕ್ಕೇಳು. ಬಹಳ ಹೊತ್ತಾಯಿತು'

—ಎಂದಳು. ಬುಡನಸಾಬಿ ರಂಗಮ್ಮನ ಮುಖ ನೋಡಿದ. ರಂಗಮ್ಮನ ಕಣ್ಣಂಚಿನಲ್ಲಿ ಒಂದು ಹನಿ ಕಣ್ಣೀರು ಹೊಳೆಯುತ್ತಿತ್ತು. ಮುಖ ಬಾಡಿತ್ತು. ಅದನ್ನು ನೋಡಿದ ಕೂಡಲೇ ಬುಡನಸಾಬಿಗೆ ಏನೋ ಆಗ ಬಾರದ್ದು ಈ ದಿನ ಆಗಿದೆ ಎನಿಸಿತು.

'ಅಣ್ಣಾವರದು ಊಟ ಆಯಿತೆ ಅಕ್ಕಾ?—ಎಂದ.

'ಆಯಿತು'

—ಎಂದಳು ರಂಗಮ್ಮ. ಅದು ಸುಳ್ಳೆಂದು ದುಃಖದಿಂದ ಗಾರಾದ ಆವಳ ಧ್ವನಿ ಸಾರಿ ಹೇಳಿತು.

'ನನ್ನಾಣೆಗೂ ಹೇಳು...ನನಗೆ ಗೊತ್ತು. ಅವರದು ಊಟ ಆಗಿಲ್ಲ. ಏನೋ ಆಗಿದೆ ಇವತ್ತು. ಅವರು ಊಟ ಮಾಡೋವರೆಗೂ ನಾನೂ ಊಟ ಮಾಡೋಲ್ಲ. ಅದೇನು ಹೇಳು?'

—ಎಂದ ಬುಡನಸಾಬಿ.

'ಇವತ್ತಿನ ಊಟದ ಪುಣ್ಯ ನಮಗಿಲ್ಲ.'

—ಎಂದವಳೇ ದುಃಖ ಒತ್ತರಿಸಿ ಬಂದ ರಂಗಮ್ಮ ಅದನ್ನು ತೋರ ಲಾಗದೆ ಒಳಗೆ ಹೋದಳು. ಅದನ್ನು ಕಂಡ ಬುಡನಸಾಬಿಯ ಹೃದಯಕ್ಕೆ ಬೆಂಕಿ ಹೊತ್ತಿಸಿದಂತಾಯಿತು. ಜಗಲಿಯಿಂದ ಎದ್ದವನೇ ವೆಂಕಟದಾಸಪ್ಪ ನವರು ಕುಳಿತ ಛತ್ರದ ಕಡೆಗೆ ಓಡಿದ. ವೆಂಕಟದಾಸಪ್ಪನವರು ತೋಳ ಮರೆಯಲ್ಲಿ ಮುಖ ಮುಚ್ಚಿ ಕುಳಿತಿದ್ದರು.

'ಅಣ್ಣಾ...ಅಣ್ಣಾ...ದಾಸಣ್ಣಾ...'

—ಅರ್ಥವಾಗದ ವ್ಯಥೆಯಲ್ಲಿ ಬೇಯುತ್ತ ಕೂಗಿದ ಬುಡನಸಾಬಿ. ಅವರ ಕೂಗು ಕೇಳಿಯೂ ವೆಂಕಟದಾಸಪ್ಪನವರು ತಗ್ಗಿಸಿದ ತಲೆ ಮೇಲೆತ್ತ ಲಿಲ್ಲ. ಬುಡನಸಾಬಿ, ತನ್ನ ಉದ್ವೇಗದಲ್ಲಿ ವೆಂಕಟದಾಸಪ್ಪನವರು ಮಡಿಯಿರು ವುದನ್ನು ಮರೆತು, ಅವರನ್ನು ಮುಟ್ಟಿ, ತೋಳಲ್ಲಿ ಹುದುಗಿದ ಅವರ ಮುಖ ವನ್ನು ಬಲವಂತವಾಗಿ ಮೇಲಕ್ಕೆ ಎತ್ತಿದ.

ವೆಂಕಟದಾಸಪ್ಪನವರ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿ ಯುತ್ತಿತ್ತು. ಅದನ್ನು ಕಂಡ ಬುಡನಸಾಬಿಗೆ ಸಿಡಿಲು ಹೊಡೆದಂತಾಯಿತು.

'ಏನಾಯಿತಣ್ಣ...ಹೇಳು...ಹೇಳದಿದ್ದರೆ ನನ್ನಾಣೆ'

—ಎಂದು ಕಾತುರನಾಗಿ ಕೇಳಿದ.

'ಏನು...ಏನು ಹೇಳಲಿ...ಸಾಹೇಬರೇ...ನಾನು ನಿರ್ಭಾಗ್ಯ... ಮಹಾಪಾಪಿ...'

—ಎಂದು ಉಗ್ರದುಃಖದಿಂದ ವಿಕಾರವಾದ ಸ್ವರದಲ್ಲಿ ಹೇಳಿದರು ವೆಂಕಟದಾಸಪ್ಪ.

'ಅದೆಲ್ಲಾ ಇರಲಿ, ಅದೇನಾಯಿತು ಹೇಳು.'

'ನಾನು ಪಾಪಿ ಸಾಹೇಬರೇ...ಕೃಷ್ಣಾ...ಗೋಪಾಲಕೃಷ್ಣ...ತಾನೇ ನನ್ನ ಮನೆ ಬಾಗಲಿಗೆ ಬಂದು...ಮೊಸರು ಬೇಡಿದ...ಕೊಡುವ ಯೋಗ್ಯತೆ ನನಗಿಲ್ಲವಾಯಿತು...ನನಗೆ ಎಲ್ಲಾ ಭಾಗ್ಯಾನೂ ಕೊಟ್ಟಳು ತಾಯಿ...ಒಂದು ಹಸು ಕಟ್ಟೋ ಪುಣ್ಯ ಕೊಡಲಿಲ್ಲ...ಕೊಟ್ಟಿದ್ದರೆ...ಕೊಟ್ಟಿದ್ದರೆ...'

—ಎಂದರು ವೆಂಕಟದಾಸಪ್ಪ. ಆ ಮಾತಾಡುತ್ತಾ ಮತ್ತೆ ಅವರ ಕಣ್ಣು ಕಂಬನಿಯ ಚಿಲುಮೆಯಾಯಿತು.

ಅವರು ಹೆಚ್ಚು ಹೇಳುವ ಅಗತ್ಯವಿಲ್ಲದೆಯೇ ನಡೆದುದೇನೆಂಬುದು ಬುಡನ

ಸಾಬಿಗೆ ಅರ್ಥವಾಯಿತು. ಕೂಡಲೇ ಅಲ್ಲಿಂದ ಹೊರಟು ದಾಪುಗಾಲು ಹಾಕುತ್ತಾ ಗಿರಿಯಮ್ಮನಹಳ್ಳಿಯತ್ತ ನಡೆದ.

ಅವನ ಎದೆಯಲ್ಲಿ ಬೀಸುತ್ತಿದ್ದ ಬಿರುಗಾಳಿ, ಅವನ ಕಾಲಿಗೆ ರೆಕ್ಕೆಯನ್ನು ಜೋಡಿಸಿತ್ತು. ಗಾಳಿವೇಗದಿಂದ ಮನೆಯನ್ನು ತಲುಪಿದವನೇ ಹೆಂಡತಿಯನ್ನು ಕೂಗಿ—

'ಫಾತಿಮಾ...ಹಸು ಕೊಟ್ಟಿಗೆಯಲ್ಲಿದೆಯೋ, ಮೇಯಲು ಹೊಡೆದಿದ್ದೀರೋ'

—ಎಂದು ಕೇಳಿದ.

'ಮೇಯಲು ಹೋಗಿವೆ. ಅದೇಕೆ? ಏನಾಯಿತು?'

—ಎಂದು ಕೇಳಿದಳು ಫಾತಿಮಾಬೀ, ಮೋಡಕಟ್ಟಿದ ಮುಗಿಲಿನಂತಿದ್ದ ಗಂಡನ ಮುಖ ನೋಡಿ, ಗಾಬರಿಯಾಗಿ.

'ಈಗ ಏನೂ ಕೇಳಬೇಡ. ಸಂಜೆಗೆ ಎಲ್ಲಾ ಹೇಳುತ್ತೇನೆ, ಮೊದಲು ಆಳನ್ನು ಓಡಿಸಿ ಹಸು, ಅದರ ಕರು ಎರಡನ್ನೂ ತರಿಸು'

—ಎಂದ. ಗಂಡನ ಸ್ವಭಾವವನ್ನರಿತ ಫಾತಿಮಾ ಬೇರೇನೂ ಮಾತಾಡದೇ ಆಳನ್ನು ಹಸುವನ್ನು ತರಲು ಕಾವಲಿಗೆ ಓಡಿಸಿ—

'ನೀವು ಊಟಕ್ಕೇಳಿ'—ಎಂದಳು.

'ಊಟ–ಊಟ...ನಿನ್ನ ಊಟಕ್ಕಿಷ್ಟು ಬೆಂಕಿ ಹಾಕಿತು. ಅಲ್ಲಿ ಅವರು ಪ್ರಾಣ ಬಿಡುತ್ತಾ ಇದ್ದಾರೆ. ಇಲ್ಲಿ –ಇವಳಿಗೆ ಊಟಕ್ಕೆ ಅವಸರ'

—ಎಂದು ಅಬ್ಬರಿಸಿದ ಬುಡನಸಾಬಿ ಮತ್ತೆ ಅವಳನ್ನು ಮಾತಾಡಿಸಲಿಲ್ಲ. ಆಳು ಬರುವುದನ್ನೇ ಕಾಯುತ್ತಾ 'ಸೋಮಾರಿ ಸೂಳೇಮಕ್ಕಳು. ಏನಾದರೂ ಕೆಲಸ ಹೇಳಿದರೆ ಹತ್ತು ದಿನ ಮಾಡುತ್ತಾರೆ. ಚರ್ಮ ಸುಲಿದು ಬಿಡಬೇಕು' ಎಂದು ಅಸಹನೆಯಿಂದ ವಟಗುಟ್ಟುತ್ತಿದ್ದ ಬುಡನಸಾಬಿ, ಹಸು, ಅದರ ಕರುವಿನೊಂದಿಗೆ ಬಂದ ಆಳನ್ನು ನೋಡಿ—

'ಒಂದು ಹೊರೆ ಹುಲ್ಲು ತೆಗೆದುಕೊಂಡು, ಹಸು, ಕರು ಹೊಡೆದುಕೊಂಡು ದೇವೀಕೆರೆಗೆ ನಡಿ' ಎಂದು ಅಪ್ಪಣೆ ಮಾಡಿ, 'ಫಾತಿಮಾ, ನಾನೂ ದೇವೀಕೆರೆಗೆ ಹೋಗಿ ಬರ್ತೀನಿ'

—ಎಂದು ತಾನೂ ಆಳನ್ನು ಹಿಂಬಾಲಿಸಿ ಮತ್ತೆ ದೇವೀಕೆರೆಯ ಕಡೆ

ಹೊರಟ. ಅವನ ಆತುರಕ್ಕೆ ಆಳು ಹಸುವನ್ನು ಓಡಿಸಿಕೊಂಡು ಹೋಗ ಬೇಕಾಯಿತು. ಆದರೂ ಅವನಿಗಿಂತ ಮುಂಚಿತವಾಗಿ ಬುಡನಸಾಬಿ ದೇವೀ-ಕೆರೆಯನ್ನು ಸೇರಿ, ವೆಂಕಟದಾಸಪ್ಪನವರ ಮನೆ ಮುಂದೆ ನಿಂತು ಏದುತ್ತಾ—

'ದಾಸಣ್ಣಾ...ದಾಸಣ್ಣಾ...' ಎಂದು ಕೂಗಿದ.

ಅವನ ಕೂಗು ಕೇಳಿ ವೆಂಕಟದಾಸಪ್ಪ ಹೊರಗೆ ಬಂದು—

'ಇದೇನು ಸಾಹೇಬರೇ? ಊಟಮಾಡದೆ ಎಲ್ಲಿಗೆ ಹೊಗಿದ್ದೀರಿ... ಎಲ್ಲಿಂದ ಬಂದಿರಿ...ಇದೇನು ಅವಸ್ಥೆ'

—ಎಂದು ಕೇಳಿದರು.

'ಇವತ್ತು ಅದ್ಯಾವುದೂ ಕೇಳಬೇಡ ದಾಸಣ್ಣ. ಇವತ್ತು ನೀನು ನಾನು ಹೇಳಿದ ಹಾಗೆ ಕೇಳಬೇಕು. ಇಲ್ದಿಹೋದ್ರೆ—ನಾನಿಲ್ಲೇ ಪ್ರಾಣ ಒಪ್ಪಿಸಿ ಬಿಡ್ತೀನಿ'

—ಎಂದು ಸೊಂಟದಲ್ಲಿ ಯಾವಾಗಲೂ ಇಟ್ಟುಕೊಂಡಿರುತ್ತಿದ್ದ ದೊಡ್ಡ ಚಾಕುವನ್ನು ಹಿರಿದು ಹೇಳಿದ ಬುಡನಸಾಬಿ.

'ಇದೇನು ಹುಚ್ಚು ಸಾಹೇಬರೇ. ನಾನೇನು ಮಾಡಬೇಕು ಹೇಳಿ. ಆ ಮೇಲೆ ಚಾಕು ತೆಗೆಯುವಿರಂತೆ'

—ಎಂದರು ವೆಂಕಟದಾಸಪ್ಪ.

'ಅದ್ಯಾವುದೂ ಬೇಕಾಗಿಲ್ಲ. ನಾನು ಹೇಳಿದ ಹಾಗೆ ಕೇಳ್ತಿಯೋ ಇಲ್ಲವೋ ಅಷ್ಟು ಹೇಳು'

'ಕೇಳ್ತೀನಿ.'

'ಖಂಡಿತ...ನಿಮ್ಮ ತಾಯಿ ಆಣೆ ಮಾಡಿ ಹೇಳು'.

'ತಾಯಿ ಆಣೆಗೂ. ಅದೇನು ಹೇಳಿ'

'ಮತ್ತೆ ತಪ್ಪಕೂಡದು, ತಪ್ಪಿದರೆ ನಿಮ್ಮ ಕಟ್ಟೆಯು ಮೇಲೆ ಬುಡನ ಸಾಬಿಯ ಖಬರಸ್ಥಾನ ಆಗುತ್ತೆ; ನಾನು ಕೊಟ್ಟದ್ದು ತಗೋಬೇಕು.'

'ಅದೇನು ತಗೋಬೇಕೋ ಹೇಳಿ'

'ಏನೇ—ಅದು'

—ಎಂದು ಬುಡನಸಾಬಿ, ಆ ವೇಳೆಗೆ ಆಳು ಹೊಡೆದುಕೊಂಡು ಬಂದ ಹಸು, ಕರುವನ್ನು ತೋರಿಸಿ ಹೇಳಿದ. ಹಸುವನ್ನು ನೋಡುತ್ತಲೇ ವೆಂಕಟ

ದಾಸಪ್ಪನವರಿಗೆ ಎಲ್ಲವೂ ಅರ್ಥವಾಯಿತು. ಒಂದು ಗಳಿಗೆ ಹಸುವನ್ನು, ಚಾಕು ಹಿಡಿದು ನಿಂತ ಬುಡನಸಾಬಿಯನ್ನೂ ನೋಡಿದರು. ಒಂದು ಗಳಿಗೆ ಕಪ್ಪಿಟ್ಟ ಅವರ ಮುಖ ಮರುಗಳಿಗೆಯೇ ಗೆಲುವಾಗಿ, ನಗೆ ತುಂಬಿತು. ಅವರ ಮುಖವನ್ನೇ ಸಂಶಯದಿಂದ ನೋಡುತ್ತಿದ್ದ ಬುಡನಸಾಬಿ—

'ನಗ್ತಾ ನಗ್ತಾ ಮೋಸಮಾಡಿ, ಕೊಟ್ಟ ಮಾತು ತಪ್ಪಿಸಿದರೆ ನಾನು ಕೇಳೋನಲ್ಲ. ನನ್ತವ ನಿಮ್ಮ ಮೋಸ ನಡಿಯೋದಿಲ್ಲ. ನಾನು ಬುಡನಸಾಬಿ–ನೆನಪಿರಲಿ'—ಎಂದ.

'ನೋಡಿ ಸಾಹೇಬರೇ, ನಾನು ಬಡ ಹಾರುವ. ಚಾಕು ನೋಡಿದರೇ ನನ್ನ ಪ್ರಾಣ ಹಾರಿಹೋಗುತ್ತೆ. ಅದನ್ನು ಮುಚ್ಚಿಟ್ಟುಕೊಳ್ಳಿ' ಎಂದು ವೆಂಕಟದಾಸಪ್ಪ 'ರಂಗೂ...ರಂಗೂ...ನಿಮ್ಮ ಅಣ್ಣ ಏನು ತಂದಿದಾರೆ ನೋಡು ಬಾ...ಲಕ್ಷ್ಮಿ ಮನೆ ಬಾಗಿಲಿಗೆ ಬಂದಿದಾಳೆ' ಎಂದು ಹೆಂಡತಿಯನ್ನು ಕೂಗಿದರು.

ಗಂಡನ ಕೂಗು ಕೇಳಿ ರಂಗಮ್ಮ ಹೊರಗೆ ಬಂದು, ಚಾಕು ಹಿಡಿದು ನಿಂತ ಬುಡನಸಾಬಿ, ನಗುತ್ತಾ ನಿಂತ ಗಂಡ, ದಿಗ್ಭ್ರಮೆಯಾಗಿ ನಿಂತ ಆಳು, ಕರುವಿನ ಬೆನ್ನನ್ನು ನೆಕ್ಕುತ್ತಾ ನಿಂತ ಕಪ್ಪು ಬಣ್ಣದ, ತುಂಬಿದ ಮೈಯ ಹಸುವನ್ನು ನೋಡಿದಳು.

'ನೋಡು ರಂಗೂ. ಏನೋ ನಂಬಿಗಸ್ಥ, ಸಾಭ್ಯಸ್ತ ಅಂತ ಈ ಸಾಬಿ ಸ್ನೇಹ ಮಾಡಿದರೆ ಹಸು ತಗೋತೀಯೋ ಚೂರಿ ಹಾಕಲೋ ಅಂತ ಹೆದರಿಸ್ತಿದಾನೆ. ನಾನೇನು ಮಾಡಲಿ ಹೇಳು? ನನ್ನ ಅದೃಷ್ಟ! ನಿನಗೊಬ್ಬ ಮಂಗಳ ಗಂಟುಬಿದ್ದಳು. ಕರೆದುಕೋ'

—ಎಂದರು ವೆಂಕಟದಾಸಪ್ಪ.

ರಂಗಮ್ಮ ಏನೂ ಮಾತಾಡಲಿಲ್ಲ. ಆಕೆಯ ಹೃದಯದಲ್ಲಿ ಅಭಿಮಾನ ತುಂಬಿಬಂದು ಕಣ್ಣು ತೇವವಾಯಿತು. ಒಳಗೆ ಹೋಗಿ ಒಂದು ತಟ್ಟೆಯಲ್ಲಿ ಅಕ್ಕಿ, ಬೆಲ್ಲ, ಅರಿಶಿನ ಕುಂಕುಮದ ಬಟ್ಟಲು, ಒಂದು ತಂಬಿಗೆಯಲ್ಲಿ ನೀರು ತಂದು, ಹಸುವಿನ ಹಣೆಯನ್ನು ತೊಳೆದು, ಅರಿಶಿನ ಕುಂಕುಮವನ್ನಿಟ್ಟು ಪೂಜೆ ಮಾಡಿ, ಅದಕ್ಕೂ ಕರುವಿಗೂ ಅಕ್ಕಿ ಬೆಲ್ಲ ತಿನ್ನಿಸಿ, ಎರಡಕ್ಕೂ ನಮಸ್ಕಾರ ಮಾಡಿ, ಹಸುವಿನ ಹಣೆಗೆ ಹಚ್ಚಿದ ಕುಂಕುಮವನ್ನು ತನ್ನ ಹಣೆಗೂ

ಮಾಂಗಲ್ಯಕ್ಕೂ ಇಟ್ಟುಕೊಂಡು ಆಳಿಗೆ—

'ಹಿತ್ತಲಲ್ಲಿ ತಂದು ಕಟ್ಟು'

—ಎಂದು ಹೇಳಿ ಒಳಗೆ ಹೋದಳು. ಆಕೆಯ ಹೃದಯ ಹೇಳುತ್ತಿತ್ತು:

'ಅಣ್ಣಾ—ನಿನ್ನ ಮನೆಯಲ್ಲಿ- ಇಂಥ ಹಸು ಸಾವಿರವಾಗಲಿ.'

ಆಳು ಹಸುವನ್ನು ಹಿತ್ತಲಿಗೆ ಕರೆದುಕೊಂಡು ಹೋದ ಬಳಿಕ ವೆಂಕಟದಾಸಪ್ಪ ನಗುತ್ತಾ—

'ಸಾಬಿ—ಇವತ್ತು ಚೋರಿ ತೋರಿಸಿ ನನ್ನ ವ್ರತ ಕೆಡಿಸಿಬಿಟ್ಟೆ'

—ಎಂದರು.

'ವ್ರತ—ಇನ್ನು ಮೇಲೆ ನನ್ನ ಮಾತು ಕೇಳದೆ ಹೋದರೆ ಜಾತಿ ಕುಲ ಒಂದೂ ಉಳಿಸುವುದಿಲ್ಲ; ಹಂಷಾರ್ ಹಾರುವಯ್ಯ!'

—ಎಂಬ ಬುಡನಸಾಬಿ ಕೃತಕ ಕ್ರೋಧವನ್ನು ಅಭಿನಯಿಸುತ್ತಾ: ಆ ಹಸುವೇ ಕಾವೇರಿ—

ಬುಡನಸಾಬಿ, ವೆಂಕಟದಾಸಪ್ಪನವರಿಗೆ ವರದಾನ ಮಾಡಿದ ನಂದಿನಿ

೬

ಬುಡನಸಾಬಿಯ ಸ್ವಭಾವವೇ ಅಂಥದು; ಅವನ ಆಪ್ತ ಪರಿಚಯವಿದ್ದವರು ಹೇಳುವ ಹಾಗೆ 'ಆಡಿದರೆ ಅರಗಿಳಿ, ಕಾಡಿದರೆ ನಾಗಸರ್ಪ., ಯಾರ ಮೇಲಾದರೂ ವಿಶ್ವಾಸ ಹುಟ್ಟಿದರೆ ಅದಕ್ಕಾಗಿ ತಲೆ ಕೊಡಲು ಸಿದ್ಧ; ಹಗೆತನ ಬೆಳೆದರೂ ಅಷ್ಟೆ–'ಫಲಾತನ್ ಬಂದರೂ ಬಿಡುವುದಿಲ್ಲ. ತಲೆ ಹೋದರೆ ಹಾಗೂ ಸರಿಯೆ' ಎನ್ನುವ ರಚ್ಚೆ. ಇದೇ ಹಟ, ಇದೇ ರಚ್ಚೆ, ಕೈಹಿಡಿದ ಕೆಲಸವನ್ನು ಮಾಡುವಾಗಲೂ. ಒಮ್ಮೆ ಅವನ ತಲೆಯಲ್ಲಿ ಏನಾದರೂ ಕೆಲಸ ಮಾಡಬೇಕೆಂಬ ಗುಂಗಿನಹುಳು ಹೊಕ್ಕರೆ ತೀರಿತು–ಏನಾದರೂ ಆ ಕೆಲಸ ಮಾಡಿಯೇ ಮುಗಿಯಬೇಕು.

ಈ ಸ್ವಭಾವವಿದ್ದದ್ದರಿಂದಲೇ, ಕುಲುಮೆ ಕೆಲಸ, ಕಲಾಯಿ ಮಾಡಿಕೊಂಡು ಜೀವಿಸುತ್ತಿದ್ದ ಹಯಾತ್‌ಸಾಬಿಗೆ ಮಗನಾಗಿ ಹುಟ್ಟಿದ ಬುಡನಸಾಬಿ, ಜೋಡು ಕುದುರೆ ಸಾರೋಟಿನ ಶ್ರೀಮಂತನಾಗಿದ್ದ.

ಬುಡನ ಹಯಾತ್‌ಸಾಬಿಗೆ ಹತ್ತು ಸತ್ತು ಉಳಿದ ಒಬ್ಬನೇ ಮಗ. ಹಯಾತ್ ತೀರಿಕೊಂಡಾಗ ಮಗನಿಗೆ ಬಿಟ್ಟುಹೋದ ಆಸ್ತಿ ಎಂದರೆ— ಗಿರಿಯಮ್ಮನಹಳ್ಳಿಯ ಹೊರಗಿನ, ರಸ್ತೆ ಪಕ್ಕದ ಬೇವಿನ ಮರದಡಿಯಲ್ಲಿದ್ದ ಕುಲುಮೆಯ ಜೋಪಡಿ, ಹರುಕು ಮುರುಕು ಗುಡಿಸಲು, ಅಡಿಗೆ ಬೇಯಿಸಿಕೊಳ್ಳುವ ಪಾತ್ರೆ; ಅಷ್ಟೆ.

ಆದರೆ ಹಯಾತ್ ಮಗನಿಗೆ ನೀಡಿದ ಅತಿ ದೊಡ್ಡ ಆಸ್ತಿ–ಕಂಬಿನಂಥ ಆರಡಿಯ ಮೈ, ತೋಫಿನಂತೆ ಉಗ್ಗಡಿಸುವ ಬಾಯಿ; ಕಬ್ಬಿಣವನ್ನೂ ಕಾಸಿ, ಕುಟ್ಟಿ, ಬಡಿದು ತನ್ನ ಇಚ್ಛೆಗೆ ಬೇಕಾದ ರೂಪಕ್ಕೆ ತಿರುಗಿಸಿಕೊಳ್ಳಬಲ್ಲ ಛಲ; ತಾನು ಹುಟ್ಟಿರುವುದು ಹಗಲಿರುಳು ಕೆಂಡ–ಕಬ್ಬಿಣಗಳ ಆಳಾಗಿ ದುಡಿದು, ಮೈಗೆ ಬೆವರಿನ ಸ್ನಾನಮಾಡಿಸಿ, ಹೇಗೋ ಆ ದಿನ ಹೊಟ್ಟೆ ತುಂಬಿಕೊಂಡು ಮಲಗುವುದಕ್ಕಲ್ಲ, ಕೈತುಂಬ ದುಡಿದು ಜೀವನದಲ್ಲಿ ಏನೇನು ಸುಖವಿದೆಯೋ ಅದನ್ನೆಲ್ಲಾ ಅನುಭವಿಸಬೇಕು ಎಂಬ ಹೆಬ್ಬಯಕೆ. ಹೆಬ್ಬಯಕೆಯೇ ಅವನ ಬಾಳ ನೌಕೆಗೆ ಚುಕ್ಕಾಣಿಯಾಗಿ ಅವನನ್ನು ನಡೆಸಿತ್ತು.

ತಂದೆಯ ಕಾಲದಿಂದಲೂ ಅವನಿಗೆ ಆ ಭಾಗದ ಕಂಟ್ರಾಕ್ಟುದಾರರಾದ ಬಾಲಾಜಿರಾಯರ ಪರಿಚಯವಿತ್ತು. ಪರಿಚಯವೆಂದರೆ ಬರೀ ಮುಖ ಪರಿಚಯ, ಅಷ್ಟೆ. ಆಗರ್ಭ ಶ್ರೀಮಂತರಾದ ಬಾಲಾಜಿರಾಯರಿಗೂ, ಕುಲುಮೆ ಕೆಲಸದ ಬುಡನಸಾಬಿಗೂ ಅದಕ್ಕಿಂತ ಹೆಚ್ಚಿನ ಪರಿಚಯವಿರುವುದು ಸಾಧ್ಯವೇ ಇರಲಿಲ್ಲ. ತಮ್ಮ ಕೆಲಸದ ಮೇಲೆ ಆ ರಸ್ತೆಯಲ್ಲಿ ಓಡಾಡುವ ಬಾಲಾಜಿರಾಯರು, ರಸ್ತೆಯ ಪಕ್ಕದಲ್ಲೇ ಕುಲುಮೆಯನ್ನಿಟ್ಟುಕೊಂಡ ಹಯಾತ್‌ನನ್ನು ಕಂಡಿದ್ದರು. ಹಯಾತ್ ಅವರ ಕೂಲಿಗಳಿಗೆ ಹಾರೆ, ಸಲಿಕೆ, ಪಿಕಾಸಿಗಳನ್ನು ಎಷ್ಟೋ ಬಾರಿ ಸರಿಮಾಡಿಕೊಟ್ಟಿದ್ದ. ಅವರಿಂದ ತನ್ನ ಕೂಲಿಯ ಹಣವನ್ನು ಪಡೆದಿದ್ದ. ಅವರೂ ಯಾವಾಗಲಾದರೊಮ್ಮೆ ಆ ದಾರಿಯಲ್ಲಿ ಹೋಗುವಾಗ ಹಯಾತನ ಕುಲುಮೆಯ ಬಳಿ ಗಾಡಿ ನಿಲ್ಲಿಸಿ ಅವನ ಯೋಗಕ್ಷೇಮ ವಿಚಾರಿಸಿಕೊಂಡು ಹೋಗುತ್ತಿದ್ದರು. ಹಾಗೆ ಒಮ್ಮೆ ಕುಲುಮೆಯ ಬಳಿ ಗಾಡಿ ನಿಲ್ಲಿಸಿದಾಗ, ಕಳಕಳಿಸುವ ಕೆಂಡದಲ್ಲಿದ್ದ ಹೆಚ್ಚುತೂಕದ ಕಬ್ಬಿಣದ ಕಾದ ತುಂಡನ್ನು ಲೀಲಾಜಾಲವಾಗಿ ಎತ್ತಿಟ್ಟು, ಸಾಧಾರಣವಾದ ಆಳು ಎತ್ತಲು ಕಷ್ಟವಾಗುವಂತಹ ಭಾರವಾದ ಸುತ್ತಿಗೆಯಿಂದ ಅದನ್ನು ಹೊಡೆಯುತ್ತಿದ್ದ ಬುಡನಸಾಬಿಯನ್ನು ನೋಡಿದರು. ಅವನ ಎತ್ತರ ತಿದ್ದಿ ಮಾಡಿದಂಥ, ಮಾಂಸಖಂಡಗಳು ಬಲಿತ ಮೈ, ಆ ಮೈಯಲ್ಲಿ ಹುದುಗಿದ ಬಲವನ್ನು ಕಂಡು ಅವರಿಗೆ ಮೆಚ್ಚಿಗೆಯಾಯಿತು.

'ಇವನು ನಿನ್ನ ಮಗನೇನು ಹಯಾತ್?'

—ಎಂದು ಕೇಳಿದರು.

'ಹೌದು ಬುದ್ಧಿ'

'ಇವನ ಹೆಸರೇನು?'

'ಬುಡನ'.

'ಒಳ್ಳೇ ಭೀಮನ ಹಾಗಿದಾನೆ ನಿನ್ನ ಮಗ'

—ಎಂದು ಅವನ ಬಲಿಷ್ಠಕಾಯವನ್ನು ಕಂಡು ತಮ್ಮ ಮನದಲ್ಲಿ ಮೂಡಿದ ಮೆಚ್ಚಿಗೆಯನ್ನು ಸೂಚಿಸಿದರು ಬಾಲಾಜಿರಾಯರು.

'ನಸೀಬಿಗೆ ತಕ್ಕಂಥ ಮೈ'

—ಎಂದ ಹಯಾತ್ ನಿಟ್ಟುಸಿರಿಟ್ಟು.

'ಅಂದರೆ—'

'ಕಬ್ಬಿಣ ಕುಟ್ಟಿ ಬದುಕು ಅಂತ ಹೇಳಿದ ಖುದಾ ಅದಕ್ಕೆ ತಕ್ಕ ಮೈ ಯನ್ನು ಕೊಡದಿದ್ದರೆ ಹೇಗೆ? ಮೈ ಹಿಂಗಿರದಿದ್ದರೆ ಈ ಕೆಲಸ ನಡೀ ಬೇಕಲ್ಲಾ ಬುದ್ಧಿ? ತೋಳು ಹಿಂಗಿದ್ದರೇನೆ ಈ ಸುವ್ವರ್ ಕಬ್ಬಿಣ ಹೇಳಿದ ಹಾಗೆ ಮಾತು ಕೇಳೋದು.'

'ಅದೇನೋ ಸರಿ. ನಿನಗಂತೂ ಈ ಕೆಲಸ ಗಂಟುಬಿತ್ತು. ನಿನ್ನ ಮಗನೂ ಇದೇ ಕೆಲಸ ಮಾಡಬೇಕು ಅಂತ ಏನು ಆಡುವಮಾತೇ?'

'ಇಲ್ಲಾಂದ್ರೆ ಇದನ್ನು ಬಿಟ್ಟು ಹೊಟ್ಟೆಗೇನು ಮಣ್ಣು ತಿನ್ನಬೇಕೇ?'

'ಇದೊಂದೇ ಕೆಲಸ ಮಾಡಿದರೆ ಏನು ಹೊಟ್ಟೆ ತುಂಬೋದು? ಯಾವ ಕೆಲಸ ಮಾಡಿದರೂ ಹೊಟ್ಟೆ ತುಂಬುತ್ತೆ.'

'ಹೌದು ಅದಕ್ಕೆಲ್ಲಾ ವಿದ್ಯಾ ಬುದ್ಧಿ ಬೇಡವೇ? ಇವನಿಗೇನೈತೆ? ವಿದ್ಯಾನಾ ಬುದ್ಧೀನಾ?'

'ಏಕೆ...ಏನೂ ಇಲ್ಲವೇ?'

'ಊಹೂ, ಮೈಯೆಲ್ಲಾ ಮಾಂಸ, ಬುಲ್ಡೆ ತುಂಬಾ ಗೊಬ್ಬರ.'

ಹಯಾತ್ ನಗುತ್ತಾ ಹೇಳಿದ ಆ ಮಾತನ್ನು ಕೇಳಿ, ಅದುವರೆಗೂ ತಾನು ಯಾವ ಮಾತನ್ನೂ ಆಡದೆ, ಸುಮ್ಮನೆ ತನ್ನ ಕೆಲಸದಲ್ಲೇ ಇದ್ದ ಬುಡನಗೆ ಅಸಮಾಧಾನವಾಯಿತು. ಅಡಿಗಲ್ಲಿನ ಮೇಲೆ ಕಿಡಿಯಾಡುತ್ತಿದ್ದ ಕಬ್ಬಿಣದ ತುಂಡನ್ನು ಹಾಗೇ ಬಿಟ್ಟು—

'ಈ ಸಾಲಾ ಹರಾಂ ಚಾಕರಿ ಬ್ಯಾಡಾ, ಬೇರೆ ಏನಾದ್ರೂ ಮಾಡ್ತೀನಿ ಅಂತ ಬಡಕೊಂಡ್ರೂ ಕೇಳಾಕಿಲ್ಲ ಬುದ್ಧಿ. ನಿನಗೇನು ತಿಳೀತದೆ ಅಂತ ಹೇಳ್ತಾನೆ. ಸಿಕ್ಕರೆ ಎಂಥ ಕೆಲಸಾನೂ ಮಾಡೇನು'

—ಎಂದ.

'ನೀನು ಹುಟ್ಟಿರೋದು ಕಬ್ಬಿಣಾ ಕುಟ್ಟೋಕೆ. ಬ್ಯಾರೆ ಮಾತೇಕೆ? ಕಬ್ಬಿಣ ಆರೋಯ್ತು ನೋಡು. ಮಾಡೋ ಕೆಲಸಕ್ಕೆ ನಿಗಾಕೊಡು'

—ಎಂದ ಹಯಾತ್, ತಿದಿಯ ಸರಪಳಿಯನ್ನೆಳೆದ. "ಭುಗ್" ಎಂದಿತು ತಿದಿ. ಕುಲುಮೆಯ ಕೆಂಡದ ಮೇಲಿದ್ದ ಬೂದಿ ಹಾರಿ, ಕಿಡಿ ಗಳಾಡಿದವು. ತಂದೆಯ ಮಾತು ಕೇಳಿ ಬುಡನಸಾಬಿಯ ಹೃದಯದಲ್ಲೂ

ಹಾಗೇ ಅಸಮಾಧಾನದ ಕಿಡಿಗಳು ಹಾರಿದವು. ಮಾತನಾಡದೆ, ಅಡಿಗಲ್ಲಿನ ಮೇಲಿದ್ದ ಕಾವ ಕಬ್ಬಿಣವನ್ನು ಸುತ್ತಿಗೆಯಿಂದ ಜಡಿದ. ಅದೂ ಕಿಡಿಕಾರಿ, ಜೇಡಿಮಣ್ಣಿನ ಮುದ್ದೆಯಂತೆ ಬಾಗಿತು. ಹಯಾತ್ ಆ ವಿಷಯವನ್ನು ಅಲ್ಲಿಗೇ ಮರೆತುಬಿಟ್ಟ. ಬಾಲಾಜಿರಾಯರೂ ಅಂದೇ ಆ ವಿಷಯವನ್ನು ಮರೆತ ಹಾಗಿತ್ತು. ಆದರೆ ಬುಡನಸಾಬಿ ಮರೆಯಲಿಲ್ಲ. ಅವನ ಮನಸ್ಸಿನಲ್ಲಿ ಮಾತ್ರ ಅದು ಹೊಗೆಯಾಡುತ್ತಲೇ ಇದ್ದಿತು.

ತಾನು ಮಾಡುತ್ತಿದ್ದ ವೃತ್ತಿಯಲ್ಲಿ ಆಸಕ್ತಿ, ವಿಶ್ವಾಸಗಳಿಲ್ಲದಿದ್ದರೂ, ಹಯಾತ್ ಬದುಕಿರುವವರೆಗೂ ಬುಡನ ಬೇರೆ ಮಾತಾಡುವಂತಿರಲಿಲ್ಲ. ಆಸಕ್ತಿ ಇಲ್ಲವೆಂದು ಕೆಲಸದಲ್ಲಿ ಸೋಮಾರಿತನ ಮಾಡಿದರೆ, ಬೆನ್ನಮೇಲೆ ಪತ್ತಾರು ಹುಣಸೆಯ ಬರಲು ಮುರಿಯುತ್ತಿತ್ತು. ಹಯಾತ್‌ನ ಕೋಪದ ಇದಿರು ಹುಲಿಯಂಥ ಬುಡ ಇಲಿಯಾಗಿ ಹೋಗುತ್ತಿದ್ದ. ಅವನ ಹೆದರಿಕೆಗೆ ಬಾಯಿ ಮುಚ್ಚಿಕೊಂಡು, ಕಣ್ಣುಕಪಡ ಹಾಕಿಕೊಂಡ ಕುದುರೆಯ ಹಾಗೆ, ಗಾಣಕ್ಕೆ ಕಟ್ಟಿದ ಎತ್ತಿನ ಹಾಗೆ ದುಡಿಯುತ್ತಿದ್ದ. ಆ ಕೆಲಸದಲ್ಲಿ ಉಪಯೋಗ ವಾಗದೆ, ಅವನ ಉತ್ಸಾಹ, ಸುಮ್ಮನೆ ನರನಾಡಿಗಳಲ್ಲಿ ಧುಮುಧುಮಿಸು ತ್ತಿತ್ತು. ವಿನಿಯೋಗವಾಗದ ಉತ್ಸಾಹ ತೀವ್ರ ಅತೃಪ್ತಿಯಾಗಿ ಅವನೆದೆಯಲ್ಲಿ ಕಿಡಿಗಾರುತ್ತಿತ್ತು.

ಪ್ರಾಯ ಬಲಿತ ಮೇಲೆ ಈ ಅತೃಪ್ತಿಯ ದಾಹ ಈಚಲುಮರದ ಹುಳಿ ಹೆಂಡದಲ್ಲಿ, ಅವನ ಬಲವಾದ ಮೈಕಟ್ಟಿನ.. ಬೆಂಕಿಗೆ ಪತಂಗಗಳಂತೆ ಮುತ್ತುತ್ತಿದ್ದ ಹಳ್ಳಿಯ ಹೆಂಗಸರ ಮೈಯಲ್ಲಿ ತೃಪ್ತಿ ಪಡೆಯಲಾರಂಭಿಸಿತು. ಕುಡಿಯದಿದ್ದಾಗ ಹಯಾತನ ಇದುರಿಗೆ ಸಾಕಿದ ನಾಯಿಯಂತೆ ಏಟು ತಿಂದೂ ಬಾಲವಾಡಿಸುತ್ತಿದ್ದ ಬುಡನ, ಕುಡಿದಾಗ ಮುಟ್ಟಿದರೆ ಕಡಿಯುವೆ ನೆಂದು ಹೆಡೆಯೆತ್ತಿ ನಿಂತ ಕಾಳಿಂಗ ಸರ್ಪವಾಗುತ್ತಿದ್ದ.

ಬುಡನಸಾಬಿ ಒಳ್ಳೆ ಪ್ರಾಯಕ್ಕೆ ಬರುವ ವೇಳೆಗೆ . ಹಯಾತ್ ಸತ್ತು ಬುಡನ ಬದುಕಿದ. ಇಲ್ಲವಾದರೆ, ಹೆಂಡ, ಹುಡುಗಿಯರ ಚಪಲದ ಆಳಾಗಿ, ಬುಡನ, ಯಾವುದೋ ಬೀದಿಯ ಮರದಡಿ ತನ್ನ ಕೊನೆಯುಸಿರೆಳೆಯು ತ್ತಿದ್ದ. ಅವನ ಬಾಳಿಗೆ ಆ ಭವಿಷ್ಯವನ್ನು ಎಲ್ಲರೂ ಕಂಡಿದ್ದರು. ಆದರೆ ಅವರು ಕಂಡ ಭವಿಷ್ಯ ನಿಜವಾಗಲಿಲ್ಲ.

ಹಯಾತ್ ಸತ್ತ ಮೇಲೆ, ತನ್ನ ಬಾಳು ತನ್ನದೇ ಎಂದು ಬುಡನಗೆ ಮನವರಿಕೆಯಾಗಿ, ಅವನು ಈ ಚಪಲಗಳನ್ನು ಬಿಟ್ಟು, ಪೆಬ್ಬಯಕೆಯ ದಾರಿಯಲ್ಲಿ ನಡೆದ. ಆ ಮಾರ್ಗದಲ್ಲಿ ಬಾಲಾಜಿರಾಯರು ಅವನಿಗೆ ಬೆಂಬಲವಾಗಿ ನಿಂತರು.

ಹಯಾತ್ ತೀರಿಕೊಂಡನೆಂದು ಕೇಳಿದ ಬಾಲಾಜಿರಾಯರು, ಬುಡನಗೆ ತಮ್ಮ ಸಹಾನುಭೂತಿಯನ್ನು ಸೂಚಿಸಲೆಂದು, ಅತ್ತ ಕಡೆ ಬಂದಾಗ; ತಮ್ಮ ಗಾಡಿಯನ್ನು ಕುಲಿಮೆಯ ಬಳಿ ನಿಲ್ಲಿಸಿದರು. ಬುಡನನ ಭವ್ಯವಾದ ಮೈಕಟ್ಟು, ಅವನ ಬಗ್ಗೆ ಅವರಲ್ಲಿ ಅಭಿಮಾನವನ್ನು ಮೂಡಿಸಿತ್ತು, ಆ ಅಭಿಮಾನದಿಂದಾಗಿಯೇ ಅವನು ತಬ್ಬಲಿಯಾದನೆಂಬುದನ್ನರಿತಾಗ, ಪರಿತಾಪವಾಗಿ—

'ಏನು ಬುಡನ್, ಹಯಾತ್ ಹೋಗಿಬಿಟ್ಟನಂತೆ. ಪಾಪ!'

—ಎಂದರು.

'ಹೋಗಿ ಬಿಟ್ಟ, ಬುದ್ಧಿ, ಹೋಗಿಬಿಟ್ಟ'.

—ಎಂದ ಬುಡನ. ತಂದೆಯ ಸಾವಿನ ವ್ಯಥೆ ಮರುಕಳಿಸಿ, ಕಣ್ಣಿಂದ ಕಂಬನಿಯುಕ್ಕಿ, ಮುಖದಲ್ಲಿ ತುಂಬಿದ ಬೆವರಿನೊಂದಿಗೆ ಬೆರೆಯಿತು.

ಹಳ್ಳಿಗರಿಂದ ತಂದೆ ಮಕ್ಕಳಿಗೆ ಆಗಾಗ ಜಗಳವಾಗುತ್ತಿತ್ತು ಎಂದು ಕೇಳಿದ ಬಾಲಾಜಿರಾಯರಿಗೆ ಬುಡನಸಾಬಿಯ ದುಃಖವನ್ನು ಕಂಡು ಆಶ್ಚರ್ಯವಾಯಿತು. ಈ ಆಶ್ಚರ್ಯವನ್ನು ತೋರಲು ಅದು ಸಮಯವಲ್ಲ ವೆಂದು, ಬೇರೆ ಮಾತಿನಲ್ಲಿ ಅದನ್ನು ಹುದುಗುತ್ತಾ ಹೇಳಿದರು—

'ಮನುಷ್ಯನಾಗಿ ಹುಟ್ಟಿದ ಮೇಲೆ ಎಲ್ಲರೂ ಎಂದಾದರೂ ಒಂದು ದಿನ ಹೋಗಬೇಕಾದದ್ದೆ. ಅದು ಯಾರಿಗೂ ತಪ್ಪಿದುದಲ್ಲ. ಯಾರು ತಾನೇ ಶಾಶ್ವತ ಹೇಳು. ಆದರೂ ಕಡೆಗಾಲದಲ್ಲಿ 'ಹಯಾತ್ ಬಹಳ ದುಃಖಪಟ್ಟನಂತೆ'.

'ನಿಜ ಬುದ್ಧಿ. ನಿಜ. ನನ್ನಿಂದಲೇ ಭಾಳ ದುಃಖಪಟ್ಟ'.

—ಪಶ್ಚಾತ್ತಾಪದ ಕಹಿ ಧ್ವನಿಯಲ್ಲಿ ಹೇಳಿದ ಬುಡನಸಾಬಿ.

'ನಿನ್ನಿಂದಲೇ ? ಏಕೆ?'

'ಈ ಹರಾಂ ಚಾಕರಿ ನನಗೆ ಬೇಡಾ ಅಂದೆ. ಕೇಳಲಿಲ್ಲ. ನಾನಿದ್ದಾಗ್ಲೇ ಸಾಯ್ಬೇಕೊಂಡ. ನನ್ಗೂಯಾಕೋ ಬಾಳ ಬೇಜಾರಾಗೋಯ್ತು. ಮಾಡ

ಬಾರದ್ದೆಲ್ಲಾ ಮಾಡ್ದೆ…'

'ಹೋಗಲಿ ಬಿಡು. ಈಗ ಅಂದುಕೊಂಡರೇನು ಪ್ರಯೋಜನ? ಈಗಲ್ಲಾದರೂ ಅವನ ಆತ್ಮಕ್ಕೆ ತೃಪ್ತಿ ಆಗೋ ಹಾಗೆ ನಡೆದುಕೋ. ನನಗವನು ಬಹಳ ಬೇಕಾದವನಾಗಿದ್ದ. ನನ್ನಿಂದ ಏನಾದ್ರೂ ಸಹಾಯ ಬೇಕಾದರೆ ಕೇಳು. ಕೆಟ್ಟ ಚಾಳಿ ಎಲ್ಲಾ ಬಿಟ್ಟುಬಿಡು. ಬುಡನ.'

'ನೀವು ನನಗೊಂದುಪಕಾರ ಮಾಡಿದ್ರೆ ನನ್ನೂ ಒಬ್ಬ ಮನುಷ್ಯನ ಮಾಡಿದ ಪುಣ್ಯ ಬರ್ತದೆ ನಿಮ್ಗೆ. ಬಾಳ ದಿನದಿಂದ ಕೇಳ್ಬೇಕೊಂತಿದ್ದೆ. ಆವನಿರೋಗಂಟಾ ಆಗ್ಲಿಲ್ಲ.'

'ಏನು ಹೇಳು. ನನ್ನ ಕೈಲಾದದ್ದಾದರೆ ಖಂಡಿತ ಮಾಡಿ ಕೊಡ್ತೇನೆ.'

'ನಿಮ್ತಾವ ಬೇರೆ ಯಾವದಾವರೂ ಚಾಕರಿ ಕೊಟ್ರೆ…… ಬಾಳ ಉಪಕಾರ ಮಾಡಿದಂಗಾಯ್ತದೆ.'

'ಈ ಕೆಲಸ… ಕುಲುಮೆ?…'

'ಥತ್—ಸೈತಾನ್‌ಕೆ ಬಚ್ಚೆ. ಎಲ್ಲಾದ್ರೂ ಹಾಳಾಗ್ಲಿ ಇದು. ಇದುಂ ನಾವಂದರ್ಾ ಚಾಕರಿ ಬುದ್ದಿ. ಬೆಳಗ್ನಿಂದ ಸಂಜೆವರ್ಗೂ ಮೈ ರಕ್ತಾನೆಲ್ಲಾ ಬೆವರುಮಾಡಿ ದುಡದ್ರೂ ಒಪ್ಪತ್ತೂಟ ಗಿಟ್ಟಾಕಿಲ್ಲ. ಇದೆಂಥ ಚಾಕ್ರಿ ಹೇಳ್ತಿ ಬರೇ ಗಿರಫ್ದಾರಿ.'

ಬುಡನಸಾಬಿಯ ಬೇಡಿಕೆಯನ್ನು ಕಂಡು ಬಾಲಾಜಿರಾಯರಿಗೆ ಆಶ್ಚರ್ಯವಾಯಿತು. ಇವನ ಬೇಡಿಕೆಗೆ ಏನು ಉತ್ತರ ಹೇಳಬೇಕೆಂದು ಯೋಚಿಸುತ್ತಿರುವಾಗಲೇ, ಅವರು ಎಲ್ಲಿ ಇಲ್ಲ ಎಂದು ಹೇಳುವರೋ ಎಂಬ ಆತುರತೆಯಿಂದ ಬುಡನಸಾಬಿ—

'ಒಂದು ದಿನ ನೀವೇ ಹೇಳಿರಲಿಲ್ಲಾ ಬುದ್ದಿ, ಇದೆಂಥ ಚಾಕರಿ ಅಂತ. ನಿಮ್ಮಾತು ನಿಜ ಬುದ್ದಿ. ಹೆಂಗಾರ ಇಲ್ಲಿಂದ ತಪ್ಸಿಸ್ಬೇಕು'

—ಎಂದ.

ನಾಲಿಗೆಯ ತುದಿಯ ಮಾತಾಗದೆ, ಎದೆಯಾಳದಿಂದ ಮೂಡಿಬಂದ ಆ ಬೇಡಿಕೆಯನ್ನು ಕೇಳಿ, ಬಾಲಾಜಿರಾಯರು ಒಂದು ಗಳಿಗೆ ಅವನಿಗೆ ಏನು ಕೆಲಸ ಕೊಡಬಹುದು ಎಂದು ಯೋಚಿಸಿದರು. ಏನೋ ಒಂದು ದಾರಿ

ಹೊಳೆಯಿತು. ಬುಡನಸಾಬಿಯ ಉಬ್ಬಿದ ತೋಳನ್ನು ನೋಡುತ್ತಾ—

'ಈಗ ನಿನಗೆ ಕೊಡಬಹುದಾದಂಥ, ಒಳ್ಳೇ ಕೆಲಸವೇನೂ ಇಲ್ಲ. ಆದರೂ ನೀನು ಬೇಕು ಅಂದರೆ ಒಂದು ಕೆಲಸ ಇದೆ ಮಾಡ್ತೀಯಾ?'

—ಎಂದರು.

'ಅದೇನು ಹೇಳಿ ಬುದ್ಧಿ. ನೀವ್ಹೇಳಿದ ಕೆಲಸ ಮಾಡೋಕೆ ನಾ ತಯಾರಾಗಿದೀನ್ರಿ'.

'ನೋಡು, ನಮ್ಮ ಗುಮಾಸ್ತರು ಹೇಳುತ್ತಾ ಇದ್ದರು– ನಿಮ್ಮ ಕಡೆ ಲಂಬಾಣಿ ಕೂಲಿಗಳು ಬಹಳ ಸತಾಯಿಸ್ತಾ ಇದಾರೇಂತ. ಅವರುದ್ದಕ್ಕೂ ದುಡ್ಡು ಸುರಿದರೂ ಕೆಲಸ ಮಾಡೋಲ್ಲ. ಮುಂಗಡ ಕೊಟ್ಟರೆ ಅದಕ್ಕೆ ಮುಳುಗುನೀರೇ. ಆದರೂ ಅವರನ್ನು ಬಿಟ್ಟರೆ ಸರಿಯಾದ ಕೂಲಿಗಳು ಸಿಗುವುದಿಲ್ಲ. ಅವರನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳೋದಕ್ಕೆ ಸರಿಯಾದ ಒಬ್ಬ ಮನುಷ್ಯ ಬೇಕು. ಆ ಕೆಲಸ ಮಾಡೋಕಾಗುತ್ತೇನು ನಿನಗೆ?'

'ಸೈ. ಬಿಡಿ ಅದೇನು ದೊಡ್ಡಮಾತು. ಅವರನ್ನು ನನಗೊಪ್ಪಿಸಿ– ಆಮೇಲೆ ಅವರು ಕಳ್ಳಾಟಾ ಮಾಡೋದು ನೋಡಿ. ಲೌಡಿಮಕ್ಕಳನ್ನ ಸಿಗಿದ್ಹಾಕಿಬಿಟ್ಟೇನು'.

—ಎಂದ ಬುಡನಸಾಬಿ ಉತ್ಸಾಹದಿಂದ.

ಕಬ್ಬಿಣವನ್ನು ಮಣಿಸಿ ಹುರಿಯಾದ ಅವನ ತೋಳುಗಳಿಗೆ ಅದು ದೊಡ್ಡ ಕೆಲಸವೆಂದು ಬಾಲಾಜಿರಾಯರಿಗೂ ತೋರಲಿಲ್ಲ. ಲಂಬಾಣಿ ಕೂಲಿಗಳ ಕೈಲಿ ಉರಿದು ಬೇಸರವಾಗಿದ್ದ ಬಾಲಾಜಿರಾಯರಿಗೆ, ಬುಡನ್‌ಸಾಬಿ ಸಿಕ್ಕದ್ದು ತಮ್ಮ ಅದೃಷ್ಟ ಎಂದೇ ತೋರಿತು.

'ಹಾಗಾದರೆ ಸರಿ, ನಿನಗೆ ಸಂಬಳ ಎಷ್ಟು ಕೊಡಬೇಕು?'

'ಕೆಲಸ ನೋಡಿ ಸಂಬಳ ನೀವೇ ಹೇಳಿ'

—ಎಂದ ಬುಡನಸಾಬಿ.

'ಸರಿ ಹಾಗಾದರೆ'

—ಎಂದು ಬಾಲಾಜಿರಾಯರು ಬುಡನಸಾಬಿಯನ್ನು ಮೇಸ್ತ್ರಿಯಾಗಿ ತಮ್ಮ ಬಳಿ ಕೆಲಸಕ್ಕೆ ತೆಗೆದುಕೊಂಡರು. ಅಂದಿನಿಂದ ಕುಲುಮೆ ಬುಡನಸಾಬಿ ಬಾಲಾಜಿರಾಯರ ರಸ್ತೆ ಮೇಸ್ತ್ರಿಯಾದ. ತನ್ನ ಬಾಳಿಗೆ ಹೊಸದೊಂದು

ಮಾರ್ಗವನ್ನು ತೋರಿದ ಬಾಲಾಜಿರಾಯರು ಅವನ ಪಾಲಿಗೆ ಎರಡನೆ ತಂದೆಯಾದರು. ಆ ನಿಯುಕ್ತಿನಿಂದಲೇ ಕೆಲಸಕ್ಕೆ ಆರಂಭಿಸಿದ.

ಬಹುಬೇಗ ಬಾಲಾಜಿರಾಯರಿಗೂ ಬುಡನನಂಥ ಕೆಲಸಗಾರ ಸಿಕ್ಕಿದ್ದು ತಮ್ಮ ಅದೃಷ್ಟ ಎಂದೇ ಮನವರಿಕೆಯಾಯಿತು. ಬುಡನ ಆ ಕೆಲಸಕ್ಕೆ ಹೊಟ್ಟೆಪಾಡಿಗೆ ಇದೂ ಒಂದು ದಾರಿ ಎಂದು ಸೇರಿಕೊಂಡಿರಲಿಲ್ಲ. ಮೇಸ್ತ್ರಿಗಿರಿ ಬರೀ ಉದರಂಭರಣಕ್ಕೆ ಮಾರ್ಗವಾಗದೆ ಅವನ ಹೆಬ್ಬಯಕೆಯ ಮಾರ್ಗದಲ್ಲಿ ಮೊದಲ ಮೆಟ್ಟಲಾಗಿತ್ತು. ಅವನ ಗುರಿ ಬಹಳ ಎತ್ತರದಲ್ಲಿತ್ತು. ಅದನ್ನು ಸೇರಬೇಕೆಂದು ಹೊರಟ ಅವನಿಗೆ ಮಾರ್ಗಮಧ್ಯದ ಚಿಲ್ಲರೆ ಆಮಿಷ ಗಳಾವುದೂ ಬೇಕಾಗಲಿಲ್ಲ. ಉಳಿದ ಮೇಸ್ತ್ರಿಗಳ ಹಾಗೆ ಅವನು ಧಣಿಯ ಕಣ್ಣಿಗೆ, ಕೈಕೆಳಗಿನ ಕೂಲಿಗಳ ಕಣ್ಣಿಗೆ ಮಣ್ಣು ಎರಚಿ, ನಡುವೆ ಅಷ್ಟು ದುಡ್ಡು ಹೊಡೆಯುವುದರಲ್ಲೇ ಪಂಡಿತನಾಗದೆ, ತಾನು ಹೊಂದಿಕೊಂಡ ಕೆಲಸದ ವಿವರಗಳನ್ನೆಲ್ಲವನ್ನೂ ತಿಳಿದುಕೊಳ್ಳತೊಡಗಿದ. ಕೆಲಸಕ್ಕೆ ಕಳ್ಳ ತಪ್ಪಿಸುವ ಮೈಗಳ್ಳ ಕೂಲಿಗಳ ಗುಂಪಿಗೆ ಬುಡನ ಎಂದರೆ ಸಿಂಹಸ್ವಪ್ನ ವಾಯಿತು.

ಆ ರಸ್ತೆಯಲ್ಲಿ ಬಾಲಾಜಿರಾಯರ ಕೈಕೆಳಗೆ ಕೆಲಸ ಮಾಡುತ್ತಿದ್ದ ಕೂಲಿಗಳಲ್ಲಿ ಬಹುಮಂದಿ ಲಂಬಾಣಿಯವರು. ಲಂಬಾಣಿಗಳಲ್ಲಿ ಕೆಲಸ ಮಾಡುವವರೆಲ್ಲ, ಹೆಂಗಸರೇ. ಗಂಡಸರಿಗೆ ಹೆಂಗಸರು ಕಷ್ಟಪಟ್ಟು ದುಡಿದು ತಂದುದನ್ನು ಕುಡಿದು ಉಡಾಯಿಸುವುದು ಮಾತ್ರ ಚೆನ್ನಾಗಿ ಗೊತ್ತು. ಅದು ಬಿಟ್ಟರೆ, ಅವರಿಗೆ ಬಹಳ ಚೆನ್ನಾಗಿ ಬರುತ್ತಿದ್ದ ಕೆಲಸ ಕಳ್ಳತನ. ಜಲ್ಲಿ ಒಡೆಯುವುದು, ಮಣ್ಣು ಹೊರುವುದು, ರಸ್ತೆಗೆ ನೀರು ಸಾಗಿಸುವುದು ಎಲ್ಲ ಕೆಲಸವನ್ನೂ ಹೆಂಗಸರೇ ಮಾಡುತ್ತಿದ್ದರು. ಆದರೆ ಅವರ ಕೂಲಿ ತೆಗೆದು ಕೊಳ್ಳಲು ಮಾತ್ರ ಗಂಡಸರು ಮುಂದೆ ಬರುತ್ತಿದ್ದರು. ತಮ್ಮ ಬಳಿ ಕೆಲಸಕ್ಕೆ ಇಂಥ ಲಂಬಾಣಿಗಳೇ ಬರುತ್ತಿದ್ದುದರಿಂದ, ಅವರಿಂದ ಕೆಲಸ ತೆಗೆದುಕೊಳ್ಳಲು ರಾಯರು ಲಂಬಾಣಿ ಮೇಸ್ತ್ರಿಯೊಬ್ಬನನ್ನೇ ಗೊತ್ತುಮಾಡಿದ್ದರು.

ಝೂಪ್ಲ್ಯಾರಾಯರ ಲಂಬಾಣಿ ಮೇಸ್ತ್ರಿ. ಅವನನ್ನು ರಾಯರು ಕೆಲಸಕ್ಕೆ ತೆಗೆದುಕೊಳ್ಳಲು ಕಾರಣ, ಅವನು ಕೆಲಸದಲ್ಲಿ ಬುದ್ಧಿವಂತ, ನಂಬಿಗಸ್ಥ ಎಂದಲ್ಲ, ಮುಂಡ ಎಂದು. ಅವನ ಮುಂಡುತನಕ್ಕೆ ಹೆದರಿದ

ತಾಂಡಾಕ್ಕೆ ಅವನೇ ನಾಯಕನಾಗಿದ್ದ. ಆ ಅಧಿಕಾರ ಬಲದ ಮೇಲೇ ಅವನು ಮೇಸ್ತ್ರೀ ಕೆಲಸಕ್ಕೆ ಬಂದದ್ದು. ಅಲ್ಲೂ ಅವನು ಕೆಲಸಕ್ಕೆ ಸೇರಿದ್ದು ರಾಯರು ಕೊಡುವ ಸಂಬಳಕ್ಕಲ್ಲ, ಅಲ್ಲಿ ದೊರಕುತ್ತಿದ್ದ ಮೇಲುತ್ಪತ್ತಿಗಾಗಿ. ಹತ್ತು ಜನ ಕೂಲಿಗಳು ಕೆಲಸ ಮಾಡಿದರೆ ಇಪ್ಪತ್ತು ಜನರ ಲೆಕ್ಕ ಹೇಳುತ್ತಿದ್ದ; ಇಪ್ಪತ್ತು ಜನರ ಕೂಲಿಯಲ್ಲಿ, ಹಣ ಕಾಣುತ್ತಿದ್ದವರು ಐದಾರು ಜನವೇ. ಯಾರಾದರೂ ಹೆಚ್ಚಾಯಿತು ಕಡಿಮೆಯಾಯಿತು ಎಂದರೆ ಊರು ಹಾರಿಹೋಗುವ ಹಾಗೆ ಗದ್ದಲ ಮಾಡುತ್ತಿದ್ದ. ಅವನ ಬಾಯಿಗೆ ಹೆದರಿ, ಉಳಿದವರು ಸುಮ್ಮನಾಗುತ್ತಿದ್ದರು.

ಹತ್ತಾರು ವರ್ಷಗಳ ಕಾಲ ನಡೆದು ಬೇರೂರಿತ್ತು ರೂಪ್ಲ್ಯಾನಾಯಕನ ಪಾಳೇಪಟ್ಟು. ತುಂಡು ಲಂಗೋಟಿ, ತಲೆಗೊಂದು ಹರಕುಂಬಟ್ಟೆ ಸುತ್ತಿಕೊಂಡು ಬಂದ ರೂಪ್ಲ್ಯಾ, ಬೆಳ್ಳಿಯ ಕಟ್ಟಿನ ಕೋಲು, ಮೊಳಕಾಲ್ಮುರು ರುಮಾಲುಗಳ ರೂಪ್ಲ್ಯಾನಾಯಕ ಆಗಿದ್ದ. ಮೂರು ಹೊತ್ತೂ ಎಲೆಯಡಿಕೆ ತಂಬಾಕು ಜಗಿಯುತ್ತಾ, ಥೂಕ್ಕೆಂದು ಮಾರುದ್ದ ದೂರಕ್ಕೆ ಎಲೆಯಡಿಕೆಯ ರಸವನ್ನು ಚಿಮ್ಮಿಸುತ್ತಾ, ಕೂಲಿಯ ಕೆಲಸಕ್ಕೆ ಬಂದ ಹೆಂಗಸರಲ್ಲಿ ಪ್ರಾಯದವರನ್ನು ಅಸಭ್ಯ ಮಾತುಗಳಿಂದ ಲೇವಡಿ ಮಾಡುತ್ತಾ, ಕಂಟ್ರಾಕ್ಟರೇ ತಾನು ಎನ್ನುವ ಹಾಗಿದ್ದ ರೂಪ್ಲ್ಯಾ.

ಆಗಾಗ ಕೂಲಿಗಳಿಂದ ಅವನ ಬಗ್ಗೆ ದೂರು ಕೇಳಿದ ರಾಯರು ಅವನನ್ನು ಮಟ್ಟ ಹಾಕಬೇಕೆಂದೇ ಬುಡನಸಾಬಿಯನ್ನು ಕೆಲಸಕ್ಕೆ ತೆಗೆದು ಕೊಂಡಿದ್ದರು. ರಾಯರ ಇಚ್ಛೆ ಈಡೇರುವದಕ್ಕೆ ಬಹಳ ದಿನ ಹಿಡಿಯಲಿಲ್ಲ.

ಬುಡನ ಕೆಲಸಕ್ಕೆ ಬಂದಾಗಲೇ ರೂಪ್ಲ್ಯಾ ಅವನನ್ನು ಕಂಡು ಬೀದಿಗೆ ಬಂದ ಹೊಸ ನಾಯಿಯನ್ನು ಕಂಡು ಗುರುಗುಟ್ಟುವ ಕಂತ್ರಿ ನಾಯಿಯಂತೆ ಗುರುಗುಟ್ಟುವುದಕ್ಕಾರಂಭಿಸಿದ್ದ. ತನ್ನ ಅಧಿಕಾರ ದರ್ಪವನ್ನು ಬುಡನನ ಮೇಲೂ ತೋರಿಸಲು ಯತ್ನಿಸಿದ್ದ. ತಾನೇ ಬಾಲಾಜಿರಾಯರ ಬಲಗೈ ಎಂದುಕೊಳ್ಳುತ್ತಿದ್ದ ರೂಪ್ಲ್ಯಾನ ದುರಹಂಕಾರವನ್ನು ಕಂಡು ಬುಡನಸಾಬಿಯ ನೆತ್ತರು ಕಾದರೂ, ಒಂದೆರಡು ದಿನ ಅವನನ್ನು ತಡವಲಿಕ್ಕೆ ಹೋಗಲಿಲ್ಲ. ಆದರೆ ಅವನು ರಾಯರ ಬಲಗೈಯಾಗದೆ, ಅವರನ್ನು ಮೋಸಗೊಳಿಸುವ ಕಳ್ಳಕೈ ಮಾತ್ರ ಎಂದು ಅರಿವಾದ ಕೂಡಲೇ 'ಇವನನ್ನು ಉಳಿಸಬಾರದು'

ಎಂದು ನಿಶ್ಚಯ ಮಾಡಿದ.

ರೂಪ್ಲ್ಯಾನಾಯಕನೂ ಅದೇ ನಿಶ್ಚಯಮಾಡಿ, ಆ ನಿಶ್ಚಯವನ್ನು ಕಾರ್ಯರೂಪಕ್ಕೆ ತರಲು ಹೊತ್ತುಕಾಯುತ್ತಿದ್ದ. ಆಗಾಗ ರಾಯರ ಮುಂದೆ ಬುಡನಸಾಬಿಯ ವಿಷಯವಾಗಿ ಸಣ್ಣಪುಟ್ಟ ಚಾಡಿ ಹೇಳುತ್ತಿದ್ದ. ಅವನು ಈ ಕೆಲಸಕ್ಕೆ ಯೋಗ್ಯನಲ್ಲ ಎನ್ನುತ್ತಿದ್ದ—

'ಎಲ್ಲೋ ಹೈವಾನ ಸಾಬೀನ ತಂದು ಈ ಕೆಲಸಕ್ಕೆ ಹಾಕಿದಿರಿ ದೇವರು. ಕಬ್ಬಿಣ ಹೊಡೆದುಕೊಂಡಿದ್ದೋನ ಕೈಲಿ ರಸ್ತೆ ಕಾಂಗಾರಿ ಮಾಡಿಸೋದಾದೀತಾ?'

—ಎಂದು ಬುಡನ ಆ ಕೆಲಸಕ್ಕೆ ಅಸಮರ್ಥನೆಂದೇ ರಾಯರ ತಲೆಯಲ್ಲಿ ತುಂಬಲು ಯತ್ನಿಸುತ್ತಿದ್ದ. ಆದರೆ ರೂಪ್ಲ್ಯಾನ ಸ್ವಭಾವವನ್ನರಿತ ಬಾಲಾಜಿರಾಯರು ಅವನ ಮಾತುಗಳಿಗೆ ಹೆಚ್ಚಿನ ಮಹತ್ವ ಕೊಡದೆ—

'ನೀನು ಹೇಳಿದುದು ನಿಜ ರೂಪ್ಲ್ಯಾ. ಆದರೇನು ಮಾಡಲಿ ಹೇಳು? ಏನೋ ಕೆಲಸ ಬೇಕೂಂತ ಕೇಳಿಕೊಂಡ. ಕೊಟ್ಟೆ'.

—ಎನ್ನುವರು.

'ಅದು, ನಿಜ ನಿಮ್ಮಾದ. ನಿಮ್ದು ಭೂಮಿತೂಕದ ಮನಸ್ಸು—ಅದನ್ನ ನಾನು ಕಾಣೆನೇ. ಬಡ ಸೂಳೇಮಗ ಬದುಕಿಕೊಂಡ್ಹೋಗ್ಲಿ, ಬ್ಯಾಡಾನ್ನಾಕಿಲ್ಲ. ಹುಲಿ ಸಿಂಹಾನೇ ತಮ್ಮ ಪಾದ್ಸೇವೆ ಮಾಡ್ತಾ ಇರೋವಾಗ ಇದೊಂದು ಕುರೀನೂ ಇರ್ಲಿ. ಆದರೆ ಏಕ್ದಂ ಮೇಸ್ತ್ರಿ ಕೆಲಸ ಕೊಡ್ಬಾರ್ದಾಗಿತ್ತು ಬುದ್ಧಿ.'

'ಮತ್ತೇನ್ಮಾಡ್ಬೇಕಾಗಿತ್ತು?'

'ನನ್ನೈಕೆಳಗೆ ಒಂದೆಲ್ಡು ವರ್ಷ ಹಾಕಿದ್ರೆ ನುರುಪಡಿ ಮಾಡ್ತಾ ಇದ್ದೆ…'

'ಏನೋ ಆಗಿಹೋಯಿತು ಬಿಡು. ಅತ್ತೆ ಸೊಸೆ ಜಗಳದಲ್ಲಿ ಕೂಸು ಬಡವಾಯಿತು ಅಂದಹಾಗೆ, ನಿಮ್ಮ ನಿಮ್ಮ ಜಗಳದಲ್ಲಿ ನನ್ನ ಕೆಲಸ ಹಾಳು ಮಾಡಬೇಡ್ರಿ.'

'ಹಂಗೆಲ್ಲಾರು ಉಂಟಾ ದೇವರೇ. ಸ್ವಾಮಿ ಕೆಲಸ ಅಂದ್ರೆ ದೇವರ ಕೆಲಸ. ಅಲ್ಲಿ ಮೋಸ ಮಾಡಾಕುಂಟಾ? ಅಂತೂ ವಿಚಾರ ತಮ್ಮ ಚಿತ್ತಕ್ಕೆ ಅರಿಕೆ ಆಗಿರ್ಲೀಂತ ಹೇಳ್ದೆ'

—ಎಂದು ಅದನ್ನು ಅಷ್ಟಕ್ಕೇ ನಿಲ್ಲಿಸುವನು ರೂಪ್ಲ್ಯಾ. ರಾಯರೂ ಮನಸ್ಸಿನಲ್ಲೇ ನಕ್ಕು ಸುಮ್ಮನಾಗುವರು.

ರೂಪ್ಲ್ಯಾ ತಮ್ಮ ಮುಂದೆ ಚಾಡಿ ಹೇಳಿದ ವಿಷಯವನ್ನು ರಾಯರು ಬುಡನಸಾಬಿಗೆ ತಿಳಿಸದಿದ್ದರೂ, ಅವನಿಗೂ ಇದು ಸೂಕ್ಷ್ಮವಾಗಿ ತಿಳಿದು, 'ಇರಲಿ ಸಮಯ ಬಂದಾಗ ನೋಡಿಕೊಳ್ಳೋಣ' ಎಂದು ಸುಮ್ಮನಾಗುತ್ತಿದ್ದ. ತನ್ನ ಪಾಲಿನ ಕೆಲಸವನ್ನು ತಾನು ಶ್ರದ್ಧೆಯಿಂದ ಮಾಡಿಕೊಂಡು ಹೋಗುತ್ತಿದ್ದ.

ಆದರೆ ತನ್ನೊಂದಿಗೆ ಸಮಸಮವಾಗಿ, ಮೇಸ್ತ್ರಿಗಿರಿಯ ಪಟ್ಟದಲ್ಲಿ ಕುಳಿತ ಇವನನ್ನು ಹೇಗಾದರೂ ಉರುಳಿಸಬೇಕು ಎಂದು ರೂಪ್ಲ್ಯಾ ಹೊತ್ತು ಕಾಯುತ್ತಿದ್ದ. ದಿನದಿನಕ್ಕೆ ಬುಡನಸಾಬಿ ರಾಯರ ವಿಶ್ವಾಸದಿಂದ ದೂರವಾಗದೆ ಮತ್ತಷ್ಟು ಹತ್ತಿರವಾಗುತ್ತಿರುವುದು ಅವನ ಕಣ್ಣಿಗೆ ಕಿಚ್ಚಾಗಿತ್ತು. ಹಾಗೇ ಅವನ ನೇರವಾದ ದಾರಿ ಇವನ ಅಪಮಾರ್ಗಗಳಿಗೆ ಅಡ್ಡವಾಗಿತ್ತು. ಆದರಿಂದಂತೂ ರೂಪ್ಲ್ಯಾನ ಹೊಟ್ಟೆ ಉರಿ ಮತ್ತಷ್ಟು ಕೆರಳಿ,ಎಷ್ಟುಬೇಗ ಈ ಸಾಬಿಯನ್ನು ಪೊತ್ತು ಹಾಕೇನು ಎಂದು ಹಾತೊರೆಯುತ್ತಿದ್ದ.

ರಾಯರು ಬುಡನಸಾಬಿಗೂ, ರೂಪ್ಲ್ಯಾನಾಯಕನಿಗೂ ಅನವಶ್ಯಕ ಘರ್ಷಣೆ ಬರಬಾರದೆಂದು, ಇಬ್ಬರಿಗೂ ಐದೈದು ಮೈಲಿ ರಸ್ತೆ ಕೆಲಸವನ್ನು ಹಂಚಿಕೊಟ್ಟಿದ್ದರು. ಬುಡನಸಾಬಿ ತನ್ನ ಪಾಲಿನ ಕೆಲಸವನ್ನು ತಾನು ಮಾಡಿಸಿಕೊಂಡು ಹೋಗುತ್ತಿದ್ದ. ಆದರೆ ರಾಯರ ಮೂಲಕ ತನ್ನ ಇಚ್ಛೆಯನ್ನು ನಡೆಸಿಕೊಳ್ಳಲಾಗದ ರೂಪ್ಲ್ಯಾ ಕೂಲಿಗಳ ಮುಖಾಂತರ ಬುಡನಸಾಬಿಗೆ ಕಿರುಕುಳ ಕೊಡಲು ಯತ್ನಿಸುತ್ತಿದ್ದ. ಬುಡನಸಾಬಿಯ ಕಡೆಯ ಕೂಲಿಗಳು ಕೆಲಸಕ್ಕೆ ತಪ್ಪಿಸಿಕೊಳ್ಳುವ ಹಾಗೆ ಮಾಡುತ್ತಿದ್ದ. ಅವನ ಕಡೆಯುವರು ಕೂಡಿಹಾಕಿದ ಜಲ್ಲಿಯನ್ನು ಕಳ್ಳತನ ಮಾಡಿಸುತ್ತಿದ್ದ. ಬುಡನ ಸಾಬಿಯ ಕಡೆಯವರು ಸರಿಮಾಡಿ ಮುಗಿಸಿದ ಕೆಲಸವನ್ನು ರಾತ್ರೋರಾತ್ರಿ ಕೆಡಿಸಿ, ಒಂದೇ ಕೆಲಸವನ್ನು ಅವನು ಎರಡು ಬಾರಿ ಮೂರು ಬಾರಿ ಮಾಡಿಸಿ, ಖರ್ಚು ಹೆಚ್ಚಾಗುವ ಹಾಗೆ ಮಾಡುತ್ತಿದ್ದ. ಸಾಧ್ಯವಾದಷ್ಟು ದಿನ ಬುಡನ ಸಾಬಿ ಅವನ ಕಿರುಕುಳವನ್ನು ಸಹಿಸಿದ. ಸೂಕ್ಷ್ಮವಾಗಿ ರಾಯರ ಮುಂದೆ ಈ ವಿಚಾರ ಹೇಳಿದ. ಅದಕ್ಕವರು 'ರೂಪ್ಲ್ಯಾನ ಹಣೆಬರಹ ನನಗೆ ಗೊತ್ತು ಬುಡನ. ಆದರೆ ನಾನೇನು ಮಾಡಲಿ ಹೇಳು. ಅವನನ್ನು ಕೆಲಸದಿಂದ ತೆಗೆದು ಹಾಕಿದರೆ ಅವನ ತಾಂಡಾದವರನ್ನೆಲ್ಲಾ ಎತ್ತಿ ಕಟ್ಟುತ್ತಾನೆ ಕೊರವು ಅವನಿಲ್ಲದೆ ಹೋದರೆ ಅಲ್ಲಿನ ಕೆಲಸ ನಡೆಯುವುದು ಕಷ್ಟ. ಆದ್ದರಿಂದ ನೀನೂ ಅವನನ್ನು ಮೈಮೇಲೆ ಹಾಕಿಕೊಳ್ಳದೆ, ಆದಷ್ಟು ಅನ್ಯೋನ್ಯವಾಗಿ ಕೆಲಸ ಸಾಗಿಸಿಕೊಂಡು ಹೋಗು'

—ಎನ್ನುವರು. ಅವರ ಬೆಂಬಲವಿಲ್ಲದೆ ಬೇರೇನೂ ಮಾಡಲು ತೋಚದೆ ಬುಡನಸಾಬಿಯೂ ಸುಮ್ಮನಾಗಿ, 'ಆಗಲಿ. ಖುದಾ ಇದ್ದಾನೆ. ಸಮಯ ಬರ್ತದೆ' ಎಂದು ಸುಮ್ಮನಾಗುವನು.

ಹೀಗೆ ಬುಡನ–ರೂಪ್ಲ್ಯಾ ಇಬ್ಬರೂ ಹೊತ್ತು ಕಾಯುತ್ತಿದ್ದರು. ಕಡೆಗೊಮ್ಮೆ ಅವರವರ ಶಕ್ತಿ ಪರೀಕ್ಷೆಯಾಗುವ ದಿನವೂ ಬಂದಿತು.

ಒಮ್ಮೆ ಮರಾಮತ್ತು ಶಾಖೆಯ ದೊಡ್ಡ ಅಧಿಕಾರಿಗಳೊಬ್ಬರು ಅದೇ ದಾರಿಯಲ್ಲಿ ಹೋಗುತ್ತಾರೆ ಎಂದು ಸುದ್ದಿ ಬಂದುದರಿಂದ, ಆ ಕಡೆಯ

ರಸ್ತೆಯನ್ನು ಚೆನ್ನಾಗಿಡಬೇಕೆಂದು ದೊಡ್ಡ ಇಂಜನಿಯರ್ ಸಾಹೇಬರೇ ಬಾಲಾಜಿರಾಯರನ್ನು ಕರೆಸಿ ತಾಕೀತು ಮಾಡಿದ್ದುದರಿಂದ, ಬಾಲಾಜಿ ರಾಯರು ತಾವೇ ಬಂದು, ರೂಪ್ಲಾನಾಯಕ, ಬುಡನಸಾಬಿ ಇಬ್ಬರಿಗೂ ರಸ್ತೆಗೆಲ್ಲಾ ಹೊಸದಾಗಿ ಮಣ್ಣು ಹರಡಿಸಿ, ತಗ್ಗುಗಳನ್ನು ಮುಚ್ಚಿ, ರಸ್ತೆಯಲ್ಲಿ ಯಾವ ಐಬೂ ಕಾಣದಂತೆ ಚೆನ್ನಾಗಿಡಬೇಕೆಂದು ಎಚ್ಚರಕೊಟ್ಟು ಹೋಗಿದ್ದರು. ರೂಪ್ಲಾ ಮತ್ತು ಬುಡನಸಾಬಿ ಇಬ್ಬರೂ ಅವರು ಹೇಳಿದ ಕೆಲಸಕ್ಕೆ ಮನಸ್ಸು ಕೊಟ್ಟರು. ಸಾಹೇಬರು ಬರುವುದು ನಾಳೆ ಎನ್ನುವ ವೇಳೆಗೆ ರಸ್ತೆ ಅಚ್ಚುಕಟ್ಟಾಯಿತು. ರಾತ್ರಿಯವರೆಗೂ ತನ್ನ ಪಾಲಿನ ರಸ್ತೆ ಕೆಲಸ ಮಾಡಿಸಿ, ಬುಡನ ಮನೆಗೆ ಹೋಗಿ ಮಲಗಿಕೊಂಡ. ಹಿಂದಿನ ರಾತ್ರಿಯೇ ಚಳ್ಳಕೆರೆಗೆ ಬಂದು ಮೊಕ್ಕಾಂ ಮಾಡಿದ ಸಾಹೇಬರು ಮರುದಿನ ಬೆಳಿಗ್ಗೆಯೇ ಮೊಳಕಾಲ್ಮುರುವಿಗೆ ಹೋಗುವ ಪ್ರೋಗ್ರಾಂ ಇದ್ದುದರಿಂದ, ಬುಡನಸಾಬಿ ಎದ್ದವನೇ ಬಾಲಾಜಿರಾಯರ ಅಪ್ಪಣೆಯಂತೆ, ಸಾಹೇಬರಿಗೆ ಕೊಡಲು ಹೂವು, ನಿಂಬೆ ಹಣ್ಣು ತೆಗೆದುಕೊಂಡು ರಸ್ತೆಯ ಬಳಿಗೆ ಬಂದ. ರಾತ್ರಿ ಅವನು ಹೋಗುವಾಗ ಕನ್ನಡಿಯಂತಿದ್ದ ರಸ್ತೆ, ಈಗಿದ್ದುದನ್ನು ನೋಡಿ ಅವನ ಎದೆ ಬಿರಿದುಹೋಯಿತು.

ರಾತ್ರಿ ರಸ್ತೆಯಲ್ಲಿ ಯಾರೋ ನಾಲ್ಕಾರು ಗುಳಿಗಳನ್ನು ತೋಡಿ, ಅಡ್ಡಲಾಗಿ ಒಂದು ಮೋರಿ ಅಗೆದು, ಅದನ್ನು ಕಲ್ಲು ಮಣ್ಣಿನಿಂದ ತುಂಬಿ, ರಸ್ತೆ ರಿಪೇರಿಯಾಗಿ ಎಷ್ಟು ಯುಗವಾಯಿತೋ ಅನ್ನುವ ಹಾಗೆ ಮಾಡಿದ್ದರು.

ಇದು ಯಾರ ಕೆಲಸವೆಂಬುದು ಬುಡನಸಾಬಿಗೆ ಅರ್ಥವಾಗಿ, ಮೈಯಲ್ಲಿ ಕ್ರೋಧ ಬೆಂಕಿಯ ಹೊಳೆಯಾಗಿ ಹರಿಯಿತು. 'ಮಾ—ದ್, ಅವನ್ನ ಜೀವಸಹಿತ ಬಿಡಾಕಿಲ್ಲ' ಎಂದು ಶಪಥ ಮಾಡಿದ. ಹಲ್ಲು ಕಡಿದ. 'ಆದರೆ ಕ್ರೋಧಕ್ಕೆ ಹೊತ್ತಿರಲಿಲ್ಲ. ಮುಂದೇನು ಮಾಡಬೇಕು ಎಂದು ಯೋಚಿಸು ವುದರೊಳಗಾಗಿಯೇ ಸಾಹೇಬರ ಗಾಡಿಯ ಕುದುರೆಗಳ ಹೆಜ್ಜೆಯ ಸದ್ದು ಕೇಳಿಸಿ—

'ಖುದಾ, ಇದೊಂದು ಬಾರಿ, ನನ್ನನ್ನು ಬಚಾವು ಮಾಡು'

—ಎಂದು ಬೇಡಿ, ಆದದ್ದಾಗಲಿ ಎಂದು ದೇವರ ಮೇಲೆ ಭಾರ

ಹಾಕಿ, ಹೂವು ನಿಂಬೆ ಹಣ್ಣಿನ ತಟ್ಟೆ ಹಿಡಿದು ನಿಂತ.

ಸಾಹೇಬರ ಗಾಡಿ, ಅಲ್ಲಿ ಬಂದು ಪಕ್ಕಕ್ಕೆ ನಿಂತಿತು. ಸಾಹೇಬರು ಗಾಡಿಯಿಂದ ಕೆಳಗಿಳಿದು, ರಸ್ತೆಯಲ್ಲಿದ್ದ ಕೊರಕಲು, ಗುಂಡಿಗಳನ್ನು ನೋಡಿ ಸಿಟ್ಟು ಬೆಂಕಿಯಾಗಿ—

'ಯಾರದ್ರೀ ಈ ರೋಡ್ ಕಂಟ್ರಾಕ್ಟು'

—ಎಂದು ಅಬ್ಬರಿಸಿದರು. ರಸ್ತೆಯನ್ನು ನೋಡಿ ದೊಡ್ಡ ಸಾಹೇಬ ರೊಂದಿಗೆ ಬಂದಿದ್ದ ಇಂಜನಿಯರ್‌ರ ಮುಖವೂ ಕೆಂಪಾಗಿತ್ತು. ಸಾಹೇಬರ ಪ್ರಶ್ನೆಗೆ ಅವರು ಉತ್ತರ ಕೊಡುವ ಮೊದಲೇ ಬುಡನ ಅವರಿಗೆ ಅಡ್ಡಬಿದ್ದು—

'ಮಾಫ್ ಮಾಡಬೇಕು ಬುದ್ಧಿ'

—ಎಂದ.

'ಯಾರೋ ನೀನು?'

—ತಮ್ಮ ಕಾಲಿಗೆ ಅಡ್ಡಬಿದ್ದ ಬುಡನಸಾಬಿಯನ್ನು ನೋಡಿ ಸಾಹೇಬರು ಕೇಳಿದರು.

''ನಾನು ಕಂಟ್ರಾಕ್ಟರ್ ಬಾಲಾಜಿರಾಯರ ಮೇಸ್ತ್ರಿ ಬುಡನ ಬುದ್ಧಿ.'

'ರಸ್ತೆ ಹೀಗೇನೇನೊ ಇಡೋದು ಹೈವಾನ. ರೀ—ಈ ಸಲ ಬಾಲಾಜಿರಾಯರ ಬಿಲ್ ಸ್ಯಾಂಕ್ಷನ್ ಮಾಡಬೇಡಿ. ಅವರಿಗೆ ಚೆನ್ನಾಗಿ ಬರೇ ಎಳೆದು ಬುದ್ಧಿ ಕಲಿಸಬೇಕು.'

—ಎಂದು ಸಾಹೇಬರು ನುಡಿದರು.

'ಬುದ್ಧಿ, ತಪ್ಪಾದ್ದು ಈ ಗರೀಬನಿಂದ. ಅನ್ನಕೊಡೊ ಧಣಿಗಳ್ದೇನೂ ತಪ್ಪಿಲ್ಲ. ನನ್ನ ಬೇಕಾದ್ರೆ ಗಲ್ಲೀಗ್ಹಾಕಿ'

—ಎಂದು ಅಂಗಲಾಚಿದ ಬುಡನ. ಸಾಹೇಬರ ಬಾಯಿಂದ ಬಾಲಾಜಿ ರಾಯರಿಗೆ ಬರೆ ಬೀಳುವುದೆಂಬುದನ್ನು ಕೇಳಿದ, ಅವನ ಹೃದಯಕ್ಕೆ ಅಪಾರ ವ್ಯಥೆಯಾಗಿ, ಅವನ ಕಣ್ಣುಗಳಲ್ಲಿ ನೀರು ಹರಿಯಲಾರಂಭಿಸಿತ್ತು.

'ಬೋಳಮ್ಮ ಅತ್ತ್ಹಾಗೆ ಅಳ್ತಾನೆ ಥಾಂಡಿಗ. ಕೆಲಸ ಸರಿಯಾಗಿ ಮಾಡ್ಲೋಕೇನಾಗಿತ್ತೋ ಕೇಡು?'

'ಬುದ್ಧಿ. ನಂಬಿದರೆ ನಂಬಬೋದು, ಬಿಟ್ಟರೆ ಬಿಡಬೋದು, ಧಣಿಗಳ ಚಿತ್ತ. ರಸ್ತೆ ಪಾಕೀಜಾಗೇ ಮಾಡಗಿಸಿದ್ದೆ. ರಾತ್ರಿಂದ್ರಾತ್ರೀನೇ ಯಾರೋ

ಅಗ್ದವರು ಹೀಗ್ಮಾಡಿಸಿದ್ದಾರೆ.'

ಅವನ ಮಾತು ಕೇಳಿ ಸಾಹೇಬರು ರಸ್ತೆಯನ್ನು ಮತ್ತೊಮ್ಮೆ ಸೂಕ್ಷ್ಮ ವಾಗಿ ನೋಡಿದರು. ಬುಡನ ಮಾತಿನಲ್ಲಿ ಸತ್ಯವಿದೆ ಎನ್ನಿಸಿತು. ಇಂಜನಿಯರರೂ ಇದೇ ಮಾತನ್ನೇ ಹೇಳಿದರು. ಆಗ ಅವರ ಕೋಪ ಕೊಂಚ ಶಾಂತವಾಗಿ—

'ಆಗಲಿ......ಆಗಲಿ... ಈ ಸಲಕ್ಕೆ ಮಾಫ್ ಮಾಡಿದ್ದೇನೆ. ಹುಷಾರಾಗಿರು. ಬಾಲಾಜಿರಾಯರಿಗೆ ಕೆಟ್ಟ ಹೆಸರು ಬರೋಹಾಗೆ ಮಾಡಬೇಡ.'

—ಎಂದು ಬುಡನಕೊಟ್ಟ ಹೂವಿನ ಹಾರ, ನಿಂಬೆ ಹಣ್ಣು, ಎಲ್ಲವನ್ನೂ ತೆಗೆದುಕೊಂಡು ಹೊರಟು ಹೋದರು. ಸಾಹೇಬರ ಕುದುರೆ ಗಾಡಿಯ ಓಟದಿಂದೆದ್ದ ಧೂಳು ಕಣ್ಣುಮರೆಯಾಗುವವರೆಗೂ ನಿಂತಲ್ಲಿಯೇ ನಿಂತಿದ್ದ ಬುಡನಸಾಬಿ.

ಅವರ ಗಾಡಿ ಕಣ್ಣುಮರೆಯಾಗುತ್ತಿದ್ದ ಹಾಗೇ, ಅದುವರೆಗೂ ಹುದುಗಿದ್ದ ಕ್ರೋಧ ಭಯಂಕರ ಜ್ವಾಲೆಯಾಗಿ ಉರಿಯಲಾರಂಭಿಸಿತು. ದಾಪುಗಾಲು ಹಾಕುತ್ತಾ ಹಳ್ಳಿಗೆ ಹಿಂದಿರುಗಿ, ಕುರಿಯನ್ನು ಕತ್ತರಿಸುವ ದೊಡ್ಡ ಚಾಕುವನ್ನು ಮಸೆದು ಸೊಂಟಕ್ಕೆ ಸಿಕ್ಕಿಸಿಕೊಂಡು, ಎದೆಯುದ್ದದ ದೊಡ್ಡದೊಣ್ಣೆಯನ್ನು ಕೈಯಲ್ಲಿ ಹಿಡಿದು ಮನೆಯಿಂದ ಹೊರಬಿದ್ದ. ದಕ್ಷನ ವಧೆಗೆಂದು ಅಗ್ನಿ ಕುಂಡದಿಂದ ಹೊರಬಿದ್ದ ವೀರಭದ್ರನ ಹಾಗಿದ್ದ ಬುಡನಸಾಬಿ.

ಅವನು ಎಂದೂ ಹಾಗೆ ಹೊರಟವನಲ್ಲ. ಎಂತಲೇ ಅವನ ವಿಚಿತ್ರ ರೂಪವನ್ನು ಕಂಡು, ಎದುರಿಗೆ ಬಂದ ಪಟೇಲ—

'ಇದೇನೋ ಬುಡನ ಅವತಾರ?'

—ಎಂದು ಅಚ್ಚರಿಯಿಂದ ಕೇಳಿದ.

'ಇವತ್ತು ಅವನಿಗೆ ಮಾರಮ್ಮನ ಹಬ್ಬ ಕಾದೈತೆ'

—ಹಲ್ಲು ಕಡಿಯುತ್ತಾ ಬುಡನ.

'ಯಾರಿಗೆ?'

'ಆ ಲಂಬಾಣಿ ನಮಕ್ ಹರಾಂಗೆ. ಅವನ್ನ ಜೀವಸಹಿತ ಬಿಡಾಕಿಲ್ಲ'.

—ಎಂದ ಉಗ್ರ ನಿರ್ಧಾರದ ಉಕ್ಕಿನ ಧ್ವನಿಯಲ್ಲಿ ಬುಡನ.

ಬುಡನನಿಂದ ಏನಾಯಿತೆಂಬುದನ್ನು ತಿಳಿದ ಪಟೇಲ—

'ಅವನೆಲ್ಲಿ ಸಿಗ್ತಾನೆ, ನಿನಗೆ. ಎಲ್ಲೋ ಅವನ ತಾಂಡಾದಲ್ಲಿ ಅವಿತು ಕೊಂಡಿರ್ತಾನೆ. ಅಲ್ಲಿಗೆ ಹೋದ್ರೆ ಹುಲಿ ಬಾಯಲ್ಲಿ ಹೋದ ಹಾಗೆ. ಅಷ್ಟು ಜನ ಅವನವರ ನಡುವೆ ನೀನು ಒಂಟಿ ಏನು ಮಾಡ್ತಿ. ಸುಮ್ಮನಿರು. ಬೇರೆ ಹೊತ್ತು ನೋಡಿ ಬುದ್ಧಿ ಕಲಿಸುವೆಯಂತೆ.'

—ಎಂದ.

'ಹಂಗಾಕಿಲ್ಲ ಕಣಣ್ಣ, ಅದೇನೈತೊ ಇವತ್ತು ಫೈಸಲ್ ಆಗೋ ಗ್ಬೇಕು. ತಾಂಡಾ ಅಲ್ಲ, ಅವರಮ್ಮನ ಹೊಟ್ಟೇಲೇ ಹೊಕ್ಕಿಕೊಂಡಿದ್ದರೂ ಬಿಡೋದಿಲ್ಲ. ಅವನು ಸಾಯಬೇಕು, ಇಲ್ಲ ನಾನು ಸಾಯಬೇಕು. ಎರಡರಲ್ಲೊಂದು ತೀರ್ಮಾನ ಆಗ್ಬೇಕು. ಬುದ್ಧಿಯೋರಿಗೆ ಕೆಟ್ಟ ಹೆಸರು ತಂದು ಬಿಟ್ಟ ಹಲ್ಕಾ ಸುವ್ವರ್.'

—ಎಂದು, ತಡೆಯುತ್ತಿದ್ದ ಪಟೇಲನನ್ನು ಅತ್ತ ತಳ್ಳಿಬಿಟ್ಟು ಕಾಲನ ಕೋಣನಂತೆ ಅಲ್ಲಿಂದ ಒಂದೂವರೆ ಮೈಲಿ ದೂರದಲ್ಲಿದ್ದ ತಾಂಡಾದತ್ತ ನಡೆದ.

ಒಂದು ಕೈಲಿ ದೊಣ್ಣೆ, ಮತ್ತೊಂದು ಕೈಲಿ ದೊಡ್ಡ ಚೂರಿ ಹಿಡಿದು ರೋಷದಿಂದ ಬಂದ ಬುಡನಸಾಬಿಯನ್ನು ಕಂಡು ತಾಂಡಾದಲ್ಲಿದ್ದವರ ಜಂಘಾಬಲ ಉಡುಗಿಹೋಯಿತು.

'ಲೋ ನಾಮರ್ದಾ ಹೈವಾನ್, ಗಂಡ್ಸಾಗಿದ್ರೆ ಹಟ್ಟಿ ಬಿಟ್ಟು ಹೊರಗೆ ಬಾರೋ'

—ಎಂದು ಬುಡನ ರೂಪ್ಲ್ಯಾನ ಗುಡಿಸಲ ಮುಂದೆ ನಿಂತು ಅಬ್ಬರಿಸಿದ. ಆದರೆ ರೂಪ್ಲ್ಯಾನ ಗುಡಿಸಲಿನಲ್ಲಿ ಜೀವವೇ ಇದ್ದಂತಿರಲಿಲ್ಲ—ಬುಡನ ಸವಾಲಿಗೆ ಉತ್ತರ ಕೊಡಲು.

ಅದನ್ನು ಕಂಡು ಬುಡನ ಅವನ ಗುಡಿಸಲಿನೊಳಗೇ ನುಗ್ಗಿದ. ಮನೆಯೊಳಗೂ ಯಾರೂ ಇರಲಿಲ್ಲ. ಒಲೆಯೊಳಗೆ ಉರಿಯುತ್ತಿದ್ದ ಬೆಂಕಿ 'ನೀನು ಬರುವವರೆಗೂ ಯಾರೋ ಇದ್ದರು' ಎಂದು ಹೇಳಿತು. ಬೇಟೆ

ತಪ್ಪಿಸಿಕೊಂಡ ಹುಲಿಯಂತೆ ಕೆರಳಿ ಬುಡನ ಉರಿಯುತ್ತಿದ್ದ ಕೊಳ್ಳಿಯೊಂದನ್ನು ಒಲೆಯಿಂದ ಹಿಡಿದುಕೊಂಡು ಹೊರಗೆ ಬಂದ. ಆ ವೇಳೆಗೆ ಮೂವತ್ತು ನಲವತ್ತು ಜನ ಹೊರಗೆ ಗುಂಪುಕೂಡಿ, ಗುಸಂಪಿಸ ಮಾತಾಡಿಕೊಳ್ಳುತ್ತಿದ್ದರು. ಗುಂಪನ್ನು ನೋಡಿದ ಬುಡನ ಹೆದರಲಿಲ್ಲ. ಅವನ ಕೋಪ ಮತ್ತಷ್ಟು ಹೆಚ್ಚಾಯಿತು.

'ಯಾತರ್ದೋ ನೋಡ್ತಾ ಇರೋದು? ಅವನೆಲ್ಲಿದಾನೋ ತೋರಸ್ತೀರೋ— ಇಲ್ದೆ ಹೋದ್ರೆ ನಿಮ್ಮ ತಾಂಡಾಕ್ಕೇ ಬೆಂಕಿ ಹಚ್ಚಿಬಿಡ್ತೀನಿ. ಆದ್ಯಾವ್ನೋನು ಅಡ್ಡ ಬರ್ತೀರೋ ಬನ್ರಿ'—ಎಂದ.

ಅವನ ಅಬ್ಬರವನ್ನು ಕೇಳಿ ಸುತ್ತ ನಿಂತವರು ಸಿಡಿಲು ಸೋಕಿದಂತೆ ಅಷ್ಟು ದೂರ ಹಿಂದೆ ಸರಿದರು. ಅವನನ್ನು ತಡೆಯಲು ಯಾರಿಗೂ ಧೈರ್ಯವಾಗಲಿಲ್ಲ. ಆದರೂ ಯಾರೊಬ್ಬರೂ ರೂಪ್ಲ್ಯಾ ಎಲ್ಲಿದಾನೆ ಎಂದು ಹೇಳದ್ದನ್ನು ಕಂಡು ಬುಡನನ ಸಿಟ್ಟು ಮತ್ತಷ್ಟು ಹೆಚ್ಚಿತು.

'ಏ ಹಿಮ್ಮತ್!'

—ಎಂದವನೇ ಕೈಯಲ್ಲಿದ್ದ ಕೊಳ್ಳಿಯನ್ನು ರೂಪ್ಲ್ಯಾನ ಗುಡಿಸಲಿನ ಹುಲ್ಲು ಛಾವಣಿಗೆ ಹೊತ್ತಿಸಲು ಹೋದ. ಇನ್ನೇನು— ಅವನು ಗುಡಿಸಲಿಗೆ ಬೆಂಕಿ ಹೊತ್ತಿಸಬೇಕು—ಅಷ್ಟರೊಳಗೆ ಗುಂಪಿನಲ್ಲಿ ಎಲ್ಲೋ ಅಡಗಿಕೊಂಡಿದ್ದ ರೂಪ್ಲ್ಯಾನ ಹೆಂಡತಿ ಹಾರಿಬಂದು ಅವನ ಕೈಯಲ್ಲಿದ್ದ ಕೊಳ್ಳಿಯನ್ನು ಕಿತ್ತುಕೊಂಡು, ಅವನ ಕಾಲಮೇಲೆ ಬಿದ್ದು—

'ಅಣ್ಣಾ—ನನ್ನ ಮನೆ ಕಾಪಾಡು'

—ಎಂದಳು, ಅಳುತ್ತಾ.

'ಅವನೆಲ್ಲಿದಾನೆ ತೋರ್ಸು, ನಿನ್ನ ಮನೆ ಉಳಸ್ತೀನಿ.'

'ಊಹೂ. ನನ್ನ ಬೇಕಾದ್ರೆ ಕೊಂದ್ಬಿಡು. ಅವನೆಲ್ಲಿದಾನೊ ತೋರ್ಸಾಕಿಲ್ಲ.'

'ಏ ಯಾಡಿ. ನಿನ್ಹಾಲಾಕಿ ಎಲ್ಲಾ ನನ್ತಾವ ನಡೆಯಾಕಿಲ್ಲ. ಅವನೆಲ್ಲಿದಾನೋ ತೋರ್ಸಿದ್ರೇ ಸಮ. ಇಲ್ದೇಹೋದ್ರೆ ಫಲಾತನ್ ಬಂದ್ರೂ ನಿಮ್ಮ ತಾಂಡಾ ಉಳಿಯಾಕಿಲ್ಲ. ನಮಕ್‌ಹರಾಂ ಎಲ್ಲಡಗಿಕೊಂಡಿದಾನೆ. ಹೇಳು? ಅವನ ರಕ್ತಾ ಹೀರೋವರೆಗೂ ನನ್ನ ಜೀವಕ್ಕೆ ಶಾಂತಿ ಇಲ್ಲ.'

'ಅವನು ಮಾಡಬಾರ್ದ ಕೆಲ್ಸ ಮಾಡ್ದ. ಮಾಫ್ ಮಾಡ್ಬುಡು. ಅವನು ತಾಂಡಾದಾಗಿಲ್ಲ, ಎಲ್ಲೋ ಓಡೋಗವನೆ'.

—ಎಂದಳು ರೂಪ್ಲ್ಯಾನ ಹೆಂಡತಿ.

'ಓಡ್ಹೋಗವನಾ—ಹೋಗ್ಲಿ...ಹೋಗ್ಲಿ ಅದೆಲ್ಲಿ ಹೋಗ್ತಾನೋ ನೋಡೇಬಿಡ್ತೀನಿ. ಎಲ್ಹೋಗವನೆ ಹೇಳು.'

'ನಾ ಹೇಳಾಕಿಲ್ಲ. '

'ಹೇಳಾಕಿಲ್ವಾ—ನಾನೇ ನೋಡ್ತೀನಿ'

'ನಾನು ಬಿಡಾಕಿಲ್ಲ.'

'ಬಿಡಾಕಿಲ್ಲಾ.'

'ಊಹೂ— ಬಿಡಾಕಿಲ್ಲ.'

'ಬಿಡಾಕಿಲ್ಲಾ ಅಂದ್ರೆ ನೀನೂ ಉಳಿಯಾಕಿಲ್ಲ.'

'ಹೋಗ್ಲಿ—ನನ್ಜೀವ ತಗದ್ಬಿಡು. ಹೂ. ಚೂರಿ ತಗೋ......ಹೂ... ಕೊಂದ್ಬಿಡು. ನಿನ್ನ ಕೋಪ ಹಂಗಾರ ತೀರ್ಲಿ'.

—ಎಂದು ಹೇಳಿ ರೂಪ್ಲ್ಯಾನ ಹೆಂಡತಿ ಬುಡನ ಎದುರಿಗೆ ನಿಂತಳು. ತೋಳೆರಡನ್ನೂ ಚಾಚಿ, ತನ್ನೆದುರು ನಿಂತಿದ್ದ ಹೆಣ್ಣನ್ನು ನೋಡಿ, ಬುಡನನ ನೆತ್ತಿಗೇರಿದ್ದ ಕ್ರೋಧವ ಮತ್ತು ಇಳಿಯಿತು. ಹಾಗೇ ತನ್ನನ್ನು ಕಂಡು ಹೆದರಿದ ಗಂಡಸರ ಗುಂಪಿನಲ್ಲಿ ತನ್ನನ್ನು ಎದುರಿಸಿದ ಹೆಂಗಸನ್ನು ಕಂಡು ಮೆಚ್ಚುಗೆಯೂ ಆಯಿತು.

'ಶಾಭಾಸ್—ತಾಂಡಾದಾಗೆಲ್ಲಾ ನೀನೊಬ್ಳೇ ಗಂಡ್ಸು. ನಿನ್ನಷ್ಟು ಧೈರ್ಯವೂ ಈ ಬಕ್ರಾಗಳಿಗಿಲ್ಲ. ಹೆಂಗಸಿನ ಮರೇಲಿ ಬದುಕಿಕೊಂಡ ಆ ಗುಲಾಂ. ಅವನಿಗ್ಹೇಳು—ಇವತ್ತಿನಿಂದ ರಸ್ತೆ ಕಡೆ ಕಾಲಿಟ್ರೆ ಅವನ ಜೀವ ಉಳಿಯಾಕಿಲ್ಲ'

—ಎಂದು ಹಿಂದಿರುಗಿ ಹೊರಡಲನುವಾದ. ಆದರೆ ಆ ಹೆಂಗಸು ಅವನಿಗೆ ದಾರಿ ಬಿಡಲಿಲ್ಲ.

'ಏ ದಾರಿ ಬಿಡು'

—ಎಂದ.

'ಬಿಡಾಕಿಲ್ಲ'

—ನಿರ್ಧಾರದ ಸ್ವರದಲ್ಲಿ ಹೇಳಿದಳು ಹೆಣ್ಣು.

'ಏಕೆ?'

—ಆಶ್ಚರ್ಯದಿಂದ ಕೇಳಿದ ಬುಡನ

'ಇವತ್ತಲ್ಲ...ಯಾವತ್ತಾದ್ರೂ ನನ್ನ ಗಂಡನ್ನ ಕೊಲ್ಲೋಲ್ಲಾಂತ ಅಲ್ಲಾನ ಮೇಲೆ ಆಣೆ ಇಟ್ಟು ಹೇಳಿದ್ರೆ ದಾರಿ ಬಿಡೋದು...ಅವನು ಮಾಡಿದ್ದು ಮಣ್ಣು ತಿನ್ನೋ ಕೆಲ್ಸ ಕಣಣ್ಣ. ನನಗ್ಗೊತ್ತೈತೆ. ಬ್ಯಾಡಾ ಬ್ಯಾಡಾ ಬ್ಯಾಡಾಂತ ಒಡಕೊಂಡ್ರೂ ಕೇಳ್ಲಿಲ್ಲ. ಇನ್ನಂದಫಾ ಅವನು ಹಿಂಗ್ಮಾಡಾಕಿಲ್ಲ. ನಮ್ದೇವ್ರಾಣೆ ಮಾಡೇಳ್ತೀನಿ ನಾನು. ನಿನ್ಮಗ ಅಂದ್ಕೊಂಡು ಮಾಫ್ ಮಾಡ್ಬುಡು. ಹೆಂಗ್ಸು ನಿನ್ಕಾಲಿಗ್ಬಿದ್ಕೇಳ್ಕೋತೀನಿ......ನನ್ಮಾತ ತಳ್ಬ್ಯಾಡ್ಕ್ಯಾಡ.'

ಅವಳ ಬೇಡಿಕೆಗೆ ಏನು ಉತ್ತರ ಕೊಡುವುದೆಂದು ಬುಡನಸಾಬಿಗೆ ತೋರಲಿಲ್ಲ. ಒಂದು ಗಳಿಗೆ ಹಾಗೇ ನಿಂತು, ಆ ಹೆಣ್ಣನ್ನು ನೋಡಿದ. ಅವಳ ಧೈರ್ಯವನ್ನು ಕಂಡು ಮೂಡಿದ ಅಭಿಮಾನ, ಪ್ರತೀಕಾರತೃಷೆಗಳ ನಡುವೆ ಹೋರಾಟ ನಡೆದು. ಕಡೆಗೆ ಅಭಿಮಾನವೇ ಗೆದ್ದು ಹೇಳಿತು:

'ಹೋಗ್ಲಿ ಬಿಡು. ಮಾಫ್ ಮಾಡಿದೀನಿ. ಅವನಿಗ್ಹೇಳು. ನಾಳೆ ಇಷ್ಟೊತ್ತಿನಲ್ಲಿ ನನ್ನ ರಸ್ತೆ ಹೆಂಗಿತ್ತೋ ಹಂಗಾಗಿರ್ಬೇಕು. ಇಲ್ದಹೋದ್ರೆ ನೀನಲ್ಲ, ನಿನ್ನಪ್ಪ ಬಂದ್ರೂ ಅವನ್ನ ಉಳಿಸಾಕಾಗಾಕಿಲ್ಲ.'

'ಆ ಕೆಲಸ ನಾನು ಮಾಡಿಸಿ ಕೊಡ್ತೀನಿ'.

'ಅಷ್ಟಾದರೆ ಸರಿ, ಅವನು ಗಂಡಸಾಗಿ ಹುಟ್ಟಿ ಕೆಟ್ಟ. ಅವನಲ್ಲ, ನೀನು ಗಂಡಸಾಗಿ. ಹುಟ್ಬೇಕಾಗಿತ್ತು. ನಾನು ಹೇಳಿದ್ದನ್ನು ಅವನಿಗೆ ಹೇಳಿಬಿಡು. ಹಂಗೇ...ಇನ್ನು ಈ ಬುಡನ ತಳ್ಳೀಗೆ ಬರಬ್ಯಾಡಂತಲೂ'

—ಎಂದು ಹೇಳಿ ಬುಡನಸಾಬಿ ಬಂದ ಹಾಗೆ ಹೊರಟು ಹೋದ.

ಮಾರನೆಯ ಅವನು ರಸ್ತೆಗೆ ಬರುವ ವೇಳೆಗೆ ರಸ್ತೆ ಮೊದಲಿದ್ದ ಹಾಗೆ ಆಗಿತ್ತು. ಅಂದಿನಿಂದ ಬುಡನಸಾಬಿ ಎಂದರೆ—ಅವನನ್ನು ಕೆಣಕಲು ಎಂಥವರೂ ಎದೆಮುಟ್ಟಿನೋಡಿಕೊಳ್ಳುವಂತಾಯಿತು. ರೂಪ್ಲ್ಯಾನ ಮೇಸ್ತ್ರಿಗಿರಿಗೆ ಅವತ್ತೆ ಕೊನೆಯಾಯಿತು. ಬುಡನಸಾಬಿಯ ಸಾಹಸ ಸುತ್ತಮುತ್ತಲ ಹಳ್ಳಿಗಳಿಗೆ ಮೆಚ್ಚಿನ ಕಥೆಯಾಯಿತು. ಎಲ್ಲರನ್ನೂ ಹೆದರಿಸುತ್ತಿದ್ದ ತಾಂಡಾದವರ ಪಾಲಿಗೆ

ಬುಡನನ ಹೆಸರು ಗರುಡಗೆರೆಯಾಯಿತು.

ಈ ವಿಷಯವನ್ನು ಕೇಳಿ ಬಾಲಾಜಿರಾಯರು ಅಭಿಮಾನದಿಂದ–

'ಬೇಷ್—ಗಂಡಸು ಅಂದ್ರೆ ನೀನು ಕಣೋ ಬುಡನ'

—ಎಂದು ಬೆನ್ನು ತಟ್ಟಿದರು.

'ಊಹೂ, ನಾನಲ್ಲ ಬುದ್ಧಿ ಗಂಡ್ಸು. ಆ ಹುಡ್ಗಿ ಗಂಡ್ಸು.'

'ಯಾರು?'

'ರೂಪ್ಲ್ಯಾನ ಹೆಂಡತಿ. ಅವಳಿಗಿರೋ ಧೈರ್ಯ ಯಾರಿಗೂ ಇಲ್ಲ. ನನ್ಹಂಗೆ ಯಾರಾದ್ರೂ ಬಂದಿದ್ರೆ ನಾನೂ ಓಡೋಗ್ತಿದ್ದೆ. ಆದ್ರೆ ಆ ಹುಡ್ಗಿ ಹೆದರ್ಲಿಲ್ಲ. ನನ್ನೇ ಆಟಕಾಯಿಸಿಬಿಟ್ಲು. ಫಲಾತನ್ ಬಂದ್ರೂ ಬಿಡಾಕಿಲ್ಲ ಅಂತ ಹೋದವನು ಅವಳೆದುರಿಗೆ ನರಂ ಆಗ್ಬಿಟ್ಟೆ. ಇದ್ರೆ ಹಂಗಿರ್ಬೇಕು. ಸುಮ್ನೆ ಮನುಷ್ಯನಾಗಿ ಹುಟ್ಟಿದ್ರೆ ಬಂತಾ ಬುದ್ಧಿ. ರೂಪ್ಲ್ಯಾ ಅವಳಿಗೆ ಸರಿಯಾದ ಗಂಡನಲ್ಲ.'

'ಹೋಗ್ಲಿ ನೀನೇ ಅವಳಿಗೆ ಗಂಡನಾಗು. ಹೇಗೂ ಬಹಳ ತಾರೀಫ್ ಮಾಡುತ್ತೀಯಾ'

—ಎಂದರು ಬಾಲಾಜಿರಾಯರು ನಗುತ್ತ.

'ತೋಬಾ...ತೋಬಾ...ಉಂಟೆ ಬುದ್ಧಿ? ಆ ಮಾತಾಡ್ಬಾರ್ದು.'

—ಎಂದ ಬುಡನ

'ಏಕೋ, ಅದರಲ್ಲಿ ತಪ್ಪೇನು?'

'ಅವಳು ನನ್ನ ಬಹೆನ್ ಬುದ್ಧಿ, ಅವಳು ಜಾತಿ ಹೆಣ್ಣು. ಹೆಂಗ್ಸೂಂದ್ರೆ ಹಂಗಿರಬ್ಯಾಡ್ವಾ!'

—ಎಂದ ಬುಡನ ಮೆಚ್ಚುಗೆ ಗೌರವದ ಸ್ವರದಲ್ಲಿ. ಬುಡನ ಆಡಿದ ಮಾತು ಕೇಳಿ ಬಾಲಾಜಿರಾಯರಿಗೂ ಬುಡನ ಬಗ್ಗೆ ಅಭಿಮಾನ ಬೆಳೆಯಿತು.

'ನಿಜ, ನಿಜ, ಹೆಂಗ್ಸೂಂದ್ರೆ ಅವಳ್ಹಾಗಿರಬೇಕು. ಗಂಡ್ಸೂಂದ್ರೆ ನಿನ್ಹಾಗಿರ ಬೇಕು ಕಣೋ, ಸಾಬಿ.'

—ಎಂದರು.

ಅವರ ಮಾತು ಹೃದಯಂದಾಳದಿಂದ ಮೂಡಿಬಂದಿತು.

ಅಂದಿನಿಂದ ಬುಡನ ಬಾಲಾಜಿರಾಯರ ಬಲಗೈಯಾದ.

೮

ಬುಡಸ ಬಾಲಾಜಿರಾಯರ ಬಳಿ ಕೆಲಸಕ್ಕೆ ಸೇರಿದಾಗ, ರಾಯರು ಅವನಿಗೆ ಸಂಬಳ ಎಷ್ಟೆಂದು ಗೊತ್ತು ಮಾಡಿರಲಿಲ್ಲ; ಎಷ್ಟು ಕೊಡುತ್ತೀರಿ ಎಂದು ಬುಡನಸಾಬಿಯೂ ಕೇಳಿರಲಿಲ್ಲ. ರಾಯರು ಬಾ ಎಂದ ಕೂಡಲೇ ಹೋಗಿ ಕೆಲಸಕ್ಕೆ ಸೇರಿದ್ದ. ಆ ಬಳಿಕಲೂ ಅವನಿಗೆ ಸಂಬಳದ ಯೋಚನೆ ಬಂದಿರಲಿಲ್ಲ.

ಪ್ರತಿವಾರವೂ ಕೂಲಿಗಳಿಗೆ ಅವರ ಕೂಲಿಯ ಹಣ ಬಟವಾಡೆ ಮಾಡುವಾಗ, ಬುಡನಸಾಬಿ ಕೇಳಲಿ ಬಿಡಲಿ, ರಾಯರೇ ಅವನಿಗೆ ವಾರಕ್ಕೆ ಬೇಕಾಗುವಷ್ಟು ಖರ್ಚಿನ ಹಣ ಕೊಡುತ್ತಿದ್ದರು. ಯಾವಾಗಲಾದರೊಮ್ಮೆ ಹಣ ಬೇಕಾಗಿ ಬಂದಾಗ ಬುಡನಸಾಬಿಯೇ ಐದೋ ಹತ್ತೋ ಕೇಳಿ ತೆಗೆದು ಕೊಳ್ಳುತ್ತಿದ್ದ. ಅಷ್ಟೇ ವಿನಾ ತನ್ನ ಲೆಕ್ಕ ಎಷ್ಟಾಯಿತು, ಏನಾಯಿತು ಎಂದು ಎಂದೂ ಕೇಳಿರಲಿಲ್ಲ; ಹಣದ ಯೋಚನೆಯೇ ಅವನ ತಲೆಯಲ್ಲಿ ನಾಟಿರಲಿಲ್ಲ—ಬಾಲಾಜಿರಾಯರ ಬಳಿ ಕೆಲಸಕ್ಕೆ ಸೇರಿದ ಮೇಲೆ ಅವನ ಅಗತ್ಯ ಗಳನ್ನೆಲ್ಲವನ್ನೂ ಬಾಲಾಜಿರಾಯರೇ ಪೂರೈಸುತ್ತಿದ್ದರು. ಬುಡನ ಸಾಬಿಗಿದ್ದು-ದಕ್ಕಿಂತ ಹೆಚ್ಚಾಗಿ ಅವನ ಚಿಂತೆ ಬಾಲಾಜಿರಾಯರಿಗಿತ್ತು.

ರಾಯರು ಬಹಳ 'ದಿಲ್‌ದಾರ್' ಸ್ವಭಾವದವರು. ಒಮ್ಮೆ ಯಾರ ಮೇಲಾದರೂ ಅಭಿಮಾನ ಮೂಡಿತೆಂದರೆ, ಅದು ಕಟ್ಟುಕಿತ್ತ ಹೊಳೆಯಾಗಿ ಹರಿಯುತ್ತಿತ್ತು. ಆ 'ದಿಲ್‌ದಾರ್' ಗುಣ ಅವರಿಗೆ ರಕ್ತಗತವಾಗಿ, ವಂಶಪರಂಪರೆಯಾಗಿ ಬಂದಿತ್ತು.

ಅವರ ಹಿರಿಯರು ಪಾಳಯಗಾರರ ಕಾಲದಲ್ಲಿ ಪೂನಾದ ಪೇಶ್ವೆಗಳ ವಕೀಲರಾಗಿ ಚಿತ್ರದುರ್ಗಕ್ಕೆ ಬಂದು ನೆಲೆಸಿದರಂತೆ. ಆ ಕಾಲದಲ್ಲಿ ಅವರು ಬೇಕಾದಷ್ಟು ಆಸ್ತಿ ಸಂಪಾದಿಸಿದರು. ಆ ಕಾಲಕ್ಕೆ ಅವರ ಮನೆಯಲ್ಲಿ; ಸೇರುಗಳಲ್ಲಿ ಮುತ್ತು ವಜ್ರವನ್ನು ತುಂಬಿಡುವಷ್ಟು ಶ್ರೀಮಂತರಾಗಿದ್ದರಂತೆ, ಮೈಲು ಮೈಲು ಉದ್ದದ ಜಮೀನು ಅವರದಾಗಿತ್ತಂತೆ. ಆದರೆ ಆ ಆಸ್ತಿ ಹೇಗೆ ಸೇರಿತೋ ಏನೋ ಹಾಗೆ ಕರಗಿಹೋಯಿತು.

ಬಳಿಕದ ತಲೆಮಾರಿನವರೂ ಅಷ್ಟೆ—ಲಕ್ಷ್ಮೀ ಒಲಿದ ಹಾಗೆ ದುಡಿಯು ತ್ತಿದ್ದರು: ಆದರೆ ಯಾರು ದುಡಿದದ್ದೂ ಮುಂದಿನ ತಲೆಯವರಿಗೆ ಆಷ್ಟಾಗಿ

ವಕ್ಕುತ್ತಿರಲಿಲ್ಲ. ಎಲ್ಲೋ ಹತ್ತರಲ್ಲೊಂದು ಪಾಲು ಉಳಿಯುತ್ತಿತ್ತು.

ಬಾಲಾಜಿರಾಯರೂ ಅದೇ ಪರಂಪರೆಯನ್ನೇ ಕಾಯ್ದುಕೊಂಡು ಬಂದಿದ್ದರು. ರಸ್ತೆ ಕಂಟ್ರಾಕ್ಟನ ರೂಪದಲ್ಲಿ ಅವರಿಗೆ ಲಕ್ಷ್ಮಿ ಒಲಿದಳು. ಹಣ ಬಂಧ ಬಂದ ಹಾಗೆ ರಾಯರ ದರ್ಬಾರು ರಂಗೇರಿತು.

ಚಿತ್ರದುರ್ಗದಲ್ಲಿದ್ದ ಅವರ ಮನೆಯನ್ನು ನೋಡಿದವರು ಯಾರೂ ಅದು ರಸ್ತೆ ಕಂಟ್ರಾಕ್ಟರ ಮನೆ ಎಂದು ಹೇಳುವಂತಿರಲಿಲ್ಲ. ಅದು ಮನೆಯಲ್ಲ; ಮಹಲು; ಅವರದು ಪೇಶ್ವೇ ದರ್ಬಾರು.

ಮನೆಯಲ್ಲಿ ಹತ್ತಿಪ್ಪತ್ತು ಮಂದಿ ಆಳುಕಾಳುಗಳು. ಅಡಿಗೆ ಪರಿಚಾರಕರು, ರಾಯರ ಮನೆತನಕ್ಕೂ ತಮಗೂ ಎಷ್ಟೋ ಶತಮಾನಗಳ ಹಿಂದೆ ಇದ್ದ ನೆಂಟಸ್ತಿಕೆಯನ್ನು ತೋರಿಸಿಕೊಂಡು ಬಂದು, ರಾಯರಿಗೂ ಅದನ್ನು ನೆನಪು ಮಾಡಿ ಅಲ್ಲೇ ಖಾಯಂ ಬಿಡಾರ ಮಾಡಿದ ನೆಂಟರಿಷ್ಟರು—ಎಲ್ಲರೂ ಸೇರಿ ಮನೆ ಸದಾ ಜನಭರಿತವಾಗಿ ಗಿಜಿಗುಟ್ಟುತ್ತಿತ್ತು.

ಅದರೊಂದಿಗೆ ರಾಯರ ಮನೆಯೊಂದು ಮುಕ್ತದ್ವಾರ. ಊಟದ ಪೊತ್ತಿನಲ್ಲಿ ಯಾರು ಬೇಕಾದರೂ ಬಂದು ಎಲೆ ಹಾಕಿಕೊಂಡು ಊಟಮಾಡಿ ಹೋಗಬಹುದು. ನೀನು ಯಾರು, ಏಕೆ ಬಂದಿರಿ ಎಂದು ಕೇಳುವವರು ಯಾರೂ ಅಲ್ಲಿರಲಿಲ್ಲ.

ಊರಿಗೆ ಯಾವ ಗಣ್ಯ ವ್ಯಕ್ತಿ ಬಂದರೂ ಅವರು ರಾಯರ ಅತಿಥಿಯಾಗಲೇ ಬೇಕು. ಒಮ್ಮೆ ರಾಯರ ಆತಿಥ್ಯದ ಸವಿಯನ್ನರಿತವರು, ಸಾಯುವವರೆಗೂ ಅವರನ್ನು ಮರೆಯುತ್ತಿರಲಿಲ್ಲ. ರಾಯರ ಮನೆಗೆ ಬಂದ ಅತಿಥಿಗಳಿಗೆ, ಮನೆ ಅಳಿಯನಿಗೆ ನಡೆಯುವಷ್ಟು ಉಪಚಾರ ನಡೆಯುತ್ತಿತ್ತು.

ಅತಿಥಿಗಳಿಗಾಗಿ ರಾಯರು ತಮ್ಮ ಮನೆಗೆ ಹೊಂದಿಕೊಂಡ ಹಾಗೆ ದೊಡ್ಡದೊಂದು ಮನೆಯನ್ನು ಕಟ್ಟಿಸಿ, ಅಲ್ಲಿ ಹತ್ತಿಪ್ಪತ್ತು ಜನ ಅತಿಥಿಗಳು ಒಟ್ಟಿಗೆ ಬಂದರೂ ತೊಂದರೆಯಾಗದಂತೆ ಇರಲು ಏರ್ಪಾಟು ಮಾಡಿದ್ದರು. ಒಬೊಬ್ಬ ಅತಿಥಿಗೂ ಒಂದೊಂದು ಪ್ರತ್ಯೇಕವಾದ ಕೋಣೆ, ಅಲ್ಲೊಂದು ಕರಿಮರದ ಮಂಚ, ಸುಪ್ಪತ್ತಿಗೆಗಳು ಸಿದ್ಧವಾಗಿದ್ದವು. ಅಲ್ಲದೆ ಅತಿಥಿಗಳು ಯಾವ ಹೊತ್ತಿನಲ್ಲಿ ಏನು ಕೇಳಿದರೂ ಸಿದ್ಧವಾಗಿರಬೇಕೆಂದು ರಾಯರು ಕಟ್ಟಪ್ಪಣೆ ಮಾಡಿದ್ದುದರಿಂದ ನಾಲ್ಕು ಜನ ಆಳುಗಳು ಅವರ ಉಸ್ತುವಾರಿ

ನೋಡಿಕೊಳ್ಳಲಿಕ್ಕೆಂದೇ ನೇಮಕವಾಗಿದ್ದರು.

ಅತಿಥಿಗಳು ಎದ್ದಾಗಲಿಂದ ಮಲಗುವವರೆಗೂ ಆ ಆಳುಗಳು ಗಳಿಗೆಗೊಂದು ಬಾರಿ ಏನು ಬೇಕು ಎಂದು ವಿಚಾರಿಸಿಕೊಳ್ಳುತ್ತಿದ್ದರು. ಆಳುಗಳ ಮೇಲ್ವಿಚಾರಣೆಗಾಗಿ, ರಾಯರ ಭಾವ ಮೈದುನ ರಘೋತ್ತಮರಾಯ ನೇಮಕವಾಗಿದ್ದ.

ಅದೂ ಸಾಲದೆಂಬಂತೆ ರಾಯರೇ ಬಿಡುವಾದಾಗ ಒಮ್ಮೆ ಬಂದು ಅವರ ಯೋಗಕ್ಷೇಮ ವಿಚಾರಿಸಿಕೊಂಡು ಹೋಗುತ್ತಿದ್ದರು.

ಅತಿಥಿಗಳು ಯಾರಾದರೇನು–ಅವರೆಲ್ಲರಿಗೂ ಷೋಡಶೋಪಚಾರ ನಡೆಯಲೇಬೇಕು. ಅದರಲ್ಲೂ ಅವರು ಸಂಗೀತಗಾರರಾಗಿಬಿಟ್ಟರಂತೂ ತೀರಿಯೇ ಹೋಯಿತು. ಅವರು ಕುಡಿದ ನೀರು ಕದಲುತ್ತಿರಲಿಲ್ಲ. ಬರುವಾಗ ಜೋಳದ ಕಡ್ಡಿಯಂತೆ ಒಣಕಲಾಗಿ ಬಂದವರು ಹೋಗುವಾಗ, ನೀರಿಗೆ ಹಾಕಿದ ಕಡಲೆಯಂತೆ ಉಬ್ಬಿಕೊಂಡು ಹೋಗುತ್ತಿದ್ದರು. ಅವರ ತೈನಾತಿಗೆ ಸ್ವತಃ ರಾಯರೇ ನಿಲ್ಲುತ್ತಿದ್ದರು. ಪ್ರಪಂಚವನ್ನೆಲ್ಲಾ ಮರೆತು ಸಂಗೀತದಲ್ಲಿ ತಲ್ಲೀನರಾಗುವಂತೆಯೇ ಸಂಗೀತಗಾರರ ಸೇವೆಯಲ್ಲೂ ತಲ್ಲೀನರಾಗುತ್ತಿದ್ದರು.

ರಾಯರ ಮನೆಯಲ್ಲಿ ನಡೆಯುತ್ತಿದ್ದ ಸಂಗೀತ ಕಛೇರಿ ಸುತ್ತಲ ಸೀಮೆಗೆಲ್ಲಾ ಹೆಸರುವಾಸಿಯಾಗಿತ್ತು.

ರಾಯರ ಮನೆಗೆ ಸಂಗೀತಗಾರರು ಬಂದರೆ, ಅವರ ಖರ್ಚುವೆಚ್ಚವೆಲ್ಲ ರಾಯರ ಮೇಲೆ ಬೀಳುತ್ತಿದ್ದರೂ, ಊರಿಗೆ ಮಾತ್ರ ಸಂಗೀತ ಸಮಾರಾಧನೆಯಾಗುತ್ತಿತ್ತು.

ಈ ಸಂಗೀತ ಕಛೇರಿಗಳಿಗೆಂದೇ ರಾಯರು ತಮ್ಮ ಮನೆಯಲ್ಲಿ ಸುಮಾರು ನೂರಿನ್ನೂರು ಜನ ಕುಳಿತು ಕೊಳ್ಳುವಷ್ಟು ವಿಶಾಲವಾದ ಹಜಾರವನ್ನು ಕಟ್ಟಿಸಿದ್ದರು. ಸಂಗೀತ ಕಚೇರಿ ನಡೆಯುವ ದಿನ ಆ ಹಜಾರ ಇಂದ್ರನ ಆಸ್ಥಾನವಾಗುತ್ತಿತ್ತು. ನಕ್ಷತ್ರಗಳಂತೆ ಹೊಳೆಯುವ ತೂಗು ದೀಪಗಳು, ನೆಲಕ್ಕೆ ಹಾಸಿದ ರತ್ನಗಂಬಳಿ, ಸ್ವಪ್ನದಂಥ ವಾತಾವರಣವನ್ನು ಸೃಷ್ಟಿ ಮಾಡುವ ಪರಮಾಯಿಷಿ ಊದುಬತ್ತಿ, ಆ ದಿನದ ಊಟದ ಯೋಚನೆ ಬಗೆಹರಿಯುವಂಥ ಚರಮು ಅದರ ಮೇಲೆ ಬಂದವರಿಗೆಲ್ಲರಿಗೂ ಗಂಧ, ಹೂವು, ವೀಳ್ಯ. ರಾಯರ ಮನೆಯ ಗಂಧವನ್ನು ಒಂದು ಬಾರಿ ಮೈಗೆ ಸೋಕಿ

ಸಿದರೆ, ಮೂರು ದಿನ ಅದರ ಪರಿಮಳ, ಅದನ್ನು ಲೇಪಿಸಿಕೊಂಡವನ ಕನಸನ್ನು ಕೆರಳಿಸುತ್ತಿತ್ತು....

ಹಾಗೆಂದು ಆ ಸಂಗೀತ ಕಚೇರಿ ಬರೀ ಆಡಂಬರದ ಒಡ್ಡೋಲಗ ವಾಗಿಯೇ ಮುಗಿಯುತ್ತಿರಲಿಲ್ಲ. ರಾಯರಿಗೆ ಸ್ವತಹ ಹಾಡಲು ಬರದಿದ್ದರೂ ಹೆಚ್ಚು ಒಳ್ಳೆಯ ಸಂಗೀತವನ್ನು ಕೇಳಿ ಕೇಳಿಯೇ ರಾಗ, ತಾಳಜ್ಞಾನ ಸಂಪೂರ್ಣವಾಗಿ ಹಸ್ತಗತವಾಗಿತ್ತು. ಎಲ್ಲಕ್ಕೂ ಹೆಚ್ಚಾಗಿ ಉತ್ತಮ ಸಂಗೀತ ವನ್ನು ಮನಸಾರೆ ಅನುಭವಿಸಬಲ್ಲ ರಸಿಕತೆ ಇತ್ತು. ಎಂತಲೇ ಸಂಗೀತದಲ್ಲಿ ರಾಯರನ್ನು ಮೆಚ್ಚಿಸಿದವರು, ಎಂಥ ವಿದ್ವಾಂಸ ಮಂಡಲಿಯನ್ನಾದರೂ ಧೈರ್ಯವಾಗಿ ಎದುರಿಸಬಹುದಾಗಿತ್ತು. ಬಾಲಾಜಿರಾಯರ ಮನೆಯಲ್ಲಿ ಹಾಡದವನು ಉತ್ತಮ ಸಂಗೀತಗಾರನಲ್ಲ ಎಂದೇ ಸಂಗೀತಗಾರರಲ್ಲೂ ಭಾವನೆ ಇತ್ತು..

ಸಂಗೀತವನ್ನು ಮೆಚ್ಚಲಿ ಬಿಡಲಿ; ರಾಯರು ಸಂಗೀತಗಾರರಿಗೆ ಕೊಡ ಬೇಕಾದ ಮರ್ಯಾದೆಯನ್ನು ಮಾತ್ರ ಕಡಮೆ ಮಾಡುತ್ತಿರಲಿಲ್ಲ. ಹಾಗೆ ಒಬ್ಬರಿಗೆ ಹೆಚ್ಚು.ಒಬ್ಬರಿಗೆ ಕಡಮೆ ಕೊಡುವುದು ತಮ್ಮ ಮರ್ಯಾದೆಗೆ ಕುಂದಕ ಎಂದು ಭಾವಿಸಿದ್ದರು.

ಆದರೆ ಅವರ ಹೃದಯವನ್ನು ಮೆಚ್ಚುವಂತೆ ಹಾಡಿದವನು ಭಾಗ್ಯಶಾಲಿ. ಹಾಗೆ ತನ್ನ ಸಂಗೀತ ಸೌರಭದಿಂದ ರಾಯರ ಮನವನ್ನು ಸೂರೆಗೊಂಡವರ ಕಛೇರಿ, ಬಾಲಾಜಿರಾಯರ ಮನೆಯಲ್ಲಾದ ಮರುದಿನ, ಅವರ ಪ್ರೇಯಸಿಯ ಮನೆಯಲ್ಲಾಗುತ್ತಿತ್ತು.

ವಿಶಾಲಾಕ್ಷಿ ರಾಯರ ಪ್ರೇಯಸಿ. ಹೇಗೋ ಬಂದು ರಾಯರನ್ನು ಸೇರಿ ಕೊಂಡ ಹೆಣ್ಣಾದರೂ, ರೀತಿ ನೀತಿಯಲ್ಲಿ ಶಾಸ್ತ್ರೋಕ್ತವಾಗಿ ವಿವಾಹವಾದ ಹೆಣ್ಣಿಗಿಂತ ಹೆಚ್ಚು. ಬೆಂಗಳೂರಿನಿಂದ ಆಕೆಯನ್ನು ಕರೆತಂದು, ಆಕೆಗೇ ಪ್ರತ್ಯೇಕವಾಗಿ ಒಂದು ಒಳ್ಳೆಯ ಮನೆಯನ್ನು ಕಟ್ಟಿಸಿಕೊಟ್ಟಿದ್ದರು. ಆ ಮನೆ ಯನ್ನು ಒಳಹೊಕ್ಕು ನೋಡಿದವರು ಹೆಚ್ಚು ಜನವಿಲ್ಲವಾದರೂ, ಅದರ ಅಚ್ಚು ಗಟ್ಟು, ಓರಣ ವೈಭವಗಳ ಬಗ್ಗೆ ನೂರಾರು ಕಥೆಗಳು ಜನರಲ್ಲಿ ಹಬ್ಬಿ ದ್ದವು. ಆ ಮನೆಯನ್ನು ಒಮ್ಮೆ ನೋಡಿದ ಮೇಲೆ ಜನರ ಮಾತಿನಲ್ಲಿ ಅಂಥ ಅತಿಶಯೋಕ್ತಿ ಇಲ್ಲವೆಂದು ಯಾರಿಗಾದರೂ ತೋರುತ್ತಿತ್ತು. ಸೀಮೆಯ

ಎಲ್ಲ ಸುಂದರ ವಸ್ತುಗಳೂ, ಅವರಲ್ಲೂ ಅತ್ಯುತ್ತಮ ದರ್ಜೆಯವು ಅಲ್ಲಿದ್ದವು. ಬೆಲೆಗೆ ಹಿಂದುಮುಂದು ನೋಡದೆ ಅತ್ಯುತ್ತಮ ವಸ್ತುಗಳನ್ನು ಅಲ್ಲಿ ಸಂಗ್ರಹಿಸಿದ್ದರು ಬಾಲಾಜಿರಾಯರು. ನೆಲಕ್ಕೆ ಹಾಸಿದ ರತ್ನಗಂಬಳಿ, ಗೋಡೆಗೆ ಹಾಕಿದ ಚಿತ್ರಗಳು, ಬಾಗಿಲಿಗೆ ಹಾಕಿದ ತೆರೆ, ಕೂಡುವ ಕುರ್ಚಿ, ವಿರಾಮಾಸನಗಳು, ಕಾಮಶಾಸ್ತ್ರಕ್ಕೆ ಸಚಿತ್ರ ಟೀಕೆಯಂತಿದ್ದ ಚಿತ್ರರಂಜಿತ ವಾದ ಕೆತ್ತನೆಗೆಲಸದ ಕರೀಮರದ ಮಂಚ—ಎಲ್ಲವೂ ಅತ್ಯುತ್ತಮವಾದವೇ. ಆ ರತ್ನರಾಶಿಯಲ್ಲಿ ವಿಶಾಲಾಕ್ಷಿ ನಾಯಕರತ್ನ.

ಬಣ್ಣವನ್ನೇ ಸೌಂದರ್ಯವೆಂದು ಗ್ರಹಿಸುವವರು, ವಿಶಾಲಾಕ್ಷಿಯಲ್ಲಿ ಅಂಥ ಸೌಂದರ್ಯವನ್ನು ಕಾಣಲು ಸಾಧ್ಯವಿರಲಿಲ್ಲ. ಅವಳದು ಬಾದಾಮಿಯ ಬಣ್ಣ. ಆದರೆ ಅಂಗ ಸೌಷ್ಠವದಲ್ಲಾಕೆ—ಬೇಲೂರಿನ ಶಿಲಾಬಾಲಿಕೆಗೆ ಜೀವ ಬಂದಂತೆ. ರಾಯರ ವಿಲಾಸಕ್ಕಾಗಿಯೇ ಬಂದ ವಿಶಾಲಾಕ್ಷಿ ಬರೀ ಹಾಸಿಗೆಯ ಅರಗಿಳಿಯೂ ಆಗಿರಲಿಲ್ಲ. ನೃತ್ಯ ಸಂಗೀತದಲ್ಲವಳು ಅಪ್ರತಿಮ ಪಂಡಿತೆ.

ಅವಳ ಹುಟ್ಟೂರು ಮಾಪರಾಸಿನ ಕಡೆ. ಚಿಕ್ಕಂದಿನಿಂದಲೇ ದೊಡ್ಡ ದೊಡ್ಡ ವಿದ್ವಾಂಸರ ಬಳಿ ಸಂಗೀತ ಕಲಿತಿದ್ದಳು. ಅವಳ ಮೈ ನೃತ್ಯಕ್ಕೆಂದೇ ಸೃಷ್ಟಿಯಾದುದು. ಆ ಹಾವಭಾವ ವಿಲಾಸ ವೈಯಾರಗಳು ಅವಳಲ್ಲಿ ರಕ್ತಗತ ವಾಗಿದ್ದವು. ಅವಳ ನೀಳ, ವಿಶಾಲ ನಯನಗಳಲ್ಲಿ ಮೂಡಿಬರದ ಭಾವ ಯಾವುದೂ ಇರಲಿಲ್ಲ.

ಬೆಂಗಳೂರಿನಲ್ಲಿ ಸಂಗೀತ ವಿದುಷಿಯೆಂದು ರಾಯರಿಗೆ ವಿಶಾಲಾಕ್ಷಿಯ ಪರಿಚಯವಾಯಿತು. ಆ ಪರಿಚಯ ಸ್ಥಿರ ವಿಶ್ವಾಸವಾಗಿ, ವಿಶಾಲಾಕ್ಷಿರಾಯರ ರಾಣಿಯಾಗಿದ್ದಳು. ರಾಯರ ಉಪಭೋಗಕ್ಕೇ ಅವಳ ಬಾಳು ಮೀಸಲಾಗಿದ್ದರೂ ಅವಳು ಸಂಗೀತವನ್ನು ಮಾತ್ರ ಮರೆಯುತ್ತಿರಲಿಲ್ಲ. ಅವಳದನ್ನು ಮರೆಯಲು ರಾಯರೂ ಅವಕಾಶ ಕೊಟ್ಟಿರಲಿಲ್ಲ. ಪ್ರತಿ ಶುಕ್ರವಾರ ಆಕೆಯ ಮನೆಯಲ್ಲಿ ಸರಸ್ವತೀ ಪೂಜೆ ನಡೆಯುವುದು. ಆ ದಿನ ಸಂಜೆ ಆರತಿಗೆ ಮೊದಲು ವಿಶಾಲಾಕ್ಷಿ ತಾನೇ ಹಾಡುವಳು. ಅದಕ್ಕೆ ಅಷ್ಟು ಹೊತ್ತು, ಇಷ್ಟುಹೊತ್ತು ಎಂದು ಕಟ್ಟಲೆ ಇರಲಿಲ್ಲ. ಸ್ಫೂರ್ತಿ ಇದ್ದಷ್ಟು ಹೊತ್ತು, ಕೇಳುವವರ ಅದೃಷ್ಟವಿದ್ದಷ್ಟು ಹೊತ್ತು ಸಂಗೀತ ನಡೆಯುವುದು. ಆ ದಿನ ಅವಳ ಮನೆಯ ಒಳಗೆ ಹತ್ತು ಜನ ಇದ್ದರೆ, ಹೊರಗೆ ಸಾವಿರ ಜನ ಸಂಗೀತಪ್ರಿಯರ ಸಂತೆ.

ಆವಳ ಸಂಗೀತವನ್ನು ಕೇಳಿದ ಬಳಿಕ ಚಿಲ್ಲರೆ ಹಾಡುಗಾರರ ಸಂಗೀತ ಕೇಳಬೇಕು ಎಂದರೆ ಜನಕ್ಕೆ ಬೆಲ್ಲ ತಿಂದು, ನೀರು ಕುಡಿದಂತಾಗುವುದು. ಆದ್ದರಿಂದಲೇ ಅಂತಿಂಥ ಸಂಗೀತಗಾರರು ಚಿತ್ರದುರ್ಗಕ್ಕೆ ಬಂದು ನಿಭಾಯಿಸಿಕೊಂಡು ಹೋಗುವುದು ಕಷ್ಟವಾಗಿತ್ತು. 'ಎರಡು ವರ್ಷ ವಿಶಾಲಾಕ್ಷಿ ಮನೇಲಿ ತಂಬೂರಿ ಮೀಟಿದರೆ ಆಮೇಲೆ ಪರವಾ ಇಲ್ಲ ಹತ್ತು ನಿಮಿಷ ಕೇಳುವ ಹಾಗೆ ಹಾಡಬಹುದು' ಎಂದು ಸಂಗೀತಗಾರರಿಗೆ ಕೇಳುವ ಹಾಗೇ ಹೇಳ ತ್ತಿದ್ದರು ದುರ್ಗದ ಜನ. ಎಂತಲೇ ರಾಯರ ಮನೆಯಲ್ಲಿ ನಡೆವ ಕಛೇರಿ ಗಿಂತ, ವಿಶಾಲಾಕ್ಷಿಯ ಮನೆಯಲ್ಲಿ ನಡೆವ ಕಛೇರಿಗೆ ಹೆಚ್ಚಿನ ಮಹತ್ವವಿತ್ತು.

ವಿಶಾಲಾಕ್ಷಿಯ ಮನೆಯಲ್ಲಿ ಹಾಡಿ 'ಭೇಷ್' ಎನಿಸಿಕೊಂಡ ಸಂಗೀತ ಗಾರರ ಪಾಲಿಗೆ ರಾಯರ ಭಂಡಾರವೇ ಬಾಗಿಲು ತೆರೆಯುತ್ತಿತ್ತು ಪಂಚೆ, ವಸ್ತ್ರ, ಶಾಲು ರೂಪಾಯಿ ಮೊದಲಾದ ಮಾಮೂಲು ಮರ್ಯಾದೆ ಗಳೊಂದಿಗೆ, ಅವನ ಹಾಡು ಮುಗಿದಾಗ ವಿಶಾಲಾಕ್ಷಿಗೆ ಏನು ಕೊಡಬೇಕೆನಿ ಸುವುದೋ ಅದನ್ನು ತೆಗೆದುಕೊಡುವಳು. ಅದು ಅವಳ ಕೈಯ ಉಂಗುರ ವಾಗಬಹುದು -ಕತ್ತಿನಲ್ಲಿನ ಜವಾಹಿರಿ ಹಾರವಾಗಬಹುದು; ಅದು ಸಂಗೀತಗಾರರ ಅದೃಷ್ಟ. ಅದು ಸಂಗೀತಗಾರನಿಗೆ ವಿಶಾಲಾಕ್ಷಿಯ ಖಾಸಾ ಉಡುಗೊರೆ. ಅದರೊಂದಿಗೆ ಸಂಗೀತಗಾರರ ಮಡದಿಗೆ ಸೀರೆ, ಕುಪ್ಪಸ, ಅರಿಸಿನ ಕುಂಕುಮಗಳನ್ನೂ ಕೊಡುವಳು ವಿಶಾಲಾಕ್ಷಿ. ಹಣ ಕೊಡುವಾಗಲೂ ಹಾಗೇ—ಹತ್ತು, ನೂರು ಎಂದು ಎಂದೂ ಎಣಿಸಿಕೊಟ್ಟಿದ್ದಿಲ್ಲ. ಬೆಳ್ಳಿಯ ಪರಿವಾಣದಲ್ಲಿ ರೂಪಾಯಿಗಳನ್ನು ತುಂಬಿರಬೇಕು. ಅದರಲ್ಲಿ ಎರಡು ಬೊಗಸೆ, ಮೂರು ಬೊಗಸೆ ರೂಪಾಯಿಗಳನ್ನು ಎತ್ತಿ ಸಂಗೀತಗಾರರ ಮಡಲಿಗೆ ಹಾಕುವಳು.

ಇದು ಅವಳಿಗೆ ಸಂಗೀತ ಮೆಚ್ಚಿಗೆಯಾದರೆ. ಇಲ್ಲವಾದರೆ ಹತ್ತು ನಿಮಿಷ ಸಂಗೀತ ಕೇಳಿ ಒಮ್ಮೆ ಮೈಮುರಿದು—

'ತಾವು ಏನು ಅಪೇಕ್ಷೆ ಇಟ್ಟುಕೊಂಡು ಇಷ್ಟು ದೂರ ದಯಮಾಡಿ ಸೋಣವಾಯಿತೊ ತಿಳಿಸಬೇಕು. ಬೇಕಾದುದನ್ನು ಕೇಳಿ, ನಮಗೆ ಕೊಡುವ ಶಕ್ತಿ ಇದ್ದರೆ, ತೆಗೆದುಕೊಂಡು ಹೋಗಬಹುದು. ಬಹಳ ದೂರದಿಂದ ತುಂಬಾ ಶ್ರಮಪಟ್ಟು ಬಂದಿದ್ದೀರ, ಆ ವಿಶ್ವಾಸ ಬಹಳ ಹೆಚ್ಚಿನದು. ಏನಾಗಬೇಕೋ

ಅಪ್ಪಣೆಯಾಗಲಿ. ನೀವೇ ಕೇಳಿ. ನಿಮ್ಮ ಪರವಾಗಿ ತ್ಯಾಗರಾಜರೋ, ದೀಕ್ಷಿತರೋ, ಶ್ಯಾಮಾಶಾಸ್ತ್ರಿಗಳೋ ಕೇಳುವುದು ಬೇಡ.'

—ಎನ್ನುವಳು. ಅಲ್ಲಿಗೆ ಆ ದಿನದ ಕಛೇರಿ ಮುಗಿಯಿತು ಎಂತಲೇ. ಅದರೊಂದಿಗೆ ಚಿತ್ರದುರ್ಗದ ನೀರಿನ ಋಣವೂ ಆ ಸಂಗೀತಗಾರನಿಗೆ ಮುಗಿದು ಹೋಗುವುದು. ವಿಶಾಲಾಕ್ಷಿಯಿಂದ ಆ ಮಾತು ಆಡಿಸಿಕೊಂಡವನು, ಬೆವರಿಳಿದು ಮುಖವನ್ನು ಒರಸಿಕೊಳ್ಳುತ್ತಾ, ದುರ್ದಾನ ತೆಗೆದುಕೊಂಡವನಂತೆ ಹೋಗು ವನು. ಇಲ್ಲವೇ ಫಲಾಪೇಕ್ಷೆಯಿಂದಲೇ ಬಂದವನು ತನ್ನ ಬಯಕೆ ಎನಿತ್ತೆಂಬುದನ್ನು ತಿಳಿಸಿ, ಅದನ್ನು ಪಡೆದು ಹಿಂದಿರುಗುವನು.

ಹೀಗಾಗಿ ಸಂಗೀತಗಾರರ ಮಂಡಲಿಯಲ್ಲಿ ವಿಶಾಲಾಕ್ಷಿ ಮನೆಯ ಕಛೇರಿ ಎನ್ನುವುದು ತುಂಬಾ ಹೆಸರುವಾಸಿಯಾಗಿತ್ತು. ಅವರು ಹಾಡಲು ಹಿಂದೆ ಮುಂದೆ ನೋಡುತ್ತಿದ್ದುದು ಎರಡೇ ಸ್ಥಳ. ಒಂದು ಮೈಸೂರ ಅರಮನೆ, ಇನ್ನೊಂದು ವಿಶಾಲಾಕ್ಷಿಯ ಮನೆ. ಆ ಮನೆಯಷ್ಟೇ, ಆ ಮನೆ, ವಿಶಾಲಾಕ್ಷಿ ಎಲ್ಲರಿಗೂ ಒಡೆಯರಾದ ಬಾಲಾಜಿರಾಯರ ಔದಾರ್ಯವೂ ಹೆಸರುವಾಸಿ ಯಾಗಿತ್ತು. ಎಷ್ಟೋ ಜನ ಹೇಳುತ್ತಿದ್ದ ಹಾಗೆ—

'ಬಾಲಾಜಿರಾಯರು ಸಮುದ್ರವಿದ್ದ ಹಾಗೆ. ಅಲ್ಲಿ ಹೋದವರು ಅಷ್ಟು ಕೊಡಬಹುದು, ಇಷ್ಟು ಕೊಡಬಹುದು ಎಂದು ಚಿಂತಿಸಬೇಕಾಗಿಲ್ಲ. ತಮ್ಮ ಶಕ್ತಿ ಇದ್ದಷ್ಟು, ಅದೃಷ್ಟವಿದ್ದಷ್ಟು ತರಬಹುದು. ಅಂಥ ದಿಲ್ದಾರ್ ಮನುಷ್ಯ ಇನ್ನು ಹುಟ್ಟುವುದಿಲ್ಲ.'

ರಾಯರ ಈ ದಿಲ್ದಾರತನದ ಅನುಗ್ರಹ ದೃಷ್ಟಿ, ಬುಡನಸಾಬಿಯ ಮೇಲೂ ಬಿದ್ದಿತು—ರೂಪ್ಲ್ಯಾನಾಯಕನ ಪ್ರಸಂಗದಲ್ಲಿ. ತಮ್ಮ ಬಗ್ಗೆ ಸಾಹೇ ಬರು ಕೊಂಚ ಅಪ್ರಸನ್ನರಾದರೆಂದು, ಅದಕ್ಕಾಗಿ ಜೀವ ಕೊಡಲು ಸಿದ್ಧನಾದ ಬುಡನಸಾಬಿ, ಅವನ ಸ್ವಾಮಿನಿಷ್ಠೆ, ಎದೆಗಾರಿಕೆಗಳು ರಾಯರ ವಿಶೇಷ ಮನ್ನಣೆಗೆ ಪಾತ್ರವಾದವು. ಆ ಗಳಿಗೆಯಲ್ಲಿ ಬುಡನಸಾಬಿಯ ಅದೃಷ್ಟ ಕಣ್ಣು ತೆರೆಯಿತು.

ಬುಡನಸಾಬಿಗೆ ತನ್ನ ಮೇಲೆ ಪ್ರಸನ್ನರಾದ ರಾಯರನ್ನು ಮೆಚ್ಚಿಸುವುದು ಹೇಗೆ ಎಂಬುದೇ ಚಿಂತೆಯಾಗಿ.. ಅವನು ಆ ಚಿಂತೆಗೆ ತನ್ನ ಮೈ-ಮಿದುಳುಗಳನ್ನು ಮಾರಿದಂತೆ, ತಮ್ಮ ಬಗ್ಗೆ ಇಷ್ಟು ನಿಷ್ಠೆ ತೋರುವ, ದುಡಿಯುವ ಅವನಿಗೆ ಯಾವ ರೀತಿಯಲ್ಲಿ ಸಹಾಯ ಮಾಡಬಹುದು ಎಂಬುದೇ ಬಾಲಾಜಿರಾಯರಿಗೆ ಚಿಂತೆಯಾಯಿತು. ತಮ್ಮೊಳಗೇ ಈ ಉದ್ದೇಶ ಸಾಧನೆಗೆ ಸರಿಯಾದ ದಾರಿ ಯಾವುದು ಎಂದು ಚಿಂತಿಸುತ್ತಿದ್ದರು. ಹೀಗೆ ನಾಲ್ಕಾರು ವರ್ಷ ಕಳೆದ ಬಳಿಕ, ಒಂದು ದಿನ ರಾಯರು ಬುಡನಸಾಬಿಗೆ ಚಿತ್ರದುರ್ಗಕ್ಕೆ ಬರುವಂತೆ ಹೇಳಿಕಳಿಸಿದರು. ಏಕೋ ಏನೋ ಎಂದು ಗಾಬರಿ ಪಟ್ಟುಕೊಂಡೇ ಅವರನ್ನು ನೋಡಲು ಚಿತ್ರದುರ್ಗಕ್ಕೆ ನಡೆದುಕೊಂಡು ಹೋದ ಬುಡನಸಾಬಿ.

ಅದುವರೆಗೂ ಬುಡನಸಾಬಿ ಚಿತ್ರದುರ್ಗವನ್ನಾಗಲಿ, ಬಾಲಾಜಿರಾಯರ ಮನೆಯನ್ನಾಗಲಿ ನೋಡಿರಲಿಲ್ಲ. ಗಿರಿಯಮ್ಮನಹಳ್ಳಿಯಿಂದ ಚಿತ್ರದುರ್ಗಕ್ಕೆ ಇಪ್ಪತ್ತಾರು ಮೈಲಿಗಳ ಕಾಲುನಡಗೆಯ ದಾರಿ. ನಡೆದು ಹೋಗಬೇಕು. ಇಲ್ಲವೇ ಗಾಡಿ ಕಟ್ಟಿಸಿಕೊಂಡು ಹೋಗಬೇಕು. ಹಾಗೆ ಹೋಗಬೇಕಾದ ಅವಶ್ಯಕತೆಯೇನೂ ಅವನಿಗೆ ಅಂದಿನವರೆಗೂ ಒದಗಿ ಬಂದಿರಲಿಲ್ಲ. ಭಾನುವಾರ ಚಳ್ಳಕೆರೆಯ ಸಂತೆ. ಆ ದಿನ ರಾಯರೇ ಚಳ್ಳಕೆರೆಗೆ ಬರುತ್ತಿದ್ದುದರಿಂದ ಎಂಟು ಮೈಲಿ ದೂರದ ಚಳ್ಳಕೆರೆಗೆ ಹೋಗಿ ಬಂದರೆ ಅವನ ಕೆಲಸವೆಲ್ಲವೂ ತೀರುತ್ತಿತ್ತು. ಈಗ ಬಾಲಾಜಿರಾಯರೇ ಅವನಿಗೆ ದುರ್ಗಕ್ಕೆ ಬರಬೇಕು ಎಂದು ಹೇಳಿದ್ದರಿಂದ, ಬುಡನಸಾಬಿಗೆ ಚಿತ್ರದುರ್ಗವನ್ನು, ಕಥೆಯಾಗಿ ಕೇಳಿದ್ದ ಬಾಲಾಜಿರಾಯರ ಮನೆಯನ್ನು ನೋಡುವ ಯೋಗ ಲಭಿಸಿತು.

ಇಪ್ಪತ್ತಾರು ಮೈಲಿಗಳ ದೂರ ನಡೆದು ಬಂದು, ನಡುಮಧ್ಯಾಹ್ನದ ವೇಳೆಗೆ ಮನೆಯ ಮುಂದಿನ ಜಗಲಿಯ ಮೇಲೆ ಕುಳಿತ ಬುಡನಸಾಬಿಗೆ ರಾಯರೇ ಕೈಕಾಲು ತೊಳೆಯಲು ನೀರು ತರಿಸಿಕೊಟ್ಟು, ಅವನ ಊಟದ ಏರ್ಪಾಟನ್ನು ಮಾಡಲು ತಮ್ಮ ಹಿರಿಯ ಮಗ ಭಗವಂತರಾಯನಿಗೆ ಹೇಳಿ 'ಊಟ ಮುಗಿಸಿಕೊಂಡು ಬಾ. ಅವಸರ ಮಾಡಿಕೊಳ್ಳಬೇಡ. ಊಟವಾದ'

ಮೇಲೆ ನಿಧಾನವಾಗಿ ಮಾತನಾಡುವುದಿದೆ' ಎಂದು ಹೇಳಿದರು.

ಆ ಮನೆಯಲ್ಲಿ ತನಗಾದ ಆದರಾತಿಥ್ಯವನ್ನು ಕಂಡು ಬುಡನಸಾಬಿ ನಿಬ್ಬೆರಗಾದ. ಊಟ ಉಪಚಾರದ ರೀತಿ, ರಾಯರು, ಅವರ ಮಗ ತನ್ನಲ್ಲಿ ತೋರಿದ ವಿಶ್ವಾಸ, ಆತ್ಮೀಯತೆಯನ್ನು ಕಂಡು, ತನ್ನ ಸಮಾನ ಪುಣ್ಯವಂತರೇ ಇಲ್ಲ ಎನಿಸಿತು ಅವನಿಗೆ. ಆ ಭಾವನೆಯಿಂದಲೇ ಅವನಿಗೆ ಅರ್ಧಹೊಟ್ಟೆ ತುಂಬಿದಂತಾಗಿತ್ತು. ಅವನಿಗೆ ನೀಡಿದ ಊಟವೂ ಅಂಥದೆ. ನೋಡಿದರೆ ಹೊಟ್ಟೆ ತುಂಬುವಂಥ ಹತ್ತಾರು ಸಾಧನಗಳ ಶ್ರೀಮಂತ ಭೋಜನ. ಆದರ ಮೇಲೆ ರಾಯರ ಮಗನ ಒತ್ತಾಯ. ಹೇಗೊ ಊಟ ಮುಗಿಸಿ, ರಾಯರನ್ನು ಕಾಣಲು ಅವರ ಕಛೇರಿ ತೊಟ್ಟಿಗೆ ಬಂದ. ರಾಯರೂ ಮಧ್ಯಾಹ್ನದ ನಿದ್ದೆಯನ್ನು ಬಿಟ್ಟು ಅವನಿಗಾಗೇ ಕಾಯುತ್ತಾ ದೊಡ್ಡ ದಿಂಬಿಗೆ ಮೈಯೊರಗಿಸಿ ಆಳಿನ ಕೈಲಿ ಕಾಲೊತ್ತಿಸಿಕೊಳ್ಳುತ್ತಾ ಮಲಗಿದ್ದರು.

'ಕಂಟ್ರಾಕ್ಟರ್ ಸಾಹೇಬರ ಊಟ ಮುಗಿಯಿತೇ ಭಗವಂತರಾವ್? ಸರಿಯಾಗಿ ಊಟ ಮಾಡಿದರೋ, ಸಂಕೋಚಪಟ್ಟುಕೊಂಡರೊ?' ಊಟ ಮುಗಿಸಿ ಬಂದ ಬುಡನಸಾಬಿಯತ್ತ ನೋಡಿ, ಮಗನನ್ನು ಕೇಳಿದರು ಬಾಲಾಜಿರಾಯರು.

'ಸಾಹೇಬರಿಗೆ ನಮ್ಮ ಮನೆಯ ಊಟ ಸರಿಹೋಯಿತೊ ಇಲ್ಲವೊ, ಹೊಟ್ಟೆತುಂಬಿತು ಎಂದರು. ಆದರೆ ಊಟ ಮಾತ್ರ ಸರಿಯಾಗಿ ಮಾಡಿದ ಹಾಗೆ ಕಾಣಲಿಲ್ಲ.'

—ಎಂದ ಭಗವಂತರಾಯ.

'ಹೌದೇ ಸಾಹೇಬರೇ? ನನಗೆ ಮರೆತುಹೋಗಿತ್ತು, ನೋಡು ಭಗವಂತರಾವ. ಇಲ್ಲವಾದರೆ ಅವರ ಅಡಿಗೆಯನ್ನೇ ಮಾಡಿಸಿ ತರಿಸಬಹುದಾಗಿತ್ತು.'

—ಮಗ ಹೇಳಿದ ಮಾತನ್ನು ಕೇಳಿ ನೊಂದ ಧ್ವನಿಯಲ್ಲಿ ಹೇಳಿದರು. ಬಾಲಾಜಿರಾಯರು.

'ಉಂಟೇ ಬುದ್ಧಿ, ಎಂಥ ಮಾತು. ಭೋ ಸೊಗಸಾಗಿತ್ತು. ಊಟ ನನ್ನ ಜನ್ಮದಾಗೇ ಅಂಥ ಊಟ ಕಂಡಿರಲಿಲ್ಲ.'

—ಎಂದ ಬುಡನಸಾಬಿ, ಕೃತಜ್ಞತೆ ತಾನೇತಾನಾಗಿ ತುಳುಕುತ್ತಿದ್ದ ಧ್ವನಿಯಲ್ಲಿ.

'ಹಾಗೇ. ಬಹಳ ಸಂತೋಷ. ಏನೋ ಹಾರುವರ ಮನೆ ಸಪ್ಪೆ ಊಟ ಅಂತ ಬೇಸರವಾಗಲಿಲ್ಲವಲ್ಲ. ಭಗವಂತರಾವ್—ಗುಮಾಸ್ತರಿದ್ದರೆ ಕೊಂಚ ಕರೆಯುತ್ತೀಯಾ?'

—ಎಂದು ಮಗನನ್ನು ಗುಮಾಸ್ತರನ್ನು ಕರೆಯಲು ಕಳುಹಿಸಿ, ತಮಗೆ ಬಹು ದೂರವಾಗಿ ನೆಲದ ಮೇಲೆ ಕುಳಿತ ಬುಡನಸಾಬಿಯನ್ನು ನೋಡಿ—

'ಕಾಂಟ್ರಾಕ್ಟರ್ ಸಾಹೇಬರು ಕೆಳಗೇ ಕುಳಿತುಕೊಂಡಿರಲ್ಲಾ, ಮೇಲೆ ಬನ್ನಿ'

—ಎಂದು ತಮ್ಮ ಬಳಿಯಲ್ಲೇ ಅವನಿಗೆ ಕುಳಿತುಕೊಳ್ಳಲು ಜಾಗ ತೋರಿಸಿದರು.

'ಬುದ್ಧಿ—ಗರೀಬನಿಗೆ ಅಂಥ ದೊಡ್ಡ ಮಾತು ಹೇಳಬಾರದು. ಮೊದಲಿನ ಹಾಗೆ ಬುಡನ ಅಂತಾಲೇ ಕರೆದರೆ ಸಂತೋಷವಾಗ್ತದೆ'

—ಎಂದ ಬುಡನಸಾಬಿ, ತನಗವರು ತೋರಿದ ಮರ್ಯಾದೆ, ಕರೆದ ಬಹುವಚನಕ್ಕೆ ನಾಚುತ್ತ.

'ಗರೀಬ್! ಗರೀಬರು ಯಾರು, ಭಾಗ್ಯವಂತರು ಯಾರು ಬುಡನ? ದೇವರು ಕಣ್ಣು ಬಿಟ್ಟು ನೋಡಿದ ಅಂತ ನಾನಿವತ್ತು ಭಾಗ್ಯವಂತ. ನಾಳೆ ನಿನ್ನ ಮೇಲೆ ಕಣ್ಣು ತೆರೆದರೆ, ನೀನೇ ನನಗಿಂತಲೂ ಭಾಗ್ಯವಂತನಾಗಬಹುದು ಅಲ್ಲವೇ?'

'ತಮ್ಮಾತು ನಿಜ ಬುದ್ಧಿ. ಖುದಾ ಕಣ್ಬಿಟ್ಟಿದ್ರಿಂದಾಲೆ ನನ್ನಂಥೋನಿಗೂ ತಮ್ಮ ಆಶ್ರಯ ಸಿಕ್ಕಿತು. ಹೈವಾನ್ ಆಗಿದ್ದೋನು ಇನ್‌ಸಾನ್ ಆದೆ.'

—ಎಂದ ಬುಡನಸಾಬಿ. ಆ ಮಾತಿನಲ್ಲಿ ಮುಖಸುತ್ತಿಯ ಚಪಲವಿರದೆ, ಹೃದಯಂದಾಳದಲ್ಲೇ ಬೆಳೆದ ಕೃತಜ್ಞತೆಯ ಬಳ್ಳಿಯಲ್ಲಿ ಅರಳಿದ ಹೂವಾಗಿತ್ತು ಆ ಮಾತು.

'ನಿಜ ಬುಡನ ನಿನ್ನ ಮಾತು ನಿಜ. ಖುದಾ ಕಣ್ಣು ಬಿಟ್ಟಾಗ ಹೈವಾನ ಇನ್‌ಸಾನ್ ಆಗಬಹುದು. ಕಣ್ಣು ಮುಚ್ಚಿದಾಗ ಇನ್‌ಸಾನ್ ಹೈವಾನ

ಆಗಬಹುದು. ಏನಾದರೂ ಆ ಮಾತು ಮರೆಯಬಾರದು.'

'ಯಾವ ಮಾತು ಬುದ್ಧಿ?'

'ಎಲ್ಲಾ ಪರಮಾತ್ಮನ ಅನುಗ್ರಹ ಅನ್ನೋದನ್ನು'.

'ಹೌದು ಬುದ್ಧಿ ತಮ್ಮಾತು ನಿಜ

—ಎಂದ ಬುಡನಸಾಬಿ.

ಅವರು ಹೀಗೆ ಮಾತಾಡುತ್ತಿರುವಾಗಲೇ ಭಗವಂತರಾಯ ಬಂದು ಗುಮಾಸ್ತೆ ಭೀಮಾಚಾರ್ರು ಬರುತ್ತಿದ್ದಾರೆ ಎಂದು ಹೇಳಿದ. ಭಗವಂತ ರಾಯನನ್ನು ಹಿಂಬಾಲಿಸಿ ಭೀಮಾಚಾರ್ರೂ ಬಂದರು.

'ಬನ್ನಿ ಆಚಾರ್ರ್ರು. ಮಧ್ಯಾಹ್ನದ ಊಟ ಮುಗಿಸಿ ವಿಶ್ರಾಂತಿ ತೆಗೆದು ಕೊಳ್ಳುತ್ತಿದ್ದಿರೇನೋ. ಸ್ವಲ್ಪ ಅವಸರದ ಕೆಲಸವಿದ್ದದ್ದರಿಂದ ತೊಂದರೆ ಕೊಡಬೇಕಾಯಿತು...'

—ಆಚಾರ್ಯರನ್ನು ನೋಡಿ ಹೇಳಿದರು ಬಾಲಾಜಿರಾಯರು.

...'ಛೆ...ಛೆ ತೊಂದರೆ ಏನೂ ಇಲ್ಲ ರಾಯರೆ. ಕೆಲಸಕ್ಕಿಂತ ವಿಶ್ರಾಂತಿ ಹೆಚ್ಚೆ? ಕೆಲಸವೇನೋ ಅಪ್ಪಣೆಯಾಗಬೇಕು.'

—ಎಂದರು ಭೀಮಾಚಾರ್ರು.

'ಇವರ ಪರಿಚಯವಿದೆಯೇ ನಿಮಗೆ, ಭೀಮಾಚಾರ್ರೆ?'

—ಬುಡನಸಾಬಿಯತ್ತ ಕೈತೋರಿ ಭೀಮಾಚಾರ್ಯರನ್ನು ಕೇಳಿದರು ಬಾಲಾಜಿರಾಯ

'ಇಲ್ಲ'

'ಇವರೇ ಗಿರಿಯಮ್ಮನಹಳ್ಳಿ ಬುಡನಸಾಹೇಬರು. ಆ ಕಡೆ ನಮ್ಮ ರಸ್ತೆ ಕೆಲಸ ನೋಡಿಕೊಳ್ಳುವ ಮೇಲ್ವಿಚಾರಕರು...ಬುಡನ...ಇವರು ನಮ್ಮ ಗುಮಾಸ್ತರು'

—ಎಂದು ಇಬ್ಬರಿಗೂ ಪರಸ್ಪರ ಪರಿಚಯ ಮಾಡಿಕೊಟ್ಟು—

'ಸ್ವಲ್ಪ ಇವರ ಲೆಕ್ಕ ತೆಗೆದು ನೋಡಿ. ಇವರಿಗೆ ಎಷ್ಟು ಹಣ ಸಂದಾಯ ವಾಗಿದೆಯೋ ಹೇಳಿ'

—ಎಂದರು ಬಾಲಾಜಿರಾಯರು.

ಇದ್ದಕ್ಕಿದ್ದ ಹಾಗೇ ತನ್ನ ಲೆಕ್ಕ, ಹಣಕಾಸಿನ ವಿಚಾರ ಬಂದದ್ದನ್ನು

ನೋಡಿ ಬುಡನಸಾಬಿಗೆ ಗಾಬರಿಯಾಯಿತು. ಹಣಕಾಸಿನ ವಿಚಾರದಲ್ಲಿ ತನ್ನಿಂದೇನಾದರೂ ಹೆಚ್ಚು ಕಡಮೆಯಾಗಿರಬಹುದೇ ಎಂದುಚಿಂತಿಸತೊಡಗಿದ.

ಭೀಮಾಚಾರ್ಯರು ಜನಿವಾರಕ್ಕೆ ಪೋಣಿಸಿದ ಬೀಗದ ಕೈನಿಂದ ಖಾತೆ ಪುಸ್ತಕಗಳನ್ನಿಟ್ಟಿದ್ದ ಮರದ ದೊಡ್ಡ ಪೆಟಾರಿಯ ಬಾಗಿಲನ್ನು ತೆಗೆದು, ಅದರಲ್ಲಿದ್ದ ರೋಜು ಪುಸ್ತಕ ಆಸಾಮಿ ಖಾತೆಗಳ ಪುಸ್ತಕಗಳನ್ನು ತೆಗೆದಿಟ್ಟು ಕೊಂಡು ಬೇರೊಂದು ಕಾಗದದಲ್ಲಿ ಬುಡನ ಸಾಬಿಯ ಲೆಕ್ಕವನ್ನು ತಾಳೆ ನೋಡಿ ಗುರುತು ಹಾಕಲಾರಂಭಿಸಿದರು. ಅವರ ಲೆಕ್ಕಾಚಾರ ಮುಗಿಯುವ ವರೆಗೂ ಯಾರೂ ಮಾತನಾಡಲಿಲ್ಲ. ಹತ್ತು ಹದಿನೈದು ನಿಮಿಷಗಳ ಕಾಲ ಲೆಕ್ಕ ಹಾಕಿ. ಬಳಿಕ ಭೀಮಾಚಾರ್ಯರು—

'ಈಗ ನಾಲ್ಕೈದು ವರ್ಷಗಳ ಖಾತೆ ಪುಸ್ತಕಗಳನ್ನು ನೋಡಿದರೆ ಸರಿಯಾದ ಲೆಕ್ಕ ತಿಳಿಯುತ್ತದೆ. ಬೇಕಾದರೆ ಅದನ್ನೆಲ್ಲಾ ನೋಡಿ ಹೇಳು ತ್ತೇನೆ. ಆದರೆ ಸ್ವಲ್ಪ ನಿಧಾನವಾಗಬಹುದು.'

—ಎಂದರು.

'ಈಗ ಆಸಾಮಿ ಖಾತೆಯಲ್ಲಿ ಏನು ಲೆಕ್ಕ ತೇಲುತ್ತದೆಯೋ ಅದನ್ನು ಹೇಳಿ. ತಪಶೀಲು ಇನ್ನೊಂದು ಸಲ ನಿಧಾನವಾಗಿ ನೋಡಿದರಾಯಿತು.'

—ಬಾಲಾಜಿರಾಯರು ಹೇಳಿದರು.

ಭೀಮಾಚಾರ್ಯರು ಮತ್ತೊಮ್ಮೆ ಲೆಕ್ಕವನ್ನು ನೋಡಿ ತಲೆಕೆರೆದು ಕೊಳ್ಳುತ್ತಾ ರಾಯರತ್ತ ನೋಡಿದರು.

'ಏನು, ಏನು ಸಮಾಚಾರ ಆಚಾರ್ರೇ?'

ಆಚಾರ್ಯರ ನೋಟದ ಅರ್ಥವನ್ನು ಅರಿಯದೆ ಬಾಲಾಜಿರಾಯರು ಕೇಳಿದರು.

'ಬುಡನಸಾಹೇಬರ ಸಂಬಳ ಎಷ್ಟು ಗೊತ್ತು ಮಾಡಿತ್ತೋ ಈ ಲೆಕ್ಕದಲ್ಲಿ ತಿಳಿಯುವುದಿಲ್ಲ. ಅದು ತಿಳಿಯದೆ ಬರೀ ಖರ್ಚೇ ಕಂಡುಬಂದು, ಜಮಾ ಖರ್ಚು ಮಾಡುವುದು ತುಂಬಾ ತೊಡಕಾಗಿದೆ.'

ಹಾಗೇ. ಏಕೊ ಆ ವಿಚಾರವೇ ನನ್ನ ತಲೆಯಲ್ಲಿ ಸುಳಿದಿರಲಿಲ್ಲ. ಈಗಲಾದರೂ ನೀವು ಜ್ಞಾಪಿಸಿದ್ದು ಒಳ್ಳೆಯದಾಯಿತು. ಇಲ್ಲವಾದರೆ ಬುಡನ ಸಾಹೇಬರ ಲೆಕ್ಕದಲ್ಲಿ ಬರೀ ಖರ್ಚೇ ಏರುತ್ತಿತ್ತು. ಸಾಲವಂದಿಗ ಎಂದ

ಸಾಹೇಬರ ತಲೆಯ ಮೇಲೆ ಕಲ್ಲು ಗುಂಡು ಹೊರಿಸಿ ಬಿಸಿಲಿನಲ್ಲಿ ನಿಲ್ಲಿಸಬಹು ದಾಗಿತ್ತು. ಎಂಥ ಒಳ್ಳೇ ಅವಕಾಶ ತಪ್ಪಿಹೋಯಿತು! ಹೋಗಲಿ ಬಿಡಿ. ಈಗ ಅವರ ಲೆಕ್ಕ ಎಷ್ಟು ಆಗಿದೆ?'

'ನಾಲ್ಕು—ಐದು ವರ್ಷಗಳಿಂದ ಹಿಡಿದು ಒಟ್ಟಿಗೆ ಅವರು ತೆಗೆದು ಕೊಂಡಿರುವುದು ಸಾವಿರ ರೂಪಾಯಿನ ಮೇಲಾಗಿದೆ. ಕರಾರುವಾಕಾಗಿ ಹೇಳ ಬೇಕೆಂದರೆ ಸಾವಿರದ ನೂರಾಮುಪ್ಪತ್ತು ರೂಪಾಯಿ. ಆರಾಣೆ ಮೂರು ಕಾಸು.'

'ಕೇಳಿದಿರಾ ಸಾಹೇಬರೇ? ಸರಿಯಾಗಿದೆಯೋ ಆ ಲೆಕ್ಕ?'

—ಭೀಮಾಚಾರ್ಯರು ಹೇಳಿದುದನ್ನು ಕೇಳಿ ಬುಡನಸಾಬಿಯತ್ತ ತಿರುಗಿ ಕೇಳಿದರು ಬಾಲಾಜಿರಾಯರು. ಈ ಮಾತು ಕಥೆಯ ತಲೆ ಬುಡವೇ ಅರ್ಥವಾಗದೆ ದಿಗ್ಭ್ರಮೆಯ ಕಾಡಿನಲ್ಲಿ ಅಲೆಯುತ್ತಿದ್ದ ಬುಡನ—

'ಲೆಕ್ಕ ಪತ್ರ ಎಲ್ಲಾ ನನಗೇನು ಗೊತ್ತು ಬುದ್ಧಿ. ನೀವು ಹೇಳಿದು ಸರಿ'.

—ಎಂದ.

'ತಿಂಗಳ ಲೆಕ್ಕದಲ್ಲಿ ಈ ಹಣ. ತಿಂಗಳಿಗೆ ಎಷ್ಟು ಸಂಬಳ ಆಗುತ್ತದೆ?'

'ಹೆಚ್ಚು ಕಡಮೆ ತಿಂಗಳಿಗೆ ಇಪ್ಪತ್ತು ರೂಪಾಯಿ ಆಗುತ್ತದೆ.'

'ತಿಂಗಳಿಗೆ ಇಪ್ಪತ್ತು ರೂಪಾಯಿ. ಸಾಕೇ ಸಾಹೇಬರೆ?'

'ತಮ್ಮ ಚಿತ್ತ. ತಾವು ಕೊಟ್ಟದ್ದೇ ಪ್ರಸಾದ.'

'ಊಹೂ. ಬಹಳ ಕಡಮೆಯಾಯಿತು. ಇವರು ಮಾಡಿದ ಕೆಲಸಕ್ಕೆ ಇದು ಬಹಳ ಸ್ವಲ್ಪ. ಭಗವಂತರಾವ್. ಕಬ್ಬಿಣದ ಪೆಟ್ಟಿಗೆಯಲ್ಲಿ ಇವರ ಹೆಸರಿನ ಚೀಟಿ ಅಂಟಿಸಿರುವ ಥೈಲಿ ಇದೆ ನೋಡು. ಹೋಗಿ ತೆಗೆದುಕೊಂಡು ಬಾ'

—ಎಂದು ಬಾಲಾಜಿರಾಯರು ಮಗನಿಗೆ ಕಬ್ಬಿಣದ ಪೆಟ್ಟಿಗೆಯ ಬೀಗದ ಕೈ ಕೊಟ್ಟರು. ಭಗವಂತರಾಯ ಒಳಮನೆಯಲ್ಲಿದ್ದ ತಿಜೋರಿಯಿಂದ ದೊಡ್ಡದೊಂದು ರೂಪಾಯಿಗಳ ಥೈಲಿಯನ್ನು ತಂದು ಬಾಲಾಜಿರಾಯರ ಮುಂದಿಟ್ಟ.

'ಇದು ಎಷ್ಟಿದೆ ಎಣಿಸಿ ನೋಡಿ ಆಚಾರ್ರೇ. ಸುಮಾರು ಮೂರು ಸಾವಿರ ರೂಪಾಯಿ ಇರಬೇಕು. ಇದನ್ನು ಅವರ ಸಂಬಳದ ಖಾತೆಗೆ ಸೇರಿಸಿ, ತಿಂಗಳ ಸಂಬಳ ಎಷ್ಟಾಗುತ್ತದೆಂದು ಲೆಕ್ಕ ಹಾಕಿ, ಜಮಾ ಖರ್ಚು ಮುಗಿಸಿ, ಇವರ ಲೆಕ್ಕ ಚುಕ್ತಾ ಮಾಡಿಬಿಡಿ. ಸಾಹೇಬರೇ ಇದನ್ನು

ತೆಗೆದುಕೊಳ್ಳಿ. ಇಂದಿಗೆ ನಮ್ಮ ನಿಮ್ಮ ವ್ಯವಹಾರ ಮುಗಿಯಿತು. ಇನ್ನು ನೀವು ಸ್ವತಂತ್ರರು'

—ಎಂದರು ಬಾಲಾಜಿರಾಯರು.

ಇದ್ದಕ್ಕಿದ್ದಂತೆ ಆ ಮಾತನ್ನು ಕೇಳಿ ಬುಡನಸಾಬಿಗೆ ಸಿಡಿಲು ಹೊಡೆದ ಹಾಗಾಯಿತು. ಒಮ್ಮೆ 'ಇಂದಿನಿಂದ ನೀನು ಸ್ವತಂತ್ರ' ಎಂದ ರಾಯರತ್ತ ಇನ್ನೊಮ್ಮೆ ಭೀಮಾಚಾರ್ಯರು ಎಣಿಸುತ್ತಿದ್ದ ರೂಪಾಯಿಗಳತ್ತ ನೋಡಿದ: ಏನು ಅನಿಸಿತೋ ಏನೋ—

'ಬುದ್ಧಿ ಈ ರೂಪಾಯಿ ನನಗೆ ಬೇಡ. ಅದು ಕಾಲಕಸ. ನಾನೇನು ತಪ್ಪುಮಾಡಿದ್ದರೂ ಮಾಫ್ ಮಾಡಬೇಕು. ತಮ್ಮ ಚಾಕರಿಯಿಂದ ಮಾತ್ರ ತೆಗೆಯಬಾರದು.'

—ಎಂದು ರಾಯರ ಕಾಲು ಹಿಡಿದು ಬೇಡಿದ.

'ಅರೆ—ನಿಮ್ಮನ್ನು ಚಾಕರಿಯಿಂದ ತೆಗೆಯುವ ಮಾತಾಡಲಿಲ್ಲ ಸಾಹೇಬರೇ. ನೀವು ನನ್ನ ಮಾತನ್ನು ಅಪಾರ್ಥಮಾಡಿಕೊಂಡಿರೆಂದು ಕಾಣುತ್ತದೆ. ಈ ಹಣ ಕೊಟ್ಟು ನಿಮ್ಮ ಲೆಕ್ಕ ಚುಕ್ತಮಾಡುತ್ತಿರುವುದು, ನೀವು ನಮ್ಮ ಚಾಕರಿಗಿರಿಯಿಂದ ಮುಕ್ತರಾಗಿ ಸ್ನೇಹಿತರಾಗಿರಬೇಕೆಂದು. ಇಂದಿನಿಂದ ನೀವು ಸ್ವತಂತ್ರರು. ಈ ಹಣ ಇಟ್ಟುಕೊಂಡು ಸ್ವಂತ ಕಂಟ್ರಾಕ್ಟುಮಾಡಿ. ಇಂಜಿನಿಯರ್ ಸಾಹೇಬರಿಗೆ ಹೇಳಿದ್ದೇನೆ. ನನ್ನ ಹೆಸರಿಗಿರುವ, ಈಗ ನೀವು ಕೆಲಸ ಮಾಡುತ್ತಿರುವ ರಸ್ತೆಯ ಕಂಟ್ರಾಕ್ಟನ್ನು ನಿಮ್ಮ ಹೆಸರಿಗೆ ವರ್ಗಾಯಿಸಿಕೊಡಲು ಒಪ್ಪಿದ್ದಾರೆ. ಹೇಗೂ ನಾಲ್ಕು ವರ್ಷ ಪಳಗಿ ಈ ಕೆಲಸದ ಸುಳುಹು, ಹೊಳಹೆಲ್ಲಾ ನಿಮಗೆ ತಿಳಿದಿದೆ. ಆದುದರಿಂದ ಏನೂ ತೊಂದರೆಯಾಗಲಾರದು. ನಾಳಿನಿಂದ ಸ್ವತಂತ್ರವಾಗಿ ಕೆಲಸ ಮಾಡಲಾರಂಭಿಸಿ. ದೇವರು ನಿಮಗೆ ಒಳ್ಳೆಯದನ್ನು ಮಾಡಲಿ. ಹಣಕಾಸಿಗೇನಾದರೂ ಮಧ್ಯೆ ತೊಂದರೆಯಾದರೆ ಬಂದು ತೆಗೆದುಕೊಂಡು ಹೋಗಿ. ನಾನು ಹೇಳಿದ್ದು ತಿಳಿಯಿತೆ. ಆದರೆ ಹಣವನ್ನು ಮರೆತರೂ ಚಿಂತೆಯಿಲ್ಲ, ನಿಯತ್ತು ಬಿಡಬೇಡಿ. ಆಚಾರ್‍ರೇ... ನಾನಿನ್ನು ಸ್ವಲ್ಪ ಮಲಗಲು ಹೋಗುತ್ತೇನೆ'.

—ಎಂದು ಹೇಳಿದವರೇ ರಾಯರು, ಬುಡನಸಾಬಿ ಮರುಮಾತಾಡಲೂ ಅವಕಾಶಕೊಡದೆ, ಮಲಗುವ ಮನೆಯತ್ತ ನಡೆದರು. ರಾಯರು ಬುಡನ

ಸಾಬಿಗೆ ಮರುಮಾತಾಡಲು ಅವಕಾಶ ಕೊಡಲಿಲ್ಲ. ಕೊಟ್ಟಿದ್ದರೂ ಮಾತ ನಾಡುವ ಸ್ಥಿತಿಯಲ್ಲಿರಲಿಲ್ಲ ಬುಡನ ಸಾಬಿ. ಅವನ ಕಣ್ಣುಗಳಿಂದ ಕೃತಜ್ಞತೆಯ ಭಾಷ್ಪ ಧಾರಾಕಾರವಾಗಿ ಹರಿದು ಗಂಟಲು ಬಿಗಿದಿತ್ತು.

ಭೀಮಾಚಾರ್ಯರು ಒಮ್ಮೆ ಬುಡನ ಸಾಬಿ, ಮತ್ತೊಮ್ಮೆ ರೂಪಾಯಿಯ ರಾಸಿಯತ್ತ ನೋಡುತ್ತಾ...

'ಸಾಹೇಬರೇ ನೀವು ಭಾಗ್ಯಶಾಲಿಗಳು. ಈ ದಿನ ನಿಮಗೆ ಲಕ್ಷ್ಮಿ ಒಲಿದಳು'

—ಎಂದರು.

ಭೀಮಾಚಾರ್ಯರ ಮಾತು ಸುಳ್ಳಾಗಲಿಲ್ಲ. ಅಂದಿನಿಂದ ಬುಡನ ಸಾಬಿಗೆ ಲಕ್ಷ್ಮಿ ಒಲಿದಳು. ಮೂರು ನಾಲ್ಕು ವರ್ಷ ಎನ್ನುವುದರೊಳಗಾಗಿ ಆ ಮೂರು ಸಾವಿರ ಮುವ್ವತ್ತು ಸಾವಿರವಾಯಿತು. ಹತ್ತು ವರ್ಷದೊಳಗೆ ಲಕ್ಷದ ಗೆರೆಯನ್ನು ದಾಟಿ ಮುಂದುವರಿಯಿತು.

ಹಳ್ಳಿಗರ ಬಾಯಲ್ಲಿ ಆತ ಮೊದಲು ಬುಡನ್, ಆ ಬಳಿಕ ಬುಡನ್‌ಸಾಬಿ, ಕೊನೆಗೆ ಬುಡನಸಾಹೇಬರು ಆದ. ಹತ್ತಾರು ವರ್ಷಗಳ ಕೆಳಗೆ ನೋಡಿ ದವರು—'ಇವನೇನೇ ಕುಲುಮೆ ಹಸನಾತನ ಮಗ ಬುಡನ್ ಎಂದು ಅಚ್ಚರಿ ಪಡುವಷ್ಟು ಬೆಳೆಯಿತು ಅವನ ಭಾಗ್ಯ.

ಆ ದಿನ ಬುಡನ್ ಸಾಬಿ ರಾಯರಿಂದ ಹಣವನ್ನಷ್ಟೇ ಅಲ್ಲ, ಅವರ ಔದಾರ್ಯ ವನ್ನೂ ಪಡೆದ. ಯಾವಾಗಲಾದರೊಮ್ಮೆ ತನ್ನ ಗಳಿಕೆಯ ಮಾತು ಬಂದಾಗ—

'ಎಷ್ಟಿದ್ದು ಏನು ಫಲ? ರಾಯರು ನನ್ನನ್ನು ಎತ್ತಿ ನಿಲ್ಲಿಸಿ ಮನುಷ್ಯ ನನ್ನಾಗಿ ಮಾಡಿದಹಾಗೆ, ನಾನೂ ಯಾರನ್ನಾದರೂ ಜೀವನದಲ್ಲಿ ಎತ್ತಿ ನಿಲ್ಲಿಸಿದರೇ ಈ ಸಂಪತ್ತಿಗೆ ಸಾರ್ಥಕತೆ.

—ಎಂದು ಚಿಂತಿಸುವನು.

ವೆಂಕಟದಾಸಪ್ಪನವರ ಸ್ನೇಹ ಬಲಿತಮೇಲೆ, ಈ ಮಾತು ಆಗಾಗ ಅವನ ಮನದಲ್ಲಿ ಮೂಡತೊಡಗಿತು. ರಾಯರು ತನ್ನ ಮನೆಯ ಮೇಲೆ ಹೊನ್ನ ಕಳಶವಿಟ್ಟಂತೆ, ತಾನು ಬಡತನದ ಬಾಧೆಗೆ ಸಿಲುಕಿದ ವೆಂಕಟ ದಾಸಪ್ಪನವರಿಗೆ, ಅವರ ಬಡತನ ನಿವಾರಣೆಯಾಗುವಂತೆ ಏನಾದರೂ ಮಾಡ ಬೇಕೆಂದು ಚಿಂತಿಸತೊಡಗಿದ.

ಏನು ಮಾಡಬೇಕು? ಏನಾದರೂ ಮಾಡಲು ವೆಂಕಟದಾಸಪ್ಪನವರು ಅವಕಾಶ ಕೊಟ್ಟರೆ ತಾನೇ?

ಯಾರಿಂದಲೂ ಏನನ್ನೂ ಬಯಸದೆ, ದೇವರಿತ್ತುದನ್ನೇ ಮಹಾಭಾಗ್ಯ ವೆಂದು ನಂಬಿ ನಡೆಯುವ ತೃಪ್ತಿಯ ಪಾತ್ರದಲ್ಲಿ ಅವರ ಬಾಳನದಿ ಪ್ರವ ಹಿಸುತ್ತಿತ್ತು.

ಆ ತೃಪ್ತಿ, ಮಂಟಪದಲ್ಲಿದ್ದ ದೇವೀ ವಿಗ್ರಹದಂತೆಯೇ ಅವರಿಗೆ ತಲೆ ತಲಾಂತರದಿಂದ ಬಂದ ಆಸ್ತಿ; ಅವರ ಪೂರ್ವಜರು ವೆಂಕಟದಾಸಪ್ಪನವರಿಗೆ ಬಿಟ್ಟುಹೋದ ಅಪೂರ್ವ ಸಂಪತ್ತು.

## ೧೦

ವೆಂಕಟದಾಸಪ್ಪನವರಿಗಾಗಿ ಅಷ್ಟೇ ಒದ್ದಾಡಿಕೊಳ್ಳುತ್ತಿದ್ದ ಇನ್ನೊಂದು ಜೀವ ಹಟ್ಟಿ ವೀರಣ್ಣ. ಬುಡನಸಾಬಿಯು ಹಾಗೇ ವೀರಣ್ಣನೂ ಸಮಯ ಬಂದರೆ, ವೆಂಕಟದಾಸಪ್ಪನವರಿಗಾಗಿ ಜೀವಕೊಡಲು ಸಿದ್ಧವಿದ್ದ.

ಬುಡನಸಾಬಿಯ ಸ್ನೇಹ ದೇವಿಯ ಅನುಗ್ರಹವಾದಂತೆ, ವೀರಣ್ಣನ ಸ್ನೇಹ—ವೆಂಕಟದಾಸಪ್ಪನವರಿಗೆ ಬಯಲು ನಾಟಕ ನೀಡಿದ ಕಾಣಿಕೆ.

ನಾಟಕದ ಪ್ರೇಮ ವೀರಣ್ಣ ವೆಂಕಟದಾಸಪ್ಪನವರ ಬಾಳನ್ನು ಸೇರಿಸಿದ ಅಮೃತ ಸೇತು. ಇಬ್ಬರಿಗೂ ನಾಟಕ ಎಂದರೆ ಇನ್ನಿಲ್ಲದಷ್ಟು ಖಯಾಲಿ. ಅದು ಜೀವನದ ಬೇರೆ ಬೇರೆ ರಂಗಗಳಲ್ಲಿದ್ದ ಇಬ್ಬರನ್ನೂ ಒಂದೆಡೆಗೆ ತಂದು ಸೇರಿಸಿತು. ಹಾಗೇ ಸೇರಿದ ಜೀವಗಳನ್ನು ಪಗಡೆಯಾಟ ಒಂದಾಗಿ ಬೆಸೆಯಿತು. ಹಾಗೆ ಒಂದಾದ ಜೀವಗಳಿಗೆ ತನ್ನ ಮಮತೆಯ ಸುವರ್ಣಲೇಪ ಮಾಡಿದವಳು, ವೀರಣ್ಣನ ಹೆಂಡತಿ ಗೌರಮ್ಮ.

ಆ ಸ್ನೇಹ ವೆಂಕಟದಾಸಪ್ಪನವರ ಜೀವನದ ಯೌವನ ಕಾಲದ ಒಂದು ರಮ್ಯ ಅಧ್ಯಾಯ.

ವೀರಣ್ಣ ಒಳ್ಳೆ ಭಾರಿ ಆಳು. ಅಗಲವಾದ ಮುಖ, ಕೂಡು ಹುಬ್ಬು, ಗಲ್ಲಿ ಮೀಸೆ, ಉಗ್ರವಾದ ಕಣ್ಣುಗಳನ್ನು ನೋಡಿದರೆ ಮಕ್ಕಳು ಹೆದರಬೇಕು—ಅಂಥ ಆಳು. ಆಳು ಎಷ್ಟು ರೌದ್ರವೋ ಅವನ ಹೃದಯ ಅಷ್ಟೇ ಸಾತ್ವಿಕ, ಮೃದು. ಶುದ್ಧ ಹೆಂಗರಳು ಸ್ವಭಾವ.

ವೀರಣ್ಣ ಜಾತಿಯಿಂದ ನಾಯಕರಾತನಾದರೂ, ನಡೆನುಡಿಯಿಂದ ತುಂಬಾ ಉತ್ತಮ. ಆತ ಸುಳ್ಳು ಹೇಳಿದುದನ್ನು, ಮೋಸ ಮಾಡಿದುದನ್ನು ಹಳ್ಳಿಯ ಸುತ್ತು ಮುತ್ತ ಯಾರೂ ಕೇಳಿ ಅರಿಯರು. ಗ್ರಾಮ ಪಂಚಾಯತಿಗಳಲ್ಲೂ, ಎಂಥ ವ್ಯಾಜ್ಯದಲ್ಲಾದರೂ ಆತ ಇದು ಸತ್ಯ ಎಂದು ಹೇಳಿದರೆ, ಅದನ್ನು ಅಲ್ಲ ಎನ್ನುವ ಧೈರ್ಯ ಯಾರಿಗೂ ಇರಲಿಲ್ಲ. ಎಂತಲೇ ವೀರಣ್ಣ, ಗ್ರಾಮದಲ್ಲಿ ಬಹುಮಂದಿಗೆ ಬೇಕಾದ ಮಾತಂಭಾರಿ ಕುಳವಾಗಿದ್ದ. ಎಲ್ಲ ಕೆಲಸಕ್ಕೂ ಆತ ಬೇಕು ಎನ್ನುತ್ತಿದ್ದರು ಹಳ್ಳಿಯ ಜನ. ಹಾಗೆಂದು ವೀರಣ್ಣ ಹಳ್ಳಿಯ ಜೀವನದಲ್ಲಿ ಸ್ವಾಭಾವಿಕವಾದ ತಂಟೆ ತಕರಾರುಗಳಲ್ಲಿ ಒಮ್ಮೆಯೂ

ಕೈಹಾಕಿರಲಿಲ್ಲ. ಅವುಗಳಲ್ಲಿ ಆತ ಭಾಗವಹಿಸುವುದೇನು— ದೇವೀಕೆರೆಯ ಗಾಳಿಯಲ್ಲೂ ತಂಟೆ ತಕರಾರು ಸುಳಿಯಬಾರದೆಂದೇ ಆತನ ಇಚ್ಛೆ. ಊರಿಗೆ ಕೆಟ್ಟ ಹೆಸರು ಬರುವ ರೀತಿಯಲ್ಲಿ ಯಾರೂ ನಡೆದುಕೊಳ್ಳಬಾರದು. ಸುತ್ತಲ ಸೀಮೆಗೆಲ್ಲಾ ದೇವೀಕೆರೆ ಸಜ್ಜನ ಸ್ಥಳ ಎಂದು ಹೆಸರಾಗಬೇಕೆಂಬ ಅಭಿಲಾಷೆ ವೀರಣ್ಣನಿಗಿತ್ತು. ತನ್ನ ಹಳ್ಳಿಯ ಬಗ್ಗೆ ಅಷ್ಟು ಅಭಿಮಾನವಿತ್ತು.

ಆ ಅಭಿಮಾನಕ್ಕೆ ಅವನ ಸಹಜವಾದ ಒಳ್ಳೆಯತನ ಕಾರಣವಾದಷ್ಟೇ ತಾನು ಪಾಳೆಯಗಾರನ ಮನೆತನಕ್ಕೆ ಸೇರಿದವನು, ಹಿಂದೆ ತನ್ನ ವಂಶದವರು ದುರ್ಗದ ಪಾಳೆಯಗಾರರಾಗಿದ್ದರು, ಒಂದು ಕಾಲಕ್ಕೆ ದೇವೀಕೆರೆ ತನ್ನ ಮನೆತನದ ಆಳ್ವಿಕೆಗೆ ಸೇರಿತ್ತು ಎಂಬ ಭಾವನೆಯೂ ಕಾರಣವಾಗಿತ್ತು. ಆ ಮಾತಿನಲ್ಲಿ ಎಷ್ಟು ನಿಜವಿತ್ತೋ ಸುಳ್ಳಿತ್ತೋ ಭಗವಂತನಿಗೆ ಗೊತ್ತು. ಆದರೆ ಅದು ಸೂರ್ಯಪ್ರಕಾಶದಷ್ಟೇ ಸತ್ಯ ಎಂದು ವೀರಣ್ಣ ನಂಬಿದ್ದ. ಅದಕ್ಕೆ ಸಾಕ್ಷಿಯಾಗಿ ತನ್ನ ಮನೆತನದಲ್ಲಿದ್ದ ಒಂದು ಕತ್ತಿ, ಒಂದು ಲೋಹ ಕವಚ, ಒಂದು ಹಳೆಯ ಬಂದೂಕವನ್ನು ತೋರಿಸುತ್ತಿದ್ದ. ಅವನ ಮಾತನ್ನು ಜನ ನಂಬಲಿ, ಬಿಡಲಿ, ಅವನ ಎದುರಿಗೇನೋ ನಂಬಿಸಂಪ್ರುತೆಯೋ ತೋರ್ಪಡಿಸುತ್ತಿದ್ದರು. ಅದಕ್ಕಿಂತ ಹೆಚ್ಚಿನದೇನನ್ನೂ ವೀರಣ್ಣ ಜನರಿಂದ ಬಯಸುತ್ತಿರಲಿಲ್ಲ.

ದೇವರು ವೀರಣ್ಣನಿಗೆ ಎಲ್ಲಾ ಸಂಪತ್ತನ್ನೂ ಕೊಟ್ಟಿದ್ದ. ಮನೆಯಿತ್ತು, ತೋಟವಿತ್ತು. ಗದ್ದೆಯಿತ್ತು. ಅಷ್ಟಿಷ್ಟು ನಗದು ಹಣವಿತ್ತು. ಹಳ್ಳಿಯಲ್ಲಿ ಹಿರಿಯನೆಂಬ ಗೌರವವಿತ್ತು. ಆದರೆ ಅವನಿಗಿದ್ದ ಒಂದೇ ಕೊರತೆ— ಮಕ್ಕಳಿಲ್ಲದ್ದು. ಮಕ್ಕಳೇನು, ಅವನನ್ನು ಮದುವೆಯಾದ ಹೆಂಡಿರೇ ಬಹುಕಾಲ ಬದುಕುತ್ತಿರಲಿಲ್ಲ. ಮೊದಲ ನಾಲ್ಕು ಜನ ಹೆಂಡಿರು ಸತ್ತ ಮೇಲೆ ಮತ್ತೆ ಮದುವೆಯನ್ನೇ ಮಾಡಿಕೊಳ್ಳಬಾರದು ಎಂದಿದ್ದ ವೀರಣ್ಣ. ಅವನು ಬೇಡ ಅಂದರೆ ಹಳ್ಳಿಯವರು ಬಿಡಬೇಕಲ್ಲ. ಇಲ್ಲದ ಒತ್ತಾಯ ಮಾಡಿ, ಐದನೆಯ ಬಾರಿಯೂ ಮದುವೆ ಮಾಡಿಸಿದ್ದರು— ಅವನ ಅರವತ್ತನೆಯ ವಯಸ್ಸಿನಲ್ಲಿ. ವೀರಣ್ಣನ ಐದನೇ ಹೆಂಡತಿ ಗೌರಮ್ಮ.

ಗೌರಮ್ಮ ಹೆಸರಿಗೆ ತಕ್ಕ ಹೆಣ್ಣು. ಬಡವರ ಮನೆಯಲ್ಲಿ ಜನಿಸಿದ್ದರೂ ಶ್ರೀಮಂತರೀತಿ ಅವಳಿಗೆ ರಕ್ತಗತವಾಗಿ ಬಂದಿತ್ತು. ಉಳಿದವರಲ್ಲಿ ದುರಹಂಕಾರ

ವಾಗಿ ಕಾಣಬಹುದಾಗಿದ್ದ ಶೀವಿ. ಅವಳ ಮೊಗದ ಸೌಮ್ಯ ಸೌಂದರ್ಯದಲ್ಲಿ ಗಾಂಭೀರ್ಯವಾಗಿ ಕಂಡು. ಅವಳನ್ನು ಕಂಡವರು, ಒಂದೇಡು ಬಾರಿ ಅವಳೊಂದಿಗೆ ಮಾತನಾಡಿದವರು, 'ಇದು ದೇಶಾ ಆಳೋಕೆ ಹುಟ್ಟಿದ ಹೆಣ್ಣು. ಅದೃಷ್ಟದಲ್ಲಿ ಎಲ್ಲೋ ಸ್ವಲ್ಪ ಕೊರತೆಯಾಗಿ ವೀರಣ್ಣನ ಹೆಂಡತಿಯಾಗಿದ್ದಾಳೆ.' ಎನ್ನುತ್ತಿದ್ದರು. ತನ್ನ ಹೆಂಡತಿಯ ಬಗ್ಗೆಯೂ ವೀರಣ್ಣನಿಗೆ ಅಷ್ಟೇ ಅಭಿಮಾನವಿತ್ತು. ಇಳಿ ವಯಸ್ಸಿನಲ್ಲಿ ಮನೆಗೆ ಬಂದ ಪ್ರಾಯದ ಹೆಣ್ಣು ಎಂಬ ಕಾರಣಕ್ಕಾಗಿಯೇ ಅಲ್ಲ. ಅವಳ ಗುಣಕ್ಕಾಗಿ ವೀರಣ್ಣ ಅವಳನ್ನು ಅಷ್ಟು ಒಪ್ಪ ಇಟ್ಟುಕೊಳ್ಳುತ್ತಿದ್ದ.

ಗೌರಮ್ಮನಿಗೂ ಅಷ್ಟೇ ಮುದಿ ಗಂಡ ಎಂದು ವೀರಣ್ಣನ ಬಗ್ಗೆ ತಾತ್ಸಾರವಿರಲಿಲ್ಲ. 'ನಾನು ಚೆಲುವೆ ಬೇಕಾದರೆ ಇವನನ್ನು ನನ್ನ ಐದು ಬೆರಳಿನಸುತ್ತ ಆಡಿಸಬಲ್ಲೆ' ಎಂಬ ಅಸಡ್ಡೆ ಇರಲಿಲ್ಲ. ವೀರಣ್ಣ ಅವಳಿಗೆ ಅನುರೂಪನಾದ ಪತಿಯಲ್ಲದಿದ್ದರೂ, ತಾನು ಅವನಿಗೆ ಅನುರೂಪಳಾದ ಪತ್ನಿಯಾಗಲು ಯತ್ನಿಸುವಳು. ಅವನ ಇಷ್ಟಾನಿಷ್ಟಗಳನ್ನರಿತು, ಅವನ ಹವ್ಯಾಸ—ಹಂಬಲಗಳನ್ನು ಅರ್ಥಮಾಡಿಕೊಂಡು, ತನ್ನಿಂದ ಅವನ ಸುಖ— ಶಾಂತಿಗೆ ಎಳ್ಳುಕಾಳಿನಷ್ಟೂ ಕೊರತೆ ಬರದಂತೆ ನೋಡಿಕೊಳ್ಳುವಳು.

ಅವಳ ಈ ಪತಿಭಕ್ತಿ ಎಲ್ಲರಿಗೂ ಪ್ರಿಯವಾಗಿದ್ದರೂ, ಹಳ್ಳಿಯ ವೃದ್ಧೆಯರೇನೋ—'ಏನೇ ಗೌರಿ ಗಂಡ ಎಂದರೆ ಎಷ್ಟು ಪರದಾಡುತ್ತೀಯೋ? ಆ ಮುದಿ ಗಂಡನಿಗೇ ಇಷ್ಟು. ಇನ್ನು ಹುಡುಗ ಗಂಡ ಸಿಕ್ಕಿದ್ದರೆ ಇನ್ನೆಷ್ಟು ಕುಣಿಯುತ್ತಿದ್ದೆಯೋ?' ಎಂದು ಕುಚೋದ್ಯ ಮಾಡುವರು.

ಗೌರಿಯೂ ಆ ಮಾತಿನಿಂದ ಅಸಮಾಧಾನ ಮಾಡಿಕೊಳ್ಳದೆ—

'ಹುಡುಗ ಗಂಡನ ಸಂಸಾರ ಬೋ ಸುಲಭ ಕಣಮ್ಮಾ, ಇಂಥೋರನ್ನ ಕಟ್ಟಿಕೊಂಡು ಸೈ ಅನ್ನಿಸಿಕೊಳ್ಳೋದು ಬಾಳ ಕಷ್ಟ'

—ಎನ್ನುವಳು.

'ಏಕೆ?'

—ಅವಳನ್ನು ಕುಚೋದ್ಯಮಾಡಿದ ವೃದ್ಧೆ ಅವಳ ಮಾತಿನ ಅರ್ಥ ತಿಳಿಯದೆ ಕೇಳುವಳು:

'ಹೆಂಗಸಿನ ಮೋಕಾನೇ ಕಾಣದೋರು. ಹೇಗೋ, ಏನೋ, ಬೇಡಾನೇ

ಏನ್ಮಾಡಿದ್ರೂ ಚಂದಾನೇ ಅಂತಾನೆ. ಅಂಥೋರ್ನ ಒಪ್ಸೋದು ಭೋ ಸಲೀಸು. ಆದ್ರೆ ನನಗಿಂತ ಚೆಂದುಳ್ಳೋರು ನಾಕು ಜನಾನ ಕೇಡವ್ರೆ ಇವ್ರು. ಏಗಿದ್ರೂ ಏನ್ಮಾಡಿದ್ರೂ ಒಪ್ಸಾದು ಕಷ್ಟ. ಏನಾಡಿದ್ರೂ ಮೊದ್ಲೆಣ್ತಿ ಹಾಗೆ ವಿಶ್ವಾಸ ಇಲ್ಲ, ಎರಡನೆಯೋಳಿಂಗೆ ರೂಪ ಇಲ್ಲ, ಮೂರನ್ನೋಳಿಂಗೆ ಗುಣ ಇಲ್ಲ; ನಾಲ್ಕನೆಯೋಳಿಂಗೆ ಸ್ವಾವ ಮಾಡಾಕಿಲ್ಲ ಅಂತಾರೆ. ಇಂಥೋರ್ನ ಕಟ್ಕೊಂಡು ನೀಗೋದು ಕಷ್ಟ ಅಲ್ವಾ. ಮೊದಲ ಹೆಣ್ತಿ ಆದೋಳ್ಗೆ ಐದ್ನೆ ಹೆಣ್ತಿ ಆದೋಳ ಕಷ್ಟ ಏನು ಗೊತ್ತು?'

—ಎನ್ನುವಳು ಗೌರಿ ನಗುತ್ತಾ.

'ಭಲೆ ಹೆಣ್ಣೆ! ಇಷ್ಟು ಮಾತು ಕಲಿತೋಳಿಗೆ ಗಂಡನ್ನ ಮೆಚ್ಸೋದು ಕಷ್ಟಾನೇ?'

—ಎನ್ನುವರು ತಾವೂ ಅವಳ ನಗುವಿನೊಂದಿಗೆ ಬೆರೆತು. ಕ್ರಮೇಣ ನಗು ಮರೆಯಾಗಿ, ನಗುವಿದ್ದಲ್ಲಿ ಅಭಿಮಾನ ಮೂಡುವುದು.

ಹಗಲು ಹೊತ್ತಾರೆ ಎದ್ದರೆ ರಾತ್ರಿಯವರೆಗೂ ಒಂದೇ ಸಮನೆ ದುಡಿಯುವಳು ಗೌರಮ್ಮ. ಮನೆಗೆಲಸ ಒಂದೇ ಏನು, ಗಂಡನ ಎಲ್ಲ ವ್ಯವಹಾರಗಳನ್ನೂ ತಾನೇ ತೂಗಿಸಿಕೊಂಡು ಹೋಗುವಳು. ಎಷ್ಟು ಕೆಲಸ ಮಾಡಿದರೂ ದಣಿವು ಕಾಣದ ಶಕ್ತಿ, ಬೇಸರ ಕಾಣದ ಉತ್ಸಾಹ ಅವಳಲ್ಲಿತ್ತು. ಆ ವಿರಾಮವಿಲ್ಲದ ದುಡಿತದಲ್ಲಿ ಅವಳು ಬಯಸುತ್ತಿದ್ದ ಒಂದೇ ಒಂದು ಸುಖ— ಪಗಡೆಯಾಟ. ರಾತ್ರಿ ಎಷ್ಟು ಹೊತ್ತಿಗೆ ಕೆಲಸ ಮುಗಿದರೂ, ಹೊತ್ತು ಎಷ್ಟೇ ಆಗಿದ್ದರೂ ಕಡೆಯ ಪಕ್ಷ ಒಂದೇ ಒಂದು ಆಟ ಹೂಡಿ ಪಗಡೆಯ ಆಟವನ್ನಾದರೂ ಆಡಲೇ ಬೇಕು. ಅದಿಲ್ಲದಿದ್ದರೆ ಅವಳಿಗೆ ನಿದ್ರೆ ಬರುತ್ತಿರಲಿಲ್ಲ; ದುಡಿತದಿಂದ ದಣಿದ ಮೈ ಹಗುರಾಗುತ್ತಿರಲಿಲ್ಲ.

ಪಗಡೆ ಆಟದಲ್ಲಿ ಅವಳು ಎಷ್ಟು ಚುರುಕೋ, ವೀರಣ್ಣ ಅಷ್ಟು ಮಂದ. ಆ ಆಟದ ಬಗ್ಗೆ ಅವಳಿಗಿದ್ದ ಹುಚ್ಚು ಉತ್ಸಾಹದ ಸುಳಿಯಲ್ಲಿ ಸಿಲುಕಿ, ವೀರಣ್ಣನೂ ಪಗಡೆಯಾಡುವುದನ್ನು ಕಲಿತಿದ್ದ. ದಿನವೂ ಪಗಡೆಯಾಡಲು ಕುಳಿತುಕೊಳ್ಳುವಾಗ ಹೇಗಾದರೂ ಮಾಡಿ ಅವಳನ್ನು ಸೋಲಿಸಲೇ ಬೇಕು ಎಂದು ಹುರುಪಿನಿಂದ ಕುಳಿತುಕೊಳ್ಳುತ್ತಿದ್ದ. ಆದರೆ ಗೆದ್ದದ್ದು ಮಾತ್ರ ಒಂದು ದಿನವೂ ಇಲ್ಲ. ಎಷ್ಟೋ ದಿನ ಅವಳನ್ನು ಸೋಲಿಸಲೇ ಬೇಕು ಎಂಬ

ಘಲದಿಂದ ಹಗಲು ಹರಿಯುವವರೆಗೂ ಅವರು ಆಟವಾಡಿದ್ದುಂಟು. ಸಾಲು ಸೋಲಿನಿಂದ–ರೇಗಿ ದಾಳಗಳನ್ನು ಸವೆಯುವಂತೆ ಉಜ್ಜಿ, ಒಡೆಯುವಷ್ಟು ಜೋರಾಗಿ ಹಾಕುತ್ತಿದ್ದ ವೀರಣ್ಣ. ಆದರೆ ಅದು ಏಕೋ ಏನೋ, ದಾಳಗಳಿಗೂ ಅವನಿಗೂ ಋಣಾನುಬಂಧ ಕೂಡಿ ಬಂದಿರಲಿಲ್ಲವೋ ಏನೋ. ಏನೇನು ಮಾಡಿದರೂ, ಇನ್ನೇನು ಅವಳು ಸೋತಳು ಎನ್ನುವ ಸ್ಥಿತಿ ಬಂದಾಗಲೂ, ಇವನದು ಒಂದೇ ಕಾಯಿ ಉಳಿದು, ಅವಳದು ಒಂದೆರಡು ಜೊತೆ ಇದ್ದಾಗಲೂ—ಕೊನೆಗೆ ವಿಜಯಮಾಲೆ ಅವಳಿಗೇ. ಏನಾದರೂ ದ್ಯೂತಲಕ್ಷ್ಮಿ ಅವನಿಗೆ ಒಲಿಯುತ್ತಿರಲಿಲ್ಲ. ಹಾಗೆ ಹುರುಪಿನಿಂದ ಆಡಿ ಸೋತಾಗ, ದಾಳ ಕಾಯಿಗಳನ್ನು ಚೆಲ್ಲಾಪಿಲ್ಲಿಯಾಗಿ ತೂರುತ್ತಿದ್ದ; ಹಾಸನ್ನು ಕಿತ್ತು ಒಗೆಯುತ್ತಿದ್ದ. ಸುತ್ತಲೂ ನಾಲ್ಕು ಮನೆಗೆ ಕೇಳಿಸುವಷ್ಟು ಕೂಗಾಡುತ್ತಿದ್ದ. ಏನಾದರೂ ಆಟದಲ್ಲಿ ಸೋಲದ ಹೆಂಡತಿಯನ್ನು ಹಿಡಿದುಕೊಂಡು ಹೊಡೆಯಲು ಹೋಗುತ್ತಿದ್ದ. ಎಷ್ಟು ರೇಗಿ, ಉನ್ಮತ್ತ ಸ್ಥಿತಿಗೆ ಬಂದಾಗಲೂ ಗೌರಿ ಮುಗುಳುನಗೆ ನಗುತ್ತಾ—

'ನಾನು ಆಟದಲ್ಲಿ ಗೆದ್ದರೆ ಏನಾಯ್ತು, ನನ್ನ ಮನಸ್ಸು ನಿಮಗೆ ಸೋತಿರೋದು ಸುಳ್ಳೆ?'

—ಎಂದಾಗ, ಅವನ ನೆತ್ತಿಗೇರಿದ ಸಿಟ್ಟಿನ ಪಿತ್ತ ಇಳಿದು—

'ನೀನೇನೋ ಆ ದಾಳಕ್ಕೆ ಮಾಟಮಾಡಿದೀಯಾ. ನಿನ್ನ ಕೈಯಾಗೆ ಉರುಳಿದಂಗೆ ಅವು ನನ್ಕೈಯಾಗೆ ಉರುಳೊಲ್ಲಾನ್ತವೆ. ಎಷ್ಟಾದರೂ ನಿನ್ದು ಹೂವಿನಂಥ ಕೈ. ಅದ್ಕೆ ದಾಳಾನೂ ನಿನ್ನ ಮಾತು ಕೇಳ್ತವೆ.'

—ಎಂದು, ಆಟದಲ್ಲಿ ಸೋತಂತೆ, ಮಾತಿನಲ್ಲೂ ಸೋತು, ತನ್ನ ವಶವಾದ ಅವಳ ಮೈಯಲ್ಲಿ ಆಟದಲ್ಲಿ ಕಾಣದ ಗೆಲುವನ್ನು ಕಾಣುವನು.

ದಿನದಿನವೂ ಆಟದಲ್ಲಿ ಸೋತ ವೀರಣ್ಣನ ಹೃದಯ—

'ಒಂದು ದಿನನಾದ್ರೂ ಈ ಲೌಡಿ ಸೋತದ್ನ ಕಾಣಬೇಕು'

—ಎಂದು ಹಾರೈಸುವುದು.

'ಗೆದ್ದು ಇಷ್ಟು ಕುಣೀತಾಳೆ, ಸೋತಾಗೇನ್ಮಾಡ್ತಾಳೋ ನೋಡ್ಬೇಕು'

—ಎಂದು ಸೋಲಿನ ಅಪಮಾನದಿಂದ ಕೆಂಪೇರಿದ ಅವಳ ಮುಖವನ್ನು ಕಾಣಬಯಸುವುದು.

ವೀರಣ್ಣನ ಈ ಹಾರೈಕೆ, ಬಯಕೆಯನ್ನು ತೀರಿಸುವ ಪುಣ್ಯ ವೆಂಕಟ ದಾಸಪ್ಪನದಾಯಿತು.

ಪಗಡೆಯಾಟದ ಛಲವಿಲ್ಲದಿದ್ದರೆ, ನಾಟಕದ ಮನೆಯಲ್ಲಿ ಆರಂಭವಾದ ಅವರಿಬ್ಬರ ಸ್ನೇಹ ಮನೆಯಲ್ಲಿ ಬೆಳೆಯುತ್ತಿರಲಿಲ್ಲ.

ಗೌರಮ್ಮನಿಗೆ ಪಗಡೆ ಎಂದರೆ ಎಷ್ಟು ಹುಚ್ಚೋ, ವೀರಣ್ಣನಿಗೆ ನಾಟಕ ಎಂದರೆ ಅಷ್ಟೇ ಹುಚ್ಚು. ಮನೆ, ಹೊಲ, ಹೆಂಡತಿ ಅಂತ ಒಂದು ಬಂಧನ ಇರದೆ ಹೋಗಿದ್ದರೆ ಇಪ್ಪತ್ತು ನಾಲ್ಕು ಗಂಟೆಗಳ ಕಾಲವೂ ನಾಟಕದ ಮನೆಯಲ್ಲೇ ಇದ್ದು ಬಿಡುತ್ತಿದ್ದನೇನೋ. ವೀರಣ್ಣನಿಗೆ ಹಾಡಲು ಬರದು, ನಾಟಕದಲ್ಲಿ ಅಭಿನಯಿಸಲೂ ಬರದು. ಆದರೂ ಶ್ರುತಿಪೆಟ್ಟಿಗೆ, ಪಿಟೀಲು, ಮದ್ದಳೆಗಳ ಧ್ವನಿ ಕೇಳಿದರೆ, ನಾಗರಹಾವಿನೆದುರು ಪುಂಗಿ ಬಾರಿಸಿದಂತಾಗಿ, ಜಗತ್ತನ್ನೂ ಮರೆತು, ನಾಟಕ ಕಲಿಸುವ ಅಯ್ಯನವರು ನಟರಿಗೆ ಅಭಿನಯ ಮಾಡಿ, ಹೇಳಿಕೊಡುವುದನ್ನೇ ಕೇಳುತ್ತಾ ಕುಳಿತುಬಿಡುವವನು.

ಅಲ್ಲಿ, ನಾಟಕದ ಮನೆಯಲ್ಲಿ, ವೀರಣ್ಣನಿಗೂ ವೆಂಕಟದಾಸಪ್ಪನವರಿಗೂ ಮೊದಲ ಪರಿಚಯವಾಯಿತು.

# ೧೧

ಆವರಿಬ್ಬರಿಗೂ ಪರಿಚಯವಾದ ಕಾಲದಲ್ಲಿ ವೆಂಕಟದಾಸಪ್ಪ ಒಳ್ಳೆ ಪಡ್ಡೆ ಯುವಕ. ಮೀಸೆ ಕಪ್ಪಾಗುವ ಪ್ರಾಯ. ಆತನಿಗೂ ನಾಟಕ ಅಂದರೆ ವೀರಣ್ಣನಷ್ಟೇ ಹುಚ್ಚು. ನಾಟಕದ ಅಭ್ಯಾಸದ ಕಾಲ ಶುರುವಾಗಿದು. ಆಟ್ಟ ಹಾಕುವ ಕಾಲ ಹತ್ತಿರವಾಯಿತು ಎಂದರೆ ಇವರೂ ಊಟ, ನಿದ್ರೆಗೂ ಮನೆಗೆ ಹೋಗದೆ, ತಾವೂ ಅಂಗಡಿ ಮನೆಯಿಂದ ಅಷ್ಟು ಪುರಿ, ಖಾರದ ಸಾಮಾನು ತರಿಸಿ ತಿಂದು, ನೀರು ಕುಡಿದು ನಾಟಕದ ಮನೆಯಲ್ಲೇ ಬಿಡಾರ ಹೂಡುವರು. ಆಗ ತಲೆಗೇರಿದ ಪಿತ್ತ, ನಾಟಕ ಮುಗಿದ ಮರುಹಗಲೇ ಇಳಿಯುತ್ತಿದ್ದುದು. ನಾಟಕದಲ್ಲಿ ಅಭಿನಯಿಸುವವರಿಗೆ ಅವರ ಪಾತ್ರಾಭಿನಯದ ಯೋಚನೆ. ಆದರೆ, ಇವರಿಬ್ಬರಿಗೂ ಅವರ ಆಜೂಬಾಜುವಾರಿ ನೋಡಿಕೊಳ್ಳುವ ಯೋಚನೆ. ಬಣ್ಣ ತಂದು ಕೊಡುವುದು, ಬಟ್ಟೆ ಹೊದಿಸುವುದು, ಗೆಜ್ಜೆ ಕಟ್ಟುವುದು, ಪಂಜಿಗೆ ಹಾಕಲು ರಾಳ ತರುವುದು. ಚಳ್ಳಕೆರೆಯಿಂದ ಬಣ್ಣದ ಪರದೆ ತರುವುದು, ನಟರಿಗೆ ಹಾಡಿ ಹಾಡಿ ಗಂಟಲು ಬಿದ್ದು ಹೋಗದ ಹಾಗೆ ಮೆಣಸಿನ ಕಷಾಯ. ಬಾದಾಮಿಹಾಲಿನ ಸರಬರಾಜು ಮಾಡುವುದು—ಹೀಗೆ ನೂರೆಂಟು ಯೋಚನೆ. ನಾಟಕಕ್ಕೆ ಪಿಟೀಲು ಮದ್ದಳೆಯಷ್ಟೇ ಇವರೂ ಅವಶ್ಯಕವಾಗಿದ್ದರು.

ಮೊದಮೊದಲು ವೆಂಕಟದಾಸಪ್ಪನಿಗೂ, ದೇವೀಕೆರೆ ನಾಟಕ ಮಂಡಲಿಗೂ ಇದ್ದ ಸಂಬಂಧ ಇಷ್ಟೇ. ಆದರೆ ಒಂದು ಘಟನೆ ನಡೆದು, ಅದುವರೆಗೂ ಬರೀ ಪ್ರೀತಿಯ 'ದಾಸಣ್ಣ' ಆಗಿದ್ದ ವೆಂಕಟದಾಸಪ್ಪ 'ದಾಸಣಯ್ಯ' ನವ ರಾದರು.

ಒಮ್ಮೆ ಜಾತ್ರೆಯ ಕಾಲದಲ್ಲಿ ಹಿಂದೆ ಯಾವಾಗಲೂ ಅಭಿನಯಿಸುತ್ತಿದ್ದ ಚೋರಕಥೆ, ಕರಿಭಂಟನ ಕಾಳಗ ಮೊದಲಾದ ಪುರಾಣ ನಾಟಕಗಳನ್ನು ಬಿಟ್ಟು, ಯಾವುದಾದರೂ ಹೊಸ ನಾಟಕ ಆಡಬೇಕು ಎನಿಸಿತು.

'ಇದೇನಣ್ಣಾ— ವರ್ಷವರ್ಷಾನು ಒಂದೇ ಆಟ. ಬೇಜಾರಾಗೋಗದೆ. ಈ ವರ್ಷ ಹೊಸ್ದು ಯಾವುದಾದರೂ ಆಟ ಕೊಡಿಸ್ಬೇಕು.'

—ಎಂದು ಹೆಣ್ಣು ಪಾತ್ರದ ಚೆಲುವಾಚಾರಿ ವಿಷಯವನ್ನು ಮಂಡಿಸಿದ.

'ಹೌದು...ಹೌದು... ಹಾಡಿದ್ದೇ ಹಾಡೋ ಕಿಸಬಾಯಿದಾಸ ಎಂತ

ಕೇಳಿದ್ದೇ ಕೇಳಿ ಜನಕ್ಕೂ ಬೇಜಾರಾಗಿದೆ'

—ಎಂದು ವೀರಣ್ಣ ಉತ್ಸಾಹದಿಂದ ಚೆಲುವಾಚಾರಿಯ ಅಭಿಪ್ರಾಯ ವನ್ನು ಸಮರ್ಥಿಸಿದ.

'ಅದೇನೋ ನಿಜಾನೆ— ಆದರೆ ಹೊಸ ಆಟ ಮಾಡಿಸೋದು ಕಷ್ಟ ಆಗ್ತದೆ. ವರ್ಷ ವರ್ಷ ಆಡೋ ಆಟದ ಮಾತನ್ನೇ ಮರತ್ಬಿಡ್ತಾರೆ. ಇನ್ನು ಹೊಸ ಆಟದ ಮಾತುಗಳು ಇವರಿಗೆ ಬಾಯಿಪಾಟ ಆದೀತೇ'

—ಎಂದು ನಾಟಕ ಕಲಿಸುವ ಅಯ್ಯ ಹೊಸ ನಾಟಕ ತೆಗೆದುಕೊಳ್ಳು ವುದಕ್ಕೆ ಸಂಶಯ ಸೂಚಿಸಿದ.

'ಎಷ್ಟೆಷ್ಟು ಕಂಟಪಾಟ ಮಾಡಿ ಒಪ್ಸಿಸಿದ್ರೂ ನಿನ್ನ ಒಪ್ಸಿಸೋದಾಗಾಕಿಲ್ಲ.. ನಿನ್ನ ಒಪ್ಸಿಸೋದು, ಕೆರೆ ಅಂಗಳದ ಕಲ್ಲು ಬಸವನಿಗೆ ಹುಲ್ಲು ತಿನ್ನಿಸೋದೂ ಎರಡೂ ಒಂದೇ'

—ರಾಜಾ ನಾಟಕದ ಜೋರಯ್ಯ ಅಯ್ಯನ ಮೇಲೆ ಕೋಪ ಏರಿಸಿದ

'ಹೊಸ ನಾಟಕ ಕಲಿಬೇಕು ಅಂದ್ರೆ ಕಷ್ಟ ಪಡಬೇಕು. ಕಷ್ಟ ಬೇಡ ಸುಖ ಬೇಕು ಅಂದರೆ ಆಗುತ್ತದೆಯೋ? ಹೇಗೂ ಒಂದು ತಿಂಗಳ ಅವಕಾಶವಿದೆ. ಯಾವ ನಾಟಕ ಅನ್ನುವುದು ನಿಶ್ಚಯವಾದರೆ, ಹೇಗಾದರೂ ಅಭ್ಯಾಸಮಾಡಿ ಆಡಬಹುದು. ಯಾವುದಾದರೂ ನಾಟಕ ಇದ್ದರೆ ಹೇಳಿ?'

—ಎಂದು ವೆಂಕಟದಾಸಪ್ಪ ವಿಷಯವನ್ನು ವಾಗ್ವಾದದ ಮುಖದಿಂದ ಕಾರ್ಯಶೀಲತೆಯತ್ತ ಮುಂದುವರಿಸಿದರು.

'ಅದು ಗಂಡಸು ಆಡೋ ಮಾತು. ಹೊಸ ನಾಟಕಾಂದ್ರೆ ಏನು ಬ್ರಹ್ಮವಿದ್ಯೇನಾ? ಮನಸ್ಸಿದ್ದರೆ ಮೂರುಲೋಕ'.

—ಎಂದು ಚೆಲುವಾಚಾರಿ ವೆಂಕಟದಾಸಪ್ಪನವರ ಮಾತನ್ನು ಮೆಚ್ಚಿದ.

'ಹಂಗಾದ್ರೆ... ಕೋಡೀಹಳ್ಳಿಯೋರು ಶಿವರಾತ್ರಿಗೆ ಹೊಸ ಆಟ ಕೊಡಿಸಿದ್ದರು—ಮನ್ಮಥ ವಿಜಯ ಅಂತ. ನಾನೂ ಆಟ ನೋಡಾಕೆ ಹೋಗಿದ್ದೆ. ಭಾರಿ ಪಸಂದಾಗಿತ್ತು. ಹಾಡುಗಳು ಕೇಳಾಕೆ ಬೋ ಇಂಪು. ಅದ್ನೆ ಯಾಕೆ ನಾವೂ ಕೊಡಿಸಬಾರದು'.

—ಎಂದು ಸುತ್ತ ಮುತ್ತಲ ಹಳ್ಳಿಗಳಲ್ಲಿ, ಎಂದೆಂದು ಯಾವ ಯಾವ ನಾಟಕ ಆಯಿತು, ಅದು ಹೇಗಿತ್ತೆಂಬುದನ್ನು ಪ್ರತ್ಯಕ್ಷ ಅನುಭವದಿಂದ ಬಲ್ಲ

ವೀರಣ್ಣ ಸಲಹೆ ಮಾಡಿದ.

ಎಲ್ಲರೂ ಅದಕ್ಕೆ ಒಪ್ಪಿದರು. ಅಯ್ಯನವರು ಕೋಡಿಹಳ್ಳಿಗೆ ಹೋಗಿ ಆ ನಾಟಕ ಬರೆದುಕೊಂಡು ಬರಬೇಕೆಂದೂ, ಅದನ್ನೇ ಆಡುವುದೆಂದೂ ನಿಶ್ಚಯಿಸಿದರು.

ಆ ದಿನವೇ ಅಯ್ಯ ಕೋಡೀಹಳ್ಳಿಗೆ ಪ್ರಯಾಣಮಾಡಿ, ಎರಡು ದಿನ ಬಿಟ್ಟುಕೊಂಡು ಬರಿಗೈಲಿ ವಾಪಸು ಬಂದ.

'ಯಾಕಯ್ಯ ನಾಟಕ ಸಿಕ್ಕಲಿಲ್ಲವೇ?'

—ಜೋಲು ಮೋರೆಯನ್ನು ಹಾಕಿಕೊಂಡು ಬಂದ ಅಯ್ಯನನ್ನು ನೋಡಿ ಜಿಲುಮಾಚಾರಿ ಕೇಳಿದ.

'ಊಹೂ',

'ಯಾಕೆ, ಅವರ್ತಾವ ನಾಟಕ ಇರ್ಲಿಲ್ವಾ'

'ಇತ್ತು ಕಣಣ್ಣ......'

'ಮತ್ತೆ......'

'ಕೊಡಾಕಿಲ್ಲ ಅಂದ್ರು... ಏನೋ ನಾಟಕ ಕೊಟ್ರೆ ಅಪ್ಪಪ್ಪನ ಮನೆ ಗಂಟು ಕಳೆದುಕೊಳ್ಳೋಹಂಗೆ. ಕೋಡಿಹಳ್ಳಿ ಅಯ್ಯ ಮಹಾ ಪೊಗರಿನ ಮನುಷ್ಯ—'ನಾಟಕಾ ಕಡಾ ಕೇಳೋಕೆ ನಾಚಿಕೆ ಆಗಾಕಿಲ್ವಾ? ಹೊಸ ಆಟ ಆಡ್ಬೇಕೂಂತ ಇದ್ರೆ ನಮ್ಮಂಗೇ ಹೊಸ್ದು ಬರಿಸಿಕೊಳ್ಳಿ. ಇಲ್ದಿದ್ರೆ ದಿನಾ ಉಂಡೂಟಾನೇ ಉಣ್ಣಿ' ಅಂದ. ಕೈತೋರಿಸಿ ಅವಲಕ್ಷಣ ಅನ್ನಿಸಿಕೊಂಡಂಗಾಯ್ತು.'

'ಅಷ್ಟು ಧಿಮಾಕೇ ಆ ಬಡ್ಡಿ ಹೈದನಿಗೆ? ನೀನಾಗೋಹೊತ್ಗೆ ಆ ಮಾತನ್ನಿಸಿಕೊಂಡು ಸುಮ್ಗೆ ಬಂದೆ. ಬುಲ್ಡೀಗೆ ಬಿಸಿನೀರು ಕಾಸಿದ್ರೆ ಸೊಕ್ಕಿಳಿದಿರೋದು ಮಗನಿಗೆ'.

—ಬೋರಯ್ಯ ಅಯ್ಯ ಹೇಳಿದುದನ್ನು ಕೇಳಿ ಕೆರಳಿ ಹೇಳಿದ.

'ಮೊದಲು ಕೇಳೋಕೆ ಹೋದ್ದು ನಮ್ಮ ತಪ್ಪು. ಅವನ ಬಾಕ್ಲಿಗೆ ಹೋದಮ್ಯಾಲೆ ಅಂದಂಗನ್ನಿಸಿಕೊಳ್ಳಬೇಕು. ಏನ್ಮಾಡಾಕಾಯ್ತದೆ, ಜಗಳ ಆಡ್ಕೊಂಡು ಬಂದ್ರೆ ಏನಾದಂಗೆ?'

—ಎಂದು ಅಯ್ಯ ನಿರಾಶೆಯಿಂದ ಹೇಳಿದ.

'ಹಂಗಾದ್ರೆ ಹೊಸ ಆಟ ಕೂಡಿಸೋ ಯೋಜನೆ ಬಿಟ್ಟಂಗೇ?'

—ಹೊಸ ಆಟ ಆಡಬೇಕು ಎಂಬ ಉತ್ಸಾಹದಿಂದ ಕುಣಿಯುತ್ತಿದ್ದ ಚೆಲುವಾಚಾರಿ ನಿರುತ್ಸಾಹನಾಗಿ ಸೋಲು ಧ್ವನಿಯಲ್ಲಿ ಕೇಳಿದ.

'ಹೂ ಬಿಟ್ಟಹಂಗೆ. ಬಿಡದೆ ಮತ್ತೇನು ಮಾಡೋದು. ಅವರ್ಹಂಗೆ ನಾವೂ ಮಾಡಕಾದೀತಾ'

'ಹಂಗಂದ್ರೇನು?'

—ವೀರಣ್ಣ ಕೇಳಿದ.

'ಮತ್ತೆ ಅವರಂಗೆ. ಈಗ ಯಾವ್ದೋ ಊರ್ನಲ್ಲಿರೋ ನಾಟಕ ಬರೆಯುವವರನ್ನು ಕರೆಸಿ. ತಿಂಗಳುಗಟ್ಟಲೆ ಅವರನ್ನಿರಿಸಿಕೊಂಡು ಊಟ. ತಿಂಡಿಹಾಕಿ ಆಟಾ ಬರಸೋಕಾದಾತ? ಅಪಾರ ದುಡ್ಡಾಗ್ತದೆ. ಮತ್ತೆ ದಿವ್ಸಾನೂ ಇಲ್ಲ.'

'ಕೋಡೀ ಹಳ್ಳಿಯೋರು ಯಾವ ಕೈಲಿ ಬರಸಿದ್ರಂತೆ?'

'ಯಾರೋ ರಾಯದುರ್ಗದ ಕಡೆಯೋರಂತೆ– ಶ್ರೀಕಂಠಪ್ಪ ಅಂತ.'

'ರಾಯದುರ್ಗ ಏನು ವಿಲಾಯತೀನಾ. ಒಳ್ಳೆ ಗಾಡಿ ಕಟ್ಟಿಕೊಂಡು ಹೊರಟರೆ ಒಂದು ಇರುಳು. ಅರ್ಧ ಹಗಲಿನ ಪ್ರಯಾಣ. ನಾವು ಒಂದು ಕೈ, ನೋಡೇಬಿಡೋದು. ಏನನ್ತೀಯಾ ದಾಸಣ್ಣ?'

—ಎಂದು ಕೇಳಿದ ವೀರಣ್ಣ. ಯಾವ ಮಾತೂ ಆಡದೆ ಸುಮ್ಮನೆ ಕುಳಿತಿದ್ದ ವೆಂಕಟದಾಸಪ್ಪನನ್ನು ನೋಡಿ—

'ಶ್ರೀಕಂಠಪ್ಪನೂ ಬೇಡ. ವೈಕುಂಠಪ್ಪನೂ ಬೇಡ. ಕೋಡಿಹಳ್ಳಿಯೋರ ಹೇಸಾನಾನೂ ಬೇಡ. ನೀವು ಹೊಸ ಆಟಾ ಆಡೋದು ನಿಶ್ಚಯ ಮಾಡಿದರೆ ನಾನು ಬರಕೊಡ್ತೀನಿ.'

—ಅದುವರೆಗೂ ಚರ್ಚೆಯಲ್ಲಿದ್ದ ಮಾತನ್ನು ಮುಗಿಸಿ ಹೇಳಿದರು ವೆಂಕಟದಾಸಪ್ಪ.

'ಏನು. ನೀನು ನಾಟಕ ಬರದು ಕೊಡ್ತೀಯಾ?'

—ವೆಂಕಟದಾಸಪ್ಪನ ಮಾತು ಕೇಳಿ ವೀರಣ್ಣ ಆಶ್ಚರ್ಯದಿಂದ ಕೇಳಿದ.

'ಬರೆಯದೆ ಏನು? ರಾಯದುರ್ಗದವರೊಬ್ಬರೇ ಬೃಹಸ್ಪತಿಗಳೇ? ಅವರಿಗಿರುವಷ್ಟು ಬುದ್ಧಿಯನ್ನು ದೇವರು ನಮಗೂ ಕೊಟ್ಟಿದ್ದಾನೆ. ನೀವು ನಿರ್ಧಾರಮಾಡಿ—ಒಂದು ಕೈನೋಡೇಬಿಡೋಣ.'

ಉಳಿದವರೆಲ್ಲರಿಗೂ ವೆಂಕಟದಾಸಪ್ಪನ ಮಾತು ಒಪ್ಪಿಗೆಯಾದರೂ ಅಯ್ಯನಿಗೇನೋ ಆ ಮಾತಿನಲ್ಲಿ ಅನುಮಾನವೇ? 'ನಾಟಕ ಬರೆಯೋದೂಂದರೆ ಏನು. ಸುಲಭ ಆಗೋಯ್ತ? ರಾಗ, ತಾಳ ಏನು ಗೊತ್ತೈತೆ ಇವನಿಗೆ? ಈ ವಯ್ಯನ ಮಾತು ನಂಬಿಕೊಂಡು ಇವರು ಕೆಡ್ತಾರೆ ಅಷ್ಟೆ.' ಎಂದು ತನಗೆ ತಾನೇ ಹೇಳಿಕೊಂಡು ಸುಮ್ಮನಾದ.

ವೀರಣ್ಣನಿಗೂ ವೆಂಕಟದಾಸಪ್ಪನ ಮಾತು ಕೇಳಿ ಆಶ್ಚರ್ಯವಾಯಿತು. ಆದರೆ ಆತ ಅಯ್ಯನ ಹಾಗೆ ಅಪನಂಬಿಕೆ ಪಡಲಿಲ್ಲ. 'ಯಾವ ಹುತ್ತದಾಗೆ ಯಾವ ಹಾವೋ! ದಾಸಣ್ಣ ನೋಡಾಕೆ ಹೀಗಿದ್ದಾನೆ. ಒಳಗೈನೈತೋ ಬಲ್ಲೋರು ಯಾರು? ಅವಯ್ಯ ನಮ್ಮ ನಿಮ್ಮಂಥೋರ ಮನೆ ಹುಡುಗಾನಾ? ದೇವರ ಮೇಲೆ ಪರಾರತ್ತು ಮಾಡಿದೋರ ಮನೆ ಹುಡುಗ. ನೋಡೋಣ'

—ಎಂದು ವೀರಣ್ಣ ಅಯ್ಯನ ಅಪನಂಬಿಕೆಗೂ ಸಮಾಧಾನ ಹೇಳಿ ವೆಂಕಟದಾಸಪ್ಪ ಮುಂದೆ ಏನು ಮಾಡ್ತಾರೆ ಎಂದು ಕಾದು ನೋಡುತ್ತಾ ಕುಳಿತ.

ವೀರಣ್ಣ ಅಯ್ಯನಿಗೆ ಹೇಳಿದ ಮಾತು ನಿಜ.

ವೆಂಕಟದಾಸಪ್ಪನವರ ಪೂರ್ವಜರು ದೇವರ ಮೇಲೇ ಷರಾರತ್ತು ಮಾಡಿದ ಜನ.

ವೆಂಕಟದಾಸಪ್ಪನವರ ಪೂರ್ವಜರು ಮೂಲತಃ ದೇವೀಕೆರೆಯವರಲ್ಲ. ವೆಂಕಟದಾಸಪ್ಪನವರ ತಾತ ನರಸಿಂಹ ಜೋಯಿಸರು ವೇದಾವತಿ ನದಿಯ ತೀರದಲ್ಲಿದ್ದ ಜಾಜೂರಿನವರು. ಮುಂದೆ ಅವರ ಗುಣ ಹೀಗೇ ಇರುವುದೋ ಏನೋ ಎಂಬುದನ್ನು ತಿಳಿದೇ ಅವರಿಗೆ, ಅವರ ಹಿರಿಯರು ಆ ಹೆಸರು ಇಟ್ಟಿದ್ದರೇನೋ. ಅವರ ಹೆಸರಿನ ಹಾಗೆ ಅವರ ಗುಣ; ತುಂಬ ಕೋಪಿಷ್ಠ ಸ್ವಭಾವ; ಹಟದ ಬುದ್ಧಿ. ತಲೆಯಲ್ಲಿ ಏನಾದರೂ ಮಾಡಬೇಕು ಎಂದು ಬಂದರೆ ಆಯಿತು, ಅದು ನಡದೇ ತೀರಬೇಕು. ತಮ್ಮ ಕರ್ಮದ ಬಗ್ಗೆಯೂ ಅಷ್ಟೇ ನಿಷ್ಠೆ. ವೃತ್ತಿಯಿಂದ ಪುರೋಹಿತರಾದರೂ ಎಂದೂ ಯಾರನ್ನೂ ಯಾವುದಕ್ಕೂ ಯಾಚಿಸಿದವರಲ್ಲ. ತಮ್ಮ ಆರಾಧ್ಯ ದೈವತವಾದ ಶಿವ, ತಾನೇ ಆ ಸಂಸಾರವನ್ನು ಸಾಕುತ್ತಾನೆ. ಅವನ ಚಿಂತೆ ನಾನು ಮಾಡುವಾಗ, ನನ್ನ ಚಿಂತೆಯನ್ನು ಅವನು ಮಾಡದೆ. ಅವನಪ್ಪ ಮಾಡುತ್ತಾನೆಯೋ?' ಎನ್ನು ತ್ತಿದ್ದರಂತೆ. ಶಿವ ಅವರ ಸಂಸಾರ ಭಾರವನ್ನು ಹೊತ್ತಿದ್ದನೋ ಇಲ್ಲವೋ, ಅಂತೂ ಸುತ್ತಲ ನಾಲ್ಕಾರು ಹಳ್ಳಿಯ ಜನ ಅವರ ಸಂಸಾರಕ್ಕೆ ಆಗಿ ಮಿಗುವಷ್ಟು ಸಾಮಾನು ಸರಬರಾಜು ಮಾಡುತ್ತಿದ್ದರು. ಒಂದೊಂದು ಹಳ್ಳಿಯವರೂ ಸುಗ್ಗಿಯಲ್ಲಿ ಇಷ್ಟು ಎಂದು ಕಾಳನ್ನು ಮಾಮೂಲಾಗಿ ತಂದು ಒಪ್ಪಿಸುತ್ತಿದ್ದರು.

ಅವರಿಗೆ ಇಳಿವಯಸ್ಸಿನಲ್ಲಿ ಕೈಬೆರಳಿನ ಹತ್ತಿರ ತೊನ್ನು ಕಾಣಿಸಿ ಕೊಂಡಿತು. ಆ ಪ್ರಾರಬ್ಧ ತಮಗೆ ಎಲ್ಲಿಂದ ಬಂದು ತಗುಲಿತು ಎಂದು ತುಂಬಾ ಯೋಚಿಸಿದರು; 'ಯಾವ ಪಾಪಕ್ಕೆ ಆ ರೋಗ ಶಿಕ್ಷೆ' ಎಂದು ದೇವರಲ್ಲಿ ಮೊರೆಯಿಟ್ಟರು. ಅವರಿವರಲ್ಲಿ ಇದಕ್ಕೇನಾದರೂ ಔಷಧವಿದೆಯೋ ಎಂದು ವಿಚಾರಿಸಿ. ಹಳ್ಳಿಯ ವೈದ್ಯರು ಹೇಳಿದ ಹಸಿರುಸೊಪ್ಪಿನ ಔಷಧಿ ಮಾಡಿದರು; ಕಷಾಯ ಕುಡಿದರು. ಏನಾದರೂ ತೊನ್ನು ಗುಣವಾಗಲಿಲ್ಲ. ಸಣ್ಣದಾಗಿ

ಬೆಳ್ಳಿಯ ನಾಲ್ಕಾಣೆಯಷ್ಟು ಅಗಲವಿದ್ದದ್ದು ಎಂಟಾಣೆಯಷ್ಟು ಅಗಲ. ಎಲ್ಲರಿಗೂ ಕಾಣುವಷ್ಟು ಅಗಲ ಪರಡಿತು.

'ತೊನ್ನು ಹತ್ತಿದ ಕೈಲಿ ನಿನಗೆ ಪೂಜೆ, ಅಭಿಷೇಕ, ನೈವೇದ್ಯ ಮಾಡಿ ಮತ್ತೆಷ್ಟು ಪಾಪ ಕಟ್ಟಿಕೊಳ್ಳಲಿ?'

—ಎಂದು ದೇವರ ಪೂಜೆಯನ್ನು ಮಗ ಅಹೋಬಲನಿಗೆ ಒಪ್ಪಿಸಿ ಬಿಟ್ಟರು.

ಬ್ರಹ್ಮೋಪದೇಶವಾದಂದಿನಿಂದ ಎಂದೂ ದೇವರ ಪೂಜೆ ತೀರಿಸದೆ ಊಟಮಾಡಿಯೇ ಅಭ್ಯಾಸವಿಲ್ಲದ ಅವರಿಗೆ, ದೇವರ ಪೂಜೆಯನ್ನು ಬಿಟ್ಟ ಮೇಲೆ ಊಟದಲ್ಲೂ ಆಸಕ್ತಿ ತಪ್ಪಿಹೋಯಿತು. ಗುಣವಾಗದ ರೋಗದ ಕೊರಗಿನಲ್ಲಿ ದಿನದಿನಕ್ಕೆ ಸವೆಯತೊಡಗಿದರು.

ಮಕರ ಸಂಕ್ರಮಣದ ದಿನ ಚನ್ನಮ್ಮನಾಗತಿ ಹಳ್ಳಿಯಿಂದ ಜಾಜೂರಿಗೆ ನದೀಸ್ನಾನಕ್ಕೆಂದು ಬಂದ ಜೋಯಿಸ ಜ್ವಾಲಪ್ಪನವರು, ನರಸಿಂಹ ಜೋಯಿಸರ ಮನೋವ್ಯಥೆಯ ಕಾರಣವನ್ನರಿತು, ಸೂರ್ಯೋಪಾಸನೆಯಿಂದ ತೊನ್ನು ರೋಗ ಗುಣವಾಗುವುದೆಂದು ಹೇಳಿದರು. ಅದನ್ನು ಕೇಳಿದ ನರಸಿಂಹ ಜೋಯಿಸರು ಅಂದಿನಿಂದಲೇ ಸೂರ್ಯೋಪಾಸನೆಯನ್ನು ಮಾಡಲು ನಿಶ್ಚಯಿಸಿದರು. ಆದರೆ ಗುರುಮುಖೇನ ಮಂತ್ರೋಪದೇಶವಾಗದೆ, ಉಪಾಸನೆಯನ್ನು ಆರಂಭಿಸುವುದು ಸಾಧ್ಯವಿಲ್ಲವೆಂದರಿತು, ಕುಂದಾಪುರ್ಜಿಯಲ್ಲಿದ್ದ ಸೂರ್ಯೋಪಾಸಕರೆಂದು ಹೆಸರಾದ ಭಾಸ್ಕರ ಜೋಯಿಸರ ಬಳಿಗೆ ಮಂತ್ರೋಪದೇಶಕ್ಕಾಗಿ ತೆರಳಿದರು. ಭಾಸ್ಕರ ಜೋಯಿಸರು, ನರಸಿಂಹ ಜೋಯಿಸರ ಜನ್ಮ ನಕ್ಷತ್ರ, ನಾಮನಕ್ಷತ್ರಗಳನ್ನು ಗುಣಿಸಿ ನೋಡಿ—

'ನಿಮಗೆ ಈ ಜನ್ಮದಲ್ಲಿ ಸೂರ್ಯೋಪಾಸನೆಯಲ್ಲಿ ಸಿದ್ಧಿ ಸಿಗುವುದು ಲಭ್ಯವಿಲ್ಲ. ಆ ಬಯಕೆಯನ್ನು ಬಿಟ್ಟು ಬಿಡಿ.'

—ಎಂದರು.

'ಏಕೆ? ಉಪಾಸ್ಯನಾದ ದೇವತೆಗೂ ಉಪಾಸಕರಲ್ಲಿ ನಾನು—ತಾನು ಎಂದು ಭೇದ ಉಂಟೆ?'

—ಮರು ಸವಾಲು ಹಾಕಿ ಕೇಳಿದರು ನರಸಿಂಹಜೋಯಿಸರು.

'ಹಾಗಲ್ಲ. ಎಲ್ಲ ದೇವತೆಗಳೂ ಒಂದೇ ಶಕ್ತಿಯ ಭಿನ್ನಸ್ವರೂಪ

ಗಳಾದರೂ. ಎಲ್ಲರಿಗೂ ಎಲ್ಲ ಸ್ವರೂಪಗಳೂ ಒಲಿಯುವದು ಸಾಧ್ಯವಿಲ್ಲ. ಒಬ್ಬೊಬ್ಬರಿಗೆ ಒಂದೊಂದು ಬಗೆಯ ಸಾಧನೆಯಲ್ಲಿ ಮಾತ್ರ ಸಿದ್ಧಿ ದೊರೆಯುವುದು ಸಾಧ್ಯ.'

'ನಾನು ಸೂರ್ಯೋಪಾಸನೆ ಮಾಡಿದರೆ ಏನಾಗುತ್ತದೆ?'

'ಮಾಡಬಾರದ್ದು ಮಾಡಿದರೆ ಆಗಬಾರದ್ದು ಆಗುತ್ತದೆ'

'ದೇವತಾಪೂಜೆಯಿಂದ ಶುಭವಾಗದಿರಬಹುದು. ಅಶುಭವಾಗುತ್ತದೆ ಎಂದು ನಾನು ನಂಬಲಾರೆ.'

'ನೀವು ನಂಬಿ—ಬಿಡಿ. ಇರುವ ವಿಷಯ ಹೇಳಿದೆ.

'ಅದೇನಾದರೂ ಆಗಲಿ—ತಾವು ಮಂತ್ರೋಪದೇಶ ಕೊಡಿ. ನನ್ನ ರೋಗ ಸೂರ್ಯೋಪಾಸನೆಯಿಂದ ಗುಣವಾಗುತ್ತದೆ ಎಂದು ಹೇಳಿದರು. ಏನಾದರಾಗಲಿ ಮಾಡಿಬಿಡುತ್ತೇನೆ.'

'ನೀವು ಹೇಳುವುದು ನಿಜ, ಜೋಯಿಸರೇ. ಆದರೆ ಅದು ನಿಮಗೆ ಕೂಡಿಬರುವುದಿಲ್ಲ. ನಿಮಗೆ ಕೂಡಿಬರುವ ಗಣಪತಿಯನ್ನೋ ಸರಸ್ವತಿಯನ್ನೊ ಉಪಾಸನೆ ಮಾಡಿ. ಸಿದ್ಧಿ ಸುಲಭ ಲಭ್ಯ. ಬಾ ಎಂದರೆ ಸಾಕು ಬರುತ್ತೇನೆ ಎನ್ನುವ ದೇವತೆಗಳನ್ನು ಬಿಟ್ಟು, ಬರುವುದಿಲ್ಲ ಎನ್ನುವ ದೇವತೆಗಳನ್ನು ಪೂಜೆ ಮಾಡುತ್ತೇನೆ ಎಂಬ ಛಲವೇಕೆ?'

'ಛಲವಲ್ಲ—ಭಕ್ತಿಯಿಂದ ಸೇವೆ ಮಾಡಿದರೆ ಒಲಿಯದ ದೇವತೆ ಯಾವುದೂ ಇಲ್ಲ. ಎಂಬ ನಂಬಿಕೆಯಿಂದ.'

'ಸಾಧಾರಣ ಪೂಜೆಗೆ ಎಲ್ಲ ದೇವರೂ ಒಲಿಯಬಹುದು, ಬಿಡಬಹುದು. ಆದರೆ ಮಂತ್ರಪುನಶ್ಚರಣೆಯಿಂದ ಎಲ್ಲ ದೇವತೆಗಳೂ ಒಲಿಯುವುದಿಲ್ಲ.'

'ನೀವು ಹಾಗೆನ್ನುತ್ತೀರ. ನಾನು ಹೀಗೆ ನಂಬಿದೇನೆ. ತಾವು ಮಂತ್ರೋಪದೇಶ ಅನುಗ್ರಹಿಸಿ. ಏನಾಗುತ್ತದೆಯೋ ನೋಡಿಯೇಬಿಡುತ್ತೇನೆ.'

'ದೇವತೆಗಳ ಹತ್ತಿರ ಇಂಥ ಹಟ ಸರಿಯಲ್ಲ ಜೋಯಿಸರೇ—ಈ ಬಯಕೆ ಬಿಡಿ'

—ಭಾಸ್ಕರಜೋಯಿಸರು ನರಸಿಂಹಜೋಯಿಸರ ಮನಸ್ಸು ತಿರುಗಿಸಲು ಯತ್ನಿಸಿ ಹೇಳಿದರು.

'ಸ್ವಾಮಿ ಸೂರ್ಯನಾರಾಯಣನಿಗೆ ಒಲಿಯುವ ಇಚ್ಛೆ ಇದೆಯೋ ಇಲ್ಲವೋ ಎದುರಿಗೇ ನಿಲ್ಲಿಸಿಕೊಂಡು ಕೇಳಿಬಿಡುತ್ತೇನೆ. ಆದರೆ ತಮಗೆ, ನನಗೆ ಮಂತ್ರೋಪದೇಶ ನೀಡುವ ಮನಸ್ಸಿದೆಯೋ ಇಲ್ಲವೋ ಹೇಳಿ. ತಮಗೆ ಆ ಮನಸ್ಸು ಇಲ್ಲವಾದರೆ, ನಾನು ಮತ್ತಾರಲ್ಲಿಯಾದರೂ ಹೋಗಿ ಉಪದೇಶ ತೆಗೆದುಕೊಳ್ಳುತ್ತೇನೆ. ಅಲ್ಲಾ ಸ್ವಾಮಿ ಬಾಯಾರಿ ಬಂದು ನೀರು ಕೊಡಿ ಎಂದು ಕೇಳಿದರೆ, ನಿನಗೆ ನೀರು ಬೇಡ. ಜೇನುತುಪ್ಪ ಕುಡಿ ಎನುತ್ತೀರಲ್ಲ. ನನಗೆ ಜೇನುತುಪ್ಪ ಬೇಡ. ನೀರೇ ಬೇಕು. ಕೊಡುತ್ತೀರೊ ಇಲ್ಲವೋ ಅಪ್ಪಣೆ ಕೊಡಿಸಿ.'

—ನಿರ್ದಾಕ್ಷಿಣ್ಯವಾಗಿ ಕೇಳಿದರು ನರಸಿಂಹ ಜೋಯಿಸರು.

'ವಿಧಿಚಿತ್ತದಲ್ಲಿರುವುದು ನಾನು ಬೇಡ ಎಂದರೆ ಸಾಧ್ಯವಾಗುತ್ತದೆಯೇ? ಆಗಲಿ—ದೈವಲೀಲೆ ನಡೆಯಲಿ. ಈ ಭಾನುವಾರದವರೆಗೂ ಇಲ್ಲೇ ಇರಿ. ಆದಿನ ಮಂತ್ರೋಪದೇಶಕ್ಕೆ ಪ್ರಶಸ್ತವಾಗಿದೆ. ಉಪದೇಶ ಕೊಡುತ್ತೇನೆ. ಮುಂದಿನದು ಸೂರ್ಯನಾರಾಯಣನ ಚಿತ್ತ.'

—ಎಂದು ಮಾತು ಮುಗಿಸಿದರು ಭಾಸ್ಕರ ಜೋಯಿಸರು.

ಭಾನುವಾರದ ದಿನ ತಮ್ಮ ಮಾತಿನಂತೆ ಬೀಜಾಕ್ಷರಯುಕ್ತವಾದ ಸೂರ್ಯಮಂತ್ರೋಪದೇಶಮಾಡಿ, ಅದರ ಉಪಾಸನಕ್ರಮ, ಧ್ಯಾನಶ್ಲೋಕ ಅಂಗವಿನ್ಯಾಸ ಕರನ್ಯಾಸಗಳನ್ನು ತಿಳಿಸಿ, ಮಂತ್ರಸ್ವೀಕಾರ ಮಾಡಿ ನಮಸ್ಕರಿಸಿದ ಜೋಯಿಸರಿಗೆ 'ಶುಭಮಸ್ತು' ಎಂದು ಹರಿಸಿ—

'ನೋಡಿ. ಒಂದು ಮಂಡಲ ಉಪಾಸನೆ ಮಾಡಿ. ಲಭ್ಯವಿದ್ದರೆ, ಸ್ವಪ್ನಮುಖೇನ ಸಂಕೇತವಾಗುತ್ತದೆ. ನನ್ನ ಮಾತಂತೂ ನಿಮಗೆ ಪಥ್ಯವಾಗಲಿಲ್ಲ. ಹೋಗಲಿ. ಸ್ವಾಮಿ ಹೇಳಿದ ಹಾಗೆ ಮಾಡಿ. ಅವನಲ್ಲೂ ಹಟ ಮಾಡಲು ಹೋಗಬೇಡಿ. ಇದು ಬೆಂಕಿಯ ಸಹವಾಸ.'

—ಎಂದು ಎಚ್ಚರಿಸಿ ಬೀಳ್ಕೊಟ್ಟರು.

ಭಾಸ್ಕರ ಜೋಯಿಸರಿಂದ ಸೂರ್ಯಮಂತ್ರೋಪದೇಶ ಪಡೆದು ಜಾಜೂರಿಗೆ ಹಿಂದಿರುಗಿದ ಜೋಯಿಸರು, ಸೂರ್ಯೋಪಾಸನೆಯನ್ನು ಆರಂಭಿಸಿದರು. ಹಗಲು ಹರಿವ ಮೊದಲೇ ನದಿಯಲ್ಲಿ ಮಿಂದು, ಆಹ್ನಿಕವನ್ನು ಮುಗಿಸಿ, ನೂರೆಂಟು ಸೂರ್ಯನಮಸ್ಕಾರ ಹಾಕಿ, ಸೂರ್ಯಯಂತ್ರವನ್ನು ಸ್ಥಾಪಿಸಿ,

ದಿಗ್ಬಂಧನ ಮಾಡಿ, ಸೂರ್ಯೋಪಾಸನೆಯನ್ನು ಮಾಡುವರು. ಅವರದು ಶೀಘ್ರಸಿದ್ಧಿಗಾಗಿ ಆರಂಭಿಸಿದ ಉಗ್ರೋಪಾಸನೆಯಾದುದರಿಂದ ದಿನವೂ ಸಾಣೆಕಲ್ಲಿನ ಮೇಲೆ ರಕ್ತ ಬರುವವರೆಗೂ ಹೆಬ್ಬೆರಳನ್ನು ಉಜ್ಜಿ ರಕ್ತಗಂಧ ವನ್ನು ತೆಗೆದು ರಕ್ತಗಂಧ, ರಕ್ತ ಪುಷ್ಪದಿಂದ ಸೂರ್ಯನಾರಾಯಣನನ್ನು ಪೂಜೆ ಮಾಡುವರು. ಮೊದಲದಿನ ನೂರೆಂಟು ಬಾರಿಯಿಂದ ಆರಂಭವಾದ ಮಂತ್ರ ಪುನಶ್ಚರಣೆಯನ್ನು ವೃದ್ಧಿಕ್ರಮದಿಂದ ಏರಿಸುತ್ತಾ ಹೋದರು. ಹೀಗೆ ಉಪಾಸನೆ ನಲವತ್ತೇಳು ದಿನಗಳ ಕಾಲ ನಿರ್ವಿಘ್ನವಾಗಿ ಮುಗಿಯಿತು. ಇನ್ನೊಂದು ದಿನ—ನಲವತ್ತೆಂಟನೆಯದು—ಕಳೆದರೆ ಅಲ್ಲಿಗೆ ಭಾಸ್ಕರ ಜೋಯಿಸರು ಹೇಳಿದ ಹಾಗೆ ಒಂದು ಮಂಡಲ ಪೂರ್ತಿಯಾಗಿ ಕಳೆಯುತ್ತದೆ.

ಆ ದಿನ ರಾತ್ರಿ ಜೋಯಿಸರು ಮಲಗಿದಾಗ ಸ್ವಪ್ನದಲ್ಲಿ, ಕಾಸಿ ತೆಗೆದು ಮಿರುಗಿಟ್ಟು, ಬಂಗಾರದಂತೆ ಹೊಳೆಯುವ ಅಂಗಕಾಂತಿಯ, ತೇಜಃಪುಂಜ ನಾದ ವೃದ್ಧ ಬ್ರಾಹ್ಮಣನೊಬ್ಬ ಕಾಣಿಸಿಕೊಂಡ. ಜೋಯಿಸರು ಆತನಿಗೆ ವಂದಿಸಿ—

'ತಾವು ಯಾರು? ನನ್ನಿಂದ ಏನಾಗಬೇಕು? ಅಪ್ಪಣೆಯಾಗಲಿ'

—ಎಂದರು

'ನಾನಾರೆಂಬುದು ತಿಳಿಯಲಿಲ್ಲವೇ?'

—ವೃದ್ಧ ಬ್ರಾಹ್ಮಣ ದಿಕ್ಕುಗಳನ್ನೆಲ್ಲಾ ಬೆಳಗಿಸುವ ಮಂದಹಾಸವನ್ನು ಬೀರಿ ಕೇಳಿದ.

ಆ ಪ್ರಶ್ನೆಯನ್ನು ಕೇಳಿ ನರಸಿಂಹ ಜೋಯಿಸರು ವೃದ್ಧ ಬ್ರಾಹ್ಮಣನ ಮೊಗವನ್ನು ದಿಟ್ಟಿಸಿ ನೋಡಿದರು. ಆ ಮುಖದಲ್ಲಿ ಬೆಳಗುತ್ತಿದ್ದ ಕಣ್ಣು ಕೋರೈಸುವಂಥ ಪ್ರಭೆಯಿಂದಾಗಿ ಹೆಚ್ಚು ಹೊತ್ತು ಆ ಮೊಗವನ್ನು ನೋಡ ಲಾಗದಿದ್ದರೂ, ಹಿಂದೆಲ್ಲೋ ನೋಡಿದಂತೆ ಮಸಕುಮಸಕು ನೆನಪಾಯಿತು. ಆದರೆ ಯಾರೆಂದು ಖಚಿತವಾಗಿ ತಿಳಿಯಲಿಲ್ಲ.

'ಕ್ಷಮಿಸಬೇಕು. ಎಲ್ಲೋ ನೋಡಿದ ಹಾಗಿದೆ ನಿಮ್ಮ ಮುಖ. ಆದರೆ ತಟಕ್ಕನೆ ಗುರುತು ತಿಳಿಯುವುದಿಲ್ಲ. ತಾವು ಯಾರೆಂದು ಕೇಳಬಹುದೇ? ಅವಿನಯವನ್ನು ಮನ್ನಿಸಿ ಕೃಪೆಮಾಡಬೇಕು.'

'ದಿನವೂ ಬಾ, ಬಾ ಎಂದು ಕರೆಯುತ್ತೀಯ. ಬಂದಾಗ ಗುರುತೇ

ಸಿಗಲಿಲ್ಲ ಎನ್ನುತ್ತೀಯ. ನಾನೇನು ಮಾಡಲಿ ಹೇಳು. ನನ್ನನ್ನು ಕರೆಯಬೇಕ ಎಂದವರೂ ಕೇಳಲಿಲ್ಲ. ಕರೆದೆ. ಈಗ ನಾನು ಬಂದಿದ್ದೇನೆ. ಏನಾಗಬೇಕು ಹೇಳು?'

ಆ ಮಾತು ಕೇಳಿ ಜೋಯಿಸರಿಗೆ ತಮ್ಮೆದುರಿಗೆ ನಿಂತಾತ ತನ್ನ ಆರಾಧ್ಯ ದೇವತೆ ಎಂಬುದು ಅರಿವಾಯಿತು. ಉದ್ದಕ್ಕೂ ಅಡ್ಡಬಿದ್ದು—

ಬೇರೇನೂ ಬೇಡ. ಪ್ರಭು. ನಿನ್ನ ಕೃಪೆಯೊಂದಿರಲಿ ನಿನ್ನ ದರ್ಶನವನ್ನೇ ನೀಡಿದೆ. ಬೇರೇನು ಬೇಕು. ಆದರೂ ಬೇಡಿಕೋ ಎಂದರೆ ಬೇಡಿಕೊಳ್ಳುತ್ತೇನೆ —ಎಂದು ಬೇಡಿದರು.

'ಏನು ಕೇಳು?'

'ಏನಿಲ್ಲ. ಇಷ್ಟು ದಿನ ನಿನ್ನನ್ನು ಯಂತ್ರರೂಪವಾಗಿ ಪೂಜಿಸಿದೆ. ಈಗ ನೀನೇ ಎದುರಿಗೆ ಬಂದಿದ್ದೀಯ. ಪ್ರತ್ಯಕ್ಷ ಪೂಜೆ ಮಾಡಲು ಅವಕಾಶಕೊಡು.'

'ಅದೊಂದು ಸಾಧ್ಯವಿಲ್ಲ. ಈ ಜನ್ಮದಲ್ಲಿ ನಿನಗದು ಲಭ್ಯವಿಲ್ಲ. ನನ್ನ ಪೂಜೆ ಸ್ವೀಕರಿಸುವವರು ಬೇರೆ ಇದ್ದಾರೆ. ಅವರನ್ನು ಪೂಜಿಸು.'

—ಎಂದ ವೃದ್ಧ ಬ್ರಾಹ್ಮಣ.

'ಯಾರನ್ನು ಪೂಜಿಸಲಿ?

'ಇವರನ್ನು

—ವೃದ್ಧ ಬ್ರಾಹ್ಮಣ ಆ ಮಾತು ಹೇಳುತ್ತಿದ್ದ ಹಾಗೇ ಚಂದ್ರಬಿಂಬದಂತೆ ಬೆಳಗುತ್ತಿರುವ ಮೊಗದ ವೃದ್ಧ ಮುತ್ತೈದೆಯೊಬ್ಬಳು, ಮಂದಹಾಸವನ್ನು ಬೀರುತ್ತಾ ಕಾಣಿಸಿಕೊಂಡಳು.

'ಈಕೆ ನಿನ್ನನ್ನು ಒಲಿದು ಬಂದಿರುವ ಮಹಾತಾಯಿ. ಈಕೆಯನ್ನು ಪೂಜಿಸು. ನಿನಗೆ ಒಳಿತಾಗುತ್ತದೆ. ನಿಮ್ಮ ವಂಶದ ದೇವತೆ ಈಕೆ.'

—ಎಂದ ಆಕೆಯತ್ತ ಕೈದೋರಿ.

'ಆಕೆಯನ್ನು ಪೂಜಿಸುತ್ತೇನೆ. ಮೊದಲು ನೀನು ನನ್ನ ಪೂಜೆ ಸ್ವೀಕರಿಸು. ನೀನು ನನ್ನಿಂದ ಪೂಜೆ ಕೈಗೊಳ್ಳುವವರೆಗೂ ಮತ್ತಾರನ್ನೂ ಪೂಜಿಸುವುದಿಲ್ಲವೆಂದು ಶಪಥ ತೊಟ್ಟಿದ್ದೇನೆ.'

—ಎಂದರು ನರಸಿಂಹ ಜೋಯಿಸರು. ಆ ಮಾತು ಕೇಳಿ ವೃದ್ಧ ಬ್ರಾಹ್ಮಣರ ಮುಖ ಗಾಳಿ ಬೀಸಿದ ಉರಿಯಂತೆ ಭಯಂಕರವಾಗಿ ಉರಿಯಲಾರಂಭಿಸಿತು. ಆಕೆಯ ಮೊಗದ ಮೇಲೆ ಮೂಡಿದ ಮಂದಹಾಸ ಬಿಸಿಲು ಸೋಂಕಿದ ಪಾರಿಜಾತದ ದಳದಂತೆ ಬಾಡಿತು.

'ನಿರ್ಭಾಗ್ಯ...ನಿರ್ಭಾಗ್ಯ...ಕಾದಿರುವುದನ್ನು ಅನುಭವಿಸು'

—ಎಂದು ಹೇಳಿ ಆತ ಮಾಯವಾದ. ಆತನೊಂದಿಗೆ ಮುತ್ತೈದೆಯೂ.

'ಪ್ರಭೋ...ಪ್ರಭೋ...ಪ್ರಭೋ...'

—ಎಂದು ದೀನಸ್ವರದಲ್ಲಿ ಚೀರುತ್ತಾ ಎಚ್ಚೆತ್ತರು ನರಸಿಂಹ ಜೋಯಿಸರು. ಎದ್ದಾಗ, ಅದುವರೆಗೆ ತಮಗಾದ ಅನುಭವ ಸ್ವಪ್ನವೆಂದು ತಿಳಿಯಿತು. ಆದರೂ ಅವರ ಮೈಯಿಂದ ಬೆವರಿಳಿಯುತ್ತಿತ್ತು. ಎದ್ದು ಕುಳಿತು, ಸ್ವಪ್ನದಲಾದುದನ್ನೆಲ್ಲಾ ಮತ್ತೊಮ್ಮೆ ಜ್ಞಾಪಿಸಿಕೊಂಡರು ಏಕೋ ಎಡಗಣ್ಣು ಅದುರಿತು.

ಮಲಗಿದ್ದ ಮಗನನ್ನು ಎಬ್ಬಿಸಿ, ಸ್ವಪ್ನದಲ್ಲಿ ನಡೆದುದನ್ನು ತಿಳಿಸಿ, ಹಗಲು ಹರಿವ ಹೊತ್ತಾದುದರಿಂದ ನದಿಗೆ ಸ್ನಾನಮಾಡಲು ಹೊರಟರು.

ಸ್ವಪ್ನ ವಿಚಾರವನ್ನು ಕೇಳಿದ ಅಹೋಬಲ, ಉಪಾಸನೆಯನ್ನು ಬಿಟ್ಟು ಬಿಡಿ ಎಂದು ಬೇಡಿದ.

'ಊಹೂ. ಅದು ಸಾಧ್ಯವಿಲ್ಲ. ನೀನು ಇಂದಿನಿಂದ ತಾಯಿಯನ್ನು ಪೂಜೆಮಾಡು. ಜ್ವಾಲಪ್ಪನವರು ಮಂತ್ರೋಪದೇಶ ಕೊಡುತ್ತಾರೆ. ನಾನು ಸೂರ್ಯನಾರಾಯಣನನ್ನು ಒಲಿಸಿಕೊಳ್ಳದೆ ಬಿಡುವುದಿಲ್ಲ'

—ಎಂದು ಹೇಳಿ, ನದಿಯ ಕಡೆ ತೆರಳಿದರು. ತೆರಳಿದವರು ಮತ್ತೆ ಮರಳಲಿಲ್ಲ.

ಆ ದಿನದ ಪೂಜೆ ಅರ್ಧ ಆಗುತ್ತಿದ್ದ ಹಾಗೇ ಕೆಮ್ಮು ಆರಂಭವಾಗಿ, ಅದೇ ಪ್ರಬಲಿಸಿ, ಮೂಗು ಬಾಯಿಂದ ರಕ್ತ ಹರಿಯಲಾರಂಭಿಸಿತು. ಹಾಗೆ ಪ್ರಜ್ಞೆ ತಪ್ಪಿ ಬಿದ್ದರು. ನೆಲದ ಮೇಲೆ ಬಿದ್ದವರು ಮತ್ತೆ ಮೇಲೇಳಲಿಲ್ಲ.

ಆ ದಿನ ನರಸಿಂಹ ಜೋಯಿಸರು ಬಿಟ್ಟು ತೆರಳಿದ ಮನೆಗೆ ದೇವಿ ಆಗಮಿಸಿದಳು. ಆಕೆಯ ಅಪ್ಪಣೆಯಂತೆ ಅಹೋಬಲ ಜೋಯಿಸರು ಜಾಜೂರನ್ನು ಬಿಟ್ಟು ದೇವೀಕೆರೆಗೆ ಬಂದರು.

ದೇವೀಕೆರೆಯಲ್ಲಿ ಕೊಳದ ತಡಿಯಲ್ಲಿದ್ದ ಹುತ್ತದಲ್ಲಿ ಅಹೋಬಲ ಜೋಯಿಸರಿಗೆ ದೇವಿಯ ದರ್ಶನವಾಯಿತು.

ದೇವಿ ಬಂದಳು, ನರಸಿಂಹ ಜೋಯಿಸರು ಹೋದರು— ಆದರೆ ಅವರು ದೇವರೊಂದಿಗೆ ಹಟ ಸಾಧಿಸಿದ ಕಥೆ ಮಾತ್ರ ಜನರ ಬಾಯಲ್ಲಿ ಚಿರಂಜೀವಿಯಾಯಿತು.

ಅಂಥ ಹಟವಾದಿಗಳ ಮನೆತನದಲ್ಲಿ ಹುಟ್ಟಿದವರು ವೆಂಕಟದಾಸಪ್ಪ.

## ೧೩

ಕೋಡೀಹಳ್ಳಿಯವರು, ದೇವೀಕೆರೆಯವರಿಗೆ ಆಡಲು ನಾಟಕ ಕೊಡಂ ವುದಿಲ್ಲ ಎಂದು ಹೇಳಿದ್ದನ್ನು ಕೇಳಿ, ಅವರ ಮುಖದ ಮೇಲೆ ಹೊಡೆಯುವಂಥ ನಾಟಕವನ್ನು ಬರೆದು, ಆಡಿಸಬೇಕೆಂಬ ಛಲ ಹುಟ್ಟಿತ್ತು ವೆಂಕಟದಾಸಪ್ಪ ನವರಿಗೆ. ಬರೆದು ಕೊಡುತ್ತೇನೆ ಎಂದು ಹೇಳಿಯೂ ಬಂದಿದ್ದರು. ಆ ಮಾತು ಕೊಟ್ಟು, ಮನೆಗೆ ಬಂದ ಮೇಲೆ, ಕೊಟ್ಟ ಮಾತನ್ನು ಉಳಿಸಿಕೊಳ್ಳುವುದು ಹೇಗೆ ಎಂಬ ಚಿಂತೆ ಮೂಡಿತು.

ವೆಂಕಟದಾಸಪ್ಪ ನಾಟಕ ಬರೆದುಕೊಡುತ್ತೇನೆ ಎಂದಾಗ 'ಇವರಿಗೇನು ಗೊತ್ತು?' ಎಂದು ಅಯ್ಯ ಹೇಳಿದುದರಲ್ಲಿ ಸತ್ಯವಿಲ್ಲದೆ ಇರಲಿಲ್ಲ. ಆ ಮಾತು ಕೊಡುವವರೆಗೂ ಅವರಿಗೆ ನಾಟಕ ಬರೆಯುವುದು ಎಂದರೇನೆಂಬುದೇ ತಿಳಿದಿರ ಲಿಲ್ಲ. ಅವರಿಗೆ ಗೊತ್ತಿದ್ದುದೆಲ್ಲಾ ಇಷ್ಟೆ: ಹುಚ್ಚು ಹಿಡಿದು ನಾಟಕ ನೋಡು ವುದು, ನೋಡಿದ ಆಟದ ಹಾಡುಗಳನ್ನು ಬಾಯಲ್ಲಿ ಕುರುಕುವುದು. ಅಷ್ಟು ವಿನಾ ಒಂದು ಸಾಲು ಗದ್ಯವಾಗಲಿ ಪದ್ಯವಾಗಲಿ ಬರೆದು ಗೊತ್ತಿರಲಿಲ್ಲ. ರಾಗ, ತಾಳಗಳ ಸಂಪೂರ್ಣ ಸ್ವರೂಪ ಅರಿವಾಗುವಷ್ಟು ಸಂಗೀತಪಾಠವೂ ಆಗಿರಲಿಲ್ಲ. ಹೀಗಿದ್ದಾಗ ಏನು ಬರೆಯುವುದು, ಹೇಗೆ ಬರೆಯುವುದು ಎಂದು ಚಿಂತಿಸತೊಡಗಿದರು. ಆ ಚಿಂತೆಯಲ್ಲಿ ಊಟ, ನಿದ್ರೆಗಳೂ ಬೇಕಾಗಿರಲಿಲ್ಲ. ಕಾಗದ, ಲೇಖಣಿ, ಮಸೀ ಕುಡಿಕೆ ಎದುರಿಗಿಟ್ಟುಕೊಂಡು ಕುಳಿತು ಬಿಟ್ಟರು ಮನೆಯಲ್ಲಿ.

ಎರಡು ದಿನ ಅವರ ಪಡಿಪಾಟಲನ್ನು ಕಂಡ ಅವರ ತಾಯಿ ಲಕ್ಷ್ಮೀ ದೇವಮ್ಮ—

'ಇದೇನು ಹೊಸ ಹುಚ್ಚು?'

—ಎಂದು ಕೇಳಿದರು.

ವೆಂಕಟದಾಸಪ್ಪ ನಡೆದ ವಿಷಯವನ್ನೆಲ್ಲಾ ತಿಳಿಸಿದ. ಅದನ್ನು ಕೇಳಿ ಆಕೆ—

'ಚೆನ್ನಾಯಿತಪ್ಪ. ಇಷ್ಟು ದಿನ ಬರೀ ಆಟ ನೋಡೋ ಹುಚ್ಚು ಹಿಡಿದಿತ್ತು. ಈಗ ಬರೆಯೋ ಹುಚ್ಚು ಹಿಡಿಯಿತೆ? ನಮ್ಮ ಪುಣ್ಯಕ್ಕೆ ಪಾರವೇ

ಇಲ್ಲ. ಬ್ರಾಹ್ಮಣರ ಹುಡುಗ, ಪೂಜೆ, ಪುರಾಣ ಬಿಟ್ಟು ಈ ನಾಟಕದ ಗೀಳಿಗೆ ಬಿದ್ದರೆ ಉದ್ಧಾರವಾದ ಹಾಗಾಯಿತು. ಬಿಡು. ಇದು ನಮಗಲ್ಲ'— ಎಂದು ಮಗನ ಮನಸ್ಸನ್ನು ಅತ್ತ ಕಡೆಯಿಂದ ತಿರುಗಿಸಲು ಯತ್ನಿಸಿದರು.

'ಊಹೂ. ಹಾಗಾಗೊಲ್ಲ. ಈ ನಾಟಕ ಬರದೇ ತೀರಬೇಕು.'

'ಬರಿ. ಬರಿ. ಬರಿಯೋದೇನು ಮಗಸಟ್ಟೆ ಮನಗೆ? ಅದಕ್ಕೂ ಹಿಂದಿನ ಜನ್ಮದಲ್ಲಿ ಪೂಜೆ ಮಾಡಿ ವರ ಪಡೆದುಕೊಂಡು ಬಂದಿರಬೇಕು. ಬರೀ ಬೇಕು ಅಂದುಕೊಂಡ ತಕ್ಷಣ ಬರೀಯೋಕೆ ಬರೋದಾದ್ರೆ, ಹಸುಕಟ್ಟೊ ಗೂಟಾನೂ ಪದ್ಯ ಬರೀತಾ ಇತ್ತು. ಹೋಗೋ ಹುಚ್ಚ. ಈ ಕಂತೇನೆಲ್ಲ ಅತ್ತಲಾಗೆ ಒಗೆದು ಬಿಟ್ಟು, ಅಷ್ಟು ಗಾಯತ್ರೀನಾದರೂ ಮಾಡು. ಇಹ—ಪರ ಎರಡಕ್ಕೂ ಆಗುತ್ತೆ.'

'ಅದೆಲ್ಲಾ ಇರಲಿ. ನಿಮ್ಮ ಗಾಯತ್ರಿ ಕೇಳಿದರೆ ನಾಟಕ ಬರಿಯೋ ಶಕ್ತಿ ಕೊಡುತ್ತಾಳೇನೊ ಕೇಳು. ಹೂ ಅಂದರೆ ಪೂಜೆ ಮಾಡುತ್ತೀನಿ.'

'ಹುಚ್ಚ... ಹುಚ್ಚ... ನಾಟಕ ಬರೆಯೋದಂತೆ... ಅರಮನೆ ಮುಂದೆ ಹೋಗಿ ಅಂಬಲಿ ಭಿಕ್ಷೆ ಕೇಳಿದ ಹಾಗೆ. ಆಕೆ ಮನಸ್ಸು ಮಾಡಿದರೆ ನಾಟಕ ಬರೆಯೋದೇನು, ವೇದಾನೇ ಬರೀಬಹುದು. ಅದನ್ನು ಮರೆತದ್ದಕ್ಕೇ ನಿನ್ನ ನಾಲಗೆ ತರಗೆಲೆ ಆಗಿರೋದು.'

—ನಗುತ್ತ ಹೇಳಿದಳು ಲಕ್ಷ್ಮೀದೇವಮ್ಮ.

ಆ ಮಾತನ್ನು ಕೇಳಿ ವೆಂಕಟದಾಸಪ್ಪ ತಾಯಿಯ ಮುಖವನ್ನು ಸೂಕ್ಷ್ಮವಾಗಿ ನೋಡಿದರು. ಏನು ತೋಚಿತೋ ಏನೊ—

'ನೀನು ಹೇಳಿದ್ದು ನಿಜ ಕಣಮ್ಮ. ಅದೂ ಒಂದು ನೋಡೇ ಬಿಡುತ್ತೀನೆ.'

—ಎಂದವರೆ, ಒಂದು ಪಂಚೆ, ಅಂಗವಸ್ತ್ರ ಬರೆಯುವ ಕಾಗದ, ಲೇಖಣಿ, ಮಸಿದಾನಿ ತೆಗೆದುಕೊಂಡು ಮನೆಯಿಂದ ಹೊರಟುಬಿಟ್ಟರು.

ಆಗ ಮನೆ ಬಿಟ್ಟ ಮಗ ಮೂರು ದಿನವಾದರೂ ಮನೆಗೆ ಬರದಿದ್ದನ್ನು ಕಂಡು, ಗಾಬರಿಯಾಗಿ, ನಡೆದ ವಿಷಯವನ್ನು ತನ್ನ ಗಂಡನಿಗೆ ಹೇಳಿ—

'ಎಲ್ಲಿ ಹೋದನೋ ಹುಡುಕಿಸಿ'

—ಎಂದು ಕಣ್ಣೀರಿಟ್ಟರು ಲಕ್ಷ್ಮೀದೇವಮ್ಮ.

ಹೆಂಡತಿ ಹೇಳಿದುದನ್ನೆಲ್ಲಾ ಕೇಳಿದ ನರಸಪ್ಪನವರು, ಒಂದು ಗಳಿಗೆ

ತಾವೂ ಯೋಚಿಸಿ, ಬಳಿಕ ಗಂಭೀರವಾಗಿ—

'ಒಳ್ಳೇ ಕೆಲಸಾನೇ ಮಾಡಿದೆ'

—ಎಂದರು.

'ಹಾಳು ಬಾಯಿ ಸುಮ್ಮನಿರಲಿಲ್ಲ. ಏನೋ ತಮಾಷೆಗೆ ಅಂದರೆ ಹೀಗಾಗಿ ಬಿಟ್ಟಿತು. ಮೂರು ದಿನ ಆಯಿತು ಮಗು ಊಟಕ್ಕೆ ಬಂದು. ಇದೊಂದು ಸಲ ಅವನು ಮನೆಗೆ ಬಂದರೆ ಸಾಕು. ಇನ್ನು ಜನ್ಮಜನ್ಮಕ್ಕೂ ಅವನನ್ನು ಅನ್ನುವುದಕ್ಕೆ ಹೋಗುವುದಿಲ್ಲ. ನಾನು ಮಾಡಿದುದು ತಪ್ಪಾದರೆ ನನ್ನನ್ನು ಸಿಗಿದು ಹಾಕಿ. ಆದರೆ ಮೊದಲು ಅವನನ್ನು ಹುಡುಕಿಸಿ'

—ಎಂದು ಲಕ್ಷ್ಮೀದೇವಮ್ಮ ಮಗನನು ನೆನೆಸಿಕೊಂಡು ಅಳಲಾರಂಭಿಸಿದರು.

'ಅಳೋದು ಒಂದೇ ಒಂದು ನಿನಗೆ ಗೊತ್ತಿರುವುದು. ನಿನ್ನ ಬೈಯ್ಯಬೇಕೂಂತ ನಾನು ಹಾಗೆ ಹೇಳಲಿಲ್ಲ. ನಿಜವಾಗಿಯೂ ನೀನು ಮಾಡಿದ್ದು ಒಳ್ಳೆಯ ಕೆಲಸವೇ ಆಯಿತು. ಅವನಿಗೆ ಸರಿಯಾದ ಗೀಳು ಹಿಡಿಸಿದೆ,

'ಏನು ಸರಿಯಾದ ಗೀಳು?'

'ಗಾಯತ್ರಿಯ ಗೀಳು. ಮನುಷ್ಯನಿಗೆ ಹಿಡಿಯಬೇಕಾದ ಗೀಳು ಅದು. ಅದರಿಂದ ತಪ್ಪೇನೂ ಇಲ್ಲ.'

ಆ ಮಾತು ಕೇಳುತ್ತಿದ್ದ ಹಾಗೇ ಲಕ್ಷ್ಮೀದೇವಮ್ಮನಿಗೆ ಸನ್ಯಾಸಿಯಾಗುತ್ತೇನೆಂದು, ಹೇಳದೆ ಕೇಳದೆ ಎಲ್ಲೋ ಹೋದ ದೊಡ್ಡ ಮಗನ ನೆನಪು ಬಂದು—

'ಇವನೂ ಸುಬ್ರಹ್ಮಣ್ಯನ ಹಾಗೆ ಗಾಣಗಾಪುರಕ್ಕೋ, ಮತ್ತೆಲ್ಲಿಗಾದರೂ ಹೋಗಿ ಬಿಟ್ಟರೆ ನಾನೇನು ಮಾಡಲಿ. ನೀವು ಅವನನ್ನು ಹುಡುಕಿಸಿಕೊಂಡು ಬರದಿದ್ದರೆ ನಾನು ಕೊಳದಲ್ಲಿ ಬಿದ್ದು ಪ್ರಾಣಬಿಡುತ್ತೇನೆ,

—ಎಂದರು.

'ಆ ಭಯವೇನೂ ಇಲ್ಲ. ಈ ಮಗ ಸನ್ಯಾಸಿಯಾಗುವುದಿಲ್ಲ. ಇವತ್ತೋ ನಾಳೆಯೋ ಬರುತ್ತಾನೆ. ಚಿಂತಿಸಬೇಡ,

—ಎಂದು ನಿಶ್ಚಿತವಾಗಿ ನುಡಿದರು ನರಸಪ್ಪ.

'ಚಿಂತಿಸಬೇಡ, ಚಿಂತಿಸಬೇಡ, ಚಿಂತಿಸಬೇಡ......ಎಷ್ಟು ಹಾಯಾಗಿ

ಹೇಳುತ್ತೀರಿ ಅಂದರೆ. ಹೆತ್ತ ಕರುಳಿಗೆ ಗೊತ್ತು ಆ ವೇದನೆ.'

'ನಾನೂ ಅವನ ತಂದೆಯಲ್ಲವೇ? ಎರಡು ದಿನ ಅವನು ಜೊತೆಗೆ ಊಟಕ್ಕೆ ಏಳದಿದ್ದಾಗಲೇ ಯೋಚನೆಯಾಯಿತು. ನೀನು ಹೇಳುವುದಕ್ಕೆ ಮೊದಲೇ ಹುಡುಕಿಕೊಂಡು ಹೊರಟೆ. ಎಲ್ಲಿದಾನೆ ಎಂದು ತಿಳಿಯಿತು. ಬರಲಿ ಎಂದು ಸುಮ್ಮನಾದೆ.'

'ಎಲ್ಲಿದ್ದಾನೆ?'

'ಹೇಳಿದರೆ ನೀನು ಅಲ್ಲಿಗೆ ಹೋಗಿ ಅತ್ತು ಕರೆದು ರಾದ್ಧಾಂತ ಮಾಡುತ್ತೀಯ.'

'ಅಹೋದು! ತಂಗಟಿ ಬರಲು ತಗೊಂಡು ಹೋಗಿ ಬೆನ್ನು ಚಕ್ಕೆ ಎಬ್ಬಿಸುತ್ತೇನೆ. ವಯಸ್ಸಾಗಿ ಇದೇ ಬುದ್ಧಿನೇ ಬಂದದ್ದು ಅಂತ ಕೇಳ್ತೇನೆ. ಎಲ್ಲಾ ಹೊಟ್ಟೇ ಉರಿಸೋದಕ್ಕೇ ಹುಟ್ಟಿದರು ಹಾಳಾದೋರು!'

'ನೀನು ಹೀಗೆಲ್ಲಾ ಮಾಡ್ತೀಯಾಂತ ನನಗೆ ಗೊತ್ತು. ಅದಕ್ಕೇ ಹೇಳಲಿಲ್ಲ. ತಂಗಟಿ ಬರಲೂ ಬೇಡ, ಬೆತ್ತದ ಛಡೀನೂ ಬೇಡ. ನನ್ನ ಮಾತು ನಂಬಿ ನಿಶ್ಚಿಂತೆಯಾಗಿರು'

—ಎಂದು ಹೇಳಿ ನರಸಪ್ಪನವರು ಎದ್ದು ಹೋದರು. ಮಗ ಎಲ್ಲಿದಾನೆ ಎಂಬುದು ಗಂಡನಿಗೆ ಗೊತ್ತಿದೆ ಎಂದು ಲಕ್ಷ್ಮೀದೇವಮ್ಮನಿಗೆ ತಿಳಿದು ಮನಸ್ಸಿಗೆ ಕೊಂಚ ಸಮಾಧಾನವಾದರೂ, ಪೂರಾ ನೆಮ್ಮದಿಯಾಗಲಿಲ್ಲ. ಹೇಗೋ ಏನೋ ಎಂದು ಎದೆ ಹೊಡೆದುಕೊಳ್ಳುತ್ತಲೇ ಇತ್ತು, ಗಂಡನ ಸ್ವಭಾವವನ್ನು ಅರಿತ ಆಕೆಯ ಹೃದಯ. ಒಮ್ಮೆ ಕೈ ಸುಟ್ಟುಕೊಂಡ ಆಕೆಗೆ ಅಷ್ಟು ಸುಲಭವಾಗಿ ಸಮಾಧಾನವಾಗುವಂತಿರಲಿಲ್ಲ.

ಲಕ್ಷ್ಮೀದೇವಮ್ಮ ಮೂರು ಮಕ್ಕಳ ತಾಯಿ. ಮೂರು ಮಕ್ಕಳ ಪೈಕಿ ದೊಡ್ಡವನು ಸುಬ್ರಹ್ಮಣ್ಯ. ಹುಟ್ಟಿದಾಗಿನಿಂದ ಏನೋ ಒಂದು ತರಹ ಮಂಕಾಗಿದ್ದ ಅವನು, ಹತ್ತು ಹದಿನೈದನೇ ವಯಸ್ಸಿನಲ್ಲಿ, ಮನೆಗೆ ಬಂದಿದ್ದ ದತ್ತಾತ್ರೇಯನ ಉಪಾಸಕರಾದ ಸನ್ಯಾಸಿಗಳೊಬ್ಬರೊಂದಿಗೆ, ಮನೆಯಲ್ಲಿ ಹೇಳದೆ ಕೇಳದೆ ಗಾಣಗಾಪುರಕ್ಕೆ ಹೊರಟುಹೋಗಿದ್ದ.

ಸುಬ್ರಹ್ಮಣ್ಯ ಹುಟ್ಟಿದಾಗಲೇ, ಅವನ ಜಾತಕವನ್ನು ನೋಡಿ ಸನ್ಯಾಸಿಯಾಗುವ ಯೋಗವಿದೆಯೆಂದು ಅರಿತುಕೊಂಡ ನರಸಪ್ಪನವರು, ಮಗ ಮನೆ

ಬಿಟ್ಟು ಹೋದನೆಂದು ಗೋಳಾಡುತ್ತಿದ್ದ ಹೆಂಡತಿಗೆ—

'ನೋಡು, ತಾಯಿ ನಮಗೆ ಇಬ್ಬರು ಗಂಡು ಮಕ್ಕಳನ್ನು ಕೊಟ್ಟಿದ್ದಾಳೆ. ಇಬ್ಬರಲ್ಲಿ ಒಬ್ಬನನ್ನು ತನ್ನ ಸೇವೆಗೆ ಇಟ್ಟುಕೊಂಡು, ಒಬ್ಬನನ್ನು ನಮ್ಮ ಲಾಲನೆಪಾಲನೆಗೆ ಬಿಟ್ಟಿದ್ದಾಳೆ. ಸುಮ್ಮನೆ ಗೋಳಾಡಬೇಡ. ಇರುವ ಮಗ ನನ್ನು ನೋಡಿಕೊಂಡು ಹಾಯಾಗಿರು,

—ಎಂದು ಸಮಾಧಾನ ಮಾಡಿದರು.

ಎರಡನೆಯ ಮಗ ವೆಂಕಟದಾಸಪ್ಪ. ಮೂರನೆಯವಳು ಮಗಳು ರಾಜೇಶ್ವರಿ. ಎಂಟು ವರ್ಷಕ್ಕೆ ಮದುವೆಯಾಗಿ, ಹನ್ನೆರಡುವರ್ಷಕ್ಕೆ ದೊಡ್ಡವ ಳಾದ ಅವಳು, ಪರಶುರಾಮಪುರದಲ್ಲಿ ತನ್ನ ಗಂಡನ ಮನೆಯಲ್ಲಿದ್ದಳು.

ಹೀಗೆ ಮೂರು ಹೆತ್ತರೂ ಮಗ ಎಂದು ಲಕ್ಷ್ಮೀದೇವಮ್ಮನವರಿಗೆ ಉಳಿದುದು ವೆಂಕಟದಾಸಪ್ಪ ಒಬ್ಬರೇ. ಏನೋ ನಗೆಚಾಟಿಕೆಗೆ ಮಾತಾಡಿದ್ದೇ ನೆಪವಾಗಿ ಅವನೂ ಮನೆಬಿಟ್ಟು ಹೋದರೆ—? ಆಕೆ ತನ್ನ ಬಾಯನ್ನು ಬೈದು ಕೊಂಡಳು; ವಿಧಿಯನ್ನು ಹಳಿದಳು. 'ಎಲ್ಲಿದ್ದಾನೆ ಹೇಳಿ ನಾನು ಒಂದು ಸಲ ಹೋಗಿ ನೋಡಿಕೊಂಡು ಬರುತ್ತೇನೆ' ಎಂದು ಗಂಡನಿಗೆ ದುಂಬಾಲ ಬಿದ್ದು ಬೇಡಿದಳು. ಆದರೆ ನರಸಪ್ಪನವರು ಬಾಯಿಬಿಡಲಿಲ್ಲ. ಒಂದು ವಾರವಾಯಿತು. ಮಗ ಮನೆಗೆ ಬರಲಿಲ್ಲ. ಎಲ್ಲಿ ಹೋಗಿರಬಹುದು ಎಂಬ ಲಕ್ಷ್ಮೀದೇವಮ್ಮನ ವರ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯಿತು.

ಆದರೆ ವೆಂಕಟದಾಸಪ್ಪ ಮನೆಯಿಂದ ಬಹಳ ದೂರ ಹೋಗಿರಲಿಲ್ಲ. ಮನೆಯಿಂದ ಹೊರಟ ಅವರು ದೇವೀಕೆರೆಗೆ ಸುಮಾರು ಅರ್ಧ ಮೈಲಿ ದೂರದಲ್ಲಿದ್ದ ಗುಡ್ಡದಲ್ಲಿ ಸೇರಿಕೊಂಡಿದ್ದರು.

ಗುಡ್ಡದ ಮೇಲೆ ಪಾಳಯಗಾರರ ಕಾಲದಲ್ಲಿ ಕಾವಲು ಸೈನಿಕರು ಇರಲೆಂದು ಕಟ್ಟಿಸಿದ ಸಣ್ಣದೊಂದು ಮನೆ, ಕಲ್ಲಿನಲ್ಲೇ ಕೊರೆದ ಪುಷ್ಕರಣಿ, ಯಾರೋ ಯಾವ ಕಾಲದಲ್ಲೋ ಕಟ್ಟಿದ ಪುಟ್ಟದೊಂದುಗಣಪತಿ ದೇವಾಲಯ ಇತ್ತು. ಅಪರೂಪವಾಗಿ ಕುರಿ ಕಾಯುವವರೋ, ಕಟ್ಟಿಗೆ ಕಡಿಯುವವರೋ, ಅಲ್ಲಿಗೆ ಹೋಗುತ್ತಿದ್ದರಲ್ಲದೆ, ಅದು ವಿನಾ ಗುಡ್ಡದಲ್ಲಿ ಜನ ಸಂಚಾರವಿರಲಿಲ್ಲ. ನಾಟಕ ಬರೆಯುವ ಹುಚ್ಚನ್ನು ಹತ್ತಿಸಿಕೊಂಡ ವೆಂಕಟದಾಸಪ್ಪ ಅಲ್ಲಿಗೆ ಹೋಗಿ ಸೇರಿಕೊಂಡರು.

ದಿನವೂ ಬೆಳಗ್ಗೆ ಬೆಳಕು ಕಣ್ಣರಳಿಸುವ ಮೊದಲೇ ಎದ್ದು ಪುಷ್ಕರಣಿ ಯಲ್ಲಿ ಸ್ನಾನಮಾಡಿ, ಗಾಯತ್ರೀ ಜಪಮಾಡುತ್ತಾ ಕುಳಿತುಕೊಳ್ಳುವರು ವೆಂಕಟದಾಸಪ್ಪ. ಮೊದಲ ಎರಡು ದಿನ ಗಾಯತ್ರಿಯನ್ನು ಜಪಿಸುವಾಗಲೂ ನಾಟಕದ ಯೋಚನೆ ತಲೆಯಲ್ಲಿ ಸುಳಿದು, ಜಪವೂ ನಡೆಯದು, ನಾಟಕದ ಚಿಂತೆಯೂ ಬಗೆಹರಿಯದು—ಹೀಗಾಯಿತು. ಚಿತ್ತ ಗಾಳಿಗೆ ಸಿಲುಕಿದ ದೀಪದ ಕುಡಿಯಂತೆ ಹತ್ತಾರು ಕಡೆ ಹೊಯ್ದಾಡುವುದು, ಎದೆಯೊಳಗೆ ಏನೋ ಕುದಿದುಕ್ಕಿ, ಬೆಟ್ಟವನ್ನೇರಿ ಮುಗಿಲನ್ನಪ್ಪಳಿಸಬೇಕು ಎಂದು ಎನಿಸು ವುದು. ಎರಡು ದಿನ ಕಳೆದ ಮೇಲೆ ಆ ಉದ್ವೇಗ ಶಾಂತವಾಗಿ, ಕದಡಿದ ಚಿತ್ತದಲ್ಲಿ ಸಮತೆ ಮೂಡಿ, ನಿಶ್ಚಿಂತೆಯಾಗಿ ಗಾಯತ್ರಿಜಪ ನಡೆಯುವಂತಾ ಯಿತು. ನಾಲ್ಕನೆಯ ದಿನ ಗಾಯತ್ರಿಯ ಧ್ಯಾನಶ್ಲೋಕ, ಕನ್ನಡದಲ್ಲಿ ತಾನೇ ತಾನಾಗಿ, ಹಾಡಾಗಿ ಹರಿದು ಬಂತು. ಆ ಹಾಡಿನೊಂದಿಗೆ ಮುಂದೆ ಯಾವ ನಾಟಕ ಬರೆಯಬೇಕೆಂದೂ ತೋಚಿತು. ಪರಶುರಾಮ—ಕಾರ್ತ್ಯ ವೀರ್ಯರ ಕಥೆ ಮೂಲವಸ್ತುವಾಗಿ, ಅಲ್ಲೊಂದು, ಇಲ್ಲೊಂದು ಹಾಡು, ಅಲ್ಲಿಷ್ಟು ಇಲ್ಲಿಷ್ಟು ಮಾತು, ಮುಗಿಲಲ್ಲಿ ಎತ್ತೆತ್ತಲಿಂದಲೋ ಬಂದು ಕವಿ ಯುವ ತುಂಡು ಮೋಡಗಳಂತೆ ಕವಿದು ಬಂದು ಸ್ಥೂಲ ಸಮಗ್ರ ಚಿತ್ರ ಕಾಗದದ ಮೇಲೆ ಮೂಡಿತು. ಕಾಗದದ ಮೇಲೆ ಮೂಡಿದ ಹಾಡುಗಳನ್ನು ತಮಗೆ ಗೊತ್ತಿದ್ದ ಮಟ್ಟುಗಳಿಗೆ ಹೊಂದಿಸಿ ತಾವೇ ಹಾಡಿಕೊಂಡರು. ತಾವೇ ಜಮದಗ್ನಿಯಾಗಿ, ಕಾರ್ತ್ಯವೀರ್ಯನಾಗಿ, ರೇಣುಕೆಯಾಗಿ ಮಾತುಗಳನ್ನಾಡಿದರು ಹಾಡುಗಳನ್ನು ಹೇಳಿದರು. ನೀರಿನಲ್ಲಿ ಮುಳುಗಿದ್ದ ಹತ್ತಾರು ಮಣ ಭಾರದ ಸೀಸದ ಗುಂಡು, ಕೊಂಚ ಮೀಟಿದಾಗ ತಾನೇ ಮೇಲೇಳುವಂತೆ, ಇಡೀ ನಾಟಕ ಹೃದಯದಾಳದಿಂದ ಮೂಡಿ ಬಂತು.. ಹನ್ನೆರಡನೆಯ ದಿನ ಇಡೀ ನಾಟಕವನ್ನು ಬರೆದು ಮುಗಿಸಿ, ಕೈಯಲ್ಲಿ ಹಿಡಿದುಕೊಂಡು, ಗುಡ್ಡದಿಂದ ಕೆಳಗಿಳಿದು ದೇವೀಕೆರೆಗೆ ಹಿಂದಿರುಗಿದರು.

ಹಳ್ಳಿಗೆ ಹಿಂದಿರುಗಿ ಮನೆಗೆ ಬಂದಾಗಲೇ ಅವರಿಗೆ ತಾವು ಹೇಳದೇ ಕೇಳದೇ ಮನೆ ಬಿಟ್ಟುಹೋದುದರಿಂದ ಎಷ್ಟು ಅವಾಂತರವಾಗಿದೆ ಎಂದು ಅರಿವಾದದ್ದು.

ಮನೆ ಬಾಗಿಲಲ್ಲಿ ನಿಂತು 'ಅಮ್ಮಾ' ಎಂದು ಕೂಗಿದರು ವೆಂಕಟದಾಸಪ್ಪ.

ಮಧ್ಯಾಹ್ನದ ಊಟ ಮುಗಿಸಿ, ಹಾಗೇ ಅಡ್ಡಾಗಿದ್ದ ಲಕ್ಷ್ಮೀದೇವಮ್ಮ ಮಗನ ಕೂಗನ್ನು ಕೇಳಿ, ಎಚ್ಚೆತ್ತು ಕನಸೇನೋ ಎಂದುಕೊಂಡು ಸುತ್ತಮುತ್ತ ನೋಡಿದರು. ತಲೆಬಾಗಿಲ ಕಡೆಯಿಂದ ಮಗ ಮತ್ತೆ ಕೂಗಿದ ಧ್ವನಿ ಕೇಳಿಸಿತು. ಮಲಗಿದ್ದವರು ಎದ್ದು ಬಿಟ್ಟೆ ಅಸ್ತವ್ಯಸ್ತವಾಗಿದ್ದು ದನ್ನೂ ಗಮನಿಸದೆ, ಒಂದೇ ಹಾರಿಗೆ ತಲೆಬಾಗಿಲು ಸೇರಿ. ಮುಚ್ಚಿದ ಬಾಗಿಲಂ ತೆಗೆದರು. ಮಗ ಎದುರಿಗೆ ನಿಂತಿದ್ದ.

'ದಾಸೂ...ದಾಸೂ ...ದಾಸಣ್ಣ...ಇಷ್ಟು ದಿನ ಎಲ್ಲಿ ಹೋಗಿದ್ದೆಯೋ ನನ್ನ ಕಂದಾ'.

—ಎಂದು ತಟಕ್ಕನೆ ಉಕ್ಕಿ ಬಂದ ಹರ್ಷದಉತ್ಸಾಹದಲ್ಲಿ ಅಳುತ್ತಾ, ನಗುತ್ತಾ ಮಗನನ್ನು ಬಿಗಿದಪ್ಪಿದರು.

'ನಾಟಕ ಬರೆದೇ ಬಿಟ್ಟೆ ಅಮ್ಮ'

—ಎಂದು ಉತ್ಸಾಹದಿಂದ ಕೂಗಿ ಹೇಳಿದರು ವೆಂಕಟದಾಸಪ್ಪ.

ತಾಯಿ ಮಕ್ಕಳ ಗದ್ದಲದಿಂದ ಎಚ್ಚರವಾದ ನರಸಪ್ಪನವರು ತಾವೂ ಎದ್ದು ಬಂದು ತಾಯಿ ಮಕ್ಕಳನ್ನು ನೋಡಿದರು. ಆ ನೋಟವನ್ನು ಕಂಡು ಕಣ್ಣು ತೇವವಾಗಿ, ಗಂಟಲು ಕಟ್ಟಿಬಂತು. ಅದನ್ನು ತೋರಗೊಡದೆ ಪಕ್ಕಕ್ಕೆ ತಿರುಗಿ ಉತ್ತರೀಯದಿಂದ ಕಣ್ಣನ್ನು ಒರಸಿಕೊಂಡು, ಖೇಕರಿಸಿ ಗಂಟಲನ್ನು ಸರಿಮಾಡಿಕೊಂಡು—

'ಒಳಗೆ ಅಡಿಗೆ ಮಿಕ್ಕಿದ್ದರೆ ಊಟಕ್ಕೆ ಬಡಿಸು. ಊಟ ಮಾಡಿ ಎಷ್ಟು ದಿನ ಆಯಿತೋ ಏನೋ. ಊಟ ಹಾಕಿ ಆಮೇಲೆ ಬೇಕಾದಷ್ಟು ಅಳು'

—ಎಂದರು ಹೆಂಡತಿಗೆ.

ಅದುವರೆಗೆ ಬೇರೆ ಯಾವುದೋ ಲೋಕದಲ್ಲಿದ್ದ ಲಕ್ಷ್ಮೀದೇವಮ್ಮ ಆ ಮಾತು ಕೇಳಿ ಇಹಲೋಕಕ್ಕೆ ಬಂದು ಒಣಕಲುಕಡ್ಡಿಯಾಗಿದ್ದ ಮಗನನ್ನು ನೋಡಿದಳು. ಒಣಗಿದ ಮುಖದಲ್ಲಿ ಕಣ್ಣುಗಳೆರಡು ಮಾತ್ರ ಹೊಳೆಯು ತ್ತಿದ್ದುವು.

'ನಿಜ. ಅವನ ಮುಖ ನೋಡಿ ಹುಚ್ಚೇ ಹಿಡಿದು ಹೋಗಿತ್ತು. ಇನ್ನು ಈ ಜನ್ಮದಲ್ಲಿ ಇವನ ಮುಖ ನೋಡುತ್ತೇನೆಯೋ ಇಲ್ಲವೋ ಎನಿಸಿಬಿಟ್ಟಿತ್ತು. ಎಷ್ಟು ಕೈಕಾಲು ಬಿಡಿಸಿಬಿಟ್ಟೆಯೋ ಹಾಳಾದವನೆ. ಮನೇಲಿ ಕೂತು ನಿನ್ನ

ನಾಟಕ ಬರೆದರೆ ಏನಾಗುತ್ತಿತ್ತು. ಸೆತ್ತ ಹೊಟ್ಟೆ ಉರಿಸೋಕೆ ಹುಟ್ಟಿದಿರಿ ಮಕ್ಕಳೆಲ್ಲಾ'

—ಎಂದು ಉಕ್ಕಿ ಹರಿಯುತ್ತಿದ್ದ ಅಕ್ಕರೆಯನ್ನು ಸಿಟ್ಟಿನ ಮಾತಾಗಿ ಪ್ರದರ್ಶಿಸುತ್ತಾ ಅವನನ್ನು ಅಡಿಗೆ ಮನೆಯತ್ತ ಎಳೆದುಕೊಂಡು ಹೋದರು.

ವೆಂಕಟದಾಸಪ್ಪನವರು ಹಳ್ಳಿಗೆ ಹಿಂದಿರುಗಿದ ಒಂದು ಗಂಟೆಯೊಳಗಾಗಿ, ಹನ್ನೆರಡು ದಿನದಿಂದ ಪತ್ತೆ ಇಲ್ಲದವರು ಮನೆಗೆ ಬಂದರೆಂಬ ಸುದ್ದಿ ಹಳ್ಳಿಯ ಲ್ಲೆಲ್ಲಾ ಹರಡಿ, ವೀರಣ್ಣ, ಅಯ್ಯ, ಚಿನ್ನಾಚಾರಿ ಮೊದಲಾದ ಅವರ ಆಟದ ಮನೆಯ ಗೆಳೆಯರೆಲ್ಲಾ ನರಸಪ್ಪನವರ ಮನೆಯ ಜಗಲಿಯ ಮೇಲೆ ಸೇರಿದರು.

ಅವರಿಗೆ ವೆಂಕಟದಾಸಪ್ಪನವರನ್ನು ನೋಡುವ ಉತ್ಸಾಹವಿದ್ದಷ್ಟೇ ವೆಂಕಟದಾಸಪ್ಪನವರಿಗೂ ತಮ್ಮ ಗೆಳೆಯರನ್ನು ನೋಡಿ, ನಾಟಕ ಸಿದ್ಧವಾದು ದನ್ನು ತಿಳಿಸಬೇಕೆಂಬ ಆತುರವಿತ್ತು. ಲಕ್ಷ್ಮೀದೇವಮ್ಮ ತಡೆಯುತ್ತಿದ್ದರೂ ಕೇಳದೆ, ಜಗಲಿಯತ್ತ ನುಗ್ಗಿ ಬಂದು, ತಮ್ಮ ಗೆಳೆಯರ ಗುಂಪನ್ನು ಸೇರಿ ಉತ್ಸಾಹದಿಂದ—

'ವೀರಣ್ಣ ಆಟ ಬರೆದಿದ್ದೇನೆ'

—ಎಂದು ಗೆಲುವಿನ ಧ್ವನಿಯಲ್ಲಿ ಸಾರಿದನು.

'ಹೌದಾ?'

—ಎಂದು ಆಶ್ಚರಿಯಿಂದ ಕೇಳಿದ ವೀರಣ್ಣ.

'ಹೂ.'

'ಹಂಗಂದ್ರೆ...ನಾಟಕ ಬರೆಯೋಕೇ ಹನ್ನೆರಡು ದಿನ ಮನೆ ಬಿಟ್ಟು ಹೋಗಿದ್ಯಾ?'

—ವೀರಣ್ಣ ನಂಬಲಾಗದವನಂತೆ ಕೇಳಿದ.

'ಹೂ.'

'ಒಳ್ಳೆ ಗ್ರಾಚಾರದ ಆಸಾಮಿ. ನಿನ್ನ ನಾಟಕ ಹಾಗಿರ್ಲಿ.. ನಮ್ಗೆಲ್ಲಾ ಕೈಕಾಲು ಬಿಡಿಸ್ಬಿಟ್ಟೆ. ಅಮ್ಮಾವ್ರು ನಮ್ಮನ್ನೆಲ್ಲಾ ಶಪಿಸಿ, ಮೂರು ಮೂರು ತಲೆ ಉರಿಸಿಬಿಟ್ರು, ನಿನ್ನ ಕಾಲಾಗೆ ಎಲ್ಲಾರ ಕೈಯಾಗೂ ಬೈಸ್ಕೋಬೇಕಾಯ್ತು, ಹೋಗ್ಲಿ ಬಂದೆಲ್ಲ. ಅದ್ನೆಲ್ಲಾ ಅಂದ್ಕೊಂಡು ಈಗೇನು ಉಪಯೋಗ. ಆಟಗಾನ ಚೆನ್ನಾಗಿರ್ಲಿ ಇಲ್ಲಿ ಆಗಿರೋದು ನಿನ್ನ ಆಟ!'

—ಎಂದ ವೀರಣ್ಣ ಪ್ರೀತಿ, ಸಿಟ್ಟು, ಅಸಮಾಧಾನಗಳು ಸಮಾಸಮವಾಗಿ ಬೆರೆತ ಧ್ವನಿಯಲ್ಲಿ.

ಆ ದಿನ ಸಂಜೆಯೇ ಆಟದ ಮನೆಯಲ್ಲಿ ವೆಂಕಟದಾಸಪ್ಪನವರು ಬರೆದ ನಾಟಕದ ಪರೀಕ್ಷೆಯಾಯಿತು. ಅಯ್ಯ ಅವರು ಹಾಕಿದ ಮಟ್ಟುಗಳಿ ಗನುಸಾರವಾಗಿ ಹಾಡಿ ನೋಡಿದ. ಹಾಡುವ ಮೊದಲು 'ಅವಯ್ಯ ಬರೆದ ಇದೊಂದು ಆಟ ಆಯ್ತು' ಎಂಬ ತಾತ್ಸಾರದಿಂದಲೇ ಹಾಡಿದರೂ 'ಅಲ್ಲೊಂದು ಮಾತೇ ಹೆಚ್ಚು. ಇಲ್ಲೊಂದು ಸ್ವಲ್ಪ ಕುಂಟುತ್ತೆ. ಆ ರಾಗ ತಾಳಕ್ಕೆ ಅಷ್ಟು ಸರಿಯಾಗಿ ಹೊಂದಿಕೊಳ್ಳುವುದಿಲ್ಲ. ಆ ಮಟ್ಟು ಇಂಪಾಗಿಲ್ಲ' ಎಂದು ಸಣ್ಣ ಪುಟ್ಟ ಟೀಕೆಗಳನ್ನು ಮಾಡಿದರೂ ಹಾಡುಗಳು ಚೆನ್ನಾಗಿವೆ ಎಂದು ಒಪ್ಪಿಕೊಳ್ಳ ಬೇಕಾಯಿತು. ಮಾತುಗಳ ವಿಷಯದಲ್ಲಿ ಯಾರೂ ಏನೂ ಹೇಳುವ ಹಾಗಿರ ಲಿಲ್ಲ. ಆಟವನ್ನು ಕೇಳಿ ಎಲ್ಲರಿಗೂ ಸಂತೋಷವಾಗಿತ್ತು. ಉತ್ಸಾಹದಿಂದ ಇದನ್ನು ಆಡಿಯೇ ಬಿಡುವುದು ಎಂದು ತೀರ್ಮಾನ ಮಾಡಿದರು.

ಆಟ ಆಗಿಯೂ ಹೋಯಿತು. ಬಂದು ನೋಡಿದ ಹತ್ತಾರು ಹಳ್ಳಿಯ ಜನ "ಬೋ ಪಸಂದಾಗಿದೆ' ಎಂದುಕೊಂಡು ಹೋದರು. ತಮ್ಮ ಬಳಿ ನಾಟಕ ಎರವಲು ಕೇಳಬಂದು, ಮುಖ ಮುರಿಸಿಕೊಂಡು ಹೋದ ದೇವೀಕೆರೆ ಯವರು 'ತಮ್ಮ ಊರವರ ಕೈಯ್ಯಲ್ಲೇ ಹೊಸ ಆಟ ಬರೆಸಿ ಆಡುತ್ತಾರಂತೆ. ಹೇಗಿರುತ್ತೋ ನೋಡೋಣ' ಎಂದು ಹಂಗಿಸಲು ಸಿದ್ಧವಾಗಿಯೇ ಬಂದ ಕೋಡೀಹಳ್ಳಿಯವರು, ನಾಟಕ ಮುಗಿದ ಮೇಲೆ ವೆಂಕಟದಾಸಪ್ಪನವರನ್ನು ಕಂಡು ಕೈಮುಗಿದು—

'ಬುದ್ಧಿ, ನಮ್ಗೂ ಇಂಥಾದೇ ಒಂದು ಆಟ ಬರಕೊಡಬೇಕು. ಏನೋ ಕ್ವಾಪದ ಮೇಲೇಲಿ ಅಂದ ಮಾತ್ನೇ ಮನಸ್ಗಾಗೆ ಹಾಕೊಳ್ಳಬಾರ್ದು'

—ಎಂದು ಬೇಡಿಕೊಂಡು ಹೋದರು.

ಇಂಥ ಸೊಗಸಾದ ನಾಟಕ ಬರೆದು ಹಳ್ಳಿಗಾದ ಅಪಮಾನವನ್ನು ತೀರಿಸಿದುದೇ ಅಲ್ಲದೆ, ಹಳ್ಳಿಯ ಕೀರ್ತಿ ಹೆಚ್ಚುವಂತೆ ಮಾಡಿದ ವೆಂಕಟ ದಾಸಪ್ಪನವರಿಗೆ, ಹಳ್ಳಿಯ ಜನ ಜರತಾರಿ ಪಂಚೆ, ವಸ್ತ್ರ ಕೊಟ್ಟು ಮರ್ಯಾದೆ ಮಾಡಿದರು.

ಆ ಮರ್ಯಾದೆಯಿಂದ ವೆಂಕಟದಾಸಪ್ಪನವರ ಎದೆ ಉಬ್ಬಿ ಹೋಯಿತು,

ನೆತ್ತಿ ಎಲ್ಲೋ ಗಾಳಿಯಲ್ಲಿ ತೇಲುತ್ತಿತ್ತು. ಅದನ್ನು ಕಂಡ ನರಸಪ್ಪನವರು—

'ದಾಸೂ... ಇಷ್ಟಕ್ಕೇ ಇಷ್ಟು ಹೆಮ್ಮೆ ಪಡಬೇಡ. ನಾಟಕ ಬರೆದವನು ನೀನಲ್ಲ, ನೆನಪಿರಲಿ. ತನ್ನ ಸ್ಥಳದ ಕೀರ್ತಿ ಉಳಿಸಲು ದೇವಿ ಬರೆದದ್ದು ಈ ನಾಟಕ. ಅದನ್ನು ಮರೆತರೆ ಆಕೆಯ ಅನುಗ್ರಹದಿಂದ ಕಲ್ಲಿನಲ್ಲಿ ಉಕ್ಕಿರುವ ಚಿಲುಮೆ ಅಲ್ಲಿಯೇ ಬತ್ತಿಹೋಗುತ್ತದೆ. ಮರೆಯಬೇಡ.'

—ಎಂದು ಎಚ್ಚರಿಸಿದರು.

ಮಗನ ಮರ್ಯಾದೆಯಿಂದ ಸ್ವರ್ಗದ ಮಟ್ಟಕ್ಕೇರಿದ ಅವನ ತಾಯಿ ಲಕ್ಷ್ಮೀದೇವಮ್ಮ—

'ಮಹಾ...ಮಹಾ... ಮಂಟಪದಲ್ಲಿ ಕೂತಿರೋ ನಿಮ್ಮ ದೇವಿಯೋ ಬರೆದದ್ದು! ಹನ್ನೆರಡು ದಿನ ಊಟ ತಿಂಡಿ ಬಿಟ್ಟು ಬರೆದೋರು ಯಾರೋ. ಈಗ ಕೀರ್ತಿ ಬರೋವಾಗ ಓಡಿಬಂದಳೇನೋ 'ನಾನು ಇದೀನೀಂತ ನಿಮ್ಮ ದೇವೀ?'

—ಎಂದಳು, ದೇವಿಯ ಹಿರಿಮೆಯ ಕೀಳುಗಳೆಯುವುದಕ್ಕಿಂತ ಹೆಚ್ಚಾಗಿ, ಮಗನನ್ನು ಹೊಗಳುವ ಚಪಲದಿಂದ.

ತಂದೆ–ತಾಯಿಗಳಿಬ್ಬರ ಮಾತನ್ನೂ ಕೇಳಿದ ವೆಂಕಟದಾಸಪ್ಪನವರು ಗಂಭೀರವಾಗಿ—

'ಅಪ್ಪ ಹೇಳಿದ್ದು ನಿಜ ಕಣಮ್ಮ. ಇದನ್ನು ಬರೆದವನು ನಾನಲ್ಲ, ದೇವಿಯೇ. ಆಕೆಯೇ ಹೇಳಿ ಬರೆಸಿದ್ದು. ಆಕೆಯ ಅನುಗ್ರಹವಿದ್ದದ್ದರಿಂದ ನಾನು ವೀಣೆಯಾದೆ. ಇಲ್ಲವಾಗಿದ್ದರೆ ಬರೀ ಕಾಡುಮರದ ಕೊರಡಾಗೇ ಇರುತ್ತಿದ್ದೆ.'

—ಎಂದರು.

'ನಿನ್ನ ಜೀವನದಲ್ಲಿ ನೀನು ಏನಾದರೂ ಆಗು ದಾಸು. ಆದರೆ ಈ ಪ್ರಜ್ಞೆ ಮಾತ್ರ ಸ್ಥಿರವಾಗಿರಲಿ. ನಾನು ಎನ್ನುವುದೆಲ್ಲಾ ಬರೀ ನಿಮಿತ್ತ. ಎಲ್ಲಕ್ಕೂ ಕಾರಣಭೂತಳು ದೇವಿಯೇ. ಈ ಮಾತೊಂದು ನೆನಪಿದ್ದರೆ, ನೀನೂ ಒಬ್ಬ ಮನುಷ್ಯನಾಗುತ್ತೀಯ'

—ಎಂದರು ನರಸಪ್ಪನವರು.

ಅಂದು ತಂದೆ ಹೇಳಿದ ಮಾತನ್ನು ವೆಂಕಟದಾಸಪ್ಪನವರು ಕಡೆಯ

ದಿನದವರೆವಿಗೂ ಮರೆಯಲಿಲ್ಲ. ಆ ಮಾತು ಅವರ ಬಾಳಿನ ದೀಪಸ್ತಂಭ ವಾಯಿತು.

ಯಾವುದೋ ಆಕಸ್ಮಿಕವಾಗಿ, ಎಲ್ಲೋ ಸಣ್ಣದೊಂದು ಕಲ್ಲು ಸಡಿಲಿ ದುದೇ ನೆಪವಾಗಿ, ಕಗ್ಗಲ್ಲ ಹೃದಯದಿಂದ ಶಾಶ್ವತ ಜಿಲುಮೆಯೊಂದು ಮೂಡಿ ಹರಿಯುವಂತೆ, ಸಣ್ಣದೊಂದು ಘಟನೆಯಿಂದಾಗಿ, ವೆಂಕಟದಾಸಪ್ಪನವರಲ್ಲಿ ಅಂದು ಕಿಡಿಯಾಗಿ ಮೂಡಿದ ಕಾವ್ಯಸೃಷ್ಟಿ ಶಕ್ತಿ, ದಿನದಿನಕ್ಕೂ ಬೆಳೆದು ಬೆಳಕಾಯಿತು. ಹತ್ತಾರು ಹಳ್ಳಿಗಳ ಜನರ ಬಾಯಲ್ಲೂ 'ದಾಸಣ್ಣನವರು ಮಾಡಿದ ಪದವಿದು ದೇವೀಕೆರೆ ಊರಿನಲ್ಲಿ' ಎಂಬ ಹಾಡಾಗಿ, ದೇವೀಕೆರೆಯ ಹೆಸರನ್ನೂ, ವೆಂಕಟದಾಸಪ್ಪನವರ ಹೆಸರನ್ನೂ ಉಳಿಸಿತು.

## ೧೪

ವೆಂಕಟದಾಸಪ್ಪನವರು ನಾಟಕದ ಪಂದ್ಯದಲ್ಲಿ ಗೆದ್ದದ್ದು ದೇವೀಕೆರೆ ಯುವರಿಗೆಲ್ಲರಿಗೂ ಸಂತೋಷಕ್ಕೆ ಕಾರಣವಾದರೂ. ಎಲ್ಲರಿಗಿಂತ ಹೆಚ್ಚಾದ ಸಂತೋಷವಾದದ್ದು ವೀರಣ್ಣನಿಗೆ.

'ಹಟ ಹುಟ್ಟಿದರೆ ಈ ಅಯ್ಯ ಆಕಾಶ ಪಾತಾಳ ಎರಡೂ ಒಂದು ಮಾಡಿಬಿಡ್ತಾನೆ. ಸಮುದ್ರ ಬೇಕಾದರೂ ಏಕಾಪೋಶನ ತಗೊಂಡುಬಿಡ್ತಾನೆ. ಇದು ಅಂತಿಂಥ ಕುಳವಲ್ಲ, ಭಾರಿಘಟ'.

—ಎಂದು ಹತ್ತಾರು ಜನರೆದುರಿಗೆ ಈ ಮಾತನ್ನು ಹೇಳಿದ್ದ ಆತ.

ಆ ಘಟನೆಯಾದ ಹೊಸದರಲ್ಲೇ ಒಂದು ದಿನ ತನ್ನ ಹೆಂಡತಿಯೊಂದಿಗೆ ಹಗಡೆಯಾಡುತ್ತಾ ಕುಳಿತಾಗಲೂ ಅದೇ ಮಾತು ಹೇಳಿದ. ವೆಂಕಟದಾಸಪ್ಪ ನವರ ಹೊಗಳಿಕೆಯನ್ನು ವೀರಣ್ಣನ ಬಾಯಿಂದ ಹಲವು ಬಾರಿ ಕೇಳಿದ್ದ ಗೌರಮ್ಮ, ಬೇಸರಗೊಂಡು—

'ಅದೇನು ಅಷ್ಟು ಹೊಗಳ್ಕೊತೀರ ನಿಮ್ಮ ದಾಸಣ್ಣನ್ನೋರ್ನ. ಏನು ಕೈಲಾಸ ತಂದು ಹುಡಗವ್ರು ನಿಮ್ಮ ಮನೆ ಬಾಕಿಲ್ನಾಗೆ?'

—ಎಂದು ವೀರಣ್ಣನನ್ನು ರೇಗಿಸಿದಳು.

'ಕೈಲಾಸ... ಅವರ ನಾಟಕ ನೋಡಿದ ಮ್ಯಾಗೆ ಕೋಡೀಹಳ್ಳೋರ ಮೊಕಾ ನೋಡಿದ್ರೆ ಕೈಲಾಸಾನೋ ಅಲ್ಲೋ ನಿನಗೆ ಗೊತ್ತಾಗೋದು'

—ಎಂದ ವೀರಣ್ಣ.

'ಏನು ಮಹಾ. ಪ್ರಪಂಚದ ಮ್ಯಾಗೆಲ್ಲಾ ಇವರೊಬ್ರೇನಾ ನಾಟಕ ಬರದೋರು. ಎಂತೆಂಥೋರೋ ಆಗಿಹೋದ್ರು—ಇವರೂ ಒಬ್ರು.'

'ಮಹಾ...ಮಹಾ... ಮಾತಾಡೋಕೇನು—ಎಲ್ಲಾ ಮಹಾನೇ. ಅವರಂಗೆ ನಾಟಕ ಬರೆಯೋದಿರ್ಲಿ, ಒಂದು ಸಣ್ಣ ಪದ ಕಟ್ಟು ನೋಡೋಣ ಇಷ್ಟೆಲ್ಲಾ ಮಾತಾಡ್ತೀಯಲ್ಲ. ಬರೆಯೋದೊಂದ್ರೆ ಏನು ಹಗಡೆ ಆಟ್ದಾಗೆ ನನ್ನಂಥ ಕುರೀನ ಸೋಲಸ್ದಂಗೆ ಅಂದ್ಕೊಂಡ್ಯಾ'

—ಎಂದು ವೀರಣ್ಣ ತಾನೂ ರೇಗಿ ಗೌರಮ್ಮನನ್ನೂ ರೇಗಿಸಿದ.

'ಮಾತಾಡೋದೇನು—ಅವರ್ಹಂಗಿದ್ದಿದ್ರೆ ನಾನೂ ಬರೀತಿದ್ದೆ.'

'ಅಂಗಂದ್ರೆ...'

'ಮತ್ತೇನೈತೆ. ಅವರಪ್ಪ ಅಜ್ಜ ಅವ್ನೋರ ಸ್ಯಾವೆ ಮಾಡಿದ್ದೇನು ಮಗಸಟ್ಟೇನಾ. ಅವರು ಮಾಡಿದ ಸ್ಯಾವೆ ಈಯಪ್ಪನ ಬಾಯಲ್ಲಿ ಹಾಡಾಗಿ ಹರೀತದೆ. ಅದ್ರಲ್ಲಿ ಈವಯ್ಯಂದೇನು ಘನಂದಾರಿಕೆ?'

—ವೆಂಕಟದಾಸಪ್ಪನವರ ಸಾಹಸವನ್ನು ಲಘುವಾಗಿ ಎಣಿಸಿ ವೀರಣ್ಣನ ಸಿಟ್ಟಿಗೆ ಎಣ್ಣೆ ಸುರಿದಳು ಗೌರಮ್ಮ.

'ಅದ್ಕೆ ನಿನಗೆ ಏನೂ ತಿಳೀದು ಅಂವದ್ದು. ಮುದ್ದೆ ಸಟ್ಟುಗ ಆಡಿ ಸೋರಿಗೆ ಮದ್ದಳೆ ವಿಷ್ಯ ಏನು ಗೊತ್ತಾಗ್ತದೆ ಹೇಳು ಬುಡುಬುಡುಕೆ ಆಡಿಸ್ದಂಗೆ ಬಾಯಾಡಿಸ್ಬಿಟ್ರೆ ಬಂತಾ? ನೀನು ಒಂದರ್ಸ ಅವ್ನೋರೆ ಸ್ಯಾವೆ ಮಾಡಿ, ಅವರಂಗೆ ಒಂದು ಸಾಲು ಬರೀ ನೋಡೋಣ.

—ವೀರಣ್ಣ ಸವಾಲು ಹಾಕಿ ಹೇಳಿದ.

'ಅಷ್ಟು ಹಟಕ್ಕೆ ಬಂದ್ರೆ ನಾನೂ ಒಂದು ಪದ ಬರ್ದೇನು. ನಿಮ್ಮ ದಾಸಣ್ಣನೋರು, ನನ್ಜೊತೆ ಪಗಡೆ ಆಡಿ, ಒಂದಾಟ ಗೆಲ್ಲಲಿ ಮತ್ತೆ. ನಾನೂ ನೋಡ್ತೀನಿ.'

—ಎಂದು ಗೌರಮ್ಮ ವೀರಣ್ಣನ ಸವಾಲಿಗೆ ಮರುಸವಾಲಂ ಹಾಕಿದಳು

'ಅವಯ್ಯ ಮನಸ್ಸು ಮಾಡಿದ್ರೆ—ಇದೇನು ಒಂದು ಚಿಟಕಿ ಕೆಲಸ'

—ವೀರಣ್ಣ ವೆಂಕಟದಾಸಪ್ಪನವರ ಪಕ್ಷಕಟ್ಟಿ ಮಾತನಾಡಿದ.

'ಬರೀ ಬಾಯಲ್ಲಿ ಮಾತಾಡ್ದಂಗಲ್ಲ, ಆಡೋಕೆ ಕೂತಾಗ್ಲೇನೇ ಗೊತ್ತಾಗೋದು ಅವಯ್ಯನ ಬೇಳೆಕಾಳು.'

—ತಾತ್ಸಾರವಾಗಿ ಕೈತಿರುಗಿಸಿ ಹುಬ್ಬು ಕುಣಿಸುತ್ತಾ ಹೇಳಿದಳು ಗೌರಮ್ಮ.

'ನೀನಿಷ್ಟು ತೇಂಕಾರ ಮಾಡಿದ್ರೆ, ಅವಯ್ನ ಸೋಲ್ಸೋದೇನಂ, ನಿನ್ನ ಗರ್ವಾನೇ ನಿನ್ನ ಮುರೀತದೆ ಹೆಣ್ಣೆ. ಇಷ್ಟು ಸೊಕ್ಕಬಾರದ್ದಿ. ಮಾತ್ನಾಡೋವಾಗ ಮೈಮ್ಯಾಲೆ ಗ್ಯಾನ ಇರ್ಲಿ. ನಾಲ್ಗೆ ಮ್ಯಾಲೆ ನಿಗಾ ಮಡಗು. ಎಲುಬಿಲ್ಲದ ನಾಲಗೆ ಹೆಂಗಂದ್ರೆ ಹಂಗೆ ಹೊರಳ್ತದೆ ಅಂತ ಕಲಿತ ಮಾತೆಲ್ಲಾ ಆಡೋಕೆ ಹೋಗಬ್ಯಾಡಾ.'

—ವೀರಣ್ಣ ಗೌರಮ್ಮನನ್ನು ಎಚ್ಚರಿಸಿದ.

'ಅಷ್ಟು ಮಾತೆಲ್ಲಾ ಯಾಕೆ? ನಿಮ್ಮ ಆಟದ ಪಂದ್ಯ ನಡೆದ್ಹಂಗೆ ನನ್ನ ಆಟ ಪಂದ್ಯಾನೂ ನಡೀಲಿ. ಬರೀ ಮಾತಾಡಿ. ಏನುಪಯೋಗ?'

—ಗೌರಮ್ಮ ಆ ಎಚ್ಚರಿಕೆಯನ್ನು ಗಮನಿಸದೆ ಹೇಳಿದಳು.

'ಹಂಗಾ... ಹಂಗಾ... ...ಅಷ್ಟು ದಿಮಾಕಾ ನಿಂಗೆ. ಅದೂ ಆಗ್ತದೆ, ನಿನ್ನ ಸೊಕ್ಕು ಮುರೀತದೆ. ಕಲ್ಲಾಗವ್ನಾ ಬಾಕ್ಲಾಗವನಾ, ಸೂರಿನಾಗವನಾ, ಕಂಭದಾಗವನಾ ನಿನ್ನ ದೇವ್ರು ಅಂತ ಉರಿದು, ಹೊಟ್ಟೆ ಬಗಿಸಿಕೊಂಡು ಹಿರಣ್ಯ ಕಶಿಪು ಸತ್ಹೋದಂಗೆ, ನಿನ್ನ ಗರ್ವಾನೂ ಉರಿದೋಕ್ತದೆ'.

—ಎಂದು ಹೇಳಿ ವೀರಣ್ಣ ಕೈಯಲ್ಲಿದ್ದ ದಾಳಗಳನ್ನು ಬಿಸುಟು ಎದ್ದು ಹೋದ. ಗಂಡನ ಸಿಟ್ಟನ್ನು ಕಂಡು ಗೌರಮ್ಮ ಕಿಲಕಿಲ ನಕ್ಕಳು.

ಆ ಗಳಿಗೆಯಿಂದ ಆವಳ ಸವಾಲಿನ ಮಾತು, ಕೊಂಕು ನಗೆ, ವೀರಣ್ಣನ ಹೃದಯವನ್ನು ಕೊರೆಯುತ್ತೊಡಗಿತು. ಹೇಗಾದರೂ ಒಮ್ಮೆ ಅವಳ ಗರ್ವ ಭಂಗವಾಗಬೇಕು ಎನ್ನಿಸಿತು.

ಚೆಲುವೆಯಾದ ಚಿಕ್ಕಪ್ರಾಯದ ಹೆಂಡತಿಯೊಂದಿಗೆ ಆಟದಲ್ಲಿ ಸೋಲು ವುದೂ, ಗೆಲುವಿನಷ್ಟೇ ಪ್ರಿಯವಾಗಿದ್ದರೂ, ದಿನದಿನವೂ ಸೋತು ಹಣ್ಣಾದ ಅವನ ಅಹಂಕಾರ–'ಒಂದು ದಿನ ಒಂದೇ ಒಂದು ಆಟದಲ್ಲಿ, ಇವಳು ಸೋಲುವುದನ್ನು ನೋಡಬೇಕು' ಎಂದು ಬಯಸುತ್ತಿತ್ತು. ಅದರ ಮೇಲೆ ಗೌರಮ್ಮ ವೀರಣ್ಣನಿಗೆ ಇವರು ಸರಸ್ವತಿಯ ಅವತಾರ ಎಂಬಷ್ಟು ಗೌರವ ಬೆಳೆದಿದ್ದ ವೆಂಕಟದಾಸಪ್ಪನವರ ಬಗ್ಗೆ ತಾತ್ಸಾರವಾಗಿ ನುಡಿದ ಮೇಲೆ ಆ ಬಯಕೆ ಮತ್ತಷ್ಟು ಸೆಟೆದಿತ್ತು.

'ಒಂದು ದಿನ ಇವಳು ಸೋತು, ಸೋತು ಕಣ್ಣೀರಿಡುವುದನ್ನು ನೋಡಬೇಕು'

—ಎಂದು ಮತ್ತೆ ಮತ್ತೆ ಆ ಭಾವನೆ ಅವನ ಹೃದಯವನ್ನು ಕೆರಳಿಸು ತ್ತಿತ್ತು.

ಹಾಗೇ ಗೌರಮ್ಮನೂ ಅವನನ್ನು ದಿನದಿನವೂ ಛೇಡಿಸುತ್ತಿದ್ದಳು.

'ನಿಮ್ಮ ಅಯ್ಯನೋರಿಗೆ ನನ್ನ ಆಟದ ಪಂದ್ಯಾನ ಹೇಳಿದ್ರಾ? ಯಾಕೆ ಸುಮ್ನಾಗಿಬಿಟ್ರಿ. ನಿಮ್ಮಯ್ಯನೋರೂ ಹೆದರಿಬಿಟ್ರು. ಪಾಪ! ಪದ

ಬರಿಯೋರ್ಗ್ಗೇನು ಗೊತ್ತು ಪಗಡೆ ಆಟ!'

—ಎಂದು.

ಅವಳ ಬಾಯಿಂದ ಆ ಮಾತು ಕೇಳಿದಾಗ ವೀರಣ್ಣನ ಹೃದಯಕ್ಕೆ 'ಸುಮ್ಮನಿರಲಾರದೆ, ಈ ಗಯ್ಯಾಳಿಯ ಬಾಯಿಗೆ ಅಯ್ಯನವರು ಬಿದ್ದು, ನಗೆ ಪಾಟಲಾಗಲು ನಾನು ಕಾರಣವಾದೆನಲ್ಲಾ' ಎಂದು ತೀವ್ರ ವ್ಯಥೆಯಾಗು ತ್ತಿತ್ತು; ಹಾಗೇ—'ಹೇಗಾದರೂ ಅವರೊಂದು ಬಾರಿ ಇವಳೊಂದಿಗೆ ಆಟ ಮಾಡಿ, ಗೆದ್ದು ಇವಳ ಸೊಕ್ಕನ್ನು ಮುರಿದರೆ—' ಎಂದು ಕಾತರಿಸುತ್ತಿತ್ತು. 'ಇವಳಿಂದ ಹಗಲೆಲ್ಲಾ ಹಂಗಿಸಿಕೊಳ್ಳುವುದಕ್ಕಿಂತ ದಾಸಣ್ಣನೋರ ಕಿವೀ ಮೇಲೆ ಈ ಮಾತು ಹಾಕಿ. 'ಒಂದು ದಿನ ಹೆಂಗಾದ್ರೂ ಮಾಡಿ ಆಡಿಬಿಡಿ' ಎಂದು ಹೇಳಬೇಕು ಎಂದು ಚಿಂತಿಸುತ್ತಿದ್ದ.

ಆದರೆ ಆ ಮಾತನ್ನು ಹೇಗೆ ಹೇಳುವುದು? ವಿನಾಕಾರಣ ನನ್ನ ಹೆಂಡತಿಯ ಮುಂದೆ ನಿಮ್ಮ ಹೆಸರು ತೆಗೆದು, ನಿಮ್ಮನ್ನು ಪಂದ್ಯಕ್ಕೆ ಒಡ್ಡಿ ಬಂದಿದ್ದೇನೆ ಎಂದರೆ ಅವರು ಏನನ್ನಬಹುದು? ಬೇಸರಮಾಡಿಕೊಳ್ಳಲಿಕ್ಕಿಲ್ಲವೇ? ಸಣ್ಣ ಜನದ ಸ್ನೇಹಮಾಡಿ ಸಣ್ಣ ಮಾತು ಕೇಳಬೇಕಾಗಿ ಬಂತು ಎಂದು ಸಿಟ್ಟು ಮಾಡಿಕೊಂಡರೆ ಏನು ಗತಿ? ಅನೈಚ್ಛಿಕವಾಗಿ ಒದಗಿಬಂದ ಈ ಸಮಸ್ಯೆಯಿಂದ ಪಾರಾಗುವ ದಾರಿ ಏನು—ಎಂಬ ಚಿಂತೆ ಬೇತಾಳದಂತೆ ಅವನ ಮಿದುಳ ನ್ನೇರಿತು.

ಬಹಳ ದಿನ ಆ ಚಿಂತೆಯನ್ನು ಹೊತ್ತು ಬಳಲಲಾರದೆ, ಕಡೆಗೊಂದು ದಿನ, ಆ ವಿಷಯವನ್ನು ವೆಂಕಟದಾಸಪ್ಪನವರ ಕಿವಿಗೆ ಹಾಕಿದ— ಅವರು ಒಂಟಿಯಾಗಿ ಸಿಕ್ಕಿದಾಗ.

'ದಾಸಣ್ಣ, ಈಗ ನಾನೊಂದು ಭಾರೀ ಪೇಚಿನಾಗೆ ಬಿದ್ದಿವ್ನಿ. ಹೆಂಗಾರ ಬಿಡ್ಸಬೇಕಲ್ಲಾ'.

—ಎಂದ ವೀರಣ್ಣ ಚಿಂತೆಯಿಂದ ಭಾರವಾದ ಸ್ವರದಲ್ಲಿ.

ಎಂದೂ ಯಾವ ಚಿಂತೆಯನ್ನೂ ಹೇಳಿಕೊಳ್ಳದ, ಯಾವ ನೆರವನ್ನೂ ಬೇಡದ ವೀರಣ್ಣ, ಆ ದಿನ ಅನಿರೀಕ್ಷಿತವಾಗಿ ಹೇಳಿದ ಮಾತನ್ನು ಕೇಳಿ ವೆಂಕಟದಾಸಪ್ಪನವರಿಗೆ ಆಶ್ಚರ್ಯವಾಯಿತು.

'ಏನು... ನೀನು ಪೇಚಿನಲ್ಲಿ ಬಿದ್ದಿದ್ದೀಯಾ? ನಾನು ಬಿಡಿಸ ಬೇಕೇ?'

—ಆಶ್ಚರ್ಯದಿಂದ ಕೇಳಿದರು

'ಹೂ, ಕಣಣ್ಣ.''

'ಅದೇನು ಹೇಳು. ಹೇಳು ನನ್ನಿಂದಾದರೆ ಆ ಕೆಲಸ ಖಂಡಿತ ಮಾಡಿ ಕೊಡುತ್ತೇನೆ.'

'ನಿನ್ನಿಂದಲೇ ಆಗಬೇಕು ಆ ಕೆಲಸ'.

'ನನ್ನಿಂದಲೇ—ಬೇರೆಯವರು ಯಾರೂ ಮಾಡಲಾಗದಂಥ ಕೆಲಸವೇ ಅದು?'.

'ಬ್ಯಾರೆಯೋರಿಂದ ಆಗಭೋದು, ಬಿಡಭೋದು. ಆದ್ರೆ—ಈಗ ಅದಂ ನಿನ್ನಿಂದಲೇ ಆಗಬೇಕಾಗಿ ಬಂದಿದೆ.'

'ಹಾಗೇ. ಅದೇನು ಸಮಾಚಾರ ಹೇಳು ನೋಡೋಣ.'

'ನೋಡೋಣ ಅಂದ್ರೆ ಆಗಾಕಿಲ್ಲ__ ಮಾಡ್ಲೇಬೇಕಂ.'

'ಒಂದು ವೇಳೆ— ನನ್ನ ಕೈಲಿ ಆಗದೆ ಹೋದರೆ...'

'ಆಗದೆ ಹೋದ್ರೆ, ಗೀದ್ರೆ ಅನ್ನೋಹಂಗೇ ಇಲ್ಲ ಮಾಡ್ಲೇ ಬೇಕಂ. ಇಲ್ದೆ ಹೋದ್ರೆ ನನ್ನ ಮಾನ, ನಿನ್ನ ಮರ್ಯಾದೆ ಎರಡೂ ಉಳಿಯಾಕಿಲ್ಲ. ಹೆಣ್ಣು ಹೆಂಗಸು ಊರಾಗೆಲ್ಲಾ ಹೆಸರು ಹಲಾಕಂ ಮಾಡಿಬಿಡ್ತಾಳೆ.'

ವೀರಣ್ಣ—ಹೆಸರು, ಮರ್ಯಾದೆ, ಹೆಂಗಸು, ಊರು, ಹಲಾಕಂ ಎಂದದ್ದನ್ನು ಕೇಳಿ, ಅದುವರೆಗೂ ಲಘುವಾಗಿ ಮಾತನಾಡುತ್ತಿದ್ದ ವೆಂಕಟ ದಾಸಪ್ಪನವರು ಗಂಭೀರವಾಗಿ—

'ಹೆಂಗಸು ನಮ್ಮ ಹೆಸರು ಹಳಾಕು ಮಾಡುತ್ತಾಳೆಯೇ? ಯಾವ ಹೆಂಗಸು?'

—ಎಂದು ಗಂಭೀರವಾಗಿ ಕೇಳಿದರು.

'ಗೌರಿ'

'ಅಂದರೆ—'

'ನನ್ನ ಮನೆಯೋಳು'

'ಆಕೆಗೂ ನನಗೂ ಏನು ಸಂಬಂಧ? ಇವತ್ತಿನವರೆಗೂ ಒಂದು ದಿನವೂ ನಾನಾಕೆಯ ಕೈಯ್ಯಲ್ಲಿ ಒಂದು ಮಾತಾದರೂ ಆಡಿಲ್ಲ. ಒಂದು ಸಲವಾದರೂ ಆಕೆಯನ್ನು ತಲೆಯೆತ್ತಿ ನೋಡಿಲ್ಲ. ಆಕೆ ಕೆಂಪೋ ಕಪ್ಪೋ

ಅನ್ನುವುದೂ ನನಗೆ ತಿಳಿಯದು. ಹೀಗಿರುವಾಗ ನನ್ನ ಹೆಸರೇಕೆ ಹಲಾಕು ಮಾಡುತ್ತಾಳೆ?'

—ವೀರಣ್ಣನ ಮಾತು ಕೇಳಿ ಚಿಂತೆಯ ಪರ್ವತವೇ ನೆತ್ತಿಯ ಮೇಲೆ ಕುಸಿದುಬಿದ್ದವರಂತೆ ಕೇಳಿದರು ವೆಂಕಟದಾಸಪ್ಪ.

'ಛಿ...ಛಿ... ಅಂಥ ಮಾತಲ್ಲ. ನಿನ್ನ ವಿಷಯದಾಗೆ ಅಂಥ ಮಾತಾ ಡಿದ್ರೆ ಆಡಿದೋರ ಬಾಯಾಗೆ ಹುಳ ಬಿದ್ದಾವು. ನಾನು ಹೇಳಿದ್ದು ಹಂಗಲ್ಲ–'

—ವೆಂಕಟದಾಸಪ್ಪನವರ ಭೀತಿನಿವಾರಣೆ ಮಾಡಿ ಹೇಳಿದ ವೀರಣ್ಣ.

'ಸದ್ಯ—ಬದುಕಿದೆ. ಇದೇನು ಗಂಡಾಂತರ ಬಂತಪ್ಪಾ ಇದ್ದಕ್ಕಿದ್ದ ಹಾಗೇ ಅಂತ ಹೆದರಿದ್ದೆ. ಹೋಗಲಿ ಬಿಡು— ಪೀಡೆ ಬಗೆಹರಿಯಿತು. ಇನ್ನೇನು ಹೇಳಿಕೊಂಡರೂ ನನಗೆ ಯೋಚನೆಯಿಲ್ಲ.'

—ಭೀತಿ ನಿವಾರಣೆಯಾದ ನಿಟ್ಟುಸಿರಿ ಟ್ಟು ಹೇಳಿದರು ವೆಂಕಟದಾಸಪ್ಪ.

'ಹಂಗಂದುಕೊಂಡು ಸುಮ್ನೆ ಇರೋಹಂಗಿಲ್ಲ. ನನ್ನ ಕುತ್ತಿಗ್ಗೇ ಬಂದೈತೆ ಇದು. ನಾವು ಸುಮ್ನಿದ್ರೂ, ಅವಳು ಸುಮ್ನಿರಾಕಿಲ್ಲ.'

'ಮತ್ತೂ ಬಳಸು ಮಾತಾಡಬೇಡ ವೀರಣ್ಣ. ಅದೇನು ಹೇಳು. ನಿನ್ನ ಹೆಂಡತಿಗೆ ನನ್ನ ಮೇಲೆ ಏಕಷ್ಟು ವೈರ?'

'ವೈರ ಅಲ್ಲ ಕಣಣ್ಣ—ಬರೀ ಹಟ.'

'ಏಕೆ?'

'ಅದಕ್ಕೆಲ್ಲಾ ನಾನೇ ಕಾರಣ. ಅವಳು ಪಗಡೆಯಾಟ್ದಾಗೆ ಬಾಳ ಚಾಲೂಕಿ. ಅವಳು ಮನೆಗೆ ಕಾಲಿಟ್ಟ ದಿನದಿಂದ ಇವತ್ತಿನವರ್ಗೂ ದಿನಾಗಲೂ ಆಟ ಆಡ್ತಾ ಇವ್ನಿ. ಆದ್ರೆ ಒಂದಾಟವಾದರೂ ಗೆದ್ದದ್ದಿಲ್ಲ. ನಮ್ಮಪ್ಪನ ಕಾಲ್ದಾಗ್ನಿಂದ ನಾನು ಆ ಆಟ ಕಾಣೆ. ದಾಳ ಹೆಂಗಿರ್ತದೂ ಕಂಡಿರ್ನಿಲ್ಲ. ದಿನಾ ಅವಳೇ ಗೆಲ್ಲೋಳು. ಗೆದ್ದುಕೊಂಡು ಹೋಗ್ಲಿ, ಗೆದ್ರೆ ನನ್ನೆಂಡ್ತಿನೇ ತಾನೇ ಗೆದ್ದೋಳು ಅಂತ ನಾನೂ ಇದ್ರೆ, ಅವಳಿಗೆ ಅದೇ ಮಹಾ ಶೇಂಕಾರ ಆಗಿಬಿಟ್ಟಿದೆ. ಅವಳನ್ನು ಹಿಡಿಯೋದೇ ಅಸಾಧ್ಯ ಆಗೋಗದೆ. ನನ್ನವ ಪಗಡಿ ಆಡಿ ಯಾರು ಗೆಲ್ತಾರೊ ಗೆಲ್ಲಲಿ ಅಂತ ಷರಾರತ್ತು ಮಾಡ್ತಾ ಅವಳೆ–ಮಿಂಟುಕುಗಾತಿ.'

'ಮಾಡಿಕೊಂಡು ಹೋಗಲಿ ಬಿಡು. ನನಗೂ ಅದಕ್ಕೂ ಏನು ಸಂಬಂಧ?'

'ಈಗ ಹಾಗನ್ನೋ ಹಂಗಿಲ್ಲ ಕಣಣ್ಣ, ನಿನ್ನ ಮೇಲೂ ಒಂದು ಕೈ ಅಂತ ಸವಾಲು ಹಾಕವ್ಳೆ.'

'ನನ್ನ ಮೇಲೆ! ಇದ್ದಕ್ಕಿದ್ದ ಹಾಗೆ ನನ್ನ ಮೇಲೆ ಏಕೆ ಸವಾಲು. ಪಗಡೆ ಆಟದಲ್ಲಿ ನಾನು ಪಂಡಿತ ಅಂತ ಯಾರ ಮುಂದೂ ಹೇಳಿಕೊಳ್ಳ ಲಿಲ್ಲವಲ್ಲ...'

'ನೀನು ಹೇಳಿಕೊಳ್ಳಲಿಲ್ಲ— ನಾನು ಹೇಳಿದ.'

'ನೀನು ಹೇಳಿದೆಯಾ? ಏಕೆ? ನಿನ್ನ ಮುಂದೆ ನಾನು ಹಾಗಂತ ಎಂದಾದರೂ ಹೇಳಿಕೊಂಡಿದ್ದೆನೆ? ಹೇಳಿಕೊಳ್ಳೋದೇನು ಬಂತು. ಆ ಆಟಾನೇ ನನಗೆ ಗೊತ್ತಿಲ್ಲ.'

'ನೀನು ಹೇಳೋದೆಲ್ಲಾ ನಿಜಾನೆ. ನೀನು ಹೇಳಿಕೊಳ್ಳಲಿಲ್ಲ. ನಾನೂ ಹಂಗಂತ ಹೇಳಲಿಲ್ಲ. ಏನೋ ಮಾತಿಗೆ ಬಂದು ಏನೋ ಹೇಳಿದರೆ ಅದೇ ಪಟ್ಟಾಗಿ ಹಿಡಿದುಕೊಂಡುಬಿಟ್ಟಿದ್ದಾಳೆ.''

'ಏನು ಮಾತು ಬಂತು?'

—ವೆಂಕಟದಾಸಪ್ಪನವರು ಕೇಳಿದರು.

ವೀರಣ್ಣ ನಿಧಾನವಾಗಿ ತನಗೂ ತನ್ನ ಹೆಂಡತಿಗೂ ನಡೆದ ವಾಗ್ವಾದ, ಅದರ ಹಿನ್ನಲೆ, ಪರಿಣಾಮಗಳನ್ನು ಕೂಲಂಕಷವಾಗಿ ವಿವರಿಸಿ—

'ಮಹಾ ಸೊಕ್ಕಿನ ಹೆಣ್ಣು ಕಣಣ್ಣ. ಸದಾ ಬರಪ್ಪಂಗಿಲ್ಲ ಪಗಡೆ ಆಟ ಅಂತ ದಿನಾ ರೇಗಿಸ್ತವ್ಳೆ. ಹಟಕ್ಕೆ ಬಿದ್ದಿದ್ದಕ್ಕೆ ಅಂಥ ನಾಟ್ಕಾನೇ ಬರ್‍ದೆ. ಮತ್ತೆ ಹೆಂಗಾದ್ರೂ ಮಾಡಿ ಒಂದ್ಸಲ ಅವಳನ್ನ ಆಟದಲ್ಲಿ ಸೋಲಿಸಿಬಿಟ್ರೆ ನೀನು ಕೇಳಿದ್ದು ಕೊಡ್ತೀನಿ. ಅವಳ ಗರ್ವ ಅಡಗಿಸಿ ಮತ್ತೆ ಮಾತಾಡ್ದಂಗೆ ಮಾಡ್ಬೇಕು. ನನ್ನ ಕೈಯಾಗಂತೂ ಅದು ಬಗೆ ಹರಿಯಾಕಿಲ್ಲ. ನೀನೇ ಸೈ'

—ಎಂದ.

ವೀರಣ್ಣ ಹೇಳಿದ ಗಂಡ ಹೆಂಡತಿ ಜಗಳ, ಪಂದ್ಯದ ಕಥೆ ಕೇಳಿ ವೆಂಕಟದಾಸಪ್ಪನವರಿಗೆನಗು ಬಂತು ದೊಡ್ಡದಾಗಿ ನಕ್ಕು—

'ನೀನು ಪರವಾಗಿಲ್ಲ ವೀರಣ್ಣ, ಏನೋಂತ ಇದ್ದೆ ನನ್ನ ಪಾಡಿಗೆ

ನಾನು ಭಗವಂತಾ ಅಂತ ಇದ್ರೆ ಒಳ್ಳೇ ಬೇಟೇನಾಯೀನೇ ಛೂ ಬಿಟ್ಟು, ಎಲ್ಲಿ ಓಡು ನೋಡೋಣ ಹೇಗೆ ಓಡುತ್ತೀಯೋ ಅನ್ತೀಯಲ್ಲಾ? ಕಂಡವರ ಮಕ್ಕಳನ್ನು ಭಾವೀಗೆ ತಳ್ಳಿ, ಆಳ ನೋಡೋ ಜಾಣತನ ಇದೇ ಅಲ್ಲವೆ?

—ಅಂದರು.

ವೆಂಕಟದಾಸಪ್ಪ ವಿನೋದಕ್ಕೆಂದು ಆಡಿದ ಮಾತು ವೀರಣ್ಣನ ಎದೆ ಯಲ್ಲಿ ಮುಳ್ಳಿನಂತೆ ಮುರಿಯಿತು. ಆ ನೋವಿನಿಂದ ನರಳುತ್ತಾ ವ್ಯಥೆ ತುಂಬಿದ ಧ್ವನಿಯಲ್ಲಿ ಹೇಳಿದ:

'ನಮ್ಮಪ್ಪನಾಣೇಗೂ ನನಗಂಥ ಬುದ್ಧಿ ಇಲ್ಲ. ಯಾವತ್ತಾರೂ ಹೀಗಂದ್ಕೊಂಡಿದ್ರೆ ನನ್ನ ಮನೆ ಎಕ್ಕಾ ಹುಟ್ಕೋಗ್ಲಿ. ಏನೋ ನನ್ನ ಹೆಂಡತಿ ಅಂತ ಅವಳ ಎದುರಿಗೆ ಏನೊ ಹೇಳಿದ್ದೇ ಹಿಂಗಾಗೋಯ್ತು. ಹಾಳು ಬಾಯಿ ಬಿಕ್ಕೊಂಡಿದ್ರೆ ಚೆನ್ನಾಗಿತ್ತು...'

'ನನ್ನ ಮಾತನ್ನು ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಡ ವೀರಣ್ಣ ನಾನೂ ವಿನೋದಕ್ಕೆ ಹೇಳಿದೆ. ನಿನ್ನ ಹೆಂಡತಿಗೆ ಅಷ್ಟು ಹರಾರತ್ತಿದ್ದರೆ, ಅದೂ ಒಂದು ಆಟ ಹೋಗಲಿ. ನೋಡೇಬಿಡೋಣ— ಏನಾಗುತ್ತೊ. ನಿನ್ನ ಮಾತು, ನನ್ನ ಮಾತು ಎರಡೂ ಒಂದೇ. ಒಂದೆರಡು ದಿನ ಅವಕಾಶ ಕೊಡು. ಅದೇನಾಟಾನೊ ತಿಳಿದುಕೋತೀನಿ. ಆ ಮೇಲೆ ಯಾವತ್ತು ಬೇಕಾದರೂ ನಮ್ಮ ಮಾನ ಪರೀಕ್ಷೆ ಆಗಲಿ'.

—ಎಂದು ವೀರಣ್ಣನ ವ್ಯಥೆಯನ್ನು ನಿವಾರಿಸಿ, ಆಶ್ವಾಸನ ಕೊಟ್ಟರು ವೆಂಕಟದಾಸಪ್ಪನವರು. ಅವರು ಆ ಮಾತು ಆಡಿದ್ದನ್ನು ಕೇಳಿಯೇ ಆಟದಲ್ಲಿ ಗೆದ್ದಷ್ಟು ಸಂತೋಷವಾಯಿತು ವೀರಣ್ಣನಿಗೆ.

'ಇನ್ನವಳಿಗೆ ಪಕ್ರಸಿತು, ಸೋಲಿನ ಪಟ್ಟ! ಇಷ್ಟು ದಿನ ಅದೇನು ಮೇರೀತಾ ಇದ್ದಳು!'

—ಎಂದ ಉತ್ಸಾಹದ ಧ್ವನಿಯಲ್ಲಿ.

'ಸೋಲಿನ ಪಟ್ಟ ಯಾರಿಗೆ ಕಾದಿದೆಯೋ ಅದು ಮುಂದಿನ ಮಾತು. ಅವಳು ಆಟ ಬಲ್ಲವಳು. ನಾನು ಒಂದು ದಿನವೂ ದಾಳ ಉರುಳಿಸಿ ಅರಿಯೆ. ಆದ್ದರಿಂದ ಈಗಲೇ ಹಿಗ್ಗಿ ಏನು ಪ್ರಯೋಜನ? ಗೆದ್ದು ಗೆದ್ದ ಮೇಲೆ ಆ ಮಾತಾಡೋಣ.'

—ಎಂದರು ವೆಂಕಟದಾಸಪ್ಪ ವೀರಣ್ಣನ ಉತ್ಸಾಹಕ್ಕೆ ತಣ್ಣೀರು ಎರಚುತ್ತಾ.

'ಹಂಗಾಗೋಲ್ಲ. ನನಗೆ ಗೊತ್ತೈತೆ. ನೀನು ದಾಳ ಹಿಡಿದು ಕೊಟ್ಟರೆ, ಅವಳು ಸೋಲೋದೇ ಖಂಡಿತ'

—ಎಂದ ವೀರಣ್ಣ, ವೆಂಕಟದಾಸಪ್ಪನವರ ನಿರುತ್ಸಾಹದ ಮಾತಿನಿಂದ ಕೊಂಚವೂ ಕುಗ್ಗದ ಸ್ವರದಲ್ಲಿ.

'ನನ್ನಲ್ಲಿ ಅಷ್ಟು ನಂಬಿಕೆಯೇ?'

—ವೆಂಕಟದಾಸಪ್ಪ ಕೇಳಿದರು.

'ಹೂಂ'

ಆದರೆ ನನಗೆ ಆಟವೇ ಗೊತ್ತಿಲ್ಲವಲ್ಲ ವೀರಣ್ಣ'

'ಆ ಗೊತ್ತಿಲ್ದಿದ್ರೇನು— ಅದೃಷ್ಟ ಹೆಂಗೈತೇಂತ ನಾನು ಬಲ್ಲೆ'.

—ಎಂದ ವೀರಣ್ಣ ದೃಢವಿಶ್ವಾಸದ ಧ್ವನಿಯಲ್ಲಿ.'

'ಆಗಲಿ, ನಿನ್ನ ಉತ್ಸಾಹ ನಾನೇಕೆ ಕೆಡಿಸಲಿ. ನನ್ನ ಅದೃಷ್ಟ ಹೇಗಿದೆಯೋ ನಾನೂ ನೋಡೇಬಿಡುತ್ತೇನೆ.'

—ಎಂದು ವೆಂಕಟದಾಸಪ್ಪ ಮಾತು ಮುಗಿಸಿದರು. ಅಂದಿನವರೆಗೂ ಚಿಂತೆಯ ಭಾರದಿಂದ ಕುಗ್ಗಿದ್ದ ವೀರಣ್ಣ' ಉತ್ಸಾಹದಿಂದ ಗೆಲುವಾಗಿ ಮನೆಗೆ ಹೋದ— ಚಿಂತೆಯನ್ನು ಅಲ್ಲೇ ಬಿಟ್ಟು.

ಅವನನ್ನು ಬಿಟ್ಟ ಚಿಂತೆ ವೆಂಕಟದಾಸಪ್ಪನವರಿಗೆ ಅಂಟಿಕೊಂಡಿತ್ತು.

ಆಟದ ಮನೆಯಿಂದ ವೀರಣ್ಣನ ಚಿಂತೆಯನ್ನು ಹೆಗಲ ಮೇಲೆ ಹೊತ್ತು ಕೊಂಡು ಬಂದ ವೆಂಕಟದಾಸಪ್ಪನವರು, ಊಟ ಮುಗಿಸಿದ ಕೂಡಲೇ, ತಾಯಿಯನ್ನು 'ಅಮ್ಮಾ, ಒಂದಾಟ ಪಗಡೆ ಆಡೋಣ ಬಾ' ಎಂದು ಕರೆದರು.

'ಹೋಗೋ ಮೂದೇವಿ. ಮಾಡೋ ಕೆಲಸ ಬಿಟ್ಟು ಓಡ್ಹೋಗೊ ದಾಸಯ್ಯನ ಹಿಂದೆ ಹೋದರೂಂತ, ಪಗಡೆ ಆಟ ಅಂತೆ. ಮೈಮುರಿಯೋ ಅಷ್ಟು ಮನೆಕೆಲಸ ಇದೆ.'

—ಎಂದರು ಲಕ್ಷ್ಮೀದೇವಮ್ಮ.

'ಇವತ್ತು ನೀನು ಅದೇನು ಹೇಳಿದರೂ ಕೇಳೋಲ್ಲ, ಒಂದೇ ಒಂದಾಟ

ಆಡಿಬಿಟ್ಟು. ಬೇಕಾದ ಮನೆಕೆಲಸ ಮಾಡಿಕೋ. ನಾನೇನೂ ಅಡ್ಡಿ ಬರೋಲ್ಲ'.

'ಅದೇನು ಇವತ್ತು ಎಂದೂ ಇಲ್ಲದ ಪಗಡೆ ಆಟದ ಹುಚ್ಚು.?'

'ಹಾಗೆ. ಆ ಆಟ ಕಲಿತುಕೊಳ್ಳಬೇಕು ಅನ್ನಿಸ್ತು. ಅದಕ್ಕೆ.'

'ಹೂ—ಹೀಗೇ ನಾಟಕವಾಯಿತು. ಈಗ ಪಗಡೆ ಆಟ. ನಾಳೆ ಇನ್ನೊಂದು—ಹೀಗೆ ದಿನಕ್ಕೊಂದು ಹೊಸ ಹುಚ್ಚು ಕಲಿತುಕೋ ಉದ್ಧಾರ ಆಗ್ತೀಯಾ'

—ಎಂದು ಮಗನನ್ನು ಆಡಿದರೂ. ಅವನ ಒತ್ತಾಯಕ್ಕೆ ಕಟ್ಟುಬಿದ್ದು ಲಕ್ಷ್ಮೀದೇವಮ್ಮ, ಪೆಟ್ಟಿಗೆಯಲ್ಲಿಟ್ಟಿದ್ದ ಪಗಡೆಹಾಸು, ದಾಳ, ಕಾಯಿಗಳನ್ನು ಹೊರಗೆ ತೆಗೆದುಹೂಡಲೇಬೇಕಾಯಿತು. ತಾಯಿಯೊಂದಿಗೆ ಒಂದೆರಡು ಆಟ ಹೂಡಿ ಪಗಡೆ ಆಟವನ್ನಾಡಿ ವೆಂಕಟದಾಸಪ್ಪನವರು, ಆ ಆಟದ ವಿಧಿ ನಿಯಮಗಳನ್ನು ಅರಿತುಕೊಂಡರು. ಮೊದಮೊದಲು. 'ಗರ ಬಿದ್ದ ಹಾಗೆ ನಡೆಸುವುದು. ಸರಿಯಾದ ಗರ ಬಿದ್ದರೆ ಕಣ್ಣು ಮುಚ್ಚಿಕೊಂಡು ಗೆಲ್ಲಬಹುದು' ಎಂದಿದ್ದ ವೆಂಕಟದಾಸಪ್ಪನವರಿಗೆ ಬಹು ಬೇಗ ಗರ ಬೀಳುವಷ್ಟೇ ಕಾಯಿಗಳನ್ನು ನಡೆಸುವ ಜಾಣ್ಮೆಯೂ ಮುಖ್ಯ ಎಂಬುದು ಮನವರಿಕೆಯಾಯಿತು.

ಒಂದೆರಡು ದಿನ, ಹೀಗೆ ತಾಯಿಯೊಂದಿಗೆ ಪಗಡೆಯಾಡಿ. ಆ ಆಟಕ್ಕೆ ಬುದ್ಧಿಯನ್ನು ಪಳಗಿಸಿಕೊಂಡ ಬಳಿಕ ವೆಂಕಟದಾಸಪ್ಪನವರು ಗೌರಮ್ಮನೊಂದಿಗೆ ಪಗಡೆಯಾಡಲು ಸಿದ್ಧವಾದರು.

'ನಿನ್ನ ಬುದ್ಧಿ ನೆಟ್ಟಗಿಟ್ಟುಕೋ. ಈ ದಿನ ಐನೋರ್ರ್ತವ ಆಟ ಆಡೋಕೆ'

—ಎಂದು ವೀರಣ್ಣ, ಗೌರಮ್ಮನಿಗೆ ಆ ಸುದ್ದಿಯನ್ನು ತಿಳಿಸಿದ.

'ಇಷ್ಟು ದಿನ ನಿನ್ನದಾಯ್ತು. ಇವತ್ತಿನಿಂದ ನಿಮ್ಮ ಅಯ್ಯನೋರ್ದ್ದು ಸೋಲೋ ಸರದಿ'.

—ಎಂದು ಗೌರಮ್ಮನೂ ಪಂದ್ಯಕ್ಕೆ ಸಿದ್ಧಳಾದಳು.

ಒಂದು ದಿನ ಮಧ್ಯಾಹ್ನ ಎಲ್ಲರದೂ ಊಟ ಮುಗಿದ ಮೇಲೆ, ವೀರಣ್ಣನ ಮನೆಯಲ್ಲಿ ಪಗಡೆಯ ಪಂದ್ಯ ಆರಂಭವಾಯಿತು. ಗೌರಮ್ಮ ವೆಂಕಟದಾಸಪ್ಪ ನವರು ಇಬ್ಬರೂ ಎದುರಾಳಿಗಳಾಗಿ ಕುಳಿತರು. ವೀರಣ್ಣ ಪ್ರೇಕ್ಷಕನಾಗಿ, ತೀರ್ಪುಗಾರನಾಗಿ ಕುಳಿತ. ಪಂದ್ಯದ ಪರಿಣಾಮ ಏನಾಗುವುದೋ ಎಂದು, ಆಟಗಾರರಿಗಿಂತ ವೀರಣ್ಣನ ಎದೆ ಹೆಚ್ಚು ಹೊಡೆದುಕೊಳ್ಳುತ್ತಿತ್ತು.

'ಹೇಗಾದರೂ ಇದು ಒಂದು ಸೋಲುವ ಕುರಿ' ಎಂಬ ತಾತ್ಸಾರದಿಂದ ಗೌರಮ್ಮ, ದಾಳವನ್ನು ಉರುಳಿಸಿ, ಒಂದು ಕಡೆಯ ಜೋಡಿಕಾಯಿಯನ್ನು ಬಿಚ್ಚಿ ನಡೆಸಿದಳು. ವೆಂಕಟದಾಸಪ್ಪನವರೂ ದಾಳ ಹಾಕಿ. ಇದಿರು ಮನೆಯ ತಮ್ಮ ಜೋಡಿಯನ್ನು ಬಿಚ್ಚಿ ನಡೆಸಿದರು.

ಆಟ ಆರಂಭವಾಯಿತು.

ವೀರಣ್ಣ ಬಿಡುಗಣ್ಣನಾಗಿ ಆಟವನ್ನು ನೋಡುತ್ತಿದ್ದ. ಅವನ ಕೈ ಯಾಂತ್ರಿಕವಾಗಿ, ಪಕ್ಕದಲ್ಲಿಟ್ಟುಕೊಂಡಿದ್ದ ಹುರಿದ ಕಡಲೆಕಾಯಿಯ ಸಿಪ್ಪೆ ಯನ್ನು ಬಿಡಿಸಿ ಕಾಳನ್ನು ಬಾಯಿಗೆ ಹಾಕಿಕೊಳ್ಳುತ್ತಿತ್ತು.

ಹತ್ತು—ಹದಿನೈದು ಬಾರಿ ದಾಳ ಉರುಳಿಸಿ, ಕಾಯಿ ನಡೆಸುವುದ ರೊಳಗೆ, ವೆಂಕಟದಾಸಪ್ಪನವರಿಗೆ ತಮ್ಮ ತಾಯಿ ಆಟವಾಡುತ್ತಿದ್ದ ರೀತಿಗೂ, ಗೌರಮ್ಮನ ಆಟದ ರೀತಿಗೂ ವಿಶೇಷ ವ್ಯತ್ಯಾಸವಿರುವುದು ಅರಿವಾಯಿತು. ಗೌರಮ್ಮ ಕಾಯಿಗಳನ್ನು ಬಿಚ್ಚಿ ನಡೆಸುವ ರೀತಿಯಲ್ಲಿ, ಅವನ್ನು ಕೂಡಿಸುವ ಕ್ರಮದಲ್ಲಿ ವ್ಯೂಹರಚನೆಯ ಚಾತುರ್ಯವಿತ್ತು. ತನ್ನ ದಾವ ಬಳಿಕ ಅವನಿಗೆ

ಏನು ಗರ ಬಿದ್ದರೆ ಹೇಗೆ ಕಾಯನ್ನು ನಡೆಸಬಹುದು ಎನ್ನುವುದನ್ನು ಊಹಿಸಿ ದಂತೆ ತನ್ನ ಕಾಯನ್ನು ನಡೆಸುತ್ತಿದ್ದಳು. ಹಾಗೇ ದಾಳ ಉರುಳಿಸುವಾಗಲೂ. ಇಂಥದೇ ಗರ ಬೇಕು ಎನ್ನುವಾಗ ಅವಳು ದಾಳಗಳನ್ನು ಜೋಡಿಸಿ ಹಿಡಿದು ಕೊಳ್ಳುತ್ತಿದ್ದ ರೀತಿ, ಅವುಗಳನ್ನು ಅಂಗೈಯಲ್ಲಿ ಆಡಿಸುವ ವೇಗ, ದಾಳಗಳನ್ನು ಉರುಳಿಸುವ ಬಗೆಯಲ್ಲಿ, ಏನೋ ಒಂದು ಬಗೆಯ ಜಾಣತನ ಎದ್ದು ಕಾಣುತ್ತಿತ್ತು.

ಅವಳ ಆಟದ ಚಾತುರಿಯನ್ನು ಕಂಡು, ನೋಡುತ್ತಿದ್ದ ವೀರಣ್ಣ ಮೆಚ್ಚಿ ತಲೆದೂಗುವುದಿರಲಿ, ಇದಿರಾಳಿಯಾಗಿ ಆಡುತ್ತಿದ್ದ ವೆಂಕಟದಾ ಸಪ್ಪನವರೇ ನಾಲ್ಕಾರು ಬಾರಿ ಮೆಚ್ಚಿ ತಲೆ ತೂಗುವಂತಾಯಿತು.

ಮೊದಲ ಆಟ ಅಂದುಕೊಂಡಿದ್ದಕ್ಕಿಂತ ಬೇಗ ಮುಗಿಯಿತು. ಪರಿಣಾಮ ಗೌರಮ್ಮ ಊಹಿಸಿದಂತೆಯೇ ಆಯಿತು— ವೆಂಕಟದಾಸಪ್ಪನವರು ಸೋತರು. ಗೌರಮ್ಮನ ಎಂಟೂ ಕಾಯಿ ಹಣ್ಣಾಗಿ, ವೆಂಕಟದಾಸಪ್ಪನವರದು ಆರಂ ಕಾಯಿ ಮೇಲಿಂದ ಮೇಲೆ ಏಟು ತಿಂದು ಕಾಯಾಗೇ ಉಳಿದವು.

ಆಟದ ಪರಿಣಾಮವನ್ನು ಕಂಡು, ಗೆಲುವಿನ ಉತ್ಸಾಹದಿಂದ ಬೆಳಕಾದ ಗೌರಮ್ಮನ ಮುಖವನ್ನು ನೋಡಲಾಗದೆ ವೀರಣ್ಣ ಅತ್ತಿತ್ತ ನೋಡತೊಡಗಿದ. ವೆಂಕಟದಾಸಪ್ಪನವರ ಮುಖ ಸೋಲಿನ ಬೇಕಿಯಲ್ಲಿ ಕಾದು ಕೆಂಪೇರಿತು. ಅವರಿಗೂ ವೀರಣ್ಣನ ಮುಖವನ್ನಾಗಲೀ, ಗೌರಮ್ಮನ ಮುಖವನ್ನಾಗಲೀ ನೋಡುವುದು ಸಾಧ್ಯವಾಗಲಿಲ್ಲ. ಸುಮ್ಮನೆ ತಲೆ ಬಗ್ಗಿಸಿ, ರಣರಂಗದಲ್ಲಿ ಬಿದ್ದ ತನ್ನ ಕಡೆಯ ಸೈನಿಕರ ಶತಛಿದ್ರವಾದ ದೇಹಗಳನ್ನು ನೋಡುವ ಸೋತ ಸೈನ್ಯಾಧಿಕಾರಿಯಂತೆ, ಹಾಸಿನ ಮೇಲೆ ಅಲ್ಲಲ್ಲಿ ಕುಳಿತ ತಮ್ಮ ಕಾಯಿಗಳನ್ನು ನೋಡಿದರು. ಕಡೆಯ ಬಾರಿಗೆ ಉರುಳಿಸಿದ ದಾಳಗಳು ಹಾಗೇ ಬಿದ್ದಿದ್ದವು. ಪ್ರಥಮ ಚುಂಬನದಲ್ಲೇ ದಂತಭಗ್ನವಾದಂತೆ, ಮೊದಲ ಆಟದಲ್ಲೇ ಸೋಲಾಗಿ ಅವರ ಬಾಯಿ ಕಟ್ಟಿತ್ತು. 'ಇನ್ನೊಂದು ಆಟ ಆಡೋಣ' ಎನ್ನುವುದಕೂ ಅವರಿಗೆ ಬಾಯಿ ಇದ್ದಂತಿರಲಿಲ್ಲ.

ಕಡೆಗೆ ಗೌರಮ್ಮನೇ ಮೌನವನ್ನು ಮುರಿದ—

'ಇದು ದೇವರ ಆಟ, ಲೆಕ್ಕದ್ದಲ್ಲ. ಬುದ್ಧಿಯೋದು ಹೂ ಅಂದ್ರೆ ಇನ್ನೊಂದಾಟ ಆಡೋಣ,'

—ಎಂದಳು. ಆವಳು ಮೆದುವಾಗಿ ಆಡಿದ ಆ ಮಾತಿನಲ್ಲೂ 'ಧೈರ್ಯ ಇದ್ದರೆ—ಹೂ—ದಾಳ ತೆಗೆದುಕೊಳ್ಳಿ' ಎನ್ನುವ ಸವಾಲಿನ ನವಿರಾದ ಎಳೆಯಿತ್ತು.

ಆ ಮಾತು ಕೇಳಿ ವೆಂಕಟದಾಸಪ್ಪನವರು. ಸೋಲಿನ ಬೇಗೆಯಿಂದ ಅರೆಗಣ್ಣಾಗಿದ್ದ ಕಣ್ಣುಗಳನ್ನು ನಿಧಾನವಾಗಿ ಪೂರಾ ತೆರಳಿಸಿ, ಗೌರಮ್ಮನ ಮುಖವನ್ನು ನೋಡಿದರು. ಗೆಲುವಿನ ಉತ್ಸಾಹದಿಂದ ಅವಳ ಮುಖ ಕೆಂಪು ರಂಗೇರಿತ್ತು.

'ಹೂ. ಆಗಲಿ.'

—ಎಂದರು, ವೆಂಕಟದಾಸಪ್ಪ.

'ಕಾಯಿ ತೆಗೆದುಕೊಳ್ಳಿ. ಈ ಸಲ ಬೇಕಾದರೆ ನೀವೇ ಗೆದ್ದಕಾಯಿ' ಇಟ್ಟುಕೊಳ್ಳಿ.'

—ಎಂದು ಗೌರಮ್ಮ ಹಿಂದಿನ ಬಾರಿ ತಾನು ಇಟ್ಟುಕೊಂಡಿದ್ದ ಕೆಂಪು—ಕಪ್ಪು ಬಣ್ಣದ ಕಾಯಿಗಳನ್ನು ತೆಗೆದು, ವೆಂಕಟದಾಸಪ್ಪನವರ ಕಡೆ ಇಟ್ಟಳು. ಅವಳು ಆ ಕಾಯಿಗಳನ್ನು ಇಟ್ಟ ರೀತಿಯಲ್ಲಿ 'ನಿಮಗಂತೂ ಗೆಲ್ಲುವ ಅದೃಷ್ಟವಿಲ್ಲ, ಹೋಗಲಿ—ನನ್ನ ಕೈ ಮುಟ್ಟಿದ ಕಾಯಿಗಾದರೂ ಗೆಲುವಿನ ಅದೃಷ್ಟವಿರಬಹುದು. ನೋಡಿ' ಎನ್ನುವ ರೀತಿಯಿತ್ತು. ಆವಳು ಬಾಯಿಂದ ಹೇಳಿದ ಆ ಮಾತು, ವೆಂಕಟದಾಸಪ್ಪನವರ ಹೃದಯಕ್ಕೆ ಅರಿವಾಗಿ—

'ಅದೇನೂ ಬೇಡ. ಹೋದ ಸಲದ್ದೇ ಇರಲಿ'

—ಎಂದು, ಅವಳಿಟ್ಟ ಕಾಯಿಗಳನ್ನು ತೆಗೆದಿಟ್ಟು, ಹಿಂದಿನ ಬಾರಿ ತಾವು ಇಟ್ಟುಕೊಂಡಿದ್ದ ಹಸರು—ಹಳದಿ ಬಣ್ಣದ ಕಾಯಿಗಳನ್ನೇ ಹಾಸಿನ ಮೇಲೆ ಹೂಡಿದರು.

ಅವರ ಕಣ್ಣು ಕಿರಿದಾಗಿ ಹುಬ್ಬುಗಳು ಹೆಣೆದುಕೊಂಡವು.

'ಹಂಗಾದ್ರೆ ಸೈ'

—ಎಂದಳು ಗೌರಮ್ಮ, ತನ್ನ ಕಾಯಿಗಳನ್ನು ಹಾಸಿನಲ್ಲಿ ಹೂಡಿ.

'ಹೂ. ದಾಳ ಹಾಕಿ!'

—ಎಂದು ದಾಳಗಳನ್ನು ವೆಂಕಟದಾಸಪ್ಪನವರ ಮುಂದೆ ಇಟ್ಟಳು.

'ನೀನೇ ಆರಂಭಿಸು'

—ಎಂದರು ವೆಂಕಟದಾಸಪ್ಪ.

'ಹಂಗಾಗಾಕಿಲ್ಲ. ನೋತೋರು ಮೊದಲು ಆಡಬೇಕು'.

—ಎಂದಳು ಗೌರಮ್ಮ ವೆಂಕಟದಾಸಪ್ಪನವರ ಸೋಲಿನ ಸೂಜಿಯಿಂದ ಅವರ ಕಣ್ಣನ್ನು ಇರಿಯುತ್ತಾ. ಅವಳಾಡಿದ ಮಾತನ್ನು ಕೇಳಿ ವೀರಣ್ಣ ವೆಂಕಟದಾಸಪ್ಪನವರ ಪರವಾಗಿ ಏನೊ ಹೇಳಲು ಯತ್ನಿಸಿದ. ಆದರೆ ಗೌರಮ್ಮ ಅವನು ಮಾತಾಡಲು ಅವಕಾಶ ಕೊಡದೆ—

'ಮೂರ್ನೇರು ಬಾಯಾಕಿದ್ರೆ ಆಟಾ ನಡೆಯಾಕಿಲ್ಲ. ಆಟ ಆಡೋರು ಮಾತಾಡ್ಬೇಕು. ನೋಡೋರು ನೋಡ್ತಾ ಇರಬೇಕು. ಹಂಗಿದ್ರೆ ಆಟ'

—ಎಂದಳು ಗೌರಮ್ಮ. ತುಂಟತನದ ಮೂಕನಗೆ ನಗುವ ಕೆಣಕು ಕಣ್ಣುಗಳಿಂದ ವೀರಣ್ಣನ ಮುಖ ನೋಡುತ್ತಾ.

ಅವಳ ಮಾತು ಕೇಳಿ. ಅವಳ ದುರಹಂಕಾರವನ್ನು ಮನಸ್ಸಿನಲ್ಲಿಯೇ ಶಪಿಸಿ, ವೀರಣ್ಣ ಗಡಿಗೆಮುಖ ಮಾಡಿಕೊಂಡು. ಮಾತನಾಡದೆ ಸುಮ್ಮನೆ ಕುಳಿತ.

ಆ ಮಾತು ಕೇಳಿ ವೆಂಕಟದಾಸಪ್ಪನವರ ಮೋರೆಯೂ ಗಡುಸಾಯಿತು. ಸೋಲಿನ ಅಪಮಾನ ಉರಿಯಾಗಿ ಹೊತ್ತಿತು, ಅವರ ಹೃದಯದಲ್ಲಿ. ದಾಳವನ್ನು ತೆಗೆದುಕೊಂಡು ಒರಟಾಗಿ ಎಸೆದು, ಬಿದ್ದ ಗರವನ್ನು ನೋಡಿಯೂ ನೋಡದಂತೆ ಕಾಯಿ ನಡೆಸಿದರು.

'ಬುದ್ಧಿಯೋರು ಬಾಳ ಖಾರವಾಗವ್ರೆ'

—ಎಂದು ನಗೆ ತುಳುಕುವ ಧ್ವನಿಯಲ್ಲಿ ಹೇಳುತ್ತಾ. ಗೌರಮ್ಮನೂ ದಾಳ ಹಾಕಿ, ತನ್ನ ಕಾಯಿ ನಡೆಸಿದಳು.

'ಮಾತಾಡ್ದೆ ಬಾಯ್ಮುಚ್ಕೊಂಡಾಟ ಆಡಾಕಾಗಾಕಿಲ್ವ?'

—ಅವಳ ಅಣಕದ ಮಾತು ಕೇಳಿ, ಕೆದರಿ ಹೇಳಿದ ವೀರಣ್ಣ.

'ಮಾತಾಡಿದ್ರೆ ಕಾಯಿ ನಡೆಸೋಕೈಗೇನಾರ ಅಡ್ಡಿ ಆಗ್ತದಾ?' 'ಬುದ್ಯೋರು ಸುಮ್ನೆ ಆಟ ಆಡಾಕಿಲ್ವಾ ನೀವೂ ಹಂಗೆ ಕುತ್ಕೊಂಡು ನೋಡಿ'

—ಎಂದು ಮಾತಿಗೆ ಮಾತು ಮುಟ್ಟಿಸಿದಳು ಗೌರಮ್ಮ.

'ವೀರಣ್ಣ, ನೀನೇನೂ ಮಾತಾಡಬೇಡ. ಸುಮ್ಮನೆ ಕೂತು ಆಟ ನೋಡ್ತಿರು'

—ಎಂದರು ವೆಂಕಟದಾಸಪ್ಪ, ಎದೆಯಲ್ಲಿ ಸಿಟ್ಟು ಉರಿಯುತ್ತಿದ್ದರೂ,

 

ಮುಂಚಿನಂತೆ ಕೊರೆಯುವ ಧ್ವನಿಯಲ್ಲಿ. ಆ ಧ್ವನಿಯನ್ನು ಕೇಳಿ ಗೌರಮ್ಮ ನಿಗೂ ತಾನಾಡಿದ ಮಾತು ಹೆಚ್ಚಾಯಿತೇನೋ ಅನಿಸಿ. ಮಾತನಾಡದೆ ಆಟವನ್ನು ಮುಂದುವರಿಸಿದಳು. ಆಟದ ಸುತ್ತ ಗಂಭೀರತೆಯ ವಾತಾವರಣ ಕವಿದಿತು. ನಾಲ್ಕಾರು ಬಾರಿ ವೆಂಕಟದಾಸಪ್ಪನವರು ಕಾಯಿ ನಡೆಸಿದ ಮೇಲೆ, ಅವರು ಮೊದಲಿಗಿಂತ ತುಂಬ ಎಚ್ಚರವಾಗಿ ಆಟವಾಡುತ್ತಿದ್ದಾರೆ ಎಂಬುದು ಗೌರಮ್ಮನಿಗೂ ಅರಿವಾಗಿ, ಅವಳೂ ಎಚ್ಚರದಿಂದ ಆಡತೊಡಗಿದಳು. ಉರುಳುವ ದಾಳಗಳ ಸದ್ದಲ್ಲದೆ, ಬೇರಾವ ಸದ್ದೂ ಕೇಳಿಸದ ವಾತಾವರಣದಲ್ಲಿ ಆಟ ಮುಂದುವರಿಯಿತು.

ಹಿಂದಿನ ಆಟಕ್ಕಿಂತ ಹೆಚ್ಚು ಹೊತ್ತು ಆಟ ನಡೆಯಿತು. ಆದರೆ ಆಟ ನಡೆಯುತ್ತಿದ್ದ ರೀತಿಯಲ್ಲಿ ವೆಂಕಟದಾಸಪ್ಪನವರು ಸೋಲುವುದು ಖಂಡಿತ ಎಂಬಂತಿತ್ತು.

ಗೌರಮ್ಮನ ಹಣ್ಣಿಗೆ ಬಂದ ಕಾಯೊಂದು ವೆಂಕಟದಾಸಪ್ಪನವರ ಕಾಯಿಯ ಮುಂದೆ ನಡೆಯುತ್ತಿತ್ತು. ಹೇಗೂ ಸೋಲಾಗುವುದೆಂಬ ನಿರಾಶೆಯಲ್ಲಿ ವೆಂಕಟದಾಸಪ್ಪನವರು ಏನು ಗರ ಬೀಳುತ್ತದೆ, ಯಾವ ಕಾಯಿ ನಡೆಸಬೇಕು ಎಂಬ ಯೋಚನೆಯನ್ನೇ ಮಾಡದೆ ಆಟ ಆಡುತ್ತಿದ್ದರು. ಆಗಅವರಿಗೆ ಬಿದ್ದ ಗರದಿಂದ ಗೌರಮ್ಮನ ಹಣ್ಣಿನ ಕಾಯಿ ಕೊಲೆಯಾಗುವಂತಿತ್ತು. ಆದರೂ ಅದನ್ನರಿಯದೆ, ಬೇರೆಯ ಕಾಯಿ ನಡೆಸಿದರು. ಆದರೆ ಪಕ್ಕದಲ್ಲಿ ಮಾತನಾಡದೆ ಕುಳಿತು ಆಟವನ್ನು ನೋಡುತ್ತಿದ್ದ ವೀರಣ್ಣ ತನ್ನ ಆತುರವನ್ನು ತಡೆಯಲಾರದೆ—

'ಈ ಕಾಯಿ ಬೇಡ ದಾಸಣ್ಣ, ಆ ಕಾಯಿ ನಡೆಸು. ಅವಳ ಹಣ್ಣಿನ ಕಾಯಿ ಹೋಗ್ತದೆ'

—ಎಂದು ವೆಂಕಟದಾಸಪ್ಪನವರ ತಪ್ಪನ್ನು ತೋರಿಸಿಕೊಟ್ಟ. ಅವನ ಮಾತು ಕೇಳಿ ವೆಂಕಟದಾಸಪ್ಪನವರು ತಮ್ಮ ತಪ್ಪನ್ನು ಅರಿತುಕೊಂಡು ನಡೆಸಬೇಕಾದ ಕಾಯಿ ನಡೆಸಲು ಹೋದರು. ಆದರೆ ಅದಕ್ಕೆ ಗೌರಮ್ಮ ಒಪ್ಪಲಿಲ್ಲ.

'ಒಂದ್ಸಲ ನಡೆಸಿದ ಮೇಲೆ ಆಗ್ಹೋಯ್ತು'

—ಎಂದು ಹಟಹಿಡಿದು ಹೇಳಿದಳು,

ವೆಂಕಟದಾಸಪ್ಪನವರು ಮಾತನಾಡದೆ. ಹಿಂದೆ ನಡೆಸಿದ ಕಾಯನ್ನೇ ನಡೆಸಿದರು. ಅವರ ಹೆಚ್ಚಿದ ರಕ್ತ ಒತ್ತಡದಿಂದ ಮಿಡಿಯುತ್ತಿದ್ದ ಹಣೆಯ ಮೇಲಿನ ನರ ಅವರು ಉದ್ರೇಕಗೊಂಡುದನ್ನು ಸೂಚಿಸುತ್ತಿತ್ತು.

ಆ ಆಟವೂ ಮುಗಿಯಿತು—ವೆಂಕಟದಾಸಪ್ಪನವರ ಸೋಲಿನಲ್ಲಿ.

'ಆಟ ಸಾಕಾ?'

—ಎಂದಳು ಗೌರಮ್ಮ ಹಾಸಿದ್ದ ಪಗಡೆಯ ಹಾಸನ್ನು ತೆಗೆಯಲು ಯತ್ನಿಸಿ. ಅವಳ ಮಾತಿನಲ್ಲಿ 'ಪಗಡೆಯಾಟ ನಿಮಗೆ ಎಟುಕದ ಫಲ ಬಿಡಿ. ವೃಥಾ ಏಕೆ ಬಳಲುತ್ತೀರಿ' ಎಂದು ಹೇಳುವ ಭಾವವಿತ್ತು.

'ಇಲ್ಲ ಇನ್ನೊಂದು ಆಟ ಆಡಿಬಿಡೋಣ'.

—ಎಂದರು ವೆಂಕಟದಾಸಪ್ಪ.

ಎರಡು ಬಾರಿ ಅವರು ಸೋತದ್ದು ಕಂಡು ಅವರಿಗಿಂತ ಹೆಚ್ಚಾಗಿ ನೊಂದ ವೀರಣ್ಣ—

'ಹೋಗ್ಲಿ ಬಿಡು ದಾಸಣ್ಣ, ಇವತ್ತಿಗಿಷ್ಟು ಸಾಕು. ಇನ್ನೊಂದು ದಿನ ಆಡಿದ್ರಾಯ್ತು.'

—ಎಂದ. ಅವರು ಮೂರನೆಯ ಬಾರಿಯೂ ಸೋಲುವುದನ್ನು ನೋಡಲಾರದೆ.

'ಇನ್ನೊಂದು ದಿನ–ಈ ದಿನ, ಈ ಆಟದಲ್ಲಿ ಗೆದ್ದರೆ ಮುಂದೆ ಪಗಡೆಯಾಟದ ಯೋಚನೆ. ಇಲ್ಲವಾದರೆ ಇದೇ ಈ ಜನ್ಮಕ್ಕೆ ಕಡೆಯ ಪಗಡೆಯಾಟ'

—ಎಂದರು ಮತ್ತೆ ವೆಂಕಟದಾಸಪ್ಪ, ಹಾಸಿನಲ್ಲಿ ತಮ್ಮ ಕಾಯಿಗಳನ್ನು ಹೂಡಿ.

'ಒಂದು ದಿನ ಸೋತದ್ದಕ್ಕೆ ಅಷ್ಟು ಯಾಕೆ ಹಚ್ಕೊತೀರಿ ಹಿಂಗೇ ಸಾಕಾರು ದಿನ ಆಡಿದ್ರೆ ಎಂದಾರ ಒಂದು ದಿನ ಗೆಲ್ತೀರಿ'

—ಎಂದಳು ಗೌರಮ್ಮ.

'ಹಾಗಾಗುವುದಿಲ್ಲ. ಈ ಬಾರಿ ಆಟ ಆಡುತ್ತಿಯೋ ಇಲ್ಲವೋ ಹೇಳು'

—ವೆಂಕಟದಾಸಪ್ಪ, ಎಷ್ಟು ತಡೆ ಹಿಡಿದರೂ ತುಳುಕುವ ಅಸಹನೆಯ ಧ್ವನಿಯಲ್ಲಿ ಕೇಳಿದರು,

'ಅಷ್ಟು ಹಟ ಇದ್ರೆ ಆಗ್ಲೋಮು. ಆದ್ರೆ ಒಂದು ಮಾತು—?
—ಗೌರಮ್ಮ ಹೇಳಿದಳು.

'ಅದೇನು ಹೇಳು.'

'ತಪ್ಲೋ ನೆಪ್ಲೋ ನೀವೇ ಆಡ್ಬೇಕು. ಮೂರ್ನೆಯೋರು ಹೇಳ್ಕೊಡ ಬಾರ್ದು. ಹಂಗಿದ್ರೇ ಆಟ ಆಡ್ತೀನಿ.'

ಷರತ್ತು ಹಾಕಿ ಹೇಳಿದಳು ಗೌರಮ್ಮ.

'ಹಾಗೇ ಆಗ್ಲಿ. ವೀರಣ್ಣ ನೀನು ನಡುವೆ ಒಂದೂ ಮಾತಾಡಬೇಡ.
—ಎಂದು ವೆಂಕಟದಾಸಪ್ಪನವರು ವೀರಣ್ಣನಿಗೆ ಹೇಳಿದರು.

ಗೌರಮ್ಮ ಆ ಷರತ್ತು ಹಾಕಿದುದನ್ನು ಕೇಳಿ ವೀರಣ್ಣನಿಗೆ ಅಸಮಾಧಾನ ವಾಯಿತು.

'ಕುಣೆಯಲಾರದ ಸೂಳೆ ನೆಲ ಡೊಂಕು ಅಂದ್ಹಂಗೆ, ಎಲ್ಲಿ ಸೋಲ್ತಿ ನೋಂತ ಇಲ್ಲದ ಕುಂಟಪದ ಎಲ್ಲಾ ಹಾಡ್ತಾಳೆ. ಆಡು ದಾ ಸ ಣ್ಣ ಅಮ್ಮನೋರ ಹೆಸರೇಳಿ ದಾಳ ಹಾಕು. ಇಷ್ಟು ಧೀಮಾಕು ಮಾಡ್ತಾಳೆ. ಅದ್ಹೆಂಗ ಗೆಲ್ತಾಳೋ ನೋಡೋಣ. ನಾನೊಂದು ಮಾತೂ ಆಡಾಕಿಲ್ಲ'
—ಎಂದು ಪ್ರತೀಕಾರದ ಬಯಕೆಯಿಂದ ಕಾತರ ಧ್ವನಿಯಲ್ಲಿ ಹೇಳಿದ ವೀರಣ್ಣ ನಾಡಿದ ಮಾತು ಕೇಳಿ ವೆಂಕಟದಾಸಪ್ಪನವರು ಒಂದು ಗಳಿಗೆಅವನ ಮುಖ ನೋಡಿದರು. ನೋಡನೋಡುತ್ತಾ ಅವರ ಕಣ್ಣು ಕಿರಿದಾಗಿ ಹುಬ್ಬು ಗಳು ಹೆಣೆದುಕೊಂಡವು.

'ಸದಾ ಬರೀಯೋಕೂ ಅಮ್ನೋರು, ಪಗಡೆ ಆಟಕ್ಕೂ ಅಮ್ನೋರ್ರಾ? ದಾಳ ಹಾಕೋದು ಅಯ್ನೋರ ಕೈ. ಅಮ್ನೋರು ಇವರ ಕಾಯಿ ನಡೆಸ್ತಾರಾ?'
—ಎಂದಳು ಗೌರಮ್ಮ ವೀರಣ್ಣನ ಮಾತು ಕೇಳಿ ನಗುತ್ತಾ

ಅದನ್ನು ಕೇಳಿ ವೆಂಕಟದಾಸಪ್ಪನವರು ಥಟಕ್ಕನೆ—

'ತಾಯಿ ನನ್ನ ಕಾಯನ್ನು ನಡೆಸುತ್ತಾಳೋ ಬಿಡುತ್ತಾಳೊ? ಅದೆಲ್ಲಾ ನಿನಗೇಕೆ? ಈಗೇನು ನಾನು ಆಟ ಆರಂಭಿಸಬೇಕೋ. ನೀನೋ. ಅದು ಹೇಳು ಉಳಿದ ವಿಷಯ ಈಗೇಕೆ'
—ಎಂದರು ವೆಂಕಟದಾಸಪ್ಪ, ಒರಟಾಗಿ ಗೌರಮ್ಮನ ಮಾತು ಮುರಿದು.

'ನೀವೇ ಮೊದಲು ಆಡಬೇಕು. ಸೋತೋರದೇ ಮೊದಲ ಆಟ'

—ಎಂದಳು, ವೆಂಕಟದಾಸಪ್ಪನವರ ಒರಟು ಮಾತಿನಿಂದ ಕೊಂಚ ಕೆರಳಿದ ಗೌರಮ್ಮ. ಅವನ ಸೋಲನ್ನು ಅವನ ಮುಖಕ್ಕೆ ನಯವಾಗಿ ಅಪ್ಪಳಿಸುತ್ತಾ.

ಅವಳ ಮಾತಿಗೆ ಮರುಮಾತಾಡದೆ, ಒಂದು ಗಳಿಗೆ ಕಣ್ಣು ಮುಚ್ಚಿ ಎರಡೂ ಕೈಗಳಿಂದ ದಾಳಗಳನ್ನು ಚೆನ್ನಾಗಿ ಉಜ್ಜಿ, ಅವನ್ನು ನೆಲದ ಮೇಲೆ ಉರುಳಿಸಿ, ವೆಂಕಟದಾಸಪ್ಪನವರು ಆಟ ಆರಂಭಿಸಿದರು. ಜೋಡುಗರ ಬಿದ್ದು, ಜೋಡಿಯನ್ನೇ ಮೊದಲು ನಡೆಸಿದರು ವೆಂಕಟದಾಸಪ್ಪ. ಅದಕ್ಕೆ ಪ್ರತ್ಯುತ್ತರ ವಾಗಿ, ಗೌರಮ್ಮನೂ ದಾಳಹಾಕಿ ಅವರು ಕಾಯಿ ನಡೆಸಿದ ಪಕ್ಕದ ಮನೆಯ ಕಾಯಿ ನಡೆಸಿದಳು. ಅವರು ನಡೆಸಿದ ಜೋಡಿಯನ್ನು ನುಂಗಲು ಮೇಲೆ ಹಾಯ್ತೆಂತೆ. ವೆಂಕಟದಾಸಪ್ಪನವರು, ಮತ್ತೆ ಗರ ಹಾಕಿ ಗೌರಮ್ಮನ ಕಾಯಿಯ ಮೇಲೆ ತಮ್ಮ ಕಾಯನ್ನು 'ಛೂ' ಬಿಟ್ಟರು.

ಆಟ ಪ್ರಾರಂಭವಾದ ಐದು ನಿಮಿಷದಲ್ಲೇ ಮೊದಲ ಕಡಿತವಾಯಿತು ವೆಂಕಟದಾಸಪ್ಪನವರ ಜೋಡಿಯನ್ನು ಕಡಿಯುವ ಉತ್ಸಾಹದಿಂದ ಬಂದ ಗೌರಮ್ಮನ ಜೋಡಿಕಾಯಿ ತಾನೇ ಕಡಿಸಿಕೊಂಡು ಸ್ವಸ್ಥಾನ ಸೇರಿತು. ಅದನ್ನು ಕಂಡು ಗೌರಮ್ಮನ ಮುಖದ ರಂಗು ಕೊಂಚ ಇಳಿಯಿತು.

ಆಟ ಮುಂದುವರಿದ ಹಾಗೆ ಅವಳ ಮುಖದ ಬಣ್ಣ ಕಡಿಮೆಯಾಯಿತು. ಆಗಿನ ಆಟದ ರೀತಿಯನ್ನು ಕಂಡು ಆಟದಲ್ಲಿ ಪಳಗಿದ್ದ ಗೌರಮ್ಮನೂ ತಬ್ಬಿಬ್ಬಾದಳು. ಆ ಆಟದ ಬಗೆಯೇ ಅವಳಿಗೆ ಅರ್ಥವಾಗದಂತಾಯಿತು.

ವೆಂಕಟದಾಸಪ್ಪನವರ ಒಂದು ಕಾಯಿ ನಿರ್ಭಯವಾಗಿ ಅವಳ ಮನೆಯ ಮುಂದೆಯೇ ನಡೆದು, ಅವಳಲ್ಲಿ ಅದನ್ನು ಕಡಿಯುವ ಉತ್ಸಾಹವನ್ನು ಉದ್ರೇಕಿಸುವುದು. ಅವಳದನ್ನು ಬೆನ್ನಟ್ಟಿಕೊಂಡು ಹೋಗುವಾಗ ವೆಂಕಟ ದಾಸಪ್ಪನವರ ಮತ್ತೊಂದು ಕಾಯಿ ವೇಗವಾಗಿ ಅವಳದನ್ನು ಹಿಂಬಾಲಿಸಿಬಂದು, ಹತ್ತಿರ ಬಂದಾಗ, ಕುರುತೇಟಿನಂತೆ ಬಯಸಿದ ಗರ ಬಿದ್ದು, ಕಡಿಯಲೆಂದು ಬಂದ ಕಾಯಿ ಕಡಿಸಿಕೊಂಡು, ಮತ್ತೆ ಹುಟ್ಟುವ ಮನೆಗೆ ಹಿಂದಿರುಗುವುದು. ಮೂರು ನಾಲ್ಕು ಬಾರಿ ಹೀಗಾಯಿತು.

ಆಟದ ಈ ಹೊಸ ರೀತಿಯನ್ನು ಕಂಡು ಗೌರಮ್ಮ ತಾನೂ ಹುಷಾರಾಗಿ ಸಾಕಷ್ಟು ರಕ್ಷಣೆಯೊಡನೆ ತನ್ನ ಕಾಯನ್ನು ನಡೆಸುತ್ತಾ, ಅವರ ಜೋಡಿ

ಯನ್ನು ಮುರಿಯಲು ಅವರ ಮುಂದೆ ಒಂಟಿಕಾಯಿ ನಡೆಸಿ, ಒಂಟಿಕಾಯಿ ಬಂದಾಗ ಜೋಡಿಯನ್ನು ಕೂಡಿಸಿ, ಆದಷ್ಟು ಘಟ್ಟದ ಮನೆಗಳ ಆಶ್ರಯ ತೆಗೆದುಕೊಂಡು ಆಟವಾಡಲಾರಂಭಿಸಿದಳು.

ಇದೇ ರೀತಿ ನಡೆದರೆ ಹತ್ತು ನಿಮಿಷದಲ್ಲಿ ಮುಗಿಯಬಹುದು ಎಂದು ಕೊಂಡ ಆಟ ಮುಕ್ಕಾಲು ಗಂಟೆಯಾಗಿ, ವೆಂಕಟದಾಸಪ್ಪನವರ ಮೂರು ಕಾಯಿಗೆ ಗೌರಮ್ಮನ ಒಂದು ಕಾಯಿ ಉಳಿಯಿತು.

ಮತ್ತೆ ಅವರು ಸೋತರು ಎಂದು ಕೊಂಡಳು ಗೌರಮ್ಮ.

ಆದರೆ ಅವಳ ಒಂಟಿಕಾಯಿ ಮತ್ತೆ ಮತ್ತೆ ಕಡಿಸಿಕೊಂಡು, ವೆಂಕಟ ದಾಸಪ್ಪನವರದೂ ಒಂದೇ ಕಾಯಿ ಉಳಿದಾಗ, ಗೌರಮ್ಮನ ಕಾಯಿ ಹಣ್ಣಿನ ಮನೆಯ ಹತ್ತಿರ ಬಂದು 'ದುಗ' ದ ದೂರದಲ್ಲಿ ಕುಳಿತುಕೊಂಡಿತು—ವೆಂಕಟ ದಾಸಪ್ಪನವರ ಕಾಯಿ. ಹಣ್ಣಿನ ಮನೆಯ ಎದುರು ಹಾಸಿನಲ್ಲಿರುವಾಗ.

'ಇನ್ನೇನು ಆಟ ಮುಗಿದ್ಹಂಗಾಯ್ತು ಬಿಡ್ಹಿ'

—ಎಂದಳು ಗೌರಮ್ಮ ಗೆಲುವಿನ ಭರವಸೆಯಿಂದ.

'ಮಾತನಾಡದೆ ಆಡಬೇಕು ಎಂದು ನೀನೇ ಹೇಳಿದ್ದು ನಿನಗೇ ಮರೆತು ಹೋಯಿತ?'

—ವೆಂಕಟದಾಸಪ್ಪ ಗಡುಸಾದ ಧ್ವನಿಯಲ್ಲಿ ಕೇಳಿದರು.

'ಹಾಂಗಾದ್ರೆ ಸರಿ. ಇಕೋ ದುಗ'

—ಎಂದು ಗೌರಮ್ಮ ದಾಳವನ್ನು ಹೊಂದಿಸಿ ಹಿಡಿದು ಉರುಳಿಸಿದಳು. ದುಗ ಬೀಳುವ ಬದಲು ಹನ್ನೆರಡು ಬಿತ್ತು. ಹೆಚ್ಚುಗರ ಬಿದ್ದು ಗೌರಮ್ಮನ ಕಾಯಿ ಕುಳಿತಲ್ಲಿಯೇ ಕುಳಿತಿತು. ವೆಂಕಟದಾಸಪ್ಪನವರ ಕಾಯಿ ಮುಂದೆ ಬಂದಿತ್ತು. ಮತ್ತೊಮ್ಮೆ ದಾಳ ಉರುಳಿಸಿದಳು—ಮತ್ತೆಯೂ ಹೆಚ್ಚುಗರವೇ ಬಿತ್ತು.

ಹೀಗೇ ಎರಡು ಮೂರುಬಾರಿಯಾಗಿ ವೆಂಕಟದಾಸಪ್ಪನವರ ಕಾಯಿಯೂ ನಡೆದು, ಅದೂ ಹಣ್ಣಿನ ಮನೆಗೆ ಬಂದು 'ದುಗ' ದ ದೂರದಲ್ಲಿ ಕುಳಿತಿತು. ಇಬ್ಬರ ಅದೃಷ್ಟ ಪರೀಕ್ಷೆ ಆರಂಭವಾಯಿತು.

ಇನ್ನೇನು ಮುಗಿಯಿತು ಎಂದ ಆಟ ಮತ್ತೆ ಹತ್ತು ನಿಮಿಷ ನಡೆಯಿತು.

ಒಂದು ದಾಗ—ಒಂದೇ ಒಂದು ದಾಗ; ಅಥವಾ ಎರಡು ಬಾರಿ ಮೂರು—ಒಂದೋ, ನಾಲ್ಕು—ಒಂದೋ, ಆರು—ಒಂದೋ ಬಿದ್ದರಾಯಿತು. ಗೌರಮ್ಮ ಹೇಗೆ ಹೇಗೋ ದಾಳಗಳನ್ನು ಹೊರಳಿಸಿ, ಹಾಕಿದಳು. ಏನಾದರೂ ಬಯಸಿದ ಗರ ಬೀಳಲಿಲ್ಲ. ವೆಂಕಟದಾಸಪ್ಪನವರಿಗೂ ಅಷ್ಟೆ— ಹತ್ತು—ಹನ್ನೆರಡು ಎಂಟು—ಇತ್ತೀಗ ಬೇಡದ ಗರವೆಲ್ಲಾ ಬೀಳುತ್ತದೆ; ಬಯಸಿದು ಮಾತ್ರ ಇಲ್ಲ. ಗೌರಮ್ಮ ಹತ್ತಿರ ಬಂದೂ ಮುಗಿಯುವ ಆಟದ ಮೇಲಿನ ಸಿಟ್ಟಿನಿಂದ ದಾಳವನ್ನು ಎತ್ತಿ ಕುಕ್ಕಿದಳು. ಮೂರು—ಒಂದು ಬಿದ್ದು, ಕಾಯಿ ಒಂದು ಮನೆ ಮುಂದೆ ನಡೆಯಿತು. ತನ್ನ ಒಂದೇ ಮನೆ— ಅವಳಿಗೂ, ಗೆಲುವಿಗೂ ಮಧ್ಯೆ.

ವೆಂಕಟದಾಸಪ್ಪನವರ ಮುಖವೂ ಕೆಂಪಾಗಿತ್ತು.

'ಈ ಸಲ ದಾಗ ಬಿದ್ದರೆ ಸರಿ. ಇಲ್ಲವಾದರೆ ನೀನೇ ಗೆದ್ದಂತೆ. ತಾಯಿ ಇರುವುದು ನಿಶ್ಚಯವಾದರೆ ದಾಗ ಬೀಳಲಿ'

—ಎಂದು ಕರ್ಕಶವಾಗಿ ಹೇಳಿ ದಾಳವನ್ನು ನೆಲದ ಮೇಲೆ ಉಗ್ಗಿದರು, ಉಗ್ಗಿದ ವೇಗಕ್ಕೆ ಎರಡು ದಾಳಗಳೂ ಅಷ್ಟು ದೂರ ಉರುಳಿ ನಿಂತವು—

ಗೌರಮ್ಮ ಕತ್ತು ಚಾಚಿ ನೋಡಿದಳು— ವೆಂಕಟದಾಸಪ್ಪನವರಿಗೆ ದಾಗ ಬಿದ್ದಿತ್ತು. ಅವರ ಕಾಯಿ ಹಣ್ಣಾಯಿತು.

ಆಟದ ನಿಯಮದಂತೆ, ಕಡೆಯದಾಗಿ ಮೂರು ಬಾರಿ ದಾಳ ಹಾಕುವ ಅವಕಾಶವಿತ್ತು ಅವಳಿಗೆ. ಮೂರು ಬಾರಿಯೂ ಹಾಕಿದಳು. ಆದರೆ ಬಯಸಿದ ಗರ ಮಾತ್ರ ಬೀಳಲಿಲ್ಲ.

ವೆಂಕಟದಾಸಪ್ಪನವರು ಗೆದ್ದುದನ್ನು ಕಂಡು ವೀರಣ್ಣ—

'ಶಾಭಾಷ್, ದಾಸಣ್ಣ, ಶಾಭಾಸ್'.

—ಎಂದು ಅವರನ್ನು ತಬ್ಬಿಕೊಂಡ.

'ಎಲ್ಲೈತೆ ನಿನ್ದಿಮಾಕು? ಎಲ್ಲಿ... ಸೋತಮೊಕ ಹೆಂಗೈತೆ ನೋಡೋಣ'

—ಎಂದು ಸೋತ ಹೆಂಡತಿಯನ್ನು ಛೇಡಿಸಿದ.

ಎಂದೂ ಆಗದ ಸೋಲು ಗೌರಮ್ಮನ ಮುಖದ ಬಣ್ಣವನ್ನೆಲ್ಲಾ ಕುಡಿದಿತ್ತು. ಕಣ್ಣುಗಳು ಉರಿಯುತ್ತಿದ್ದವು. ಮಾತನಾಡದೆ ಹಣ್ಣಿನ ಮನೆಯಲ್ಲಿದ್ದ ತನ್ನ ಕಾಯಿಗಳನ್ನು ಆರಿಸಿಕೊಂಡು, ಹಾಸಿನಲ್ಲಿ ಹೂಡಿ—

'ಧೈರ್ಯವಿದ್ದರೆ ಇನ್ನೊಂದು ಆಟ ಆಡಿ.'

—ಎಂದಳು. ಕೆಣಕಿ ಸವಾಲು ಹಾಕುವ ಸ್ವರದಲ್ಲಿ. ಅವಳ ಧ್ವನಿಯಲ್ಲಿ ಹಿಂದಾವಾಗಲೂ ಇರದ ವಿಚಿತ್ರ ಬಿಗಿತವಿತ್ತು.

'ವೆಂಕಟದಾಸಪ್ಪನವರೂ ತಮ್ಮ ಕಾಯಿಗಳನ್ನು ಹೂಡಿ, ದಾಳಗಳನ್ನು ಅವಳ ಮುಂದೆ ಎಸೆದು—

'ಸೋತವರು ಆಟ ಆರಂಭಿಸಬೇಕು'

—ಎಂದರು.

—ಆ ಮಾತು ಕೇಳಿ ಗೌರಮ್ಮ ಅವರತ್ತ ಕ್ರೂರವಾಗಿ ನೋಡಿ, ತುಟಿ ಕಚ್ಚಿಕೊಂಡು. ಮಾತನಾಡದೆ ದಾಳವನ್ನು ಉರುಳಿಸಿದಳು.

ಮತ್ತೊಂದು ಆಟ ನಡೆಯಿತು—ನಡೆದು ಮುಗಿಯಿತು—ಗೌರಮ್ಮನ ಸೋಲಿನಲ್ಲಿ.

ಮೂರನೆಯ ಬಾರಿ ವೆಂಕಟದಾಸಪ್ಪನವರೇ ಕಾಯಿ ಹೂಡಿ—

'ಇದೂ ಒಂದು ಆಟ ಆಡೋಣವೇ? ಮುಟ್ಟಿದ್ದಕ್ಕೆ ಮೂರು ಸರ್ತಿ ಆಗಲಿ. ಈ ಸಲ ಬೇಕಾದರೆ ನೀನು ಗದ್ದ ಕಾಯಿ ಇಟ್ಟುಕೋ'

—ಎಂದರು.

ಗೌರಮ್ಮ ಮಾತನಾಡದೆ, ತಗ್ಗಿಸಿದ ತಲೆ ಮೇಲೆತ್ತದೆ, ತನ್ನ ಮೊದಲಿನ ಕಾಯಿಗಳನ್ನೇ ಹೂಡಿಕೊಂಡು ದಾಳ ಹಾಕಿದಳು. ಆ ಆಟದಲ್ಲೂ ಸೋಲು ಅವಳನ್ನು ವರಿಸಿತು.

'ಮೊದಲನೆಯದು ದೇವರ ಆಟ— ನಾಲ್ಕನೆಯದು ಇತ್ಯರ್ಥದ ಆಟ, ಆಡುತ್ತೀಯಾ? ಆಡು'

—ಎಂದರು ವೆಂಕಟದಾಸಪ್ಪ, ಅವಳ ಕಾಯಿಗಳನ್ನು ತಾವೇ ಹೂಡಿ, ದಾಳವನ್ನು ಅವಳ ಬಳಿ ಇಟ್ಟು.

ಗೌರಮ್ಮ, ಅವರು ತನ್ನ ಕೈಯ ಬಳಿ ಇಟ್ಟ ದಾಳವನ್ನು ತೆಗೆದುಕೊಂಡು ಉಜ್ಜಿದಳು. ಎರಡು ನಿಮಿಷ ಉಜ್ಜುತ್ತಲೇ ಇದ್ದಳು. ದಾಳ ಉಜ್ಜುಜ್ಜುತ್ತಲೇ, ಅವಳ ಮೈಯೊಂದು ಬಾರಿ, ಆಕಸ್ಮಿಕ ಬಿರುಗಾಳಿಗೆ ರೆಷ್ಟೊಂಪಿಸುವ ಲತೆಯಂತೆ ಬಲವಾಗಿ ಕಂಪಿಸಿ, ಹಾಗೇ ತಲೆಯನ್ನು ನೆಲಕ್ಕೆ ಹಾಕಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ಅವನ್ನು ಕಂಡು ವೀರಣ್ಣ—

'ಇದೇ ಹೆಂಗಸಿನ ಕಡೆಯ ಆಟ'

—ಎಂದ, ಉರಿಯುವ ಗಾಯಕ್ಕೆ ಉಪ್ಪುನೀರನ್ನು ಚೆಲ್ಲುತ್ತ.

'ಛೆ! ವೀರಣ್ಣ ಅದು ಆಡಬಾರದ ಮಾತು'

ಎಂದವರೇ ವೆಂಕಟದಾಸಪ್ಪ ತಮ್ಮ ಬಳಿ ಬಿದ್ದಿದ್ದದಾಳಗಳನ್ನು ತಳ್ಳಿ ಎದ್ದು ಹೋದರು. ಅವರು ಹೀಗೇಕೆ ಹೇಳಿದರು ಎಂದು ವೀರಣ್ಣ ನೋಡು ತ್ತಲೇ ಇದ್ದ. ಗೌರಮ್ಮ ಅಳುತ್ತಾ ಮಲಗಿದ್ದವಳು, ಅಳುತ್ತಲೇ ಮಲಗಿದ್ದಳು.

ಅದೇ ಹೊತ್ತೊಂದು ವಿಧಿ ತಾನೂ ದಾಳ ಉರುಳಿಸಿ, ಬೇಕಾದ ಗರವನ್ನು ಹಾಕಿ ನಕ್ಕಿತು.

ವೆಂಕಟದಾಸಪ್ಪನವರ ಗರ ಆಟವನ್ನು ಗೆದ್ದಿತು, ವಿಧಿಯ ಗರ ಅವರಿ ಗಾಗಿಗೌರಮ್ಮನ ಹೃದಯವನ್ನು ಗೆದ್ದಿತು.

ಗೌರಮ್ಮ-ಸೋತು ಗೆದ್ದಳು.

## ೧೬

ಅದು ಹೇಗಾಯಿತೆಂಬುದು ಇಬ್ಬರಿಗೂ ತಿಳಿಯದು.

ಅವರಿಗೆ ಅರಿವಾಗದಂತೆ ಯಾವುದೋ ಶಕ್ತಿ, ಅವರಿಗೆ ತಿಳಿಯದ ಯಾವುದೋ ಅಂತರ್ಪ್ರವಾಹದ ಸುಳಿಯಲ್ಲಿ ಅವರನ್ನು ನಿಧಾನವಾಗಿ ಸೆಳೆದು ಕೊಂಡು ಹೋಯಿತು.

ಆ ಗುರಿ ತಲುಪಿದಾಗಲೇ ಅವರಿಗೆ ಎಚ್ಚರವಾದದ್ದು.

ಆ ದಿನ ಗೌರಮ್ಮನನ್ನು ಪಗಡೆಯಾಟದಲ್ಲಿ ಗೆದ್ದ ಬಳಿಕ, ವೆಂಕಟ ದಾಸಪ್ಪನವರಿಗೂ ಪಗಡೆಯಾಟದ ಗೀಳು ಹತ್ತಿತು. ಅವರೊಂದಿಗೆ ಆಟವಾಡ ಬೇಕೆಂದರೆ, ಗೌರಮ್ಮನಿಗೂ ಎರಡು ಕೈ ನಾಲ್ಕು ಕೈಯಾಗುತ್ತಿತ್ತು.

ಸದಾ ಸೋಲುತ್ತಿದ್ದ ವೀರಣ್ಣನೊಂದಿಗೆ ಗೌರಮ್ಮ ಪಗಡೆಯಾಡು ತ್ತಿದ್ದುದು, ತನ್ನ ಆಟದ ಹುಚ್ಚನ್ನು ಅಷ್ಟಿಷ್ಟು ಕಳೆದುಕೊಳ್ಳಲು. ಆದರೆ ಅವಳಷ್ಟೇ ಚತುರತೆಯಿಂದ ಆಟವಾಡುತ್ತಿದ್ದ ವೆಂಕಟದಾಸಪ್ಪನವರೊಂದಿಗೆ, ಆಟವಾಡುತ್ತಾ ಆಡುತ್ತಾ, ಆ ಹುಚ್ಚು ಕಡಮೆಯಾಗದೆ, ಆಟ ಆಟಕ್ಕೂ ಮದ್ಯದ ಅಮಲಿನಂತೆ ಏರುತ್ತಿತ್ತು. ಹೊತ್ತುಗೊತ್ತಿನ ಪರಿವೆಯಿಲ್ಲದೆ, ಹುರುಡಿನಿಂದ ಆಡುತ್ತಾ ಕುಳಿತುಬಿಡುತ್ತಿದ್ದರು — ಇಬ್ಬರೂ.

ಅವರಿಬ್ಬರೂ ಆಟವಾಡುವುದನ್ನು ವೀರಣ್ಣ ಮಂತ್ರಮುಗ್ಧನಂತೆ ನೋಡುತ್ತಾ ಕುಳಿತಿರುವನು. ತಾನು ಸ್ವತಃ ಆಟದಲ್ಲಿ ಭಾಗವಹಿಸದಿ ದ್ದರೂ ಆಟದ ಸೋಲುಗೆಲುವಿನ ಹುಚ್ಚು, ಕಡಿಯುಂವುದು ತಪ್ಪಿಸಿಕೊಳ್ಳುವು ದರ ಚುರುಕು ಅವನ ಬುದ್ಧಿಗೂ ಹತ್ತೇರಿಸಿ, ಪಂದ್ಯದಲ್ಲಿ ಓಡುವ ಕುದುರೆಗ ಳನ್ನು ಕಂಡು, ಹುಚ್ಚುಹುಚ್ಚಾಗಿ ಚೀರುತ್ತಾ, ಹೆಸರು ಹಿಡಿದು ಕೂಗುತ್ತಾ, ಪ್ರೋತ್ಸಾಹಿಸುತ್ತಾ, ತಾವೇ ಜೂಜಿನ ಕುದುರೆಗಳೇನೋ ಎಂಬಂತೆ ಆಡುವ ಕುದುರೆ ಜೂಜಿನ ಪ್ರೇಕ್ಷಕರಂತೆ, ವೀರಣ್ಣನೂ ಒಮ್ಮೆ ಗೌರಮ್ಮನನ್ನು, ಒಮ್ಮೆ ವೆಂಕಟದಾಸಪ್ಪನವರನ್ನು ಬೆನ್ನುತಟ್ಟುತ್ತಾ 'ಕಡಿ— ತಪ್ಪಿಸಿಕೊ' ಎನ್ನುತ್ತಾ, ಆಟದಲ್ಲಿ ಬೇಕಾದ ಗರವನ್ನು ಜಪಿಸುತ್ತಾ, ಆ ಗರವೇ ಬಿದ್ದಾಗ 'ಶಾಭಾಸ್—' ಎಂದು ತಾನೇ ಗೆದ್ದಂತೆ ಆಡುತ್ತಾ ಕೂತಿರುವನು. ಬಹಳ

ಹೊತ್ತು ನಡೆದ ಆಟದಲ್ಲಿ ಬೇಸರ ಇಣಿಕಿಹಾಕುವ ಹೊತ್ತಿನಲ್ಲಿ, ಏನಾದ ರೊಂದು ಪಂದ್ಯ ಕಟ್ಟಿ, ಅವರ ಆಟದ ಉತ್ಸಾಹವನ್ನು ಮತ್ತೆ ಕೆರಳಿಸುವನು.

ಬಣ್ಣ ಬಣ್ಣದ ಬಟ್ಟೆಯ ಚೂರುಗಳನ್ನು ಜಾಣತನದಿಂದ ಮನೆಮನೆ ಯಾಗಿ ಜೋಡಿಸಿ, ನಡುವೆ ಹಣ್ಣಿನ ಮನೆಯಲ್ಲಿ ತುಂಬಾ ಕಸೂತಿಮಾಡಿದ ಪಗಡೆಯ ಹಾಸು ಅವರ ಪ್ರಪಂಚವಾಯಿತು. ಆ ಹಾಸಿನ ಮೇಲೆ ನಡೆಯುವ ಕಾಯಿಗಳು ಅವರ ವಿವಿಧ ಭಾವರಾಗಗಳ ಪ್ರತಿನಿಧಿಗಳಾದವು. ಉರುವಳು ದಾಳ. ಅದನ್ನು ನಡೆಸುವ ವಿಧಿಹಸ್ತವಾಯಿತು. ಉರುಳುವ ದಾಳಗಳೊಂದಿಗೆ ಅವರ ಭವಿಷ್ಯ ಏರಿಳಿಯುತ್ತಿತ್ತು.

ದಿನದ ಮೇಲೆ ದಿನ ಉರುಳುತ್ತಿದ್ದವು– ದಾಳಗಳೂ ಉರುಳುತ್ತಿದ್ದವು– ಬಣ್ಣ ಬಣ್ಣದ ಬಟ್ಟೆಯ ಹಾಸಿನ ಮೇಲೆ; ಹಸಿರು, ಹಳದಿ, ಕಪ್ಪು ಬಣ್ಣದ ಕಾಯಿಗಳು, ಸಮರರಂಗದ ಸೈನಿಕರಂತೆ ನಡೆಸುವ ಕೈ ನಡೆಸಿದಂತೆ. ಅತ್ತ ಇತ್ತ ಓಡಿ, ಏಟು ತಿಂದು, ಹುಟ್ಟಿ–ಸತ್ತು, ಸತ್ತು– ಹುಟ್ಟುತ್ತಿದ್ದವು. ಆಟ ನಡೆಯುತ್ತಿತ್ತು.

ದಿನಗಳೆದಂತೆ ಆಟಗಾರರಲ್ಲಿ ಸಲಿಗೆ ಬೆಳೆಯಿತು. ಹೆಣ್ಣು–ಗಂಡೆಂಬು ದನ್ನು ಮರೆತು, ತಾವಿಬ್ಬರೂ ಒಬ್ಬರನ್ನೊಬ್ಬರು ಸ್ಪರ್ಧಿಸಿರುವ ಆಟಗಾರರು ಎಂಬುದು ಮಾತ್ರವೇ ನೆನಪಿನಲ್ಲುಳಿದು ಆಟ ಆಡುತ್ತಿದ್ದರು.

ಯಾವುದು ತಪ್ಪಿದರೂ ಅವರ ಆಟ ತಪ್ಪುತ್ತಿರಲಿಲ್ಲ. ಪ್ರಳಯ ಬಂದು ದೇವೀಕೆರೆಯನ್ನು ಕೊಚ್ಚಿದ್ದರೆ, ಆ ಪ್ರವಾಹ ಅವರ ಬಳಿ ಬಂದು ಕೊಚ್ಚಿ ಕೊಂಡು ಹೋದರೂ, ಒಬ್ಬರು ದಾಳ, ಇನ್ನೊಬ್ಬರು ಕಾಯಿಯನ್ನು ಹಿಡಿದೇ ಆ ಪ್ರಳಯ ಪ್ರವಾಹದಲ್ಲಿ ತೇಲಿಹೋಗುತ್ತಿದ್ದರೋ ಏನೋ ಎಂಬಂತೆ ಆಟ ನಡೆಯುತ್ತಿತ್ತು.

ಯಾವುದಕ್ಕೂ ನಿಲ್ಲದೆ ನಡೆಯುತ್ತಿದ್ದ ಆಟದ ಹುಮ್ಮಸ್ಸಿನಲ್ಲಿ ಅವರು ಊಟ ತಿಂಡಿ ಮರೆತು ಆಟವಾಡಿದ್ದೂ ಉಂಟು. ಎಷ್ಟೋ ದಿನ ವೆಂಕಟ ದಾಸಪ್ಪನವರು ವೀರಣ್ಣ ತಂದುಕೊಟ್ಟ ಹಾಲು, ಬಾಳೆಹಣ್ಣು, ಕಡಲೆಕಾಯಿ ಗಳನ್ನು ತಿಂದೇ ಹಗಲು ಹರಿಯುವವರೆಗೂ ಆಟವಾಡಿದ್ದೂ ಉಂಟು.

ಮಧ್ಯಾಹ್ನದ ಊಟ ಕಳೆಯಿತೆಂದರೆ, ಗೌರಮ್ಮ ಹಾಸು ಹಾಸಿ, ವೆಂಕಟ ದಾಸಪ್ಪನವರು ಆಟಕ್ಕೆ ಬರುವುದನ್ನು ಕಾಯುತ್ತಿದ್ದಳು. ವೆಂಕಟದಾಸಪ್ಪ

ನವರೂ, ಊಟ ಮುಗಿದು, ಕೈಮೇಲೆ ನೀರು ಬೀಳುವುದೇ ತಡ, ವೀರಣ್ಣನ ಮನೆಯಲ್ಲಿ ಹಾಜರಾಗುವರು.

ವೀರಣ್ಣ ಮನೆಯಲ್ಲಿ ಇರಲಿ, ಬಿಡಲಿ—ಆಟ ನಡೆಯುವುದು.

ಆ ಆಟದ ಹಿನ್ನೆಲೆಯಲ್ಲಿ, ಅವರಿಗೆ ತಿಳಿದೋ ತಿಳಿಯದೆಯೋ ಬೇರೊಂದು ಕಣ್ಣು ಮುಚ್ಚಾಲೆಯಾಟ ನಡೆಯುತ್ತಿತ್ತು.

ಪಗಡೆಯಾಡುವಾಗ ಜಗತ್ತನ್ನೇ ಮರೆತು ಆಟವಾಡುತ್ತಿದ್ದರೂ, ಒಮ್ಮೊಮ್ಮೆ ಪ್ರಾಯದ ಗಂಡಿಗೆ ಇದಿರು ಆಟವಾಡುತ್ತಾ ಕುಳಿತಿರುವುದು ಸಮಪ್ರಾಯದ ಹೆಣ್ಣು ಎಂಬುದು ಅರಿವಾಗುವುದು. ಮೈ ಮರೆತು ಆಡು ವಾಗ ಗೌರಮ್ಮನಿಗೆ ತನ್ನ ಮೈ ಒಟ್ಟೆ ಜಾರಿರುವುದೂ ತಿಳಿಯುವುದಿಲ್ಲ. ಅದು ಅರಿವಾಗುವುದು ಗಂಡಿನ ಕಣ್ಣು ಅತ್ತಕಡೆ ನೋಡುತ್ತಿದೆ ಎಂಬುದು ಅರಿವಾದಾಗಲೇ. ಆಗ, ಕೈ ಒಟ್ಟೆಯನ್ನು ಸರಿಪಡಿಸುವಾಗ, ಮುಖದಲ್ಲಿ ಏನೋ ಉರಿ ಕೆದರಿ, ಮೊಗ ಕೆಂಪೇರುವುದು. ಕಾಯಿ ನಡೆಸುವ ಕೈ ಕೊಂಚ ಕಂಪಿಸುವುದು. ದಾಳ ಉರುಳಿಸುವುದು ನಿಧಾನವಾಗುವುದು. ಒಮ್ಮೊಮ್ಮೆ ಯಾವ ಕಾಯಿ ನಡೆಸುತ್ತಿದ್ದೇನೆಂಬುದು ಮರೆತುಹೋಗಿ, ಬೇರಾವುದೋ ಕಾಯಿ ನಡೆಸಿ, ಆ ತಪ್ಪು ತಿಳಿದಾಗ, ಮುಖ ಮತ್ತಷ್ಟು ಕೆಂಪೇರು ವುದು. ತುಟಿ ಕೊಂಚ ಅಲುಗಿ, ತಡೆತಡೆದು ನಗುಮೂಡುವುದು. ಆಟದ ಭರದಲ್ಲಿ ಯಾವಾಗಲಾದರೊಮ್ಮೆ ಕೈ ಸೋಕಿದಾಗ ವೆಂಕಟದಾಸಪ್ಪನವರಿಗೂ ಇದ್ದಕ್ಕಿದ್ದ ಹಾಗೇ ಮೈಯಲ್ಲಿ ವಿದ್ಯುತ್ತು ಪ್ರವಹಿಸಿದಂತಾಗಿ, ಆ ಗಳಿಗೆಯಲ್ಲಿ ಅದು ಇದಿರಾಳಿಯ ಕೈ ಅಲ್ಲ, ಹೆಣ್ಣಿನ ಕೈ ಅನಿಸಿ, ಸೋಕಿದ ಬೆರಳು ಎದೆಯಲ್ಲಿ ಏನೋ ಬೆದಕುವುದು.

ಒಂದು ಗಳಿಗೆ ಆ ಭಾವನೆ— ಮರುಗಳಿಗೆಯೇ ಅದು ಪೂರೆಯಾಗಿ ಆರಕ್ಷಣ ಮರೆಯಾಗಿದ್ದ ಆಟದ ಹುಚ್ಚು ತಾನೇತಾನಾಗಿ ಮೆರೆಯುವುದು.

ಗಂಡು ತನ್ನ ಭಾವನೆಯನ್ನು ಗಮನಿಸಲಿಲ್ಲ ಎಂದು ಹೆಣ್ಣು, ಹೆಣ್ಣು ತನ್ನ ಭಾವನೆಯನ್ನು ಗಮನಿಸಲಿಲ್ಲ ಎಂದು ಗಂಡು— ಹೀಗೆ, ನಡೆದಿತ್ತು ಪಗಡೆಯಾಟದ ಮರೆಯಲ್ಲಿ ಕಣ್ಣುಮುಚ್ಚಾಲೆಯಾಟ. ಹುಲ್ಲಿನೊಳಗೆ ಕಿಡಿ ಅರಳುತ್ತಿತ್ತು.

ಒಂದು ದಿನ ಮೂರನೆಯವರಿಲ್ಲದೆ ಇಬ್ಬರೇ ಆಟವಾಡುತ್ತಿರುವಾಗ,

ಸುಪ್ತವಾಗಿದ್ದ ಬೆಂಕಿ ಧಿಗ್ಗನೆ ಹೊತ್ತಿ ಉರಿಯಿತು—ಗೌರಮ್ಮನ ಸೆರಗು ಜಾರಿದ ಎದೆಯ ಮೇಲೆ. ಗಂಡಿನ ಕಣ್ಣು ಹರಿದಾಗ; ಆಟವಾಡುವುದನ್ನು ಮರೆತು. ಗಂಡಿನ ಕಣ್ಣು, ಸಡಿಲವಾದ ರವಿಕೆಯ ಮರೆಯಲ್ಲಿ ಬಹು ಸ್ವಲ್ಪ ಕಾಣುತ್ತಿದ್ದ ವಕ್ಷದಲ್ಲೇ ಕೀಲಿಸಿದ್ದಾಗ. ಹೆಣ್ಣಿಗೆ ಅದು ಅರಿವಾದಾಗ, ಎರಡು ಕಣ್ಣೂ ಕಲೆತವು. ಮುದ್ದಿಗೆ ಅಗ್ನಿಸ್ಪರ್ಶವಾಯಿತು.

ಏನಾಯಿತೆಂಬುದು ಇಬ್ಬರಿಗೂ ಅರಿವಾದದ್ದು ಕೊಚ್ಚಿಬಂದ ಹೊಳೆಯು ನೆರೆ ಇಳಿದ ಮೇಲೆ.

ತಾನೇತಾನಾಗಿ ವಿಜೃಂಭಿಸಿದ ಕಾಮ, ತನ್ನ ಬೇಟೆಯನ್ನು ಮುಗಿಸಿದ ಬಳಿಕ, ಮೈ ತಿಳಿದ ವೆಂಕಟದಾಸಪ್ಪನವರು, ಆ ಮನೆಯಲ್ಲಿ ನಿಲ್ಲಲಾರದೆ ಹೊರಟುಹೋದರು.

ನೆಲದಲ್ಲಿ ಮಲಗಿದ ಹೆಣ್ಣು ಮಲಗಿಯೇ ಇತ್ತು— ಕಣ್ಣೀರಿಂದ ನೆಲವನ್ನು ತೋಯಿಸುತ್ತಾ.

ಹೊರಗೆ ಹೋಗಿದ್ದ ವೀರಣ್ಣ ಮನೆಗೆಬಂದಾಗ, ತಲೆಬಾಗಿಲು ತೆಗೆದೇ ಇತ್ತು. ನಡುಮನೆಗೆ ಬಂದು ನೋಡಿದ—ಪಗಡೆಯ ಹಾಸು ಒಂದು ಕಡೆ ರೆಕ್ಕೆ ಮುರಿದ ಹಕ್ಕಿಯಂತೆ ಬಿದ್ದಿತ್ತು; ಕಾಯಿಗಳು ಮನೆಯಲ್ಲೆಲ್ಲಾ ಚೆಲ್ಲಾಪಿಲ್ಲಿಯಾಗಿದ್ದವು. ಮನೆಯಲ್ಲಿ ಏನೋ ಒಂದು ಬಗೆಯ ಭಯ ಕವಿಸುವ ಮೌನ ಹಬ್ಬಿತ್ತು.

'ಗೌರೀ...ಗೌರೀ...'

—ಎಂದು ಕೂಗಿದ ವೀರಣ್ಣ, ಏಕೋ ಭೀತನಾಗಿ.

ಯಾರೂ ಅವನ ಕರೆಗೆ ಉತ್ತರ ಕೊಡಲಿಲ್ಲ. ನಿಂತಲ್ಲಿ ನಿಲ್ಲಲಾರದೆ ಮನೆಯಲ್ಲೆಲ್ಲಾ ಹುಡುಕಿದ. ಭಾವಿಯಲ್ಲಿ ನೀರು ತರಲು ಹೋಗಿರಬಹುದೆಂದು ಭಾವಿಯ ಕಡೆ ಹೋದ. ಅಲ್ಲಿಯೂ ಗೌರಮ್ಮ ಕಾಣಲಿಲ್ಲ.

ಹಿತ್ತಲಲ್ಲಿದ್ದ ಭಾವಿಯ ಬಳಿ ನೋಡುತ್ತಿರುವಾಗ ಏಕೋ ಅವನ ಕಣ್ಣು ಕೊಟ್ಟಿಗೆಯ ಕಡೆ ಹರಿಯಿತು. ತಟಕ್ಕನೆ ಅವನ ಮೈಗೆ ಬೆಂಕಿ ಹೊತ್ತಿಸಿದಂತಾಗಿ 'ಗೌರೀ' ಎಂದು ಚೀರಿ, ಕೊಟ್ಟಿಗೆಗೆ ಹಾರಿದ.

ಕೊಟ್ಟಿಗೆಯ ಛಾವಣಿಯ ಜಂತೆಯಿಂದ ಇಳಿಬಿದ್ದ ಹಗ್ಗದ ತುದಿಯಲ್ಲಿ ಅವನ ಗೌರಿ ಇಳಿಬಿದ್ದಿದ್ದಳು.

ಕಂಡುಗೋಲಿನಿಂದ ಹಗ್ಗವನ್ನು ಕತ್ತರಿಸಿ, ಅವಳನ್ನು ನೆಲದ ಮೇಲೆ ಮಲಗಿಸಿ, ಕತ್ತನ್ನು ಬಿಗಿದ ಹಗ್ಗದ ಕುಣಿಕೆಯನ್ನು ಬಿಡಿಸಿ, ಹತ್ತಿರದಲ್ಲೇ ಹಸುಗಳಿಗೆ ಕುಡಿಯಲೆಂದು ಬಾನಿಯಲ್ಲಿ ತುಂಬಿದ್ದ ನೀರನ್ನು ತೆಗೆದುಕೊಂಡು ಅವಳ ಮೈ-ಮುಖಗಳಿಗೆ ತಳೆದು, ಬೆನ್ನನ್ನು ಉಜ್ಜಿ, ಇನ್ನೂ ಬಿಸಿಯಾಗಿದ್ದ ಮೈಯಲ್ಲಿ ಮತ್ತೆ ಉಸಿರು ಹರಿಯುವಂತೆ ಮಾಡಿದ. ಬೀಳು ಹೇರಿದ ಮುಖದಲ್ಲಿ ಮತ್ತೆ ರಕ್ತ ಹರಿದು, ಕ್ಷೀಣವಾಗಿ ಮಿಡಿಯುತ್ತಿದ್ದ ನಾಡಿ ಬಲವಾಗಿ ಮಿಡಿಯಿತು. ಆದುವರೆಗೂ ಗಟ್ಟಿಯಾಗಿ ಉಸಿರಾಡದ ವೀರಣ್ಣನೂ ಆಗ ಉಸಿರಾಡಿಸತೊಡಗಿದ.

ಗೌರಮ್ಮ ಸಾಯಲಿಲ್ಲ, ಬದುಕಿದಳು ಎಂಬುದು ಖಚಿತವಾದ ಮೇಲೆ ಅವನ ಕಣ್ಣುಗಳಿಗೆ ಕಳೆದುಹೋಗಿದ್ದ ನೋಡುವ ಶಕ್ತಿ ಬಂದು. ಬಿಚ್ಚಿದ ರವಿಕೆಯಲ್ಲಿ ಕಾಣುತ್ತಿದ್ದ ಬಿಳುಪಾದ ವಕ್ಷಸ್ಥಲದ ಮೇಲೆ ಮೂಡಿದ ಕೆಂಪು ಗುರುತುಗಳೇ ಏನಾಗಿರಬಹುದು, ಆ ಆತ್ಮಹತ್ಯಕ್ಕೆ ಅವಳನ್ನು ಪ್ರೇರೇಪಿಸಿದ ಕೃತ್ಯ ಯಾವುದೆಂಬುದು ಅವನಿಗೆ ಮನವರಿಕೆಯಾಯಿತು. ಆ ಅರಿವು ಬಂದ ಕೂಡಲೇ, ಮುಖ ಬಿರುಸಾಗಿ, ಕೈ ಹತ್ತಿರದಲ್ಲಿದ್ದ ಕುಡುಗೋಲನ್ನು ಎಳೆದು ಕೊಂಡು ಬಿಗಿಯಾಗಿ ಹಿಡಿಯಿತು.

'ಯಾರು... ಯಾರು... ಹೀಗ್ಮಾಡ್ದೋರು?'

—ಎಂದು ಉಗ್ರ ಸ್ವರದಲ್ಲಿ ಕೇಳಿದ ವೀರಣ್ಣ.

ಕಣ್ಣು ತೆರೆದ ಗೌರಮ್ಮ, ಬಳಿಯಲ್ಲೇ ಮಂಡಿಯೂರಿ ಕುಳಿತ ವೀರಣ್ಣನ ಮುಖವನ್ನು ಕಂಡು, ತನ್ನ ಆತ್ಮಹತ್ಯ ಪ್ರಯತ್ನ ವಿಫಲವಾಯಿತೆಂಬುದನ್ನರಿತು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಅವನ ಸಮೀಪದಲ್ಲಿದ್ದ ತನ್ನ ಮೈಯನ್ನು ದೂರ ಎಳೆದುಕೊಂಡಳು.

'ಏನಾಯಿತಂ... ಏನಾಯಿತು... ಹೇಳು ಗೌರಿ'

—ಅಳುತ್ತಿದ್ದ ಹೆಂಡತಿಯನ್ನು ನೇವರಿಸುತ್ತ ಕೇಳಿದ ವೀರಣ್ಣ ಕ್ರೋಧ ದುಃಖಗಳು ನಾನು ಮುಂದೆ ತಾನು ಮುಂದೆ ಎಂದು ತುಯ್ಯುತ್ತಿದ್ದ ಧ್ವನಿಯಲ್ಲಿ.

'ನಾನು ಪಾಪಿ ನನ್ನ ಮೈ ಮುಟ್ಬೇಡಿ.'

—ಎಂದಳು ಗೌರಮ್ಮ ತನ್ನ ಮೈಯಮೇಲಿದ್ದ ವೀರಣ್ಣನ ಕೈಯನ್ನು ದೂರಸರಿಸಿ.

'ನೀನಲ್ಲ ಪಾಪಿ...... ಅದ್ಯಾವೋನು ಹೇಳು. ಅವನ ರಕ್ತ ತಂದಂ ನಿನ್ನ ಮೈ ತೊಳೀತಿನಿ'

—ಭೀಷಣ ಸ್ವರದಲ್ಲಿ ಹೇಳಿದ ವೀರಣ್ಣ.

'ಯಾರ್ದೂ ತಪ್ಪಿಲ್ಲ...ನಾನೇ ಪಾಪಿ...ನಾನು ಕೆಟ್ಟೆ... ಬುದ್ಯೋರ್ನೂ ಕೆಡಿಸ್ಬಿಟ್ಟೆ...ನನ್ನ ಯಾಕೆ ಉಳಿಸಿದ್ರಿ ನೀವು? ...ನಾನು ಸತ್ತಿದ್ರೇ ಚೆಂದಾ ಗಿತ್ತು...'

—ಎಂದು ಮತ್ತೆ ಅಳಲಾರಂಭಿಸಿದಳು ಗೌರಮ್ಮ.

'ಬುದ್ಯೋರು...'

—ಆ ಸಂದರ್ಭದಲ್ಲಿ, ಆ ಹೆಸರು ಕೇಳುತ್ತಿದ್ದ ಹಾಗೇ ವೀರಣ್ಣ ಆಕಸ್ಮಿಕವಾಗಿ ಬೆಂಕಿ ತುಳಿದಂತೆ ಮೆಟ್ಟಿ ಬಿದ್ದ.

'ಊಹೂ...ನಾ ನಂಬಾಕಿಲ್ಲ...ನಿಜಹೇಳು...ಅದ್ಯಾವ್ನೋನಿಗೆ ಆ ಧೈರ್ಯ ಬಂತು...ಹೇಳು...ಹೇಳು...ಹೇಳು...ಗೌರಿ...ಸುಮ್ನಿದ್ರೆ ನಾ ಬಿಡಾಕಿಲ್ಲಾ...ಇಂಗ್ಮಾಡ್ದೋನ್ನ ತೀರಿಸಾಗಂಟ...ನಂಗೆ ತೃಪ್ತಿ ಇಲ್ಲ......'

'ನಿಜ...ನಿಜ...ನಾನು ಹೇಳಿದ್ದು...ನಿಜ'

'ಬುದ್ಯೋರು?...ದಾಸಣ್ಣ!...ಅವನಿಗೂ ವಿನಾಶಕಾಲಕ್ಕೆ ವಿಪರೀತ ಬುದ್ಧಿ...ವಿಶ್ವಾಸ ದ್ರೋಹ...'

ಅವನ ರೋಷಭೀಷಣವಾದ ಮುಖ, ಸಿಡಿದು ನಿಂತ ರೀತಿ, ಕೈಯಲ್ಲಿ ಹೊಳೆಯುವ ಕುಡುಗೋಲನ್ನು ಕಂಡು ಭೀತಳಾದ ಗೌರಮ್ಮ ಅವನು ಮುಂದೆ ಹೋಗದಂತೆ, ಅವನ ಕಾಲುಗಳಿಗೆ ತನ್ನ ತೋಳುಗಳನ್ನು ಬಿಗಿಯಾಗಿ ಸುತ್ತಿ—

'ನನ್ನಾಣೆಗೂ...ನಿಮ್ಮಾಣೆಗೂ...ಶಿವನಾಣೆಗೂ ಬುದ್ಧಿಯೋರ್ದು ತಪ್ಪಿಲ್ಲ...ಕಡಿಯೋದಾದ್ರೆ ನನ್ನ ಕಡಿದ್ಹಾಕ್ಬಿಡಿ...ಬುದ್ಧಿಯೋರ ತಳ್ಕೀಗೆ ಹೋಗಾಕಿಲ್ಲಾಂತ ಅನ್ನೊವರ್ಗೂ ನಾನು ನಿಮ್ಮ ಪಾದ. ಬಿಡಾಕಿಲ್ಲ ನನ್ನ ಮಾತಾರ ಕೇಳ್ರಿ...

—ಎಂದು ಬಿಡಿಸಿಕೊಳ್ಳಲು ಕೊಸರುತ್ತಿದ್ದ ಅವನ ಕಾಲುಗಳನು ಮತ್ತಷ್ಟು ಬಿಗಿಯಾಗಿ ಹಿಡಿದು, ಆರ್ತಳಾಗಿ ಹೇಳಿದಳು ಗೌರಮ್ಮ.

ಕಾಲಡಿಯಲ್ಲಿ ಬಿದ್ದು ಹೊರಳುತ್ತಿದ್ದ ಹೆಣ್ಣನ್ನು ಕಂಡು, ಒಂದುಗಳಿಗೆ ಕ್ರೋಧದಿಂದ ಕಲ್ಲಾದ ವೀರಣ್ಣನ ಹೃದಯದಿಂದ ಮರೆಯಾಗಿದ್ದ ಸಹಜ ಮೃದುತೆ ಮರಳಿ, ಅವನ ಕಣ್ಣುಗಳಲ್ಲಿದ್ದ ಉರಿ ಕಂಬನಿಯಾಗಿ ಕರಗಿತು. ನಿಲ್ಲಲಾರದವನಂತೆ ಕುಸಿದು, ಗೌರಮ್ಮನ ಪಕ್ಕದಲ್ಲಿ ಕುಳಿತು—

'ಅದೇನಾಯ್ತು ಹೇಳು'

—ಎಂದ.

ದುಃಖ, ಪಾಪಪ್ರಜ್ಞೆ ತುಂಬಿ ಬೇರಾವ ಶಬ್ದಕ್ಕೂ ಅವಕಾಶವಿಲ್ಲದ ಗಂಟಲಲ್ಲಿ ಬಲವಂತವಾಗಿ, ಮುರುಕು ಮುರುಕಾಗಿ ಮಾತನ್ನು ಹೊರಡಿಸಿ, ತಮ್ಮಿಬ್ಬರ ಇಚ್ಛೆಗೂ ಮೀರಿ, ಹೇಗೆ ಆ ಕೃತ್ಯ ಘಟಿಸಿತೆಂಬುದನ್ನು ತಿಳಿಸಿ, ಗೌರಮ್ಮ—

'ಇದ್ದಾಗ್ಗೆ ಬುದ್ಧಿಯೋರ್ದ್ವೇನೂ ತಪ್ಪಿಲ್ಲ. ನನ್ನೆ ಮಾನಸ್ನು ಕೆಟ್ಟು ಬುದ್ಧಿಯೋರ್ನ ಮೈಲಿಗೆ ಮಾಡ್ಬುಟ್ಟೆ. ನಿಮ್ಗೆ ದ್ರೋಹ ಮಾಡ್ಬುಟ್ಟೆ. ಈ ಮೈ ಇನ್ನಿರಬಾರ್ದು. ನನ್ಯಾಕೆ ಉಳ್ಸಿದ್ರಿ. ಹಂಗೇ ಸತ್ಹೋಗಿದ್ರೆ ಚೆಂದಾಗಿತ್ತು. ನನ್ಗೆ ಅಪ್ಣೆ ಕೊಡಿ. ಇನ್ನೀ ಪಾಳುಮೊಕ ನಿಮ್ಗೆ ತೋರಿಸಾಕಿಲ್ಲ,

—ಎಂದು ವೀರಣ್ಣನ ಕಾಲುಗಳ ಮೇಲೆ ಬಿದ್ದು ಅವನ ಅನುಮತಿಯನ್ನು ಬೇಡಿದಳು.

ವೀರಣ್ಣ ಶಿಲಾವಿಗ್ರಹದಂತೆ ಕುಳಿತು ಗೌರಮ್ಮ ಹೇಳಿದುದನ್ನು ಕೇಳಿದ. ಮೊಗವೆತ್ತಲಾರದೆ ನೆಲದಲ್ಲಿ ಹಂಮುಗಿದ್ದ ಪತ್ನಿಯತ್ತ ನೋಡಿದ. ಅವನ ಮೆದುಳಿನಲ್ಲಿ ಎಲ್ಲ ವಿವೇಕನೆಯನ್ನೂ ಕೊಚ್ಚಿ ಕದಡುವಂತಹ ಬಿರುಗಾಳಿ ಮೊರೆಯುತ್ತಿತ್ತು. ಕೊಲೆ, ಆತ್ಮಹತ್ಯೆ, ದೇಶಾಂತರವಾಸಗಳ ಭಾವನೆಗಳು ಹೊಯ್ದಾಡುತ್ತಿದ್ದ. ಅಪಮಾನ, ಪ್ರತಿಕಾರ ಭಾವನಾ ಪ್ರಚೋದಿತವಾಗಿದ್ದ ಮನಸ್ಸನ್ನು ಪ್ರಯತ್ನಪೂರ್ವಕವಾಗಿ ಹತೋಟಿಗೆ ತಂದುಕೊಂಡು ಚಿಂತಿಸಿದ.

ತನ್ನ ನೆಚ್ಚಿನ ಮಡದಿ—ಅತ್ಯಂತ ಆಪ್ತನಾದ ಮಿತ್ರ.

ತನ್ನ ಕೈಯ ಬೆರಳೇ ತನ್ನ ಕಣ್ಣನ್ನು ಇರಿಯುತ್ತಿದೆ.

ಇವರನ್ನು ಉಳಿಸಬಹುದೆ...ತಾನೇ ಉಳಿಯಬಹುದೆ...ಮೈಮರೆವಿನ ಗಳಿಗೆಯಲ್ಲಿ ಭಯಂಕರದ್ರೋಹವಾಗಿ ಪರಿವರ್ತಿತವಾದ .ಸ್ನೇಹ, ಪ್ರೇಮಗಳ ಭೂತ ಛಾಯೆಯಡಿಯಲ್ಲಿನ್ನು ತಾನು ಉಸಿರಾಡುವುದು ಸಾಧ್ಯವೇ?

ಯಾರು ತನ್ನ ಪಾಲಿಗೆ ಪ್ರಪಂಚಕ್ಕಿಂತ ಮಿಗಿಲು ಎಂದು ಭಾವಿಸಿದ್ದನೋ, ಅವರೇ ತನ್ನ ಸುಂದರ ಪ್ರಪಂಚಕ್ಕೆ ಕಿಚ್ಚು ಹಚ್ಚುವುದೇ?

ಇವರ ತಪ್ಪೆ? ಇವರನ್ನು ನಂಬಿದ ತನ್ನ ತಪ್ಪೇ? ಇವರನ್ನು ನಂಬುವಂತೆ ಮಾಡಿದ ವಿಧಿಯ ತಪ್ಪೇ?

ಹೆಣ್ಣಿನ ಸ್ವಭಾವ ಸಹಜವಾಗಿಯೇ ಚಂಚಲ. ಅದು ಜಾರಿತು ಎಂತ ದಾಸಣ್ಣನೂ ಜಾರುವುದೇ? ಆ ಹೊತ್ತಿನಲ್ಲಿ ಅವನಿಗಾದರೂ ಸ್ನೇಹ ನೆನಪಿಗೆ ಬರಬಾರದಿತ್ತೆ? ಇಬ್ಬರೂ ಕುರುಡಾಗಬೇಕೇ?

ಎಂದೂ—ಎಂದೂ ಪರಸ್ತ್ರೀಯತ್ತ ಕಣ್ಣೆತ್ತಿ ನೋಡದ ಮಿತ್ರ, ಎಂದೆಂದೂ ಪರಪುರುಷರ ಚಿಂತೆಮಾಡದ ಮಡದಿ—

ಅಪರಂಜಿ ಚಿನ್ನದಲ್ಲೇ ಹಿತ್ತಾಳೆಯ ಕಸಿರು!

ಈ ಚಿಂತೆಯಲ್ಲಿ ಹಣ್ಣಾಗುತ್ತಲೇ ಹೆಂಡತಿಯತ್ತ ನೋಡಿದ. ಧೂಳಿ ದೂಸರಿತವಾದ ನೆಲದಲ್ಲೊರಗಿದ ಹೂವಾಲೆಯಂತಿದ್ದ ಚೆಲುವೆಯಾದ ಮಡದಿಯನ್ನು ನೋಡಿದ.

ಇವಳು ಚೆಲುವೆ-ದಾಸಣ್ಣ ಯುವಕ-

ಚೆಲುವು-ಯೌವ್ವನಗಳ ನಡುವೆ ತಾನು-ಹುಬ್ಬು ಬಿಳುಪಾಗತೊಡಗಿದ ವೃದ್ಧ!

ನಾಲ್ವರು ಹೆಂಡಿರನ್ನು ಕಂಡು, ಕಳೆದುಕೊಂಡು, ಇನ್ನು ಮದುವೆಯೇ ಬೇಡ ಎಂದಿದ್ದ ತಾನೂ ಈ ಚೆಲುವು, ಏರುಪ್ರಾಯದ ತುಂಬು ಮೈಯನ್ನು ಕಂಡು 'ಇರಲಿ' ಎಂದಿದ್ದ.

ಹಾಗಿರುವಾಗ ಈ ಬಿಸಿಗೆ ಪ್ರಾಯೋನ್ಮತ್ತವಾದ ಬೆಣ್ಣೆಯ ಮುದ್ದೆ ಕರಗಿದುದು ತಪ್ಪೇ? ಅಪರಾಧವೇ?

ಆ ಗಳಿಗೆಯಲ್ಲಿ ಅವರಿಗಿಂತ ತನ್ನದೇ ಹೆಚ್ಚಿನ ಅಪರಾಧವೆನ್ನಿಸಿತು ವೀರಣ್ಣನಿಗೆ. ಕ್ರೋಧ ನಾಚಿಗೆಯಲ್ಲಿ ಕರಗಿ, ಪಶ್ಚಾತ್ತಾಪವಾಗಿ ಮೂಡಿ, ಮಲಗಿದ್ದ ಹೆಂಡತಿಯ ಮೈಯನ್ನು ನೇವರಿಸುತ್ತಾ, ಬಳಲಿ ಭಾರವಾದ ಧ್ವನಿಯಲ್ಲಿ ಹೇಳಿದ-

'ಏಳು ಗೌರಿ. ತಪ್ಪು ನಿಮ್ಮದಲ್ಲ, ನನ್ನದು.'

ಗಂಡನ ಕೈ ತನ್ನನ್ನು ಸೋಕಿದ ಕೂಡಲೆ ಗೌರಮ್ಮ ತಟಕ್ಕನೆ ತನ್ನ ಮೈಯನ್ನು ದೂರ ಎಳೆದು-

'ಇನ್ನು ಈ ಮೈಲಿಗೆ ಮೈ ಮುಟ್ಬ್ಯಾಡ್ರಿ'

—ಎಂದಳು ತನ್ನ ಮೈ ಬಗ್ಗೆಯೇ ಅಸಹ್ಯ ಮೂಡಿ.

ಗೌರಮ್ಮ ಆ ಮಾತನ್ನು ಹೇಳಿದಾಗ ವೀರಣ್ಣ ಮನಸ್ಸಿನಲ್ಲಿ ತಟಕ್ಕನೆ ಏನೋ ಒಂದು ಯೋಚನೆ ಮೂಡಿತು. ಆ ಭಾವನೆ ಮತ್ತೆ ತನ್ನ ಮನಸ್ಸಿನಿಂದ ಜಾರದಂತೆ ಅದನ್ನು ಬಿಗಿಯಾಗಿ ಹಿಡಿದು—

'ಒಳೀಕೆ ನಡಿ ಗೌರಿ. ಅಕ್ಕಪಕ್ಕದೋರು ನೋಡಿಯಾರು'

—ಎಂದು ತನ್ನಿಂದ ದೂರವಾಗಿ ಮೂಲೆಯಲ್ಲಿ ಮುದುರಿಕೊಂಡಿದ್ದ ಅವಳ ತೋಳನ್ನು ಹಿಡಿದು, ಬಲವಂತವಾಗಿ ಒಳಗೆ ನಡೆಸಿ-

'ನಾನು ಸ್ವಲ್ಪ ಹೊರಗೋಗ್ಬರ್ತೀನಿ ಗೌರಿ, ನಾ ಬರೋ ಗಂಟ ನೀನು

ಇಲ್ಲೇ ಇರ್ಬೇಕು. ಮತ್ತೇನಾದ್ರೂ ಮಾಡ್ಕೊಳ್ಳೋಕೋದ್ರೆ ನನ್ನಾಣೆ'
—ಎಂದು ಅವಳ ಸಾಯಲೆಳಸುವ ಮನಸ್ಸಿಗೆ ಆಣೆಯ ಮಾತಿನ ಕಾವಲು ಬಿಗಿದು ವೇಗವಾಗಿ ಮನೆಯಿಂದ ನಡೆದ.

ವೀರಣ್ಣ ಮನೆಯಿಂದ ಹೊರಗೆ ಬಂದಾಗ ಸಂಜೆಯು ಮಬ್ಬುಕತ್ತಲಿಗೆ ತಿರುಗುವ ಹೊತ್ತು. ದನಕರುಗಳು ಬೀದಿಯಲ್ಲಿ ಧೂಳು ಕೆದರುತ್ತಾ ತಮ್ಮ ಮನೆಯತ್ತ ಮರಳುತ್ತಿದ್ದವು. ಮುಗಿಲಲ್ಲಿ ಅಲ್ಲೊಂದು ಇಲ್ಲೊಂದು ನಕ್ಷತ್ರ, ವಿಶಾಲವಾದ ಮುಗಿಲಿನಲ್ಲಿ ಅನಾಥರಂತೆ ಮಂಕಾಗಿ ಹೊಳೆಯುತ್ತಿದ್ದವು.

ವೇಗವಾಗಿ ನಡೆದು ವೀರಣ್ಣ ಎರಡು ಬೀದಿಯಾಚೆಯಿದ್ದ ನರಸಪ್ಪ ನವರ ಮನೆ ಬಾಗಿಲನ್ನು ಸೇರಿ—'ದಾಸಣ್ಣಾ...ದಾಸಣ್ಣಾ' ಎಂದು ಕೂಗಿದ.

ಅವನ ಕೂಗಿಗೆ ಲಕ್ಷ್ಮೀದೇವಮ್ಮ ಉತ್ತರ ಕೊಟ್ಟು ಹೇಳಿದರು—

'ದಾಸು ಮನೆಯಲ್ಲಿಲ್ಲ'

'ಎಲ್ಲೋಗವರೆ?'

'ಸಂಧ್ಯಾವಂದನೆ ಮಾಡಿಕೊಂಡು ಬರ್ತೀನಿ ಅಂತ ದೇವೀಕೊಳದ ಕಡೆಗೆ ಆಗಲೇ ಹೋದ. ಇನ್ನೇನು ಬರೊ ಹೊತ್ತು. ಕೂತುಕೋ ಬಾ ವೀರಣ್ಣ'

'ಇಲ್ಲಪ್ಪ. ಅಲ್ಲೇ ಹೋಗಿ ಅವರ್ನ ನೋಡ್ತೀನಿ'

—ಎಂದು ಹೊರಟ ವೀರಣ್ಣ.

'ಅದೇನಪ್ಪ ಅವಸರ. ಹೊಸ ನಾಟಕಾನೋ? ಜೋಡಿಕನ್ನಾಗಿ ಕಲೆತಿರಿ

—ಲಕ್ಷ್ಮೀದೇವಮ್ಮ ನಗುತ್ತಾ ಹೇಳಿದರು.

'ಹೂ. ನಾಟಕ ಕಣವ್ವ ...ನಾಟಕ...ಭೋ ದೊಡ್ಡ ನಾಟಕ......

—ಎಂದವನೇ ವೀರಣ್ಣ ದೊಡ್ಡ ಹೆಜ್ಜೆ ಹಾಕುತ್ತಾ ದೇವೀಕೊಳದ ಕಡೆಗ ನಡೆದ.

# ೧೮

ವೀರಣ್ಣನ ಮನೆಯಿಂದ ಹೊರಬಿದ್ದು ಮನೆಗೆ ಬಂದ ವೆಂಕಟದಾಸಪ್ಪನವರು, ಮನೆಯಲ್ಲೂ ನಿಲ್ಲಲಾಗದೇ 'ಬರುತ್ತಿದ್ದ ಹಾಗೇ ಮತ್ತೆಲ್ಲಿಗೆ ಹೊರಟೆ. ಮನೆಯಲ್ಲಿ ಒಂದು ಗಳಿಗೆ ನಿನ್ನ ಕಾಲು ನಿಲ್ಲೋಲ್ಲ' ಎಂದ ತಾಯಿಗೆ 'ಈಗ ದೇವೀಕೊಳಕ್ಕೆ ಹೋಗಿ ಸಂಧ್ಯಾವಂದನೆ ಮುಗಿಸಿಕೊಂಡು ಬರುತ್ತೇನೆ' ಎಂದು ಹೇಳಿ ಮನೆಯಿಂದಲೂ ಹೊರಬಿದ್ದು ದೇವೀಕೊಳದ ಬಳಿಗೆ ಬಂದಿದ್ದರು.

ಒಂದು ಗಳಿಗೆ. ಒಂದೇ ಒಂದು ಗಳಿಗೆ, ಅವರಿಗೆ ತಮ್ಮತ್ತ ಆ ಬಯಕೆಯ ನೋಟವನ್ನು ಅರಳಿಸಿದ ಕಣ್ಣು, ತೃಪ್ತಿಯ ಭರವಸೆಯನ್ನು ತೋರಿ ಬಾಗಿದ ಮೈ, ಯಾವದೆಂಬುದು ಮರೆವಾಗಿ, ತಾವೂ ಬಯಕೆಯ ಆಳಾಗಿ, ತೆರೆದ ತೋಳಿಗೆ ಮೈ ನೀಡಿದರು. ಮೈ ಬಯಸಿದಂದನ್ನು ಮೈ ಪಡೆಯಿತು. ಮರುಗಳಿಗೆಯೇ ಬುದ್ಧಿ, ಹಡೆತುಳಿದ ಹಾವಿನಂತೆ ಸಿಡಿದು ನಿಂತು ಕೇಳಿತು—

'ಪಾಪಿ, ಇದೇನು ಮಾಡಿದೆ? ನಿನ್ನೆದುರಿಗಿದ್ದುದು ಹೆಣ್ಣಲ್ಲ ನಿನ್ನ ಮಿತ್ರನ ನಂಬಿಕೆ. ಅದಕ್ಕೆ ದ್ರೋಹ ಬಗೆದೆಯಾ?

ಸಿಡಿಲಿನಂತೆ ಆ ಮಾತು ಜಡಿದು, ಅದರ ಆರ್ಘಟಕ್ಕೆ ವಿವೇಚನೆಯನ್ನು ಕವಿದಿದ್ದ ಕಾಮದ ಕಾರ್ಮೋಡ ಚೆಲ್ಲಾಪಿಲ್ಲಿಯಾಗಿ, ಪಶ್ಚಾತ್ತಾಪದ ವೃಷ್ಟಿ ಕಣ್ಣಿಂದ ಹನಿಹನಿಯಾಗಿ ಉರುಳತೊಡಗಿತು.

ಕ್ರೋಧ, ಪಶ್ಚಾತ್ತಾಪ, ನಾಚಿಕೆ, ಹೇಸಿಗೆಯ ಭಾವನೆಗಳು ಒಂದರೊಡನೊಂದು ತೆರೆಹೊಯ್ದು, ಆ ಬೇಗೆಯನ್ನು ಸಹಿಸಲಾಗದೆ, ಕೊಳದ ತಣ್ಣೀರಿನಲ್ಲಿ ಮೈ ಚೆಲ್ಲಿದರು.

ಒಂದು ಗಳಿಗೆ ಹಾಗೇ... ಹಾಗೇ... ಆ ತಣ್ಣೀರಿನಲ್ಲೇ ಮುಳುಗಿ ಹೋದರೆ ಆ ಪಾಪಕ್ಕೆ ಪ್ರಾಯಶ್ಚಿತ್ತವಾದೀತೇನೊ ಎನಿಸಿತು. ಆದರೆ ತಾನು ಮಾಡಿದ ಅಪರಾಧಕ್ಕೆ ಕ್ಷಮೆ ಕೇಳಿ, ಬಂದ ಶಿಕ್ಷೆಯನ್ನು ಅನುಭವಿಸದೆ ಹೇಡಿಯಂತೆ, ಆತ್ಮಹತ್ಯೆಯ ಸೆರಗಿನಲ್ಲಿ ಮುಖ ಮುಚ್ಚಿಕೊಳ್ಳುವುದೇ ಎನಿಸಿ, ಮುಟಿ ಬಾರದ ಹೇಸಿಗೆಯಂತೆ ಆತ್ಮಹತ್ಯದ ಭಾವನೆಯನ್ನು ದೂರ ತಳ್ಳಿ, ಕೊಳದಿಂದ ಮೇಲೆ ಬಂದರು.

'ಹೋಗು...ಹೋಗು...! ಹೇಡಿಯಂತೆ ಸಾವಿನ ಯೋಚನೆ ಮಾಡ

ಬೇಡ. ನೀನು ಗಂಡಸಾಗಿದ್ದರೆ... ಮನುಷ್ಯನಾಗಿದ್ದರೆ...ವೀರಣ್ಣನನ್ನು ಕಂಡು ನಿನ್ನಿಂದಾದ ಅಪರಾಧವನ್ನು ತಿಳಿಸಿ ಕ್ಷಮಾಪಣೆ ಬೇಡು. ಆ ತಪ್ಪಿಗಾಗಿ ಆತ ನಿನ್ನ ತಲೆ ಕತ್ತರಿಸಿದರೆ, ಕತ್ತಿಗೆ ತಲೆಗೊಟ್ಟು ನಿಂತುಕೊ. ಧೈರ್ಯವಿದ್ದರೆ ಆಗಬಹುದಾದ ಅಪಮಾನವನ್ನು ಸಹಿಸಲು ಎದೆ ಗಟ್ಟಿಮಾಡಿಕೊಂಡು ನಿಲ್ಲು. ಹಾಗಲ್ಲದೆ ಸತ್ತರೆ, ನಾಳೆ ಹೆಣ್ಣೊಬ್ಬಳೇ ನಿನ್ನ ಸಂಯಮರಾಹಿತ್ಯದ ವಿಷಫಲ ವನ್ನು ಸಹಿಸಬೇಕಾಗಬಹುದು. ಹೋಗು... ಹೋಗು... ಆಕೆಗೆ ಶಿಕ್ಷೆಯಾಗುವ ಮುನ್ನ 'ತಪ್ಪು ನನ್ನದು ಆಕೆಯದಲ್ಲ' ಎಂದು ಹೇಳಿ ನಿಲ್ಲು. ಇಲ್ಲವಾದಲ್ಲಿ ನೀನು ಗಂಡಸಲ್ಲ. ಹುಟ್ಟಿದ್ದಕ್ಕೆ ಸಾರ್ಥಕವಲ್ಲ; ನೀನು ಹುಟ್ಟಿದ ಮನೆಗೆ ತಕ್ಕ ಮಗನಾಗುವುದಿಲ್ಲ'

—ಎಂದು ಅವನೊಳಗಿನ ಯಾವುದೋ ಧ್ವನಿ ಕೂಗಿ ಕೂಗಿ ಹೇಳುತ್ತಿತ್ತು.

ಆದರೆ ವೀರಣ್ಣನನ್ನು ಹೋಗಿ ನೋಡಬೇಕೆಂದ ಕೂಡಲೇ, ಅಳುದ್ದದ ಮೈ ಜೋಟುದ್ದವಾಗಿ ಮುದುಡಿಕೊಳ್ಳುತ್ತಿತ್ತು.

'ಹೋಗಿ, ಆತನೆದುರಿಗೆ ನಿಲ್ಲುವೆಯಾ? ಯಾರು ನಿನ್ನನ್ನು ಚನ್ನಲ್ಲಿ ಬಿದ್ದ ತಮ್ಮನಿಗಿಂತ ಹೆಚ್ಚಾಗಿ, ಹೊಟ್ಟೆಯಲ್ಲಿ ಹುಟ್ಟಿದ ಮಗನಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರೋ, ಯಾರು ನಿನ್ನಲ್ಲಿ ಅಪಾರ ನಂಬಿಕೆ ಇಟ್ಟಿದ್ದರೋ, ಆತನಿಗೆ ವಿಶ್ವಾಸ ದ್ರೋಹ ಬಗೆದು, ಆತನ ಕಣ್ಣನ್ನೇ ಇರಿದು, ಆತ ಲೋಕ ದಲ್ಲಿ ತಲೆಯೆತ್ತಿಕೊಂಡು ತಿರುಗದಂತೆ ಮಾಡಿ, ಯಾವ ಮುಖ ಇಟ್ಟುಕೊಂಡು ಹೋಗಿ ನೋಡುತ್ತೀಯ? 'ನೋಡು ನಾನೇ ನಿನ್ನ ಪತ್ನಿಯನ್ನು ಕೆಡಿಸಿದ ಧೀರ, ನಿನ್ನ ವಿಶ್ವಾಸದ ವಜ್ರದ ಗಣಿಯನ್ನು ಕಾಪಾಡು ಕುರುಡು ಕವಡೆಗೆ ಮಾರಿದ ಮಹಾಪುರುಷ' ಎಂದು ಅವನ ಮುಂದೆ ನಿಲ್ಲುತ್ತೀಯಾ? ಆತನ ಮುಖ ನೋಡಲು ನಾಚಿಕೆಯಾಗುವುದಿಲ್ಲವೇ ನಿನಗೆ'

—ಎಂದು ಮತ್ತೊಂದು ಧ್ವನಿ ಅಪಾದನೆಯ ಚಾಟಿಯಿಂದ ಜಡಿ ಯುತ್ತಿತ್ತು.

ಇಬ್ಬಗೆಯಾದ ಬುದ್ಧಿಯ ತಾಕಲಾಟದಲ್ಲಿ ವಿಹ್ವಲರಾಗಿ, ಯಾವ ಜಾಡು ಹಿಡಿಯುವುದೆಂಬುದನ್ನರಿಯದೆ—

'ತಾಯೀ—ನೀನೇ...ನೀನೊಬ್ಬಳೇ ನನಗೆ ದಾರಿತೋರುವ ಬೆಳಕು ನಿನ್ನನ್ನಲ್ಲದೆ ಬೇರೆ ಯಾರನ್ನು ಬೇಡಲಿ? ನಾನು ಮಹಾಪಾಪಿ, ನೀಚ

ಅಥವಾ. ಈ ಪಾಪಿಗೆ ದಾರಿತೋರು ತಾಯಿ'

—ಎಂದು ದೇವಿಯನ್ನು ಬೇಡುತ್ತಾ, ಆಕೆಯ ಮುಂದೆಮೈಯನ್ನು ಚೆಲ್ಲಿದರು.

ಅವರ ದುಃಖ ಕಣ್ಣಲ್ಲಿ ಕೊನೆಗಾಣದ ಕಂಬನಿಯಾಗಿ ಹರಿಯುತ್ತಾ ನೆಲವನ್ನು ತೋಯಿಸುತ್ತಿತ್ತು. ನೆಲದ ಮೇಲೆ ಕೆಡೆದ ಮೈಯ್ಯನ್ನು ಮೇಲೆ ಎತ್ತಲಾರದೆ, ಕೈಗಳಿಂದ ಗರ್ಭ ಗುಡಿಯ ಹೊಸ್ತಿಲನ್ನು ಬಿಗಿಯಾಗಿ ಹಿಡಿದು ಉರುಳಿದರು.

ಅವರ ಮನೆಯತ್ತಲಿಂದ ಬಂದ ವೀರಣ್ಣ, ದೇವಾಲಯಕ್ಕೆ ಬಂದು ನೋಡಿದಾಗಲೂ ಹಾಗೇ ಬಿದ್ದಿದ್ದರು ವೆಂಕಟದಾಸಪ್ಪ. ಅವರ ಮೈಮೇಲೆ ಎಚ್ಚರವೇ ಇದ್ದಂತಿರಲಿಲ್ಲ.

ನೆಲದ ಮೇಲೆ ಬಿದ್ದಿದ್ದ ಅವರನ್ನು ಕಂಡಕೂಡಲೇ, ಇದ್ದಕ್ಕಿದ್ದಹಾಗೇ ಅವರ ಹೃದಯದಲ್ಲಿ ಭಯಂಕರ ಕ್ರೋಧ ಉಕ್ಕಿ ಬಂದು, ನೆಲದಮೇಲಿದ್ದ ಅವರನ್ನು ಹಾಗೇ ಪಾತಾಳಕ್ಕೆ ತುಳಿದುಬಿಡಬೇಕು ಎನಿಸಿತು. ತುಳಿಯಲೆಂದು ಕಾಲು ತಾನೇ ಮೇಲೆದ್ದು, ಮುಷ್ಟಿ ಬಿಗಿಯಿತು. ಆ ಭಾವನೆಯ ಉಗ್ರತೆಯನ್ನು ತಾಳಲಾರದೇ ಕಣ್ಣುಗಳು ಮುಚ್ಚಿ, ಹಲ್ಲು ಕೆಳತುಟಿಯನ್ನು ಕಡಿಯಿತು.

ಒಂದು ಗಳಿಗೆ ಹಾಗೆ ನಿಂತು, ಉಗ್ರ ಕ್ರೋಧಾವೇಶದಿಂದ ಕಂಪಿಸುತ್ತಿದ್ದ ಮೈಯನ್ನು ಹತೋಟಿಗೆ ತಂದುಕೊಂಡು—

'ದಾಸಣ್ಣಾ... ದಾಸಣ್ಣಾ...'

—ಎಂದು ಕೂಗಿದ.

ಅವನ ಕೂಗು ಕೇಳಿ ವೆಂಕಟದಾಸಪ್ಪನವರು ಕಣ್ಣು ತೆರೆದು ತಮ್ಮ ಬಳಿ ನಿಂತಿದ್ದ ವೀರಣ್ಣನನ್ನು ನೋಡಿದರು. ದೇವಾಲಯದಲ್ಲಿ ಕವಿದ ಕತ್ತಲಲ್ಲೂ ಗರ್ಭಗುಡಿಯಲ್ಲಿ ಹೊತ್ತಿಸಿದ ನಂದಾದೀಪದ ಅಸ್ಪಷ್ಟ ಬೆಳಕಿನಲ್ಲಿ, ಯಾತನೆ ಹಿಂಡುತ್ತಿದ್ದ ವೀರಣ್ಣನ ಮುಖ ಕಾಣಿಸಿತು. ಆತನನ್ನು ನೋಡಿದ ಕೂಡಲೇ, ಕೊಂಚ ಬತ್ತಿದ ಕಂಬನಿ ಮತ್ತೆ ಪ್ರವಹಿಸಲಾರಂಭಿಸಿ—

'ವೀರಣ್ಣಾ...ವೀರಣ್ಣಾ...'

ಎಂದು ಏನೋ ಹೇಳಹೋದರು. ಮಾತಿಗೆ ಮುಂದಾಗಿ ಅಳು ನುಗ್ಗಿ

ಬಂದು ಮಾತು ಅಲ್ಲಿಗೇ ಕಡಿದು ಹೋಯಿತು. ಕೂಡಲೇ ಮೇಲೆದ್ದು ಗರ್ಭ ಗುಡಿಯೊಳಗೆ ಹೋಗಿ, ಹುತ್ತದ ಪಕ್ಕದಲ್ಲೇ ಪೂಜೆಗಿಟ್ಟಿದ್ದ ಗಂಡುಗೊಡಲಿಯನ್ನು ತೆಗೆದುಕೊಂಡು ಬಂದು, ವೀರಣ್ಣನ ಕೈಗೆ ಕೊಟ್ಟು—

'ತೆಗೆದುಕೊ ವೀರಣ್ಣಾ... ನಾನು ಮಹಾಪಾಪಿ! ನಿನ್ನ ಕೈಯಿಂದಲೇ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವಾಗಲಿ'

—ಎಂದು ಅವನ ಎದುರಿಗೆ ಕತ್ತು ಬಗ್ಗಿಸಿ ನಿಂತರು.

ಎರಡೂ ಕೈಗಳಿಂದ ಗಂಡುಗೊಡಲಿಯ ಕಾವನ್ನು ಬಲವಾಗಿ ಹಿಡಿದು, ವೀರಣ್ಣ ತನ್ನೆದುರು ತಲೆಬಾಗಿಸಿ ನಿಂತ ವೆಂಕಟದಾಸಪ್ಪನವರನ್ನು, ಗರ್ಭ ಗುಡಿಯೊಳಗೆ ನಂದಾದೀಪದ ಬೆಳಕಿನಲ್ಲಿ ಅಸ್ಪಷ್ಟವಾಗಿ ಕಾಣುತ್ತಿದ್ದ ಹುತ್ತಾಕಾರವಾಗಿದ್ದ ದೇವಿಯನ್ನು ನೋಡಿದ.

'ಹೂ. ನಿನ್ನೆದುರು ಬಾಗಿರುವ ಕತ್ತನ್ನು ಕಡಿದುಬಿಡು'

—ಎಂದು ಚೀರಿ ಹೇಳಿತು ಅವನೊಳಗಿನ. ಪ್ರತೀಕಾರದ ತೃಷೆಯ ಪಿಶಾಚಿಧ್ವನಿ.

'ಕೊಲೆಯಿಂದ ಕೊಲೆಯ ಪಾಪ ಬೆಳೆಯುವುದೇ ಹೊರತು ಪ್ರತೀಕಾರವಾಗುವುದಿಲ್ಲ, ರಕ್ತದಿಂದ ಅಪಮಾನವನ್ನು ಅಳಿಸಲಾರೆ'

—ಎಂದು ಮರುಗಿ ನುಡಿಯಿತು. ವಿವೇಚನೆಯ ಕ್ಷೀಣ ಧ್ವನಿ.

'ಏನು ಮಾಡಲಿ? ನಾನೇನು ಮಾಡಲಿ ತಾಯೀ'

—ಎಂದು ಅಂಗಲಾಚಿ ಬೇಡಿ, ತಾಯಿಯತ್ತ ನೋಡಿದ ವೀರಣ್ಣ.

'ನಾನು ತಾಯಿ. ನನಗೆ ಗೊತ್ತಿರುವುದು ಕರುಣೆಯೊಂದೇ, ಪ್ರೀತಿಯೊಂದೇ, ಕ್ಷಮೆಯೊಂದೇ'

—ಎಂದು ತಾಯಿ ಹೇಳಿದಂತೆ ಭಾಸವಾಯಿತು ಆತನಿಗೆ

'ಯೋಚನೆ ಮಾಡು? ತಪ್ಪು ಯಾರದು? ಆತನದೇ? ನಿನ್ನ ಹೆಂಡತಿಯದೇ? ನಿನ್ನದೇ? ಶಿಕ್ಷೆ ಯಾರಿಗೆ ಆಗಬೇಕು? ವೃದ್ಧನಾಗಿ ತರುಣಿಯನ್ನು ವಿವಾಹವಾದ ನಿನಗೇ.? ಅಥವಾ ಯೌವ್ವನದೊಂದಿಗೆ ಸೇರಬಯಸಿದ ಯೌವನಕ್ಕೇ? ಯಾವುದು ಅಸ್ವಾಭಾವಿಕ? ಯಾವುದು ಅಪರಾಧ?ಯೋಚನೆ ಮಾಡು. ಯೋಚನೆ ಮಾಡು. ಯೋಚನೆ ಮಾಡಿ ಕೊಡಲಿಯನ್ನು ಹಿಡಿದ ಕೈ ಮೇಲೆತ್ತು. ಕೊಲ್ಲುವುದು ಕಷ್ಟವಲ್ಲ. ಕ್ಷಣದ ಕೆಲಸ. ಆ ಮೇಲೆ—ನನ್ನ ಪ್ರಶ್ನೆಗೆ ಉತ್ತರ ಕೊಡು'

—ಎಂದು ದುಂಬಾಲು ಬಿದ್ದು ಕೇಳಿತು ಮತ್ತೆಲ್ಲಿಯದೋ ಒಂದು ಧ್ವನಿ.

'ಬುದ್ಧೋರ್ದು ಏನೂ ತಪ್ಪಿಲ್ಲ, ನನ್ದೇ ತಪ್ಪು'

—ಎಂದು ಗೌರಮ್ಮನ ಕಂಬನಿಯಿಂದೆ ಕರೆಗಟ್ಟಿ, ವಿವರ್ಣವಾದ ಮುಖ ಅವರ ಮನೋನೇತ್ರದಿದಿರು ಸುಳಿದು ಹೇಳಿತು.

'ನಾನು ಪಾಪಿ, ಮಹಾಪಾಪಿ. ನಿನ್ನ ಕೈಯಿಂದಲೇ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವಾಗಲಿ'

—ವೆಂಕಟದಾಸಪ್ಪನವರ ಮಾತು ಮಾರ್ದನಿಸಿತು ಅವನ ಮಿದುಳಿನಲ್ಲಿ.

'ಈ ಕತ್ತನ್ನು ಕತ್ತರಿಸುವುದೇ?' ಯಾವುದನ್ನು ಇಷ್ಟು ದಿನ ಮಿತ್ರ ಎಂದು ಆಲಿಂಗಿಸಿದ್ದೆನೋ, ಅದನ್ನೇ ಕತ್ತರಿಸಿ, ಆ ರಕ್ತದಲ್ಲಿ ಸ್ನಾನಮಾಡು ವುದೇ? ಇದೇನೇ ಸ್ನೇಹ? ಇಷ್ಟೇನೇ ಸ್ನೇಹದ ಬೆಲೆ? ಸ್ನೇಹಕ್ಕೆ ಅಪ ರಾಧವಾಯಿತು ಎಂದು ಕತ್ತನ್ನು ಬಲಿಕೊಡಲು ನಿಂತ ಈ ಸ್ನೇಹವನ್ನು, ಕತ್ತಿ ನೊಂದಿಗೆ ಕತ್ತರಿಸಿ ಬಿಡುವುದೇ?'

—ಕ್ರೋಧದ ನಗ್ನಭೀಕರ ವಿಕಟಾಟ್ಟಹಾಸದಿದಿರು ಬೆದರಿ ಅವಿತು ಕೊಂಡ ಸ್ನೇಹ ಮೃದುವಾಗಿ ಕೇಳಿತು.

ಹತ್ತಾರು ಕಡೆಯಿಂದ ಬೀಸುವ ಗಾಳಿಯಲ್ಲಿ ಹುಚ್ಚಾಗಿ ಹೊಯ್ದಾಡುವ ದೀಪದ ಕುಡಿಯಂತೆ, ಹೊಯ್ದಾಡಿದ ಮನಸ್ಸು ಇದ್ದಕ್ಕಿದ್ದ ಹಾಗೇ ಸ್ಥಿರ ವಾಯಿತು. ಮುಖವನ್ನು ಕವಿದಿದ್ದ ಉಗ್ರತೆ ತೊಲಗಿ, ಕೈಯಲ್ಲಿದ್ದ ಗಂಡು ಗೊಡಲಿಯನ್ನು ಅತ್ತ ಕಡೆ ಬಿಸುಟು, ಗಂಭೀರವಾದ ಧ್ವನಿಯಲ್ಲಿ ಹೇಳಿದ—

'ಇದಲ್ಲ ಶಿಕ್ಷೆ. ನಾನು ಕೊಡುವ ಶಿಕ್ಷೆಯೇ ಬೇರೆ. ಬಾ'

—ಎಂದ.

'ಎಲ್ಲಿಗೆ'

—ವೆಂಕಟದಾಸಪ್ಪ ಕೇಳಿದರು.

'ಎಲ್ಲಿಗೆ ಎಂದರೆ—ನಾನು ಕರೆದಲ್ಲಿಗೆ. ಹೂ, ಬಾ'

—ಎಂದು ಅವರ ಕೈ ಹಿಡಿದು ಎಳೆದ ವೀರಣ್ಣ.

ಮರುಮಾತಾಡದೆ ಅವನನ್ನು ಹಿಂಬಾಲಿಸಿದರು ವೆಂಕಟದಾಸಪ್ಪ.

೧೯

ವೆಂಕಟದಾಸಪ್ಪನವರನ್ನು ಕೈ ಹಿಡಿದುಕೊಂಡೇ ಬಂದು ವೀರಣ್ಣ ಮುಚ್ಚಿದ ಮನೆ ಬಾಗಿಲನ್ನು ತೆರೆದ.

ಮನೆಯೊಳಗೆ ದೀಪ ಹೊತ್ತಿಸದೆ ಕತ್ತಲಾವರಿಸಿತ್ತು.

'ಗೌರೀ...ಗೌರೀ...'

ಎಂದು ಕೂಗಿದ.

'ಇಲ್ಲೇ ಇವ್ನಿ'

—ಎಂದ ಗೌರಮ್ಮನ ಕ್ಷೀಣಸ್ವರ ಕೇಳಿಸಿ. ಒಂದು ಗಳಿಗೆ ಅವನ ಹೃದಯವನ್ನು ಕವಿದಿದ್ದ ಭಯ ಮಾಯವಾಯಿತು.

'ದೀಪ ಹತ್ತಿಸ್ಲಿಲ್ವಾ? ಸಂಜೆ ಹೊತ್ನಾಗೆ ಹಿಂಗಿರೋದು ಲಕ್ಷಣ ಅಲ್ಲ. ಕಡ್ಡಿ ಪಟ್ಣ ಎಲ್ಲೈತೆ?'

—ಎಂದು ಕೇಳಿ, ವೆಂಕಟದಾಸಪ್ಪನನ್ನು ಅಲ್ಲೇ ಬಿಟ್ಟು, ಒಳಗೆ ಹೋಗಿ ಕಡ್ಡಿ ಪೊಟ್ಟಣವನ್ನು ಹುಡುಕಿತಂದು, ಗೋಡೆಯಲ್ಲಿನ ಗೂಡಿನಲ್ಲಿದ್ದ ಹಣತೆಯನ್ನು ಹೊತ್ತಿಸಿದ.

ನಡುಮನೆಯ ಕಂಭಕ್ಕೆ ಒರಗಿ ಕುಳಿತಿದ್ದ ಗೌರಮ್ಮ ದೀಪ ಹೊತ್ತಿ ಬೆಳಕಾದಾಗ ಕಡೆದ ವಿಗ್ರಹದಂತೆ ನಿಂತಿದ್ದ ವೆಂಕಟದಾಸಪ್ಪನವರನ್ನು ನೋಡಿದಳು. ಅವರೂ ಆಕೆಯನ್ನು ನೋಡಿದರು. ಮರುಗಳಿಗೆಯೇ ಇಬ್ಬರ ತಲೆಗಳೂ ನೆಲಕ್ಕೆ ಬಾಗಿದವು. ದೀಪದ ಬಳಿಯೇ ನಿಂತು ಇಬ್ಬರನ್ನೂ ನೋಡಿದ ವೀರಣ್ಣ—

'ಹಂಗೆ ಕೂತಿರೋದು ಮರ್‍ವಾದೆ ಅಲ್ಲ, ಏಳು'

—ಎಂದ ಗೌರಮ್ಮನಿಗೆ. ಆ ಮಾತು ಕೇಳಿ ಗೌರಮ್ಮ ಎದ್ದು, ನಿಲ್ಲಲಾರದೆ ತೂಗಾಡುವ ಮೈಯನ್ನು ಕಂಭಕ್ಕೆ ಒರಗಿಸಿ 'ಮುಂದೇನು ಮಾಡಲಿ' ಎಂಬಂತೆ ಗಂಡನತ್ತ ನೋಡಿದಳು. ಆ ಮೂಕ ಪ್ರಶ್ನೆಯೊಂದಿಗೆ ಗಂಡನ ವಿಚಿತ್ರ ನಡತೆಯನ್ನು ಕಂಡು ಸಂದಿಗ್ಧತೆ, ಏನೋ ಒಂದು ಬಗೆಯ ಭಯವೂ ಅವಳ ಕಣ್ಣಲ್ಲಿ ಕವಿದಿತ್ತು.

'ಮೊಕಾ ಏನು ನೋಡ್ತಿ. ಒಳಗ್ಹೋಗಿ ಗಡಾನೆ ಮದುವೇಲಿ ಕೊಟ್ಟ

ಸೀರೆ ಉಟ್ಕೊಂಡುಬಾ'

—ಎಂದು ಗಡುಸಾದ ಧ್ವನಿಯಲ್ಲಿ ಅಪ್ಪಣೆ ಮಾಡಿದ ವೀರಣ್ಣ.

ಅವನ ಅಪ್ಪಣೆಯ ಅರ್ಥ ತಿಳಿಯದೆ. ಗೌರಮ್ಮ ಸುಮ್ಮನೆ ಅವನತ್ತ ನೋಡುತ್ತಾ ನಿಂತಳು.

'ಒಂದ್ಸಲ ಹೇಳಿದ್ದು ಕೇಳ್ಲಿಲ್ವಾ– ಹೂ ಹೋಗು'

—ಮತ್ತಷ್ಟು ಬಿರುಸಾಗಿ ಹೇಳಿದ ವೀರಣ್ಣ. ಚಾಟಿ ಏಟಿನಂತಿತ್ತು ಆ ಮಾತು.

ಅವಕ್ಕೆ ಇದಿರು ಹೇಳಲಾಗದೆ, ಗೌರಮ್ಮ ಆದದ್ದಾಗಲಿ ಎಂದುಕೊಂಡು ಒಳಗೆ ಹೋಗಿ, ವೀರಣ್ಣ ಅವಳ ಮದುವೆಯಲ್ಲಿ ಕೊಟ್ಟ ಧರ್ಮಾವರದ ಸೀರೆಯನ್ನು ಉಟ್ಟು ಬಂದಳು.

ಅವಳನ್ನು ನೋಡಿ, ಮದುವೆಯಲ್ಲಿ ಧಾರೆಯ ಹೊತ್ತಿನಲ್ಲಿ ನಾಚಿಕೆ ಯಿಂದ ತಲೆಬಾಗಿ ನಿಂತ ಗೌರಮ್ಮನ ನೆನಪು ಬಂದು ವೀರಣ್ಣನ ಹೃದಯವನ್ನು ಹಿಂಡಿದಂತಾಯಿತು.

'ಒಳ್ಳೆ... ಒಳ್ಳೆ ಲಕ್ಷ್ಮಿ ಇದ್ದಂಗಿದ್ದೆ... ಗೌರಿ ಅಲ್ವಾ... ಅಲ್ವಾ... ದಾಸಣ್ಣ'

—ಎಂದ ವೀರಣ್ಣ ಕಂಬನಿ ಜಿನುಗುತ್ತಿದ್ದ ಧ್ವನಿಯಲ್ಲಿ.

ಆ ಮಾತು ಕೇಳಿ ಗೌರಮ್ಮ ತೋಳಲ್ಲಿ ಮುಖ ಮುಚ್ಚಿಕೊಂಡಳು. ವೆಂಕಟ ದಾಸಪ್ಪನವರಿಗೆ ಭೂಮಿ ಬಾಯಿ ಬಿರಿದು ತನ್ನನ್ನು ನುಂಗಬಾರದೇ ಎನಿಸಿತು.

ಒಲ್ಲದ ಸವಾರನನ್ನು ಕೆಡವಲು ಯತ್ನಿಸಿ ಹಿಗ್ಗಾಮುಗ್ಗಾ ಎಳೆಯುತ್ತಾ ಕಣಿಯುವ ತುಂಟ ಕುದುರೆಯಂತೆ ಹೊಯ್ದಾಡುತ್ತಿದ್ದ ಮನಸ್ಸನ್ನು ಒಂದೆಡೆಗೆ ಎಳೆದು ನಿಲ್ಲಿಸಿ ವೀರಣ್ಣ—

'ಗೌರಿ– ಇಲ್ಲಿ ಬಾ'

—ಎಂದ.

ಗೌರಮ್ಮ ಅವನ ಮುಖವನ್ನು ನೋಡದೆಯೇ ಅವನತ್ತ ಸರಿದಳು.

'ದಾಸಣ್ಣ—ನೀನೂ ಇಲ್ಲಿ ಬಾ'

—ಎಂದ.

ವೆಂಕಟದಾಸಪ್ಪನವರೂ ಅವನ ಬಳಿ ಸರಿದರು.

ತನ್ನ ಹತ್ತಿರಾದ ಅವರಿಬ್ಬರನ್ನೂ ತನ್ನ ತೋಳಲ್ಲಿ ತಬ್ಬಿಕೊಂಡ ವೀರಣ್ಣ. ಏನೋ ಮಾತಾಡಬೇಕೆನ್ನಿಸಿತು. ಆದರೆ ಗಂಟಲು ಕಟ್ಟಿಹೋಗಿ ಕಣ್ಣಲ್ಲಿ ಕಂಬನಿ ಹರಿಯಲಾರಂಭಿಸಿತು. ಹಾಗೇ ಅಷ್ಟುಹೊತ್ತು ಅವರಿಬ್ಬರನ್ನೂ ತಬ್ಬಿ ಹಿಡಿದಿದ್ದ—

'ದಾಸಣ್ಣಾ... ಗೌರೀ ... ಇವತ್ತಿಂದ... ಇವತ್ತಿಂದ... ನೀವಿಬ್ರೂ... ನೀವಿಬ್ರೂ ...ಗಂಡ ಹೆಂಡ್ತಿ... ದಾಸಣ್ಣಾ... ಗೌರಿ...ನನ್ನ ಹೆಂಡ್ತಿ ಅಲ್ಲ; ಮಗಳು...ಗೌರೀ...ಗೌರೀ...'

—ಎಂದು ಮಾತು ಸೋತು, ಅವರಿಬ್ಬರನ್ನೂ ತೋಳಲ್ಲಿ ಬಿಗಿಯಾಗಿ ಬಿಗಿದುಕೊಂಡು, ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಆ ಮನೆಯ ಗೋಡೆ, ಛಾವಣಿಯನ್ನು ಹೊತ್ತ ಕಂಭಗಳು, ಮೂಲೆ ಮೂಲೆಯೂ ಅವನ ಅಳುವನ್ನು ಮಾರ್ದನಿಸಿ ಅಳುತ್ತಿದ್ದವು.

ಅವನ ಮಾತನ್ನು ಕೇಳಿದ ವೆಂಕಟದಾಸಪ್ಪನವರು, ಅವನ ತೋಳಿನಿಂದ ಬಲವಂತವಾಗಿ ಸಿಡಿದು—

'ಇದೇನು...ಇದೇನು ಮಾತು ನೀನು ಹೇಳ್ತಿರೋದು ವೀರಣ್ಣ?'

—ಎಂದು ಕೇಳಿದರು ದಿಗ್ಭ್ರಾಂತರಾಗಿ.

'ಅದೇ... ಅದೇ... ನಾನು ನಿಮಗೆ ಕೊಡೋ ಶಿಕ್ಷೆ. ನೀವಿಬ್ರೂ ನಾನೇಳ್ದಂಗೆ ಕೇಳ್ಬೇಕು. ಗೌರಿಗೆ ನಾನು ತಕ್ಕ ಗಂಡನಲ್ಲ. ನೀವಿಬ್ರೂ ಸುಕ್ವಾಗಿರಿ. ಗೌರಿ... ಗೌರಿ...ಗೌರಿ... ಇವತ್ತಿಂದ ನನ್ನ ಹೆಂಡ್ತಿ ಅಲ್ಲ ಮಗಳು...ದಾಸಣ್ಣ...ನನ್ನ ಗೌರಿ ಬೋ ಒಳ್ಳೇ ಹೆಣ್ಣು. ಇದಕ್ಕೆ ದುಕ್ಕ ಕೊಡ್ಬೇಡ......ಗೌರೀ......ಸುಕ್ವಾಗಿರು ಗೌರಿ......ನೀನು ಕಣಗೆ ನೀರು ಹಾಕಿದ್ರೆ ನಂಗೆ ನೋಡಾಕೆ ಆಗೋಲ್ಲ. ಇಷ್ಟು ದಿನ... ಇಷ್ಟು ದಿನ ನಿಂಗೆ ನಾನು ಬಾಳ ದುಕ್ಕಾ ಕೊಟ್ಟೆ...'

—ಎಂದ ವೀರಣ್ಣ ಅಳುವಿನ ನಡುವೆಯೇ ಮಾತಾಡುತ್ತಾ.

ಆ ಮಾತುಕೇಳಿ ಗೌರಮ್ಮ ಅವನ ತೋಳಿನೊಳಗಿಂದ ಜಾರಿ, ಅವನ ಪಾದಗಳ ಮೇಲೆ ಮುಖವಿಟ್ಟು, ಕಣ್ಣೀರಿನಿಂದ ಅವನ ಕಾಲು ತೊಳೆದಳು.

ವೆಂಕಟದಾಸಪ್ಪನವರು ಗರಬಡಿದಂತೆ ನಿಂತು ನೋಡಿದರು ವೀರಣ್ಣನನ್ನು.

'ವೀರಣ್ಣ—ನಿನ್ನ ಸ್ನೇಹಕ್ಕೆ ನಾನು ಯೋಗ್ಯನಲ್ಲ'

—ಎಂದರು ಅಷ್ಟು ಹೊತ್ತು ಬಿಟ್ಟುಕೊಂಡು.

'ಆ ಮಾತೆಲ್ಲ ಕೇಳಾಕೆ ನನಗೆ ಹೊತ್ತಿಲ್ಲ. ಈಗೇನು ಹೇಳು— ನಾನು ಹೇಳ್ದಂಗೆ ಕೇಳ್ತಿಯೋ ಇಲ್ವೋ'

—ಎಂದು ವೀರಣ್ಣ, ದೂರವಿದ್ದ ವೆಂಕಟದಾಸಪ್ಪನವರನ್ನು ಹತ್ತಿರಕ್ಕೆ ಎಳೆದುಕೊಂಡು, ನೆಲದ ಮೇಲಿದ್ದ ಗೌರಮ್ಮನನ್ನು ಎತ್ತಿ ನಿಲ್ಲಿಸಿ. ಅವರಿಬ್ಬರ ಕೈಯನ್ನೂ ಕೂಡಿಸಿ—

'ಇವತ್ನಿಂದ ನೀವಿಬ್ರೂ ಗಂಡ—ಹೆಡ್ತಿ. ಉರಿಯೋ ದೀಪಾನೇ ಈ ಮಾತಿಗೆ ಸಾಕ್ಷಿ'

ಎಂದು ಹೇಳಿದ.

ಕಂಬನಿ ದುಂಬಿದ ಕಣ್ಣುಗಳಿಂದ ವೆಂಕಟದಾಸಪ್ಪ— ಗೌರಮ್ಮ ಒಬ್ಬರ ನ್ನೊಬ್ಬರು ನೋಡಿದರು. ವೀರಣ್ಣನ ಕಣ್ಣೂ ಕಣ್ಣೀರಿನ ತೆರೆ ಕವಿದು ಮಂಜಾಗಿತ್ತು.

ಗೂಡಿನಲ್ಲಿದ್ದ ದೀಪ ಕುಡಿಯಾಡಿಸದೆ, ನಿಶ್ಚಲವಾಗಿ ಉರಿಯುತ್ತಲೇ ಇತ್ತು.

## ೨೦

ಅಂದು ವೀರಣ್ಣ ಆಡಿದ ಮಾತು. ಯಾವುದೋ ಗಳಿಗೆಯ ಔದಾರ್ಯದ ದೌರ್ಬಲ್ಯಕ್ಕೆ ಒಳಗಾಗಿಸಿದ ಮಾತಲ್ಲ. ಆ ಮಾತಿನಂತೆಯೇ ನಡೆದುಕೊಂಡ.

ವೆಂಕಟದಾಸಪ್ಪ—ಗೌರಮ್ಮ ದೀಪಸಾಕ್ಷಿಯಾಗಿ ಪಾಣಿಗ್ರಹಣ ಮಾಡಿ, ದಂಪತಿಗಳಾದರು.

ಕಾಲಕಳೆದಂತೆ, ಅವರ ನಡೆವಳಿಕೆಯಲ್ಲಿದ್ದ ಅಸಹಜತೆ ದೂರವಾಗಿ ಮೂವರೂ ಈ ಪರಿಸ್ಥಿತಿಗೆ ಹೊಂದಿಕೊಂಡು ಬಾಳಲಾರಂಭಿಸಿದರು.

ಆದರೆ ಮೊದಲು ಸಂಶಯ, ಬಳಿಕ ಪಿಸುಮಾತು, ಕಡೆಗೆ ಊರೆಲ್ಲ ಹರಡಿದ ಸುದ್ದಿಯಾದ ಈ ಘಟನೆಯನ್ನರಿತ ಹಳ್ಳಿಗರ ಕಣ್ಣುಗಳಿಗೆ ಅವರು ಕಂಡ ರೀತಿಯೆ ಬೇರೆ.

'ಅಂತೋರ ಮನೇಲಿ ಹುಟ್ಟಿ, ಹಿಂಗಾ ಮಾಡೋದು? ಕಬ್ಬಿನ ಹೊಟ್ಟೇಲಿ ಸೂಲಂಗಿ ಹುಟ್ಟಿದಂಗಾಯ್ತು. ಬ್ರಾಹ್ಮಣನಾಗಿ ಹುಟ್ಟಿ ಇಂಥಾ ಕೆಲಸಾನಾ ಮಾಡೋದು?'

—ಎಂದು ವೆಂಕಟದಾಸಪ್ಪನವರನ್ನು ಹಳಿದವು;

'ಒಳ್ಳೆ ಹಾರುವಯ್ಯನ್ನ ಕೆಡಿಸಿ ಬಿಟ್ಟಳು ಹಾದರಗಿತ್ತಿ. ಓ ಹೋ ಹೋ... ತನ್ನಂತಾ ಪತಿವ್ರತೇನೇ ಇನ್ನಿಲ್ಲಾಂತ ಮೆರೆದಳು. ಈಗ ನೋಡು—ನಾಯಿ ಬಾಳು'

—ಎಂದು ಗೌರಮ್ಮನನ್ನು ಜರಿದವು;

'ಅವನೆಂಥಾ ಸಾವದಾರ್. ಬೇರೆ ಗಂಡ್ಸಾಗಿದ್ರೆ ಇಬ್ಬರನ್ನೂ ಸಿಗಿದು ಊರ ಬಾಗಿಲಿಗೆ ತೋರಣ ಕಟ್ತಾ ಇದ್ದ. ಇವನಿಗೆ ವಯಸ್ಸು ಬಂದು ಹಾಳಾಯ್ತು. ಪಾಳೇಗಾರ್ರ ವಂಶದೋನಂತೆ— ಇವನ ಮೊಕಾಕ್ಕಿಷ್ಟು ಬೆಂಕಿ ಹಾಕ. ತಾನೇ ಹೆಂಡ್ತಿ ತಲೆಹಿಡೀತಾನೆ'

—ಎಂದು ವೀರಣ್ಣನನ್ನು ಹಿಯಾಳಿಸಿದುವು—

ಹಳ್ಳಿಗರ ಸಡಿಲವಾದ ನಾಲಗೆಗಳು.

ತಮ್ಮ ಬೆನ್ನ ಹಿಂದೆ ಕೇಳಿಬರುವ ಆ ಮಾತುಗಳನ್ನು ಕೇಳಿ, ಅವರು ಮೂವರೂ ಅಷ್ಟುದಿನ ನೊಂದರು; ಕೆಲವು ದಿನ ಕೆರಳಿದರು; ಕಡೆಗೆ

'ಸಣ್ಣ ಮನುಷ್ಯರ ಬಾಯಲ್ಲಿ ಸಣ್ಣ ಮಾತಲ್ಲದೆ ದೊಡ್ಡ ಮಾತು ಬಂದೀತೆ?' ಎಂದುಕೊಂಡು ಸುಮ್ಮನಾದರು.

ಅವರು ಸುಮ್ಮನಾದರೂ. ಜನ ಸುಮ್ಮನಾಗಲಿಲ್ಲ; ಅವರ ಮಾತು ನಿಲ್ಲಲಿಲ್ಲ. ಸಿಹಿನೀರು ತರಲು ಭಾವಿಯ ಬಳಿಹೋದ ಲಕ್ಷ್ಮೀದೇವಮ್ಮ ಈ ಮಾತು ಕೇಳಿ ಪಾತಾಳಕ್ಕಿಳಿದುಹೋದರು. ಅವರ ನೆತ್ತಿಯ ಮೇಲೆ ಮುಗಿಲು ಕಡಿದು ಬಿದ್ದ ಹಾಗಾಯಿತು.

'ತಮ್ಮ ಮಗ... ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗ ಹೀಗೆ ಮಾಡು ವುದೇ?'

—ಎಂದು ದಿಗ್ಭ್ರಾಂತರಾಗಿ ಚಿಂತಿಸಿದರು; ಅತ್ತರು; ಕಡೆಗೆ ಸಿಟ್ಟಾಗಿ ಗಂಡನಿಗೆ ಹೇಳಿದರು—

'ಇದೇನು ಹೊಲಸು. ಹಳ್ಳೀಲಿ ನಾನು ತಲೆಎತ್ತಿಕೊಂಡು ತಿರುಗೋ ಹಾಗಿಲ್ಲ. ನೀವು ಮಗನಿಗೆ ಬುದ್ಧಿ ಹೇಳಿ ಈ ಕೆಟ್ಟ ಚಾಳಿ ಬಿಡಸ್ತೀರೋ, ಇಲ್ಲವೇ ನಾನು ಭಾವೀಲಿ ಬಿದ್ದು ಪ್ರಾಣ ಬಿಡಲೋ'?

ಹೆಂಡತಿಯ ಕಿವಿಗೆ ಬಿದ್ದ ಮಾತು ನರಸಪ್ಪನವರ ಕಿವಿಗೂ ಬಿದ್ದಿತ್ತು. ಅವರ ಹೃದಯದಲ್ಲೂ ಅವಮಾನದ ಬೆಂಕಿ ಹೊತ್ತಿತ್ತು. 'ತಾಯೀ ಅವನಿ ಗೇಕೆ ಈ ಹಾಳು ಬುದ್ಧಿ ಕೊಟ್ಟೆ' ಎಂದು ವಿಹ್ವಲರಾಗಿ ದೇವಿಯನ್ನು ಬೇಡಿ ದರು. 'ಇವನು ಮಗನಲ್ಲ, ನನ್ನ ಹೊಟ್ಟೆಯಲ್ಲಿ ಹುಟ್ಟಿದ ಬೆಂಕಿ ತಾನು ಕೆಟ್ಟು, ವಂಶವನ್ನೇ ಪಾಪಕೂಪದಲ್ಲಿ ಅದ್ದಿ ಬಿಟ್ಟ' ಎಂದು ನೊಂದುಕೊಂಡರು ಕಡೆಗೆ ಒಂದು ದಿನ ಅವರ ಸಹನೆಯೂ ಸೋತು, ಹಾವಿನಂತೆ ಬಳುಕುವ ಹುಣಸೆಯ ಬರಲನ್ನು ಝಳಪಿಸುತ್ತಾ ಹೇಳಿದರು—

'ಇನ್ನೊಂದು ದಿನ ನೀನು ವೀರಣ್ಣನ ಮನೆಗೆ ಕಾಲಿಟ್ಟರೆ ನಿನ್ನ ಕಾಲು ಮುರಿದುಬಿಡ್ತೇನೆ, ಭಡವಾ.'

'ಕಾಲು ಮುರಿಯುವುದಲ್ಲ, ನನ್ನ ಕತ್ತು ಕತ್ತರಿಸಿದರೂ ಸರಿಯೆ. ಅಲ್ಲಿಗೆ ಹೋಗುವುದನ್ನು ಬಿಡುವುದಿಲ್ಲ'

—ಎಂದರು ವೆಂಕಟದಾಸಪ್ಪ.

'ಬಿಡೋದಿಲ್ಲ... ಬಿಡೋದಿಲ್ಲ... ಬಿಡೋದಿಲ್ಲ...... ನನಗೇ ಎದಿರು ವಾದಿಸ್ತೀಯ...'

—ಕ್ರೋಧವಲ್ಲಿ ಭೀಷಣವಾಗಿ ಹೇಳಿದರು ನರಸಪ್ಪ. ಅವರ ನಾಲಗೆಗಿಂತ ಕೈ ಮುಂದಾಗಿ, ಕೈಯಲ್ಲಿದ್ದ ಹುಣಸೆ ಬರಲು, ವೆಂಕಟದಾಸಪ್ಪನವರ ಬೆನ್ನ ಮೇಲೆ ಪಟ್ಟೆಪಟ್ಟೆಯಾಗಿ ಕೆಂಪು ಬರೆಯನ್ನು ಎಳೆಯಿತು. ಹುಣಿಸೆಯ ಬರಲು ಮುರಿಯುವವರೆಗೂ ನರಸಪ್ಪನವರು ಮಗನನ್ನು ಹೊಡೆದರು. ಆ ಏಟಿಗೆ ಅವನ ಬೆನ್ನು, ಎದೆ, ಪಕ್ಕೆಗಳ ಮೇಲೆ ಸಾಲುಸಾಲಾಗಿ ಬಾಸುಂಡೆಗಳು ಮೂಡಿ, ಒಂದೆರಡು ಕಡೆ ರಕ್ತ ಕಾಣಿಸಿಕೊಂಡಿತು.ಆ ವರೆ ವೆಂಕಟದಾಸಪ್ಪಾನವರು ತುಟಿಕಚ್ಚಿ ನಿಂತಂತೆಯೇ ನಿಂತಿದ್ದರು. ನಿಂತ ಕಾಲನ್ನೂ ಅಲುಗಿಸಲಿಲ್ಲ.

ಮಗ ಜೀವನದಲ್ಲಿ ಅಡ್ಡದಾರಿ ತುಳಿದನೆಂದು. ಲಕ್ಷ್ಮೀದೇವಮ್ಮನವರೇ ಗಂಡನಿಗೆ, ಮಗನನ್ನು ಶಿಕ್ಷಿಸಬೇಕು, ಬುದ್ಧಿ ಹೇಳಬೇಕು, ಸರಿಯಾದ ದಾರಿಗೆ ತರಬೇಕು ಎಂದು ಹೇಳಿದ್ದರು. ಆದರೆ ಶಿಕ್ಷೆಯನ್ನು ಸುಮ್ಮನೆ ಕುಳಿತು ನೋಡಲು, ಅವರ ಮಾತೃಹೃದಯ ಒಪ್ಪಲಿಲ್ಲ. 'ಸುಯ್-ರಪ್' ಎಂದು ಬೀಳುತ್ತಿದ್ದ ಬರಲಿನ ಪೆಟ್ಟು ತಮಗೇ ಬಿದ್ದಂತೆ ನೊಂದು ಹೇಳಿದರು—

'ಅಯ್ಯೋ —ಸಾಕು ಬಿಡೀಂದ್ರೆ—ಹೊಡೆಯೋದು ಅಂದ್ರೆ ಹೀಗಾ? ತೀರಾ ದನಕ್ಕೆ ಹೊಡೆದ ಹಾಗೆ ಹೊಡೀತಾರಾ?'

—ಎಂದರು.

'ನೀನು ಮಧ್ಯೆ ಬಾಯಿ ಹಾಕಬೇಡ. ಸುಮ್ಮಗಿರು'

—ಎಂದು ಹೆಂಡತಿಯತ್ತ ಅಬ್ಬರಿಸಿದರು ನರಸಪ್ಪ.

'ನಾನು ಸುಮ್ಮನಿದ್ದರೆ ಇವತ್ತು ಅವನ್ನ ಕೊಂದೇ ಹಾಕಿ ಬಿಡ್ತೀರ?'

—ಎಂದು ಲಕ್ಷ್ಮೀದೇವಮ್ಮ ಗಂಡನ ಕೈಯಲ್ಲಿದ್ದ ಬರಲನ್ನು ಕಿತ್ತುಕೊಳ್ಳಲು ಹೋದರು.

'ಸತ್ತರೆ ಸತ್ತೇ ಹೋಗಲಿ, ಇಂಥೋರು ಇರೋದಕ್ಕಿಂತ ಸಾಯೋದು ಲೇಸು'

—ಎಂದರು ನರಸಪ್ಪ. ಬರಲು ಕಸಿದುಕೊಳ್ಳಲು ಬಂದ ಹೆಂಡತಿಯನ್ನು ಒಂದು ಪಕ್ಕಕ್ಕೆ ತಳ್ಳುತ್ತಾ. ಆ ಕೊಸರಾಟದಲ್ಲಿ ಲಕ್ಷ್ಮೀದೇವಮ್ಮನವರಿಗೂ ಒಂದು ಏಟು ಬಿತ್ತು. ಅದುವರೆಗೂ, ತಂದೆ ಅಷ್ಟು ಹೊಡೆದರೂ ಬಾಯಿಬಿಡದಿದ್ದ ವೆಂಕಟದಾಸಪ್ಪನವರು ತಾಯಿಗೂ ಏಟುಬಿದ್ದುದನ್ನು ಕಂಡು, ಛಳಛಿ ಬಿರುಸಾದ ಧ್ವನಿಯಲ್ಲಿ—

'ಅಪ್ಪಾ ನೀನು ಹೊರಟು ಹೋಗು. ಅದೆಷ್ಟು ಹೊಡೀತಾನೋ ಹೊಡೆಯಲಿ'

—ಎಂದರು.

'ಆದ್ಯಾಕಪ್ಪಾ ಹೊಡಿಸಿಕೊಳ್ಳಬೇಕು. ಆ ಹಾಳುಮುಂಡೆ ಸವಾಸ ಬಿಟ್ಟು ಬಿಡು ದಾಸಣ್ಣಾ. ನಮ್ಮಂಥೋರಿಗಲ್ಲ ಅದು'.

—ಮಗನನ್ನು ಬೇಡಿ ಕೇಳಿದರು ಲಕ್ಷ್ಮೀದೇವಮ್ಮ. ಆ ಮಾತು ಕೇಳಿ ವೆಂಕಟದಾಸಪ್ಪ—

'ಅಮ್ಮಾನಿ ನಗೂ ಹೊಡೆಯಬೇಕೆಂದು ಇಚ್ಛೆಇದ್ದರೆ ನೀನೂ ಒಂದು ಬರಲು ತೆಗೆದುಕೊ. ನನ್ನನ್ನು ಹೊಡಿ. ಬೈಯಿ—ಬೇಕೆಂದರೆ ಮನೆಬಿಟ್ಟು ಹೋಗೆಂದರೂ ಸರಿಯೆ. ಆದರೆ ಅವಳನ್ನು ಬೈಯ್ಯಬೇಡ.'

ಗೌರಮ್ಮನನ್ನು ಬೈಯ್ಯ ಬೇಡ ಎಂದು ಹೇಳಿದುದನ್ನು ಕೇಳಿ ತಟಕ್ಕನೆ ಲಕ್ಷ್ಮೀದೇವಮ್ಮನವರ ಎದೆಯಲ್ಲಿ ಕ್ರೋಧಕಿರಳಿ—

'ಬೈಯ್ಯ ಬೇಡವೇ... ಬೈಯ್ಯ ಬೇಡವೇ ಅವಳನ್ನು. ಅವಳು ಎದುರಿಗೆ ಸಿಕ್ಕಲಿ, ಅವಳ ತಲೆಮೇಲೆ ಬೂದಿ ಸುರಿದು. ಸಗಣನೀರು ಹೊಯ್ದು, ಮನೆ ಮುರುಕ ವಿದ್ಯಾನ ಅವಳ ಹೆತ್ತವರು ಹೇಳಿಕೊಟ್ಟರೇನೂ ಕೇಳುತ್ತೇನೆ. ನಿನಗೇನೊ ಮೆಚ್ಚುಮದ್ದು ಮಾಡಿದಾಳೆ ಆ ಹೀನ ಮುಂಡೆ! ಅವಳ ಮನೆ ಹಾಳಾಗಿ ಉರಿದು ಹೋಗ.'

—ಎಂದು ಶಾಪಗಳ ಸರವನ್ನೇ ಏರಿಸಿದರು ಗೌರಮ್ಮನ ಹೆಸರಿಗೆ.

ಆಕೆ ಆಡಿದುದೆಲ್ಲವನ್ನೂ ಮರುಮಾತಾಡದೆ ನಿಂತು ಕೇಳಿದ ವೆಂಕಟ ದಾಸಪ್ಪ, ಮಂಜಿನಂತೆ ಕೊರೆಯುವ ಧ್ವನಿಯಲ್ಲಿ ಹೇಳಿದರು—

'ಅಮ್ಮಾ—ಇವತ್ತಿಷ್ಟಾಯಿತು. ಇನ್ನೊಂದು ದಿನ ಈ ಮನೆಯಲ್ಲಿ ನಾನು ಇರಬೇಕು ಎಂಬ ಆಸೆ ಇದ್ದರೆ, ಅವಳ ಹೆಸರು ಎತ್ತಬೇಡ. ಆ ಸಂಬಂಧದಲ್ಲಿ ಅಡ್ಡಿ ಬರಲೂ ಬೇಡ. ಅಣ್ಣ—ನೀನೂ ಬೇಕಾದರೆ ಈ ದಿನ ನನ್ನನ್ನು ಕೊಂದುಬಿಡು. ನಾನು ತುಟಿಪಿಟಕ್ಕೆನ್ನುವುದಿಲ್ಲ. ಆದರೆ ಅವಳ ಸುದ್ದಿ ಮಾತ್ರ ಎತ್ತಬೇಡಿ'

—ಎಂದು ಹೇಳಿ, ಮಾತಿನ ಮಧ್ಯೆ ಕೆಳಗೆ ಬಿದ್ದಿದ್ದ ತುಂಡಾದ ಬರಲನ್ನು ತಂದೆಯ ಕೈಗೆ ಕೊಟ್ಟು ತಲೆಬಗ್ಗಿಸಿ ನಿಂತರು.

ಅವರ ತಾಯಿತಂದೆಗಳಿಬ್ಬರೂ ಬಿಟ್ಟ ಕಣ್ಣು ಬಿಟ್ಟಹಾಗೆ ಬಿಟ್ಟು ಮಗನನ್ನು ನೋಡಿದರು.

ಲಕ್ಷ್ಮೀದೇವಮ್ಮ—

'ಸರೀಕರೆದುರಿಗೆ ಮೋಕ ಎತ್ತದ ಹಾಗೆ ಮಾಡಿಬಿಟ್ಟೆಯಲ್ಲೋ'

—ಎಂದು ಮುಖ ಮುಚ್ಚಿಕೊಂಡು ಅಳಲಾರಂಭಿಸಿದರು.

ಕೈಯಲ್ಲಿ ಬರಲು ಹಿಡಿದು ನಿಂತ ನರಸಪ್ಪನವರು ಹಾಗೇನಿಂತಿದ್ದರು—ಕಡೆದ ವಿಗ್ರಹದಂತೆ. ಅಷ್ಟು ಹೊತ್ತು ಸುಮ್ಮನಿದ್ದು ಬಳಿಕ ಕ್ಷೀಣವಾದ, ನೀರಸವಾದ ಸ್ವರದಲ್ಲಿ ಹೇಳಿದರು:

'ದಾಸೂ—ನೀನು ದೊಡ್ಡವನಾದೆ. ವಯಸ್ಸಿಗೆ ಬಂದ ಮಗನನ್ನು ಮಿತ್ರನಂತೆ ಕಾಣಬೇಕೆಂದು ಶಾಸ್ತ್ರ ವಚನ. ಆಯಿತು—ಇನ್ನು ನಿನ್ನ ದಾರಿ ನಿನಗೆ'

—ಎಂದು ಬರಲನ್ನು ನೆಲಕ್ಕೆ ಬಿಸುಟು ಹೊರಟುಹೋದರು.

ತಂದೆ ಮಕ್ಕಳು ಮಾತನಾಡಿದುದಕ್ಕೆ ಅದೇ ಕೊನೆಯಾಯಿತು. ತಂದೆ ಮಗನೊಂದಿಗೆ ಮಾತನಾಡಲಿಲ್ಲ. ತಂದೆ ತನ್ನೊಂದಿಗೆ ಮಾತನಾಡಬೇಕೆಂದು ಮಗ ಪ್ರಯತ್ನಿಸಲೂ ಇಲ್ಲ.

ತಮ್ಮ ಪಾಲಿಗೆ ಬಂದ ಸಮಸ್ಯೆಯನ್ನು ನರಸಪ್ಪನವರು ಈ ರೀತಿ ಬಗೆಹರಿಸಿಕೊಂಡರು. ಆದರೆ ಲಕ್ಷ್ಮೀದೇವಮ್ಮನವರ ಚಿಂತೆ ಆ ದಿನಕ್ಕೆ ಬಗೆಹರಿಯಲಿಲ್ಲ. ಯಾರ ಮುಂದೂ ಆಡಿಕೊಳ್ಳಲಾಗದ ಕೊರಗು ದಿನದಿನಕ್ಕೆ ಅವರನ್ನು ಒಳಗೆ ಕೊರೆದು ತಿನ್ನತೊಡಗಿತು.

ಅದೂ ಒಂದು ಬಗೆಯ ಚಿಂತೆಯಲ್ಲ. ಆ ಒಂದು ಚಿಂತೆ ಹತ್ತಾರು ಚಿಂತೆಗಳಾಗಿ ಕಾಡತೊಡಗಿತು ಅವರನ್ನು.

ಒಂದು ಕಡೆ ಮಗ ಕೆಟ್ಟದಾರಿಗೆ ಬಿದ್ದನೆಂಬ ಚಿಂತೆ, ಇನ್ನೊಂದು ಕಡೆ ಮಾತು ಬಿಟ್ಟ ಗಂಡ—ಮಕ್ಕಳನ್ನು ನೋಡುವ ಕೊರಗು. ಇದರೊಂದಿಗೆ ಮನೆ ಬಿಟ್ಟು ಹೊರಗೆ ಹೋದರೆ, ಎಲ್ಲಿ ಜನ ನಗುತ್ತಾರೋ ಎಂಬ ಭೀತಿಯಿಂದ ಮನೆಬಿಟ್ಟು ಹೊರಗೆ ಹೋಗುವುದನ್ನೇ ಬಿಟ್ಟುಬಿಟ್ಟರು ಲಕ್ಷ್ಮೀದೇವಮ್ಮ.

'ಹಕ್ಕಿಗೆ ರೆಕ್ಕೆ ಬಲಿಯಿತು. ಅದಕ್ಕೆ ಮನಸ್ಸು ಬಂದ ಕಡೆ ಹಾರಾಡುತ್ತದೆ. ಹೊಗಲಿ ಬಿಡು. ಯಾರ ಅದೃಷ್ಟಕ್ಕೆ ಯಾರು ಹೊಣೆಗಾರರು. ಅವನ ಹಣೆಯಲ್ಲಿ ಬರೆದದ್ದು ಅವನಿಗಾಗುತ್ತದೆ. ನೀನೇಕೆ ಚಿಂತೆ ಹಚ್ಚಿ

ಕೊಂಡು ಕೊರಗುತ್ತೀಯೆ. ಇಷ್ಟೊಂದು ದಿನ ರಾಮ-ಕೃಷ್ಣ ಅಂದುಕೊಂಡು ಹಾಯಾಗಿದ್ದುಬಿಡು'

—ಎಂದು, ಬಗೆಹರಿಯದ ಚಿಂತೆಯಿಂದ ನವೆಯುತ್ತಿದ್ದ ಹೆಂಡತಿಗೆ ನರಸಪ್ಪನವರು ಸಮಾಧಾನ ಹೇಳಿದರೂ ಆ ಮಾತು ಆಕೆಗೆ ಪಥ್ಯವಾಗಲಿಲ್ಲ.

'ನಿಮ್ಮ ದಾರಿ ನೀವು ನೋಡಿಕೊಂಡಿರಿ, ಅವನ ದಾರಿ ಅವನು ನೋಡಿಕೊಂಡ. ಇಬ್ಬರನ್ನೂ ಕಂಡು ಕೊರಗುವುದಕ್ಕೇ ಭಗವಂತ ನನ್ನನ್ನು ಉಳಿಸಿದ್ದಾನೆ. ನನ್ನನ್ನು ಅವನು ತನ್ನ ಪಾದಾರವಿಂದದಲ್ಲಿ ಸೇರಿಸಿಕೊಂಡಾಗಲೇ ನನಗಿನ್ನು ನಿಶ್ಚಿಂತೆ.'

—ಎಂದು ಉಸಿರು ಎಳೆದರು ಲಕ್ಷ್ಮೀದೇವಮ್ಮ.

'ನೀನು ಎಂದ್ಥ ಹುಚ್ಚಿ. ಈ ಸಂಸಾರದಲ್ಲಿದ್ದೂ ಸಂಸಾರಲೇಪ ಹಚ್ಚಿಕೊಳ್ಳಬಾರದು ಎನ್ನುತ್ತಾರೆ ತಿಳಿದವರು. ಹಾಗಿರುವಾಗ, ಈ ಸಂಸಾರ ತಾನಾಗಿಯೇ ಬಿಟ್ಟು ಹೋಗುತ್ತಿರುವಾಗ "ಹಾಯಾಯಿತು" ಎಂತ ಸಂತೋಷಪಡದೆ, ಅದನ್ನೇ ಕೊರಗಾಗಿ ಹಚ್ಚಿಕೊಂಡು ನವೆಯುತ್ತೀಯಲ್ಲಾ. ನಿನ್ನ ಭ್ರಮೆಗೆ ಏನು ಹೇಳಲಿ ಹೇಳು.'

'ಏನಾದರೂ ಹೇಳಿ. ನಾನು ಹೆಣ್ಣು ಹೆಂಗಸು. ಅದರಲ್ಲೂ ಹಳ್ಳಿ ಮುಕ್ಕ. ನನಗೆ ನಿಮ್ಮ ವೇದಾಂತವೆಲ್ಲಾ ತಿಳಿಯುವುದಿಲ್ಲ. ಗಂಡ, ಮಕ್ಕಳು ಅನ್ಯೋನ್ಯವಾಗಿದ್ದರೆ ನನಗೆ ಸಂತೋಷ. ಅದೇ ಸ್ವರ್ಗ. ಅದೇ ಹೋದ ಮೇಲೆ ಇನ್ನೇತರ ಯೋಚನೆ ಮಾಡಲಿ. ಹೋಗಲಿ ಬಿಡಿ– ನನ್ನ ಬಾಳೆಲ್ಲ ಇಷ್ಟೇ ಆಯಿತು. ನಾನು ಹುಟ್ಟಿದ್ದೇ ಚಿಂತೆಪಡಲಿಕ್ಕೆ. ನನಗೂ ಸಂಸಾರಕ್ಕೂ ಅಷ್ಟೇ ಋಣಾನುಬಂಧ.'

—ಎಂದು ಲಕ್ಷ್ಮೀದೇವಮ್ಮ ಮಾತು ಮುಗಿಸಿದರು.

ದಾರುಣವಾದ ಚಿಂತೆಯಲ್ಲಿ ಬೆಂಕಿಗೆ ಹಾಕಿದ ಹೂವಿನಂತೆ ದಿನದಿನಕ್ಕೆ ಬಾಡುತ್ತಿದ್ದ ಹೆಂಡತಿಯನ್ನು ನೋಡಿ ನರಸಪ್ಪನವರು ಯಾರಿಗೂ ಕಾಣದಂತೆ ಕಂಬನಿಯಿಟ್ಟರು. 'ನೀನು ಕೆಟ್ಟದಾರಿ ಬಿಡದಿದ್ದರೆ ನಿನ್ನ ತಾಯಿ ಸಾಯುತ್ತಾಳೆ' ಎಂದು ಮಗನಿಗೆ ಎಚ್ಚರಿಕೆ ಹೇಳಬೇಕೆಂದು ಎನಿಸಿತು. ಆದರೆ ಆ ಭಾವನೆ ಮೂಡುತ್ತಿದ್ದ ಹಾಗೇ ತುಳಿದುಬಿಟ್ಟರು.

ತಾಯಿಯ ಕೊರಗನ್ನು ಕಂಡು ವೆಂಕಟದಾಸಪ್ಪನವರ ಹೃದಯಕ್ಕೂ

ಬೆಂಕಿ ಹೊತ್ತಿಸಿದಂತಾಯಿತು. ಒಂದೆರಡು ಬಾರಿ ತಾಯಿಗೆ ಸಮಾಧಾನ ಹೇಳಲು ಯತ್ನಿಸಿದರು. ಆದರೆ ಆಕೆ ಅವರ ಮಾತುಗಳಿಂದ ಸಮಾಧಾನ ತಂದುಕೊಳ್ಳದೆ—

'ನನ್ನ ಚಿಂತೆ ನಿನಗೇಕಪ್ಪ— ನಿನ್ನ ಸುಖದ ದಾರಿ ನೀನು ನೋಡಿ ಕೊಂಡೆ. ಎಲ್ಲೋ—ಹೇಗೋ—ಹಾಯಾಗಿರು'

—ಎಂದು ವೆಂಕಟದಾಸಪ್ಪನವರ ಮಾತನ್ನು ಅಲ್ಲಿಗೇ ತುಂಡುಮಾಡಿ ಬಿಟ್ಟರು.

ಅವರ ದೇಹದೊಳಗೆ, ಹುತ್ತದೊಳಗಿನ ಸರ್ಪದಂತೆ ಮನೆಮಾಡಿದ ಚಿಂತೆ, ಅವರ ಮೈಯನ್ನು ಪೂರಾ ಟೊಳ್ಳುಮಾಡಿ ದಿನದಿನಕ್ಕೆ ನಿಶ್ಯಕ್ತರಾಗಿ ಕಡೆಗೊಂದು ದಿನ ಮನೆಗೆಲಸವನ್ನೂ ಮಾಡಲಾಗದೆ ಹಾಸಿಗೆ ಹಿಡಿದು ಮಲಗಿದರು. ಅಡಿಗೆ ಕೆಲಸವನ್ನೂ ನರಸಪ್ಪನವರೇ ನೋಡಿಕೊಳ್ಳಬೇಕಾಯಿತು

ಗಂಡ ಪಡುತ್ತಿದ್ದ ಕಷ್ಟವನ್ನು ನೋಡಲಾರದೆ ಲಕ್ಷ್ಮೀದೇವಮ್ಮನವರೇ—

'ಒಂದೆರಡು ದಿನದ ಮಟ್ಟಿಗೆ ರಾಜೇಶ್ವರಿಯನ್ನಾದರೂ ಕರೆಸಿ. ನೀವು ಕೈ ಸುಟ್ಟುಕೊಂಡು ಅವಸ್ಥೆ ಪಡುವುದನ್ನು ನೋಡಲಾರೆ,

—ಎಂದು ಮಗಳನ್ನು ಕರೆಸಲು ಸಲಹೆ ಮಾಡಿದರು.

ಮಗಳು ಬರುವುದರಿಂದ ತಮ್ಮ ಕಷ್ಟ ನಿವಾರಣೆಯಾಗದಿದ್ದರೆ ಹೋಗಲಿ, ಮಗಳು ಮನೆಗೆ ಬಂದ ಉತ್ಸಾಹದಲ್ಲಾದರೂ ಹೆಂಡತಿ ಎದ್ದು ಓಡಾಡುವ ಹಾಗಾಗಬಹುದು ಎಂಬ ಬಯಕೆಯಿಂದ, ಪರಶುರಾಮಪುರದಲ್ಲಿದ್ದ ಮಗಳಿಗೆ ಬರಲು ಕಾಗದ ಬರೆದು, ಗಾಡಿಯನ್ನು ಕಳಿಸಿದರು.

ಗಾಡಿಯೊಂದಿಗೆ ಆಳು ತಂದ ಸುದ್ದಿಯನ್ನು ಕೇಳಿ ರಾಜೇಶ್ವರಿ ಪಾತಾಳಕ್ಕಿಳಿದುಬಿಟ್ಟಳು. 'ಭಗವಂತಾ ಇದೇನು ಆಪತ್ತು ತಂದೆ. ಅತ್ತೇ... ಇನ್ನೇನು ಗತಿ' ಎಂದು ಅಳಲಿಕ್ಕೇ ಆರಂಭಿಸಿದಳು.

'ಅಯ್ಯೋ ಹುಚ್ಚಿ—ಅವಳಿಗೆ ಮೈಯ್ಯಲ್ಲಿ ಕೊಂಚ ಅಸ್ವಸ್ಥವಾಗಿದೆ ಎಂದು ಕೇಳಿದರೇ ಇಷ್ಟು ಎದೆಗೆಡಬೇಕೇ? ಬಿಡು, ಮುತ್ತೈದೆ ಕಣ್ಣೀರು ಹಾಕಬಾರದು. ನಿಮ್ಮಮ್ಮನಿಗೆ ನಾನು ಎಷ್ಟೋ ಹೇಳಿದೆ. ಕೇಳಲಿಲ್ಲ. ಮನೆಯಲ್ಲಿ ಒಂಟಿ ಹೆಂಗಸು. ಎಲ್ಲದಕ್ಕೂ ಅವಳೊಬ್ಬಳೇ ದುಡಿಯಬೇಕು. ಅದೂ ಮನುಷ್ಯರ ಮೈಯ್ಯೇ ಅಲ್ಲವೇ? ಎಷ್ಟೂಂತೂ ದುಡಿಯೋಕೆ ಸಾಧ್ಯ. ಮೈಯ್ಯಲ್ಲದೆ ಯಂತ್ರವಾಗಿದ್ದರೂ ಸವೆದುಹೋಗುತ್ತಿತ್ತು. ಆಕೆಗೂ ಸ್ವಲ್ಪ ಆಲಸಿಕೆಯಾಗಿರಬಹುದು.'

—ಎಂದು ರಾಜೇಶ್ವರಿಯ ಅತ್ತೆ ಭಾಗಮ್ಮ ಸೊಸೆಗೆ ಸಮಾಧಾನ ಮಾಡಿ—

'ನೀನೇನೂ ಗಾಬರಿಯಾಗ ಬೇಡ. ನಾನು ಚಂದ್ರಶೇಖರನಿಗೆ ಹೇಳುತ್ತೇನೆ. ನೀನು ಹೋಗಿ ನಾಲ್ಕು ದಿನ ತಾಯಿಯ ಸೇವೆ ಮಾಡಿಬಾ.'

—ಎಂದರು.

'ನಾನಲ್ಲಿಗೆ ಹೋದರೆ ಮನೆಯಲ್ಲಿ ನೀವು ಒಬ್ಬರೇ ಆಗುತ್ತೀರಲ್ಲಾ ಅತ್ತೇ...'

'ಅದಕ್ಕೇನು ಮಾಡಲಿಕ್ಕಾಗುತ್ತೆ. ಅನುವು ಆಪತ್ತು ಅಂದರೆ ನಮ್ಮ ಕಷ್ಟ ಸುಖಾನೇ ದೊಡ್ಡದು ಮಾಡಿಕೊಂಡು ಕೂತರೆ ಹೇಗೆ? ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂದು ಗಾದೇನೇ ಇದೆ. ಅದನ್ನು ನಿಜಮಾಡಬೇಡ. ಹೋಗಿ ಬಾ'

'ಅವರು...'

'ನಿನ್ನ ಆ "ಅವರಿಗೆ" ನಾನು ಹೇಳುತ್ತೇನೆ ಎಂದು ಹೇಳಲಿಲ್ಲವೇ? ಅವನೂ ಬೇಡಾ ಅನ್ನೋಲ್ಲ.'

'ಹಾಗಲ್ಲ ಅತ್ತೆ. ನಾನು ಇಲ್ಲದೆ ಹೊದರೆ...'

'ಅವನಿಗೆ ಉಪಚಾರ ಕಷ್ಟವಾಗುತ್ತೆ ಅಂತ ಯೋಚನೆಯೇ? ಸಾಕು ಬಿಡು. ನೀನೇ ಅವನನ್ನು ಹಡೆದು, ಸಾಕಿದ ಹಾಗಾಡಬೇಡ, ಹೆಂಡತಿ ಮನೆಗೆ ಬಂದ ಮಾತ್ರಕ್ಕೆ ತಾಯಿ ಮಾಡಿದ ಊಟ ವಿಷವೇನೂ ಆಗೋಲ್ಲ. ನೀನು ಹೋಗಿ ಬಟ್ಟೆಬರೆ ಜೋಡಿಸಿಕೊ. ಅವನು ಬರುವ ಹೊತ್ತಿಗೆ, ನಾನೂ ಏನಾದರೂ ಅಷ್ಟು ತಿಂಡಿತೀರ್ಥ ಮಾಡಿರುತ್ತೇನೆ. ರಾತ್ರಿ ಊಟ ಮಾಡಿಕೊಂಡು ತಂಪು ಹೊತ್ತಿನಲ್ಲಿ ಪ್ರಯಾಣ ಮಾಡಿ.'

'ನಾನು ಒಬ್ಬಳೇ ಹೋಗಲೇ... ಅತ್ತೆ...'

'ಅಹಹ... ಏನು ಬಿನ್ನಾಣ ಕಲಿತಿದ್ದೀಯೆ. ಗಂಡನೂ ಜೊತೆಗೆ ಬರಲಿ ಅಂತ ಅನ್ನು. ಅದು ಬಿಟ್ಟು ಇಷ್ಟು ದ್ರಾವಿಡ ಪ್ರಾಣಾಯಾಮವೇಕೆ?'

'ಹಾಗಲ್ಲಾ ಅತ್ತೆ. ಅವರಿಗೆ ... ರಜಾ... '

'ಹೋಗು... ಹೋಗು... ಸ್ಕೂಲು ನಿನ್ನ ಗಂಡನ ತಲೇಮೇಲೇಕೂತಿಲ್ಲ. ಒಂದು ದಿನ ಬಂದು, ನಿನ್ನ ಬಿಟ್ಟುಬರುತ್ತಾನೆ. ಅಷ್ಟರಲ್ಲಿ ಅವನ ಸ್ಕೂಲಂ ಮುಳುಗಿ ಹೋದರೆ ಹಾಳಾಗಿ ಹೋಗಲಿ. ನಾನೇ ಎಳ್ಳು ನೀರು ಬಿಟ್ಟು ಬಿಡುತ್ತೇನೆ'

—ಎಂದು ಭಾಗಮ್ಮ ರಾಜೇಶ್ವರಿಗೆ ಬಟ್ಟೆಬರೆ ಜೋಡಿಸಿಕೊಳ್ಳಲಂ ಅವಸರ ಮಾಡಿ, ಬೀಗಿತ್ತಿಯ ಊರಿಗೆ ಕಳಿಸಲು, ತಿಂಡಿ ಮಾಡಲು ಒಲೆ ಹಚ್ಚಿಕೊಂಡು ಕುಳಿತರು.

ಚಂದ್ರಶೇಖರ ಸ್ಕೂಲಿನಿಂದ ಬರುತ್ತಿದ್ದ ಹಾಗೇ ತಾಯಿಯಿಂದ ದೇವೀಕೆರೆಯ ಸುದ್ದಿಯನ್ನು ಕೇಳಿ—

'ಅವಳು ಹೋಗಿ ಬರಲಿ'

—ಎಂದ.

'ಅವಳೊಬ್ಬಳೇ ಅಲ್ಲ, ನೀನೂ ಒಂದು ದಿನದ ಮಟ್ಟಿಗೆ ಹೋಗಿಬಾ'

'ಆದರೆ ರಜಾ ಇಲ್ಲಲ್ಲಮ್ಮ.'

'ರಜಾ ಇಲ್ಲದೆ ಹೋದರೆ ಸಜಾ ಆಯಿತು. ಅತ್ತೆಗೆ ಖಾಯಿಲೆ ಅಂತ ಕೇಳಿಯೂ ಹೋಗದಿದ್ದರೆ ಲೋಕ ಏನನ್ನಲಿಕ್ಕಿಲ್ಲ, ವ್ಯವಹಾರಜ್ಞಾನ ಎಳ್ಳು ಕಾಳುಂ ಮುಳ್ಳು ಮೊನೆಯಷ್ಟಿಲ್ಲ. ಇನ್ನು ಹುಡುಗರಿಗೆ ಪಾಠ ಬೇರೆ ಹೇಳಿ ಕೊಡುತ್ತಾ ನಂತೆ ಇವನು. ನಿನ್ನ ಕೈಲಿ ಕಲಿತೋರು ಉದ್ಧಾರ ಆದ ಹಾಗೇ ಆಯಿತು'

—ಎಂದು ಸೊಸೆಯೊಂದಿಗೆ ಮಗನನ್ನೂ ಹೊರಡಿಸಿದರು ಭಾಗಮ್ಮ.

ರಾತ್ರಿಯ ಊಟ ಮುಗಿದು ಗಾಡಿ ಹೊರಡುವ ಹೊತ್ತಾಯಿತು. ಭಾಗಮ್ಮ ಎಲ್ಲಾ ಸಾಮಾನು ತಗೊಂಡೆಯಾ' ಎಂದು ವಿಚಾರಿಸಿ, ಅದು– ಇದು ಎಂದು ಅವಸರದಲ್ಲಿ ಮರೆತಿರಬಹುದಾದ ಸಾಮಾನುಗಳನ್ನು ನೆನಪು ಮಾಡಿ, ಹೊರಡಲು ಸಿದ್ಧವಾಗಿ ನಮಸ್ಕರಿಸಿದ ಸೊಸೆಗೆ ಆಶೀರ್ವಾದ ಮಾಡಿ—

'ನೋಡು ಎರಡು ದಿನ ತಡವಾದರೂ ಚಿಂತೆಯಿಲ್ಲ. ಲಕ್ಷ್ಮೀದೇವಿ ಎದ್ದು ಓಡಾಡುವ ಹಾಗಾಗೋವರೆಗೂ ಇದ್ದು ಬಾ. ಹೋಗೋಕೂ ಅವಸರ, ಬರೋಕೂ ಅವಸರ ಮಾಡಿಕೊಳ್ಳಬೇಡ. ಹಾಗೇ ನಾನು ಹೇಳ್ದೆ ಅಂತ ಲಕ್ಷ್ಮೀದೇವಿಗೆ ಒಂದು ಮಾತು ಹೇಳು..."

—ಎಂದರು.

'ಏನು ಅತ್ತೆ'

'ನಿಮ್ಮಣ್ಣನಿಗೂ ಮದುವೆ ವಯಸ್ಸಾಯ್ತು. ಬೇಗ ಎಲ್ಲಾದರೂ ಒಂದು ಅಣೆಯಾದ ಹೆಣ್ಣು ನೋಡಿ ಮನೆಗೆ ಸೊಸೇನ ತಂದುಕೊಳ್ಳಲಿ. ಇನ್ನೆಷ್ಟು ದಿನ ಹೀಗೆ ದುಡಿದು ಸವೀತಾಳೆ ಅವಳು. ನಾನೇ ಹೇಳಬೇಕೂಂತ ಇದ್ದೆ. ನಾನು ಹೇಳೋದಕ್ಕಿಂತ, ಮಗಳು, ನೀನೇ ಹೇಳೋದು ಚೆನ್ನ. ಮರೆತು ಬಿಡಬೇಡ. ಹೇಳಿ ಬಾ'

—ಎಂದು ಸೊಸೆಗೆ ಹೇಳಿ, ಮಗನಿಗೆ–

'ಚಂದ್ರೂ—ರಾತ್ರಿ ಪ್ರಯಾಣ, ಹುಷಾರಾಗಿರು, ತಂಪಾಗಿದೆ ಅಂತ ಮಲಗಿ ನಿದ್ರೆ ಹೊಡೀಬೇಡ. ಅವಳು ಒಬ್ಬಳೇ. ಹೆದರಿಯಾಳು'

—ಎಂದು ಚಂದ್ರಶೇಖರನನ್ನು ಎಚ್ಚರಿಸಿದರು.

'ಬಿಡಮ್ಮ, ನನ್ನ ಹೆಂಡತೀನ ನೋಡಿಕೊಳ್ಳೋದು ನನಗೆ ಹೇಳಿ ಕೊಡಬೇಕೇ?'

—ಎಂದ ಚಂದ್ರಶೇಖರ ನಗುತ್ತಾ.

'ಹೋಗೋ ಹೋಗೋ, ಅವಳು ಬರೇ ನಿನ್ನ ಹೆಂಡತಿ ಆಗಿದ್ರೆ ಏನಾದ್ರೂ ಮಾಡಿಕೋ ಅನ್ತಾಯಿದ್ದೆ. ನಿನ್ನ ಹೆಂಡತಿಗಿಂತ ಹೆಚ್ಚಾಗಿ ಅವಳು ನನ್ನ ಸೊಸೆ. ಹಾಗೇ ಹೋದೋನು–ಹೋದ ಪುಟ್ಟ ಬಂದ ಪುಟ್ಟ ಅಂದ ಹಾಗೆ ಬರಬೇಡ, ಏನು ಬಾಯಿಲೆ, ಏಕೆ, ಏನು ಅಂತ ಎಲ್ಲಾ ವಿಚಾರಿಸಿ

ಕೊಂಡು ಬಾ. ಬೇಕಾದರೆ ಇಲ್ಲೀವ ಅಣ್ಣಯ್ಯ ಪಂಡಿತರ ಹತ್ತಿರ ಔಷಧ ಮಾಡಿಸಿ ಕಳುಹಿಸಬಹುದು.'

'ನನಗೇನೂ ತಿಳಿಯೋದೇ ಇಲ್ವೆ? ಎಲ್ಲಾ ಮಾತೂ ನೀನೇ ಹೇಳಿ ಕೊಡಬೇಕೇ?'

'ಹೂ. ಅವರು ಹೇಳಿಕೊಟ್ಟ ಹೊತ್ತಿಗೆ ನಿಮಗೆ ಅಷ್ಟು ಮಾತಾಡಲು ಬಂದಿರೋದು'

—ಎಂದಳು ರಾಜೇಶ್ವರಿ. ಪಿಸುಧ್ವನಿಯಲ್ಲಿ ಗಂಡನ ಕಿವಿಗೆ ಮಾತ್ರ ಕೇಳಿಸುವಂತೆ.

'ಅಯ್ಯೋ ವೈಯಾರಿ—ನನ್ನ ಮುಂಗೇ ಗಂಡನ ಕೈಯಲ್ಲಿ ಸರಸ ಆಡ್ತಿಯಾ— ಅತ್ತೆ ಅನ್ನೋ ಭಯಬಿಟ್ಟು. ನಿನ್ನ ಬಾಯಿಗೆ ಬರೆಹಾಕ್ತೀನಿ ತಾಳು.'

—ಕೃತಕ ಕ್ರೋಧವನ್ನು ಅಭಿನಯಿಸಿ ಹೇಳಿದಳು ಭಾಗಮ್ಮ.

'ಇಲ್ಲ ಅತ್ತೆ. ಇವರಿಗೆ ನಿಮ್ಮ ಮಾತಿಗೆ ಎದುರುಹೇಳಬೇಡಿ ಅಂತ...'

'ಪಾಪ! ಪಾಪ! ಯಾರಿಗೆ ಹೇಳಿಕೊಡ್ತಿಯೇ ನಿನ್ನ ಕರಟಕ ಪೂರಾ ಶಾನಾ... ನೋಗ್ಲಿ ಬಿಡು. ಅದೆಲ್ಲಾ ಮಾತು. ಈಗ್ಯಾಕೆ...ಮಾತ್ನಲ್ಲೇ ಹೊತ್ತಾಗ್ಹೋಯ್ತು. ಇನ್ನು ನೀವು ಹೊರಡಿ. ಹೀಗೆ ನಗ್ತಾ ನಗ್ತಾ ಹೋಗಿ, ನಗ್ತಾ ನಗ್ತಾ ಬಾ ರಾಜೇಶ್ವರಿ'

—ಎಂದು ಭಾಗಮ್ಮ ಅವರನ್ನು ಹೊರಡಿಸಿದಳು.

ಅವರಿಬ್ಬರೂ ಮತ್ತೊಮ್ಮೆ ಆಕೆಗೆ ವಂದಿಸಿ ಗಾಡಿಯಲ್ಲಿ ಕುಳಿತರು. ಗಾಡಿಯವನು ಎತ್ತುಗಳನ್ನು ಹೂಡಿ, ಗಾಡಿಯನ್ನು ನಡೆಸಿದ. ಕತ್ತಿನ ಗೆಜ್ಜೆಯು ಸದ್ದು ಮಾಡುತ್ತಾ ಎತ್ತುಗಳು ಗಾಡಿಯನ್ನು ಎಳೆದವು.

ಗಾಡಿ ಕಣ್ಣು ಮರೆಯಾಗುವವರೆಗೂ ತಲೆಬಾಗಿಲಿನಲ್ಲೇ ನಿಂತಿದ್ದು ಬಳಿಕ ಭಾಗಮ್ಮ ಒಳಗೆ ಹೋಗಿ, ಗೋಡೆಯ ಮೇಲಿದ್ದ ದೇವರ ಚಿತ್ರಕ್ಕೆ ನಮಸ್ಕಾರಮಾಡಿ—

'ಸ್ವಾಮೀ, ಬೇಗಿತ್ತಿಗೆ ಬೇಗ ಗುಣಮಾಡು'

—ಎಂದು ಬೇಡಿದರು.

ಅತ್ತೆಯ ಮೈಮರೆಸುವ ಮಾತಿನಲ್ಲಿ ಮರೆಯಾಗಿದ್ದ ತಾಯಿಯ ರೋಗದ ಚಿಂತೆ, ಅತ್ತೆ ಕಣ್ಣು ಮರೆಯಾಗುತ್ತಿದ್ದ ಹಾಗೇ ಮತ್ತೆ ರಾಜೇಶ್ವರಿಯನ್ನು ಕಾಡತೊಡಗಿತು.

ಚಿಂತಾಮಗ್ನಳಾಗಿದ್ದ ಮಡದಿಗೆ ಚಂದ್ರಶೇಖರ—

'ಹೋಗಲಿ ಬಿಡು. ಈಗೇಕೆ ಆ ಚಿಂತೆ. ಹೇಗೂ ನಾಳೆ ಮಧ್ಯಾಹ್ನದ ಹೊತ್ತಿಗೆ ಅಲ್ಲಿಗೆ ಹೋಗುತ್ತೇವಲ್ಲಾ. ಈಗ ಮಲಗಿಕೊಂಡು ನಿದ್ರೆಮಾಡು,

—ಎಂದ.

ಆದರೆ ರಾಜೇಶ್ವರಿಗೆ ನಿದ್ರೆಯೂ ಬರಲಿಲ್ಲ. ಚಿಂತೆಯೂ ತೊಲಗಲಿಲ್ಲ, ಎತ್ತುಗಳ ನಿಧಾನವಾದ ನಡೆಯಲ್ಲಿ ಬೇಗ ಸವೆಯದ ದಾರಿಯನ್ನು ಶಪಿಸುತ್ತಾ, ಎಷ್ಟು ಹೊತ್ತಿಗೆ ದೇವೀಕೆರೆ ಬಂದೀತೋ ಎಂದು ಕಾಯುತ್ತಾ ಕುಳಿತಿದ್ದಳು.

ರಾತ್ರಿ ಪರಶುರಾಮಪುರದಿಂದ ಹೊರಟ ಗಾಡಿ, ದೇವೀಕೆರೆಯನ್ನು ತಲಪುವ ವೇಳೆಗೆ, ಮಾರನೆಯ ದಿನ ಮಧ್ಯಾಹ್ನ ಎರಡು ಗಂಟೆಯ ಮೇಲಾಗಿತ್ತು.

ಮನೆಯ ಮುಂದೆ ಗಾಡಿ ನಿಂತ ಸದ್ದಾದುದನ್ನು ಕೇಳಿದ ಸರಸಪ್ಪ ನವರು, ತಾವೇ ಬಾಗಿಲನ್ನು ತೆಗೆದರು.

ಗಾಡಿ ಹತ್ತಿದಾಗಲಿಂದ ತಾಯಿಗೆ ಏನು ಆಯಿತೋ, ಹೇಗಿದ್ದಾಳೋ ಎಂದು ಚಿಂತಿಸುತ್ತಲೇ ಇರುಳು ಕಳೆದಿದ್ದ ರಾಜೇಶ್ವರಿ, ಮನೆ ಬಾಗಿಲನ್ನು ಕಾಣುತ್ತಿದ್ದ ಹಾಗೇ ಗಾಡಿಯಿಂದ ಧುಮುಕಿ, ಬಾಗಿಲನ್ನು ತೆಗೆದ ತಂದೆಗೆ—

'ಅಣ್ಣಾ, ಅಮ್ಮಾ ಹೇಗಿದ್ದಾಳೆ?'

—ಎಂದು ಕೇಳಿದಳು ಗಾಬರಿಯಿಂದ.

'ಅಂಥ ಗಾಬರಿಯಾಗುವುದೇನೂ ಇಲ್ಲವಮ್ಮಾ. ಹುಷಾರಾಗಿಯೇ ಇದ್ದಾಳೆ,

—ಎಂದು ಸರಸಪ್ಪನವರು ಧೈರ್ಯ ಹೇಳುತ್ತಿದ್ದರೂ, ಆ ಮಾತೇ ಕಿವಿಯ ಮೇಲೆ ಬೀಳದವಳಂತೆ 'ಅಮ್ಮಾ' ಎಂದು ಕೂಗಿಕೊಂಡು ಒಳಗೆ ಓಡಿಹೋದಳು.

ತಾಯಿಯನ್ನು ನೋಡುವ ಆತುರದಿಂದ ಒಳಗೆ ಬಂದ ರಾಜೇಶ್ವರಿಗೆ ತನ್ನ ಧ್ವನಿ ಕೇಳಿ ಹಾಸಿಗೆಯಿಂದ ಏಳುತ್ತಿದ್ದ ತಾಯಿಯನ್ನು ನೋಡುತ್ತಿದ್ದ ಹಾಗೇ, ಕಣ್ಣಲ್ಲಿ ನೀರು ತುಂಬಿ, ಗಂಟಲು ಗದ್ಗದಿತವಾಗಿ—

'ಇದೇನೇ ಅಮ್ಮಾ... ಹೀಗಾಗಿ ಬಿಟ್ಟೆ...'

—ಎಂದಳು. ಆ ಮಾತು ಮುಗಿಯುವುದರೊಳಗೇ ಅಳುವು ಪ್ರತ್ಯಕ್ಷ ವಾಯಿತು.

'ಏನಾಗಿದೆ ನನಗೇನೂ ಆಗಿಲ್ಲ, ರಾಜೇಶ್ವರೀ

—ಎಂದರು ಲಕ್ಷ್ಮೀದೇವಮ್ಮ, ಮಗಳ ಆತುರ ಅಕ್ಕರೆಯನ್ನು ಕಂಡು ಕಣ್ಣು ತೇವವಾಗಿ, ಬಳಿಯಲ್ಲಿ ಕುಳಿತ ಮಗಳ ಮುಂದಲೆಯನ್ನು ನೇವರಿಸುತ್ತಾ.

'ಏನೂ ಆಗಲ್ಲವಂತೆ ಇವಳಿಗೆ? ಒಳ್ಳೇ ಹುಚ್ಚಿಕಡ್ಡಿ ಹಾಗಾಗಿ ಹೋಗಿ ದೀಯ. ಹೇಳಿಕಳಿಸೋಕೆ ಇಷ್ಟು ದಿನ ಏಕೆ ತಡವಾಡಿದೆ.'

'ಏನಾಗಿದೆ ಅಂತ ಅವಸರ ಮಾಡಬೇಕಾಗಿತ್ತು ಹೇಳು,'

ಹಾಗಾದರೆ ಈಗ ಯಾಕೆ ಬಾ ಅಂತ ಬರಿಸಿದೆ.'

'ನನಗೆ ಖಾಯಿಲೆ ಅಂತ ಅಲ್ಲ, ನಿನ್ನ ನೋಡಬೇಕು ಅನಿಸಿತು. ಅದಕ್ಕೆ ಅದಿರಲಿ ಮನೇಲಿ ಎಲ್ಲಾ ಆರೋಗ್ಯಾನೇ? ಭಾಗಕ್ಕ ಹೇಗಿದಾಳೆ? ಅಳಿಯಂದಿರು ಆರೋಗ್ಯವೇ?'

'ಅವರೂ ಬಂದಿದಾರೆ.'

'ನಿನ್ನ ಭಯದಲ್ಲಿ ಅವರನ್ನೂ ಹೊರಡಿಸಿಕೊಂಡು ಬಂದುಬಿಟ್ಟೆಯಾ? ಹೋಗಿ. ಇಬ್ಬರೂ ಸ್ನಾನಮಾಡಿ, ಇರೋದಿಷ್ಟನ್ನು ಊಟಮಾಡಿ ಬನ್ನಿ.'

'ಅವರದು ಸ್ನಾನ ಆಗಿದೆ'.

'ಎಲ್ಲಿ?'

'ದಾರೀಲೇ ಚೆಳ್ಳಕೆರೆ ಹತ್ತಿರ ತೋಟದ ಭಾವೀಲಿ ಸ್ನಾನ ಸಂಧ್ಯಾ ವಂದನೆ ಮುಗಿಸಿ, ತಿಂಡಿ ತಿಂದರು. ಅಂದ ಹಾಗೆ ದಾಸಣ್ಣ ಎಲ್ಲಿ? ಅತ್ತೆ ಅವನಿಗೆ ತುಂಬಾ ಪ್ರೀತಿ ಅಂತ ಕೋಡುಬಳೆ ಮಾಡಿಕೊಟ್ಟಿದ್ದಾಳೆ'

—ಎಂದಳು ರಾಜೇಶ್ವರಿ.

ಮಗಳು ಮಗನ ಮಾತು ಎತ್ತುತ್ತಿದ್ದ ಹಾಗೆ ಮಗಳು ಬಂದ ಉತ್ಸಾಹ ದಲ್ಲಿ ಅವರ ಮುಖದಮೇಲೆ ಮೂಡಿದ್ದ ಉತ್ಸಾಹ ಕಾಂತಿ ಮರೆಯಾಗಿ ಮತ್ತೆ ಮಂಕುಕವಿಯಿತು.

'ಅವನು ಮನೆಯಲ್ಲಿಲ್ಲ'

—ಎಂದಷ್ಟು ನೀರಸವಾಗಿ ಹೇಳಿ ಆ ಮಾತನ್ನು ಅಲ್ಲಿಗೆ ಮುಗಿಸಿದರು. ಅಷ್ಟು ಹೊತ್ತಿಗೆ ಸರಿಯಾಗಿ ಚಂದ್ರಶೇಖರ ಒಳಗೆ ಬಂದುದರಿಂದ ಆ ಮಾತು ಮುಂದೆ ಬೆಳೆಯಲು ಅವಕಾಶವಾಗಲಿಲ್ಲ. ಆದರೂ ರಾಜೇಶ್ವರಿಗೇಕೋ ತಾಯಿಯ ಮಾತಿನಲ್ಲಿ ಒಡಕು ಶಬ್ದವಿರುವುದು ಅರಿವಾಯಿತು. ಹೆಚ್ಚು ಕೆದಕಿ ಕೇಳಲು ಅದು ಹೊತ್ತಲ್ಲ ಎಂದುಕೊಂಡು ಸುಮ್ಮನಾದಳು.

ಸಂಜೆಯ ವೇಳೆಗೆ ಮನೆಗೆ ಬಂದ ವೆಂಕಟದಾಸಪ್ಪನವರು, ನಡುಮನೆಯ ಯಲ್ಲಿ ತಂದೆಯೊಡನೆ ಮಾತಾಡುತ್ತಾ ಕುಳಿತಿದ್ದ ಚಂದ್ರಶೇಖರನನ್ನು ನೋಡಿ ಚಕಿತರಾದರು.

'ಅರೇ! ಇದೇನು ಭಾವ ಇದು! ಇದ್ದಕ್ಕಿದ್ದ ಹಾಗೇ ಅಪರೂಪವಾಗಿ ಇಳಿದುಬಿಟ್ಟೆ. ಯಾವಾಗ ಬಂದದ್ದು'

'ಮಧ್ಯಾನಾನೇ ಬಂದೆ.'

'ಹೌದೇ, ರಾಜೇಶ್ವರಿ ಹೇಗಿದ್ದಾಳೆ?'

'ಅವಳೂ ಬಂದಿದಾಳೆ. ಒಳಗಿದಾಳೆ.'

ಆ ಮಾತನ್ನು ಕೇಳಿ ವೆಂಕಟದಾಸಪ್ಪನವರಿಗೆ ಮತ್ತಷ್ಟು ಆಶ್ಚರ್ಯ ವಾಯಿತು. ಆ ಮಾತನ್ನು ನಂಬಲಾಗದವರಂತೆ—

'ನಿಜವಾಗಿಯೂ ? ತಮಾಷೆ ಮಾಡಬೇಡ'

—ಎಂದು ಕೇಳಿದರು.

'ನಿಜವಾಗಿಯೂ ಒಳಗೆ ಹೋಗಿ ನೋಡು. ನಿನಗೇ ಗೊತ್ತಾಗುತ್ತೆ— ನಾನು ಹೇಳುವುದು ನಿಜವೋ ಸುಳ್ಳೋ ಅಂತ?'

'ಇದೇನು ಬಡವರ ಮೇಲೆ ಇಷ್ಟು ಅನುಗ್ರಹ. ಇದ್ದಕ್ಕಿದ್ದ ಹಾಗೇ ದಂಪತಿಗಳೇ ಬಂದುಬಿಟ್ಟಿರಲ್ಲಾ. ಎಲ್ಲೋ ಸೂರ್ಯ ಇವತ್ತೆಲ್ಲೊ ಪಶ್ಚಿಮ ದಲ್ಲಿ ಹುಟ್ಟಿರಬೇಕು. ಅಲ್ಲವೇ ಭಾವ?'

'ಹೂ, ಹೂಂ, ಹಾಗೇ. ಪಾಪ! ನಾವು ಬರೋದು ಗೊತ್ತೇ ಇರಲಿಲ್ಲವೇನೋ. ನೀನೇನು ಮಾಡೀಯಾ ಹೇಳು. ಬನ್ನಿ ಅಂತ ಗಾಡಿ ಕಳಿಸಿದ್ದೂ ಮರೆತು ಹೋಯಿತೇನೋ ರಾಯರಿಗೆ. ಮಗಧೀರ ಹೇಗಿದಾನೆ ನೋಡಿ ಮಾವಯ್ಯಾ'

—ಎಂದ ಚಂದ್ರಶೇಖರ ನಗುತ್ತಾ ಮಾವನತ್ತ ನೋಡಿ. ಆದರೆ ನರಸಪ್ಪನವರು ಆ ಮಾತೇ ತಮ್ಮ ಕಿವಿಗೆ ಬೀಳದವರಂತೆ ಬೇರೆ ಕಡೆ ಮುಖ ತಿರುಗಿಸಿಕೊಂಡರು. ಅವರಿಗರಿವಾಗದಂತೆಯೇ ಭಾರವಾದ ನಿಟ್ಟುಸಿರು ಹೊರಬಿದ್ದು ಗಾಳಿಯನ್ನು ಬೆರೆಯಿತು. ಅದನ್ನು ಕಂಡ ಚಂದ್ರಶೇಖರನಿಗೆ ಯಾವುದೋ ಜ್ಞಾನದಲ್ಲಿ ಕೆಂಡವನ್ನು ತುಳಿದ ಹಾಗಾಯಿತು.

'ನಿನ್ನ ಹತ್ತಿರ ಈಗೇನು ವಾಗ್ವಾದ. ಮೊದಲು ರಾಜೇಶ್ವರೀನ ಮಾತನಾಡಿಸಿ, ಸಂಧ್ಯಾವಂದನೆ ಮುಗಿಸಿ ಬರ್ತೀನಿ'

—ಎಂದು ವೆಂಕಟದಾಸಪ್ಪನವರು ತಂಗಿಯನ್ನು ಮಾತನಾಡಿಸಲು ಒಳಗೆ ಹೋದರು.

## ೨೨

ಆ ರಾತ್ರಿ ರಾಜೇಶ್ವರಿ ಮಲಗುವ ಮನೆಗೆ ಬಂದಾಗ ಅವಳ ಕಣ್ಣು ಗಳೆರಡೂ. ಅತ್ತತ್ತು, ಕೆಂಪಗೆ ಊದಿಕೊಂಡಿದ್ದವು.

ಮರುದಿನ, ಹೆಂಡತಿಯನ್ನು ಬಿಟ್ಟು ವಾಪಸು ಪ್ರಯಾಣ ಮಾಡ ಬೇಕಾಗಿದ್ದುದರಿಂದ, ಮತ್ತೆ ಒಬ್ಬರನ್ನೊಬ್ಬರು ನೋಡುವುದು ಎಷ್ಟು ದಿನ ವಾಗುವುದೋ, ಇದೊಂದು ರಾತ್ರಿಯನ್ನಾದರೂ ಹಾಯಾಗಿ ಕಳೆಯೋಣ ಎಂದುಕೊಂಡು ಹೆಂಡತಿ ಬರುವುದನ್ನೇ, ಬಾಗಿಲ ಬಳಿ ಅವಳ ಕಾಲಂದುಗೆಗಳ ಸದ್ದಾಗುವುದನ್ನೇ ಕಾಯುತ್ತಾ, ಕುಳಿತಿದ್ದ ಚಂದ್ರಶೇಖರ ಹೆಂಡತಿಯ ಮುಖವನ್ನು ನೋಡಿ ಗಾಬರಿಯಾದ.

ಒಂದು ಕೈಯಲ್ಲಿ ಹಾಲಿನ ಬಟ್ಟಲು, ಮತ್ತೊಂದು ಕೈಯಲ್ಲಿ ತಾಂಬೂಲದ ತಟ್ಟೆಯನ್ನು ಹಿಡಿದು ಒಳಬಂದ ರಾಜೇಶ್ವರಿ, ಹಾಸಿಗೆಯ ಬಳಿ ಅವನ್ನಿಟ್ಟು, ಹಾಸಿಗೆಯ ಮೇಲೆ ಕುಳಿತುಕೊಂಡಳು.

ಚಂದ್ರಶೇಖರ ತಾನೇ ಎದ್ದು ಹೋಗಿ, ಬಾಗಿಲು ಹಾಕಿಕೊಂಡು ಬಂದು ಅವಳ ಪಕ್ಕದಲ್ಲಿ ಕುಳಿತು, ಅವಳ ಮುಖವನ್ನು ತನ್ನೆಡೆಗೆ ತಿರುಗಿಸಿ ಕೊಂಡು–,

'ಏನಾಯಿತು ರಾಜೀ?'

—ಎಂದು ಮೃದುವಾಗಿ ಕೇಳಿದ.

ಅವನ ಮಾತನ್ನು ಕೇಳಿ ಕಂಬನಿಬತ್ತಿದ ಅವಳ ಕಣ್ಣುಗಳಲ್ಲಿ ಮತ್ತೆ ಕಂಬನಿಯ ಸೆಲೆ ಒಡೆಯಿತು. ಅವಳು ಚಂದ್ರಶೇಖರನ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ದುಃಖದಲ್ಲಿ ಬಾಡಿದ ಅವಳ ಮುಖದಲ್ಲಿ, ಕೆನ್ನೆಯ ಮೇಲೆ, ಕಣ್ಣೀರಿನ ಕರೆಯಲ್ಲಿ ಅಂಟಿಕೊಂಡಿದ್ದ ಕೂದಲ ಎಳೆಯನ್ನು ಬಿಡಿಸಿ ಮುಂದಲೆ ಯನ್ನು ನೇವರಿಸಿ ಕೇಳಿದ—

'ಯಾರಾದರೂ ಏನಾದರೂ ಅಂದರಾ ರಾಜೀ?'

ರಾಜೇಶ್ವರಿ 'ಯಾರೂ ಏನೂ ಅನ್ನಲಿಲ್ಲ'ವೆನ್ನುವುದನ್ನು ಮಾತಿನಲ್ಲಿ ಹೇಳದೆ ತಲೆಯಲ್ಲಾಡಿಸಿ ಸೂಚಿಸಿದಳು.

'ಹಾಗಾದರೆ ಮತ್ತೆ — ಈ ಅವತಾರ ಎಲ್ಲಾ ಏನು? ಏನಾದರೂ ಖರ್ಚಿನ ಬಾಬಿಗೆ ಪಾನ್ನಡಿಯೋ ಇದೆಲ್ಲಾ?'

—ಎಂದು ಚಂದ್ರಶೇಖರ ನಗುತ್ತಾ ಕೇಳಿದ, ತನ್ನ ನಗೆಯಿಂದ ಅವಳ ಮೌನವನ್ನು ಕದಲಿಸಲು ಯತ್ನಿಸಿ.

'ಊಹೂ'

–ಪ್ರಯತ್ನ ಪಟ್ಟು ಹೇಳಿದಳು ರಾಜೇಶ್ವರಿ.

'ಹಾಗಾದರೆ—ಏಕೆ?'

'ನೀವು ಸಿಟ್ಟಾಗೊಲ್ಲಾಂದರೆ ಒಂದು ಮಾತು ಕೇಳ್ಬೇಕೂಂತ ಇದೀನಿ.'

'ಕೇಳೋದಕ್ಕೆ ಕಣ್ಣೀರಿನ ಪೀಠಿಕೆ ಏಕೆ—ಹೊಟ್ಟೆ ಉರಿಸಲು. ನೀನು ಕೇಳಿದ್ದಕ್ಕೆ ನಾನು ಯಾವತ್ತಾದರೂ ಇಲ್ಲಾಂತ ಹೇಳಿದೀನಾ? ಅದೇನು ಬೇಕೋ ಕೇಳು?'

'ನನಗೋಸ್ಕರ... ನನಗೋಸ್ಕರ... ಇನ್ನೊಂದೆರಡು ದಿನ ಇಲ್ಲಿ ಇರ್ತೀರಾ?'

ಗಂಡನನ್ನು ಅಂಗಲಾಚುವ ಧ್ವನಿಯಲ್ಲಿ ಕೇಳಿದಳು ರಾಜೇಶ್ವರಿ.

'ಅಷ್ಟೇನೇ ! ಊರಿಗೆ ಹೋಗ್ತೀನಲ್ಲಾಂತ ಇಷ್ಟು ದುಃಖವೇ? ಎಂಥ ವಿಚಿತ್ರ ಹುಡುಗೀನೇ ನೀನು. ನಿನ್ನ ಬಿಟ್ಟು ನಾನು ಯಾವ ಸುಖ ಸೂರೆದು ಕೊಳ್ಳಲಿಕ್ಕೆ ಹೋಗುತ್ತೀನಿ ಹೇಳು. ಆ ಹಾಳು ಸ್ಕೂಲು ಗಂಟು ಬಿದ್ದಿದೇಂತ ಹೋಗಬೇಕು. ಹೋಗ್ತೀನಿ. ಅದೊಂದು ಕಾಟ ಇಲ್ದೆ ಹೋಗಿದ್ರೆ ನೀನಿದ್ದಷ್ಟು ದಿನಾನೂ ನಾನೂ ಇಲ್ಲೇ ಇರ್‍ತಿದ್ದೆ. ಅಲ್ದೆ ಮನೇಲಿ ಅಮ್ಮಾ ಒಬ್ಬಳೇ. ಮೊದಲೇ ಮೀಸೆ ಬಂದ ಮೇಲೆ ಮೂಗು ಮರೆತು ಹೋಯ್ತು. ಹೆಂಡ್ತಿ ಬಂದ ಮೇಲೆ ತಾಯಿ ಮರತ್ಹೋಯ್ತು ಅಂತ ತಮಾಷೆ ಮಾಡ್ತಿರ್ತಾಳೆ. ನಾವೂ ಅವಳು ಅಂದ ಹಾಗೇ ಮಾಡಿದರೆ ಏನು ಚೆನ್ನ ಹೇಳು?'

—ತಾನು ಅಲ್ಲಿಂದ ಮರುದಿನವೇ ಹೋಗಬೇಕಾದುದಕ್ಕೆ ಕಾರಣ ಗಳನ್ನು ವಿವರಿಸಿ ಹೇಳಿದ ಚಂದ್ರಶೇಖರ.

'ಅದಕ್ಕಲ್ಲಾ ನಾನು ನಿಮ್ಮನ್ನು ನಿಲ್ಲಿ ಅಂತ ಹೇಳಿದ್ದು......'

'ಮತ್ತೆ......'

'ಮತ್ತೆ...ಮತ್ತೆ...ನಿಮ್ಮಿಂದ ಒಂದು ಕೆಲಸ ಆಗೋದಿದೆ....'

'ಅದೇನಂ ಹೇಳು? '

'ಹೇಗೆ ಹೇಳಬೇಕೋ...ನನಗಂತೂ ಹೇಳೋಕೆ ಬಾಯೇ ಬರೋದಿಲ್ಲ

...ಯಾವ ಜನ್ಮದ ಪಾಪವೋ...ದಾಸಣ್ಣನಿಗೆ ಆ ಪ್ರಾರಬ್ಧ ಗಂಟು ಬಿದ್ದಿದೆ'

ಮಾತಿನ ಅಕ್ಷರ ಅಕ್ಷರದಡಿಯಲ್ಲೂ ಚಿಂತೆ ಮಾಡುತ್ತಿರಲು ಹೇಳಿದಳು ರಾಜೇಶ್ವರಿ.

'ಅ್ಹಾ! ದಾಸಣ್ಣನಿಗೆ—ಏನು ಪ್ರಾರಬ್ಧ!'

—ರಾಜೇಶ್ವರಿಯ ಮಾತು ಕೇಳಿ ಚಕಿತನಾಗಿ ಕೇಳಿದ ಚಂದ್ರಶೇಖರ

'ಪ್ರಾರಬ್ಧವಲ್ಲ—ಮೋಹಿನಿ ಪಿಶಾಚಿ!'

—ಕರ್ಕಶವಾಗಿ ಹೇಳಿದಳು ರಾಜೇಶ್ವರಿ.

ಅದನ್ನು ಕೇಳಿ ಚಂದ್ರಶೇಖರನಿಗೆ ಮತ್ತಷ್ಟು ಗಾಬರಿಯಾಯಿತು. ಅವನೂ ಕಾತರನಾಗಿ ಕೇಳಿದ:

'ಹಾಗಂದರೇನು ರಾಜಿ. ಅದೇನದು ಬಿಡಿಸಿ ಹೇಳಬಾರದೇನು?'

ರಾಜೇಶ್ವರಿ ನಾಚುತ್ತಾ, ಒತ್ತಿ ಬರುವ ದುಃಖದಲ್ಲಿ ಮಾತುಮಾತಿಗೂ ತಡೆಯುತ್ತಾ ತಾಯಿಂದ ಕೇಳಿದ ವೆಂಕಟದಾಸಪ್ಪ-ಗೌರಮ್ಮ ಪ್ರಣಯ ವೃತ್ತಾಂತ, ಅದರಿಂದ ಮನೆಯಲ್ಲಿ ತಂದೆ ಮಕ್ಕಳಿಗಾದ ಜಗಳ, ಅವರು ಒಬ್ಬರೊಡನೊಬ್ಬರು ಮಾತನಾಡುವುದನ್ನು ಬಿಟ್ಟಿರುವುದು; ಎಲ್ಲವನ್ನೂ ವಿವರಿಸಿ—

'ಅದೇ ಈಗ ಅಪ್ಪನ್ನ ಕೊಲ್ತಾ ಇರೋ ಚಿಂತೆ'

—ಎಂದು ಮುಗಿಸಿದಳು.

ಹೆಂಡತಿ ಹೇಳಿದುದನ್ನು ಕೇಳಿ, ಚಂದ್ರಶೇಖರನ ಮೊಗದ ಮೇಲೂ ಚಿಂತೆಯ ಕಾರ್ಮೋಡ ಕವಿಯಿತು. ರಾಜೇಶ್ವರಿಯ ಹಾಗೆ ಅವನೂ ಅಷ್ಟು ಹೊತ್ತು ತಲೆಬಗ್ಗಿಸಿ, ಮಾತನಾಡದೆ ಕುಳಿತಿದ್ದು, ಬಳಿಕ ಹೇಳಿದ—

'ಛಿ! ಹೀಗಾಗಬಾರದಿತ್ತು. ದಾಸಣ್ಣನಿಗೆ ಇಂಥ ಬುದ್ಧಿ ಬರಬಾರ ದಾಗಿತ್ತು. ಅವನು ಹೀಗೆ ಮಾಡ್ತಾನೆ ಎಂತ ಸಾವಿರ ಜನ ಹೇಳಿದ್ರೂ ನಾನು ನಂಬುತ್ತಿರಲಿಲ್ಲ'.

'ಅಮ್ಮನೆ ಬಾಯಿಬಿಟ್ಟು ಹೇಳದಿದ್ದರೆ ನಾನೂ ನಂಬುತ್ತಿರಲಿಲ್ಲ.'

'ಏನೋ—ದೇವರು, ಯಾರಿಗೆ, ಯಾವ ಕಾಲಕ್ಕೆ ಏನು ಬುದ್ಧಿ ಕೊಡು ತ್ತಾನೋ ಯಾರು ಬಲ್ಲರು'

—ಎಂದ ಚಂದ್ರಶೇಖರ ಕಳೆಯಿಲ್ಲದ ನಿರಾಶೆಯ ಧ್ವನಿಯಲ್ಲಿ.

'ಹಾಗೆಂದು ಬಿಟ್ಟರೆ ಆಯಿತೇ?'

'ಹಾಗೆನ್ನದೆ ನಾವು ಮತ್ತೇನು ತಾನೇ ಮಾಡಲು ಸಾಧ್ಯ? ದೇವರು ಅವನಿಗೆ ಈ ಹೊತ್ತಿನಲ್ಲಿ ಈ ಬುದ್ಧಿ ಕೊಟ್ಟ. ಮುಂದಾದರೂ ಒಳ್ಳೇ ಬುದ್ಧಿ ಕೊಡು ಎಂದು ಪ್ರಾರ್ಥಿಸಿಕೊಂಡು: ಬುದ್ಧಿ ಬರಬಹುದು ಎಂದು ನಂಬಿ ಕುಳಿತುಕೊಳ್ಳುವದಷ್ಟೇ ನಾವು ಮಾಡಬಹುದಾದದ್ದು.'

'ಹಾಗಾಗೊಲ್ಲ.'

'ಮತ್ತೇನು ಮಾಡಬೇಕು ಅಂತೀಯ?'

'ಏನಾದರೂ ಮಾಡಬೇಕು. ನಮ್ಮನಮ್ಮವರು ಅಂತ ನಾವಿರೋದು ಯಾಕೆ? ಅವನಿಗೇ ಬುದ್ಧಿ ಬರಲಿ ಎಂದು ಬಿಟ್ಟರೆ, ಅವನಿಗೆ ಬುದ್ಧಿ ಬರುವ ಹೊತ್ತಿಗೆ, ಅಮ್ಮ. ಅಪ್ಪ, ಒಬ್ಬರೂ ಇರೋದಿಲ್ಲ. ಅಮ್ಮ ಈಗಲೇ ಅರ್ಧ ಆಗಿದ್ದಾಳೆ.'

'ನನಗೂ ಅದು ಕಾಣುತ್ತೆ—ಮಾವಯ್ಯನೂ ತುಂಬಾ ಬಳಲಿದ್ದಾನೆ,

'ಹೂ. ಅಮ್ಮ ಹೇಳಿಕೊಂಡು ನವೆಯುತ್ತಾಳೆ. ಅಣ್ಣ ಹೇಳಿಕೊಳ್ಳದೆ ನವೆಯುತ್ತಾನೆ. ಅದಕ್ಕೇ ನಾನು ಹೇಳಿದ್ದು, ನೀವು ಎರಡು ದಿನ ಇಲ್ಲಿದ್ದು, ಅವನಿಗೆ ಸ್ವಲ್ಪ ಬುದ್ಧಿ ಹೇಳಿದರೆ ಹಾಗಾದರೂ ದಾರಿಗೆ ಬಂದಾನೇನೋಂತ...'

'ತಂದೆ ತಾಯಿಗಳ ಮಾತೇ ಪಥ್ಯವಾಗದೋನಿಗೆ—ಇನ್ನು ನನ್ನ ಮಾತಂ ಹಿಡಿಸುತ್ತದೆಯೇ,? ನಿನಗೆಲ್ಲೋ ಭ್ರಾಂತಿ'

'ಊಹೂ, ಹಾಗಲ್ಲ, ಅವನಿಗೆ ಯಾವತ್ತಿನಲ್ಲಿ ಯಾರ ಮಾತು ಕೇಳಿ ಬುದ್ಧಿ ಬರಬೇಕೂಂತ ಹಣೇಲಿ ಬರೆದಿದೆಯೋ. ನಿಮ್ಮ ಮಾತಿಗೇ ಆ ಕೆಲಸ ಆಗಬಹುದು. ಏನಾಗುತ್ತೋ ಬಿಡುತ್ತೊ—ನಮ್ಮ ಮನಸ್ಸಿನ ಸಮಾಧಾನ ಕ್ಕಾದರೂ ನಾವು ಮಾಡಬೇಕು.'

'ನಿನ್ನ ಮಾತು ನಿಜ. ಆದರೆ ಕೈ ತೋರಿಸಿ ಅವಲಕ್ಷಣ ಅನ್ನಿಸಿಕೊಂಡ ಹಾಗಾದರೆ?'

'ನನ್ನ ಮೇಲೆ ನಿಮಗೆ ಪ್ರೀತಿ ಇಲ್ವೆ?'

—ಇದ್ದಕ್ಕಿದ್ದ ಹಾಗೇ ಮಾತು ಬದಲಿಸಿ ಕೇಳಿದಳು ರಾಜೇಶ್ವರಿ.

'ಇದೇನು ಮಾತು ರಾಜಿ. ದುಃಖದಲ್ಲಿ ನಿನಗೆಲ್ಲೋ ತಲೆ ಕೆಟ್ಟು ಹೋಗಿದೆ.'

'ಹಾಗಾದರೆ—ನಿಮಗೆ ನನ್ನ ಮೇಲೆ ಪ್ರೀತಿ ಇದ್ದರೆ ನಾನು– ಸುಖ ವಾಗಿರಬೇಕೂಂತ ಆಸೆ ಇದ್ದರೆ, ಹೇಗಾದರೂ ಹೇಳಿ ದಾಸಣ್ಣನನ್ನು ದಾರಿಗೆ ತನ್ನಿ. ಮಾನ ಅವಮಾನ ಅಂತ ಹೆದರಿ ಸುಮ್ಮನೆ ಕುಳಿತು ಬಿಟ್ಟರೆ ಏನಾದ ಹಾಗೆ. ನಿಮ್ಮ ಮಾತು ಅವನು ತೆಗೆದುಹಾಕೊಲ್ಲ. ಎಷ್ಟಾದರೂ ಅವನಿಗೆ ನೀವು ಪ್ರೀತಿಯ ಭಾವ'.

'ನಾನು ಅವನಿಗೆ ಪ್ರೀತಿಯ ಭಾವ ನಿಜ. ಆದರೆ ನೀನು ನನಗಿಂತ ಹೆಚ್ಚಾಗಿ ಅವನ ಮುದ್ದಿನ ತಂಗಿ. ನಿನಗಾದರೆ ಅವನು ಕಿವಿ ಬೇಕಾದರೂ ಕೊಯಿಸಿಕೊಳ್ಳುತ್ತಾನೆ. ಅಲ್ಲದೆ–ನೀನು ಮನೆಯವಳು; ನಾನು ಎಷ್ಟಾದರೂ ಹೊರಗಿನವನು. ನನ್ನ ಮಾತಿಗಿಂತ ನಿನ್ನದೇ ಮೇಲು. ಆದ್ದರಿಂದ ನೀನೇ ಹೇಳು.'

'ನಾನಂ ಹೇಗೆ ಹೇಳಲಿ?'

'ಏಕೆ–ಹೇಳಬಾರದೆ'

'ಊಹೂ.'

'ಏಕೆ?'

'ಎಷ್ಟಾದರೂ ದಾಸಣ್ಣ ವಯಸ್ಸಿನಲ್ಲಿ ನನಗಿಂತ ಹಿರಿಯ. ಚಿಕ್ಕವರು ದೊಡ್ಡವರಿಗೆ ಬುದ್ಧಿ ಹೇಳುವುದೇ? ಅದಾಗುವುದಿಲ್ಲ. ನೀವೇ ಹೇಳಬೇಕು. ಸುಮ್ಮನೆ ಇಲ್ಲದ ಮಾತು ಹೇಳಿ ನೀವು ಆಗೊಲ್ಲ ಅಂದುಬೀಡಬೇಡಿ. ಅಮ್ಮನೂ ನೀವು ಒಂದು ಮಾತು ಹೇಳುತ್ತೀರೇನೋ ಅಂತ ಎಷ್ಟೋ ಆಸೆ ಹಚ್ಚಿಕೊಂಡಿ ದ್ದಾಳೆ. ನೀವು ಎಲ್ಲಾರ ಆಸೇನೂ ಮುರಿದು ಬಿಡಬೇಡಿ.

'ಮಾವಯ್ಯನ ಜೊತೆ ನನ್ನಿಂದ ಬಗೆ ಹರಿಯುವ ಭಾಗ್ಯ ನನ್ನ ಹಣೆಯಲ್ಲಿ ಬರೆದಿದ್ದರೆ ನಾನೇಕೆ ಬೇಡ ಅನ್ನಲಿ. ಏನಾಗುತ್ತೋ ಆಗಲಿ ನಾನು ಅವನಿಗೆ ಹೇಳುವಷ್ಟು ಹೇಳುತ್ತೇನೆ. ಆದರೆ ಫಲ ಹೇಗಾಗುವುದೋ ಏನೋ, ನನಗಂತೂ ಹೆಚ್ಚು ಆಸೆಯಿಲ್ಲ. ನೀನೂ ಇಟ್ಟುಕೊಳ್ಳಬೇಡ'

—ಎಂದ ಚಂದ್ರಶೇಖರ.

'ಹಾಗಾದರೆ ಇನ್ನೆರಡು ದಿನ ಇಲ್ಲಿರ್ತೀರಾ?'

—ಆಸೆ ತುಂಬಿದ ಕಣ್ಣುಗಳಿಂದ ಗಂಡನತ್ತ ನೋಡಿ ಕೇಳಿದಳು ರಾಜೇಶ್ವರಿ.

'ಫೂ. ಮಹಾರಾಣಿಯವರ ಅಪ್ಪಣೆ ಆದಮೇಲೆ ಇನ್ನೇನು ಮಾಡಲಿ,

ನಿನಗಾಗಿ ಇರಬೇಕೇನೊಂತ ಇದ್ದೆ. ನಿನಗಲ್ಲ—ನಿಮ್ಮಣ್ಣನಿಗಾಗಿ ಇದ್ದ ಹಾಗಾಯಿತು.

'ಯಾರಿಗೋಸ್ಕರವೊ—ಇದ್ದರೆ ಆಯಿತು. ಯಾರ ಮದುವೆ ಆದರೇನು ನಮಗೆ ಹೋಳಿಗೆ ಊಟ ಸಿಕ್ಕಿದ್ದೇ ಲಾಭ'

—ಎಂದಳು ರಾಜೇಶ್ವರಿ ನಗುತ್ತಾ.

'ಅಂತೂ ನಿನ್ನ ಸ್ವಾರ್ಥ ನೀನು ಬಿಡುವುದಿಲ್ಲವಲ್ಲ!'

—ಚಂದ್ರಶೇಖರ ಹೆಂಡತಿಯ ಮಾತುಕೇಳಿ ಅರ್ಥ ತಿಳಿದು ನಗುತ್ತಾ ಅವಳ ಕೆನ್ನೆ ಹಿಂಡಿದ.

'ಎಷ್ಟಾದರೂ ನಾನು ನಿಮ್ಮ ಹೆಂಡತಿ ಅಲ್ಲವೇ? ನಿಮ್ಮ ಹಾಗೆ ನಾನೂ.'

'ಅಂದರೆ—ನನಗೇನು ಇದರಲ್ಲಿ.'

'ಈ ಮಾತಿನದೇ ನೆಪ ಅಂತ ಕೆನ್ನೆ ಹಿಂಡಲಿಲ್ಲವೇ?' ಹಾಗೇ. ದೇವರಿಗೆ ನೈವೇದ್ಯಕ್ಕಿಟ್ಟರೆ ಊಟ ಮಾಡುವವರು ನಾವೋ, ದೇವರೊ?'

—ರಾಜೇಶ್ವರಿ ಗಂಡನ ಎದೆಗೆ ಒರಗಿಕೊಂಡು ತುಂಟುತನ ತುಳುಕುವ ಧ್ವನಿಯಲ್ಲಿ ಕೇಳಿದಳು.

'ನೀನು ಬಹಳ ಮಾತು ಕಲಿತುಬಿಟ್ಟೆ. ಬರಬರುತ್ತ ನಿನ್ನ ಬಾಯಿ ದೊಡ್ಡದಾಯಿತು. ಅದಕ್ಕೆ ಮುದ್ದು ಮಾಡಬೇಕು.'

'ಏನು?'

'ತುಟಿಗಳೇ ತೆಗೆಯದ ಹಾಗೆ ಬಲವಾಗಿ ಮುಚ್ಚಿಬಿಡಬೇಕು. ಆ ಕೆಟ್ಟ ತುಟಿಗಳಿಗೆ ಆಗಲೇ ಬುದ್ಧಿ ಬರೋದು'

—ಎಂದು ಎದೆಗೊರಗಿದ ಹೆಂಡತಿಯನ್ನು ತಬ್ಬಿಕೊಂಡ ಚಂದ್ರಶೇಖರ.

'ಸ್ಕೂಲಿನಲ್ಲೂ ಇದೇ ಪಾಠಾನೇ ಹೇಳಿಕೊಡ್ತೀರಾ?'

—ಎಂದಳು ರಾಜೇಶ್ವರಿ.'

'ಈ ಸ್ಕೂಲಿನಲ್ಲಿ ಇದೇ ಪಾಠ'

—ಎಂದ ಚಂದ್ರಶೇಖರ.

'ನೀವು ತುಂಬಾ ನಾಚಿಕೆಗೆಟ್ಟವರು. ಹೀಗೇ ಮಾತಾಡಲು ಬಿಟ್ಟರೆ ಏನೇನು ಮಾತಾಡುತ್ತೀರೋ! ಮೊದಲು ನಿಮ್ಮ ಬಾಯಿ ಮುಚ್ಚಿಸಬೇಕು. ಎಲ್ಲಿ?'

—ಎಂದು ಗಂಡನ ತಲೆಯನ್ನು ತನ್ನತ್ತ ಎಳೆದುಕೊಂಡಳು ರಾಜೇಶ್ವರಿ. ಅವನ ತುಟಿಗಳೂ ಆ ಶಿಕ್ಷೆಗೇ ಕಾದಿದ್ದವು.

## ೨೩

ಹೆಂಡತಿಗೆ ಮಾತು ಕೊಟ್ಟಂತೆ ಚಂದ್ರಶೇಖರ, ಮಾರುದಿನ ಸಂಜೆಯ ವರೆಗೂ ದಾಸಣ್ಣನಿಗಾಗಿ ಕಾದು, ಸಂಜೆ ಜೊತೆಗೆ ಸಂಧ್ಯಾವಂದನೆ ಮಾಡುವ ನೆಪ ಮಾಡಿಕೊಂಡು, ಅವನನ್ನೂ ತನ್ನ ಜೊತೆಗೆ ಎಳೆದುಕೊಂಡು, ದೇವೀ ಕೊಳದತ್ತ ಹೊರಟ.

ಅವರಿಬ್ಬರೂ ದೇವೀ ಕೊಳದ ಬಳಿಯ ತೋಪನ್ನು ತಲುಪಿದಾಗ, ಇನ್ನೂ ಸೂರ್ಯಾಸ್ತಮಯವಾಗಿರಲಿಲ್ಲ. ಅಸ್ತಮಯ ಸಮೀಪನಾದ ಸೂರ್ಯನ ಕೆಂಪು ಬೆಳಕು, ಕೊಳದ ನೀರಿನ ಮೇಲೆ, ತೋಪಿನಲ್ಲಿ ವಿಸ್ತಾರವಾಗಿ ಬೆಳೆದ ಮಾವು, ಹುಣಸೆ, ಅರಳಿ, ನೇರಿಳೆ, ಬೇವಿನ ಮರಗಳ ಮೇಲೆ ಬಿದ್ದು ರಂಗೇರಿಸಿತ್ತು. ಮರದಲ್ಲಿ ಕಟ್ಟಿದ ಗೂಡುಗಳಿಗೆ ಎಲ್ಲೋ ಅಲ್ಲೊಂದು ಇಲ್ಲೊಂದು ಹಕ್ಕಿಗಳು, ಬೈಗುಗೆಂಪಿನಲ್ಲಿ ನಿಧಾನವಾಗಿ ರೆಕ್ಕೆ ಬೀಸುತ್ತಾ ಮರಳುತ್ತಿದ್ದವು. ಸ್ವಲ್ಪ ದೂರದಲ್ಲಿದ್ದ ಕೆರೆಯ ಮಧ್ಯದಿಂದೆದ್ದ ಬೆಳ್ಳಕ್ಕಿಗಳ ಸಾಲೊಂದು ಮುಗಿಲಲ್ಲಿ ತೇಲುವ ಮುತ್ತಿನ ಮಾಲೆಯಂತೆ ತೇಲಿಹೋಗುತ್ತಿತ್ತು. ದೂರದ ಗುಡ್ಡದ ಬಂಡೆಗಳು ಬಂಗಾರದ ಹೊಳಪು ಕೊಟ್ಟಂತೆ ಹೊಳೆಯುತ್ತಿದ್ದವು. ದೇವಿಯ ದೇವಾಲಯದ ಕಂಚಿನ ಕಲಶ ನೀಲನಭಕ್ಕೆದುರಾಗಿ ಹಿಡಿದ ಕೆಂಡದಂತೆ ಲಕಲಕಿಸುತ್ತಿತ್ತು.

ಕೊಳದ ಪಾವಟಿಗೆಗಳ ಮೇಲೆ ಭಾವ–ಭಾವಮೈದುನರಿಬ್ಬರೂ ಬೈಗಿನ ಮೋಡಿಗೆ ಮರುಳಾದಂತೆ ಮಾತನಾಡದೆ ಸುಮ್ಮನೆ ಕುಳಿತಿದ್ದರು. ವೆಂಕಟದಾಸಪ್ಪನವರು ಕೊಳದ ಶಾಂತವಾದ ನೀರಿನಲ್ಲಿ ಆಗಾಗ ಸಣ್ಣ ಹರಳೊಂದನ್ನು ಹಾಕಿ, ಮೂಡಿದ ಸಣ್ಣ ಅಲೆಗಳನ್ನು ನೋಡುತ್ತಾ ಕುಳಿತಿದ್ದವರು—

'ಏಳು ಭಾವ ಸಂಧ್ಯಾವಂದನೆ ಮುಗಿಸಿಬಿಡೋಣ'

—ಎಂದು ಬಂದ ಕೆಲಸವನ್ನು ನೆನಪು ಮಾಡಿದರು.

'ಹೂ, ಮೊದಲು ಅದೂ ಮುಗಿದು ಹೋಗಲಿ'

—ಎಂದು ಚಂದ್ರಶೇಖರನೂ ಹೇಳಿ, ನಿಧಾನವಾಗಿ ಪಾವಟಿಗೆಗಳನ್ನಿಳಿದು, ಕೈಕಾಲು ಮುಖ ತೊಳೆದುಕೊಂಡು, ಸಂಧ್ಯಾವಂದನೆಗೆ ಕುಳಿತ. ಅವನಿಗೆ ಅಷ್ಟು ದೂರದಲ್ಲಿ ವೆಂಕಟದಾಸಪ್ಪನವರೂ ಸಂಧ್ಯಾವಂದನೆಗೆ ಕುಳಿತರು.

ಸಂಧ್ಯಾವಂದನೆಗೆ ಕುಳಿತಾಗಲೂ, ಮಾತನಾಡಬೇಕೆಂದು ಬಂದ ವಿಷಯುವನ್ನು ಹೇಗೆ ಆರಂಭಿಸುವುದು ಎಂದೇ ಚಿಂತಿಸುತ್ತಿದ್ದ ಚಂದ್ರಶೇಖರನ ಸಂಧ್ಯಾವಂದನೆ ಬೇಗ ಮುಗಿದು, ವೆಂಕಟದಾಸಪ್ಪನವರದು ಮುಗಿಯುವು ದನ್ನೇ ಕಾಯುತ್ತ ಕುಳಿತ. ಅವರದೂ ಮುಗಿದ ಮೇಲೆ ಇಬ್ಬರೂ ಅಮ್ಮ ನವರ ಗುಡಿಗೆ ಹೋಗಿ ನಮಸ್ಕಾರ ಮಾಡಿ ಬಂದ ಮೇಲೆ ವೆಂಕಟದಾಸಪ್ಪ ನವರು—

'ಇನ್ನು ಮನೆಕಡೆ ಹೋಗೋಣವೇ ಭಾವ?'

—ಎಂದರು.

'ಮನೇಗೆ? ಈಗಲೇ ಏನು ಅವಸರ–ಇಲ್ಲೇ ಚೆನ್ನಾಗಿದೆ ಗಾಳೀನೂ ಹಿತ ವಾಗಿದೆ. ಇಲ್ಲೇ ಇನ್ನೂ ಸ್ವಲ್ಪ ಹೊತ್ತು ಕುಳಿತಿದ್ದು ಹೋಗೋಣ'

—ಎಂದ ಚಂದ್ರಶೇಖರ.

'ಹಾಗೇ ಆಗಲೇಳು. ಮನೇಲಿ ಕಡೆಯೋದು ಅಷ್ಟರಲ್ಲೇ ಇದೆ'

—ಎಂದು ವೆಂಕಟದಾಸಪ್ಪನವರು ಚಂದ್ರಶೇಖರನ ಮಾತಿಗೆ ಸಮ್ಮತಿ ಸಿದರು. ಇಬ್ಬರೂ ದೇವಾಲಯದ ಮುಂದಿನ ಮೆಟ್ಟಲುಗಳ ಮೇಲೆ ಕುಳಿತು ಕೊಂಡರು.

ಸಂಜೆಯ ಬೆಳಕಳಿದು ಮಬ್ಬುಕತ್ತಲು ಕವಿಯುತ್ತಿದ್ದಂತೆಯೇ, ಅಸ–ಮಾಧಾನಕರವಾಗಬಹುದಾದ ಆ ಮಾತನ್ನು ಹೇಗೆ ಆರಂಭಿಸುವುದು ಎಂಬ ಚಿಂತೆ ಚಂದ್ರಶೇಖರನ ಮನಸ್ಸನ್ನು ಕವಿಯುತ್ತಿತ್ತು. ಕೈಗೆ ಸಿಕ್ಕಿದ ಸಣ್ಣ ಕಡ್ಡಿಯೊಂದರಿಂದ ಮೆಟ್ಟಲ ಕೆಳಗಿನ ಮಣ್ಣಿನಲ್ಲಿ ಚಿತ್ರ ಕೆರೆಯುತ್ತಿದ್ದ. ಆತ ಸುಮ್ಮನೆ ಕುಳಿತುದನ್ನು ಕಂಡು ವೆಂಕಟದಾಸಪ್ಪನವರೇ—

'ಅಲ್ಲಾ ಭಾವ ಸುಮ್ಮನೆ ಕೂತು ತಪಸ್ಸು ಮಾಡಬೇಕೂಂತ ಇದ್ದರೆ ನನ್ನ ಯಾಕೆ ಕರೆದುಕೊಂಡು ಬಂದೆ?'

—ಎಂದು ಕೇಳಿ ಮೌನವನ್ನು ಮುರಿದರು.

'ಸುಮ್ಮನೆ ಕೂತುಕೊಳ್ಳುವುದಕ್ಕಲ್ಲ ದಾಸಣ್ಣ, ನಿನ್ನ ಹತ್ತಿರ ಏನೋ ಮಾತಾಡೋದಿತ್ತು. ಹೇಗೆ ಆರಂಭಿಸಲಿ ಅಂತ ಯೋಚಿಸ್ತಿದೀನಿ.'

'ನನ್ನ ಹತ್ತಿರ ಮಾತಾಡೋಕೆ ಯೋಚನೆ ಮಾಡಬೇಕೇ? ಸಂಕೋ ಚಾನೇ?'

'ಮಾತಿಗೆ ಸಂಕೋಚ ಇಲ್ಲ ದಾಸಣ್ಣ. ಆದರೆ ವಿಷಯ ಸಂಕೋಚಕ್ಕೆ ಕಾರಣವಾಗಿದೆ.'

'ಏನು ವಿಷಯ ಹೇಳು. ಎಂಥ ವಿಷಯವಾದರೂ ಸರಿಯೇ. ನೀನು ಸಂಕೋಚಪಟ್ಟುಕೊಳ್ಳಬೇಕಾದುದಿಲ್ಲ'

'ಹಾಗೇ—ಏನೋ ಹೇಳಿದ ಅಂತ ಅಸಮಾಧಾನಾನೂ ಮಾಡಬಾರದು. ನಿನಗೆ ಗೊತ್ತಿದೆ—ನಮಗೆಲ್ಲಾ ಬೇಕಾದದ್ದು ನೀನು ಚೆನ್ನಾಗಿರುವುದು. ಅದಕ್ಕಿಂತ ಹೆಚ್ಚಾಗಿ ನಮಗೆ ಬೇರೆ ಏನೂ ಬೇಡ.'

'ಆ ಮಾತಿಗೆ ಇಷ್ಟೆಲ್ಲಾ ಸಾಕ್ಷಿ ಬೇಕೇ? ನೀನು ಯಾವ ವಿಷಯ ಮಾತ ನಾಡಿದರೂ ನಾನು ಅಸಮಾಧಾನ ಮಾಡಿಕೊಳ್ಳುವುದಿಲ್ಲ.'

'ಅಷ್ಟಾದರೆ ಸರಿ—ನಾನು ಹೇಳಬೇಕೂಂತ ಇದ್ದದ್ದು...ನಿನ್ನ...ಗೌರಮ್ಮನ ...ವಿಷಯ...'

—ತಡೆತಡೆದು ಮಾತಾಡುತ್ತಾ ಹೇಳಿದ ಚಂದ್ರಶೇಖರ. ಆ ಮಾತು ಕೇಳಿ ವೆಂಕಟದಾಸಪ್ಪ ನಕ್ಕು ಹೇಳಿದರು.—

'ಇದೇನೇ ಆ ರಹಸ್ಯ. ಇನ್ನೇನು ಹೇಳ್ತಿಯೋಂತ ಇದ್ದೆ. ಊರಿಗೆಲ್ಲಾ ಗೊತ್ತಾಗಿರೋ ವಿಷಯ ಕಿವೀಲಿ ಹೇಳೋದೇನು ಬಂತು ಭಾವ ಊರಿ ನೋರೆಲ್ಲಾ ಕೇಳಿದ್ದಾಗಿದೆ. ಅದನ್ನು ನೀನು ಕೇಳಲಿಕ್ಕೆ ಇಷ್ಟು ಸಂಕೋಚಪಟ್ಟು ಕೊಳ್ಳಬೇಕೆ?'

ತಾನು ಹೆಸರಿಸಲೇ ಹೆದರುತ್ತಿದ್ದ ವಿಷಯವನ್ನು ಕೇಳಿ ವೆಂಕಟದಾಸಪ್ಪ ನಕ್ಕದುದನ್ನು ಕಂಡು ಚಂದ್ರಶೇಖರನಿಗೆ ಆಶ್ಚರ್ಯವಾಯಿತು. ಆ ಆಶ್ಚರ್ಯ ದಲ್ಲೇ ಹೇಳಿದ—

'ಇಂಥಾ ವಿಷಯ ಮಾತನಾಡುವಾಗಲೂ ಸಂಕೋಚವಿರುವುದು ಬೇಡ ಎಂದರೆ, ಮತ್ಯಾವದಕ್ಕೆ ಸಂಕೋಚಪಟ್ಟುಕೊಳ್ಳಬೇಕು?'

'ಹಾಗಲ್ಲ ಭಾವ ಯಾರಿಗೂ ತಿಳಿಯದಿದ್ದ ವಿಷಯವಾಗಿದ್ದರೆ, ನೀನು ಹೇಳು ವುದು ನ್ಯಾಯ. ಆದರೆ ಇದು ಹಾಗಲ್ಲ. ಎಲ್ಲರಿಗೂ ತಿಳಿದ ವಿಷಯ. ಈಗ ಸಂಕೋಚಪಟ್ಟುಕೊಂಡರೆ, ಕೋಟೆ ಬಿದ್ದಮೇಲೆ ಬಾಗಿಲು ಹಾಕಿದರು ಅಂದ ಹಾಗಾಗುತ್ತೆ?'

'ಊಹೂ, ಹಾಗಲ್ಲಾ ದಾಸಣ್ಣಾ.'

'ಮತ್ತೆ?'

'ನಾವು ಗಂಡಹೆಂಡಿರು ಜೊತೆಜೊತೆಯಾಗಿ ಮಲಗುವ ವಿಷಯ ಎಲ್ಲರಿಗೂ ಗೊತ್ತು. ಲೋಕದ ಸ್ತ್ರೀಪುರುಷರೆಲ್ಲರಿಗೂ ತಿಳಿದ ಸಮಾಚಾರ. ಅವರು ತಮ್ಮ ಅನುಭವದಿಂದಲೇ ಅರಿಯದ ಅಮೋಘ ವಿಷಯವೇನಲ್ಲ ಅದು. ಆದರೂ ಎಲ್ಲರಿಗೂ ಗೊತ್ತು ಎಂತ ನಾವು ಮಲಗುವ ಮನೆಯಲ್ಲಿ ರುವ ಮಂಚವನ್ನು ತಂದು, ಬೀದಿಯಲ್ಲಿ ಹಾಕುತ್ತೇವೆಯೇ? ಹಾಗೆ ಹಾಕಿದರೆ ಅದನ್ನು ಯಾರೂ ನಿರ್ಭಯ ಅನ್ನುವುದಿಲ್ಲ. ಅಸಭ್ಯತೆ ಅನ್ನುತ್ತಾರೆ. ನಾವು ನೋಡಿ ಎಂದಾಗ ಅವರು ತಾವೇ ಕಣ್ಣು ಮುಚ್ಚಿಕೊಳ್ಳುತ್ತಾರೆ.

—ಕಟುವಾಗಿ ಹೇಳಿದ ಚಂದ್ರಶೇಖರ.

'ಹೋಗಲಿ ಬಿಡು. ಆ ವಿಷಯ ಚರ್ಚಿಸಲಿಕ್ಕಲ್ಲವಲ್ಲ ನಾವು ಇಲ್ಲಿಗೆ ಬಂದದ್ದು. ನಾನು ಬತ್ತಲೆ ನಿಲ್ಲಬೇಕೆಂತಲೂ ಹೇಳಲಿಲ್ಲ. ಬೀದಿಯಲ್ಲಿ ಮಲಗಬೇಕು ಎಂತಲೂ ಹೇಳಲಿಲ್ಲ. ನಾನು ಹೇಳಿದುದಿಷ್ಟೇ—ನಮ್ಮ ನಮ್ಮ ನಡುವೆ ಈ ವಿಷಯ ಚರ್ಚಿಸಲು, ನೀನು ಮುಜುಗುಬ್ಬಸಪಡುವುದು ಅನಗತ್ಯ ಅಂತ. ಅಷ್ಟೆ.'

'ನಿಜ ಆ ಮಾತೆಲ್ಲಾ ಕಟ್ಟಿಕೊಂಡು ಈಗ ಆಗಬೇಕಾದದ್ದೇನು. ಮುಖ್ಯ ನಾನು ನಿನಗೆ ಹೇಳಬೇಕೆಂದಿದ್ದುದಿಷ್ಟೆ—ನಿನಗೆ, ಈ ವಯಸ್ಸಿನಲ್ಲಿ ಈ ವ್ಯಾಮೋಹ ಸಲ್ಲದು ಎಂತ. ಅಲ್ಲದೆ—ನೀನು ಹುಟ್ಟಿರುವ ವಂಶ ಎಂಥದು? ಇಂಥ ಕೆಲಸದಿಂದ ನಿನ್ನೊಬ್ಬನಿಗೇ ಅಲ್ಲ, ನಿನ್ನೊಬ್ಬನಿಂದಾಗಿ ಇಡೀ ವಂಶಕ್ಕೇ ಎಂಥ ಅಪಖ್ಯಾತಿ ತಟ್ಟುತ್ತದೆ ಎನ್ನುವುದನ್ನು ಯೋಚಿಸು. ತಂದೆತಾಯಿಗಳು ಮಕ್ಕಳಾಗಲಿ ಅಂತ ಬಯಸುವುದು, ಅವರಿಂದ ತಮ್ಮ ಹೆಸರು, ವಂಶದ ಹೆಸರು ಉಳಿಯಲಿ ಎಂದೇ ಹೊರತು, ಅದು ಹಾಳಾಗಲಿ ಅಂತ ಅಲ್ಲ. ಅಲ್ಲವೇ?'

'ನೀನು ಹೇಳುವುದು ಎಲ್ಲಾ ನಿಜ ಭಾವ.'

'ನೀನು ದಡ್ಡನಲ್ಲ, ಅಜ್ಞನಲ್ಲ. ನಾನು ಹೇಳುವುದು ಯೋಚಿಸಿದರೆ ನಿನಗೇ ಹೊಳೆಯದ ವಿಷಯವಲ್ಲ. ನೀನೇ ಯೋಚನೆಮಾಡು—ಹೀಗೆ ಮಾಡಬಹುದೇ? ನಿನ್ನ ಯಾವುದೋ ಒಂದು ಗಳಿಗೆಯ ವ್ಯಾಮೋಹದಿಂದ ನಿನ್ನನ್ನು ಹಡೆದವರಿಗೆ, ಆಪ್ತರಿಗೆ ಎಷ್ಟು ಸಂಕಟವಾಗಿದೆ ಯೋಚಿಸು?'

'ಅದೆಲ್ಲಾ ನಾನು ಬಲ್ಲೆ ಭಾವ,'

'ಒಲ್ಲೆ ಎಂದು ಬಿಟ್ಟರೆ ಅಲ್ಲಿಗೆ ಕೆಲಸ ಮುಗಿದ ಹಾಗಾಯಿತು. ಜಾಣತನಕ್ಕೆ, ವಿವೇಕಕ್ಕೆ ಏನು ಗುರುತು? ತಪ್ಪುಮಾಡದಿರುವುದೇ ತಾನೇ?'

'ನಿಜ'

'ಆಯಿತು ನಾವು ಯಾರೂ ದೇವತೆಗಳಲ್ಲ. ಎಲ್ಲಾ ಮನುಷ್ಯರೇ. ಎಲ್ಲರದೂ ಉಪ್ಪು, ಹುಳಿ ತಿನ್ನುವ ದೇಹ. ಎಂತೆಂಥ ಋಷಿ, ಮಹರ್ಷಿಗಳನ್ನೇ ಬಿಡಲಿಲ್ಲ ಹೆಣ್ಣಿನ ಹಂಬಲ. ಅಂಥವರಲ್ಲಿ, ಪ್ರಾಯದಲ್ಲಿ ನೀನು ಒಮ್ಮೆ ಹೆಜ್ಜೆ ಜಾರಿದರೆ, ಅದು ಬ್ರಹ್ಮಹತ್ಯಾ ದೋಷ ಅಂತ ನಾನೇನೂ ಹೇಳುವುದಿಲ್ಲ. ಹಾಗೆ ಮಾಡಬಾರದಾಗಿತ್ತು. ಆಯಿತು. ಏನೋ ಮಬ್ಬಿನಲ್ಲಿ ತಪ್ಪು ದಾರಿ ತುಳಿದೆ. ತುಳಿದದ್ದು ತಪ್ಪುದಾರಿ ಎಂತ ತಿಳಿದ ಮೇಲೂ ಅದೇ ದಾರಿಯಲ್ಲೇ ಹೋಗುವುದರಲ್ಲಿ ಏನು ಅರ್ಥ ಹೇಳು? ನಾನು ಹೇಳುತ್ತೇನೆ ಕೇಳು ದಾಸಣ್ಣ—ಅತ್ತೆ ಹಾಸಿಗೆ ಹಿಡಿದಿರುವುದು ಈ ಕೊರಗಿನಿಂದ. ಮಾವಯ್ಯನೂ ಅರ್ಧ ಆಗಿ ಹೋಗಿದ್ದಾನೆ. ಈ ಚಿಂತೇಲಿ. ಸರಿಯೋ ತಪ್ಪೋ—ನೀನು ಸುಖಪಡುತ್ತಾ, ನಿನ್ನ ಸುಖಕ್ಕಾಗಿ ಇತರರನ್ನು ನರಳಿಸುವುದರಲ್ಲಿ ಏನು ಅರ್ಥ?'

'ಹೂ.'

'ಹೂ ಅಂದರೆ—ನಾನು ಹೇಳಿದುದು ತಪ್ಪೇ?'

'ಅಲ್ಲ ಸತ್ಯ. ಹದಿನಾರಾಣೆ ಸತ್ಯ'

'ನಾನಾಡುವುದು ಸತ್ಯ ಎಂದು ನಿನಗೆ ತಿಳಿದಿದ್ದರೆ, ಅದು ಸರಿ ಎಂದು ನಂಬಿಕೆಯಾಗಿದ್ದರೆ, ಈಗಲಾದರೂ ನಿನ್ನ ಚರ್ಯೆ ಏಕೆ ಬದಲಾಯಿಸಬಾರದು. ಅದಕ್ಕೇನು ಅಭ್ಯಂತರ?'

'ಬಹಳ ದೊಡ್ಡ ಅಭ್ಯಂತರವಿದೆ ಭಾವ!'

'ಏನು ಅಭ್ಯಂತರ? ನಿನ್ನ ತಲೆ!'

—ಚಂದ್ರಶೇಖರ ಸಹನೆ ಸೋತು ಕೇಳಿದ.

'ನೋಡು ಭಾವ, ನನ್ನ ಮಾತಿನಿಂದ ನಿನಗೆ ಸಿಟ್ಟು ಬರುವುದಾದರೆ, ನಾವು ಈ ವಿಷಯ ಚರ್ಚಿಸುವುದು ಅನಗತ್ಯ. ಅಣ್ಣನ ಹಾಗೇ ನೀನೂ ಸಿಟ್ಟುಗೊಂಡು ನನ್ನ ಹತ್ತಿರ ಮಾತು ಬಿಡುವುದಾದರೆ ಬಿಡು, ನಾನು ಬೇಡ ಅನ್ನುವುದಿಲ್ಲ. ಹಾಗಲ್ಲದೆ ವಿಷಯ ತಿಳಿದುಕೊಳ್ಳಬೇಕು ಎಂಬ ಆಸೆ ಇದ್ದರೆ

ಸಮಾಧಾನವಾಗಿ ಕೇಳು. ಎಲ್ಲಾ ವಿಷಯವನ್ನು ಹೇಳುತ್ತೇನೆ. ಯಾವುದನ್ನೂ ಮುಚ್ಚುಮರೆಮಾಡುವುದಿಲ್ಲ.'

—ಚಂದ್ರಶೇಖರನ ಅಸಹನೆಯ ಮಾತನ್ನು ಕೇಳಿ ವೆಂಕಟದಾಸಪ್ಪನವರೂ ಅಷ್ಟೇ ನಿರ್ದಾಕ್ಷಿಣ್ಯವಾಗಿ ಹೇಳಿದರು. ಆ ಮಾತು ಕೇಳಿ, ಚಂದ್ರಶೇಖರನ ಮಿದುಳಿನಲ್ಲಿ ಏರಿದ್ದ ಕಾವು ಇಳಿದು ಹೋಗಿ—

'ಸರಿ ಅದೇನು ಹೇಳು'

—ಎಂದ.

ಆ ವಿಷಯವನ್ನು ನಿನಗೆ ಯಾರು ಹೇಳಿದರೋ ನನಗೆ ಗೊತ್ತಿಲ್ಲ ಅಣ್ಣನೊ, ಅಮ್ಮನೊ, ಅಥವಾ ಅಮ್ಮನಿಂದ ಇದನ್ನು ಕೇಳಿದ ರಾಜೇಶ್ವರಿಯೋ ಯಾರೋ ಹೇಳಿರಬೇಕು. ಯಾರಾದರೂ ಹೇಳಿರಲಿ. ಹೇಳಿ ಒಳ್ಳೆಯದನ್ನೇ ಮಾಡಿದರು. ರಾಜೇಶ್ವರಿಗೆ ಇದು ಗೊತ್ತಿದೆಯೇ?'

'ಹೂ, ಅವಳೇ ನನಗೆ ಹೇಳಿದ್ದು.'

'ಅದು ಮತ್ತೂ ಒಳ್ಳೆಯದಾಯಿತು. ಅವರು ಯಾರೂ ರಾಜೇಶ್ವರಿಗೆ ಹೇಳದಿದ್ದರೆ, ನಾನೇ ರಾಜೇಶ್ವರಿಗೆ ಈ ವಿಷಯವನ್ನು ಹೇಳಿ ಈ ಮನೆಯಲ್ಲಿ ಮತ್ತೆ ಶಾಂತಿಯನ್ನು ಮೂಡಿಸಲು ಸಹಾಯಮಾಡು ಅಂತ ಕೇಳಬೇಕು ಅಂತ ಇದ್ದೆ.'

'ಏಕೆ?'

'ನಾನೂ ಮನುಷ್ಯನಲ್ಲವೇ ಭಾವ. ಅಣ್ಣ ಹಾಗಿದ್ದರೆ, ಅಮ್ಮ ಹಾಸಿಗೆ ಹಿಡಿದು ಮಲಗಿದ್ದರೆ, ನನಗೆ ಸಂತೋಷವೇ? ಅವರಿಗಾಗುವ ವ್ಯಥೆಯ ಹತ್ತರಷ್ಟು ವ್ಯಥೆ ನನಗಾಗುತ್ತದೆ.'

'ವ್ಯಥೆಯಾಗುವುದು ನಿಜವಾಗಿದ್ದರೆ ಅವರು ಹೇಳಿದ ಹಾಗೆ ಮಾಡಿ, ಅವರು ಸಂತೋಷವಾಗಿರುವಂತೆ ಮಾಡಲು ಸಾಧ್ಯವಿಲ್ಲವೇ?'

ಸಾಧ್ಯವಿದ್ದಿದ್ದರೆ—ನಾನು ಆ ಕೆಲಸ ಮಾಡದೆ ಇರುತ್ತಿದ್ದೇನೇ ಭಾವ. ಅಮ್ಮ, ಅಣ್ಣ ಸುಖವಾಗಿರುವುದಕ್ಕೆ ಬೇಕೆಂದರೆ ನನ್ನ ಬೆನ್ನಚರ್ಮ ತೆಗೆದು ಅವರ ಕಾಲುಗಳಿಗೆ ಜೋಡು ಮಾಡಿಸಬಲ್ಲೆ.'

'ಅಷ್ಟು ದೂರ ಹೋಗುವುದೇಕೆ—ಗೌರಮ್ಮನನ್ನು ಬಿಟ್ಟರೆ ಸುಲಭವಾಗಿ ಮುಗಿಯುತ್ತದಲ್ಲ. ನಿನ್ನ ಬೆನ್ನ ಚರ್ಮ ತೆಗೆಯುವುದೂ ಬೇಡ, ಇವರ ಕಣ್ಣು ಅತ್ತು ಅತ್ತು ಕುರುಡಾಗುವುದೂ ಬೇಡ.

'ಈ ಕೆಲಸದ ಮುಂದೆ ಚೆನ್ನ ಚರ್ಮ ಸುಲಿದುಕೊಳ್ಳುವುದೇ ಸುಲಭ ವಾದದ್ದು ಭಾವ.'

'ಇದು ಅಂಥಾ ಕಷ್ಟದ ಕೆಲಸವೇನು?'

'ಹೂ. ನೀನು ಈ ಕಥೆಯನ್ನೆಲ್ಲಾ ಕೇಳಿ ನನ್ನ ವಿಷಯದಲ್ಲಿ ಏನು ಅಭಿ ಪ್ರಾಯ ಇಟ್ಟುಕೊಂಡಿದ್ದೀಯೋ, ಗೌರಿ ಅಂದರೆ ಏನೆಂದು ತಿಳಿದುಕೊಂಡಿ ದ್ದೀಯೋ ನನಗೆ ಗೊತ್ತಿಲ್ಲ. ಎಲ್ಲರ ಹಾಗೇ ನೀನೂ, ನಾನೂ ವ್ಯಭಿಚಾರಿ, ಅವಳು ಹಾದರಗಿತ್ತಿ ಎಂದು ತಿಳಿದುಕೊಂಡಿದ್ದರೂ ಆಶ್ಚರ್ಯವಿಲ್ಲ. ಆದರೆ ಅದು ಸತ್ಯವಲ್ಲ.'

'ಅಂದರೆ—ನಿಮ್ಮಿಬ್ಬರಲ್ಲಿ ಸಂಪರ್ಕವೇ ಇಲ್ಲವೆಂದೇ?'

'ಇದೆ'.

'ಮತ್ತೆ?'

'ಆದರೆ ನಮ್ಮ ಸಂಪರ್ಕ ವ್ಯಭಿಚಾರದ ಪಾಪಮಾರ್ಗವಲ್ಲ; ಗಂಡಸರು ಸ್ತ್ರೀಗೆ ನಾಯಿಗೆ ಹಾಕುವ ಸ್ಥಾನವೃತ್ತಿಯೂ ನಮ್ಮದಲ್ಲ.'

'ಬೇರೆ ಏನು?'

'ಒಂದು ದಿನ, ಒಂದೇ ಒಂದು ದಿನ ನಮ್ಮಿಬ್ಬರ ಬಾಳಿನಲ್ಲಿ ಆ ಪಾಪದ ಸರ್ಪ ಹೆಡೆ ಬಿಚ್ಚಿತ್ತು. ತನ್ನ ಸ್ನೇಹದ ದೈವತ್ವದಿಂದ ವೀರಣ್ಣ ಆ ಕಾಳಿಂಗ ಮರ್ದನ ಮಾಡಿಬಿಟ್ಟ. ನಾನೂ—ಗೌರಿ ಇಂದು ಸ್ತ್ರೀ ಲಂಪಟ—ಹಾದರಗಿತ್ತಿ ಯರಲ್ಲ, ಭಾವ—ನಾವು ದಂಪತಿಗಳು. ದೀಪ ಸಾಕ್ಷಿಯಾಗಿ ಕೈ ಹಿಡಿದ ದಂಪತಿ ಗಳು.'

ವೆಂಕಟದಾಸಪ್ಪನವರು ಹೇಳಿದುದನ್ನು ಕೇಳಿ ಚಂದ್ರಶೇಖರ ಪಾತಾಳ ಕ್ಕಿಳಿದು ಹೋದ. ಅವನ ಕಿವಿಗಳನ್ನೇ ಅವನು ನಂಬುವುದಂ ಅಸಾಧ್ಯವಾಯಿತು.

'ಅಂದರೆ...ಅಂದರೆ...ನೀನು ನಾಯಕರೋಳ್ನ ಮದುವೆಮಾಡಿ ಕೊಂಡೆಯಾ?'

'ಮದುವೆ!—ಹೂ—ಒಂದು ದೃಷ್ಟಿಯಲ್ಲಿ ಆದೇ ಅನ್ನು.'

'ಅಂದರೆ—'

'ಲೋಕದ ದೃಷ್ಟಿಯಲ್ಲಿ ನಮ್ಮದು ಮದುವೆಯಲ್ಲ. ಆದರೆ ನಮ್ಮ ದೃಷ್ಟಿಯಲ್ಲಿ ಮದುವೆಯೇ'.

'ಇದೇನು, ಏನು ಕಥೆ, ಕೊಂಚ ವಿವರವಾಗಿ ಹೇಳು ವಾಸಣ್ಣ. ನನಗಂತೂ ಯಾಕೊ ನಾನು ಭೂಮಿ ಮೇಲೆ ಇದೀನೋ' ಮತ್ತೆಲ್ಲಾದರೂ ಇದೀನೋ ಅನಿಸ್ತಾ ಇದೆ.'

'ಇದು ಅಂಥ ಅಲೌಕಿಕ ಘಟನೆಯೇನೂ ಅಲ್ಲ ಭಾವ'

—ಎಂದು ವೆಂಕಟದಾಸಪ್ಪ, ಪಗಡೆಯಾಟದ ನೆಪದಿಂದ ತನಗೂ ಗೌರಮ್ಮನಿಗೂ ಪರಿಚಯ ಬೆಳೆದ ದಿನದಿಂದ, ಕೊನೆಗೆ ವೀರಣ್ಣ ದೀಪ ಸಾಕ್ಷಿಯಾಗಿ ಅವರಿಬ್ಬರನ್ನು ಗಂಡ–ಹೆಂಡಿರು ಎಂದು ಸಾರಿದವರೆಗೂ ನಡೆದುದನ್ನೆಲ್ಲಾ ಹೇಳಿ—

'ಈಗ ಹೇಳು ಭಾವ. ನನ್ನ ಸ್ಥಾನದಲ್ಲಿ ನೀನೇ ಇದ್ದಿದ್ದರೆ ಏನು ಮಾಡುತ್ತಿದ್ದೆ?'

—ಎಂದು ಕೇಳಿದರು ವೆಂಕಟದಾಸಪ್ಪ.

ಅವರು ಹೇಳಿದುದನ್ನೆಲ್ಲಾ ಕೇಳಿದ ಬಳಿಕ ಚಂದ್ರಶೇಖರನೂ ಹತ್ತು ನಿಮಿಷ ಮೌನವಾಗಿ ಕುಳಿತ. ವೆಂಕಟದಾಸಪ್ಪನವರೇ—

—'ಏಕೆ ಭಾವ ಸುಮ್ಮನೆ ಕುಳಿತೇ'

—ಎಂದರು.

'ಏನು ಹೇಳಬೇಕೋ ನನಗೊಂದೂ ತೋಚುತ್ತಿಲ್ಲ ವಾಸಣ್ಣ. ಇದು ಹುಚ್ಚೇ, ಬೆಪ್ಪೇ, ಶಿವಲೀಲೆಯೇ ಒಂದೂ ನನಗೆ ಅರ್ಥವಾಗುತ್ತಿಲ್ಲ. ಇದೆಲ್ಲಾ ಕೇಳಿ ನಿನ್ನನ್ನು ಏನು ಅನ್ನಬೇಕೋ, ಗೌರಮ್ಮನನ್ನು ಏನೆನ್ನಬೇಕೋ, ವೀರಣ್ಣನಿಗೆ ಏನು ಹೆಸರಿಡಬೇಕೋ ನನಗೊಂದೂ ಗೊತ್ತಾಗುತ್ತಿಲ್ಲ.'

'ನಿಜ ಭಾವ, ನಿನ್ನ ಸಂದಿಗ್ಧವೇ ನನಗೂ ನಾನು ಏನೆಂಬುದೇ ನನಗೆ ಅರ್ಥವಾಗುತ್ತಿಲ್ಲ. ಇರಲಿ–ನಾನು ಪಾಪಿಯೇ ಇರಬಹುದು. ಇರಬಹುದು ಏನು–ನಾನು ಪಾಪಿ. ಆದರೆ ವೀರಣ್ಣ ಪಾಪಿಯಲ್ಲ, ಗೌರಿ ಪಾಪಿಯಲ್ಲ, ಅವರು ದೇವತೆಗಳು. ಯಾವ ಕುಲದಲ್ಲಿ ಹುಟ್ಟಿದ್ದರೇನು ಭಾವ–ಆ ಹೃದಯ ದೈವೀ ಹೃದಯ. ಆ ದಿನ ಆ ಮಾತಾಡಿದ ವೀರಣ್ಣ ಮತ್ತೆ ಇಂದಿನವರೆಗೆ ಗೌರಿಯ ಜೊತೆಗೆ ಹಾಸಿಗೆ ಹಾಕಿಕೊಂಡಿಲ್ಲ. ಗೌರಿ–ನನ್ನ ಕೈಹಿಡಿದು, ಶಾಸ್ತ್ರೋಕ್ತವಾಗಿ ಲಗ್ನವಾದ ಹೆಂಡತಿಯೂ ಹಾಗಿರಲಾರಳು. ಮೊದಲು ಮೋಹ ನಮ್ಮಿಬ್ಬರನ್ನು ಸೆಳೆಯಿತು. ಈಗ ಅವಳಿಗೆ ನಾನು ಒಂದು ಗಳಿಗೆ ಕಣ್ಣುಮರೆಯಾ

ದರೂ ಬೆಂಕಿಗೆ ಬಿದ್ದ ಹುಳದ ಹಾಗೆ ಚಡಪಡಿಸುತ್ತಾಳೆ. ಅವಳ ಕಣ್ಣಲ್ಲಿ ಒಂದು ಹನಿ ನೀರು ಕಂಡರೆ. ವೀರಣ್ಣ ಪ್ರಾಣ ಬಿಡುತ್ತಾನೆ. ನಾನು ಮಾಡಿದ ಅಪರಾಧಕ್ಕೆ ನನ್ನ ಜೀವ ಬಲಿಯಾಗಬೇಕಾಗಿತ್ತು. ಆದರೆ ವೀರಣ್ಣ ಸ್ನೇಹಕ್ಕಾಗಿ ತನ್ನ ಜೀವವನ್ನೇ ನನಗೆ ಧಾರೆ ಎರೆದುಬಿಟ್ಟ. ಆ ಸ್ನೇಹಕ್ಕೆ ದ್ರೋಹ ಬಗೆಯಲೇ? ಈ ವಿಶ್ವಾಸಕ್ಕೆ ಬೆಂಕಿ ಹಚ್ಚಲೆ? ಹಾಗೆ ಮಾಡಿದರೆ ಮನುಷ್ಯರು ಏನಾದರೂ ಅನ್ನಲಿ—ದೇವರು ಒಪ್ಪುವನೇ?'

'ಈ ಪ್ರಶ್ನೆ ತುಂಬಾ ತೊಡಕಾಗಿದೆ ದಾಸಣ್ಣ—ನಾನೇನೂ ಹೇಳಲಾರೆ. ನೀನು ಹೇಳಿದುದನ್ನು ಕೇಳಿದ ಮೇಲೆ. ನೀವಿಬ್ಬರೂ ಏನಾದರೂ ಆಗಿರಬಹುದು. ವೀರಣ್ಣನೇನೋ ದೇವತೆಯೇ ಅಂತ ನನಗನ್ನಿಸುತ್ತದೆ. ಮನುಷ್ಯಮಾತ್ರದವನಿಗೆ ಅಂಥ ಸಹನೆ ಬರಲಾರದು.'

'ನಿಜ—ವೀರಣ್ಣ ದೇವರೆ. ಹತ್ತು ಸಲ ಹೇಳು ಆ ಮಾತು. ಈಗ ಹೇಳು ನಾನೇನು ಮಾಡಲಿ? ಅಣ್ಣನ ಮಾತು ಕೇಳಿ. ವೀರಣ್ಣನ ಹೃದಯವನ್ನು ಮುರಿಯಲೇ? ಅಥವಾ ಅಣ್ಣನನ್ನು ಮೆಚ್ಚಿಸುವ ಸಲುವಾಗಿ ನೀನು ಹೇಳಿದ ಹಾಗೇ ಮಾಡುತ್ತೇನೆಂದು. ಕಳ್ಳತನದಲ್ಲಿ ವೀರಣ್ಣನ ಮನೆಗೆ ಹೋಗಿ ಬರಲೆ? ಅಂಥ ಮೋಸ ಆತ್ಮವಂಚನೆ ನನಗೆ ಬೇಕಾಗಿಲ್ಲ ಭಾವ. ಅದಕ್ಕೇ ಅವಳನ್ನು ಬಿಡುವುದು ಸಾಧ್ಯವಿಲ್ಲ ಎಂತ ಹೇಳಿದೆ. ಅದು ಸತ್ಯ. ಸತ್ಯವನ್ನು ಕಂಡು ಮುನಿಸಿಕೊಂಡರೆ ನಾನೇನು ಮಾಡಲಿ ಹೇಳು. ಸ್ನೇಹಕ್ಕೆ ದ್ರೋಹ ಬಗೆಯಲೇ. ಸತ್ಯಕ್ಕೆ ಅಪಚಾರ ಮಾಡಲೇ? ಈ ಕತ್ತರಿಯಲ್ಲಿ ಸಿಕ್ಕಿ ನನ್ನ ಹೃದಯ ಎಷ್ಟು ನರಳುತ್ತಿದೆ ಎನ್ನುವುದನ್ನು ಯಾರೂ ಅರಿಯರು ಭಾವ.'

—ನಿರಾಶೆಯ ಕಹಿ ಧ್ವನಿಯಲ್ಲಿ ಹೇಳಿದರು ವೆಂಕಟದಾಸಪ್ಪ. ಹಾಗೇ ಮಾತನ್ನು ಮುಂದುವರಿಸಿ—

'ಅಮ್ಮ ಹಾಸಿಗೆ ಹಿಡಿದಿದಾಳೆ. ಅಣ್ಣ ನನ್ನೊಂದಿಗೆ ಮಾತನಾಡುವುದನ್ನೇ ಬಿಟ್ಟಿದ್ದಾನೆ. ಇದೆಲ್ಲಾ ನನಗೇನು ಸುಖ, ಸಂತೋಷ ಅಂದು ಕೊಂಡಿದೀಯ? ಎಷ್ಟೋ ಸಲ ಇವನ್ನೆಲ್ಲ ನೋಡಲಾರದೆ ನನಗೆ ಎಲ್ಲಾದರೂ ದೇಶಾಂತರ ಹೋಗಬೇಕು. ಭಾವಿಯಲ್ಲೋ ಕೆರೆಯಲ್ಲೋ ಬಿದ್ದು ಈ ಸಮಸ್ಯೆ ಮುಗಿಸಬೇಕು ಎನಿಸಿದೆ.'

'ಸಧ್ಯ—ಅನಿಸಿದ್ದನ್ನು ಮಾಡಲು ಹೋಗಲಿಲ್ಲವಲ್ಲ—ಅದೇ ದೊಡ್ಡದು

ಎಲ್ಲೆಲ್ಲಿ ಹೋದರೂ ಮೊದಲಿಗೇ ಬರಬೇಕು. ಈಗ ಏನು ಮಾಡಬೇಕು ಅಂತೀಯ?'

'ಅದೇ ನನಗೂ ಬಗೆಹರಿಯದ ಸಮಸ್ಯೆ. ಹೀಗೆ ಮಾಡಬೇಕು ಅಂತ ತಿಳಿದಿದ್ದರೆ ಮಾಡಿಬಿಡುತ್ತಿದ್ದೆ. ತಿಳಿಯದೇ ಇದ್ದುದರಿಂದಲೇ, ದೇವರ ಮನಸ್ಸಿನಲ್ಲಿ ಏನಾಗಬೇಕು ಅಂತ ಇದೆಯೋ ಹಾಗಾಗಲಿ ಅಂದುಕೊಂಡು ಸುಮ್ಮನಾಗಿ ಬಿಟ್ಟಿದ್ದೇನೆ.'

'ಸುಮ್ಮನಿದ್ದರೆ ಏನಾದಹಾಗಾಯಿತು. ಇದು ಬಗೆಹರಿಯಲು ಏನಾದರೂ ದಾರಿ ಕಂಡು ಹಿಡಿಯಲೇಬೇಕು. ತಂದೆ ಮಕ್ಕಳು ರವಿ–ಶನಿಗಳ ಹಾಗೆ ಒಬ್ಬರಿಗೊಬ್ಬರು ಮೊಕ ತಿರುಗಿಸಿಕೊಂಡಿದ್ದರೆ ಏನು ಅರ್ಥ? ಮನೆಯಲ್ಲಿ ನಡೆದಿರುವ ರಾದ್ಧಾಂತ ಎಲ್ಲಾ ವೀರಣ್ಣನಿಗೂ ಗೌರಮ್ಮನಿಗೂ ತಿಳಿದಿದೆಯೋ?'

'ಊರಿನಲ್ಲಿ ಯಾರಿಗೆ ತಿಳಿದಿಲ್ಲ. ಎಲ್ಲರಿಗೂ ತಿಳಿದಿದೆ.'

—ಕರ್ಕಶವಾಗಿ ಹೇಳಿದರು ವೆಂಕಟದಾಸಪ್ಪ.

'ಅದಕ್ಕೆ ಅವರು ಏನು ಹೇಳಿದರು.'

'ಹಡೆದೋರು ದುಃಖ ಪಡೋದು ಬ್ಯಾಡ. ಹಣೇಲಿ ಬರೆದಿದ್ದಾಗಲಿ. ನೀವಾದರೂ ಸುಖವಾಗಿರಿ ಎಂದರು. ನನ್ನ ಸಂತೋಷವೇ ತಮ್ಮ ಸಂತೋಷ ಅಂದುಕೊಂಡಿರುವ ಜನ ಅವರು. ಅವರು ಅದಲ್ಲದೆ ಮತ್ತೇನು ತಾನೇ ಹೇಳಬಲ್ಲರು. ಆದರೆ ಅವರು ಹಾಗೆ ಹೇಳಿದ್ದೇ ಸಾಕು ಅಂತ ಅವರಿಬ್ಬರನ್ನು ಕಣ್ಣೀರಿನಲ್ಲಿ ಅದ್ದಿ ಬಂದರೆ—ನಾನೂ ಒಬ್ಬ ಮನುಷ್ಯನೇ?'

'ಅದು ಸರಿಯಲ್ಲ. ಹೋಗಲಿ, ಇದನ್ನೆಲ್ಲಾ ಮಾವಯ್ಯನಿಗೂ ಹೇಳಿದೆಯೇನು?'

'ಅವನಿಗೆ ಇದೆಲ್ಲಾ ಕೇಳುವಷ್ಟು ಸಹನೆ ಎಲ್ಲಿದೆ ಭಾವಾ. ಅವರು ಹೇಳುವುದಿಷ್ಟೇ– ನಾವು ಹೇಳಿದ ಹಾಗೆ ಮಾಡು, ಮತ್ತೆ ಆ ಕಡೆ ಕಾಲಿಡ ಬೇಡ. ಅದು ಆಗುವುದಿಲ್ಲ ಎಂದೆ. ಅದಕ್ಕೇ ಇಬ್ಬರಿಗೂ ಈಗ ನನ್ನ ಮೇಲೆ ಬೆಟ್ಟದಷ್ಟು ಮುನಿಸು. ಅದಕ್ಕೆ ನಾನೂ ರಾಜೇಶ್ವರಿಯ ಮುಂದೆ ಈ ವಿಷಯವನ್ನೆಲ್ಲಾ ಹೇಳಿ ನೀನೇ ಅಮ್ಮನಿಗೆ ಸರಿಯಾಗಿ ಹೇಳು, ಎಂದು ಹೇಳ ಬೇಕೆಂದಿದ್ದೆ ಅದಾಗಲಿಲ್ಲ, ಹೋಗಲಿ ನೀನಾದರೂ ಇರುವ ವಿಷಯ ತಿಳಿದುಕೊಂಡೆಯಲ್ಲ. ನೀನೇ ಅಣ್ಣನಿಗೂ ಅಮ್ಮನಿಗೂ ತಿಳಿಸಿ ಹೇಳು. ಆಗಲಾದರೂ ಅವರ,

ಕೋಪ ಕೊಂಚ ಇಳಿದು, ಅಮ್ಮ, ಎದ್ದು ಓಡಾಡುವ ಹಾಗಾದರೆ ನಾನು ಭಾಗ್ಯವಂತ. ನನಗಾಗಿ ಅಷ್ಟು ಮಧ್ಯಸ್ಥಿಕೆ ಮಾಡು ಪಾಪ. ನಿನ್ನ ಉಪಕಾರ ಜನ್ಮ ಜನ್ಮಕ್ಕೂ ಮರೆಯುವುದಿಲ್ಲ.'

ಚಂದ್ರಶೇಖರನನ್ನು ಅಂಗಲಾಚಿ ಕೇಳಿದರು, ವೆಂಕಟದಾಸಪ್ಪ.

'ಆಯಿತು. ನಾನೂ ಹೇಳುವುದಷ್ಟು ಹೇಳುತ್ತೇನೆ. ಮುಂದಿನದು ದೈವಚಿತ್ತ'

—ಎಂದು ಚಂದ್ರಶೇಖರ—

'ನಾನು ಊರಿಗೆ ಹೋಗುವ ಮೊದಲು ವೀರಣ್ಣನನ್ನು ಒಂದು ಸಲ ನೋಡಬೇಕು ದಾಸಣ್ಣ'

—ಎಂದ.

'ನೋಡಬೇಕು ಅಂದರೆ ಅವನ ಮನೆಗೆ ಹೋಗಬೇಕು.'

'ಏಕೆ ಬೇರೆಲ್ಲೂ ಬರುವುದಿಲ್ಲವೆ?'

'ಊಹೂ—ಆ ಘಟನೆಯಾದಾಗಿನಿಂದ ಊರಜನರ ಕಣ್ಣಿಗೆ ಅವನು ಕೆಂಡವಾಗಿದಾನೆ. ಈ ಊರಿನ ಪೊಲಸು ಜನದ ಬಾಯಲ್ಲಿ ಅನ್ನಬಾರದ ಮಾತೆಲ್ಲಾ ಅನ್ನಿಸಿಕೊಂಡು ಹಣ್ಣಾಗಿ ಹೋಗಿದೆ ಅವನ ಹೃದಯ.'

'ಪಾಪ!'

'ಅದಕ್ಕೆ ಈಗ ವೀರಣ್ಣ ಮನೆಬಿಟ್ಟೇ ಹೊರಡುವುದಿಲ್ಲ. ಗೌರಿಯೂ ಅಷ್ಟೆ. ನಿನಗೇನೂ ಅಭ್ಯಂತರವಿಲ್ಲದಿದ್ದರೆ ಅಲ್ಲಿಗೇ ಹೋಗೋಣ. ವೀರಣ್ಣನೊಬ್ಬನನ್ನೇ ಏನು, ಗೌರಿಯನ್ನೂ ನೋಡುವೆಯಂತೆ.'

—ಎಂದರು ವೆಂಕಟದಾಸಪ್ಪ.

'ಅಭ್ಯಂತರವೇನು ಬಂತು. ಆಗತ್ಯವಾಗಿ ಆಗಲಿ'

—ಎಂದ ಚಂದ್ರಶೇಖರ.

ಇಬ್ಬರೂ ಕತ್ತಲಾವರಿಸಿದ ಕೊಳದ ಬಳಿಯಿಂದ ಮನೆಗೆ ಹಿಂದಿರು ಗಿದರು.

ಆ ರಾತ್ರಿಯೇ ಚಂದ್ರಶೇಖರ ನಡೆದ ವಿಷಯವನ್ನೆಲ್ಲಾ ರಾಜೇಶ್ವರಿಗೆ ಹೇಳಿ—

'ಇದು ಮಹಾ ವಿಚಿತ್ರ ಸಮಸ್ಯೆ ರಾಜಿ. ಇದರಲ್ಲಿ ಯಾರು ಸರಿ, ಯಾರು ತಪ್ಪು ಎಂದು ಹೇಳುವುದೇ ಕಷ್ಟ. ಏನಾದರೂ ದಾಸಣ್ಣ ಗೌರಮ್ಮನನ್ನಂತೂ

ಬಿಡುವ ಹಾಗಿಲ್ಲ. ಬಿಡು ಎಂದು ಹೇಳಲು ನಮಗೂ ಬಾಯಿ ಬರುವುದಿಲ್ಲ, ನಡೆದುದನ್ನೆಲ್ಲಾ ಕೇಳಿದ ಮೇಲೆ.'

'ಹಾಗಾದರೆ ಏನು ಮಾಡಬೇಕು ಅಂತೀರಾ?'

—ತಾನೂ ಚಿಂತಾಮಗ್ನಳಾಗಿ ಕೇಳಿದಳು ರಾಜೇಶ್ವರಿ.

'ನನಗೇನೋ ಒಂದು ದಾರಿ ತೋಚುತ್ತದೆ.'

'ಏನು?'

'ಗೌರಮ್ಮ—ದಾಸಣ್ಣನ ಸಂಬಂಧ ಪೂರ್ವಜನ್ಮದ ಪ್ರಾರಬ್ಧ. ಅದನ್ನು ಬಿಡಿಸುವುದು ಸಾಧ್ಯವಿಲ್ಲ. ಆದರೆ ಹಾಗೆಂದು ಅವರಿಬ್ಬರೂ ಕೆಟ್ಟವರು ಎಂದೂ ನಾನು ಹೇಳುವುದಿಲ್ಲ. ಇವನೂ ಅಪಾಪೋಲಿಯಲ್ಲ, ಆಕೆಯೂ ಕಂಡ ಗಂಡಸರ ಬೆನ್ನು ಹತ್ತುವ ಪಾದರಿಯೂ ಅಲ್ಲ. ಆದ್ದರಿಂದ ಅವರನ್ನು ಅಗಲಿಸುವ ಅಸಾಧ್ಯ ಪ್ರಯತ್ನಕ್ಕೆ ಹೋಗದೆ, ಅದನ್ನು ಮರೆತು ಬಿಟ್ಟು ನಗುತ್ತಾ ಇರುವುದೇ ಜಾಣತನ ಅನ್ನಿಸುತ್ತದೆ.'

'ನೀವು ಹೇಳಿದ ಮೇಲೆ ನನಗೂ ಹಾಗೇ ಅನ್ನಿಸುತ್ತದೆ.'

'ಹಾಗಾದರೆ ಸರಿ. ನೀನೇ ಅತ್ತೆಗೆ ಹೇಳು.'

'ಅಮ್ಮನಿಗೆ ಏನಾದರೂ ಹೇಳಬಹುದು. ಆದರೆ ಅಣ್ಣ—? ಅಣ್ಣನಿಗೆ ನಾನು ಹೇಳಲಾರೆ.'

'ಬೇಡ. ಸಂದರ್ಭ ನೋಡಿಕೊಂಡು ನಾನೇ ಒಂದು ಮಾತು ಹೇಳುತ್ತೇನೆ. ಆ ಏರುಪೇರು ತೊಲಗಿ ಎಲ್ಲಾ ನೇರವಾದರೆ ಸಂತೋಷ.'

'ಅಂತೂ ನಿಮಗೆ ನಾನು ಇಲ್ಲದ ರಗಳೆ ಹಚ್ಚಿಬಿಟ್ಟೆ. ಬೇಸರ ವಾಯಿತೋ ಏನೋ ನಿನಗೆ?'

'ಛಿ! ಹುಚ್ಚಿ. ಎಂಥಾ ಮಾತು ನನ್ನ ಮನೆ ಕೆಲಸಮಾಡಲು ನನಗೆ ಬೇಸರವೇ? ಇದೇನು ನನಗೆ ಪರಸ್ಥಳವೇ? ದಾಸಣ್ಣನ ಹಾಗೇ ನಾನೂ ಆ ಮನೆಗೆ ಒಬ್ಬ ಮಗನೇ ಅಲ್ಲವೇ?'

—ಹೆಂಡತಿಯನ್ನು ಸಮಾಧಾನ ಮಾಡಿ ಹೇಳಿದ ಚಂದ್ರಶೇಖರ ಗಂಡನ ಮಾತು ಕೇಳಿ ರಾಜೇಶ್ವರಿಗೆ ಹಾಲು ಸಕ್ಕರೆ ಕುಡಿದಷ್ಟು ಸಂತೋಷ ವಾಯಿತು. ಅಭಿಮಾನ ತುಂಬಿತುಳುಕುವ ನೋಟದಲ್ಲಿ ಅವನತ್ತ ನೋಡುತ್ತಾ, ತುಂಟನಗೆ ನಗುತ್ತಾ—

'ಹಾಗಾದರೆ ದಾಸಣ್ಣನಿಗೆ ಬಂತು ಗ್ರಹಚಾರ!'

—ಎಂದಳು.

'ಏಕೆ—ದಾಸಣ್ಣನಿಗೇಕೆ ಗ್ರಹಚಾರ?'

'ದಾಸಣ್ಣನ ಹಾಗೇ ನಾನೂ ಆ ಮನೆಗೆ ಒಬ್ಬ ಮಗ ಎಂತ ಹೇಳ ಲಿಲ್ಲವೇ? ಅದಕ್ಕೆ'

'ಅದರಿಂದ ಏನಾಯಿತು?'

'ಏನಾಯಿತು? ಆಸ್ತೀಲಿ ಪಾಲು ಕೇಳಲಿಕ್ಕೆ ಇನ್ನೊಬ್ಬರು ಹುಟ್ಟಿಕೊಂಡ ಹಾಗಾಯಿತು'.

'ಅಷ್ಟೇ ತಾನೇ. ಬೇಕಾದರೆ ಇವತ್ತೇ ಬರೆದುಕೊಟ್ಟು ಬಿಡುತ್ತೇನೆ—'

'ಏನಂತ?'

'ನನ್ನ ಪಾಲಿನ ಆಸ್ತಿ ಬಂದಿದೆ ಅಂತ.'

'ಎಲ್ಲಿ ಬಂದಿದೆ?'

'ಇಗೋ— ಇಲ್ಲಿ, ನನ್ನ ತೋಳಿನಲ್ಲಿ ಬಂದಿದೆ. ಇದಕ್ಕಿಂತ ಇನ್ನು ದೊಡ್ಡ ಆಸ್ತಿ ಯಾವುದಂ ಹೇಳು? ಜೀವವಿಲ್ಲದ ಹೊಲ ಮನೇನ ದಾಸಣ್ಣನೇ ಇಟ್ಟುಕೊಳ್ಳಲಿ'

—ಎಂದ ಚಂದ್ರಶೇಖರ ಹೆಂಡತಿಯನ್ನು ತಬ್ಬಿಕೊಂಡು.

'ನೀವು ಏನೋಂತ ಇದ್ದೆ. ಪರವಾಯಿಲ್ಲ, ಮಾತಿನಲ್ಲಿ ತುಂಬಾ ಜಾಣರು'.

—ಎಂದಳು ರಾಜೇಶ್ವರಿಯೂ ಅವನ ಎದೆಯ ಸುತ್ತ ತನ್ನ ತೋಳನ್ನು ಬಿಗಿದು.

'ನನ್ನ ಜಾಣತನ ಕಾಣೋದು ಈಗಲ್ಲ, ನಾಳೆ ಸ್ವಾಮಿಗಳವರನ್ನು ಒಪ್ಪಿಸಿದಾಗ,.'

'ನಾಳಿನ ಮಾತು ನಾಳೆಗಿರಲಿ. ಈಗ ಅದು ಬೇಡ'

—ಎಂದಳು ರಾಜೇಶ್ವರಿ.

'ನೋಡು—ಜಾಣೆ ಅಂತ ನಿನಗೆ ಹೇಳಬೇಕು.'

'ಏಕೆ?'

'ಯಾವ ಹೊತ್ತಿನಲ್ಲಿ ಏನು ಮಾತು ಆಡಬೇಕು ಅಂತ ಗೊತ್ತಿರೋದು ಸಾಮಾನ್ಯರ ಲಕ್ಷಣವಲ್ಲ, ಮಹಾಕವಿ ಲಕ್ಷಣ'

—ಎಂದ ಚಂದ್ರಶೇಖರ.

'ಹೀಗೇ ನೀವು ಮಾತಾಡುತ್ತಲೇ ಇದ್ದರೆ ನಿನ್ನೆ ಮಾಡಿದ ಹಾಗೆ ಬಾಯಿಗೆ ಬೀಗ ಮುಂದ್ರೆ ಹಾಕಬೇಕಾಗುತ್ತೆ—ಹುಷಾರು'

'ಜೀ—ಹುಜೂರು. ಶಿಕ್ಷೆಗೆ ಸಿದ್ಧವಾಗಿದೀನಿ'

—ಎಂದ ಚಂದ್ರಶೇಖರ ಕೆಣಕು ನಗೆ ನಗುತ್ತಾ.

ಆ ನಗೆಯಲ್ಲಿ, ಅವರಿಬ್ಬರ ಮನಸ್ಸನ್ನು ಮುತ್ತಿದ ಮೋಡಗಳು ಚದರಿ ಹೋದವು. ಹಾಗೆಂದು ಅವರು ಅದನ್ನು ಮರೆಯಲಿಲ್ಲ.

೨೪

'ಹಾಗಾದರೆ ಈಗೇನು ಮಾಡಬೇಕು ಅನ್ನುತ್ತೀಯ ರಾಜೇಶ್ವರಿ?'

—ರಾಜೇಶ್ವರಿ ಚಂದ್ರಶೇಖರ ಹೇಳಿದುದೆಲ್ಲವನ್ನು ಹೇಳಿದಾಗ ಕೇಳಿ, ಮರುಪ್ರಶ್ನೆ ಮಾಡಿದರು ಲಕ್ಷ್ಮೀದೇವಮ್ಮ—

'ಇಷ್ಟು ದಿನ ಏನೋ ಒಂದು ಸ್ವಲ್ಪ ಆಸೆ ಹಚ್ಚಿಕೊಂಡಿದ್ದೆ. ಈಗ ಅದಕ್ಕೂ ಎಳ್ಳು ನೀರು ಬಿಡಬೇಕಾಯಿತು.'

'ಯಾವುದಕ್ಕೆ ಎಳ್ಳುನೀರು ಬಿಡಬೇಕು?'

—ತಾಯಿಯ ಮಾತಿನ ಅರ್ಥ ತಿಳಿಯದೆ ರಾಜೇಶ್ವರಿ ಕೇಳಿದಳು.

'ಏನೋ ಇದು ನಾಲ್ಕು ದಿನದ ಹುಚ್ಚು. ಇವತ್ತಲ್ಲ ನಾಳೆ ಇವನಿಗೆ ಬುದ್ಧಿ ಬಂದು ಈ ಗ್ರಹ ವಿಮೋಚನೆಯಾಗಬಹುದು ಅಂತ ಇದ್ದೆ. ನಿನ್ನ ಮಾತು ಕೇಳಿದರೆ ಇದು ಜನ್ಮಕ್ಕಂಟಿದ ಶನಿ ಅಂತಲೇ ತೋರುತ್ತೆ. ಇವನಿಗೆ ಎಂಥಾ ಮೆಚ್ಚು ಮದ್ದು ಮಾಡಿದಾಳೋ ಅವಳು.'

'ಅವಳು ಇವನಿಗೆ ಮೆಚ್ಚು ಮದ್ದು ಮಾಡಿದಾಳೋ, ಇವನು ಅವಳಿಗೆ ಮೆಚ್ಚು ಮದ್ದು ಮಾಡಿದಾನೋ—ಯಾರು ಬಲ್ಲರು. ಈಗ ಇಬ್ಬರೂ ಸೇರಿ ನಿಮಗೆ ಹುಚ್ಚು ಹಿಡಿಸಿದಾರೆ.'

'ಹಿಡಿಸಿದಾರೆ ಅಂದೆಯಾ, ಪೂರಾ ಹಿಡಿಸಿದಾರೆ ರಾಜೇಶ್ವರಿ... ಇನ್ನು ಏಳೇಳು ಜನ್ಮಕ್ಕೂ ಸಾಕು ಅನ್ನುವಷ್ಟು ಹುಚ್ಚು ಹಿಡಿಸಿದಾರೆ. ದೇವರೇ ಯಾವಾಗ ನಿನ್ನ ಪಾದದಲ್ಲಿ ಎಡೆಕೊಡುತ್ತೀಯಪ್ಪಾ ಅಂತ ದಿನಾಗಲೂ ಹಲವರಿಯೋ ಹಾಗೆ ಮಾಡಿದಾರೆ.

'ಅದು ನಿನಗೆ ನೀನೇ ಹಿಡಿಸಿಕೊಂಡ ಹುಚ್ಚು. ಅದಕ್ಕೆ ಅವರೇನು ಮಾಡಲಿಕ್ಕಾಗುತ್ತೆ. ಹೇಳು?'

'ಹಾಗಾದರೆ ನಾನೇನು ಮಾಡಬೇಕೂಂತೀಯಾ ಹೇಳು. ಸುಣ್ಣ ಮಡಲಿಗೆ ಕಟ್ಟಿಕೊಂಡು ಮಡುವಿಗೆ ಬಿದ್ದ ಹಾಗಾಯಿತಲ್ಲಾ ನನ್ನ ಬಾಳು.'

'ಅಮ್ಮಾ—ನೀನೇನೂ ತಿಳಿದುಕೊಳ್ಳೋಲ್ಲಾಂದರೆ ಒಂದು ಮಾತು ಹೇಳ್ತೀನಿ.'

—ತಾಯಿ ಹೇಳಿದ ಎದೆ ಇರಿವ ಮಾತನ್ನು ಕೇಳಿ ನೊಂದು, ಒಂದು ಗಳಿಗೆ ಸುಮ್ಮನಿದ್ದು ಬಳಿಕ ಹೇಳಿದಳು ರಾಜೇಶ್ವರಿ.

'ಚೆನ್ನಾಯಿತು ಕಣೆ. ನೀನೇನು ಪರಕೀಯಳೇ— ಹೀಗೆಲ್ಲಾ ಮಾತಾಡೋಕೆ. ಹೊಟ್ಟೇಲಿ ಹುಟ್ಟಿರೋಳು ನೀನೇ ಹೀಗಂದ್ರೆ ಏನು ಹೇಳು?'

'ಹಾಗಲ್ಲಮ್ಮ. ಎಷ್ಟಾದರೂ ನಾನು ಮಗಳು. ಎಷ್ಟು ವಯಸ್ಸಾದರೂ ನಿನ್ನ ಪಾಲಿಗೆ ಹಸುಗೂಸೇ. ನಾನೇನಾದರೂ ಹೇಳೋದು, ನಿನಗೆ ಈ ದುಃಖದಲ್ಲಿ ಆಗಲೇ ಸಾಕಾಗುವಷ್ಟು ಬೇಸರವಾಗಿದೆ. ಇನ್ನು 'ಚಿಕ್ಕ ಬಾಯಿಗೇಕೆ ದೊಡ್ಡ ಮಾತು, ಅಂದರೆ ನಾನೆಲ್ಲಿ ಹೋಗಲಿ ಹೇಳು.'

'ಈ ವಯಸ್ಸಿಗೇ ದೇವರು ನಿನಗೆಷ್ಟು ಬುದ್ಧಿ ಕೊಟ್ಟಿದಾನೆಯೋ ನನ್ನ ಕಂದಾ. ಹೆತ್ತಮನೆಗೆ ಹೆಸರು ತರೋಳಮ್ಮ ನೀನು.'

—ಎಂದು ಅಭಿಮಾನದಿಂದ ಮಗಳ ಮುಂದಲೆಯನ್ನು ನೇವರಿಸಿ, ಮರುಗಳಿಗೆಯೇ ನಿಟ್ಟುಸಿರಿಟ್ಟು—

'ನಿನ್ನ ಬುದ್ಧೀಲಿ ಸಾವಿರದಲ್ಲೊಂದು ಪಾಲು ಅವನಿಗಿದ್ದಿದ್ದರೂ ಅವನು ಹೀಗಾಗುತ್ತಿರಲಿಲ್ಲ.'

—ಎಂದರು ಲಕ್ಷ್ಮೀದೇವಮ್ಮ ಮರೆಯಲಾಗದ ಮಗನನ್ನು ನೆನಸಿಕೊಂಡು.

'ಹೀಗೆ ಅಂದು ಅಂದೇ ದಾಸಣ್ಣ ಯಾರ ಮಾತೂ ಕೇಳದ ಹಾಗೆ ಮಾಡಿದೀರ ನೀವು. ಅದೆಲ್ಲಾ ಅಲ್ಲ, ಹಡೆದೋರು, ಬೆನ್ನಲ್ಲಿ ಬಿದ್ದೋರು ನಾವೇ ಅವನನ್ನು ದೂರ ಮಾಡಿಬಿಟ್ಟರೆ. ಅವನಿಗೆ ಯಾರು ದಿಕ್ಕು? ಊರವರ ಕಣ್ಣಲ್ಲಿ ಅವನು ಇದ್ದದ್ದೂ ಹಗುರವಾಗಿ ಹೋಗುತ್ತಾನೆ. ನಮ್ಮ ಬೆಲೆಯೂ ಉಳಿಯುವುದಿಲ್ಲ. ಊರಜನಕ್ಕೇನು—ನಮ್ಮೆದುರಿಗೆ ನಮ್ಮ ಪಕ್ಷ, ಅವನೆದುರಿಗೆ ಅವನ ಪಕ್ಷ— ಈ ಮಧ್ಯೆ ಮನೆ ಹೆಸರು ಮಣ್ಣು ಮುಕ್ಕಿ ಹೋಗುತ್ತದೆ.'

'ನಿನ್ನ ಮಾತು ನಿಜ ಕಣೆ ರಾಜೇಶ್ವರಿ. ಅದಕ್ಕೆ ನನ್ನನ್ನೇನು ಮಾಡೋಕ್ಹೇಳು. ಆ ನಾಯಕರೋಳನ್ನ ನೀನೇ ಮನೆಸೊಸೆ ಅಂತ ಕರೆದುಕೊಂಡು ಬಂದು ತೊಡೆ ಮೇಲೆ ಕೂಡಿಸಿಕೊಳ್ಳಲೇ?'

'ಅವಳನ್ನ ತಂದು ತೊಡೆ ಮೇಲೆ ಕೂಡಿಸಿಕೊಳ್ಳಲೂ ಬೇಡ. ಇವನನ್ನ ತೆಗೆದುಕೊಂಡು ಹೋಗಿ ಬೀದಿಗೆ ಬಿಸಾಡೋದೂ ಬೇಡ.'

'ಮತ್ತೇನು ಮಾಡಬೇಕೂಂತೀಯ?'

'ಏನೋ ಆದ್ದದ್ದು ಆಗಿ ಹೋಯಿತು. ಮರೆತು ಸುಮ್ಮನಿದ್ದು ಬಿಡುವುದೇ ಲೇಸು. ನಮ್ಮ ಅದೃಷ್ಟ ಇದ್ದದ್ದರಲ್ಲೇ ಒಳ್ಳೆಯದು—ಗೌರಮ್ಮ ನೇನೂ ಬೀದಿ ಬಸವಿಯಲ್ಲ. ವಾಸಣ್ಣನೂ ಲಂಗುಲಗಾಮಿಲ್ಲದ ಗೂಳಿಯಲ್ಲ. ಏನೋ ಗ್ರಹಚಾರ. ಇಬ್ಬರನ್ನೂ ಕೂಡಿಸಿದೆ.'

'ಈಪತ್ತು ಕೂಡಿ ನಾಳೆ ಬಿಡುವ ಗ್ರಹವಾಗಿದ್ದರೆ ಹೋಗಲಿ ಎನ್ನ ಬಹುದು. ಆದರೆ ಇದು ಜನ್ಮಜನ್ಮಾಂತರಕ್ಕೂ ಬಿಡುವುದಿಲ್ಲ ಅಂತ ನೀನೇ ಹೇಳಿದೆಯಲ್ಲ.'

'ಹೌದು.'

'ಹಾಗಂದರೆ ಇರೋನು ಒಬ್ಬನನ್ನ ಆ ಚಿತ್ರಾಂಗಿಗೆ ಒಪ್ಪಿಸಿ ಬಿಟ್ಟು ನಾನೇನು ಮಾಡಲಿ ಹೇಳು. ನನಗೇನೂ ಮಗ ಅಂತ ಅಕ್ಕರಾಸ್ತೆ ಬೇಡವೇ? ನಾನೂ ಸೊಸೆ ಮೊಮ್ಮಕ್ಕಳು ಅಂತ ನೋಡೋದು ಬೇಡವೇ? ಇದ್ದಿಬ್ಬರಲ್ಲಿ ಒಬ್ಬ ಸನ್ಯಾಸಿಯಾದ, ಇನ್ನೊಬ್ಬ ಬೀದಿ ಬಸವನಾದ. ಈ ಸುಖ ಕಾಣಲಿ ಕ್ಕೇನೇ ಇವರನ್ನ ನಾನು ಒಂಭತ್ತು ತಿಂಗಳು ಹೊತ್ತು, ಹಡೆದದ್ದು?'

'ನಿನ್ನ ಮನೆಗೆ ಸೊಸೆ ಬರಬಾರದು, ಮೊಮ್ಮಕ್ಕಳಾಗಬಾರದು ಅಂತ ಗೌರಮ್ಮ ಹೇಳಿದಳೇ? ಇಲ್ಲದ್ದೆಲ್ಲ ಹಚ್ಚಿಕೊಂಡು ಏಕೆ ಕೊರಗುತ್ತೀ?'

'ಅವಳು ಬಾಯಿ ಬಿಟ್ಟು ಹೇಳಲಿಲ್ಲ. ಆದರೆ ಇವನು ಮದುವೆ ಮಾಡಿ ಕೊಳ್ಳಲಿಕ್ಕೆ ಅವಳು ಬಿಡಬೇಕಲ್ಲ. ನನಗ್ಯಾಕೆ ಸವತಿಕಾಟ ಅಂತ ಆ ಮಾತೇ ಮುರಿದು ಬಿಟ್ಟರೆ— ಇವನಂತೂ ಅವಳ ಕೈಯ ಗೊಂಬೆ.'

'ಇಬ್ಬರ ವಿಷಯವಾನೂ ನೀನು ತಪ್ಪು ತಿಳಿದುಕೊಂಡಿದ್ದೀಯ ಅಮ್ಮ, ಮದುವೇಗೆ ಇವನೂ ಬೇಡ ಅನ್ನೋಲ್ಲ, ಅವಳು ಬೇಡ ಅನ್ನೋಲ್ಲ.'

'ನಿನಗೇನು ಗೊತ್ತು? ಅವಳನ್ನು ನೋಡಿದ್ದೆಯಾ? ಮಾತಾಡಿ ಸಿದ್ದೆಯಾ?'

'ಇಲ್ಲ. ಬೇಕಾದರೆ ಹೋಗಿ ಕೇಳುತ್ತೇನೆ.'

'ನಿನ್ನ ಅಷ್ಟು ಮಾಡಬೇಡ. ನೀನು ಮರ್ಯಾದೆಯಾಗಿ ಮನೆಯಲ್ಲಿರು.

ಒಳ್ಳೇರ ಮಾಸ ಹಳ್ಳೀಲಿ ಹೋಯಿತು ಅಂತ, ಅಲ್ಲಿಗೆ ಹೋಗಿ ಮಂಗಳಾರತಿ ಮಾಡಿಸಿಕೊಂಡು ಬರಬೇಡ.'

'ದಾಸಣ್ಣ ಅವಳ ವಿಷಯ ಹೇಳೋದನ್ನ ಕೇಳಿದರೆ ಅವಳು ಅಂಥವಳಲ್ಲ ಅನಿಸುತ್ತೆ ನನಗೆ.'

'ನಿಮ್ಮ ದಾಸಣ್ಣನಿಗೆ ಅವಳ ಹುಚ್ಚು ಹಿಡಿದಿದೆ.'

'ನೀನು ತಿಳಿದುಕೊಂಡಿರೋ ಅಷ್ಟು ಹುಚ್ಚು ಹಿಡಿದಿಲ್ಲ. ಅವರೂ ಒಂದು ಸಲ ಅವಳನ್ನು ನೋಡಿಕೊಂಡು ಬರಬೇಕು ಅಂದ್ರು...'

'ಅವರೂ ಅಂದ್ರೆ, ಚಂದ್ರಶೇಖರನ್ನೇ?'

'ಹೂ,'

'ಯಾರು ಕರಕೊಂಡು ಹೋಗ್ತಾರೆ ನಿಮ್ಮನ್ನ.'

'ದಾಸಣ್ಣ.'

'ಏಕೆ—ಇವನಿಗೂ ತನಗೆ ಹಿಡಿದ ಹುಚ್ಚು ಹಿಡಿಸಲಿಕ್ಕೇ ಏನೋ.'

'ಇವರಿಗೆ ಹುಚ್ಚು ಹಿಡಿಸಲು ಅವಳು ಹತ್ತು ಜನ್ಮ ಹುಟ್ಟಿ ಬರಬೇಕು. ಆ ಭಯ ನನಗಿಲ್ಲ. ಆದರೆ ನಿಜವಾಗಿಯೂ ಆಕೆ ನೀನಂದು ಕೊಂಡಷ್ಟು ಕೆಟ್ಟವಳಲ್ಲಮ್ಮ. ಈ ವಿಷಯ ಬಿಟ್ಟು ಅವಳು ಬೇರೆ ಕೆಟ್ಟತನ ಮಾಡಿದ್ದು ಎಲ್ಲಾದರೂ ಕೇಳಿದೀಯಾ ನೀನು?'

'ಇಲ್ಲಾನ್ನು. ಹೋಗಲಿ—ಅವಳು ಅಷ್ಟು ದೇವತೆಯಾಗಿದ್ದರೆ—ದಾಸಣ್ಣನ ಮದುವೆಗೆ ಅವಳನ್ನು ಒಪ್ಪಿಸು ನೋಡೋಣ.'

'ದೇವರಿದ್ದಾನೆ ಆಗಲಿ.'

'ಹಾಗೇ ನಿನ್ನ ಗಂಡ ಇವನನ್ನು ಒಪ್ಪಿಸಲಿ. ನೀನು ಕಾಣೆ ರಾಜೇಶ್ವರಿ—ನನಗೀಗ ಇರೋ ಆಸೆ ಎಲ್ಲಾ ಒಂದೇ—ಮದುವೆಯಾಗಿ ಹೆಂಡತಿ ಮನೆಗೆ ಬಂದಾಗಲಾದರೂ ಇವನ ಬುದ್ಧಿ ಬದಲಾಯಿಸೀತೇನೋ ಅಂತ.'

—ಮೈಯೆಲ್ಲಾ ಆಸೆಯಾಗಿ ಹೇಳಿದರು ಲಕ್ಷ್ಮೀದೇವಮ್ಮ.

'ಅಷ್ಟೇ ತಾನೇ. ದೇವರಿದಾನೆ. ದಾಸಣ್ಣನನ್ನು ಮದುವೆಗೆ ನಾನು ಒಪ್ಪಿಸುತ್ತೇನೆ.'

—ಎಂದಳು ರಾಜೇಶ್ವರಿ.

'ಅಷ್ಟು ಮಾಡೆ–ನೀನು ನನ್ನ ಮಗಳಲ್ಲ, ತಾಯಿ ಅಂತ ತಲೆ ಮೇಲೆ ಕೂಡಿಸಿಕೋತೀನಿ.'

—ಎಂದಳು ಲಕ್ಷ್ಮೀದೇವಮ್ಮ.

'ಹಾಗಾದರೆ ನಾನು ಅಲ್ಲಿಗೆ ಹೋಗಿಬರಲೆ?'

'ಎಲ್ಲಿಗೆ?'

'ಗೌರಮ್ಮ ನಮನೆಗೆ'.

'ನಿನ್ನ ಗಂಡ ಒಪ್ಪಿದರೆ ಹೋಗಿಬಾ. ಬೇಡಾಂದರೆ ಬಿಟ್ಟುಬಿಡು.'

'ಹಾಗೇ ಆಗಲಿ. ನೀನು ಮಾತ್ರ ಸ್ವಲ್ಪ ಗೆಲುವಾಗಿ ಓಡಾಡಿ ಕೊಂಡಿದ್ದರೆ, ನಮಗೂ ಏನಾದರೂ ಮಾಡಲು ಉತ್ಸಾಹವಿರುತ್ತೆ. ನೀನು ಮೂರು ಹೊತ್ತೂ ಮಲಗಿದ್ದರೆ ನಮ್ಮ ಬುದ್ಧೀನೂ ಹಾಸಿಗೆ ಹಿಡಿದು ಬಿಡುತ್ತೆ. ಏಳು—ಇವತ್ತಾದರೂ ಲಕ್ಷಣವಾಗಿ ತಲೆಬಾಚಿ, ನಾನೇ ಜಡೆ ಹಾಕು ತ್ತೇನೆ.'

—ಎಂದಳು ರಾಜೇಶ್ವರಿ ಮಲಗಿದ ತಾಯಿಯನ್ನು ಹಾಸಿಗೆಯಿಂದ ಎಬ್ಬಿಸಿ ಕೂಡಿಸಿ.

'ನಿಜವಾಗಿಯೂ, ನಿಜವಾಗಿಯೂ ರಾಜೇಶ್ವರಿ. ಈ ಜನ್ಮದಲ್ಲಿ ಮಗಳಾಗಿ ಹುಟ್ಟಿದೆ. ಹಿಂದಿನ ಜನ್ಮದಲ್ಲಿ ನೀನು ನನ್ನ ತಾಯಿಯೇ ಆಗಿದ್ದಿರಬೇಕು.'

—ಎಂದರು ಲಕ್ಷ್ಮೀದೇವಮ್ಮ ಮಗಳ ಮೇಲಿನ ಅಭಿಮಾನ ತುಂಬಿ ಬಂದು ಗದ್ಗದಿತವಾದ ಸ್ವರದಲ್ಲಿ.

ತಾಯಿಯ ಮಾತು ಕೇಳಿ, ಸಂಸಾರದಲ್ಲಿ ಮೂಡಿದ ಈ ವಿರಸದ ಬಿರುಗಾಳಿಯನ್ನು ತೊಲಗಿಸಿ, ಮತ್ತೆ ನಗು ನೆಲಸುವ ಹಾಗೆ ಮಾಡಬಹುದು ಎಂದು ರಾಜೇಶ್ವರಿಗೆ ಆಸೆಯಂಕುರಿಸಿತ್ತು. ಆದರೆ ಇದೇ ರಾಯಭಾರವನ್ನೇ ಹೊತ್ತು ಮಾವನೊಂದಿಗೆ ಮಾತನಾಡಲು ಹೋದ ಚಂದ್ರಶೇಖರನಿಗೆ ಅಷ್ಟೇ ನಿರಾಶೆಯಾಗಿತ್ತು.

ತನ್ನ ರಾಯಭಾರ ಬಹುಮಟ್ಟಿಗೆ ಸಫಲವಾದುದನ್ನು ಗಂಡನಿಗೆ ಹೇಳಬೇಕೆಂದು ಹಿಗ್ಗಿನಿಂದ ಬಂದ ರಾಜೇಶ್ವರಿಯ ಉತ್ಸಾಹ, ಗಂಡನ ಸಪ್ಪೆಯ ಮೋರೆಯನ್ನು ನೋಡಿ, ಬಹುಮಟ್ಟಿಗೆ ಇಳಿದುಹೋಯಿತು.

'ನೀವು ಹೋದ ಕೆಲಸ ಏನಾಯಿತು ಎಲ್ಲಾ ವಿಚಾರ ಮಾತ ನಾಡಿದಿರಾ?'

—ಎಂದು ಕೇಳಿದಳು ದಟ್ಟವಾದ ನಿರಾಶೆ ಕವಿಯುತ್ತಿದ್ದ ಧ್ವನಿಯಲ್ಲಿ.

'ನಾನು ಹೇಳುವುದೆಲ್ಲಾ ಹೇಳಿದ್ದಾಯಿತು. ಎಲ್ಲಾನೂ ಅವರು ಒಂದೇ ಮಾತಿನಲ್ಲಿ ಮುಗಿಸಿಬಿಟ್ಟರು—'

—ಸೋತ ಧ್ವನಿಯಲ್ಲಿ ಹೇಳಿದ ಚಂದ್ರಶೇಖರ.

'ಅಣ್ಣ ಏನು ಹೇಳಿದ?'

'ನಿಮಗೆ ಬೇಕಾದದ್ದು ನೀವು ಮಾಡಿಕೊಳ್ಳಿ. ಅವನಿಗೆ ಬೇಕಾದ ಹಾಗೆ ಅವನು ಇರಲಿ. ಆದರೆ ನನ್ನ ಮುಂದೆ ಮಾತ್ರ ಅವನ ಪ್ರಸ್ತಾಪ ತೆಗೆಯಬೇಡಿರಿ ಎಂದುಬಿಟ್ಟರು. ಹೆಚ್ಚು ಮಾತಾಡಲು ಅವಕಾಶವನ್ನೇ ಕೊಡಲಿಲ್ಲ.'

'ಹಾಗಾದರೇನು ಮಾಡುವುದು?'

'ಅತ್ತೆಯವರು ಏನು ಹೇಳಿದರು?'

'ನಾನು ಹೇಳಿದ್ದಕ್ಕೆ ಒಪ್ಪಿಕೊಂಡಳು.'

'ಹಾಗಾದರೆ ಇನ್ನೂ ಆಸೆ ಕೊಂಚ ಇದೆ ಅಂದಹಾಗಾಯಿತು.'

'ಇದೆ ಅನ್ನುತ್ತೀರಾ?'

'ಹೂ.'

'ಅಣ್ಣ ಹಾಗಂದಮೇಲೂ ನಿಮಗೆ ಧೈರ್ಯವಿದೆಯೇ?'

'ಅಂತೂ ಮೊದಲ ಸಾರಿಗೇ ಇಬ್ಬರಲ್ಲಿ ಒಬ್ಬರು ಕುದುರಿದ ಹಾಗಾಯಿತಲ್ಲ. ಎರಡನೆ ಸಲ ನಾವು ಮೂರೂ ಜನ ಸೇರಿಕೊಂಡು ಮಾವನವರನ್ನು ಕುದುರಿಸೋಣ,

'ಏನು ಮಾಡುವುದೋ— ಅಣ್ಣನದು ತುಂಬಾ ಹಟದ ಸ್ವಭಾವ. ತಲೆಯಲ್ಲೇನಾದರೂ ಬಂದರೆ ಆಗಿಯೇ ಹೋಯಿತು.'

'ನಮ್ಮ ಕೈಲಾಗದಿದ್ದರೆ ನಿಮ್ಮಮ್ಮ ಕುದುರಿಸುತ್ತಾಳೆ.'

'ಹೇಗೆ?'

'ಹೇಗೆ ಎಂದರೆ, ಎಲ್ಲಾ ಹೆಂಗಸರೂ ತಮ್ಮ ಗಂಡಂದಿರನ್ನು ಹೇಗೆ ತಮ್ಮ ದಾರಿಗೆ ತಂದುಕೊಳ್ಳುತ್ತಾರೂ ಹಾಗೆಯೇ. ಅಮ್ಮನನ್ನು ಕೇಳಿ ನೋಡು ಬೇಕಾದರೆ—ನನ್ನದೂ ಹಟದ ಸ್ವಭಾವವೇ ಆದರೇನು—ಈಗ ನೀನು ನನಗೆ ಮೂಗುದಾರ ಹಾಕಿ ಕುಣಿಸುತ್ತಿಲ್ಲವೇ ಹಾಗೇ. ಮಗಳೇ ಹೀಗೆ, ಇನ್ನು ಅತ್ತೆ ನಿಮ್ಮಮ್ಮ!'

—ಹೀಗೆ ಚಂದ್ರಶೇಖರ ನಿರಾಶೆ ಕವಿದ ಎದೆಯಲ್ಲಿ ಆಶೆಯನ್ನು ತುಂಬಿ ಕೊಳ್ಳುತ್ತಾ.

'ನೀನು. ನನ್ನ ತೌರುಮನೆ ಅಂದರೆ ಮಾತಾಡೋಕೆ ನಿಮಗೆ ನಾಲಗೆ ಬಹಳ ಚುರುಕಾಗುತ್ತಲ್ಲವೇ?'

—ಗಂಡನ ಮಾತು ಕೇಳಿ ಸಿಟ್ಟಾದಂತೆ ಕೇಳಿದಳು ರಾಜೇಶ್ವರಿ.

'ನನ್ನ ಹತ್ತಿರ ಜಗಳ ಆಡೋಕೆ ಇವತ್ತೇ ಏನು ಮುಹೂರ್ತ ಇಲ್ಲ, ಅದು ಇನ್ನೊಂದು ಸಲ ಆಗಲಿ—ಈಗ ಅತ್ತೆ ಏನು ಹೇಳಿದರು ಹೇಳು.'

'ಅಂದಹಾಗೆ— ನಿಮ್ಮ ಮಾತಿನಲ್ಲಿ ನನಗೆ ಅದೇ ಮರೆತು ಹೋಗಿತ್ತು.'

'ಹೌದು. ಹೌದು. ಅದು ಹಾಗೇ. ನನ್ನ ಹತ್ತಿರ ಜಗಳ ಅಂದ್ರೆ ಜಗತ್ತೇ ಮರೆತು ಹೋಗುತ್ತೆ ನಿನಗೆ. ಛಿ! ಛಿ! ಶುದ್ಧ, ಜಗಳಗಂಟಿ ತಂಟಲಮಾರಿ.

'ನೋಡೀ...ನೋಡೀ...ಹಾಗೆಲ್ಲಾ ...ಬೇಡ್ರೆ...'

—ತೋರು ಬೆರಳನ್ನೆತ್ತಿ ಅವರ ಕಡೆ ತೋರುತ್ತಾ ಎಚ್ಚರಿಸುವ ಧ್ವನಿಯಲ್ಲಿ ಹೇಳಿದಳು ರಾಜೇಶ್ವರಿ.

'ತಪ್ಪಾಯಿತು. ಈಗ ಮುಂದೇನು ಹೇಳು. ಅತ್ತೆ ಏನು ಹೇಳಿದರು.'

'ಹಾಗೇ—ಹಾಗೆ ದಾರಿಗೆ ಬನ್ನಿ'. ಎಂದು ನಮ್ಮ ಮಾತನ್ನು ಮುಂದುವರಿಸಿ ದಾಸಣ್ಣನಿಗೆ ಒಂದು ಮದುವೇಂತ ಆಗಿ. ಸೊಸೆ ಮನೆಗೆ ಬಂದರೆ, ಅಮ್ಮನ ದುಃಖ ಎಲ್ಲಾ ತೀರಿಹೋಗುತ್ತೆ' ಎಂದಳು.

'ಅಷ್ಟೇ ತಾನೇ. ಅದೇನು ದೊಡ್ಡ ವಿಷಯ.'

'ಮಾತಾಡೋಕೇನೋ ಬಹಳ ಸಣ್ಣ ವಿಷಯ. ಆದರೆ ಕಾರ್ಯದಲ್ಲಿ ಮಾಡೋಕೆ?'

'ಮಾಡೋದು ತಾನೆ ಏನು ಕಷ್ಟ?'

'ಕಷ್ಟಾಂತಲೇ ಅಮ್ಮನ ಭಯ.'

'ಏಕೆ? ದಾಸಣ್ಣ ಒಪ್ಪುವುದಿಲ್ಲ ಅಂತಲೇ?'

'ದಾಸಣ್ಣ ಒಪ್ಪುವುದಿಲ್ಲ ಅಂತಲ್ಲ. ದಾಸಣ್ಣ ಒಪ್ಪಿದರೂ ಗೌರಮ್ಮ ಮುರಿಯಬಹುದೂಂತ.'

'ಛೇ! ಆಕೆ ಅಂಥವಳೇನು ತೋರುವುದಿಲ್ಲ ನನಗೆ.'

'ನನಗೂ ಹಾಗೇ ತೋರುತ್ತದೆ. ಆದರೆ ನಮ್ಮ ನಿಮ್ಮ ನಂಬಿಕೆಯಿಂದ

ಯಾವೂರಲ್ಲೂ ಹಗಲಾಗೋದಿಲ್ಲ.'

'ಸರಿ— ಅದಕ್ಕೇನು ಮಾಡಬೇಕೂಂತ ರಾಣೀ ಸಾಹೇಬರ ಸಲಹೆ?'

'ನಾವೇ ಒಂದು ಸಲ ಹೋಗಿ ಗೌರಮ್ಮನನ್ನು ಕಂಡು, ಸಂದರ್ಭ ನೋಡಿಕೊಂಡು, ಈ ವಿಷಯ ಪ್ರಸ್ತಾಪಿಸಿದರೆ, ಯಾವುದೂ ಖಚಿತವಾಗಿ ಗೊತ್ತಾಗುತ್ತೆ.'

'ಸರಿ. ಹೇಗೂ ನನ್ನ ಅಲ್ಲಿಗೆ ಕರೆದುಕೊಂಡು ಹೋಗ್ತೀನಿ ಅಂತ ದಾಸಣ್ಣ ಹೇಳಿದಾನಲ್ಲಾ. ವಿಚಾರಿಸ್ತೀನಿ.'

'ನೀವು ಮಾಡೋ ಕೆಲಸ ಅಲ್ಲ ಅದು.'

'ಮತ್ತೆ ಯಾರು ಮಾಡಬೇಕು?'

'ನಾನೇ. ಅದು ಹೆಂಗಸರ ಮಾತು. ನೀವು ಹೋಗುವಾಗ ನನ್ನೂ ಕರೆದುಕೊಂಡು ಹೋಗಿ.'

'ಇಷ್ಟೆಲ್ಲಾ ದ್ರಾವಿಡ ಪ್ರಾಣಾಯಾಮವೇಕೆ? ನಿನಗೆ ನಿನ್ನ ಅತ್ತಿಗೇನ ನೋಡೋ ಚಪಲ ಅನ್ನು. ಆಯಿತು—ಬಾ. ಆದರೆ ಅತ್ತೆಯವರು ನೀನು ಅಲ್ಲಿಗೆ ಬರುವುದಕ್ಕೆ ಒಪ್ಪಬೇಕಲ್ಲ.'

'ನೀವು ಒಪ್ಪಿದರೆ ಆಗಬಹುದು ಎಂದಳು ಅಮ್ಮ.'

'ಪಾಪ?'

'ಅವರಿಗಿದು ಗೊತ್ತಾಗಬಾರದು ಸದ್ಯಕ್ಕೆ. ಗೊತ್ತಾದರೆ— ಆ ಮೇಲೆ ನಮ್ಮನ್ನೂ ಹತ್ತಿರ ಸೇರಿಸುವುದಿಲ್ಲ.'

'ಸರಿ, ಹಾಗಾದರೆ ಹಾಗೇ ಆಗಲಿ. ದಾಸಣ್ಣನಿಗೆ ಹೇಳುತ್ತೇನೆ' —ಎಂದ ಚಂದ್ರಶೇಖರ.

'ಅಂತೂ ನನಗೆ ಇನ್ನೂ ಎರಡು ದಿನ ದೇವೀಕೆರೆ ನೀರಿನ ಋಣ ಇದೆ. ಏನಾಗುತ್ತೋ ಆಗಲಿ.'

'ಹೋಗಿ ಅಂದರೆ ಹೋಗುತ್ತೀರೇನೋ ಅಲ್ಲವೇ? ಇರಲು ನೆಪ ಸಿಕ್ಕಿದ್ದೇ ಸಾಕು ಅಂತ ಗಳಿಗೇಲಿ ಆಗೋ ಕೆಲಸಾನ ಯುಗಾ ಎಲ್ಲಾ ಮಾಡ್ತ ಕೂತು ಕೊಂಡಿರ್ತೀರ. ನಿಮ್ಮ ಕಳ್ಳಾಟ ಯಾರಿಗೆ ಹೇಳಿ ಕೊಡ್ತೀರ'

—ಎಂದು ತಪ್ಪನ್ನು ಗಂಡನ ಮೇಲೆ ಹೊರಿಸಿ, ನಗುತ್ತಾ, ಓಡಿ ಹೋದಳು ರಾಜೇಶ್ವರಿ.

## ೨೫

ಅನಿರೀಕ್ಷಿತವಾಗಿ, ವೆಂಕಟದಾಸಪ್ಪನವರೊಂದಿಗೆ ತನ್ನ ಮನೆ ಬಾಗಿಲಿಗೆ ಬಂದ ರಾಜೇಶ್ವರಿ- ಚಂದ್ರಶೇಖರನನ್ನು ಕಂಡು ಗೌರಮ್ಮನಿಗೆ ಆಶ್ಚರ್ಯವೂ ಆಯಿತು; ಹಾಗೇ ಕೊಂಚ ಭಯವೂ.

ಆದರೂ ಅದಾವುದನ್ನೂ ತೋರಗೊಡದೆ, ಎದ್ದು ಹೋಗಿ ಚಾಪೆಯನ್ನು ತಂದು ಹಾಸಿ, 'ಬಾವ್ವಾ ಕುಂತುಕೋ. ಬಡವರ ಮನೇಗೇ ಗಂಗಾದೇವಿ ಬಂದ್ಹಂಗಾಯ್ತು' ಎಂದು ಹೇಳಿದಳು.

'ಗೌರಿ ಇದ್ದಲ್ಲಿ ಗಂಗೆ ಬರದಿದ್ದರಾಗುತ್ತದೆಯೇ?'

—ಎಂದಳು ರಾಜೇಶ್ವರಿ ನಗುತ್ತಾ ಚಾಪೆಯ ಮೇಲೆ ಕುಳಿತುಕೊಂಡು.

ಯಾವ ಕೃತ್ರಿಮವೂ ಇಲ್ಲದ, ಸರಳವಾದ ನಗೆ ಗೌರಮ್ಮನ ಅರ್ಧ ಭೀತಿಯನ್ನು ಪರಿಹರಿಸಿದರೂ, ರಾಜೇಶ್ವರಿಯ ಮಾತನ್ನು ಕೇಳಿ, ಅದರಲ್ಲಿ ಎಲ್ಲಾದರೂ ವ್ಯಂಗ್ಯದ ಮುಳ್ಳು ಇರಬಹುದೇ, ಧ್ವನಿಯಲ್ಲಿ ಕಾಣದುದು ಮುಖದಲ್ಲಿ ಕಾಣಬಹುದೇನೋ ಎಂದು ರಾಜೇಶ್ವರಿಯ ಮುಖವನ್ನು ಸೂಕ್ಷ್ಮವಾಗಿ ನೋಡಿದಳು. ಪ್ರಶಾಂತವಾದ ಮಂದಹಾಸ ಪಸರಿಸಿದ ಆ ಮೊಗದಲ್ಲಿ, ನಿರ್ಮಲವಾದ ನಗುವಿನ ಬೆಳಕು ಹೊಳೆಯುವ ಕಣ್ಣುಗಳಲ್ಲಿ ಎಲ್ಲೂ ವ್ಯಂಗ್ಯದ ಮೊನೆಯ ಕುರುಹು ಕಾಣಲಿಲ್ಲ. ಮನಸ್ಸಿನ ಆತಂಕ ಪರಿಹಾರವಾಗಿ ಗೌರಮ್ಮನೂ ನಗೆಯಲ್ಲಿ ಬೆರೆತು, ಕೇಳಿದಳು—

'ಇದೇನವ್ವಾ ಇಂಗೆ ಹೇಳ್ದೆ ಕೇಳ್ದೆ ಒಳ್ಳೆ ಬಿಸಿಲೊತ್ತಿನಲ್ಲಿ ಬಂದದ್ದು?'

'ಏನಿಲ್ಲ. ದಾಸಣ್ಣ ನೀನು ಪಗಡೆ ಬಹಳ ಚೆನ್ನಾಗಿ ಆಡ್ತೀಯ ಅಂದ. ಅದು ಹೇಗೆ ಆಡ್ತಿಯೋ ನೋಡ್ಪೋಣಾಂತ ಬಂದೆ.'

'ಅವರ ಆಟದ ಮುಂದೆ ನನ್ನದಾ?'

'ಅವನನ್ನೂ ಸೋಲಿಸಿ ಬಿಟ್ಟೆಯಂತೆ...?'

'ಹೂ. ನಿಮ್ಮಣ್ಣಯ್ಯ ನಾಟಕ...ಪದಾ ಬರೆಯೋರು ಕಣವ್ವ. ಒಂದಿದ್ರೆ ನಾಲ್ಕು ಹೇಳೋದು ಅವರಿಗೆ ಬಂದ್ಹಂಗೆ ನನಗೂ ನಿನಗೂ ಬಂದಾತ. ಅವರ ಕೈ ಬಾಯಿ ಎರಡೂ ಜೋ ಚುರುಕು'

—ಎಂದಳು ಗೌರಮ್ಮ.

'ನೀನು ಹೇಳೋದು ಸುಳ್ಳೋ. ಅವನು ಹೇಳೋದು ಸುಳ್ಳೋ— ಯಾವುದೂ ನಮಗೆ ಕಣ್ಣಾರೆ ನೋಡಿದರೆ ತಾನೇ ಗೊತ್ತಾಗೋದು'

—ಚಂದ್ರಶೇಖರನೂ ಮಾತಿನಲ್ಲಿ ಬೆರೆತು ಹೇಳಿದ.

'ಅದೆಲ್ಲಾ ಅಲ್ಲ ಗೌರಿ. ಇವರು ಬಂದಿರೋ ಕೆಲಸಾನೇ ಬೇರೆ. ಆಟ ನೋಡಬೇಕು ಎಂದದ್ದು ಬರೀ ನೆಪ. ರಾಜೇಶ್ವರಿ ನಿನ್ನ ಹತ್ತಿರ ಮಾತನಾಡ ಬೇಕು ಅಂದಳು. ಅವಳು ಒಬ್ಬಳನ್ನೇ ಕರೆತರಲಾರದೆ. ಭಾವನನ್ನೂ ಜೊತೆಗೆ ಕರೆದುಕೊಂಡು ಬಂದೆ. ನಮ್ಮೆದುರಿಗೆ ಅವಳಿಗೆ ಮಾತಾಡುವುದಕ್ಕೆ ಸಂಕೋಚ ವೇನೋ. ಅದಕ್ಕೆ ಇಲ್ಲದ ಪುರಾಣ ಎಲ್ಲಾ ಓದ್ತಾ ಇದಾಳೆ'

—ಎಂದರು ವೆಂಕಟದಾಸಪ್ಪ. ಎತ್ತೆತ್ತಲೊ ಅಲೆಯುತ್ತಿದ್ದ ಮಾತನ್ನು ಮುಖ್ಯವಾದ ವಿಷಯಕ್ಕೆ. ಅವರು ಕೂಡಲೇ ಆಡಲು ಸಂಕೋಚಪಡುತ್ತಿದ್ದ ವಿಷಯಕ್ಕೇ ತಂದು ನಿಲ್ಲಿಸಿ.

ವೆಂಕಟದಾಸಪ್ಪನವರ ಮಾತನ್ನು ಕೇಳಿ. ಗೌರಮ್ಮ ಹುಲಿಯ ವಾಸನೆ ಹಿಡಿದ ಚಿಗರಿಯಂತೆ. ತಲೆಯೆತ್ತಿ ಬೆದರುಗಣ್ಣುಗಳಿಂದ ಸುತ್ತ ಕುಳಿತವರ ಮುಖಗಳನ್ನು ನೋಡಿದಳು.

ಇದ್ದಕ್ಕಿದ್ದ ಹಾಗೇ ವೆಂಕಟದಾಸಪ್ಪನವರು. ಮಾತನಾಡಲು ಹಿಂಜರಿಯುತ್ತಿದ್ದ ವಿಷಯವನ್ನೇ ಮುಂದಕ್ಕೆಳೆದುದನ್ನು ಕಂಡು. ರಾಜೇಶ್ವರಿಗೆ ಏಕೋ ಉಸಿರು ಸಿಕ್ಕಿಕೊಂಡ ಹಾಗಾಯಿತು. ಚಂದ್ರಶೇಖರನೂ ಅತ್ತಿತ್ತ ನೋಡತೊಡಗಿದ.

ಆದರೆ ಬಂದ ವಿಷಯವನ್ನು ಮಾತನಾಡದೆ ಬೇರೆ ದಾರಿಯೇ ಇರಲಿಲ್ಲ.

'ನಿಜ ಗೌರಕ್ಕ ನಿನ್ನ. ಹತ್ತಿರ ಮುಚ್ಚುಮರೆ ಯಾಕೆ? ನಾವು ಬಂದದ್ದಕ್ಕೆ ಕಾರಣ ದಾಸಣ್ಣ ಹೇಳಿದ್ದೂ ಅಹುದು. ನಾನು ಹೇಳಿದ್ದೂ ನಿಜ. ಎರಡೂ ಉದ್ದೇಶವಿಟ್ಟುಕೊಂಡೇ ಬಂದದ್ದು. ದಾಸಣ್ಣ, ನೀನು ಅವರೂ ಇಬ್ಬರೂ ಒಂದು ಗಳಿಗೆ ಹಾಗೆ ಎಲ್ಲಾದರೂ ಹೋಗಿ ಬನ್ನಿ'

—ಎಂದು ರಾಜೇಶ್ವರಿಯು ಒದಗಿ ಬಂದ ಪ್ರಸಂಗವನ್ನು. ಎದುರಿಸುವ ಧೈರ್ಯಮಾಡಿ ಹೇಳಿದಳು.

ರಾಜೇಶ್ವರಿ ಬಾಯಿ ಬಿಟ್ಟು ಹೇಳಿದ ಮೇಲೆ ಚಂದ್ರಶೇಖರ, ವೆಂಕಟ-

ದಾಸಪ್ಪನವರಿಗೂ ಹೊರಗೆ ಹೋಗದೆ ಬೇರೆ ದಾರಿಯೇ ಉಳಿಯಲಿಲ್ಲ. ಅವರಿಬ್ಬರೂ ಹೊರಗೆ ಹೋಗಿ, ಹೆಂಗಸರಿಬ್ಬರೇ ಮನೆಯಲ್ಲುಳಿದರು.

ಗೌರಮ್ಮ ರಾಜೇಶ್ವರಿ ಏನು ಹೇಳುವಳೋ, ಏನು ಕೇಳುವಳೋ ಎಂದು ರಾಜೇಶ್ವರಿಯ ಮುಖವನ್ನೇ ಮಿಕಮಿಕ ನೋಡುತ್ತಾ ಕುಳಿತಿದ್ದಳು.

ಒಂದೆರಡು ನಿಮಿಷ ಬಿಟ್ಟುಕೊಂಡು. ರಾಜೇಶ್ವರಿಯೇ ಮಾತನ್ನು ಆರಂಭಿಸಿ ಹೇಳಿದಳು—

'ಗೌರಕ್ಕ, ನಾನು ನಿನ್ನ ಹತ್ತಿರ ಜಗಳ ಆಡಬೇಕು, ನಿನ್ನ ಬೈಯಿ ಬೇಕೂಂತ ಬಂದಿಲ್ಲ. ನಿಮ್ಮ ವಿಚಾರದಲ್ಲಿ ನಡೆದುದ್ದನ್ನೆಲ್ಲಾ ದಾಸಣ್ಣ ಹೇಳಿದ. ಆದರೆ ನಿನ್ನನ್ನು ಒಂದು ಮಾತು ಕೇಳಬೇಕೂಂತ ಬಂದೆ.'

'ಅವರೆಲ್ಲಾ ಹೇಳಿದ ಮೇಲೆ ನಾನಿನ್ನೇನು ಹೇಳೋದೈತೆ. ಶಿವನಿಚ್ಛೆ ಹೆಂಗಿತ್ತೋ ಹಂಗಾಯ್ತು'

—ಎಂದಳು ಗೌರಮ್ಮ, ತಲೆಯನ್ನು ಬಗ್ಗಿಸಿ.

'ಅದೇನೊ ಆಯಿತಲ್ಲ ಗೌರಕ್ಕ, ಆದರೆ ಇದು ನಿಮ್ಮಿಬ್ಬರಿಗೇ ಸಂಬಂಧಿಸಿದ್ದಲ್ಲ. ಮನೆಯಲ್ಲಿ ಅಮ್ಮ. ಅಣ್ಣ...'

'ಅದೂ ನಂಗೆ ಗೊತ್ತೈತೆ ಕಣಪ್ಪ. ಅಮ್ನೋರು ಹಾಸಿಗೆ ಹಿಡ್ದಿರೋದು, ಅಪ್ಪಾವ್ರು ಅಯ್ನೋರ್ತಾವ ಮಾತೇ ಬಿಟ್ಟಿರೋದು ಎಲ್ಲಾ ಗೊತ್ತೈಯ್ತು'

—ರಾಜೇಶ್ವರಿ ಮಾತು ಮುಗಿಸುವ ಮೊದಲೇ ಗೌರಮ್ಮ ಹೇಳಿದಳು.

'ನಿನಗೆ ಯಾರು ಹೇಳಿದರು?'

—ಗೌರಮ್ಮ ಹೇಳಿದುದನ್ನು ಕೇಳಿ ಆಶ್ಚರ್ಯದಿಂದ ಕೇಳಿದಳು ರಾಜೇಶ್ವರಿ.

'ಅಯ್ನೋರೇ ಎಲ್ಲಾ ಹೇಳಿ ಕಣ್ಣೀರಿಟ್ಟುಕೊಂಡ್ರು. ಅಯ್ನೋರ ಮನಸ್ಸು ಮಲ್ಲಿಗೆ ಹೂವಿದ್ದಂಗೆ. ಇವ್ರು ಬಾಳ ನೊಂದ್ಕಂಡವ್ರು. ಅವತ್ತು..... ಅವರ ಕಣ್ಣಿಗೆ ಬೀಳೋಕ್ಮುಂಚೇನೆ ನನ್ನ ಪ್ರಾಣ ಒಂಟೋಗಿದ್ರೆ... ಇದ್ಯಾವ್ದೂ ಆಗ್ತಿರ್ಲಿಲ್ಲ. ನಾನು ಪಾಪಿ—ಎಲ್ಲಾರ್ಗೂ ಕಷ್ಟ ಕೊಡೋಕೇ ಹುಟ್ದಂಗಾಯ್ತು.

ಉಕ್ಕಿ ಬಂದ ದುಃಖದಲ್ಲಿ ಕಣ್ಣೀರಿಡುತ್ತಾ ಹೇಳಿದಳು ಗೌರಮ್ಮ. ಅವಳ ದುಃಖವನ್ನು ಕಂಡು ರಾಜೇಶ್ವರಿಗೂ ಕರುಳು ಕಿವುಚಿದಂತಾಗಿ, ದುಃಖ ಭಾರವಾದ ಸ್ವರದಲ್ಲಿ ಹೇಳಿದಳು—

'ಈಗ ಅದೆಲ್ಲಾ ಅಂದ್ಕೊಂಡು ಏನುಪಯೋಗ ಗೌರಕ್ಕ, ನೀನೇ ಹೇಳಿದ ಹಾಗೆ ಶಿವನಿಚ್ಛೆ ಏನಿತ್ತೋ ಅದಾಯಿತು. ಅದನ್ನು ತಪ್ಪಿಸಲಿಕ್ಕೆ ನಾವು ಯಾರು? ಆದರೆ ಹಾಗಂದುಕೊಂಡು ಸುಮ್ಮನೆ ಕುಳಿತಿರುವ ಹಾಗೂ ಇಲ್ಲ. ಆದದ್ದನ್ನು ಮರೆತು ಮುಂದಿನದನ್ನು ಯೋಚಿಸಬೇಕು.'

'ಅದೇನ್ಮಾಡ್ಬೇಕು ಹೇಳಿ. ನನ್ನ ಕತ್ತು ತಗ್ದಿಡು ಅಂದ್ರೆ ಅದ್ಕೂ ತಯಾರಾಗಿವ್ನಿ.'

'ಊಹೂ. ಅದೆಲ್ಲಾ ನಾನು ಕೇಳೋಲ್ಲ. ಗೌರಕ್ಕ. ನೀನು ಬದುಕಿರಬೇಕು. ಹಾಗೇ ಮನೇಲಿರೋ ಪರಿಸ್ಥಿತೀನೂ ಸುಧಾರಿಸಬೇಕು. ಅಮ್ಮ ಹಳೆಯಕಾಲದ ಹೆಂಗಸು. ಇದನ್ನು ಹಚ್ಚಿಕೊಂಡು ತುಂಬಾ ಕೊರಗ್ತಾ ಇದಾಳೆ'.

'ಹೂ ಕಣಪ್ಪ. ನಾನೇನ್ಮಾಡ್ಲಿ— ಅಪ್ಪಾಪ್ರ ಎದೇಗೆ ಬೆಂಕಿ ಹಚ್ಚಿಬಿಟ್ಟೆ ನಾನೇ. ಏಳೇಳು ಜನ್ಮಕ್ಕೂ ಈ ತಾಯಿ ಮಕ್ಕಳನ್ನು ಅಗಲಿಸಿದ ಪಾಪ ಹೋಗೋಲ್ಲ. ಬರೋ ಜನ್ಮದಾಗೆ ಎಂಥಾ ನರಕದ ಹುಳಾ ಆಗಿ ಹುಟ್ಟಿ ತೀರಿಸ್ಬೇಕೋ ಈ ಪಾಪಾನ'.

ಪಶ್ಚಾತ್ತಾಪ ಪ್ರಜ್ಞೆಯಿಂದ ವಿದೀರ್ಣವಾದ ಧ್ವನಿಯಲ್ಲಿ ಹೇಳಿದಳು ಗೌರಮ್ಮ.

"ಮುಂದಿನ ಜನ್ಮದ ಮಾತಿರಲಿ ಗೌರಕ್ಕ. ಈಗಲೂ ನೀನು ಮನಸ್ಸು ಮಾಡಿದ್ರೆ ತಾಯಿ ಮಕ್ಕಳನ್ನು ಕೂಡಿಸಬಹುದು."

'ಅದೇನು ಮಾಡ್ಬೇಕು ಹೇಳಿ? ಅದೊಂದಾದ್ರೆ ಸಾಕು. ನೀವೇಳಿದ್ದ. ಮಾಡ್ತೀನಿ.'

'ನಾನು ಹೀಗಂದೇಂತ ನೀನು ನೊಂದುಕೊಳ್ಳಬಾರದು...'

'ಖಂಡಿತ... ನನ್ಗೇನೇನೂ ಇಲ್ಲಪ್ಪ.'

'ನೋಡು ಗೌರಕ್ಕ. ನಿನಗೆ ನಮ್ಮನೆ ಪರಿಸ್ಥಿತಿ ಎಲ್ಲಾ ಗೊತ್ತಿದೆ. ಅಮ್ಮನಿಗೆ ಇದ್ದ ಇಬ್ಬರು ಗಂಡು ಮಕ್ಕಳಲ್ಲಿ ಒಬ್ಬ ಸಂನ್ಯಾಸಿಯಾಗಿ ಹೋದ. ಈಗ ವಂಶಕ್ಕೆ ಹೆಸರು ಹೇಳಲು ಉಳಿದಿರೋದು ದಾಸಣ್ಣ ಒಬ್ಬನೇ. ಅವನು, ಅವನ ಹೊಟ್ಟೇಲಿ ಹುಟ್ಟಿದ ಮಕ್ಕಳು ಈ ಮನೆಯ ಹೆಸರು ಹೇಳಬೇಕು. ಈಗ ಹೀಗಾದ್ದರಿಂದ. ಅದಕ್ಕೆ ಎಲ್ಲಿ ಧಕ್ಕೆ ಬರುತ್ತದೆಯೋ ಅನ್ನುವ ಭಯವೇ.

ದಿನದಿನಕ್ಕೆ ಅಮ್ಮನ್ನ ಕೊಲ್ತಾ ಇದೆ. ಅದಕ್ಕೆ ನಾನು ಒಂದು ಮಾತು ಅಮ್ಮನಿಗೆ ಹೇಳಿದೆ. ನೀನು ಒಪ್ಪುವುದಾದರೆ ಎಲ್ಲಾ ಬಗೆ ಹರಿಯುತ್ತೆ.'

'ಅದೇನು ಹೇಳಿ ಅಪ್ಪ?'

'ನೀನು ದಾಸಣ್ಣನಿಗೆ ದೇವರು ಗಂಟುಹಾಕಿದವಳು. ದಾಸಣ್ಣ ನಿನ್ನನ್ನು ಬಿಡಬೇಕೆಂದು ನನ್ನ ಅಭಿಪ್ರಾಯವಲ್ಲ. ದೇವರಿಚ್ಛೆಯಲ್ಲಿ ಇದು ಹೀಗೆ ಎಷ್ಟು ದಿನ ನಡೆಯಬೇಕೊಂತ ಇದೆಯೋ ನಡೆದುಕೊಂಡು ಹೋಗಲಿ. ಹಾಗೇ ದಾಸಣ್ಣ ಬೇರೊಂದು ಮದುವೆ ಮಾಡಿಕೊಂಡು ಸೊಸೆ ಮನೆಗೆ ಬಂದರೆ, ಅಮ್ಮನ ದುಃಖವೆಲ್ಲಾ ತೀರಿದ ಹಾಗಾಗುತ್ತದೆ.'

'ಅಷ್ಟೇನೇನ್ರಪ್ಪ?'

'ಹೂ. ಅಷ್ಟೆ.'

'ಅಮ್ಮಾವ್ರು ಇದಕ್ಕೋಸ್ಕರ ಇಷ್ಟು ಚಿಂತೆ ಹಚ್ಕೋಬೇಕಾಗಿತ್ತ ಅದಕ್ಕೆ ಯಾರು ಅಡ್ಡವಾಗಿದ್ರು.'

'ನೀನೆಲ್ಲಿ ಅಡ್ಡ ಬರ್ತೀಯೋಂತ ಅಮ್ಮನಿಗೆ ಭಯ.'

'ಶಿವ ಶಿವ. ಎಂಥ ಮಾತೇಳಿವ್ರಪ್ಪ. ನಾನು ಆ ಮನೆ ಮುರಿಯೋಕೆ ಬಂದಿವ್ನಿ ಅಂತ ತಿಳುಕೊಂಡ್ರಾ? ನನ್ನಾಣೆಗೂ. ಶಿವನಾಣೆಗೂ ನನಗಂತಾ ಯೋಚನೆ ಇಲ್ಲಪ್ಪ. ಬೇಕಾದ್ರೆ ಕೈಲಿ ಕೆಂಡ ಹಿಡಿದು ಹೇಳ್ತೀನಿ.'

—ಕಕ್ಕುಲತೆಯಿಂದ ಹೇಳಿದಳು ಗೌರಮ್ಮ. ತನ್ನ ರಾಯಭಾರ ಇಷ್ಟು ಸುಲಭವಾಗಿ ಸಾರ್ಥಕವಾಗುವುದೆಂದು ರಾಜೇಶ್ವರಿ ನಂಬಿರಲಿಲ್ಲ. ಎಂತಲೇ ಗೌರಮ್ಮನ ಮಾತು ಕೇಳಿ ಅವಳಿಗೆ ಒಂದು ಗಳಿಗೆ ತಾನು ಕೇಳುತ್ತಿರುವುದು ನಿಜವೇ, ಇದೇನು ಕನಸೋ ಎಚ್ಚರವೋ ಎನಿಸಿತು. ಆ ಭಾವನೆಯಲ್ಲೇ ಮತ್ತೆ ಕೇಳಿದಳು—

'ನಿಜವಾಗಿಯೂ ದಾಸಣ್ಣ ಮದುವೆಯಾಗೋಕೆ ನಿಮ್ಮದೇನೂ ಅಭ್ಯಂತರವಿಲ್ಲವೇ ಗೌರಕ್ಕ?'

'ಮತ್ತದೇ ಕೇಳ್ತೀರಲ್ಲಪ್ಪಾ. ಎಂಗೇಳಿದ್ರೆ ನಂಬ್ಕೆ ಆಗ್ತದೆ ಹೇಳಿ. ಹಂಗೇಳ್ತೀನಿ.'

—ರಾಜೇಶ್ವರಿ ತನ್ನ ಮಾತನ್ನು ನಂಬದಿದ್ದುದನ್ನು ಕಂಡು ವ್ಯಥಿತಳಾಗಿ ಹೇಳಿದಳು ಗೌರಮ್ಮ.

'ನಿನ್ನ ಮಾತಿನಲ್ಲಿ ಅಪನಂಬಿಕೆಯೇ ಗೌರಕ್ಕ. ಹಾಗೆಂದರೆ ನನ್ನ ಕಣ್ಣು ಸಿಡಿದುಹೋಗಲಿ. ಅದಕ್ಕಲ್ಲ ನಾನು ಕೇಳಿದ್ದು.'

—ಗೌರಮ್ಮನ ವ್ಯಥೆಗೆ ಸಮಾಧಾನ ಹೇಳುತ್ತಾ ಹೇಳಿದಳು ರಾಜೇಶ್ವರಿ.

'ಮತ್ತೆ?'

'ಹಾಗಲ್ಲ ನಾನೂ ಹೆಂಗಸು. ನಾನಿರುವಾಗ ನಮ್ಮವರು ಬೇರೊಬ್ಬ ಳನ್ನು ತರುತ್ತೀನಿ ಅಂದರೆ ಸುಮ್ಮನಿರುತ್ತೇನೆಯೇ?'

'ನಿಮ್ಮದಕ್ಕು ನಮ್ಮದಕ್ಕು ತಾಳೆ ಹಾಕ್ಬಾರ್ದು ಕಣವ್ವ. ಅದರ್ದಾರೀನೇ ಬ್ಯಾರೆ. ನಮ್ದಾರೀನೇ ಬ್ಯಾರೆ'.

—ನಿಟ್ಟುಸಿರಿಟ್ಟು ಹೇಳಿದಳು ಗೌರಮ್ಮ.

'ಹಾಗಾದರೆ ದಾಸಣ್ಣ ಮದುವೆ ಮಾಡಿಕೊಳ್ಳಲಿ ಎನ್ನುತ್ತೀಯ?'

'ಬೇಷಕ್— ಮಾಡ್ಕೊಳ್ಳಪ್ಪ. ನನಗೇನು—ಇಬ್ಬರ ಸೇವೇನೂ ಮಾಡಿ ಹುಟ್ಟಿದ್ದು ಸಾರ್ಥಕ ಆಯ್ತು ಅಂತೀನಿ.'

ಗೌರಮ್ಮ ಹೇಳಿದ ಮಾತನ್ನು ಕೇಳಿ ರಾಜೇಶ್ವರಿಯ ಕಣ್ಣಲ್ಲಿ ತಟಕ್ಕನೆ ನೀರು ತುಂಬಿತು.

'ಗೌರಕ್ಕ, ದಾಸಣ್ಣ ಹೇಳಿದ ಹಾಗೇ ನೀನು ಈ ಲೋಕದ ಮನುಷ್ಯ ಳಲ್ಲ. ನಿನ್ನ ಹತ್ತಿರ ಸುಳ್ಳ್ಯಾಕೆ ಗೌರಕ್ಕ, ನಾನಂ ಬಂದದ್ದು ಹೇಗಾದರೂ ದಾಸಣ್ಣನ ಮದುವೆಗೆ ನಿನ್ನ ಒಪ್ಪಿಸಬೇಕೂಂತ. ಈಗ... ಈಗ......

'ಈಗೇನು?'

'ನಾನು ಮಾಡ್ತಾ ಇರೋದು ತಪ್ಪೇನೋ ಅನಿಸುಂತ್ತಾ ಇದೆ.'

'ಯಾವ್ದು—ಅಯ್ನೋರು. ಮದ್ವೆ ಆಗೋದಾ?'

'ಹೂ.'

'ಅದೆಂಗ್ತಪ್ಪಾದೀತು. ಅದು ಆಗಬೇಕಾದ್ದೆ ಕಣವ್ವ.'

'ಅದಲ್ಲ—'

'ಮತ್ತೆ?'

'ದಾಸಣ್ಣನಿಗೆ ಎಂಥೋಳು ಬರ್ತಾಳೊ. ಅವಳೆಲ್ಲಿ ನಿಮ್ಮಿಬ್ಬರ ನಡುವೆ ಬರ್ತಾಳೋ ಅಂತ ನನಗೀಗ ಯೋಚನೆ ಆಗಿದೆ'.

'ಆ ಯೋಚನೆ ಈಗ ಯಾಕೆ ಬಂತಕ್ಕ...'

'ಹೆಂಗಸಿನ ಬುದ್ಧಿ, ನಿನಗೆ ಗೊತ್ತಿಲ್ಲವಲ್ಲ ಗೌರಕ್ಕ...'

'ನಂಗೆ ಅರ್ಥವಾಯ್ತೇಳು ನಿನ್ನ ಯೋಚನೆ. ಅಯ್ನೋರ್ನ ನನ್ನಪ ಬರದಂಗೆ, ಬರೋ ಆಕೆ, ಕಟ್ಟು ಮಾಡಿದ್ರೇನು ಅಂತ ಚಿಂತೆ ಅಲ್ವಾ?'

'ಹೂ.'

'ಬ್ಯಾಡ. ಅಯ್ನೋರು ನಿಸ್ವಾರ್ಥನೇ ಇರ್ಲಿ. ಅಯ್ನೋರು ಓಸಾ ಪೋತವ ಕಸ ಉಡುಗಿಕೊಂಡು ನಾನಿರ್ತೀನೀತ ಹೇಳ್ತೀನಿ. ಗಂಡ ಹಂದ್ತಿ ನಗ್ತಾ ಇರ್ಲಿ. ನಾನವರ ಚಾಕರಳಾಗಿರ್ತೀನಿ. ಅಯ್ತಲ್ಲ. ಅಷ್ಟೇ ತಾನೇ

—ರಾಜೇಶ್ವರಿಯ ಮನದ ಭೀತಿಯನ್ನು ತೊಲಗಿಸುತ್ತ ಗೌರಮ್ಮ ಹೇಳಿದಳು.

ಆ ಮಾತು ಕೇಳುತ್ತಿದ್ದ ಹಾಗೇ, ಗೌರಮ್ಮನಿಂದ ಅಷ್ಟು ದೂರ ಕುಳಿತಿದ್ದ ರಾಜೇಶ್ವರಿ ತಟಕ್ಕನೆ ಅವಳ ಬಳಿ ಸರಿದು, ಅವಳನ್ನು ಬಿಗಿಯಾಗಿ ತಬ್ಬಿಕೊಂಡು—

'ಗೌರಕ್ಕ—ನಿನಗಿಂಥ ಬುದ್ಧಿ ಎಲ್ಲಿಂದ ಬಂತೇ?'

—ಎಂದಳು ಕಂಬನಿಗರೆಯುತ್ತ.

'ಮತ್ತೆ—ದೊಡ್ನೋರಸೇವೆ ಮಾಡೋವಾಗ, ಸಣ್ಣ ಬುದ್ಧಿ ಮಾಡಿದ್ರಾಗ್ತದಾ ರಾಜಪ್ಪ. ಕೆರಾನ ಹೊರಗೆ ಬಿಡಗೆ ದೇವಸ್ಥಾನದೊಳಗ. ಹೋಗೋ ಹಂಗೆ. ಅಯ್ನೋರ್ತಾವ ಹೋಗ್ವಾಗ ಸಣ್ಣ ಬುದ್ಧಿ ಎಲ್ಲಾ ಅಷ್ಟು ದೂರ ಬಿಡಗ ಬ್ಯಾಡ್ವಾ? ಅದೆಲ್ಲಾ ಹೋಗ್ಲಿ. ನನ್ನ ಮುಟ್ಟಿ ಮೈಲಿಗೆ ಮಾಡ್ಕೊಂಡ್ರು ಲ್ಲವ್ವಾ?...'

'ಮೈಲಿಗೆ—ನಿನ್ನ ಮುಟ್ಟಿದ ಮೈಗೆ ಮೈಲಿಗೆಯೇ. ಇಲ್ಲ ಗೌರಕ್ಕ, ಇವತ್ತಿನವರೆಗೂ ನನ್ನ ಮೈಯಲ್ಲೇನಾದರೂ ಮೈಲಿಗೆ ಇದ್ದಿದ್ದರೆ ಅದು ಈ ದಿನ ಹೊರಟುಹೋಯಿತು'

—ಭಾವೋತ್ಕರ್ಷ ತುಂಬಿ ತುಳುಕುವ ಧ್ವನಿಯಲ್ಲಿ ಹೇಳಿದಳು ರಾಜೇಶ್ವರಿ.

'ನೀವು ಅಯ್ನೋರ ತಂಗೀನೇ ನಿಜ ಕಣವ್ವ'.

—ಎಂದಳು ಗೌರಮ್ಮ. ರಾಜೇಶ್ವರಿಯ ಮಾತು ಕೇಳಿ, ತಾನೂ ಭಾವ ಪರವಶಳಾಗಿ, ತನ್ನನ್ನು ತಬ್ಬಿದ ರಾಜೇಶ್ವರಿಯನ್ನು ತಬ್ಬಿಕೊಂಡು.

'ಗೌರಕ್ಕ...ನಿಜವಾಗಿಯೂ ನನಗೆ ನಿನ್ನಂಥ ಒಬ್ಬ ಅಕ್ಕನಿದ್ದಿದ್ದರೆ...'

'ಅದು ಮುಂದಿನ ಜನ್ಮಕ್ಕಾಗಲಿ. ಈ ಜನ್ಮದಾಗ ನಿನ್ನ ತಂಗಿ ಅಂತ ಕರೀ. ಅಷ್ಟೇ ಸಾಕು ರಾಜಪ್ಪ.

'ಗೌರೀ...ಗೌರೀ...ಗೌರೀ... ಹಾಳಾದೊಳೆ! ನಿನ್ನ ಮುಖ ಎತ್ತಿ ನೋಡೋಕೂ ನನಗೆ ಯೋಗ್ಯತೆ ಇಲ್ಲದ ಹಾಗೆ ಮಾಡಿಬಿಟ್ಟೆಯಲ್ಲೇ ಪಾಪೀ'

—ಎಂದಳು ರಾಜೇಶ್ವರಿ ಗಟ್ಟಿಯಾಗಿ ಅಳುತ್ತಾ.

'ಅಕ್ಕಾ... ಅಕ್ಕಾ...'

—ಎಂದು ಏನೋ ಹೇಳಹೊರಟ ಗೌರಮ್ಮನೂ, ಅಳುವಿನ ಹೊಳೆಯಲ್ಲಿ ಮುಳುಗಿದಳು.

ತಲೆಬಾಗಿಲು ತಟ್ಟಿದ ಸದ್ದಾದ ಮೇಲೆ ಅವರಿಬ್ಬರಿಗೂ ಎಚ್ಚರವಾದದ್ದು. ಗೌರಮ್ಮನನ್ನು ತಬ್ಬಿಕೊಂಡಿದ್ದ ರಾಜೇಶ್ವರಿ, ಬಾಗಿಲ ಸದ್ದು ಕೇಳಿ ಅಷ್ಟು ದೂರ ಹೋಗಿ ಕುಳಿತಳು. ಗೌರಮ್ಮ ಎದ್ದು ಹೋಗಿ ಬಾಗಿಲು ತೆಗೆದಳು. ಚಂದ್ರಶೇಖರ, ವೆಂಕಟದಾಸಪ್ಪ ಇಬ್ಬರೂ ಒಳಗೆ ಬಂದರು.

'ನಿಮ್ಮ ಪಿತೂರಿ ಮುಗಿಯಿತೇನು?'

—ವೆಂಕಟದಾಸಪ್ಪ ಕೇಳಿದರು.

'ನಮ್ಮದು ಈ ಜನ್ಮಕ್ಕೆ ಮುಗಿಯುವುದಿಲ್ಲ'

—ಎಂದಳು ರಾಜೇಶ್ವರಿ.

'ಯಾವುದು—ಪಿತೂರೀನೊ. ಅಳೋದೊ. ಸಾಕು ನಡಿ, ಮನೆಗೆ ಹೋಗೋಣ. ಕಣ್ಣು ಒರಸಿಕೋ, ಮುದ್ದು ಮಗಳ ಕಣ್ಣಲ್ಲಿ ನೀರು ನೋಡಿದರೆ ಅಮ್ಮ ನನ್ನ ಗ್ರಹಚಾರ ಬಿಡಿಸಿಬಿಡುತ್ತಾಳೆ'

—ಎಂದರು ವೆಂಕಟದಾಸಪ್ಪ.

ರಾಜೇಶ್ವರಿ ಕಣ್ಣು ಒರೆಸಿಕೊಂಡು ಹೊರಡಲು ಸಿದ್ಧವಾದಳು. ಗೌರಮ್ಮನೂ ಕಣ್ಣು ಒರಸಿಕೊಂಡು, ಒಳಗೆ ಹೋಗಿ ವೀಳೇದೆಲೆ ಅಡಿಕೆ. ತೆಂಗಿನ ಕಾಯಿ. ಕುಂಕುಮದ ಬಟ್ಟಲನ್ನು ತಂದಿಟ್ಟಳು.

ರಾಜೇಶ್ವರಿ ಕುಂಕುಮ ಹಚ್ಚಿಕೊಂಡು, ತಾಂಬೂಲ ತೆಗೆದುಕೊಂಡು—

'ಹೋಗಿ ಬರ್ತೀನಿ ಗೌರಕ್ಕ'

—ಎಂದಳು.

'ಊರಿಗೆ ಹೋಗೋಕ್ಮುಂಚೆ ಮತ್ತೊಂದ್ಸಲಾ ಬಂದ್ಹೋಗು ರಾಜಕ್ಕ'

—ಎಂದಳು ಗೌರಮ್ಮ.

'ಬರದೆ ಇರುತ್ತೇನೆಯೇ? ನೀನು ಬೇಡ ಅಂದ್ರೂ ಬರ್‍ತೀನಿ.'

—ರಾಜೇಶ್ವರಿ ಹೇಳಿದಳು.

'ಹಾಗೆ ಬರೋಕೆ ಇದೇನು ನಿಮ್ಮಪ್ಪನ ಮನೆಯೇ?'

—ಅದುವರೆಗೂ ಏನೂ ಮಾತಾಡದಿದ್ದ ಚಂದ್ರಶೇಖರ ಕೇಳಿದ.

'ಅಪ್ಪನ ಮನೆಯಲ್ಲ, ಅದಕ್ಕಿಂತ ಹೆಚ್ಚು—ತಂಗೀ ಮನೆ. ನಾನು ಬರ್‍ತೀನಿ ಗೌರಕ್ಕ'

—ಎಂದು ಹೇಳಿ ರಾಜೇಶ್ವರಿ ಹೊರಟವಳು, ವೆಂಕಟದಾಸಪ್ಪನವರಿಗೆ—

'ನೀನು ಬರೊಲ್ವೇ ಅಣ್ಣ?'

—ಎಂದು ಕೇಳಿದಳು.

'ನೀವು ಹೋಗಿ— ನಾನು ಬರ್‍ತೀನಿ'

—ಎಂದರು ವೆಂಕಟದಾಸಪ್ಪ. ಗಂಡ ಹೆಂಡರಿಬ್ಬರೂ ಅಲ್ಲಿಂದ ಹೊರಟರು.

ವೀರಣ್ಣನ ಮನೆಯಿಂದ ಹೊರಗೆ ಬರುತ್ತಿದ್ದ ಹಾಗೇ, ತನ್ನ ಆತುರವನ್ನು ತಡೆಯಲಾರದೆ ಚಂದ್ರಶೇಖರ—

'ಹಣ್ಣೋ ಕಾಯೋ?'

—ಎಂದು ಕೇಳಿದ.

'ಬೀದೀಲಿ ಏನು ನಿಮ್ಮ ಪಂಚಾಯತಿ. ಮನೆಗೆ ಹೋಗೋವರೆಗೂ ಸುಮ್ಮನಿರಿ'

—ಎಂದು ಗಂಡನನ್ನು ದಬಾಯಿಸಿದಳು ರಾಜೇಶ್ವರಿ. ಈ ಮಾತು ಕೇಳಿ ಚಂದ್ರಶೇಖರ ಅವಳನ್ನು ನೋಟದಿಂದಲೇ ನುಂಗುವಂತೆ ನೋಡಿದ. ಅದನ್ನು ಕಂಡು ರಾಜೇಶ್ವರಿಯ ಮುಖದ ಮೇಲೆ ಮಂದಹಾಸ ಅರಳಿತು.

ಮನೆಗೆ ಸೇರಿದ ಮೇಲೆ, ರಾಜೇಶ್ವರಿ ಒಳಗೆ ಹೋಗಿ, ಸ್ನಾನಮಾಡಿ, ಬೇರೆ ಸೀರೆಯುಟ್ಟು ಬರುತ್ತೀನಿ ಎಂದರೂ ಕೇಳದೆ ಚಂದ್ರಶೇಖರ—

'ಅಷ್ಟು ಹೊತ್ತು ಕಾಯೋದಾಗೋದಿಲ್ಲ. ನೀನು ಇಗೋ ಅಂದರೆ ಇನ್ನೊಂದು ಯುಗವಾಗುತ್ತೆ. ಇನ್ನು ಸ್ನಾನಕ್ಕಿಳಿದರೆ— ಸಾಕ್ಷಾತ್ತು ಊರ್ಮಿಳಾದೇವಿ! ಅದೆಲ್ಲಾ ಆಗೋಲ್ಲ— ಏನಾಯಿತು ಹೇಳಿಹೋಗು'

—ಎಂದ.

'ನಿಮ್ಮದು ಬಹಳ ಆತುರ ಅಂದರೆ...'

'ಅದೆಲ್ಲಾ ಆಮೇಲೆ—ಮೊದಲು ಏನಾಯಿತೋ ಹೇಳು.'

'ಆಗೋದೇನು—ಹೋಗಿದ್ದೋರು ಯಾರು?'

—ಜಂಭ ಕೊಚ್ಚಿಕೊಳ್ಳುವ ಧ್ವನಿಯಲ್ಲಿ ಹೇಳಿದಳು ರಾಜೇಶ್ವರಿ.

'ಜಂಭದಕೋಳಿ ಅನ್ನೋದು ಗೊತ್ತಿದೆ: ನಿನ್ನ ಬಡಿವಾರ ಆಮೇಲಾಗ್ಲಿ —ಈಗೇನಾಯ್ತು ಹೇಳು'.

'ರಾಮ, ರಾಮ! ಇವರ ಅವಸರಕ್ಕೆ ನನ್ನ ಉಸಿರು ಸಿಕ್ಕೊಂಡು ಹೋಗುತ್ತೆ— ಅತ್ತೆಯವರನ್ನು ಕೇಳಬೇಕು— ನೀವು ಹುಟ್ಟಿದ್ದು ಒಂಭತ್ತು ತಿಂಗಳಿನಲ್ಲೋ ಏಳನೇ ತಿಂಗಳಿನಲ್ಲೋಂತ.'

'ನಾನೂ ಕೇಳಬೇಕು ಅತ್ತೆಯೋರನ್ನ.'

'ಏನು?'

'ನಿನ್ನ ಗಂಟಲಿತ್ತಿದ ಸೂಲಗಿತ್ತಿ ಯಾರು ಅಂತ. ಏನಾಯ್ತು ಹೇಳೇ ಅಂದರೆ—ಇಲ್ಲದ ಪಟರಂಗ ಮಾಡ್ತಾಳೆ.'

'ಹೇಳ್ತೀನಿ. ನೀವು ದೂರ್ವಾಸಾವತಾರ ಮಾತ್ರ ತಾಳಬೇಡಿ.'

—ಎಂದು ರಾಜೇಶ್ವರಿ ನಡೆದುದೆಲ್ಲವನ್ನೂ ಹೇಳಿದಳು. ನಡುವೆ ಮಾತನಾಡದೆ ಅವಳು ಹೇಳಿದುದೆಲ್ಲವನ್ನೂ ಕೇಳಿದ ಚಂದ್ರಶೇಖರ ಕಡೆಗೆ—

'ದಾಸಣ್ಣ ಅದೃಷ್ಟವಂತ!'

—ಎಂದ.

'ಅಲ್ಲೊಂತೆ ಗೌರಕ್ಕ ಹೇಳಿದಳು'

'ಏಕೆ?'

'ನೀವು ಎಲ್ಲರಿಗಿಂತ ಅದೃಷ್ಟವಂತರಂತೆ'

'ಏಕೆ?'

'ಏಕಂತೆ...ಏಕೆ... ನನ್ನೇನು ಕೇಳ್ತೀರ. ಗೋಡೇಮೇಲಿನ ಹಲ್ಲೀನ ಕೇಳಿ'

—ಎಂದು ಒಳಗೆ ಓಡಿದಳು ರಾಜೇಶ್ವರಿ.

'ಅಯ್ಯೋ— ಜಂಭದಕೋಳಿ!'

—ಎಂದು ನಕ್ಕ ಚಂದ್ರಶೇಖರ.

ವೆಂಕಟದಾಸಪ್ಪನವರ ಮದುವೆಗೆ ಗೌರಮ್ಮ ಒಪ್ಪಿದಳೆಂದು ರಾಜೇಶ್ವರಿಯಿಂದ ಕೇಳಿ ಲಕ್ಷ್ಮೀದೇವಮ್ಮನಿಗೆ ಸಂತೋಷವಾಯಿತು.

'ಸದ್ಯ, ಅಷ್ಟಾದರೂ ಆಯಿತಲ್ಲ. ಹುಡುಗಣ್ಣಿಗಿಂತ ಹೆಣ್ಣೆಗಣ್ಣು ಮೇಲು. ಅವಳಿನ್ನು ಮನಸ್ಸು ಬದಲಾಯಿಸುವುದರೊಳಗೇ. ದಾಸಣ್ಣನ ತಲೆಮೇಲೆ ಅಕ್ಕೀಕಾಳು ಬಿದ್ದರೆ ನಾನು ಕೃತಾರ್ಥಳಾಗುತ್ತೇನೆ'

—ಎಂದರು.

'ಗೌರಕ್ಕ ಅಂಥ ಹೆಂಗಸಲ್ಲಮ್ಮ'

—ಎಂದು ರಾಜೇಶ್ವರಿ ಗೌರಮ್ಮನ ಪಕ್ಷ ವಹಿಸಿ.

'ನಿನಗೂ ಮೋಡಿ ಬಿಟ್ಟಿಳೇನೋ ಆ ಮಾಟಗಾತಿ. ಅವಳು ಎಂಥೋಳಾದರೆ ನನಗೇನಾಗಬೇಕು. ಆ ಗ್ರಹ ಇವನನ್ನು ಬಿಟ್ಟುಹೋದರೆ ನನಗೆ ಸಾಕು.'

'ಛಿ— ಹಾಗೆಲ್ಲಾ ಅನ್ನ ಬೇಡಮ್ಮ. ಅವಳಷ್ಟು ದೊಡ್ಡ ಗುಣ ನನಗಿದ್ದಿದ್ದರೆ ನನ್ನ ಸಮಾನವೇ ಇಲ್ಲ ಅಂತ ಅಂದುಕೊಳ್ತಾ ಇದ್ದೆ. ನಿಜವಾಗಿಯೂ ದಾಸಣ್ಣ ಅದೃಷ್ಟಶಾಲಿ.'

'ಸಾಕು. ಸುಮ್ಮನಿರೆ ಅವಳನ್ನು ನನ್ನೆದುರಿಗೆ ಹೊಗಳಬೇಡ. ಒಂದು ಬಣ್ಣದ ಮಾತಾಡಿ ಬಿಟ್ಟಳೇನೋ—ಅಷ್ಟಕ್ಕೇ ಅವಳು ದೇವರು ಅಂದುಕೊಂಡು ಬಿಟ್ಟೆ. ಅಂಥ ಹೆಂಗಸರ ಬುದ್ಧಿ ನಿನಗೇನು ಗೊತ್ತು? ಅಷ್ಟು ಚಾಲೂಕಿಲ್ಲದೆ ಇವನನ್ನು ಬಲೆಗೆ ಹಾಕಿಕೊಂಡಳೇ— ಅದೆಲ್ಲಾ ಈಗ್ಯಾಕೆ— ಹೇಗೋ ಇಷ್ಟು ದೂರ ಸಾಧಿಸಿದೀಯ. ನಿಮ್ಮಪ್ಪನನ್ನೂ ಒಪ್ಪಿಸಿಬಿಡು. ನಿನ್ನನ್ನು ಹಡೆದದ್ದಕ್ಕೆ ಸಾರ್ಥಕ ಆಯಿತು ಅನ್ನೀನಿ.'

—ಎಂದು ಲಕ್ಷ್ಮೀದೇವಮ್ಮ. ಪೂರ್ವಗ್ರಹಪೀಡಿತಳಾದ ಆಕೆಯೊಂದಿಗೆ ಹೆಚ್ಚು ವಾದಿಸಿ ಉಪಯೋಗವಿಲ್ಲವೆಂದು ರಾಜೇಶ್ವರಿಯೂ ಸುಮ್ಮನಾಗಿ, ತನ್ನ ಗಂಡನನ್ನು ಮತ್ತೊಮ್ಮೆ ನರಸಪ್ಪನವರ ಬಳಿ ಸಂಧಾನಕ್ಕೆ ಅಟ್ಟಿದಳು. ಅವಳ ಬಲಾತ್ಕಾರಕ್ಕೆ ಇಲ್ಲವೆನ್ನಲಾರದೆ ಮತ್ತೆ ನರಸಪ್ಪನವರ ಬಳಿ ಹೋದ ಚಂದ್ರಶೇಖರ. ಅವನು ಬಂದ ಕಾರ್ಯವೇನೆಂಬುದು ಅರ್ಥವಾದ ಕೂಡಲೇ ನರಸಪ್ಪನವರು, ಸಿಡಿದುಬಿದ್ದು—

'ಅದೊಂದು ವಿಷಯ ನನ್ನ ಮುಂದೆ ಎತ್ತಬೇಡ ಚಂದ್ರಶೇಖರ. ನನ್ನ ಪಾಲಿಗೆ ಮಗನಿಲ್ಲ. ಅವನು ನಾಯಕರೋಳ ಸ್ನೇಹಮಾಡಿದ ದಿನವೇ ಸತ್ತುಹೋದ.'

—ಘನವರು, ಗಾಳಿಬೀಸಿದ ಬೆಂಕಿಯಂತೆ ಉರಿಯುವ ಧ್ವನಿಯಲ್ಲಿ.

'ಹಾಗಂದರೆ ಹೇಗೆ ಆಗುತ್ತೆ ಮಾವಯ್ಯ. ನೀವೇನು ಹೇಳಿದರೂ ವಂಶದ ಹೆಸರು ಹೇಳಲು ಅವನೊಬ್ಬನು ತಾನೇ ಇರೋದು. ಅವನು ಹೀಗೆ ಮಾಡಬಾರದಾಗಿತ್ತು. ಒಪ್ಪಿಕೋತೀನಿ. ಈಗ ಆಗಬಾರದ್ದು ಆಗಿ ಹೋಯಿತು. ಜೋಳ ಹುಳುತರೆ ಹೊರಗೆ ಹಾಕಬಹುದು ಅಂತ ಮುತ್ತು ಕೊಳೆಯತಾವರೂ ಹೊರಗೆ ಬಿಸಾಡುವುದಕ್ಕಾಗುತ್ತೆಯೇ?

—ಹೇಗಾದರೂ ತಾನು ಬಂದ ಕಾರ್ಯವನ್ನು ಸಾಧಿಸಿಯೇ ಬಿಡಬೇಕೆಂಬ ಹಟದಿಂದ ಹೇಳಿದ ಚಂದ್ರಶೇಖರ.

'ಮುತ್ತು, ಮುತ್ತು ಅಣಿ ಮುತ್ತು, ನಾಯಕರೋಳ ಮೂಗಿನ ಮುತ್ತು! ವಂಶೋದ್ಧಾರಕನಂತ ವಂಶೋದ್ಧಾರಕ. ಅವನಿಂದ ನನ್ನ ವಂಶ ಹಾಳಾಗಿಹೋಯಿತು. ಪಿತೃಗಳೆಲ್ಲ ರೌರವನರಕದ ಪಾಲಾದರು. ಅವನು ನನ್ನ ವಂಶ ಉದ್ಧಾರಮಾಡೋದೂ ಬೇಡ. ನನಗೆ ಅವನು ಪಿಂಡ ಹಾಕೋದೂ ಬೇಡ.'

'ಬೇಡಾ ಅಂದರೂ ನಾಳೆ ಅವನೇ ತಾನೇ ದಿಕ್ಕು.'

'ಏಕೆ...ಏಕೆ... ಅವನೇ ನನಗೆ ಪಿಂಡ ಹಾಕಬೇಕೇ? ಬೇಕಾಗಿಲ್ಲ. ಇನ್ನೂ ನನ್ನ ಕೈಕಾಲು ಗಟ್ಟಿಯಾಗಿದೆ. ಗಯಾಕ್ಕೆ ಹೋಗಿ ಇವಳಿಗೂ ಒಂದು ಪಿಂಡ ಹಾಕಿ, ನನ್ನ ಆತ್ಮಶ್ರಾದ್ಧ ನಾನೇ ಮಾಡಿಕೊಂಡು ಬರ್‍ತೀನಿ. ಇವನೇನು ಮಾಡಬೇಕಾಗಿಲ್ಲ. ಲೋಕೋದ್ಧಾರದ ಕೆಲಸ— ಇದೊಂದು ಮಾಡಿದನಲ್ಲ, ಸಾಕು. ಇವನ ಮುಖಕ್ಕೆ ಬೆಂಕಿ ಹಾಕ? ಇವನ ಜನ್ಮಕ್ಕೆ ಮದುವೆಯೊಂದು ಕೇಡು. ಈಗ 'ಇವನನ್ನು ಹಡೆದ ನಾವು ಗೋಳಾಡ್ತಿರೋದೇ ಸಾಕು. ನಾಳೆ ಕಂಡೋರ ಕೂಸು, ಕಣ್ಣೀರಿನಲ್ಲಿ ಕೈತೊಳೆಯೋ ಹಾಗೆ ಮಾಡಲೇ? ಇವನನ್ನು ಹಡೆದ ಪಾಪವೇ ಸಾಕು'

—ಎಂದು ಮಾತು ಮುಂದುವರಿಯಲೂ ಅವಕಾಶ ಕೊಡದೆ, ಎದ್ದು ಹೊರಟುಹೋದರು, ಆ ಸುದ್ದಿಯನ್ನು ಕಿವಿಯಿಂದ ಕೊಡಹುವಂತೆ, ವೆಂ

ಮೇಲಿದ್ದ ವಸ್ತ್ರವನ್ನು ಕೊಡವಿ.

ಮತ್ತೊಮ್ಮೆ ಚಂದ್ರಶೇಖರ ನಿರಾಶನಾಗಿ ಹಿಂದಿರುಗಿದ. ಅಷ್ಟು ದೂರದ ವರೆಗೂ ಹೂವಿನ ಸರ ಎತ್ತಿದಂತೆ ಹಗುರವಾಗಿದ್ದ ಕೆಲಸ, ಅಷ್ಟು ದೂರ ಬಂದು ಅಲ್ಲೇ ನಿಂತುಹೋಗುವ ಹಾಗಾದದ್ದನ್ನು ಕಂಡು, ಗಂಡ ಹೆಂಡಿರಿಬ್ಬರೂ ಚಿಂತೆಗೊಳಗಾದರು. ಒಂದು ದಿನ ಗೆಲುವಾಗಿ ಓಡಾಡಿಕೊಂಡಿದ್ದ ಲಕ್ಷ್ಮೀದೇವಮ್ಮ ಮತ್ತೆ ಹಾಸಿಗೆ ಹಿಡಿದರು. ಭಾವನಿಂದ ನಡೆದ ವಿಷಯವನ್ನು ಕೇಳಿದ ವೆಂಕಟದಾಸಪ್ಪನವರು. ಒಳನಗೆ ನಕ್ಕು—

'ನಾನಾಗಲೇ ಹೇಳಲಿಲ್ಲವೇ ಭಾವ. ಇದರ ಹಣೆಬರಹ ಇಷ್ಟೇ. ಹೋಗಲಿ ಬಿಡು. ನೀನೇಕೆ ಚಿಂತೆ ಕಟ್ಟಿಕೊಂಡು ಕೊರಗುತ್ತೀಯ'

—ಎಂದರು.

ಎಲ್ಲರೂ ಇದು ತಮ್ಮ ಕೈ ಮೀರಿದುದು ಎಂದು ನಿರಾಶರಾದ ಹೊತ್ತಿನಲ್ಲಿ. ಈ ವಿಷಯವನ್ನು ರಾಜೇಶ್ವರಿಯಿಂದ ತಿಳಿದ ಗೌರಮ್ಮ—

'ದೊಡ್ಡ ಬುದ್ಧಿಯೋರ್ನ ನಾನು ಒಪ್ಪಿಸ್ತೀನಿ'

—ಎಂದಳು.

'ನೀನೇ! ಸದ್ಯ ನೀನು ಅವರನ್ನು ನೋಡಲೇಬೇಡ'

—ಎಂದಳು ರಾಜೇಶ್ವರಿ.

'ಏಕೆ?'

'ನಿನ್ನ ಹೆಸರು ಕೇಳಿದರೆ ಅಣ್ಣ ಸಿಟ್ಟು ಬೆಂಕಿಯಾಗುತ್ತಾನೆ. ಇನ್ನು ನೀನು ಎದುರಿಗೆ ಹೋದರೆ ಆಗಿಯೇ ಹೋಯಿತು.'

'ಏನು ಮಾಡ್ತಾರೆ?'

'ಸಿಟ್ಟಿನಲ್ಲಿ ಏನು ಬೇಕಾದರೂ ಮಾಡಬಹುದು—'

'ಹೆಚ್ಚೆಂದರೆ ನನ್ನನ್ನು ಕೊಂದುಹಾಕಬಹುದು. ಅಷ್ಟೇ ತಾನೇ. ಹಾಗಾದರೆ ಪೀಡೆ ಕಳೀತು. ದೊಡ್ಡ ಬುದ್ಧಿಯೋರ ಕೈಲಿ ನನಗೆ ಸಾವಾದ್ರೆ ಮತ್ತೆ ಈ ಮನುಷ್ಯಜನ್ಮದಾಗೇ ಹುಟ್ಟೋ ಕಾಟಾನೇ ಇಲ್ಲ. ಹಿಂಗಾಯ್ತಲ್ಲಾಂತ ನೀನು ಯೋಚ್ನೆ ಮಾಡ್ಬೇಡ ರಾಜಕ್ಕ. ನನ್ನಿಂದಾಲೇ ಇದೆಲ್ಲಾ ರಾದ್ಧಾಂತ. ನಾನೇ ಬಗೆಹರಿಸ್ತೀನಿ'

—ಎಂದು ಖಚಿತ ನಿರ್ಧಾರದ ಧ್ವನಿಯಲ್ಲಿ ಹೇಳಿದಳು ಗೌರಮ್ಮ.

## ೩೭

ಪ್ರತಿದಿನವೂ ಸಂಜೆ ದೇವೀಕೆರೆಗೆ ಬಂದು—ಒಂದೂವರೆ ಮೈಲಿ ದೂರದಲ್ಲಿದ್ದ ಹೊಸಹಳ್ಳಿಯಲ್ಲಿರುವ ಆಂಜನೇಯನ ಗುಡಿಗೆ ಹೋಗಿ, ಗುಡಿಯ ಹಿಂದೆ ಹರಿಯುತ್ತಿದ್ದ ಹಳ್ಳದ ಬಳಿ ಸಾಯಂ ಸಂಧ್ಯಾವಂದನೆ ಮುಗಿಸಿಕೊಂಡು ಆಂಜನೇಯನಿಗೆ ನಮಸ್ಕಾರ ಮಾಡಿ, ಅಲ್ಲಿ ಅಷ್ಟು ಹೊತ್ತು ಕುಳಿತಿದ್ದು, ಕತ್ತಲಾಗುವ ವೇಳೆಗೆ ಮನೆಗೆ ಹಿಂದಿರುಗುವುದು, ನರಸಪ್ಪನವರ ದಿನಚರಿಯಾಗಿತ್ತು. ಪ್ರತಿ ಶನಿವಾರ ಬೆಳಗ್ಗೆ ಸ್ನಾನ ಸಂಧ್ಯಾವಂದನೆ ಪೂಜೆ ಮುಗಿಸಿಕೊಂಡು, ಹಾಗೇ ಬಿಸಿಲಿನಲ್ಲೇ ಹೊಸಹಳ್ಳಿಗೆ ಹೋಗಿ ಆಂಜನೇಯನಿಗೂ ಪೂಜೆಮಾಡಿ ಬರುವರು. ಸಂಜೆ ಮನೆಯ ಹೆಂಗಸರೂ ಹೋಗಿ ಸ್ವಾಮಿಗೆ ಹಣ್ಣುಕಾಯಿ ಮಾಡಿಸಿಕೊಂಡು ಬರುವರು.

ಒಮ್ಮೆ ಭಾರಿ ಮಳೆ ಬಂದು, ಹಳ್ಳದ ದಡಗಳನ್ನೆಲ್ಲಾ ಕೊಚ್ಚಿ ಹರಿದಾಗ ಕಂಡುಬಂದ ಆಂಜನೇಯನ ಮೂರ್ತಿಯ ಮೇಲೆ ಅವರಿಗೆ ತುಂಬಾ ಅಭಿಮಾನ. ಅವರೇ ಹೊಸಹಳ್ಳಿಯ ಹತ್ತಾರು ಜನ ರೈತರನ್ನು ಹಿಡಿದು, ಆಂಜನೇಯನಿಗೆ ಸಣ್ಣದೊಂದು, ಮಣ್ಣು ಮಾಳಿಗೆಯ ಗುಡಿಯನ್ನು ಕಟ್ಟಿಸಿ, ದೇವರು ಬಿಸಿಲಿನಲ್ಲಿ ಬೆಂದು, ಮಳೆಯಲ್ಲಿ ತೊಯ್ಯುವುದನ್ನು ತಪ್ಪಿಸಿದ್ದರು. ಹಾಗೇ ಆ ಆಂಜನೇಯನ ಪೂಜೆಗೆ ದೇವೀಕೆರೆಯಲ್ಲಿದ್ದ ದಾಸಯ್ಯಗಳ ಜಾತಿಯವನೊಬ್ಬನನ್ನು ಗೊತ್ತುಮಾಡಿ, ಆತನಿಗೆ ಸುಗ್ಗಿಯಲ್ಲಿ ಹೊಸಹಳ್ಳಿಯ ರೈತರು, ಆಯದ ಕಾಳು ಕೊಡಲು ಒಪ್ಪಿಸಿದ್ದರು.

ದೇವಿ ನರಸಪ್ಪನವರ ಆರಾಧ್ಯ ದೇವತೆಯಾದರೂ, ಆಂಜನೇಯ ಅಭಿಮಾನ ದೇವತೆ. ಆ ದೇವತೆಯ ಪೂಜೆಗೆ ಅನುಕೂಲವಾಗಲೆಂದು ಹಳ್ಳದ ದಂಡೆಗೆ ಹೊಂದಿಕೊಂಡಂತೆ, ಸಣ್ಣದೊಂದು ಹೂವಿನ ತೋಟಮಾಡಿ, ಅಲ್ಲಿ ಕಣಗಲೆ, ದಾಸವಾಳ, ಮಲ್ಲಿಗೆ, ಜಾಜಿ, ಮರುಗ, ಮೊದಲಾದ ಹೂವಿನ ಗಿಡಗಳನ್ನು ಬೆಳೆಸಿ ದಿನವೂ ಸಂಜೆ ಅಲ್ಲಿಗೆ ಬಂದು, ತಾವೇ ಗಿಡಗಳಿಗೆ ನೀರೆರೆದು ಹೋಗುತ್ತಿದ್ದರು. ಹಾಗೇ ಗುಡಿಯ ಸುತ್ತಲಿದ್ದ ಕುರಿ ಪಾಪಯ್ಯನ

ಹೊಲವಲ್ಲಿ ಅಷ್ಟು ಭಾಗ ಬಿಡಿಸಿಕೊಂಡು ಅಲ್ಲೊಂದು ದೊಡ್ಡ ತೋಪು ಬೆಳೆಸಬೇಕು. ಒಂದು ಕೊಳ ತೋಡಿಸಬೇಕು, ಹನುಮಜ್ಜಯಂತಿಯ ದಿನ ಸಣ್ಣದಾಗಿ ದೇವರಿಗೆ ಉತ್ಸವ ಮಾಡಿಸಬೇಕು ಎಂದು ಏನೇನೋ ಕನಸು ಕಟ್ಟಿಕೊಂಡಿದ್ದರು.

ಆದರೆ ಆ ಕನಸುಗಳೆಲ್ಲಾ ನನಸಾಗುವ ದಿನ ಹತ್ತಿರವಾಗದಿದ್ದರೂ. ಕನಸು ಕಾಣುವುದನ್ನೇನೋ ನರಸಪ್ಪನವರು ಬಿಟ್ಟಿರಲಿಲ್ಲ. ದಿನವೂ ಸಂಜೆ ಅಲ್ಲಿಗೆ ಬಂದಾಗ ಎದುರಿಗೆ ಸಿಕ್ಕ ಯಾರಾದರೂ ಹೊಸಪಳ್ಳಿಯ ರೈತರನ್ನು ಹತ್ತಿರ ಕೂಡಿಸಿಕೊಂಡು, 'ಹಾಗಾಗಬೇಕು, ಹೀಗಾಗಬೇಕು' ಎಂದು ತಮ್ಮ ಕನಸನ್ನು ಚಿತ್ರಿಸುತ್ತಾ, ತಮ್ಮ ಉತ್ಸಾಹವನ್ನು ಅವರಲ್ಲಿಯೂ ಮೂಡಿಸುತ್ತಾ ಕೂಡುವರು.

ಇದು ಎಲ್ಲರಿಗೂ ಗೊತ್ತಿದ್ದ ಅವರ ದಿನಚರಿ.

ಮನೆಯಲ್ಲಿ ಮಗನ ಮೇಲೆ ಅಸಮಾಧಾನ ಮೂಡಿದ ಮೇಲೆ ಅದಷ್ಟು ಹೊತ್ತನ್ನು ಆ ಗುಡಿಯಲ್ಲೇ ಕಳೆಯುತ್ತಿದ್ದರು ನರಸಪ್ಪನವರು.

ಆ ದಿನ ಸಂಜೆಯೂ ಹಾಗೇ ನಾಲ್ಕಾರು ಮಂದಿ ರೈತರೊಂದಿಗೆ ಮಾತಾಡುತ್ತಾ ಕುಳಿತಿದ್ದರು. ಸಂಜೆಯ ಮಬ್ಬು ಕಪ್ಪಾಗುವ ಹೊತ್ತಾದ್ದರಿಂದ. ರೈತರನ್ನು ಮನೆಗೆ ಕಳಿಸಿ, ಅವರೂ ದೇವಸ್ಥಾನವನ್ನು ಪ್ರದಕ್ಷಿಣೆ ಮಾಡಿ ಬಂದು. ಆಂಜನೇಯನಿಗೆ ನಮಸ್ಕರಿಸಿ ಹಿಂದಿರುಗಿದಾಗ, ಮೋರೆಯ ಮೇಲೆ ಮುಸುಕೆಳೆದುಕೊಂಡ ಹೆಂಗಸೊಬ್ಬಳು ದೇವಾಲಯದ ಬಾಗಿಲ ಬಳಿ ನಿಂತಿರುವುದು ಕಾಣಿಸಿತು. ಯಾರೋ ತಮ್ಮ ಹಾಗೆ ದೇವರಿಗೆ ನಮಸ್ಕರಿಸಲೆಂದು ಬಂದ ರೈತರ ಹೆಂಗಸಿರಬೇಕೆಂದು ತಿಳಿದು. ತಲೆ ತಗ್ಗಿಸಿ ತಮ್ಮ ಪಾಡಿಗೆ ತಾವು ಹೋಗಲು ಹೊರಟರು. ಆದರೆ ಹೆಂಗಸು ಬಾಗಿಲಿಗೆ ಅಡ್ಡವಾಗಿ ನಿಂತಿದ್ದುದರಿಂದ. ಆಕೆ ದಾರಿ ಬಿಡದೆ ಹೋಗುವಂತಿರಲಿಲ್ಲ.

'ಸ್ವಲ್ಪ ದಾರಿ ಬಿಡು ತಾಯಿ'

—ಎಂದರು ನರಸಪ್ಪ.

'ಬುದ್ಧೋರು ನನ್ನ ಪ್ರಾರ್ಥನೆ ನಡೆಸಿಕೊಡ್ತೀನಿ ಅನ್ನೋಗಂಟ ದಾರಿ ಬಿಡಾಕಿಲ್ಲ'

—ಹೆಣ್ಣು ನಿರ್ಧಾರದ ಧ್ವನಿಯಲ್ಲಿ ಹೇಳಿದಳು.

ಅದನ್ನು ಕೇಳಿ ನರಸಪ್ಪನವರಿಗೆ ಆಶ್ಚರ್ಯವಾಯಿತು. ಈಕೆ ಯಾರು? ಇದೇನು ಮಾತು ಎಂದು ಯೋಚಿಸಿ, ಸೆರಗುಕವಿದ ಆಕೆಯ ಮುಖದತ್ತ ನೋಡಿದರು. ಕತ್ತಲೆಯಲ್ಲಿ ಮುಖ ಕಾಣದೆ ಆಕೆ ಯಾರೆಂದು ತಿಳಿಯಲಿಲ್ಲ.

'ನೀನು ಯಾರು? ನನ್ನಿಂದ ಏನಾಗಬೇಕಿತ್ತು'

—ಎಂದು ಕೇಳಿದರು.

'ನಾನು ಯಾರೂಂತ ಈಗ ಹೇಳಾಕಿಲ್ಲ. ಮೊದಲು ಬುದ್ಯೋರು ನನ್ನ ಮಾತು ನಡೆಸಿಕೊಡ್ತೀನೀಂತ ಅಂದ್ರೇನೇ ನಾನು ಮುಂದಕ್ಕೆ ಹೇಳೋದು.

—ಎಂದಳು ಆಕೆ.

'ಇದೇನು ಒತ್ತಾಯ? ಹೀಗೇಕೆ ಬಾಗಿಲು ಕಟ್ಟಬೇಕು. ನನ್ನ ಕೈಯಲ್ಲಾಗುವ ಕೆಲಸವಾದರೆ ಖಂಡಿತ ಮಾಡಿಕೊಡುತ್ತೇನೆ, ಅದೇನು ಹೇಳು.

'ಪ್ರಸಂಗ ಹಂಗೆ ಬಂದಿದೆ. ಮೊದಲು ನನ್ನ ಮಾತು ನಡಸ್ತೀನೀಂದ್ರೆ ಮುಂದಿನ ಮಾತು.'

'ನಡಸೋದಿಲ್ಲಾಂದರೇನು ಮಾಡ್ತೀಯ?'

—ಕೊಂಚ ತಾಳ್ಮೆ ತಪ್ಪುತ್ತಾ ಕೇಳಿದರು ನರಸಪ್ಪನವರು

'ಮಾಡೋದೇನಿದೆ— ನಿಮ್ಮೆಸ್ರು ಹೇಳಿ ಗುಡೀಲಿರೊ ಈಚಲ ಜಂತೆಗೆ ನೇಣು ಹಾಕ್ಕೋಡು ಪ್ರಾಣ ಬಿಡ್ತೀನಿ'

—ಆಕೆಯಾಡಿದ ಮಾತು ಹುಸಿಮಾತಿನಂತಿರದೆ ಪ್ರತಿಜ್ಞೆಯಂತಿತ್ತು.

'ಅಷ್ಟೆರು ತೀರ್ಮಾನಾನೂ ಮಾಡಿಕೊಂಡೇ ಬಂದಿದೀಯ. ಪರವಾಗಿಲ್ಲ. ನೀನು ಯಾರು?'

'ಅದೆಲ್ಲಾ ಆ ಮೇಲೆ? ಮೊದಲು ನಾನು ಕೇಳಿದ ಮಾತು ಕೊಡಿ.

'ಒಂದು ವೇಳೆ ನೀನು ಕೇಳುವುದು ನನ್ನ ಕೈಯಲ್ಲಾಗದ ಕೆಲಸವಾದರೆ...'

'ಅಂಥಾದ್ದಲ್ಲ. ನಿಮ್ಮ ಕೈಯಲ್ಲಾಗೋದೇ.'

'ಆಗೋದಾದರೆ ಮಾಡಿಕೊಡ್ತೀನಿ.'

'ಖಂಡಿತ?'

'ಖಂಡಿತವಾಗಿಯೂ— ನನಗೆ ಎರಡು ಮಾತಾಡಿ ಗೊತ್ತಿಲ್ಲ. ನನಗಿರ ವುದು ಒಂದೇ ನಾಲಿಗೆ.'

'ಅದು ನಂಗೂ ಗೊತ್ತೈತೆ ಬುದ್ಧಿ. ಓಂಗಂತೀನೀಂತ ಕ್ವಾಪ ಮಾಡ್ಕೋಬ್ಯಾಡಿ. ಆಂಜನೇಯನಾಣೆಗೂ ನನ್ಮಾತು ನಡಸಿಕೊಡ್ತೀನೀಂತ ಹೇಳ್ಬಿಡಿ.'

'ಚಿಲ್ಲರೆ ಕೆಲಸಕ್ಕೆಲ್ಲಾ ದೇವರ ಆಣೆ ಇಟ್ಟು ನನಗೆ ಗೊತ್ತಿಲ್ಲ.'

'ಇದು ಚಿಲ್ಲರೆ ಕೆಲಸವಲ್ಲ.'

'ನೋಡು—ನಿನ್ನ ಮಾತು ಅತಿಯಾಯಿತು. ಅದೇನೆಂದು ನಿನಗೆ ಹೇಳುವ ಮನಸ್ಸಿದ್ದರೆ ಹೇಳು. ಇಲ್ಲದಿದ್ದರೆ ದಾರಿಗೆ ಅಡ್ಡಬಿಟ್ಟು ತೊಲಗಿ ಹೋಗು'

—ಸಂಪೂರ್ಣವಾಗಿ ಸಹನೆ ಸೋತು ಹೇಳಿದರು ನರಸಪ್ಪನವರು.

'ಅಷ್ಟು ಕ್ವಾಪ ಇದ್ರೆ— ಬುದ್ಯೋರು ಹೋಗ್ಬೋದು'

—ಎಂದು ನುಡಿದು ಹೆಣ್ಣು ಅವರಿಗೆ ದಾರಿ ಬಿಟ್ಟು ನಿಂತಳು. ನರಸಪ್ಪ ನವರು ಹೊರಗೆ ಬಂದರು. ಅವರು ಬರುತ್ತಿದ್ದ ಹಾಗೇ ಆಕೆ ನರಸಪ್ಪನವರನ್ನು ಮಾತನಾಡಿಸದೆ ವೇಗವಾಗಿ ಗುಡಿಯೊಳಗೆ ಹೋದಳು.

'ಅವಳು ಏನು ಮಾಡುತ್ತಾಳೊ ಎಂದು ನಿಂತು ನೋಡಿದರು ನರಸಪ್ಪ— ಕುತೂಹಲದಿಂದ.

ಆಕೆ ಆಂಜನೇಯನಿಗೆ ನಮಸ್ಕರಿಸಿ—

'ಬುದ್ಯೋರು ಅಪ್ಪಣೆ ಕೊಟ್ಟವರೆ. ನೀನೇ ನನಗಿನ್ನು ದಿಕ್ಕು'

—ಎಂದು ಹೇಳಿ, ಗರ್ಭಗುಡಿಯ ಬಾಗಿಲ ಬಳಿ ತೆಂಗಿನಕಾಯಿ ಒಡೆಯಲೆಂದಿಟ್ಟಿದ್ದ ಕಲ್ಲಿನ ಮೇಲೆ ಹತ್ತಿ ನಿಂತು, ಸೆರಗನ್ನು ತೆಗೆದು ಕತ್ತಿಗೆಗೆ ಕುಣಿಕೆ ಹಾಕಿಕೊಂಡು, ಮತ್ತೊಂದು ಕೊನೆಯನ್ನು, ಕೋಚೆ ಎತ್ತರವಾಗಿದ್ದ ಈಚಲಮರದ ಜಂತೆಗೆ ಬಿಗಿಯಲೆತ್ನಿಸುತ್ತಿದ್ದುದು. ನಂದಾದೀವಿಗೆಯ ಮಂಕಾದ ಬೆಳಕಿನಲ್ಲಿ ಕಾಣಿಸಿ, ನರಸಪ್ಪನವರು ಒಂದೇ ಹಾರಿಗೆ ಅವಳ ಬಳಿ ಸೇರಿ ಅವಳನ್ನು ಕೆಳಗೆ ಹಿಡಿದೆಳೆದು—

'ನನ್ನಿಂದ ಅದೇನಾಗ್ಬೇಕೊ ಹೇಳು. ನನ್ನಾಣೆ... ನಮ್ಮಪ್ಪನಾಣೆ... ಆಂಜನೇಯನಾಣೆ... ನಿನಗೇನು ಬೇಕಾದರೂ ಮಾಡಿಕೊಡುತ್ತೇನೆ'

—ಎಂದರು ಉದ್ವಿಗ್ನರಾಗಿ.

ಕೆಳಗೆ ನೆಲದ ಮೇಲೆ ಬಿದ್ದ ಹೆಣ್ಣು, ಅವರ ಕಾಲನ್ನು ಹಿಡಿದು—

'ಬುದ್ಧಿ... ಬುದ್ಧಿ...ನಿಜ್ವಾಗೂ ನನ್ನವತ್ತು ಬದುಕಿಸಿದ್ರಿ'

—ಎಂದಳು, ಅವರ ಪಾದಕ್ಕೆ ತನ್ನ ಹಣೆಯನ್ನು ಒತ್ತಿ.

'ಅದೆಲ್ಲಾ ಇರ್ಲಿ—ಈಗ ನನ್ನಿಂದ ಏನಾಗಬೇಕು, ಹೇಳು'.

'ಬುದ್ಯೋರು ಮಕ್ಕಳವನ್ನಾಲಿಸ ಕ್ಷಾಪ ಪಾರತ್ಸಿಡಬೇಕು? ಅಷ್ಟೆ. ನಾನು ಬೇಡಿಕೊಳ್ಳೋದು.'

—ಎಂದಳು ಆಕೆ. ಆ ಮಾತು ಕಿವಿಗೆ ಬಿದ್ದ ತಕ್ಷಣವೇ ನರಸಪ್ಪ ನವರು ಅಷ್ಟುದೂರ ಹಾರಿ, ಕರ್ಕಶವಾದ ಧ್ವನಿಯಲ್ಲಿ—

'ನೀನು ಯಾರು?'

—ಎಂದು ಗದರಿಸಿ ಕೇಳಿದರು.

'ನಾನು... ನಾನು... ನಾನೇ ನಿಮ್ಮ ಮಕ್ಕಳನ್ನ ಕೆಡಸಿದ ಪಾಪಿ. ...ಗೌರಿ'

—ಎಂದಳು ಆಕೆ.

'ನೀನು... ನೀನು... ನಿನಗೆ ಇಷ್ಟು ಧೈರ್ಯ?!'

—ಸಿಟ್ಟಿನಲ್ಲಿ ಸಿಡಿಲಾಗಿ ಗುಡುಗಿದರು ನರಸಪ್ಪನವರು.

'ಬುದ್ಯೋರು ಕ್ಷಮಿಸಬೇಕು. ನನ್ಮೇಲೆ ತಗದ್ಬಿಡಿ. ನಾನು ಬ್ಯಾಡಾ ನ್ನಾಲ್ಲ. ಅದು ನನ್ನ ತಪ್ಪಿಗೆ ಶಿಕ್ಷೆ. ಆದ್ರೆ ತಪ್ಪು ಮಾಡದಿದ್ದೋರಿಗೆ ಶಿಕ್ಷೆ ವಿಧಿಸೋದು ಯಾವ ನ್ಯಾಯ ಬುದ್ಧಿ? ತಾವೂ ತಿಳಿದೋರು ಹಿಂಗ್ಮಾ ಡ್ಬೋದಾ—ಬೆಟ್ಟದಿಂದ ಬಿದ್ದೋರ್ನ ಡಡೀಲಿ ಹೊಡೆಯೋದು ನ್ಯಾಯವಾನಾ?'

—ಗೌರಮ್ಮ ನರಸಪ್ಪನವರ ನ್ಯಾಯಬುದ್ಧಿಯನ್ನು, ಮರುಕವನ್ನು ಕೆರಳಿಸುತ್ತಾ ಕೇಳಿದಳು.

'ಇದೇನು ನೀನು ಆಡುತಾ ಇರೋ ಮಾತು'

—ಆವಳು ಹೇಳಿದುದನ್ನು ಕೇಳಿ ದಿಗ್ಭ್ರಾಂತರಾಗಿ ಕೇಳಿದರು ನರಸಪ್ಪ ನವರು.

'ಸತ್ಯ ಬುದ್ದಿ. ಇರೋ ಮಾತು ಹೇಳ್ತಾ ಇವ್ನಿ.'

'ಅಂದರೆ—'

'ಚಿಕ್ಕಬುದ್ಧಿಯೋರ್ನ ತಾವು ದಂಡಿಸ್ತಾ ಇರೋದು ಅನ್ಯಾಯ.'

'ನಾನೇನೂ ಅವನನ್ನು ದಂಡಿಸುತ್ತಿಲ್ಲ'.

'ಆದ್ರೆ ಮಾತು ಬಿಟ್ಟಿದೀರಿ. ಅವ್ರು ಇದ್ರೂ ಒಂದೇ ಸತ್ತರೂ ಒಂದೇ ಅಂತ ಇದೀರಿ. ಈ ದುಃಖದಾಗೆ ಅವ್ರು ಅರ್ಧ ಆಗೋಗವ್ರೆ ತಪ್ಪು ನನ್ದು, ಶಿಕ್ಷೆ ಅನುಭವಿಸೋರು ಅವ್ರು.'

'ಅದು ಹೇಗೆ? ತಪ್ಪು ಅವನದು.'

'ಹಂಗಲ್ಲ ಬುದ್ಧಿ. ಗಂಡಸಿನ ಬುದ್ಧಿ ಬೆಣ್ಣೆ ಮುದ್ದೆ ಹಂಗೇಂತ ತಿಳಿದು ಗಂಡನಿದ್ದ ಗರತಿ ನಾನು ಹುಷಾರಾಗಿರ್ಬೇಕಾಗಿತ್ತು. ಆಟದ ಮಬ್ಬಿನಾಗೆ ಎಂಗಿದೀನಿ ಅನ್ನೋ ಪರಿವೇ ಇಲ್ದೆ ಅವರ ಮಾನಸ್ಸು ಕೆಡಿಸ್ದೆ. ಅವರ ತಲೇ ಮೇಲೆ ಕಲ್ಲೆತ್ತಾಕ್ದೆ.'

—ಗೌರಮ್ಮ ದುಃಖ, ಪಶ್ಚಾತ್ತಾಪ ತುಂಬಿದ ಧ್ವನಿಯಲ್ಲಿ ಹೇಳಿದಳು.

ಅವಳು ಹೇಳಿದುದೊಂದೂ ನರಸಪ್ಪನವರಿಗೆ ಅರ್ಥವಾಗಲಿಲ್ಲ. ಅವರಿಗೆ ತಮ್ಮ ಮಗ ಗೌರಮ್ಮನ ಬಳಿ ಹೋಗುತ್ತಿದ್ದನೆಂಬುದು ತಿಳಿದಿತ್ತೇ ವಿನಾ ಆ ಘಟನೆಯ ವಿವರಗಳಾವೂ ಗೊತ್ತಿರಲಿಲ್ಲ. ಎಂತಲೇ ಅವಳು ಆಡಿದ ಮಾತು ಅರ್ಥವಾಗದೆ ಕೇಳಿದರು—

'ಇದೇನು ನೀನು ಹೇಳ್ತಾ ಇರೋದು ಗೌರಮ್ಮ?'

'ಬುದ್ಯೋರು ಒಂದ್ಗಳ್ಗಿ ಕೂತುಕೊಂಡ್ರೆ ಎಲ್ಲಾ ವಿಚಾರಾನೂ ಹೇಳ್ತೀನಿ. ನಾಚಿಕೆಗೆಟ್ಟೋಳೂಂತ ಬುದ್ಯೋರು ಬಯ್ದ್ರೂ ಚಿಂತಿಲ್ಲ,

—ಹಾಗೇ ಕುಳಿತು ಕೇಳಿದರು ನರಸಪ್ಪ.

ಗೌರಮ್ಮ ಕಲ್ಲು ಚಪ್ಪಡಿಯ ಕಂಭಕ್ಕೆ ಒರಗಿ ಕುಳಿತುಕೊಂಡು, ಪಗಡೆ ಯಾಟದ ಪಂದ್ಯದಿಂದ ಆರಂಭಮಾಡಿಕೊಂಡು, ವೀರಣ್ಣ ತನ್ನನ್ನು ವೆಂಕಟ ದಾಸಪ್ಪನವರಿಗೆ ಒಪ್ಪಿಸಿದವರೆಗಿನ ಕಥೆಯೆಲ್ಲವನ್ನೂ ಹೇಳಿ—

'ಈಗ ಹೇಳಿ ಬುದ್ಧಿ— ತಪ್ಪು ಯಾರ್ದು? ಸ್ವಾಮಿ ಆಂಜನೇಯ ಎದುರಿಗಪ್ಪೆ. ನಾನೇನಾರ ಸುಳ್ಳೇಳಿದ್ರೆ ನನ್ತಲೆ ಸಾವಿರ ಹೋಳಾಗ್ಲಿ'

—ಎಂದಳು.

ಆ ಕಥೆಯೆಲ್ಲವನ್ನು ಕೇಳಿ ನರಸಪ್ಪನವರ ಮನಸ್ಸು ಅಲ್ಲಕಲ್ಲೋಲ

ವಾಗಿತ್ತು. ಆದರೆ ಅದನ್ನು ತೋರಗೊಡದೆ—

'ಅದೆಲ್ಲಾ ಆಗಿ ಹೋದ ಕಥೆ. ಈಗ ನನ್ನಿಂದೇನಾಗಬೇಕು ಹೇಳು —ಎಂದರು.

'ನನಗ್ಯಾಕಾಗಿರೋದಿಷ್ಟೇ ಬುದ್ಧಿ— ಯಾವ್ದೋ ಕ್ಯಾಪದಾಗೆ ಬುದ್ಧಿಯೋರು ತಪ್ಮಾ ವಂಶಕ್ಕೇ ಕೊಡಲಿ ಹಾಕ್ತಾ ಇದೀರಿ. ಇದ್ಯಾವ ನ್ಯಾಯ? ನಪ್ತಾಲೆ ತಗದ್ಬುಡಿ. ಅವ್ನೋರಿಗೆ ನಮ್ಮಾನ್ನ ಬಲಿಕೊಟ್ಬುಡಿ—ಬೇಕಂದ್ರೆ. ಆದರೆ ಹಿಂಗ್ಮಾಡೋದು ನ್ಯಾಯವಲ್ಲ ಬುದ್ಧಿ.'

'ನೀನು ಹೇಳೋ ಮಾತು ನನ್ಗೆ ಅರ್ಥವಾಗ್ತಾ ಇಲ್ಲ.'

'ಯಾವ ಮಾತು ಬುದ್ಧಿ?'

'ನನ್ನ ವಂಶಕ್ಕೆ ನಾನೇ ಕೊಡಲಿ ಪೆಟ್ಟು ಹಾಕುತ್ತಿದ್ದೇನೆ ಎಂಬುದು':

'ಅಲ್ಲಾ ಬುದ್ಧಿ. ಚಿಕ್ಕ ಬುದ್ಯೋರ ಮದುವೆಗೆ ನೀವು ಒಪ್ದೆಹೋದ್ರೆ ವಂಶ ನಡೆದಾತ? ಇರೋರು ಒಬ್ರು.'

'ನಾನು ಒಪ್ಪದಿದ್ದರೆ ಅವನು ಮದುವೆಯಾಗಬಾರದೇ?'

'ಹಂಗಾದಾತಾ ಬುದ್ಧಿ. ಅವರ ಮನಸ್ಸು ನೀವು ಕಾಣ್ರಿ. ನೀವು ಬೇಜಾರು ಮಾಡಿಕೊಂಡಿದೀರಂತ ಸಾವು ಯಾವಾಗ ಬರ್‍ತದೆ ಅಂತ ಕಾಯ್ತಾ ಅವ್ರೆ ಅವರು. ನಮ್ಮಾ ಮನೆಯೋರು ತಡೀದಿದ್ರೆ ಎಂದೋ ದೇಶಾಂತರ ಹೋಗೋರು. ನನ್ನೂ ಬಿಡಲಾರ್‍ರು—ನಿಮ್ಮೂ ಬಿಡಲಾರ್‍ರು. ಈ ಅಡ್ಡ ಕತ್ತರೀಲಿ ಸಿಕ್ಕಿಕೊಂಡು ಕೊರಗ್ತಾ ಅವ್ರೆ. ಇದು ಯಾವ ದೇವರಿಗೆ ಪ್ರೀತಿ, ಹೇಳ್ರಿ.'

'ಅಂದರೆ...ಅಂದರೆ...... ಈಗ ಅವನ ಮದುವೆ ಮಾಡಿಸಲಿಕ್ಕಾಗಿ ನೀನು ಪ್ರಾಣ ಕೊಡಲು ಸಿದ್ಧವಾಗಿದ್ದೀಯಾ?'

—ಅವಳ ಮಾತನ್ನು ಕೇಳಿ ತಪ್ಮಾದೆಯಲ್ಲಿ ಕಡೆಯುತ್ತಿದ್ದ ಪ್ರಶ್ನೆಯನ್ನು ಕೇಳಿದರು ನರಸಪ್ಪ.

'ಮತ್ತೇನು ಮಾಡ್ಲಿ ಬುದ್ಧಿ. ನನ್ನಿಂದ ಬುದ್ಯೋರ ವಂಶ ಹಾಳಾಗ್ಬೇಕಾ?'

ಗೌರಮ್ಮ ಹೇಳಿದ ಮಾತನ್ನು ಕೇಳಿ ನರಸಪ್ಪನವರ ಕರುಳು ಕಿವುಚಿದಂತಾಯಿತು. ತನ್ನ ವಂಶದ ಮೇಲೆ ಇವಳಿಗೆ ಪ್ರಾಣಕೊಡುವಷ್ಟು ಅಭಿ

ಮಾನ; ಇವಳಿಗೆ—ಯಾರಿಂದ ತನ್ನ ವಂಶ ಕೆಟ್ಟಿತು ಎಂದುಕೊಂಡಿದ್ದರೋ ಅವಳಿಗೆ. ಏಕೋ ಆ ಮಾತು ಕೇಳಿದ ಗಳಿಗೆಯಲ್ಲಿ ಅವಳಿಗಿಂತ ತಾವು ಬಹಳ ಚಿಕ್ಕವರು ಎನಿಸಿತು ನರಸಪ್ಪನವರಿಗೆ. ಹಾಗೇ ಹತ್ತು ನಿಮಿಷ ನೆತ್ತಿಯ ಮೇಲೆ ಕೈ ಹೊತ್ತು ಕುಳಿತು ಯೋಚಿಸಿದರು. ಬಳಿಕ ಏನೋ ಒಂದು ನಿರ್ಧಾರಕ್ಕೆ ಬಂದು, ಎದ್ದು ನಿಂತು—

'ಆಗಲಿ ಹೋಗು ಗೌರಮ್ಮ. ನಿನ್ನ ಮಾತು ನನಗೆ ಅರ್ಥವಾಯಿತು. ದಾಸಣ್ಣನ ಮದುವೆಗೆ ನಾನು ಅಡ್ಡ ಬಿಲ್ಲುವುದಿಲ್ಲ.

—ಎಂದರು.

'ಅಷ್ಟೇ ಆದರೆ ಸಾಲ್ದು ಬುದ್ಧಿ'

'ಮತ್ತೇನಾಗಬೇಕು?'

'ಬುದ್ಧ್ಯೋರು ಮಕ್ಕಳ ಮೇಲಿನ ಕ್ವಾಪ ಮರೆತ್ಬಿಡಬೇಕು.'

'ಅದು ಯಾವಾಗಲೋ ಹೊರಟು ಹೋಯಿತು.'

'ಅಂಗಾದ್ರೆ—ಮೊದಲ್ನಂಗೆ ಮಾತಾಡಿಸ್ಕೊಂಡಿರ್‍ತೀರಾ?'

—ಹರ್ಷದಿಂದ ಉತ್ಸಾಹವಾಗಿ ಕೇಳಿದಳು ಗೌರಮ್ಮ.

'ಅದೊಂದು ಸಾಧ್ಯವಿಲ್ಲ ಗೌರಮ್ಮ—'

'ಯಾವ್ದು?'

'ಅವನ ಹತ್ತಿರ ಮಾತಾಡೋದು'

'ಯಾಕೆ?'

—ಅವರ ಉತ್ತರವನ್ನು ಕೇಳಿ ಮತ್ತೆ ನಿರಾಶೆಯಾಳದಲ್ಲಿ ಮುಳುಗುತ್ತಾ ಕೇಳಿದಳು.

'ಅವನ ಹತ್ತಿರ ಮಾತನಾಡುವುದಿಲ್ಲಾಂತ ತಾಯಿಯ ಮೇಲೆ ಆಣೆ ಇಟ್ಟು ಶಪಥ ಮಾಡಿದ್ದೇನೆ. ಆದ್ದರಿಂದ ಈ ಘಟ ಒಡೆದು ಹೋಗುವವರೆಗೂ ಅದೊಂದು ಸಾಧ್ಯವಿಲ್ಲ. ಮೊದಲೇ ನನಗೆ ಸಹನೆ ಇರಬೇಕಾಗಿತ್ತು. ಇಲ್ಲ. ಆಯಿತು—ತಾಯಿಯ ಇಚ್ಛೆ. ಈ ಶಿಕ್ಷೆಯನ್ನು ಅನುಭವಿಸಿಯೇ ತೀರಬೇಕು. ಇವಳಿಗೆ ಉತ್ತರ ಕೊಡುವುದಕ್ಕಿಂತ ಹೆಚ್ಚಾಗಿ ತಮಗೆ ತಾವೇ ಹೇಳಿಕೊಂಡರು ನರಸಪ್ಪ. 'ಕ್ವಾಪ ಇಲ್ಲ—ಮಾತಾಡಿಸೋಕಿಲ್ಲ. ಇದೇನು ವಿಚಿತ್ರ ಬುದ್ಧಿ. ಇದ್ಯಾವ ತಪ್ಪಿಗೆ ಶಿಕ್ಷೆ? ತಪ್ಪು ನನ್ದೂಂತ ಹೇಳ್ಕಿಲ್ವಾ?

—ಅವರ ಮಾತು ಅರ್ಥವಾಗದೆ ಕೇಳಿದಳು ಗೌರಮ್ಮ.'

'ತಪ್ಪು ನಿನ್ನದೂ ಅಲ್ಲ, ಅವನದೂ ಅಲ್ಲ.'

'ಮತ್ತೆ ಯಾರದು?'

'ನನ್ನದು.'

'ಶಿಕ್ಷೆ'?

'ಅದು ನಿನಗೂ ಅಲ್ಲ—ಅವನಿಗೂ ಅಲ್ಲ. ನನಗೆ. ಮಗನ ವಿಷಯದಲ್ಲಿ ಅನ್ಯಾಯವಾಗಿ ನಡೆದುಕೊಂಡದ್ದಕ್ಕೆ ಇದೇ ತಕ್ಕ ಶಿಕ್ಷೆ ನನಗೆ. ನಾನು ಶಿಕ್ಷೆ ವಿಧಿಸುತ್ತಿದ್ದೇನೆ ಅಂದುಕೊಂಡಿದ್ದೆ. ಆದರೆ ತಾಯಿ ನನ್ನನ್ನೇ ಶಿಕ್ಷಿಸು ತ್ತಿದ್ದುದು ನನಗೆ ಕಾಣಲಿಲ್ಲ. ನೀನಿನ್ನು ಹೋಗು ಗೌರಮ್ಮ'

—ಎಂದರು ನರಸಪ್ಪ.

'ತಿಳೀದ ಹೆಣ್ಣು, ದುಃಖದಾಗೆ ಏನೇನೊ ಮಾತಾಡ್ಬುಟ್ಟೆ. ಬುದ್ಧ್ಯೋರು ಕ್ವಾಪ ಮಾಡ್ಕೋಬಾರ್ದು.'

'ಕೋಪ— ನಿನ್ನ ಮೇಲೆ? ಯಾವ ತಪ್ಪಿಗೇಂತ ನಿನ್ನ ಮೇಲೆ ಕೋಪ ಮಾಡಿಕೊಳ್ಳಲಿ. ಕುರುಡನಾಗಿದ್ದ ನನಗೆ ಕಣ್ಣು ಕೊಟ್ಟಿದ್ದಕ್ಕೆ ಕೋಪಮಾಡಿ ಕೊಳ್ಳಲೇ? ಆ ಮಾತೇ ಇಲ್ಲ.'

—ಎಂದು ಮಾತನ್ನು ಒಂದುಗಳಿಗೆ ತಡೆದು, ಏನೋ ಯೋಚಿಸಿ ಕಡೆಗೆ ಹೇಳಿದರು.

'ಗೌರಮ್ಮ, ನಿನ್ನದು ಬಹಳ ದೊಡ್ಡ ಮನಸ್ಸು. ಇನ್ನೊಂದು ಕೆಲಸ ಮಾಡಬೇಕಲ್ಲಾ?'

'ಅದೇನು ಹೇಳಿ ಬುದ್ಧಿ? ನೀವು ಕಾಲ್ನಾಗೆ ತೋರಿದ್ದನ್ನು ತಲೇಲಿ ಹೊತ್ತು ಮಾಡ್ತೀನಿ.'

'ಅದಲ್ಲ.'

'ಮತ್ತೇನು ಹೇಳಿ. ಅಪ್ಪಣೆ ಮಾಡಿ ಬುದ್ಧಿ.'

'ಅಪ್ಪಣೆ ಮಾಡುವುದೇ?—ನಾನು—ನಿನಗೆ ಅಪ್ಪಣೆ ಮಾಡುವುದೇ? ಆ ಯೋಗ್ಯತೆಯನ್ನು ನಾನು ಯಾವತ್ತೋ ಕಳೆದುಕೊಂಡೆ. ಈಗ ಉಳಿದಿರುವು ದೊಂದೆ– ಅರಿಯದೆ ನಿನ್ನನ್ನು ಹಲವಾರು ರೀತಿಯಲ್ಲಿ ನಿಂದಿಸಿದ ನನ್ನ ಅಪರಾಧ ವನ್ನು ಕ್ಷಮಿಸು ಎಂದು ಕೇಳುವುದು. ಅಷ್ಟೆ ನನ್ನನ್ನು ಕ್ಷಮಿಸು ಗೌರಮ್ಮ'.

ಬುದ್ಧೀ... ಬುದ್ಧೀ... ತಾವು ಆ ಮಾತಾಡಬಾರ್ದು... ...ನೀವು ದೇವ್ರಿದ್ದಂಗೆ...'

—ಅವರ ಮಾತು ಕೇಳಿ ಕೆಂಬನಿಯೊಡೆದು ಕಾತರಳಾಗಿ ಹೇಳಿದಳು ಗೌರಮ್ಮ.

'ದೇವರು... ಆ ಹೆಸರು ಹೇಳುವ ಯೋಗ್ಯತೆಯೂ ನನಗಿಲ್ಲ ಗೌರಮ್ಮ'

—ಎಂದವರೇ ನರಸಪ್ಪನವರು ಮುಂದೆ ಮಾತನಾಡಲಾಗದೆ, ಗೌರಮ್ಮನ ಮುಖವನ್ನೂ ನೋಡದೆ ಸರಸರನೆ ನಡೆದು, ಕತ್ತಲಲ್ಲಿ ಕರಗಿ ಹೋದರು.

ಪವಾಡವನ್ನು ಕಂಡ ಮುಗ್ಧ ಶಿಶುವಿನಂತೆ ಗೌರಮ್ಮ, ಕಂಬನಿ ತುಂಬಿ ಮಂಜಾದ ಕಣ್ಣುಗಳಿಂದ ಅವರು ಮರೆಯಾದ ದಿಕ್ಕನ್ನೇ ದಿಟ್ಟಿಸುತ್ತಾ ಕುಳಿತಿದ್ದಳು.

## ೨೮

ಅಣ್ಣನ ಮದುವೆಗೆ ಪರ್ವತದಂತೆ ಅಡ್ಡವಾಗಿ ನಿಂತಿದ್ದ ತಂದೆ ಒಪ್ಪಿದು ದನ್ನು ಕೇಳಿ ರಾಜೇಶ್ವರಿಯು ಆನಂದಕ್ಕೆ ಪಾರವೇ ಇಲ್ಲ. ಮಗನ ಮದುವೆ ಯನ್ನು ಅಷ್ಟು ವಿರೋಧಿಸುತ್ತಿದ್ದ ಅವರ ಮನಸ್ಸು ಇಷ್ಟು ಬೇಗ, ಇಷ್ಟು ಅನಿರೀಕ್ಷಿತವಾಗಿ ಹೇಗೆ ಬದಲಾಯಿಸಿತು ಎಂಬುದು ಅವಳಿಗೆ ಅರ್ಥವಾಗಲಿಲ್ಲ.

ನರಸಪ್ಪ ಆದಿನ ಮನೆಗೆ ಬಂದವರೇ ಚಂದ್ರಶೇಖರನನ್ನು ತಾವೇ ಕೂಗಿ—

'ಚಂದ್ರಶೇಖರಾ—ನೀನು ನಿನ್ನೆ ದಾಸಣ್ಣನ ಮದುವೆ ವಿಚಾರ ಎತ್ತಿದಾಗ ತುಂಬಾ ಒರಟಾಗಿ ಗದರಿಸಿಕೊಂಡೆ. ಏನೇನೂ ಮಾತಾಡಿಬಿಟ್ಟೆ. ಎಲ್ಲಾ ಮರೆತುಬಿಡು. ಅವನ ಮದುವೆ ಆಗೋ ವಿಷಯದಲ್ಲಿ ನನ್ನದೇನೂ ಅಭ್ಯಂತರವಿಲ್ಲ.'

—ಎಂದರು.

ಅವರ ಮಾತು, ಮಾತಾಡಿದ ರೀತಿ, ಆಕಸ್ಮಿಕ ಚರ್ಯೆ ಒಂದೂ ಚಂದ್ರಶೇಖರನಿಗೆ ಅರ್ಥವಾಗಲಿಲ್ಲ. ಆ ಮಾತನಾಡಿದ ಗಳಿಗೆಯಲ್ಲಿ ಅವರು ಏಕೋ ತೀರಾ ಹೊಸಬರಾಗಿದ್ದಾರೆ ಎನಿಸಿತು ಅವನಿಗೆ.

'ಆಯಿತು ಮಾವ, ತುಂಬಾ ಸಂತೋಷ.'

—ಎಂದಷ್ಟೇ ಹೇಳಿದ ಅವನು.

'ಆಯಿತು ಅಂದರೆ ಆಗುವುದಿಲ್ಲಪ್ಪಾ, ಅದು ಆದಷ್ಟು ಬೇಗ ಮುಗಿದು ಹೋಗಬೇಕು. ಇನ್ನು ಹೆಚ್ಚು ಕಾಲ ಅವಕಾಶವಿಲ್ಲ. ರಾಜೇಶ್ವರಿ—ನಿಮ್ಮ ಅಣ್ಣನಿಗೊಂದು ಸರಿಯಾದ ಹೆಣ್ಣು ನೀನೇ ನೋಡಬೇಕು.'

ಎಂದು ಮಗಳಿಗೆ ಹೇಳಿದರು.

'ಅದೆಲ್ಲಾ ನನಗೇನು ಗೊತ್ತಾಗುತ್ತಣ್ಣ. ನೀನು, ಅಮ್ಮ ನೋಡಿ ಒಪ್ಪಬೇಕು.'

'ನನಗೆ—ಅವಳಿಗೆ—ತಿಳಿಯುತ್ತದೆಯೋ? ತಿಳಿಯುತ್ತದೆ ಅಂದುಕೊಂಡ ಕಾಲ ಒಂದಿತ್ತು. ಈಗ ಅದು ಯಾವ ಮಾತೂ ಬೇಡ. ನೀನು, ನಿನ್ನ ಗಂಡ ಒಪ್ಪಿದ ಸಂಬಂಧಕ್ಕೆ, ನಾನು, ಅವಳು, ಬೇಡ ಎನ್ನುವುದಿಲ್ಲ. ನೀವು ಒಪ್ಪಿ,

ದಾಸಣ್ಣನೂ ಒಪ್ಪಿದರೆ ಆಯಿತು.'

—ಎಂದು ಮಾತು ಮುಗಿಸಿ, ಎದ್ದು ಹೋದರು.

ಹತ್ತು ನಿಮಿಷ ರಾಜೇಶ್ವರಿ–ಚಂದ್ರಶೇಖರ ಇಬ್ಬರೂ ಹಾಗೇ ಕುಳಿತಿದ್ದರು–ಮಾತನಾಡದೆ. ಕಡೆಗೆ ರಾಜೇಶ್ವರಿಯೇ ಹೇಳಿದಳು.

'ಇವತ್ತು ಅಣ್ಣ ಏಕೋ ಒಂದು ಥರಾ ಇದಾನೆ. ಅಲ್ವೆ?'

'ಹೂ. ದಿನದ ಹಾಗಿಲ್ಲ.'

'ಏಕೋ?'

'ಏಕೋ?'

—ಗಂಡ ಹೆಂಡಿರಿಬ್ಬರೂ ಒಂದೇ ಮಾತಾಡಿ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಆದರೆ ಯಾವ ಮುಖದಲ್ಲೂ ಉತ್ತರವಿರಲಿಲ್ಲ. ಹಾಗ ಳಿಂದ ನಡೆದದ್ದನ್ನು ಕೇಳಿ, ಲಕ್ಷ್ಮೀದೇವಮ್ಮನವರಿಗೂ ಉತ್ತರ ಕೊಡಲು ಗೊತ್ತಾಗಲಿಲ್ಲ.

'ಏಕೋ—ಏನೋ. ಕುರುಡನಿಗೆ ಬೇಕಾದದ್ದು ಎರಡು ಕಣ್ಣು ತಾನೇ. ಸದ್ಯ—ಒಪ್ಪಿಕೊಂಡರಲ್ಲ. ಅಷ್ಟೇ ನಮ್ಮ ಪುಣ್ಯ. ನಮ್ಮ ಗ್ರಹಚಾರ ತೀರೋಕಾಲ ಬಂತು ಅಂತ ಕಾಣುತ್ತೆ. ಎಲ್ಲಾರ ಬುದ್ಧೀನೂ ಬದಲಾಯಿಸ್ತಾ ಇದೆ. ನೀನು ಮನೇಲಿ ಕಾಲಿಟ್ಟ ಗಳಿಗೆ ಒಳ್ಳೆಯದು. ಎಲ್ಲಾ ಕೆಲಸಾನೂ ಹೂವಿನ ಸರ ಎತ್ತಿದ ಹಾಗೆ ಆಗ್ತಾ ಇದೆ. ನೀನೂ ನಿನ್ನ ಗಂಡ ಇಬ್ಬರೂ ಸೇರಿ ನಿಮ್ಮಣ್ಣನಿಗೆ ಒಂದು ಒಳ್ಳೇ ಹೆಣ್ಣನ್ನು ಆರಿಸಿ. ಮದುವೆಮಾಡಿಸಿದ ಪುಣ್ಯಾನೂ ಕಟ್ಟಿಕೊಳ್ಳಿ.'

—ಎಂದರು ಉತ್ಸಾಹವಾಗಿ.

ಹೆಂಡತಿಯನ್ನು ತವರುಮನೆಗೆ ಬಿಟ್ಟುಬರಲು ಹೋದ ಚಂದ್ರಶೇಖರ ವೆಂಕಟದಾಸಪ್ಪನವರಿಗೆ ಹೆಣ್ಣು ಹುಡುಕುವ ಹೊಣೆಗಾರಿಕೆಯನ್ನು ಹೊತ್ತು ಕೊಂಡು, ಪರಶುರಾಮಪುರಕ್ಕೆ ಹಿಂದಿರುಗಿದ.

ಎರಡೇ ದಿನದಲ್ಲಿ ಬರುತ್ತೇನೆ ಎಂದ ಚಂದ್ರಶೇಖರ, ಬರುವುದು ತಡ ವಾದುದರಿಂದ, ದೇವೀಕೆರೆಯಲ್ಲಿ ಬೀಗಿತ್ತಿಗೆ ಏನಾಯಿತೊ, ಆರೋಗ್ಯ ಹೇಗಿ ದೆಯೋ ಎಂಬ ಚಿಂತೆಯಲ್ಲಿ ಭಾಗಮ್ಮ ತೊಳಲುತ್ತಿದ್ದರು. ತಾಯಿಯನ್ನು ಒಬ್ಬಳನ್ನೇ ಮನೆಯಲ್ಲಿ ಬಿಟ್ಟು ಬಂದುದು, ಚಂದ್ರಶೇಖರನಿಗೂ ಅಷ್ಟೇ

ಯೋಚನೆಗೆ ಕಾರಣವಾಗಿತ್ತು.

ಗಾಡಿಯಿಂದಿಳಿದು ಬಂದ ಮಗನಿಗೆ ಮುಖ ತೊಳೆಯಲು ನೀರುಕೊಟ್ಟು, ಅವನು ಮುಖ ತೊಳೆದುಕೊಳ್ಳುತ್ತಿರುವಾಗಲೇ —

'ಏನು ಚಂದ್ರಣ್ಣ ಇಷ್ಟು ದಿನ ಮಾಡಿಬಿಟ್ಟೆ? ಲಕ್ಷ್ಮೀದೇವಿ ಸುಖ ವಾಗಿದಾಳೆಯಾ?'

—ಎಂದು ಕೇಳಿದರು, ಭಾಗಮ್ಮ.

'ಹೂ, ಅತ್ತೆಯವರು ಆರೋಗ್ಯವಾಗಿದಾರೆ.'

'ಸಧ್ಯ—ದೇವರು ದೊಡ್ಡವನು. ಬೆಳಿಗ್ಗೆ ಎದ್ದು ಒಳ್ಳೆ ಸುದ್ದಿ ಕೇಳಿದ ಹಾಗಾಯಿತು. ನೀನು ಬರುವುದು ತಡವಾಗಿ ಏನಾಯಿತೊ ಅಂತ ಗಾಬರಿ ಯಾಗಿತ್ತು. ಅದೇನು ಅಷ್ಟು ದಿನ ನಿಂತುಬಿಟ್ಟೆ?'

'ಅದೆಲ್ಲಾ ಒಂದು ದೊಡ್ಡ ಕಥೆ. ಆಮೇಲೆ ನಿಧಾನವಾಗಿ ಹೇಳುತ್ತೇನೆ. ಮನೆಯಲ್ಲಿ ನಿನಗೇನೂ ಅನಾನುಕೂಲವಾಗಲಿಲ್ಲ ತಾನೇ?'

'ನನಗೇನು ಅನಾನುಕೂಲ ಆಗಬೇಕು.'

'ಹಾಗಲ್ಲ, ಒಬ್ಬಳೇ ಇದ್ದೆ......'

'ಇಲ್ಲ'

'ಮತ್ತೆ ಯಾರಿದ್ದರು ಜೊತೆಗೆ?'

'ಕೋಟೆ ಶಾಮಣ್ಣನ ಮಗಳು ರಂಗು ಇಲ್ಲೇ ಇರ್ತಾ ಇದ್ದಳು. ಆ ಹುಡುಗಿ ಇದ್ದದ್ದು ಹತ್ತು ಜನ ಇದ್ದ ಹಾಗಿತ್ತು, ಮನೇಲಿ.'

ಹೋಗಲಿ ಬಿಡು. ನಿನಗೆ ತೊಂದರೆಯಾಗಲಿಲ್ಲವಲ್ಲ. ನನಗೆ ಅದೇ ದೊಡ್ಡ ಯೋಚನೆಯಾಗಿತ್ತು. ರಾತ್ರೀದು ಅನ್ನ ಏನಾದರೂ ಇದ್ದರೆ ಗಾಡಿ ಯವನಿಗೆ ಅಷ್ಟು ಊಟಕ್ಕೆ ಹಾಕಿಬಿಡು. ನಾನು ಸ್ನಾನ ಸಂಧ್ಯಾವಂದನೆ ಮುಗಿಸಿಕೊಂಡು ಬರುತ್ತೀನಿ. ನಿನ್ನ ಹತ್ತಿರ ಮಾತನಾಡೋದು ಬಹಳ ಇದೆ,

—ಎಂದು ಹೇಳಿ ಚಂದ್ರಶೇಖರ ಸ್ನಾನಕ್ಕೆ ಹೊರಟ.

ಅವನು ಸ್ನಾನ ಸಂಧ್ಯಾವಂದನೆ ಮುಗಿಸಿಕೋಡು ಬರುವುದರೊಳಗೆ ಭಾಗಮ್ಮ ಗಾಡಿಯವನಿಗೆ ಊಟಕ್ಕೆ ಬಡಿಸಿ, ಚಂದ್ರಶೇಖರನ ಉಪಹಾರಕ್ಕೆ ತಪ್ಪಲೆರೊಟ್ಟಿ ಸುಟ್ಟು, ಅದಕ್ಕೆ ಕಾಯಿಚಟ್ನಿಯ ಸಾಧನ ಮಾಡಿ, ಒಂದು ತಟ್ಟೆಯಲ್ಲಿ ರೊಟ್ಟಿ, ಚಟ್ಟಣಿ ಕೆನೆಮೊಸರು ಬೆಣ್ಣೆಯನ್ನು ಇಟ್ಟುಕೊಟ್ಟರು.

ತಾಯಿ ಕೊಟ್ಟ ತಿಂಡಿಯನ್ನು ತಿನ್ನುತ್ತಾ ಅಡಿಗೆ ಮನೆಯಲ್ಲೇ ಕುಳಿತು

ಕೊಂಡ ಚಂದ್ರಶೇಖರ. ಈಳಿಗೆಮಣೆಯನ್ನು ಎಳೆದುಕೊಂಡು, ತರಕಾರಿ ಹೆಚ್ಚುತ್ತಾ ಭಾಗಮ್ಮನವರೂ, ಮಗ ಹೇಳಬೇಕೆಂದಿದ್ದುದನ್ನು ಕೇಳಲು ಸಿದ್ಧ ವಾದರು.

ಚಂದ್ರಶೇಖರ ತಾನು ದೇವೀಕೆರೆಯಿಂದ ಹಿಂದಿರುಗಿ ಬರಲು ತಡ ವಾದುದಕ್ಕೆ ಕಾರಣವಾದ ವೆಂಕಟದಾಸಪ್ಪನ ವಿಚಾರವನ್ನು ಹೇಳಿ, ಅದೇ ಲಕ್ಷ್ಮೀದೇವಮ್ಮನವರ ಅನಾರೋಗ್ಯಕ್ಕೆ ಕಾರಣವಾದುದನ್ನು ತಿಳಿಸಿದ. ಭಾಗಮ್ಮ ನವರು ನಡುವೆ ಒಂದೂ ಮಾತನಾಡದೆ, ಅವನು ಹೇಳಿದುದೆಲ್ಲವನ್ನೂ ಕೇಳಿ, ಕಡೆಗೆ—

'ಹೋಗಲಿ ಬಿಡು. ನೀನು ಮೂರು ದಿನ ನಿಂತರೂ ಚಿಂತೆಯಿಲ್ಲ. ಎಲ್ಲಾ ಏನೋ ಒಂದು ಸಮಾಧಾನಕ್ಕೆ ಬಂದಹಾಗಾಯ್ತಲ್ಲ'

—ಎಂದರು.

'ಆ ಸಮಾಧಾನ ಹಚ್ಚಿಕೊಂಡೇ ವಾಪಸು ಬಂದೆ. ಅವರೆ ಬರುವಾಗ ಜೊತೆಗೆ ಮತ್ತೊಂದು ದೊಡ್ಡ ಚಿಂತೆ ಹಚ್ಚಿ ಕಳಿಸಿದಾರೆ ಅತ್ತೆ'

'ಮತ್ತೇನು ಚಿಂತೆ ?'

'ದಾಸಣ್ಣನಿಗೆ ಸರಿಯಾದ ಹೆಣ್ಣನ್ನು ನೋಡಿ ಮದುವೆ ಮಾಡಿಸುವ ಜವಾಬದಾರಿಯನ್ನು ನಮ್ಮ ಮೇಲೆ, ಅಂದರೆ, ನಿನ್ನ ಮೇಲೆ ಹಾಕಿದಾರೆ'

'ಚನ್ನಾಯಿತು. ಮಗನಿಗೆ ಸೊಸೆ ತಂದುಕೊಳ್ಳೋಳು ಅವಳು ನೋಡ ಬೇಕು—ಅದು ಬಿಟ್ಟು, ನಾನು ನೀನು ಒಪ್ಪಿದರೆ ಏನಾದಹಾಗಾಯಿತು.'

'ನಾನೂ ಅದೇ ಹೇಳಿದೆ. ಅವರು ಕೇಳಲಿಲ್ಲ. ದಾಸಣ್ಣ ಹೀಗಾದಂದಿನಿಂದ ಮಹಾಪನವರಿಗೆ ಪ್ರಪಂಚವೇ ಬೇಡವಾಗಿದೆ. ಅತ್ತೆಯವರು ನನಗೇನು ಗೊತ್ತಾ ಗುತ್ತದೆ ಅನ್ನುತ್ತಾರೆ. ಹೀಗಾಗಿ ಆ ಭಾರ ನಮ್ಮ ಮೇಲೆ ಬಿದ್ದಿದೆ'

'ನೀನು ಹುಷಾರಾಗಿ ಆ ಜವಾಬ್ದಾರೀನ ನನ್ನ ಹೆಗಲ ಮೇಲೆ ಹಾಲಿ ಸ್ತಿದೀಯ—ಅಲ್ಲವೇ?'

'ನಾನೇ ನಿನ್ನ ಮೇಲೆ ಭಾರವಾಗಿರೋವಾಗ, ನನ್ನ ಜೊತೇಲಿ ನಾನು ಹೊತ್ತುಕೊಂಡಿದ್ದನ್ನೂ ನೀನೇ ತಾನೇ ಹೊತ್ತುಕೋಬೇಕು.'

'ಈಗ ಹಾಗೇ ಆಗಿದೆ ಅನ್ನು.'

—ಅಂದು ಭಾಗಮ್ಮನವರು ಅಷ್ಟು ಹೊತ್ತು ಮಗ ಹೇಳಿದುದನ್ನು ಮೆಲುಕು ಹಾಕಿ, ಏನೋ ಯೋಚಿಸಿ—

'ನನಗೇನೋ ಒಂದು ಯೋಚನೆ ಹೊಳೀತಾ ಇದೆ ಚಂದ್ರಣ್ಣ. ಎಲ್ಲರೂ ಒಪ್ಪಿದರೆ ಆಗಬಹುದು' ಎಂದರು.

'ನಿಂದು ಒಳ್ಳೆ ಪೂರ್ಣಾಯ್ಯುಸ ತಲೇಕಣಮ್ಮ'

—ತಾಯಿಯ ಮಾತುಕೇಳಿ ಚಂದ್ರಶೇಖರ ನಗುತ್ತಾ ಹೇಳಿದ.

'ಏಕೋ?'

'ಏನಾದರೂ ಹೇಳು ತಟಕ್ಕನೆ ಅದಕ್ಕೊ ಒಂದುಪಾಯ ಇದೇ ಅನ್ತೀಯಲ್ಲ. ಅದಕ್ಕೆ ಹೇಳಿದೆ.'

'ಹೊಟ್ಟೇಲಿ ಹುಟ್ಟಿದೋನು ನೀನು ಹೊಗಳಿಬಿಟ್ಟೆಯಲ್ಲ—ಸಾಕು—ನಾನು ಹುಟ್ಟಿದ್ದು ಸಾರ್ಥಕವಾಯಿತು. ಹಾಗಲ್ಲ ಕಣೊದ್ರಾಗೆ—ನಿನ್ನ ಹಾಗಿದ್ದರಾಗುತ್ತ್ಯೆಯೆ?

'ಮತ್ತೆ ಹ್ಯಾಗಿರಬೇಕು?'

'ಯಾರು ಏನಾದ್ರೂ ಕೇಳಿದ್ರೆ ಕೊಡಬೇಕು, ಇಲ್ಲವೇ ಖಂಡಿತವಾಗಿ ಸಿಗೋ ಜಾಗ ತೋರಿಸಬೇಕು.'

'ಅದು ಸರಿ—ಈಗ ಯಾವ ಜಾಗ ತೋರಿಸ್ತಿ, ಹೇಳು.'

'ಅದೇ ಹೇಳ್ತಾ ಇದ್ದೆ—ಅದರೆ ನೀನು ಮಾತು ತಿರುಗಿಸಿಬಿಟ್ಟೆ, ಒಂದು ಹೆಣ್ಣೇನೊ ನನ್ನ ದೃಷ್ಟೀಲಿ ಇದೆ. ಅವರೂ ಒಪ್ಪಿದರೆ ಆಗಬಹುದು'.

'ಯಾರು?'

'ನಾನಾಗಲೇ ಹೇಳಲಿಲ್ಲವೇ ಕೋಟೆ ಶಾಮಣ್ಣನ ಮಗಳು ರಂಗೂಂತ—ಅವಳು. ಅವಳಿಗೂ ಒಂಭತ್ತು ಹತ್ತು ವರ್ಷಕ್ಕೆ ಬಂತು. ಅವಳಿಗೊಂದು ಗಂಡು ದಿಕ್ಕಾಗಲಿಲ್ಲವಲ್ಲ, ಮುಂದೇನು' ಗತಿ ಭಗವಂತಾಂತ ಅವರಮ್ಮ ದಿನಾ ಕಣ್ಣೀರಲ್ಲಿ ಕೈ ತೊಳೀತಿದಾಳೆ. ಅವರಪ್ಪನಿಗಂತೂ ಯಾವುದೂ ಬೇಡ. ಬೆಲ್ಲ ಬಡಿದ ಕಲ್ಲಿನ ಹಾಗಿದಾನೆ. ಹುಡುಗಿ ನೋಡೋಕೆ ಅಂಥ ರತಿ ಏನಲ್ಲ. ಹಾಗಂತ ಕಣ್ಣು ಮೂಗು ಡೊಂಕೇನೂ ಇಲ್ಲ. ರೂಪವಂತೆ ಅನ್ನದೇ ಹೋದರೂ ಸಂಸಾರಕ್ಕೆ ಆಣೆಯಾದ ಹೆಣ್ಣು.'

'ನಾನೂ ನೋಡಿದೇನಲ್ಲ ಅವಳನ್ನು ಕೇಳಿ ನೋಡು ಏನು ಹೇಳ್ತಾರೋ'

ಕೇಳೋದೇನು ಬಂತು ಕುಣೀತಾ ಒಪ್ಕೋತಾಳೆ ವೆಂಕಮ್ಮ.

'ಹಾಗಲ್ಲಮ್ಮ—ಇರೋ ವಿಷಯ ಎಲ್ಲಾ ಹೇಳಿ, ಅವರು ಒಪ್ತಾರೆಯೋ ಇಲ್ಲವೋ ಕೇಳಬೇಕು.'

'ಇರೋ ವಿಷಯ ಅಂದರೆ—ನಮ್ಮ ಹುಡುಗನಿಗೇನು ಕಿವುಡೇ, ಕುರುಡೇ? ಅಪಸ್ಮಾರವೇ? ಏನು ಹೇಳಬೇಕು.'

'ಅವಲ್ಲಮ್ಮ—ಗೌರಮ್ಮನ ವಿಷಯ.'

'ಹೋಗೋ, ಹುಚ್ಚ ಒಬ್ಬಳಲ್ಲ ಹತ್ತು ಹೆಂಗಸರು ಇದ್ದರೆ ತಾನೇ ಏನು? ಗಂಡಸು ಗೂಳಿ ಇದ್ದ ಹಾಗೆ. ಮೂಗುದಾರ ಹಾಕಿ ಯಾರು ನಡೆಸ್ತಾರೊ ಅವರು ಹೇಳಿದ ಹಾಗೆ ಕೇಳ್ತಾನೆ. ಹುಡುಗಿ ಚಾಲೂಕಾಗಿದ್ರೆ ಅವೆಲ್ಲಾ ಒಂದು ದೊಡ್ಡ ವಿಷಯವೇ?'

'ನಿನ್ನ ಮಗಳೇ ಆಗಿದ್ರೆ ಹಾಗನ್ತಾ ಇದ್ದೆಯಾ?'

'ಮದುವೇಗೆ ಮುಂಚೆ ನಿಮ್ಮಪ್ಪ ಹೇಗಿದ್ದರು ಅಂದುಕೊಂಡಿದೀಯಾ? ಅವರೂ ಎಲ್ಲಾ ಆಟ ಆಡಿದೋರೆ. ಅವರ ವಿಷಯ ತಿಳಿದೂ ತಿಳಿದೂ ನಾನು ಮದುವೆ ಮಾಡಿಕೊಂಡೆನಲ್ಲಾ—ನನಗೇನಾಯಿತು ಧಾಡಿ. ಅದೆಲ್ಲಾ ಏನು ಮಾತು ಬಿಡು. ಶಾಮಣ್ಣ ತಾನೇ ಇನ್ನೇನು—ಮೂರು ಹೊತ್ತು ಅಂಗಡಿ ರುದ್ರಮ್ಮನ ಮನೇಲಿ ಇಸ್ಪೀಟೆಲೆ ಬಡೀತಾ ಬಿದ್ದಿರ್ತಾನೆ. ಹಾಗಂತ ಈ ಹುಡುಗೀನ ಬೇಡ ಅನ್ನೋಕಾಗುತ್ಯೆ?'

'ನಿನ್ನ ಮಾತಿನಲ್ಲಿ ತಾಳೇ ಇಲ್ಲ, ಹೊಂದಾಣಿಕೆ ಇಲ್ಲ. ಅಲ್ಲಿ ಕೆಟ್ಟೋರೇನು ಹುಡುಗಿ ಅಲ್ಲ, ಹುಡುಗಿ ಅಪ್ಪ; ನಮ್ಮನೇ ಕಾವಲೀನೇ ತೂತು.'

'ಅಷ್ಟೇ ತಾನೆ. ಆ ತೂತು ಬೆಸಗೇ ಹಾಕೋಕಿಂತಲೇ ಮದುವೆ ಮಾಡ್ತಿದೀವಿ ಅಂದರಾಯಿತು. ಅದೆಲ್ಲಾ ನನಗೆ ಬಿಡು. ನೀನು ದಾಸಣ್ಣನ ಜಾತಕ ಗುರುತು ಹಾಕಿಕೊಂಡು ಬಂದಿದೀಯೋನು?'

'ಹೂ'.

'ಸದ್ಯ ಅಷ್ಟಾದರೂ ಬುದ್ಧಿ ಓಡಿಸಿದೆಯಲ್ಲಾ ಅದನ್ನು ನನ್ನ ಕೈಗೆ ಕೊಡು. ಮಧ್ಯಾಹ್ನ ವೆಂಕಮ್ಮನ ಕೈಲಿ ಯಾವ ವಿಷಯಾನೂ ಮಾತಾಡ್ತೀನಿ.'

'ಏನಾದರೂ ಮಾತಾಡು. ಆದರೆ ಯಾವ ವಿಷಯಾನೂ ಮುಚ್ಚಿಡಬೇಡ. ನಾಳೆ ನಮಗೆ ಇರೋ ವಿಷಯ ಹೇಳದೆ ನಮ್ಮ ಹುಡುಗೀ ತಲೆ ಮೇಲೆ ಇವರು ಕಲ್ಲುಚಪ್ಪಡಿ ಎಳೆದರು ಅಂತ ಅವರು ಆಡಿಕೊಳ್ಳೋದೇ ಬೇಡ.',

'ನಿನಗಿಂತ ನಾನು ಹತ್ತು ವರ್ಷ ಮುಂಚೆ ಹುಟ್ಟಿದೀನಿ. ನನಗೂ ಎಲ್ಲಾ ಗೊತ್ತಾಗುತ್ತೆ. ನನಗೇ ಹೇಳಿಕೊಡಬೇಡ ಹೋಗೊ.'

'ಸರಿ ಬಿಡು ನನಗೇನಾಗ ಬೇಕು. ಎಲ್ಲಾ ಜವಾಬ್ದಾರೀನೂ ನಿನ್ನದು. ನನಗೇ ಹಗುರಾಯಿತು.'

—ಎಂದು ಹೇಳಿ ಚಂದ್ರಶೇಖರ ತನ್ನ ಕೆಲಸವನ್ನು ತಾಯಿಗೆ ಒಪ್ಪಿಸಿ ಎದ್ದುಹೋದ.

## ೨೯

ಮಧ್ಯಾಹ್ನ ಮಗನ ಊಟ ಮುಗಿಯುತ್ತಿದ್ದ ಹಾಗೆ, ಭಾಗಮ್ಮನವರು ತಾವೂ ಊಟ ಮುಗಿಸಿ, ಉಳಿದ ಅಡಿಗೆಗಳನ್ನು ಮುಚ್ಚಿಟ್ಟು, ಹತ್ತಿಯ ಬುಟ್ಟಿ, ವಿಭೂತಿಯ ಡಬ್ಬಿಯನ್ನು ತೆಗೆದುಕೊಂಡು, ಕೋಟೆ ಶಾಮಣ್ಣನವರ ಮನೆ ಯತ್ತ ಹೊರಟರು.

ಅವರ ಮನೆಯಲ್ಲೂ ಊಟ ಮುಗಿದು, ಶಾಮಣ್ಣನವರ ಹೆಂಡತಿ ವೆಂಕಮ್ಮ, ಕಸ ಮುಸುರೆ ಮಾಡುತ್ತಿದ್ದವಳು ಬಾಗಿಲಲ್ಲಿ ಭಾಗಮ್ಮನ ಧ್ವನಿ ಯನ್ನು ಕೇಳಿ, ಹೊರ ಬಂದು—

'ಏನು ಭಾಗತ್ತೆ? ಇಷ್ಟು ಹೊತ್ತಿನಂತೇನೇ ಬಂದುಬಿಟ್ರಿ'

—ಎಂದು ಕೇಳಿದಳು.

'ರಂಗೂ ಎಲ್ಲಿ?'

'ಹಿತ್ತಿಲಲ್ಲಿ ಪಾತ್ರೆ ಉಜ್ತಾ ಇದಾಳೆ'

'ಸರಿ—ನೀನೂ ಕೆಲಸ ಮುಗಿಸಿಕೊಂಡು ಬಾ. ರುಕ್ಕಿ ಎಲ್ಲಿ ಹೋಗಿದ್ದಾಳೆ. ಪುಟ್ಟನೂ ಇದ್ದಹಾಗಿಲ್ಲ...?'

'ಹುಡುಗರೇ, ಸರಿ—ಕೈ ಮೇಲೆ ನೀರು ಬಿತ್ತು ಅಂದರೆ ಮನೇಲಿ ರ್ತಾರೆಯೇ. ಯಾವ ರಾಜ್ಯ ಆಳೋಕೆ ಹೋಗಿದಾರೋ. ನನಗಂತೂ ಇವರ ಕಾಟದಲ್ಲಿ ಸಾಕಾಗಿ ಹೋಗಿದೆ ಭಾಗತ್ತೆ. ಹಾಳು ಹುಡುಗರು. ಒಬ್ಬರಾ ದರೂ ಹೇಳಿದ ಮಾತು ಕೇಳೋಲ್ಲ.'

'ಹೋಗ್ಲಿ—ನಿನ್ನ ಕಸಮುಸುರೆ ಕೆಲ್ಸ ತೀರ್ಸ್ಕೊಂಡು ಬೇಗ ಬಾ. ಸ್ವಲ್ಪ ಮಾತಾಡೋದಿದೆ.'

—ಎಂದು ಕೆಲಸವನ್ನು ಮರೆತು ಮಾತಿಗೆ ನಿಂತ ವೆಂಕಮ್ಮನನ್ನು ಭಾಗಮ್ಮನೆ ಎಚ್ಚರಿಸಿ, ಕೆಲಸಕ್ಕೆ ಕಳುಹಿಸಿ, ಆಕೆ ಕೆಲಸ ಮುಗಿಸಿಕೊಂಡು ಬರುವುದನ್ನೇ ಕಾಯುತ್ತಾ, ಅನ್ನಪೂರ್ಣಾ ಸ್ತೋತ್ರ ಹೇಳಿ ಕೊಳ್ಳುತ್ತಾ, ಹೆಬ್ಬೆರಳು ಅಂಗುಷ್ಟಗಳಿಗೆ ವಿಭೂತಿಯನ್ನು ಸವರಿಕೊಂಡು, ಹತ್ತಿಯಲ್ಲಿ ಗೆಜ್ಜೆಯ ಸರ ಮಾಡುತ್ತ ಕುಳಿತುಕೊಂಡರು. ಒಳಗಡೆ ಹಿತ್ತಲಲ್ಲಿ ತಾಯಿ

ಮಕ್ಕಳು ಪಾತ್ರೆ ತೊಳೆಯುತ್ತಿದ್ದಾರೆಂಬುದು ಊರಿಗೆಲ್ಲಾ ಕೇಳುವಷ್ಟು ಪಟ್ಟಿಗೆ ಪಾತ್ರೆಗಳ ಸದ್ದಾಗುತ್ತಾ ಇತ್ತು. ಅವರ ಜೊತೆಗೆ, ಅದರೊಂದಿಗೆ ಸ್ಪರ್ಧಿಸಿದ, ಜೊತೆಗೆ ಕೆಲಸ ಮಾಡುವ ಮಗಳ ಕೆಲಸದಲ್ಲಿ ತಪ್ಪು ಕಂಡು ಹಿಡಿದು ಬೈಯುವ ವೆಂಕಮ್ಮನ ಗಂಟಲ ಸದ್ದೂ. ಅದನ್ನು ಕೇಳಿ—ಈ ಮನೆ, ಗೋಡೆ ಭಾವಣಿ ಇಷ್ಟು ದಿನಾ ಉಳಿದಿರೋದೇ ದೊಡ್ಡು. ಒಳ್ಳೆ ತೋಫಿನ ಬಾಯಿ ಇವಳದು' ಎಂದುಕೊಂಡು ತಮಗೆ ತಾವೇ ನಗುತ್ತಾ ಕುಳಿತು ಕೊಂಡಿದ್ದರು ಭಾಗಮ್ಮ.

ಸ್ವಲ್ಪ ಹೊತ್ತಾದಮೇಲೆ ಪಾತ್ರೆಗಳ ಸದ್ದು ನಿಂತು, ವೆಂಕಮ್ಮ ಸೀರೆಯ ತುದಿಗೆ ಒದ್ದೆಯ ಕೈ ಒರಸಿಕೊಳ್ಳುತ್ತಾ ಪಡಸಾಲೆಗೆ ಬಂದು—

'ರಂಗೀ...ಪಾತ್ರೆ ಎಲ್ಲಾ ಒಳಗಿಟ್ಟು ಬರ್‍ತಾ ಡಬ್ಬದಲ್ಲಿರೋ ಅಕ್ಕೀನೂ ಒಂದು ಸಣ್ಣ ಮಣೇನೂ ತಗೊಂಡು ಬಾ. ಅಷ್ಟು ಕಲ್ಲು ಆರಿಸಿ ಇಡೋಣ.

—ಎಂದು ಕೂಗಿ ಹೇಳಿ ಮಗಳಿಗೆ ಅಪ್ಪಣೆ ಮಾಡಿ, ಕಂಭಕ್ಕೆ ಒರಗಿ ಕೊಂಡು '–ಉಶ್' ಎನ್ನುತ್ತಾ ಕುಳಿತಳು.

'ಮಗಳನ್ನು ಒಳ್ಳೆ ಗಾಣದ ಎತ್ತನ್ನು ದಂಡಿಸಿದ ಹಾಗೆ ದುಡಿಸ್ತೀ ಯಲ್ಲೇ ವೆಂಕೂ, ಇವತ್ತೋ ನಾಳೇನೊ ಗಂಡನ ಮನೆಗೆ ಹೋಗೋ ವಯ ಸ್ಸಾಯ್ತು. ಆವಳಿಗೆ ನಾಳೆ ಗಂಡನ ಮನೇಲಿ ದುಡಿಯೋದು ಇದ್ದೇ ಇದೆ. ಇಲ್ಲೂ ಇಷ್ಟು ದುಡಿಸಿದರೆ ಹೇಗೆ?'

—ಎಂದರು ಭಾಗಮ್ಮ ಸದಾ ದುಡಿಯುವ ಮಗುವಿನ ಮೇಲೆ ಕನಿಕರ ತೋರಿಸಿ.

'ನನ್ನದೂ ಹಡೆದ ಹೊಟ್ಟೆ ಅಲ್ವೆ ಭಾಗತ್ತೆ? ನನಗೂ ಕರುಳು ಚುರುಕ್ ಅನ್ನುತ್ತೆ. ಆದರೆ ನಾನೇನು ಮಾಡ್ಲಿ. ಯಾವ ಕೆಲಸಕ್ಕೂ ಇಲ್ಲ ಅವಳು ಸಾಯಬೇಕು, ಇಲ್ಲವೇ ನಾನು ಸಾಯಬೇಕು. ದುಡಿದು ಒರಗೋಕೆ ಇನ್ನಾರಿ ದ್ದಾರೆ ಈ ಮನೇಲಿ?'

'ಯಾಕೆ? ರುಕ್ಕಿಗೇನಾಗಿದೆ ಧಾಡಿ. ಐದು ವರ್ಷಕ್ಕೆ ಬಂತು. ಅಷ್ಟು ಉಪಕಾರಣೆ ತೊಳೆಯೋಕೂ ಆಗೊಲ್ವೇನು ಅವಳಿಗೆ?

'ಅಬ್ಬಾ! ಅಬ್ಬಾ! ಆ ರುಕ್ಕೀನೆ—ಅವಳು ಥೇಟ್ ಅವರಪ್ಪನ ಮಗಳೇ. ಕೆಲಸಾಂದರೆ ಬಿಲ್‌ಕುಲ್ ಮೈ ಬಗ್ಗೊಲ್ಲ. ಎಲ್ಲಾ ಇವರು ಮಾಡಿ

ರೋದೇ ಕೇಡು. ಅಪಾಟಿ ಪುಚ್ಚಿಟಿ ಮಾಡಿದರೆ ಮಕ್ಕಳು ಏತಕ್ಕೆ ಬಂದಾವು ಹೇಳು—ಹೋಗ್ಲಿ ಬಿಡು ಭಾಗತ್ತೆ. ನನ್ನ ಗೋಳೇನು ದಿನಾ ಇದ್ದದ್ದೆ—ಪುರಾಣವಲ್ಲ, ಪುಣ್ಯಕಥೆಯಲ್ಲ. ಥೂ… ಥೂ…ನನಗೆ ಜನ್ಮ ರೋಸಿಗೆ ಇಟ್ಟು ಹೋಗಿದೆ'

—ವೆಂಕಮ್ಮ ಸೆರಗಿನ ತುದಿಯಿಂದ ಕಣ್ಣ ತುದಿಯನ್ನು ಒರಸಿಕೊಂಡು ಹೇಳಿದರು.

'ಹೋಗ್ಲಿ ಬಿಡು. ಒಳ್ಳೆ ಮಟಮಟ ಮಧ್ಯಾಹ್ನದ ಹೊತ್ತಿನಲ್ಲಿ ಕಣ್ಣಲ್ಲಿ ನೀರ್ಯಾಕೆ ಹಾಕ್ತಿ.'

—ಎಂದರು ಭಾಗಮ್ಮ ಸಹಾನುಭೂತಿ ತೋರುತ್ತಾ.

'ನನ್ನ ಜನ್ಮಾನೇ ಹಾಗಾಗೋಯ್ತು ಭಾಗತ್ತೆ. ಇನ್ನು ಜನ್ಮಜನ್ಮಕ್ಕೂ ಇಂಥಾ ಗಂಡ, ಸಂಸಾರ ಬೇಡಾನ್ನಿಸಿ ಬಿಟ್ಟಿದೆ ನನಗೆ… ರಂಗೂ ನೀನು ಬಂದುಗಳಿಗೆ ಮಲಕ್ಕೋತೀಯೋ, ಏಕಾಲಿ ಮನೆಗೆ ಹೋಗ್ತೀಯೋ ನೋಡು' ಎಂದು ಮಣೆ, ಡಬ್ಬಿ ತಂದಿಟ್ಟು ಮಗಳಿಗೆ ಹೇಳಿ ಅವಳನ್ನು ಕಳುಹಿಸಿಕೊಟ್ಟು ಅವಳು ಹೋದ ಮೇಲೆ 'ನಮ್ಮಂಥ ಪಾಪಿಗಳ ಮೇನೇಲಿ ಹುಟ್ಟಾರ್ದಾಗಿತ್ತು ಭಾಗತ್ತೆ ಆ ಹುಡುಗಿ. ನನಗೂ ಬರ್ತಾ ಬರ್ತಾ ಸಹನೆ ಹೋಗಿ ಬಿಡ್ತು. ಎಷ್ಟು ಬೈಯುಲಿ, ಹೊಡೀಲಿ, ತುಟಿಪಿಟಿಕ್ ಅನ್ನದೆ ಹೇಳಿದ ಕೆಲಸ ಮಾಡಿಕೊಂಡು ಹೋಗ್ತಾಳೆ. ಅವಳಿರೋ ಹೊತ್ತಿಗೆ ನನ್ನದೂ ಒಂದು ಸಂಸಾರ'

—ಎಂದರು ವೆಂಕಮ್ಮ.

'ಇವಳು ತಾನೆ ಇನ್ನೆಷ್ಟು ದಿನ ಇಲ್ಲಿರೋಳು. ಆಗಲೇ ಒಂದು ಕಾಲು ಹೊರಗೆ.'

'ಸದ್ಯ ನಿನ್ನದಮ್ಮಯ್ಯಾಂತೀನಿ. ಅದೊಂದು ವಿಷಯ ಜ್ಞಾಪಿಸಬೇಡ ಭಾಗತ್ತೆ. ಅದು ಜ್ಞಾಪಕಕ್ಕೆ ಬಂದರಂತೂ ನನಗೆ ಕೈಕಾಲು ಉಡುಗಿ ಹೋಗುತ್ತೆ.'

'ಯಾಕೆ?'

'ಏನು ಭಾಗತ್ತೆ— ನೀನೂ ಏನೂ ತಿಳೀದೋಳ ಹಾಗೇ ಕೇಳ್ತೀದ್ದೀ ಯಲ್ಲಾ. ರಂಗೂಗಾಗಲೇ ಎಂಟು ತುಂಬಿ ಒಂಭತ್ತಕ್ಕೆ ಬಂತು. ಇನ್ನೂ ಇವಳಿಗೊಂದು ಗಂಡು ದಿಕ್ಕೋತ ಆಗಲಿಲ್ಲ. ನಾಳೆ ಇವಳು ಮದುವೆಯಾಗದೇ

ದೊಡ್ಡವಳಾದರೆ ನಾನು ತಲೆಮೇಲೆ ಬೂದಿ ಸುರುಕೊಂಡು ಊರು ಬಿಟ್ಟು ಕಾಡಿಗೆ ಹೋಗಬೇಕಲ್ಲಾ. ಊರಿನಲ್ಲಿ ನಮ್ಮ ಮುಖಕ್ಕೆ ನೀರು, ಬೆಂಕಿ ಹುಟ್ಟೀತೇ?' ರಾಮ...ರಾಮ... ನನಗೆ ಇನ್ನೂ ಏನೇನು ನರಕ ಕಾದಿ ದೆಯೋ.'

—ಎಂದಳು ವೆಂಕಮ್ಮ ಅಳು ಬೆರೆತ ಧ್ವನಿಯಲ್ಲಿ. ಆಕೆಯ ಕಣ್ಣಿನಿಂದ ಹರಿದ ಕಂಬನಿಯೊಂದು, ಕಲ್ಲು ಆರಿಸುತ್ತಿದ್ದ ಅಕ್ಕಿಯೊಂದಿಗೆ ಬೆರೆಯಿತು.

'ಅಷ್ಟು ಯಾಕೆ ಹಚ್ಚಿಕೋತೀಯ ಬಿಡು. ಹೆಣ್ಣು ಅಂತ ಹುಟ್ಟಿದ ಮೇಲೆ ಅವಕ್ಕೊಂದು ಗಂಡು ಅಂತ ಬ್ರಹ್ಮ ಸೃಷ್ಟಿ ಮಾಡೇ ಇರ್ತಾನೆ.'

'ಹೌದು ಭಾಗತ್ತೆ. ಅದು ನಿಜ. ಆದರೆ ಇವಳಿಗೆ ಗಂಡಾಂತ ಹುಟ್ಟಿ ರೋನು ಎಲ್ಲಿ ಲಂಕಾಪಟ್ಟಣದಲ್ಲಿದ್ದಾನೋ. ಅಯೋಧ್ಯೆಯಲ್ಲಿದಾನೋ ಹುಡುಕಿಕೊಂಡು ಬರೋರು ಯಾರನ್ನು ತರಲಿ ನಾನು? ಅವರಿಗಂತೂ ಎಷ್ಟು ಹೇಳಿದರೂ ಕಿವಿ ಮೇಲೆ ಬೀಳೋಲ್ಲ. ಬೆಲ್ಲ ಬಡಿದ ಗುಂಡುಕಲ್ಲಿನ ಹಾಗೆ ಹಾಯಾಗಿದ್ದು ಬಿಟ್ಟಿದಾರೆ ಪುಣ್ಯಾತ್ಮರು. ಹೆಣ್ಣು ಮುಂಡೆ ನಾನೇ ಎಲ್ಲಾ ಕಟ್ಟಿಕೊಂಡು ಸಾಯೋಕೆ ಹುಟ್ಟಿರೋದು.'

'ಆಗೋ ಕೆಲಸ ಯಾವುದೂ ನಿಲ್ಲೋಲ್ಲ ಕಣೆ ವೆಂಕು. ನೀನು ಯಾಕೆ ಸುಮ್ನೆ ಅವರಿವರನ್ನು ಅಂದು, ನಿನ್ನೂ ನೀನು ಬೈಕೋತೀಯ'

'ನಿಜ ಭಾಗತ್ತೇ ನಿಜ. ಯಾರನ್ನು ಅಂದರೇನು ಫಲ. ಎಲ್ಲಾ ನನ್ನ ಹಣೇಬರಹ. ಎಷ್ಟು ದಿನ ಉರಿದುರಿದು ಸಾಯಬೇಕೂಂತ ನನ್ನ ಹಣೇಲಿ ಬರೆದಿದೆಯೋ— ಆಗಲಿ, ಅನುಭವಿಸೋದನ್ನೆಲ್ಲಾ ಈಜನ್ಮಕ್ಕೇ ಅನುಭವಿಸಿ ಸತ್ಹೋಗ್ತೀನಿ. ಮುಂದೆ ಜನ್ಮಜನ್ಮಕ್ಕೂ ಈ ಉರಿತಾಪ ಬೇಡ'

—ಎಂದಳು ವೆಂಕಮ್ಮ ಗಾಢವಾದ ನಿರಾಶೆಯಿಂದ ಬಿರುಸಾದ ಧ್ವನಿ ಯಲ್ಲಿ. ಆಕೆಯ ಮಾತನ್ನು ಕೇಳಿ ಭಾಗಮ್ಮ ಎಂದಿನಂತೆ ಸಹಾನುಭೂತಿ ತೋರಿಸದೆ ನಕ್ಕು ಬಿಟ್ಟಳು. ಆಕೆಯ ನಗು ವೆಂಕಮ್ಮನ ಹೃದಯದ ಕಹಿಯನ್ನು ಮತ್ತಷ್ಟು ಹೆಚ್ಚಿಸಿ—

'ನಗು...ನಗು... ಭಾಗತ್ತೆ. ಊರ್ನೋರೆಲ್ಲಾ ನೋಡಿ ನಗೋ ಹಾಗಾಯ್ತು ನಮ್ಮ ಬಾಳು. ಕಂಡೋರೆಲ್ಲಾ ನಗುವಾಗ ನೀನೊಬ್ಬಳು ಯಾಕೆ ನಗಬಾರದು.'

—ಎಂದಳು.

'ಅಯ್ಯೋ ಚೆಪ್ಪೆ, ನಿನ್ನ ಕಷ್ಟ ಕಂಡು ನಗೋಕೆ ನಾನೇನು ಹುಲಿ ಹೊಟ್ಟೇಲಿ ಹುಟ್ಟಿದೀನೀಂತ ತಿಳುಕೊಂಡ್ಯಾ. ಅದಕ್ಕಲ್ಲ ನಾನು ನಕ್ಕದ್ದು.

'ಮತ್ತೆ ಏಕೆ ಭಾಗತ್ತೆ?'

'ನಿನ್ನ ಕಷ್ಟ ಪರಿಹರಿಸೋಕೆ ಒಂದು ದಾರಿ ಕಂಡಿತು. ಅದಕ್ಕೆ ನಿನ್ನ ಮಾತು ಕೇಳಿ ಸಂಕಟ ಆಗೋ ಬದಲು ನಗು ಬಂತು.'

'ನನ್ನ ಕಷ್ಟ ಪರಿಹರಿಸೋ ದಾರಿ? ಹಾಗಂದರೆ ಏನು ಭಾಗತ್ತೆ?'

'ಇಷ್ಟೆಲ್ಲಾ ಕುಣೀತೀಯಲ್ಲಾ. ನಿನ್ನ ಮಗಳಿಗೊಬ್ಬ ಗಂಡನನ್ನು ತೋರಿಸಿದರೆ ನನಗೆ ಏನು ಕೊಡ್ತೀ ಹೇಳು.'

'ಅದೊಂದು ಮಾಡು ಭಾಗತ್ತೆ— ಈ ಜನ್ಮದಲ್ಲಿ ನನ್ನ ಮೈತೊಗಲು ತೆಗೆದು ನಿನ್ನ ಕಾಲಿಗೆ ಜೋಡುಮಾಡಿಸಿ ಕೊಡ್ತೀನಿ. ಜನ್ಮಜನ್ಮಕ್ಕೂ ನಿನ್ನ ಸೊಸೆಯಾಗಿ ಹುಟ್ಟಿ, ದುಡಿದು ಈ ಋಣ ತೀರಿಸ್ತೀನಿ.'

—ಮೈಯೆಲ್ಲಾ ಬಾಯಾಗಿ ಹೇಳಿದರು ವೆಂಕಮ್ಮ.

'ಅದ್ಯಾವ್ದೂ ಬೇಡ. ತಮಾಷೆಗೆ ಕೇಳಿದೆ. ನಿನ್ನ ಮಗಳಿಗೆ ನನ್ನ ಸೊಸೆ ಒಂದು ಗಂಡು ನೋಡಿದಾಳೆ.'

'ಯಾರು—ರಾಜೇಶ್ವರೀನೇ?'

—ನಂಬಲಾಗದಂತೆ, ಆಶ್ಚರ್ಯದಿಂದ ಕೇಳಿದಳು ವೆಂಕಮ್ಮ.

'ಹೂ.'

'ನೀನು ಭಾಗ್ಯವಂತೆ ಭಾಗತ್ತೆ. ಬಂಗಾರದಂಥ ಸೊಸೇನ ಪಡೆದೆ.'

'ಏಕೆ? ನಿನ್ನ ಮಗಳಿಗೆ ಗಂಡು ಹುಡುಕಿದಳೂಂತ ಅಷ್ಟು ಶಿಫಾರಸು ಮಾಡ್ತಿಯೊ? ಅವಳ ಕೈಲಿ ಉರಿಯೋಳು ನನಗೆ ಗೊತ್ತು ನಿನಗೇನು ಗೊತ್ತಾಗುತ್ತೆ ಹೇಳು.'

—ಸೊಸೆಯ ಬಗ್ಗೆ ತುಂಬಾ ಅಸಮಾಧಾನವಿರುವಂತೆ ಹೇಳಿದಳು ಭಾಗಮ್ಮ.

'ಛಿ, ಅದಕ್ಕೇಂತ ಆ ಮಾತಾಡಿದ್ರೆ ನನ್ನ ಬಾಯಲ್ಲಿ ಹುಳಾ ಸುರೀಲಿ. ನಿಜವಾಗಿಯೂ ಹೇಳಿದೆ. ರಾಜೇಶ್ವರಿ ಮನೆಗೆ ಬಂದು ವರ್ಷ—ವರ್ಷಾವರೆ ಆಯ್ತಲ್ಲವೇ? ಅವತ್ನಿಂದ ನೋಡ್ತಿದೀನಲ್ಲ. ಅತ್ತೆ ಅಂದರೆ ತಾಯಿಗಿಂತ

ಹೆಚ್ಚೊಂತ ತಿಳುಕೊಂಡಿದ್ದಾಳೆ.

—ಭಾಗಮ್ಮನವರ ಮಾತು ಕೇಳಿ ವೆಂಕಮ್ಮ ಅವರು ಅಸಮಾಧಾನ ವಾಗದಂತೆ ಹೇಳಿದಳು.

'ನಿನ್ನ ಮಾತು ನಿಜಾ ಅನ್ನು. ನಾನು ಪರಿಹಾಸ್ಯಕ್ಕೆ ಹೇಳಿದೆ. ಬಂಗಾರದಂಥ ಹುಡುಗಿ ರಾಜೇಶ್ವರಿ. ಆದಿರಲಿ. ಈಗವಳ ಪ್ರಶಂಸೆಯಿಂದ ಆಗೋದೇನಿದೆ. ಈಗ ನಾನು ಹೇಳಿದ್ದಕ್ಕೆ ಏನು ಹೇಳುತ್ತೀಯ?'

'ನಾನು ಏನು ಹೇಳಲಿ ಭಾಗತ್ತೆ. ನನಗಂತೂಏನು ಹೇಳೋಕೂ.' ಬಾಯಿ ಕಟ್ಟಿಹೋಗಿದೆ. ಇಷ್ಟು ದಿನದ ಮೇಲೆ ಇವಳಿಗೊಬ್ಬ ಗಂಡು ಅಂತ ಇದೆ ಅನ್ನೋ ಸುದ್ದಿ ಕೇಳಿದ ಹಾಗಾಯಿತು. ಹುಡುಗ ಯಾರಂತೆ?

'ರಾಜೇಶ್ವರಿ ಅಣ್ಣ ವೆಂಕಟದಾಸಣ್ಣ! ರಾಜೇಶ್ವರಿ ತೌರಲ್ಲಿ ಅವಳ ಅಮ್ಮನಿಗೆ ಮೈಯಲ್ಲಿ ಆರೋಗ್ಯವಿಲ್ಲ. ಅದಕ್ಕೆ ಅವನಿಗೆ ಬೇಗ ಮದುವೆ ಮಾಡಬೇಕೂಂತ ಯೋಚನೆ ಮಾಡ್ತಾ ಇದಾರೆ. ರಾಜೇಶ್ವರೀ ಮುಂದೆ ಈ ಮಾತು ಎತ್ತಿದರಂತೆ. ರಂಗೂ ವಿಷಯ ಅವಳಿಗೇನೂ ತಿಳಿಯದ್ದಲ್ಲಮಲ್ಲ. ಅದಕ್ಕೇ ಗಂಡನ ಕೈಲಿ ಸುದ್ದಿ ಹೇಳಿ ಕಳಿಸಿದ್ದಾಳೆ. ಒಪ್ಪಿಗೇನೇನು ನಿನಗೆ?

'ಸರಿ, ನೀನೂ, ನಿನ್ನ ಸೊಸೆ ಒಪ್ಪಿದ್ದಕ್ಕೆ ನನ್ನನ್ನೇನು ಕೇಳುವುದಿದೆ. ನೀನು ಒಪ್ಪಿದಾಗಲೇ ನಾನೂ ಒಪ್ಪಿದೆ.'

'ಹಾಗೆ ಹೇಗಾದೀತು. ನೀನೂ ನಿನ್ನ ಗಂಡ ಒಂದು ದಿನ ದೇವೀಕೆರೆಗೆ ಹೋಗಿ ಹುಡುಗನನ್ನು ನೋಡಿಕೊಂಡು ಬನ್ನಿ.'

'ಸದ್ಯ—ಅವರ ಮೇಲೆ ಜವಾಬ್ದಾರಿ ಹಾಕು. ಕಲಿಯುಗ ಮುಗಿದು ಮತ್ತೆ ಕಲಿಯುಗ ಬರಬೇಕು, ರಂಗೂ ತಲೆಮೇಲೆ ಅಕ್ಕೀಕಾಳು ಬೀಳೋಕೆ. ಅತ್ತೆ, ಅವರಿಗೆ ರಂಗೂ ಜಾತಕ ಕಳಿಸಿಕೊಡು ಹಾಗೇ ನಮಗೂ ಹುಡುಗನ ಜಾತಕ ತರಿಸಿಕೊಡು ಜಾತಕಾನುಕೂಲವಾದರೆ ಸರಿ ನೀನು ಹೇಳಿದ ದಿನ ಮದುವೆ ಆಯಿತು ಅನ್ನಿಸಿಬಿಡೋಣ.'

'ಹುಡುಗನ ಜಾತಕ ಚಂದ್ರಶೇಖರ ತಂದಿದಾನೆ. ಶಾಮಣ್ಣನ ಕೈಲಿ ರಂಗೂ ಜಾತಕ ಕಳಿಸು. ಜೋಯಿಸರ ಹತ್ತಿರ ಇಬ್ಬರೂ ಹೋಗಿ ತೋರಿಸಿ ಕೊಂಡು ಬರಲಿ. ಆಮೇಲೆ ಮುಂದಿನ ಮಾತಾಡೋಣ.'

'ಅವರಿಗೆ ಕಾಯ್ತಾ ಕೂತುಕೊಂಡ್ರೆ ಆಗೋಲ್ಲಾ ಭಾಗತ್ತೆ. ರಂಗೂ

ಜಾತಕ ನಿನ್ನ ಕೈಲಿ ಕೊಡ್ತೀನಿ. ಚಂದ್ರಣ್ಣನೇ ಹೋಗಿ ಎರಡನ್ನೂ ತೋರಿಸಿ ಕೊಂಡು ಬರಲಿ.'

—ಎಂದು ಹೇಳಿ, ಆ ಮಾತು ಮುಗಿಯುತ್ತಿದ್ದ ಹಾಗೆ ವೆಂಕಮ್ಮ ಎದ್ದು ಒಳಗೆ ಹೋಗಿ ರಂಗಮ್ಮನ ಜಾತಕವನ್ನು ತಂದು ಭಾಗಮ್ಮನವರಿಗೆ ಕೊಟ್ಟಳು. ಅವಳ ಆತುರವನ್ನು ಕಂಡು ಭಾಗಮ್ಮ ನಗುತ್ತಾ—

'ಅಬ್ಬಾಬ್ಬಾ—ನೀನೆಲ್ಲೋ ಏಳು ತಿಂಗಳಲ್ಲಿ ಹುಟ್ಟಿದೋಳು ಕಣೆ ವೆಂಕೂ. ಅಲ್ಲೇ— ನಿನ್ನ ಗಂಡನಿಗೆ ಒಂದು ಮಾತೂ ಕಿವಿಮೇಲೆ ಹಾಕದೆ ಇಷ್ಟೆಲ್ಲಾ ಪಾರುಪತ್ಯ ಮಾಡ್ತೀಯಲ್ಲಾ. ಅವನೇನಾದರೂ ಮುನಿಸಿಕೊಂಡರೆ ಏನು ಮಾಡಿಯೇ?'

'ಮುನಿಸಿಕೊಂಡರೆ ಮುನಿಸಿಕೊಳ್ಳಲಿ, ಏನಾದರೂ ಮಾಡಿಕೊಳ್ಳಲಿ— ರಂಗೂ ಮದುವೆ ಅಂತ ಆದರೆ ಸಾಕು— ನನ್ನ ಮೇಲೆ ಸಿಟ್ಟುಮಾಡಿ ಕೊಂಡರೆ, ನಿಮ್ಮ ಸಂಸಾರ ನೀವೇ ಇಟ್ಟುಕೊಳ್ಳಿ, ಅಂತ ಅವರಿಗೇ ಒಪ್ಪಿಸಿಬಿಟ್ಟು ವೇದಾವತೀಲಿ ಹಾರಿಕೋತೀನಿ. ಅವರು ಸಂಸಾರದ ಚಿಂತೆ ಬಿಟ್ಟಾಗಲೇ ನಾನು ಭಯಾನೂ ಬಿಟ್ಟುಬಿಟ್ಟೆ ಭಾಗತ್ತೆ. ಅಂತೂ ಪುಣ್ಯಾತ್ಮರು—ನನ್ನ ಗಯ್ಯಾಳೀನ ಮಾಡಿಬಿಟ್ಟರು'

—ಎಂದಳು ವೆಂಕಮ್ಮ ಕಣ್ಣೀರಿನ ಒಳಿ ತಲಪುತ್ತಾ.

'ಹೋಗಲಿ ಬಿಡು. ಎಲ್ಲಾ ಬಿಟ್ಟು ಒಳ್ಳೇ ಸುದ್ದಿ ಮಾತಾಡೋ ದಿನ ಯಾಕೇ ಕಣ್ಣೀರು ಹಾಕ್ತಿ.'

—ಎಂದು ಭಾಗಮ್ಮ ವೆಂಕಮ್ಮನಿಗೆ ಸಮಾಧಾನ ಹೇಳಿ, ಅವಳಿಂದ ರಂಗಮ್ಮನ ಜಾತಕ ತೆಗೆದುಕೊಂಡು ಬಂದಳು.

ಭಾಗಮ್ಮ ಒಳ್ಳೇ ಹೊತ್ತಿನಲ್ಲೇ ಮದುವೆ ಮಾತು ಮೊದಲಿಟ್ಟಿದ್ದಳು. ಎಂತಲೇ ಜಾತಕಾನುಕೂಲವಾಗಿ ಒಂದು ವಾರದೊಳಗಾಗಿ ಲಗ್ನ ನಿಶ್ಚಯವಾಗಿ ಹೋಯಿತು. ವೆಂಕಮ್ಮ ಹೇಗೆ ಭಾಗಮ್ಮನವರ ಮಾತಿನ ಮೇಲೆ ಹುಡುಗ ನನ್ನು ಒಪ್ಪಿಸಿಕೊಂಡಳೋ, ಲಕ್ಷ್ಮೀದೇವಮ್ಮನೂ ಹಾಗೇ ರಾಜೇಶ್ವರಿಯ ಮಾತಿನ ಮೇಲೆ ಹುಡುಗಿಯನ್ನು ಒಪ್ಪಿಕೊಂಡರು. ನರಸಪ್ಪನವರು 'ಅವನ ಅದೃಷ್ಟ ಚೆನ್ನಾಗಿದೆ. ಕೆಟ್ಟ ಹೆಣ್ಣು ಬರುವುದಿಲ್ಲ' ಎಂದು ಅಷ್ಟೇ ಹೇಳಿ ಅವರೂ ಸಮ್ಮತಿ ಸೂಚಿಸಿದರು. ವೆಂಕಟದಾಸಪ್ಪನವರು ಎಲ್ಲಭಾರವನ್ನೂ ರಾಜೇಶ್ವರಿಯ ಮೇಲೇ ಹಾಕಿ ಹೇಳಿದರು—

'ರಾಜೇಶ್ವರಿ. ನೀನು ಹುಡುಗೀನ ನೋಡಿದೀಯ. ನಾನು ಮದುವೆ ಮಾಡಿಕೊಳ್ಳೋದು ನನ್ನ ಸುಖಕ್ಕಲ್ಲ. ಅಣ್ಣ ಅಮ್ಮ ಸಂತೋಷವಾಗಿರಲಿ ಅಂತ. ಅವರ ಮನಸ್ಸು ಒಪ್ಪುವಂಥ ಹುಡುಗಿಯೇನೋ ಹೇಳು. ಹಾಗಿದ್ದರೆ ಆಯಿತು. ನನ್ನದೇನೂ ಅಭ್ಯಂತರವಿಲ್ಲ. ನೀವೆಲ್ಲರೂ ಒಪ್ಪಿಕೊಂಡ ಹುಡುಗಿಗೆ ಕಣ್ಣು ಮುಚ್ಚಿಕೊಂಡು ತಾಳಿ ಕಟ್ತೇನೆ. ಆದರೆ ಒಂದು ಮಾತು. ನೀವು ಯಾರೂ ಹುಡುಗಿಯ ಕಡೆಯವರಿಗೆ ನನ್ನ ಗೌರಮ್ಮನ ವಿಷಯ ಮುಚ್ಚಿಡ ಕೂಡದು. ಆಮೇಲೆ ಹುಡುಗಿ 'ನನ್ನನ್ನು ನಂಬಿಸಿ ಕುತ್ತಿಗೆ ಕೊಯ್ದರು' ಅಂತ ಕಣ್ಣೀರು ಹಾಕಿದರೆ ಈ ಮನೆಗೆ ಒಳ್ಳೆಯದಾಗೋಲ್ಲ.'

'ನಿಜಕಣೋ ದಾಸಣ್ಣ. ಆದರೆ ಆ ಮಾತು ಹೇಗೆ ನಾನೇ ಬಾಯಿ ಬಿಟ್ಟು ಹೇಳೋದು. ಲಗ್ನ ಅಂತು ಮುಗಿದು ಹೋಗಲಿ. ಆಮೇಲೆ ಹೇಳಿದರಾಗುತ್ತೆ. ನೀನೇನೂ ಗೌರಮ್ಮ ಇದಾಳೇಂತ ರಂಗೂ ಹೊಟ್ಟೆ ಉರಿಸೊಲ್ಲವಲ್ಲ.'

'ಆ ಹುಡುಗಿ ಹೊಟ್ಟೆ ಉರಿಸ್ತೀನಿ, ಬಿಡ್ತೀನಿ ಅನ್ನೋದು ಮುಖ್ಯವಲ್ಲ ರಾಜೇಶ್ವರಿ. ನಿಮಗೆ ತಾನೇ ನಾನು ಹೊಟ್ಟೆಗೆ ಕೆಂಡ ಸುರಿದೆನೇ? ಆದರೂ ನೀನು ಕಣ್ಣೀರು ಇಡಲಿಲ್ಲವೆ? ಹಾಗೇ—ಗಂಡ ಹೀಗೆ ಅನ್ನೋದು ಕೇಳಿದರೆ ಎಷ್ಟೋ ಜನಕ್ಕೆ ಎದೆ ಒಡೆದುಹೋಗುತ್ತೆ. ಆದ್ದರಿಂದ ಹಾಗಾಗೋದು ನನಗೆ

ಇಷ್ಟವಿಲ್ಲ. ಎಲ್ಲಾ ವಿಷಯಾನೂ ತಿಳಿದುಕೊಂಡು ಅವರು ಆಗಲಿ ಅಂದರೆ ಸಂತೋಷ. ಈ ವಿಷಯ ಹೇಳೋಕೆ ನಿಮಗೆ ಯಾರಿಗೂ ಇಷ್ಟವಿಲ್ಲದೆ ಹೋದರೆ, ನಾನೇ ಹೇಳುತ್ತೇನೆ.'

—ಎಂದರು ವೆಂಕಟದಾಸಪ್ಪ ನಿರ್ಧಾರದ ಧ್ವನಿಯಲ್ಲಿ.

ಮಗನ ಮಾತನ್ನು ರಾಜೇಶ್ವರಿಯಿಂದ ಕೇಳಿ ಲಕ್ಷ್ಮೀದೇವಮ್ಮ ಮಗನ ಮೇಲೆ ರೇಗಾಡಿದರು. ಆದರೆ ನರಸಪ್ಪನವರು ಮಗನ ಮೇಲೆ ರೇಗಲಿಲ್ಲ.

'ಅದೇ ಸರಿಯಾದದ್ದು. ಹುಡುಗೀನ ನೋಡೋ ನೆಪ ಮಾಡಿಕೊಂಡು ಅವನೇ ಪರಶುರಾಮಪುರಕ್ಕೆ ಹೋಗಿ ಬರಲಿ.'

—ಎಂದು ಮಗನನ್ನೇ ಸಮರ್ಥಿಸಿದರು.

ತಂದೆ—ಮಕ್ಕಳ ಈ ನಿರ್ಧಾರವನ್ನು ಕಂಡು ಲಕ್ಷ್ಮೀದೇವಮ್ಮ ರಾಜೇಶ್ವರಿಯವರಿಗೆ, ಈ ಮದುವೆ ಎಲ್ಲಿ ತಪ್ಪಿಹೋಗುತ್ತದೋ ಎಂದು ದಿಗಿಲಾದರೂ ಅವರ ಮನಸ್ಸನ್ನು ಬದಲಾಯಿಸಲಾಗದೆ, 'ಹಣೇಲಿ ಬರೆದಿದ್ದ ಹಾಗಾಗಲಿ' ಎಂದುಕೊಂಡು, ವೆಂಕಟದಾಸಪ್ಪ ಪರಶುರಾಮಪುರಕ್ಕೆ ಹೋಗಲು ಸಮ್ಮತಿಸಿದರು.

ತಮ್ಮ ಕಾಗದ ನೋಡಿ, ದೇವೀಕೆರೆಯಿಂದ ನರಸಪ್ಪನವರು ಬರಬಹು ದೆಂದು ನಿರೀಕ್ಷಿಸುತ್ತಿದ್ದ ಚಂದ್ರಶೇಖರ ವೆಂಕಟದಾಸಪ್ಪನವರು ಬಂದುದನ್ನು ಕಂಡು ಚಕಿತನಾದ. ಹಾಗೇ ಅವರು ಬಂದುದಕ್ಕೆ ಕಾರಣವನ್ನರಿತು, ಆಶ್ಚರ್ಯಕ್ಕಿಂತ ಹೆಚ್ಚಾಗಿ ಚಿಂತೆಗೊಳಗಾಗಿ 'ಇದಕ್ಕೆ ಏನು ಮಾಡುವುದು?' ಎಂದು ಭಾಗಮ್ಮನವರ ಬಳಿ ಆಲೋಚನೆ ಮಾಡಿದ. ವೆಂಕಟದಾಸಪ್ಪನವರ ಹಟದ ವಿಚಾರ ಕೇಳಿ ಭಾಗಮ್ಮನವರಿಗೂ ಒಂದು ಗಳಿಗೆ ಎಲ್ಲಿ ಈ ಮಾತಿ ನಿಂದಾಗಿ ಸಂಬಂಧ ತಪ್ಪಿಹೋಗುವುದೋ ಎಂದು ಚಿಂತೆಯಾದರೂ ಬೇರೆ ದಾರಿ ಕಾಣದೆ—

'ನಾನು ವೆಂಕಮ್ಮನ ಹತ್ತಿರ ಸೂಕ್ಷ್ಮವಾಗಿ ಪ್ರಸ್ತಾಪಿಸಿ ನೋಡು ತ್ತೇನೆ. ದಾಸಣ್ಣ ಶಾಮಣ್ಣನ ಹತ್ತಿರವೇ ಮಾತಾಡಲಿ.'

—ಎಂದಳು. ಚಂದ್ರಶೇಖರನೇ ಹೋಗಿ ಶಾಮಣ್ಣನನ್ನು ಕರೆದು ಕೊಂಡು ಬಂದ.

ಅಂಗೈಗೆ ಸುಣ್ಣ ಸವರಿಕೊಂಡು, ಆದರ ಮೇಲೆ ಮಡ್ಡೀನಸ್ಯದ ಸಣ್ಣ

ಉಂಡೆಯನ್ನಿಟ್ಟು, ಹೆಬ್ಬೆರಳಿನಿಂದ ಅದನ್ನು ಉಜ್ಜುತ್ತಾ, ಶಾಮಣ್ಣ ವೆಂಕಟದಾಸಪ್ಪನವರು ಹೇಳಿದು ದೆಲ್ಲವನ್ನು ಕೇಳಿ, ಒಂದು ಚಿಟಿಕೆ ನಶ್ಯವನ್ನು ಮೂಗಿಗೇರಿಸಿ, ವೆಂಕಟದಾಸಪ್ಪನವರ ಮುಖವನ್ನು ನೋಡಿ—

'ರಂಗೂ ಸೀತೆಯಾಗ್ತಾಳೇನೊ ಅಂತಿದ್ದೆ, ಇಲ್ಲ. ಸತ್ಯಭಾಮೆ ಯಾದಳು'.

—ಎಂದು ನಕ್ಕುಬಿಟ್ಟು—

'ಇಷ್ಟೇ ತಾನೇ. ನಾನು ಯಾವುದನ್ನೂ ಯೋಚಿಸಿ. ಚಂದ್ರುನ ಕೈಲಿ ಹೇಳಿಕಳಿಸ್ತೀನಿ ಬಾ ಚಂದ್ರು'

—ಎಂದು ಚಂದ್ರಶೇಖರನನ್ನು ತಮ್ಮೊಂದಿಗೆ ಕರೆದುಕೊಂಡು, ಅವರ ಮನೆಯಿಂದ ಹೊರಟು, ಬೀದಿಗಿಳಿಯುತ್ತಿದ್ದ ಹಾಗೇ ಹೇಳಿದರು—

'ರಂಗೂ ಪುಣ್ಯವಂತೆ ಕಣೋ ಚಂದ್ರು.'

ಇದ್ದಕ್ಕಿದ್ದ ಹಾಗೇ ಶಾಮಣ್ಣ ಹೇಳಿದುದನ್ನು ಕೇಳಿ ಚಂದ್ರಶೇಖರನಿಗೆ ಆಶ್ಚರ್ಯವಾಯಿತು.

'ಏಕೆ ಶಾಮಣ್ಣ? ಸದ್ಯ—ಕತ್ತಿನವರೆಗೂ ಬಂದ ಗಂಡಾಂತರ ತಪ್ಪಿತು ಅಂತಲೇ.'

'ಛಿ! ಮುಟ್ಠಾಳ. ಅದಕ್ಕಲ್ಲ ಕಣೋ ನಾನು ಹೇಳಿದ್ದು.'

'ಮತ್ತೆ?'

'ಈ ಲೋಕದಲ್ಲಿ ಕೆಡೋರಿಗೇನೂ ಕಡಿಮೆಯಿಲ್ಲ. ಆದರೆ ತಮ್ಮ ಕೆಟ್ಟತನದಿಂದ ಇತರರಿಗೆ ಕೆಡುಕಾಗಬಾರದು, ನೋವಾಗಬಾರದು ಅನ್ನೋ ಋಜುಬುದ್ಧಿ ಎಷ್ಟು ಜನಕ್ಕೆ ಇರುತ್ತೆ ಹೇಳು. ತಮ್ಮ ಹುಳುಕು ಮುಚ್ಚಿಟ್ಟುಕೊಂಡು, ಇತರರ ಹುಳುಕು ಹಿಡಿಯಲು ಹೋಗೋ ಮಹಾತ್ಮರೇ ಬಹಳ ಈ ಕಾಲದಲ್ಲಿ. 'ಸಾವಿರ ಸುಳ್ಳು ಹೇಳಿ ಮದುವೆ ಮಾಡಿಸು' ಅಂತ ಗಾದೇನೇ ಇದೆ. ಹಾಗಿರುವಾಗ ಸತ್ಯದಿಂದ ಮದುವೆ ನಿಂತರೂ ನಿಲ್ಲಲಿ ಅನ್ನೋ ಜನ ಎಷ್ಟು ಮಂದಿ ಸಿಕ್ತಾರೆ.'

—ಶಾಮಣ್ಣ ಮೆಚ್ಚುಗೆಯ ಧ್ವನಿಯಲ್ಲಿ ಹೇಳಿದ.

'ಹಾಗಾದರೆ ಈ ಮದುವೆಗೆ ನಿನ್ನದೇನೂ ಅಭ್ಯಂತರ ಇಲ್ಲವೇ ಶಾಮಣ್ಣ?'

—ಚಂದ್ರಶೇಖರ ಕೇಳಿದ.

'ಅಭ್ಯಂತರ. ಆ ಹುಡುಗ ಈ ಮಾತು ಹೇಳಿದ ಮೇಲೆ, ಬೇಡಾ ಅಂದ್ರೂ ಬಿಡೋದಿಲ್ಲ. ಅವನ ಕತ್ತಿಗೆ ರಂಗೂನ ಕಟ್ಟೋದೇ ಖಂಡಿತ.'

'ಏಕೆ?'

'ಮತ್ತೆ ನಾವು ಸತ್ಯಾನ ಗೌರವಿಸೋ ರೀತಿ ಯಾವುದು ಚಂದ್ರಶೇಖರ; ಈಗ ಸುಳ್ಳು ಹೇಳಿದ್ರೆ ಮಗಳನ್ನು ಕೊಡುತ್ತಾ ಇದ್ದನೋ ಇಲ್ಲವೋ; ಹಾಗಿರುವಾಗ ಸತ್ಯ ಹೇಳಿದ ಮೇಲೆ 'ಬೇಡ' ಎಂದರೆ, ಸತ್ಯಾ ಹೇಳೋದೆ ಅಪರಾಧ ಅನ್ನೋ ಹಾಗೆ ಮಾಡಿದ ಹಾಗಾಗೋಲ್ಲವೇ. ಹಾಗೆ ಮಾಡಿದರೆ ದೇವರು ಮೆಚ್ಚ್ತಾನೆಯೇ? ಖಂಡಿತ ನನ್ನದೇನೂ ಅಭ್ಯಂತರವಿಲ್ಲ. ಅವಳಿಗೂ ಹೇಳ್ತೀನಿ. ಆ ಹುಡುಗ ನಿನ್ನ ಭಾವಮೈದುನನಾಗಿ ಸಿಕ್ಕಿದ್ದು ನಿನ್ನ ಪುಣ್ಯ.

'ಹಾಗಂದರೆ ನನಗಿಂತ ನೀನೇ ಪುಣ್ಯವಂತ ಶಾಮಣ್ಣ. ನನ್ನ ಭಾವ ಮೈದುನ ನಿನ್ನ ವಂಶ ಉದ್ಧಾರ ಮಾಡೋ ಅಳಿಯ ಆಗ್ತಾನಲ್ಲಾ.

ಶಾಮಣ್ಣನ ಮಾತು ಕೇಳಿ ಚಂದ್ರಶೇಖರ ನಗುತ್ತಾ ಹೇಳಿದ

'ಲೋ... ಲೋ... ನೀನು ನಗ್ತಾ ಹೇಳಿದರೂ ಸತ್ಯಾನೇ ಹೇಳ್ದೆ. ಕಣೋ. ಅಂಥಾ ಅಳಿಯನ್ನ ಪಡೆಯೋಕೆ ಪುಣ್ಯ ಮಾಡಿರಬೇಕು.'

'ಅಂಥ ಅಳಿಯನ ಪಡೆಯೋಕೆ ಪುಣ್ಯ ಮಾಡಿರಬೇಕೋ, ಇಂಥ ಮಾವನ, ಪಡೆಯೋಕೆ ಪುಣ್ಯ ಮಾಡಿರಬೇಕೋ— ಆ ಉರಿಯೋ ಸೂರ್ಯ ನಾರಾಯಣನಿಗೇ ಗೊತ್ತು. ನಮಗೇನು ಶಾಮಣ್ಣ—ಮದುವೆ ಹೋಳಿಗೇ ಸಿಕ್ಕೋದು ನಮ್ಮ ಅದೃಷ್ಟ. ಸರಿ, ಹಾಗಾದರೆ ಈ ವಿಷಯ ಅಮ್ಮನಿಗೆ ಹೋಗಿ ಹೇಳ್ತೀನಿ. ಏನಾಗುತ್ತೋಂತ ಒದ್ದಾಡ್ಕೋತಾ ಇದ್ದಳು.'

'ನಿಮ್ಮಮ್ಮ ಸಜ್ಜನೆ ಕಣೋ ಚಂದ್ರು, ಪುಣ್ಯಾತಗಿತ್ತಿ, ತನ್ನ ಮನೇಲಿ ಬೆಳಗೋ ದೀಪಾನ ನನ್ನ ಮನೇಲೂ ಬೆಳಗಿಸಿದಳು. ನಿಮ್ಮಪ್ಪನಿಗೆ ಹೇಳ್ತಾ ಇದ್ದೆ ನಾನು 'ವೆಂಟಾ—ನೀನು ಪುಣ್ಯವಂತ ಕಣೋ ಭಡವಾ— ಒಳ್ಳೇ ಹುಡುಗೀನೇ ಗಿಟ್ಟಿಸಿಬಿಟ್ಟೆ' ಅಂತ. ಅದಕ್ಕವನು ಏನು ಹೇಳ್ತಾ ಇದ್ದ ಗೊತ್ತೆ?'

'ಏನು ಹೇಳ್ತಾ ಇದ್ದ'?

'ಸುಮ್ನಿರೋ ಶಾಮಿ ನನ್ನೆದುರಿಗೆ ಹೇಳಿದ ಮಾತ್ನ ಅವಳೆದುರಿಗೆ ಹೇಳಬೇಡ. ಮೊಕ ಮೊರದಗಲ ಮಾಡಿಕೊಂಡು, ಮಾಡೋ ಅಡಿಗೆ ರುಚಿ ಕೆಡಿಸಿಬಿಡ್ತಾಳೆ' ಅಂತ ಅನ್ತಾ ಇದ್ದ. ಊಟದ ರುಚೀಲಿ ನಿಮ್ಮಪ್ಪನ್ನ ಬಿಟ್ಟರೆ ಇರಲಿಲ್ಲ ನೋಡು—ರಸಿಕಾಗ್ರೇಸರ. ಹೋಗ್ಲಿ ಬಿಡು— ಮಾತು ಎಲ್ಲೆಲ್ಲಿಗೋ ಹೋಯ್ತು. ನಿಮ್ಮಮ್ಮಗೆ ಹೇಳಿ ಬಿಡು—ಧಾರೇದಿನ ಕಾಯೊಬ್ಬಟ್ಟು ಅವಳೇ ಮಾಡಬೇಕೂಂತ.'

'ಕಾಯೊಬ್ಬಟ್ಟು ಯಾರು ಬೇಕಾದ್ರೂ ಮಾಡ್ತಾರೆ. ಮೊದಲು ನಿನ್ನ ಮಗಳಿಗೆ ಕೋಡುಬಳೆ ಚೆನ್ನಾಗಿ ಮಾಡೋದು ಕಲಿಸೂಂತ ವೆಂಕತ್ತೆಗೆ ಹೇಳು. ಕೋಡುಬಳೆ ಅಂದ್ರೆ ನಿನ್ನ ಅಳಿಯನಿಗೆ ಪಂಚಪ್ರಾಣ.'

—ಎಂದ ಚಂದ್ರಶೇಖರ ನಗುತ್ತಾ.

'ಹೌದಾ?'

'ಹೂ. ನನ್ನ ಮಾತು ನಂಬ್ದೇ ಹೋದರೆ—ಹೇಗೂ ನಿನ್ನ ಅಳಿಯಂ ಇದಾನಲ್ಲ ಸತ್ಯಪರಿಶ್ಚಂದ್ರ. ಅವನನ್ನೇ ಕೇಳು ಬೇಕಾದರೆ—'

'ನಿನ್ನ ಮಾತು ನಿಜ ಆದ್ರೆ, ನನ್ನ ದೊಡ್ಡ ಯೋಚನೆ ಒಗೆ ಹರೀತು.

'ಏನು?'

'ಅಳಿಯನಿಗೆ ಮದುವೇಲಿ ಏನು ಕೊಡಲಿ ಅಂತ ಯೋಚಿಸ್ತಾ ಇದ್ದೆ...'

'ಈಗೇನು ಒಂದು ಬುಟ್ಟಿ ಕೋಡುಬಳೆ ಕೊಡ್ತೀಯಾ'

'ಊಹು—ಅಕ್ಕಿಗೆ ಒಂದು ಎಕರೆ ಗದ್ದೆ: ತೆಂಗಿನಕಾಯಿಗೆ ಅರ್ಧ ಎಕರೆ ತೆಂಗಿನ ತೋಟ.'

'ಎಣ್ಣೆ... ಮೆಣಸಿನಕಾಯಿ... ಜೀರಿಗೆ...ಸಾಸಿವೆ ಅದಕ್ಕೆಲ್ಲಾ...'

'ದೇವರು ಅವನಿಗೆ ಅಷ್ಟಕ್ಕೂ ಯೋಗ್ಯತೇ ಕೊಟ್ಟಿಲ್ಲವೇ? ಮನೆ ಬೆಳೀಲೀಂತ ಮಗಳನ್ನು ಕೊಟ್ರೆ, ಮಕ್ಕಳಿಗೇನು ಮಾಡಲಿ ಅಂತ ಕೇಳೋರಿಗೆ ಏನು ಉತ್ತರ ಹೇಳಬೇಕು ಹೇಳು'.

—ಎಂದ ಶಾಮಣ್ಣ ನಗುತ್ತಾ. ಚಂದ್ರಶೇಖರನೂ ಆ ನಗುವಿನಲ್ಲಿ ಬೆರೆತ.

# ೩೧

ವೈಶಾಖ ಮಾಸದಲ್ಲೇ ಲಗ್ನವೆಂದು ತೀರ್ಮಾನವಾಯಿತು. ಆ ನಿಶ್ಚಯದೊಂದಿಗೆ ಬೇರೊಂದು ಚಿಂತೆ ವೆಂಕಮ್ಮನಿಗೆ ಅಂಟಿತು— 'ಲಗ್ನಕ್ಕೆ ಬೇಕಾದ ಹಣವನ್ನು ಗಂಡ ಎಲ್ಲಿಂದ ಜೋಡಿಸುತ್ತಾರೆ' ಎಂದು.

ಆಕೆಯ ಚಿಂತೆ ಅಕಾರಣವಾದುದಲ್ಲ. ಶಾಮಣ್ಣನ ಆರ್ಥಿಕ ಪರಿಸ್ಥಿತಿ ಯಾರೂ ಯೋಚನೆ ಮಾಡುವಂಥದೇ ಆಗಿತ್ತು. ಎಲ್ಲರಿಗೂ ಆ ಚಿಂತೆ ಇದ್ದರೂ ಶಾಮಣ್ಣನಿಗೆ ಮಾತ್ರ ಆ ಚಿಂತೆ ಇದ್ದಂತಿರಲಿಲ್ಲ.

'ನಿನ್ನ ಮಗಳಿಗೆ ಗಂಡೇ ಇಲ್ಲಾ ಅನ್ನುತ್ತಿದ್ದೆ. ಗಂಡಾಯಿತು. ಇಗ ಹಣದ ಚಿಂತೆ. ಅದೂ ಹೇಗೋ ತೀರುತ್ತೆ. ಬಿಡು.'

'ಹೇಗೋ ತೀರುತ್ತೆ ಅಂದರೆ— ಮೂರು ಹೊತ್ತೂ ನಿಮ್ಮ ಜೊತೇಲಿ ಇಸ್ಪೇಟು ಆಡೋರು ಕೊಡ್ತಾರೆಯೋ?'

—ವೆಂಕಮ್ಮ ಕಟುವಾಗಿ ಹೇಳಿದಳು.

'ಮದುವೆ ಯಾರು ಗೊತ್ತು ಮಾಡಿದರೋ ಅವರೇ ದುಡ್ಡೂ ಕೊಡ್ತಾರೆ'

—ಎಂದ ಶಾಮಣ್ಣ ಅತ್ಯಂತ ನಿಶ್ಚಿಂತೆಯ ಧ್ವನಿಯಲ್ಲಿ.

'ಚೆನ್ನಾಯಿತು. 'ಮಗಳಿಗೆ ಗಂಡು ತೋರಿಸಿದೆ. ಮದುವೆಗೂ ದುಡ್ಡು ಕೊಡಿ ' ಅಂತ ಭಾಗತ್ತೇನ ಕೇಳ್ತೀರಾ?'

'ಭಾಗತ್ತೇನೇ ರಂಗೂಗೆ ಗಂಡು ಜೋಡಿಸಿದವಳು?'

'ಇನ್ಯಾರು—ಅಂಗಡಿ ರುದ್ರಮ್ಮನೇ?'

ಹೆಂಡತಿ ತಟಕ್ಕನೆ ಆಡಿದ ಮಾತು ಕೇಳಿ ಶಾಮಣ್ಣನ ಹೃದಯಕ್ಕೆ ಮುಳ್ಳು ಮುರಿದಂತಾಯಿತು. ಹಾಗೇ ಆ ಮಾತಿಗೆ ಅಷ್ಟೇ ಕಟುವಾಗಿ ಉತ್ತರ ಕೊಡಬೇಕೆಂದು ಹಾತೊರೆಯುತ್ತಿದ್ದ ನಾಲಗೆಯನ್ನು ತಡೆದು—

'ಅಲ್ಲ—ಮನುಷ್ಯರ ಮುಖಾಂತರ ಕೆಲಸ ಮಾಡುವ ದೇವರು'

—ಎಂದರು.

'ನೋಡೋಣ,' ನೋಡೋಣ, ಅದು ಯಾವ ದೇವರು ಬರ್ತಾನೋ ನಿಮ್ಮನ್ನು ಕಾಪಾಡಲಿಕ್ಕೆ?'

—ಎಂದಳು ವೆಂಕಮ್ಮ.

'ಅದು ನೋಡೋಕೆ ನಾನು ಹೋಗಿ ಬರ್ತೀನಿ. ಆದರೆ ಒಂದು ಮಾತು ನೋಡು, ನಿನ್ನ ತರಹ ಮಾತಾಡೋದನ್ನ ನಿನ್ನ ಮಗಳಿಗೆ ಕಲಿಸಬೇಡ. ಅವಳು ಮುಂದೆ ಗಂಡನ ಮನೆಯಲ್ಲಿ ಸಂಸಾರ ಮಾಡಬೇಕಾದ ಹುಡುಗಿ'.

—ಎಂದು ಹೇಳಿ, ಆ ಮಾತು ಮುಂದೆ ಬೆಳೆಯಲು ಅವಕಾಶ ಕೊಡದೆ, ಗಳದ ಮೇಲಿದ್ದ ವಸ್ತ್ರವನ್ನು ಎಳೆದು ಹೆಗಲ ಮೇಲೆಹಾಕಿಕೊಂಡು ಹೊರಟು ಹೋದ ಶಾಮಣ್ಣ.

ತಂದೆ ತಾಯಿಗಳ ಮಾತನ್ನು ಕೇಳಿಸಿಕೊಂಡು ರಂಗಮ್ಮ ತನ್ನ ತಾಯಿಗೆ—

'ಅಣ್ಣಾ ಕಣ್ಣಿಗೆ ಬಿದ್ದಾಗಲೆಲ್ಲಾ ಯಾಕಮ್ಮಾ ಹಾಗೆ ಮಾತಾಡಿ ಮನಸ್ಸು ನೋಯಿಸ್ತಿ?'

—ಎಂದಳು ನೋವು ತುಂಬಿದ ಸ್ವರದಲ್ಲಿ.

'ಸಾಕು... ಸಾಕು... ಸುಮ್ನಿರೆ... ನೀನೊಬ್ಬಳೇ ನಿನ್ನ ಅಣ್ಣನನ್ನು ಕಂಡಿರೋಳು. ಮೊದಲು ನಿನಗೆ ಹೇಳಿದ ಕೆಲಸ ಮಾಡುಹೋಗು.'

—ಎಂದು ಸಿಡಿಗುಟ್ಟುತ್ತಾ ವೆಂಕಮ್ಮ ಕೆಲಸ ಮಾಡಲು ಅಡಿಗೆ ಮನೆಯೊಳಗೆ ಸೇರಿದಳು.

ಮನೆಯಿಂದ ಹೊರಟ ಶಾಮಣ್ಣನಿಗೆ, ಮನೆ ಬಾಗಿಲು ದಾಟುತ್ತಿದ್ದ ಹಾಗೇ ಹೆಂಡತಿಯ ಮಾತು ಮರೆತು ಹೋಗಿ, ಮಗಳ ಮದುವೆಯ ಯೋಚನೆ ಆರಂಭವಾಗಿತ್ತು.

ಹೆಂಡತಿಯಿಂದ ಆ ಮಾತು ಕೇಳುವುದು ಅವರಿಗೆ ಹೊಸದೇನೂ ಆಗಿರ ಲಿಲ್ಲ. ಹನ್ನೆರಡು ವರ್ಷದಿಂದ ಕೇಳಿ ಕೇಳಿ, ಅವರ ಕಿವಿ, ಮನಸ್ಸು ಎರಡೂ ಜಡ್ಡು ಕಟ್ಟಿ ಹೋಗಿದ್ದವು. ವೆಂಕಮ್ಮನ ಚುರುಕು ನಾಲಗೆ ಶಾಮಣ್ಣನಿಗೂ ಹೊಸದಲ್ಲ, ಊರಿಗೂ ಹೊಸದಲ್ಲ. ಆಕೆ ಸಂಸಾರಕ್ಕೆ ಬಂದ ಎರಡು ವರ್ಷ ದಲ್ಲೇ ಗಯ್ಯಾಳಿ ವೆಂಕಮ್ಮ ಎಂತ ಊರಿನ ಸ್ತ್ರೀ ಸಮಾಜ ಆಕೆಗೆ ಬಿರುದ ಕೊಟ್ಟಿತ್ತು.

ಆದರೆ ಶಾಮಣ್ಣನಿಗೆ ಆಕೆ ಗಯ್ಯಾಳಿಯಲ್ಲವೆಂಬುದೂ ಗೊತ್ತು. ಸಂಸಾರದಲ್ಲಿ ಅವರ ದೃಷ್ಟಿಗಳು ಬೇರೆ ಬೇರೆಯಾದಂದೇ, ವೆಂಕಮ್ಮ ಗಟ್ಟಿ ಬಾಯಿಯವಳಾಗಲು, ಹಾಗೇ ಶಾಮಣ್ಣ ಮನೆಯನ್ನು ಮರೆತು ರುದ್ರುಮು

ಸಂಗಡಿಯ ಇಸ್ಪೇಟು ಕೊಳದಲ್ಲಿ ಮುಳುಗಲು ಕಾರಣವಾಗಿತ್ತು.

ವೆಂಕಮ್ಮನಿಗೆ ತಾನಾಯಿತು, ಮನೆಗೆಲಸವಾಯಿತು, ತನ್ನ ಸಂಸಾರದ ಚಿಂತೆಯಾಯಿತು— ಅಷ್ಟೆ. ಅದರಾಚೆಯ ಜಗತ್ತಿಗೆ ಬೆಂಕಿ ಬಿದ್ದು ಉರಿದು ಹೋದರೂ ಆಕೆಗೆ ಚಿಂತೆಯಿಲ್ಲ. ಯಾರು ಸತ್ತರೆ ನಮಗೇನು ಎಂಬ ಬುದ್ಧಿ.

ಶಾಮಣ್ಣನದು ಅದಕ್ಕೆ ತದ್ವಿರುದ್ಧ ಸ್ವಭಾವ. ತನ್ನ ತಲೆಯ ಮೇಲಿನ ಛಾವಣಿ ಕುಸಿದು ಬೀಳುತ್ತಿದ್ದರೂ, ಇತರರ ಮನೆ ಹಂಚು ಸರಿಪಡಿಸಲು ಓಡಿ ಹೋಗುವ ಸ್ವಭಾವ. ಊರಿನಲ್ಲಿ ಎಲ್ಲಿ ಒಳ್ಳೆಯದಾಗಲಿ, ಕೆಟ್ಟದಾಗಲಿ ಶಾಮಣ್ಣ ಇದ್ದೇ ತೀರಬೇಕು. ಯಾರ ಮನೆಯಲ್ಲಿ ಮದುವೆಯಾದರೂ, ಬೀಗರನ್ನು ಇದಿರುಗೊಳ್ಳಲು ದೇವಸ್ಥಾನದಲ್ಲಿ ಅಣಿಮಾಡುವುದು, ಅಡಿಗೆ, ನೀರಿನ ವ್ಯವಸ್ಥೆ ನೋಡಿಕೊಳ್ಳುವುದು, ಆಗಾಗ ಸಣ್ಣ ಸಣ್ಣ ಕಾರಣಕ್ಕೆ ಮುನಿಸಿಕೊಳ್ಳುವ ಬೀಗರ ಪರಿವಾರದವರ ಮನಸ್ಸನ್ನು ಪ್ರಸನ್ನಗೊಳಿಸುವುದು, ಗಂಡಿಗೆ ಬಾಗಿಲು ಕಟ್ಟಿಸಿ ಹೆಂಡತಿಯ ಹೆಸರು ಹೇಳಿಸುವದು, ಹೆಣ್ಣಿನ ಕೈಲಿ ಗಂಡಿಗೆ 'ಗುಬ್ಬಿ' ಹೊಡೆಸುವುದು— ಈ ಎಲ್ಲ ಕಾರ್ಯಕ್ರಮಕ್ಕೂ ಶಾಮಣ್ಣನೇ ಮುಖಂಡ. ಹಾಗೇ ಅಶುಭ ಕಾರ್ಯದಲ್ಲೂ; ಎಲ್ಲಿಯಾದರೂ ಹೆಣ ಬಿತ್ತೆಂಬ ಸುದ್ದಿ ಕೇಳಿದ ಕೂಡಲೇ, ತಲೆಗೊಂದು ಲಪಾಟಿ ಸುತ್ತಿ ಹಾಜರಾಗುತ್ತಿದ್ದ. ಎಲ್ಲಕ್ಕಿಂತ ಹೆಚ್ಚಾಗಿ ಊರಿನಲ್ಲಿ ನಡೆಯುವ ರಾಮೋತ್ಸವವಂತೂ ಶಾಮಣ್ಣನದೇ. ರಾಮನವಮಿಗೆ ಇನ್ನು ನಾಲ್ಕು ದಿನ ಇದೆ ಎನ್ನುತ್ತಿದ್ದ ಹಾಗೇ ಉರಿಬಿಸಿಲಿನಲ್ಲಿ ಹಳ್ಳಿ ಹಳ್ಳಿ ತಿರುಗಿ, ನೂರಾರು ಜನ ಕುಳಿತುಕೊಳ್ಳಲು ಸಾಕಾಗುವಷ್ಟು ದೊಡ್ಡ ಚಪ್ಪರ ಹಾಕಿಸಲು ಬೇಕಾದ ತೆಂಗಿನಗರಿ, ಅಡಕೆ ಮರ, ಬಾಳೇಕಂದುಗಳನ್ನು ಸಂಗ್ರಹಿಸಿ, ನವಮಿಯ ದಿನ ಪಾನಕ ಪೂಜೆ ಯಾಗುತ್ತಿದ್ದ ಹಾಗೇ, ಹತ್ತು ದಿನಗಳ ದಿನದ ಪೂಜೆ, ಹತ್ತನೆಯ ದಿನದ ಊರ ಸಮಾರಾಧನೆಗೆ ಬೇಕಾದ ಸಾಮಾನು ಸರಂಜಾಮುಗಳನ್ನು ಕೂಡಿಸಲು ಸೊಂಟಕಟ್ಟುವನು; ಊರಿನ ಹುಡುಗರನ್ನು ಗುಂಪು ಕೂಡಿಸಿಕೊಂಡು, ಆ ಹತ್ತು ದಿನವೂ ಪ್ರಾತಃಕಾಲದಲ್ಲಿ ಮನೆಮನೆಯನ್ನು ತಿರುಗಿ, ಅಕ್ಕಿ, ಬೇಳೆ, ಹಣ ಕೂಡಿಸುವನು. ನವಮಿಯ ದಿನ ಮನೆ ಬಿಟ್ಟ ಶಾಮಣ್ಣನವರು, ಮತ್ತೆ ಮನೆ ಸೇರುತ್ತಿದ್ದುದು ಸಮಾರಾಧನೆ ಮುಗಿದ ಮಾರನೆಯ ದಿನ ಬೆಳಗ್ಗೆಯೇ.

ಇದೆಲ್ಲದರಿಂದ ಹಳ್ಳಿಯ ದೊಡ್ಡ ತಲೆಗಳು ನಮ್ಮ ಶಾಮಿ ಇದ್ದರೆ

ಊರಿಗೆ ಹತ್ತು ಭುಜ ಇದ್ದ ಹಾಗೆ ಎಂದುಕೊಳ್ಳುವರು. ವೆಂಕಮ್ಮ 'ಊರೋರ ಹೆಣಾ ಎಲ್ಲಾ ಇವರು ಹೊರ್ತಾ ಇದ್ದರೆ, ಇವರ ಹೆಂಡತಿ, ಮಕ್ಕಳ ಹೆಣ ಹೊರೋಕೆ ಬೇರೆ ಯಾರು ಬರ್ತಾರೋ ನಾನು ಕಾಣೆ' ಎಂದು, ಊರನ್ನೂ, ಗಂಡನನ್ನೂ ಒಟ್ಟಾಗಿಯೇ ಬೈಯುತ್ತಿದ್ದಳು.

ಆ ಮಾತು ಕಿವಿಗೆ ಬಿದ್ದಾಗ ಶಾಮಣ್ಣನ ಆಪ್ತರಾದ ಭಾಗಮ್ಮ ಅವನಿಗೆ ಹೇಳುತ್ತಿದ್ದರು—

'ಹೌದೋ ಶಾಮಿ, ನೀನು ಊರ ಕೆಲಸಕ್ಕೆ ಇಪ್ಪತ್ತು ನಾಲ್ಕು ಗಂಟೆಯೂ ಸಾಲದು ಅಂತ ದುಡಿದರೆ ಹೇಗೋ. ನೀನೇನು ಶ್ರೀಮಂತನೇಹೇಗಿದ್ದರೂ ಸಂಸಾರ ನಡೆದುಕೊಂಡು ಹೋಗುತ್ತೆ ಅನ್ನೋಕೆ. ಊರ ಚಿಂತೆ ಜೊತೆಗೆ ಸಂಸಾರದ ಚಿಂತೇನೂ ಅಷ್ಟು ಮಾಡಬೇಕು.'

'ಬಿಡು ಭಾಗತ್ತೆ. ನನ್ನ ಸಂಸಾರಾನಾ ಯಾವ ಕಾಗೇನೂ ಕಚ್ಚಿಕೊಂಡು ಹೋಗೋಲ್ಲ. ನಾವು ಉಪವಾಸ ಸತ್ತರೆ ಊರೋರೆಲ್ಲ ಸುಮ್ಮನೆ ನೋಡ್ತಾ ಇರ್ತಾರೆಯೇ? ಅಂಥ ಹೊತ್ತು ಬಂದರೆ ಹೇಗೋ ಆಗುತ್ತೆ'

—ಎಂದು ಶಾಮಣ್ಣ ಮಾತು ಹಾರಿಸಲು ಯತ್ನಿಸುವನು.

'ಏನಾಗುತ್ತೇ. ನೀನು ಮಹಾ ಉಡಾಫಿ ಮನುಷ್ಯ. ಮದುವೆಗೆ ಬಂದ ಮಗಳನ್ನು ಮನೇಲಿಟ್ಟುಕೊಂಡು ನಿನ್ನ ಹಾಗೇ ತಿರುಗಾಡೋರನ್ನ ಯಾರನ್ನೂ ನಾನು ನೋಡಲಿಲ್ಲ. ಊರ ಉಸಾಬರಿ ಕಟ್ಟಿಕೊಂಡು ಖಾಜಿ ಸಾಬಿ ಬಡವಾದ ಅನ್ನೋ ಹಾಗಾಯ್ತು ನಿನ್ನ ಸಮಾಚಾರ. ಎಲ್ಲಿಕ್ಕೂ ಅವಳೊಬ್ಬಳು ಸವೆದು, ಊರೋರ ಕೈಲಿ ಗಯ್ಯಾಳಿ ಅಂತ ಅನ್ನಿಸ್ಕೋಬೇಕು. ಊರ ಕೆಲಸ ಮಾಡೋಕೆ ನಾನು ಬೇಡ ಅನ್ನೋಲ್ಲ. ನಿನ್ನ ಸಂಸಾರದ ಚಿಂತೇನೂ ಸ್ವಲ್ಪ ಮಾಡಪ್ಪ, ನಾಳೆ ಸಂಸಾರ ನೋಡಿದವರ ಮುಂದೆ ನಗೆ ಪಾಟಲಾಗಬಾರದು'

—ಎಂದು ಎಚ್ಚರಿಸುತ್ತಿದ್ದರು.

ಆದರೆ ತಮ್ಮ ಎಚ್ಚರಿಕೆಯ ಮಾತು ಏನೂ ಫಲಕಾರಿಯಲ್ಲವೆಂಬುದು ಅವರಿಗೂ ಗೊತ್ತಿತ್ತು. ಎಷ್ಟೋ ವೇಳೆ—

'ಶಾಮಿ ನಿನಗೆ ಹೇಳೋದು, ಗಾಣಿಗರ ಕೋಣಕ್ಕೆ ಹೇಳೋದೂ ಎರಡೂ ಒಂದೇ'

—ಎಂದು ನಗುತ್ತಿದ್ದರು. ಶಾಮಣ್ಣನೂ ಅವರು ಅಂದ ಹಾಗೇ ಮಾಡುತ್ತಿದ್ದ.

ಇಷ್ಟು ದಿನ ಇಲ್ಲದ ಚಿಂತೆ ಈಗ ಇವನಿಗೆ ಅಂಟಿಕೊಂಡಿತ್ತು— ಮಗಳ ಮದುವೆಯರೂಪದಲ್ಲಿ.

ರಂಗಮ್ಮ ಶಾಮಣ್ಣನ ಮೊದಲ ಮಗಳಷ್ಟೇ ಅಲ್ಲ. ಮೋಹದ ಮಗಳು. ಹೆಂಡತಿಯ ಮಾತಿನ ಮಳೆಯಲ್ಲಿ ಮನೆಬಿಟ್ಟು ಓಡಿ ಹೋಗೋಣ ಎನ್ನಿಸು ವಾಗ 'ಇನ್ನೂ ಎರಡು ಗಳಿಗೆ ಇರಬೇಕು' ಎನ್ನಿಸುತ್ತಿದ್ದುದು, ಮಗಳೇ. ತಾಯಿ ಸಿಟ್ಟಾದಾಗ ಮಾತಾಡಲು ರಂಗಮ್ಮನಿಗೂ ಧೈರ್ಯವಿರಲಿಲ್ಲವಾದರೂ, ಅವಳ ಮುಖದಲ್ಲಿ ನೋವು, ಕಣ್ಣಿನಲ್ಲಿನ ಮರುಕ, ನುಡಿಯಲೆತ್ನಿಸಿಯೂ ನುಡಿಯಲಾಗದೆ ನಸುಕಂಪಿಸುವ ತುಟಿಯ ನಡುಕ—'ಅಣ್ಣಾ, ನಾನು ನಿನ್ನ ಪಕ್ಷ' ಎಂದು ಸಾರಿ ಹೇಳುತ್ತಿದ್ದವು. ರಂಗಮ್ಮನ ಕಣ್ಣಲ್ಲಿ ಆ ನೋಟವನ್ನು ಕಂಡಾಗ ಶಾಮಣ್ಣನೂ ಅವಳತ್ತ 'ನಿನ್ನ ಮಾತು ನನಗೆ ಅರ್ಥವಾಯಿತು, ರಂಗೂ' ಎಂಬಂತೆ ನೋಡಿ, ಮನೆಯಿಂದ ಹೊರಬೀಳುತ್ತಿದ್ದ. ಕೋಟಿ ನುಡಿಗಳು ಮಾಡಲಾಗದ ಕೆಲಸವನ್ನು ಆ ಎರಡು ತುಟಿ ನೋಟ ಮಾಡುತ್ತಿದ್ದವು. ಒಮ್ಮೊ—ಮ್ಮೆ ಸಂಸಾರವೇ ಸಾಕು ಎಂದು ಬೇಸರವಾದ ಹೊತ್ತಿನಲ್ಲಿ ಆ ನೋಟ ನೆನಪಾಗಿ ಅವಕ್ಕಾಗಿಯಾದರೂ ಸಂಸಾರದಲ್ಲಿರಬೇಕು ಎನ್ನುವ ಹಾಗೆ ಮಾಡುತ್ತಿತ್ತು.

ಯಾವ ಚಿಂತೆಯನ್ನೂ ಹಚ್ಚಿಕೊಳ್ಳದೆ 'ಪರಮಹಂಸ'ರ ಹಾಗಿದ್ದ ಶಾಮಣ್ಣನ ಮನಸ್ಸಿನಲ್ಲಿ ಯಾವಾಗಲಾದರೊಮ್ಮೆ ಸುಳಿಯುತ್ತಿದ್ದ ಚಿಂತೆ ಆ ಪ್ರೀತಿಯ ಮಗಳ ಮದುವೆಯದು. 'ರಂಗಮ್ಮನಿಗೆ ಒಳ್ಳೆಯ ಗಂಡನನ್ನು ತರಬೇಕು. ಹತ್ತು ಜನ ಒಪ್ಪುವ ಹಾಗೆ ಮದುವೆ ಮಾಡಿಕೊಡಬೇಕು' ಎಂದೆಲ್ಲಾ ಚಿಂತಿಸುತ್ತಿದ್ದ ತನ್ನ ಆರ್ಥಿಕ ಸ್ಥಿತಿಯನ್ನು ಮರೆತು.

ಈಗ ಶಾಮಣ್ಣನಿಗೆ, ರಂಗಮ್ಮನಿಗೆ ಗೊತ್ತಾದ ಗಂಡು ತಾನು ಬಯಸಿ ದಂಥದು ಎಂದು ಮನವರಿಕೆಯಾಗಿತ್ತು. ಆದರೆ ಈ ಮದುವೆಯನ್ನು ತಾನು ಯೋಚಿಸಿದ ಹಾಗೇ ಮಾಡುವುದು ಸಾಧ್ಯವೇ?

ಈ ಚಿಂತೆಯನ್ನು ನೆತ್ತಿಯಲ್ಲಿ ಹೊತ್ತು ಶಾಮಣ್ಣ ತನ್ನ ಬಹು ಆಪ್ತ ಮಿತ್ರನಾದ ಸಾಹುಕಾರ ಷಡಾಕ್ಷರಪ್ಪನನ್ನು ಕಾಣಲು, ಪರಶುರಾಮಪುರ ದಿಂದ ಮೂರು ಮೈಲಿ ದೂರದಲ್ಲಿದ್ದ ಕೊರಲಕುಂಟೆಗೆ ಹೊರಟ.

## ೩೨

ಸಾಹುಕಾರ ಷಡಾಕ್ಷರಪ್ಪ ಹೆಸರಿಗೆ ಮಾತ್ರವೇ ಸಾಹುಕಾರನಾಗಿರದೆ, ಸುತ್ತಮುತ್ತಲ ಪ್ರಾಂತಕ್ಕೆಲ್ಲಾ ಹೆಸರುವಾಸಿಯಾದ ಸಾಹುಕಾರನಾಗಿದ್ದ. ಅರವತ್ತು—ಎಪ್ಪತ್ತು ಸಾವಿರ ರೂಪಾಯಿ ನಗದು ಹಣವೇ ಅವನ ಮನೆಯಲ್ಲಿರುವುದಲ್ಲದೆ, ಹತ್ತು— ಹದಿನೈದು ಸೇರಿನ ಬಂಗಾರದ ಗಟ್ಟಿಗಳೇ ಇದ್ದವೆಂದು ಜನ ಆಡಿಕೊಳ್ಳುತ್ತಿದ್ದರು. ಬಡ್ಡಿ ವ್ಯವಹಾರದಲ್ಲಿ ಸಾಕಷ್ಟು ಗದ್ದೆ, ಹೊಲಗಳನ್ನೂ ಮಡಿದಿದ್ದ. ಅವನ ಬಳಿ ಯಾರಾದರೂ ಏನಾದರೂ ಆಸ್ತಿಯನ್ನು ಆಡವು ಮಾಡಿದರೆ, ಅದರ ಆಸೆಯನ್ನು ಬಿಟ್ಟಂತೆಯೇ ಎಂಬುದು ಅವನ ಬಳಿ ವ್ಯವಹಾರ ಮಾಡಿದವರೆಲ್ಲರಿಗೂ ಗೊತ್ತಿತ್ತು. ರೂಪಾಯಿಗೆ ಆರು ಕಾಸು ಬಡ್ಡಿ ಎಂದೇ, ಅಸಲಿಗಿಂತ ಹೆಚ್ಚಾಗಿ ಬಡ್ಡಿ ವಸೂಲು ಮಾಡುತ್ತಿದ್ದ. ಸಾವಿರ ರೂಪಾಯಿ ವ್ಯವಹಾರವಾಗಲಿ, ಸೇರು ಕಾಳಿನ ಕೈಗಡವಾಗಲಿ, ಬಡ್ಡಿಯಿಲ್ಲದೆ ಯಾವ ವ್ಯವಹಾರವನ್ನೂ ಷಡಾಕ್ಷರಪ್ಪ ಮಾಡುತ್ತಿರಲಿಲ್ಲವಾದುದರಿಂದ ಆತನಿಗೆ 'ಬಡ್ಡಿ ಷಡಾಕ್ಷರಪ್ಪ' ಎಂದೇ ಅಡ್ಡ ಹೆಸರಾಗಿತ್ತು.

ಸಾಲ ಕೊಡುವ—ಕೊಳ್ಳುವ ವ್ಯವಹಾರ ಷಡಾಕ್ಷರಪ್ಪನಲ್ಲಿ, ಒಂದು ಕಲೆಯಾಗಿತ್ತು. ಆತ ಸಾಲ ಕೊಡುತ್ತಿದ್ದುದು, ತನ್ನ ಬಳಿ ಸಾಲ ಕೇಳಲು ಬಂದವರಿಗೆ ಮಾತ್ರವೇ ಅಲ್ಲ, ಯಾವುದಾದರೂ ಒಳ್ಳೆ ಆಸ್ತಿ ಅವನ ಕಣ್ಣಿಗೆ ಬಿದ್ದರೆ ಸಾಕು— ಏನಾದರೂ 'ಹಕೀಕತು' ಮಾಡಿ, ಆ ಆಸ್ತಿಯವರು ತನ್ನ ಬಳಿ ಸಾಲ ಕೇಳಲು ಬರುವ ಹಾಗೆ ಮಾಡಿಕೊಳ್ಳುತ್ತಿದ್ದ. ಹಾಗೆ ಬಂದಾಗ ಅವರಿಗೆ, ಆಗತ್ಯವಿದ್ದುದಕ್ಕಿಂತ ನಾಲ್ಕು ಕಾಸು ಹೆಚ್ಚಿಗೆ ಸಾಲಕೊಟ್ಟು' ನಯವಾಗಿ ಮಾತಾಡಿ, ಪತ್ರಕ್ಕೆ ರುಜು ಹಾಕಿಕೊಂಡು ಕಳಿಸುತ್ತಿದ್ದ. ಒಮ್ಮೆ ಪತ್ರಕ್ಕೆ ರುಜು ಬಿದ್ದ ಬಳಿಕ ಆ ಆಸ್ತಿ ಅವನದಾಗಲು ಹೆಚ್ಚು ದಿನ ಹಿಡಿಯುತ್ತಿರಲಿಲ್ಲ.

ಇದರಿಂದಾಗಿ ಅವನಿಗೆ ಶತ್ರುಗಳು ಕಡಿಮೆಯಿರಲಿಲ್ಲ. ಎಷ್ಟೋ ಜನ ಆಸ್ತಿ ಕಳೆದುಕೊಂಡವರು 'ಬಡ್ಡೀಮಗ, ನಂಬಿಸಿ ಕುತ್ತಿಗೆ ಕೊಯ್ದುಬಿಟ್ಟ. ಸಮಯ ಬರಲಿ' ಎಂದು ಹೊತ್ತು ಕಾಯುತ್ತಾ ಇದ್ದರು.

ಅಂಥವರಿಗೆ ಷಡಾಕ್ಷರಪ್ಪನ ದೊಡ್ಡ ಮಗಳು, ಪ್ರಾಯದ ವಯಸ್ಸಿಗೆ ವಿಧವೆಯಾಗಿ, ಮನೆತಪ್ಪಿ ಷಡಾಕ್ಷರಪ್ಪನ ಮನೆ ಸೇರಿದಾಗ ಅನುಕೂಲ ಸಂಧಿ ಸಿಕ್ಕಿತ್ತು.

ಷಡಾಕ್ಷರಪ್ಪ ಮಗಳನ್ನು ಒಳ್ಳೇ ಅನುಕೂಲವಾದ ಕಡೆಗೆ ಕೊಟ್ಟಿದ್ದ. ಬಸಮ್ಮನ ತೌರುಮನೆಯಂತೆಯೇ ಅತ್ತೆ ಮನೆಯಾದ ನಾಗಗೊಂಡನಹಳ್ಳಿ ರುದ್ರಪ್ಪನವರ ಮನೆಯೂ ಸಾಹುಕಾರಿಕೆಗೆ ಹೆಸರಾಗಿತ್ತು. ರುದ್ರಪ್ಪನಿಗೆ ಚೆನ್ನವೀರಣ್ಣ ಒಬ್ಬನೇ ಮಗ. ಚೆನ್ನವೀರಣ್ಣ ಶಿವಾಧೀನನಾದಾಗ, ಅವರ ಸಮಸ್ತ ಆಸ್ತಿಗೂ ಬಸಮ್ಮ ವಾರಸುದಾರಳಾದಳು. ಆದರೆ ಅಷ್ಟು ಆಸ್ತಿಯನ್ನು ನಿಭಾಯಿಸುವುದು ಒಂಟಿ ಹೆಣ್ಣು ಹೆಂಗಸಿನ ಕೈಯಲ್ಲಿ ಆಗದ ಮಾತಾದ್ದರಿಂದ ಅವಳ ಆಸ್ತಿಯ ಉಸ್ತುವಾರಿಗೆ ಷಡಾಕ್ಷರಪ್ಪ ತನ್ನ ದೊಡ್ಡ ಮಗ ಶಿವಪ್ಪನನ್ನು ನೇಮಿಸಿದ್ದ. ಬಸಮ್ಮ ತನ್ನ ವಿವಾಹಕ್ಕೆ ಸಾಕ್ಷಿಯಾಗಿ. ಎರಡು ವರ್ಷದ ಹೆಣ್ಣುಮಗಳು ನಾಗಮ್ಮನನ್ನು ಕರೆದುಕೊಂಡು ಬಂದು ತಂದೆಯ ಮನೆ ಸೇರಿದ್ದಳು— ಒಳ್ಳೇ ಪ್ರಾಯದ ವಯಸ್ಸಿನಲ್ಲಿ.

ಒಳ್ಳೆ ಪ್ರಾಯದಲ್ಲಿ ಪತಿ ಸುಖಹೀನಳಾದ ಮಗಳನ್ನು ಷಡಾಕ್ಷರಪ್ಪ, ಅವನ ಹೆಂಡತಿ ಪಾರ್ವತಮ್ಮ ಸರ್ಪಕಾವಲು ಕಾಯುತ್ತಿದ್ದರೂ ಹೇಗೊ ಏನೋ ಅಂತೂ. ಬಸಮ್ಮ ಮನೆಯಲ್ಲಿದ್ದ ಜೀತದಾಳು ಹನುಮಂತನಿಗೆ ಮನಸೋತು ಮೈ ನೀಡಿದಳು.

ಷಡಾಕ್ಷರಪ್ಪನನ್ನು ಅಪಮಾನಗೊಳಿಸಿ, ಅವನ ಮೇಲೆ ಸೇಡುತೀರಿಸಲು ಕಾದಿದ್ದ ಜನ, ಹೇಗೋ ಆ ಸುದ್ದಿಯನ್ನು ತಿಳಿದು, ಒಮ್ಮೆ ಅವರಿಬ್ಬರನ್ನೂ ಸಂಜೆಯ ಹೊತ್ತಿನಲ್ಲಿ ಹಿಡಿದು, ಮರಕ್ಕೆ ಕಟ್ಟಿ ಹಾಕಿ, ಊರ ಪಂಚಾಯಿತಿ ಏರ್ಪಡಿಸಿದ್ದರು. ಸುದ್ದಿ ತಿಳಿದ ಷಡಾಕ್ಷರಪ್ಪ ಪಾತಾಳಕ್ಕಿಳಿದು ಹೋದ.

ಬಗ್ಗಿಸಿದ ತಲೆಯನ್ನು ಮೇಲೆತ್ತದೆ ಷಡಾಕ್ಷರಪ್ಪ ಪಂಚಾಯತಿ ಸೇರಿದ್ದ ಬಸವಣ್ಣನ ಗುಡಿಗೆ ಹೋದ. ಹಳ್ಳಿಯವರಿಂದ ಹಣ್ಣುಗಾಯಿ ನೀರುಗಾಯಿ ಆಗುವಂತೆ ಏಟು ತಿಂದ ಹನುಮಂತ, ಅವಾಚ್ಯ ಶಬ್ದಗಳನ್ನು ಕೇಳಿ ತಲೆ ಎತ್ತಲಾಗದೆ ಮೂಲೆಯಲ್ಲಿ ಮುದುರಿಕೊಂಡಿದ್ದ ಮಗಳನ್ನು ನೋಡಿ, ರೋಷ ದುಃಖಗಳಿಂದ ಬುಸುಗರೆಯುತ್ತಾ ಕುಳಿತುಕೊಂಡ.

ಷಡಾಕ್ಷರಪ್ಪನನ್ನು ನೋಡಿದ ಕೂಡಲೇ ಆತನಿಗಾಗದ ಜನ ತಲೆಗೊಂದೊಂದು ಮಾತಾಡಲು ಆರಂಭಿಸಿದರು. ಅವರಿಗೆ ಪಂಚಾಯತಿ

ಮಾಡುವುದಕ್ಕಿಂತ ಹೆಚ್ಚಾಗಿ, ಷಡಾಕ್ಷರಪ್ಪನನ್ನು ಅಪಮಾನ ಮಾಡುವುದೇ ಮುಖ್ಯವಾಗಿತ್ತು. ಅವರಾಡುವ ಮಾತುಗಳನ್ನೆಲ್ಲಾ ಕೇಳುತ್ತಾ, ಒಂದೂ ಇದಿರು ಮಾತಾಡದೆ ಕುಳಿತಿದ್ದ ಷಡಾಕ್ಷರಪ್ಪ.

ಮಾತು ಬೆಳೆದಂತೆ ಪರಿಸ್ಥಿತಿ ಕಾವೇರುತ್ತಿತ್ತು.

ಈ ಘಟನೆಯನ್ನು ಹೇಗೆ ಮುಕ್ತಾಯಗೊಳಿಸಬೇಕು ಎಂಬ ಚರ್ಚೆ ನಡೆಯುತ್ತಿರುವಾಗಲೇ, ಕೊರಲಕುಂಟೆಯ ಹೊಲಗಳಿಗೆ ಕೂಲಿ ಕೆಲಸಕ್ಕೆ ಹೋಗಿದ್ದ ಪರಶುರಾಮಪುರದ ರೈತರಿಂದ ಆ ಸುದ್ದಿಯನ್ನು ಕೇಳಿದ ಶಾಮಣ್ಣ, ಈ ಚರ್ಚೆ ನಡೆಯುತ್ತಿರುವಾಗಲೇ ಅಲ್ಲಿಗೆ ಬಂದು, ಹೆಗಲಮೇಲಿದ್ದ ಚೌಕ ವನ್ನು ನೆಲದ ಮೇಲೆ ಹಾಸಿಕೊಂಡು ಷಡಾಕ್ಷರಪ್ಪನ ಮಗ್ಗುಲಲ್ಲಿ, ಚರ್ಚೆಯ ಮಾತುಗಳನ್ನು ಕೇಳುತ್ತಾ ಕುಳಿತ. ಆ ಮಾತುಗಳನ್ನು ಕೇಳಿ ಕೇಳಿದ ಹಾಗೇ ಅವನ ಮೈ ಬಿಸಿಯಾಗುತ್ತಿತ್ತು.

ಪಂಚಾಯತಿಯಲ್ಲಿ ಒಬ್ಬ ಮುಖಂಡನಾಗಿ ಬಂದು ಕುಳಿತುಕೊಂಡ ಷಡಾಕ್ಷರಪ್ಪನ ದಾಯಾದಿ ಬಸವಲಿಂಗಪ್ಪ—

'ಇಂಥ ರಂಡೇರ್ನೆಲ್ಲಾ ಹಿಂಗೆ ಬಿಟ್ಟರೆ ಆಗೋಕಿಲ್ಲ. ಹಳ್ಳೀಲಿ ದೊಡ್ಡ ಮನುಷ್ಯ ಅನ್ನಿಸಿಕೊಂಡೋನ, ಮಗಳೇ ಹಿಂಗೆ ಮಾಡಿದರೆ ಸಣ್ಣ ಪುಟ್ಟ ಜನ ಬೆತ್ತಲೆ ಕುಣಿಯೋಕೆ ಷುರುಮಾಡ್ತಾರೆ. ಚೆನ್ನಾಗಿ ಬರೇ ಎಳೀಬೇಕು. ಹೀನಜಾತಿಯವನನ್ನು ಕೂಡಿದ ಇವಳನ್ನು ಕುಲದಿಂದ ಹೊರಗೆಹಾಕಬೇಕು. ಆ ಮುಂಡೆ ತಲೇ ಮೇಲೆ ಬೂದಿ ಸುರ್ದು ಬೀದಿ ಮೆರವಣಿಗೆ ಮಾಡಿಸ್ಬೇಕು. ಇಂಥೋರನ್ನ ಮನೇಲಿ ಇಟ್ಕೊಂಡು ಸಾಕಿದೋರಿಗೆ ಹಳ್ಳಿಯೋರು ಬೆಂಕಿ, ನೀರು ಕೊಡಬಾರ್ದು ಅಂತ ಕಟ್ಟುಮಾಡಬೇಕು. ಕುಲದೋರು ಯಾರೂ ಅವರ ಮನೆ ಸಂಬಂಧ ಮಾಡಬಾರದು'

—ಎಂದ, ದ್ವೇಷದಿಂದ ವಿಕಾರವಾದ ಕರ್ಕಶ ಧ್ವನಿಯಲ್ಲಿ.

ಅವನಿಂದ ಪ್ರಚೋದಿತರಾಗಿ, ಅಲ್ಲಿ ಬಂದು ನೆರೆದ ಇತರ ಪಂಚಾಯಿತರೂ ಆದಕ್ಕೆ ಸಮ್ಮತಿಸುವ ಮನೋಭಾವದಲ್ಲಿದ್ದರು. ಅವರನ್ನು ನೋಡಿ, ಬಲೆಗೆ ಬಿದ್ದ ಮೊಲವನ್ನು ಹರಿದು ತಿನ್ನುವ ನಾಯಿಗಳ ನೆನಪಾಯಿತು ಶಾಮಣ್ಣನಿಗೆ. ಅದುವರೆಗೂ ಸುಮ್ಮನಿದ್ದವನು—

'ಇದು ಮನುಷ್ಯರಾಡೋ ಮಾತಲ್ಲ. ನಾನೂ ಹೆಣ್ಣುಮಗಳನ್ನು

ಹೆತ್ತವನು. ನಿಮ್ಮಲ್ಲೂ ಬಹಳ ಜನ ಹೆಣ್ಣುಮಕ್ಕಳ ತಂದೆಗಳು. ಅಂಥವರು ಆ ಮಗುವನ್ನು ಎದುರಿಗೆ ಕೂರಿಸಿಕೊಂಡು ಹೀಗೆಲ್ಲಾ ಆಡಬಾರದು. ತಪ್ಪಿಗೆ ಶಿಕ್ಷೆ ವಿಧಿಸಬೇಕು. ಹಾಗಂತ ಬೀದಿ ಪಗರಣ ಮಾಡಿ, ತಪ್ಪು ಮಾಡದಿದ್ದವರ ಮರ್ಯಾದೆ ಕಳೆಯೋದು ಯಾವ ನ್ಯಾಯ? ಏನೋ ಕೆಟ್ಟವಯಸ್ಸು ಬುದ್ಧಿ ತಪ್ಪಿತು. ಮಾಡಬಾರದ ಕೆಲಸ ಮಾಡಿದಳು. ಆಯಿತು, ಸಾಹುಕಾರರೇನೂ ಮಾಡಬಾರದ ಕೆಲಸ ಮಾಡಲಿಲ್ಲವಲ್ಲ. ಅವರಿಗೆ ಶಿಕ್ಷೆ ಕೊಡೋದು ಏಕೆ?'

—ಎಂದ.

'ಪಕ್ಕದ ಹಳ್ಳಿಯೋರು ಯಾರನ್ನೂ ನಾವು ಪಂಚಾಯಿತಿಗೆ ಕರೆಸಿಲ್ಲ. ನಮ್ಮ ಹಳ್ಳಿ ಮಾನಮರ್ಯಾದೆ ನಮಗೆ ಗೊತ್ತಿದೆ'

—ಎಂದು ಅಬ್ಬರಿಸಿದ ಬಸಲಿಂಗಪ್ಪ. ಆತನ ಮಾತು ಕೇಳಿದ ಇತರರು—ಹೌದ್ಹೌದು. ಶಾಮಣ್ಣೋರು ಸುಮ್ನೆ ಇರ್ಬೇಕು. ಇದು ನಮ್ಹಳ್ಳಿಯಮಾರ'

—ಎಂದು ತಲೆಯಲ್ಲಾಡಿಸಿದರು.

'ನಮಗೂ ಸಂಬಂಧವಿರೋ ಹೊತ್ತಿಗೇ ಮಾತಿಗೆ ಬಂದದ್ದು.'

—ಶಾಮಣ್ಣನೂ ಕೆರಳಿ ಹೇಳಿದ.

'ನಿನಗೇನು ಸಂಬಂಧ. ನೀನೂ ಇವಳ ರಖಾವುದಾರನೋ?'

—ಎಂದ ಒಬ್ಬ ಕುಹಕದ ನಗೆ ನಗುತ್ತಾ, ತಲೆ ಬಗ್ಗಿಸಿ ಕುಳಿತ ಬಸವಮ್ಮನತ್ತ ಕೈತೋರಿಸಿ.

'ನಾನು ಯಾರ ರಖಾವುದಾರ ಅನ್ನೋದನ್ನ ನಿನ್ನ ಹೆಂಡತೀನ ಕೇಳು. ಬಸಲಿಂಗಪ್ಪ ಬಹಳ ದೊಡ್ಡಮನುಷ್ಯ ನೀನು. ಆ ಮೇಲೆ ಪಂಚಾಯಿತಿ ಮಾಡಿ ಕುಲದಿಂದ ಹೊರಗಿಡೋವೆಯಂತೆ ಒಂದು ಗಳಿಗೆ ಎದ್ದು ಬಾ. ನಿನ್ನ ಹತ್ತಿರ ಮಾತಾಡೋದಿದೆ'

—ಎಂದ ಶಾಮಣ್ಣ ಆ ಮಾತಾಡುತ್ತಾ ಆಡುತ್ತಾ ಎದ್ದು ನಿಂತು.

'ಅದೇನು ಮಾತಾಡೋದಿದ್ರೂ ಹತ್ತು ಜನರ ಎದುರಿಗೇ ಹೇಳಬೇಕು'

—ಎಂದ ಬಸಲಿಂಗಪ್ಪ ಅಧ್ಯಕ್ಷತೆಯಿಂದ.

'ನೀನು ಷಡಾಕ್ಷರಪ್ಪನವರ ಸಂಸಾರಾನ ಬೀದೀಗೆ ಎಳೀತಿರೋ ಹಾಗೆ ನಿನ್ನ ಸಂಸಾರ ಬೀದಿಗೆಳೆಯೋಕೆ ನನಗೆ ಇಷ್ಟವಿಲ್ಲ. ನಿನಗೇ ಅದು ಬೇಕಿದ್ದರೆ ಇಲ್ಲೇನು ಊರೆಲ್ಲಾ ಸೇರಿಸಿ ಹೇಳ್ತೀನಿ. ಈಗೇನು ಎದ್ದು ಬರ್ತಿಯೋ ಇಲ್ಲವೋ?'

—ಶಾಮಣ್ಣ ಮತ್ತಷ್ಟು ಬಿಗಿದುಕೊಂಡು ಕೇಳಿದ.

ಶಾಮಣ್ಣನಾಡಿದ ಮಾತು ಕೇಳಿ ಪಂಚಾಯಿತಿಗೆ ನೆರೆದವರು ಗರ ಬಡಿದಂತಾದರು. ಬಸಲೀಗಪ್ಪ 'ಈ ಹಾರುವ ಶನಿ ಎಲ್ಲಿತ್ತೋ' ಎಂದು ಶಪಿಸುತ್ತಾ ಎದ್ದು ಬಂದ.

ಅವನನ್ನು ಗುಡಿಯಿಂದ ಹೊರಗೆ ಕರೆದುಕೊಂಡು ಹೋಗಿ, ಮರೆಯಲ್ಲಿ ನಿಲ್ಲಿಸಿಕೊಂಡು ತಗ್ಗಿದ ಧ್ವನಿಯಲ್ಲಿ ಹೇಳಿದ ಶಾಮಣ್ಣ—

'ನೋಡು ಬಸಲಿಂಗಪ್ಪ, ಒಳ್ಳೇ ಮಾತಿನಲ್ಲಿ ಹೇಳ್ತೀನಿ. ಈ ಪಂಚಾಯಿತಿ ಇಲ್ಲಿಗೆ ಬಿಟ್ಟು ಬಿಡು. ನೀನೂ ಹೆಣ್ಣುಮಕ್ಕಳ ತಂದೆ. ಷಡಾಕ್ಷರಪ್ಪನಿಗೆ ಅವಮಾನ ಮಾಡಲು ನೀವೆಲ್ಲಾ ಏಕೆ ಸೇರಿದೀರೀಂತ ನನಗೆ ಗೊತ್ತು. ಅವನು ಕೆಟ್ಟ ಮನುಷ್ಯ, ಬಡ್ಡಿ ವ್ಯವಹಾರದಲ್ಲಿ ಬಹಳ ಜನದ ಮನೆ ಹಾಳು ಮಾಡಿದ್ದಾನೆ. ಎಲ್ಲಾ ನನಗೆ ಗೊತ್ತು. ಆದರೆ ಅದಕ್ಕೆ ಪ್ರತೀಕಾರ ಮಾಡೋದು ಹೀಗಲ್ಲ. ಅವನು ಕೆಟ್ಟವನು ಅಂತ ನಾವು ದನಗಳ ಹಾಗೆ ನಡೆದುಕೊಂಡರೆ, ನಾವು ಮನುಷ್ಯರಾದ್ದಕ್ಕೆ ಏನು ಸಾರ್ಥಕ?'

'ಹೇಗೆ ಮಾಡಬೇಕು ಅನ್ನೋದು ನನಗೆ ಯಾರೂ ಹೇಳಿಕೊಡ ಬೇಕಾಗಿಲ್ಲ. ನನಗೆಲ್ಲಾ ಗೊತ್ತೈತೆ.'

—ಎಂದ ಬಸಲಿಂಗಪ್ಪ ಒಗರಿನಿಂದ.

'ಗೊತ್ತಿದೆಯೋ? ಎಲ್ಲಾ ಗೊತ್ತಿದ್ದೋನ ಹಾಗೆ ಮಾತಾಡಬೇಡ. ಎಲ್ಲಾ ಗೊತ್ತಿದ್ದರೆ ಈಗ ನಿನ್ನ ಮಗ ಎಲ್ಲಿದ್ದಾನೆ ಗೊತ್ತಿದೆಯೋ?'

'ಎಲ್ಲಿದಾನೆ?'

'ನಮ್ಮ ಹಳ್ಳಿ ಹೊಲೇರ ಕೇರೀಲಿ. ನಿನ್ನ ಮಗನ್ನ ಅಲ್ಲೇ ಕಂಭಕ್ಕೆ ಬಿಗಿಸಿ ಪಂಚಾಯತಿ ಮಾಡಿಸಬೇಕೆ? ಏನೋ ಪ್ರಾಯದ ಹುಡುಗ. ಹಾಳಾಗಲಿ. ಅವನ ತಪ್ಪಿಗೆ ನಿನ್ನ ಮರ್ಯಾದೆ ಕಳಿಯೋದು ಏಕೆ ಅಂತ ನಾವು ಸುಮ್ಮ ನಿದ್ದರೆ, ನೀನೇ ಈ ಪಂಚಾಯತಿ ಮಾಡಿಸಲು ಬರೋದೇ ? ಈಗೇನು ಹೇಳು, ಇದನ್ನು ನಿಲ್ಲಿಸ್ತೀಯೋ? ಅಥವಾ ನಾನು ಇದನ್ನು ಪಂಚಾಯಿತಿಗಿಡಲೋ?'

ಶಾಮಣ್ಣನ ಆ ಮಾತು ಕೇಳಿ ಬಸಲಿಂಗಪ್ಪ ಗರುಡಗೆರೆಯನ್ನು ಕಂಡ ಸರ್ಪದಂತಾದ. ಒಂದು ಗಳಿಗೆ ಉರಿಯುವ ಕಣ್ಣುಗಳಿಂದ ಶಾಮಣ್ಣನ ಮುಖ ನೋಡಿ, ಒಣ ನಗೆ ನಕ್ಕು—

'ಪರವಾಯಿಲ್ಲ. ಒಳ್ಳೆ ತುರುಫ್ ಜಾಕೀನೇ ಮಾಡಗಿದೀಯ. ನೀನಲ್ದೆ ಬೇರೆ ಯಾರಾದ್ರೂ ಈ ಮಾತಾಡಿದ್ರೆ ಏನಾಗ್ತಿತ್ತು ಗೊತ್ತೆ ಶಾಮಣ್ಣ?'

—ಎಂದು ಕೇಳಿದ.

'ಏನಾಗ್ತಿತ್ತು?'

—ಶಾಮಣ್ಣ ಅವನ ಮುಖವನ್ನೇ ನೋಡುತ್ತಾ ಕೇಳಿದ.

'ಆ ಮಾತಾಡ್ದೋರ ಬುಲ್ಡೆ ಉಳಿತಿರಲಿಲ್ಲ.'

'ನನ್ನ ಬುರುಡೆ ಬೇಕಾದರೆ ಹಾರಿಸು. ಬೇಡಾನ್ನೋಲ್ಲ. ಆದರೆ ಹೀಗೆ ಯಾರನ್ನೂ ಬೀದಿಯಲ್ಲಿ ಮಾನ ಕಳೆಯಲು ಹೋಗಬೇಡ. ಈಗ ಈ ಪಂಚಾಯಿತಿ ಏನು ಮಾಡ್ತೀ ಹೇಳು.'

'ಭೀಷ್ಮಾಚಾರಿಗೆ ಶಿಖಂಡಿ ಎದ್ರಿಗೆ ಬಂದ್ಹಾಂಗೆ ನೀನೊಬ್ಬ ಬಂದ್ಬಿಟ್ಟೆ. ನೋಡೋಣ ಏನಾಗ್ತದೋ. ನಾನೇ ಅವರನ್ನೆಲ್ಲಾ ಕರೆಳಿಸಿ ಈಗ ಏನು ಹೇಳೋದೂ ಕಷ್ಟ. ಷಡಾಕ್ಷರಿ ವ್ಯಾಪಾರದಿಂದ ಜನ ಎಲ್ಲಾ ಖಾರವಾಗವ್ರೆ.

'ಅದೆಲ್ಲಾ ನಾನು ಬಲ್ಲೆ. ಈ ಪಂಚಾಯಿತೀನ ನಿನಗೆ ಬಗೆ ಹರಿಸಲಿಕ್ಕೆ ಸಾಧ್ಯವಾಗದಿದ್ದರೆ ನನಗೆ ಬಿಡು. ನಾನು ತೀರಿಸ್ತೀನಿ. ಷಡಾಕ್ಷರಪ್ಪನಿಗೆ ಈಗಾಗಿರೋ ಅವಮಾನವೇ ಸಾಕು'

—ಎಂದ.

'ಸರಿ. ಶಿವ ಅಪ್ನೆ. ನೋಡೋಣ'.

—ಎಂದು ಬಸಲಿಂಗಪ್ಪ ಗುಡಿಯ ಬಾಗಿಲ ಬಳಿ ಹೋಗಿ ತನ್ನವರನ್ನೆಲ್ಲಾ ಹೊರಗೆ ಕರೆದು, ಅವರೊಂದಿಗೇ ಏನೇನೋ, ಮಾತಾಡಿ ವಾತ್ತೆ ಗುಡಿಯೊಳಗೆ ಬಂದು ಕುಳಿತುಕೊಂಡು—

'ಈ ವ್ಯಾಪಾರವೆಲ್ಲಾ ಬಾಳ ತೊಡಕಾಗೈತೆ. ನಮ್ಮ ಜಾತಿ ಗುರುಗಳು ಬಂದಾಗ ಅವರ ಮುಂದೆ ತೀರ್ಮಾನ ಆಗ್ಬೇಕು. ಅದ್ರಿಂದ ಅಲ್ಲೀವರೆಗೂ ನಾವೇನೂ ತೀರ್ಮಾನ ಮಾಡೋದು ಬ್ಯಾಡ. ಇವತ್ತಿಗಿಷ್ಟಾಯ್ತು. ಷಡಾಕ್ಷರಿ ಮಂಗಳಿಗೆ ಶುದ್ಧಿ ಮಾಡಿಸಬೇಕು. ಹನುಮಂತ ಈ ಹಳ್ಳೀಲಿರಕೂಡದು.'

—ಎಂದ. ಬಸಲಿಂಗಪ್ಪನ ಕಡೆಯವರು ಈ ಮಾತಿಗೆ ಸಮ್ಮತಿಸಿ ತಲೆಯಲ್ಲಾಡಿಸಿದರು. ಮುಖಂಡರಾಗಿದ್ದವರೇ ಈ ಮಾತಾಡಿದ ಮೇಲೆ ಉಳಿದವರು ಏನೂ ಮಾತಾಡಲಿಲ್ಲ.

ಅಲ್ಲಿಗೆ ಪಂಚಾಯತಿ ಮುಗಿಯಿತು.

ಅದೆಲ್ಲಾ ಆಗುವವರೆಗೂ ಸುಮ್ಮನೆ ಕುಳಿತುಕೊಂಡಿದ್ದ ಷಡಾಕ್ಷರಪ್ಪನ ಹೆಗಲ ಮೇಲೆ ಕೈ ಹಾಕಿ ಶಾಮಣ್ಣ—

'ಏಳಣ್ಣಾ ಮನೇಗೆ ಹೋಗೋಣ' ಎಂದು ಕರೆದು, ಬಸಮ್ಮನನ್ನು—

'ಅಳ್ಬೇಡ ಬಾರಕ್ಕ. ನೀನು ಕೆಟ್ರೆ ನಾವ್ಯಾರೂ ದೇವತೆಗಳಲ್ಲ'

—ಎಂದು ಸಮಾಧಾನ ಮಾಡಿ ಕರೆದುಕೊಂಡು ಹೋಗಿ, ಆ ರಾತ್ರಿಯನ್ನು ಷಡಾಕ್ಷರಪ್ಪನ ಮನೆಯಲ್ಲೇ ಕಳೆದು, ಕ್ರೋಧ, ದುಃಖದಿಂದ ಕುದಿಯುತ್ತಿದ್ದವರಿಗೆ ಸಮಾಧಾನ ಹೇಳಿ, ಎಲ್ಲವನ್ನೂ ಸಮಾಧಾನಕರವಾದ ಸ್ಥಿತಿಗೆ ತಂದು ಬಳಿಕ ಪರಶುರಾಮಪುರಕ್ಕೆ ಹಿಂದಿರುಗಿದ.

ಊರೆಲ್ಲಾ ತನಗೆ ಎದುರು ಬಿದ್ದ ಕಾಲದಲ್ಲಿ, ತನ್ನ ಪಕ್ಷ ವಹಿಸಿ ನಿಂತ ಶಾಮಣ್ಣನ ಮೇಲೆ, ಅಂದಿನಿಂದ ಷಡಾಕ್ಷರಪ್ಪನಿಗೆ ವಿಶ್ವಾಸ ಮೂಡಿತು. ಅವರಿಬ್ಬರ ನಡುವೆ ಯಾವ ಹಣಕಾಸಿನ ವ್ಯವಹಾರವೂ ಇಲ್ಲದ್ದರಿಂದ ಆ ಸ್ನೇಹ ಬೆಳೆಯಲು ಅನುಕೂಲವಾಯಿತು. ಶಾಮಣ್ಣ ಅಂದರೆ ಷಡಾಕ್ಷರಪ್ಪ ಒಬ್ಬನಿಗೇ ಅಲ್ಲ— ಆತನ ಮನೆಯವರೆಲ್ಲರಿಗೂ ವಿಶ್ವಾಸ, ಗೌರವವಿತ್ತು. ಬಸಮ್ಮನಂತೂ ಆತನಿಗಾಗಿ ತನ್ನ ಪ್ರಾಣ ಒಪ್ಪಿಸಲು ಸಿದ್ಧವಾಗಿದ್ದಳು. ಆದರೆ ಯಾರನ್ನೂ, ಯಾವುದಕ್ಕೂ ಯಾಚಿಸದ ಶಾಮಣ್ಣನಿಗೆ ಅವರು ತಮ್ಮ ಪ್ರೀತಿಯನ್ನು ಮಾತಿನಲ್ಲಲ್ಲದೆ ಬೇರಾವ ರೂಪದಲ್ಲೂ ತೀರಿಸಲು ಸಾಧ್ಯವಿರಲಿಲ್ಲ.

'ನಿನ್ನ ಋಣ ಹೆಂಗೆ ತೀರಿಸೋದು ಶಾಮಣ್ಣ?'

—ಎಂದು ಯಾವಾಗಲಾದರೊಮ್ಮೆ ಷಡಾಕ್ಷರಪ್ಪ ಕೇಳಿದಾಗ,

'ಮುಂದಿನ ಜನ್ಮದಲ್ಲಿ ನನ್ನ ಮಗನಾಗಿ ಹುಟ್ಟು'

—ಎನ್ನುತ್ತಿದ್ದ ಶಾಮಣ್ಣ.

ಮಗಳ ಮದುವೆಯನ್ನು, ತಾನು ಅಂದುಕೊಂಡ ರೀತಿಯಲ್ಲಿ ಹೇಗೆ ಮಾಡುವುದು ಎಂಬ ಚಿಂತೆಗೊಳಗಾದ ಶಾಮಣ್ಣ, ಬೇರಾವ ದಾರಿಯೂ ಕಾಣದೆ ಷಡಾಕ್ಷರಪ್ಪನ ಬಳಿ ಬಂದಿದ್ದ.

## ೩೩

ಉರಿಬಿಸಿಲಿನಲ್ಲಿ ಮನೆ ಬಾಗಿಲಿಗೆ ಬಂದ ಶಾಮಣ್ಣನನ್ನು ಕಂಡ್ಕ ಷಡಾಕ್ಷರಪ್ಪ—

'ಇದೇನಿದು— ಇಂಥ ಬಿಸಿಲ್ನಾಗೆ ಬಂದ್ಯಲ್ಲ. ಬಿಸಿಲಿಳಿಸಿಕೊಂಡು ಬಂದಿದ್ರಾಗ್ತಾ ಇರಲಿಲ್ವಾ. ಶಿವಪೂಜೆ ಆಯ್ತ?'

—ಎಂದು ಕೇಳಿದ. ಷಡಾಕ್ಷರಪ್ಪನ ಭಾಷೆಯಲ್ಲಿ ಶಿವಪೂಜೆ ಎಂದರೆ ಊಟ ಎಂದು ಅರ್ಥ. ತಲೆಯಲ್ಲಾಡಿಸಿ 'ಊಟ ಆಗಲಿಲ್ಲ' ವೆಂದುಸೂಚಿಸಿ—

'ಸಾಹುಕಾರ್ರಣ್ಣ, ನೋಡಬೇಕೂಂದ್ರೆ ಬಿಸಿಲೇನು. ಛಳಿ ಏನು. ಹೆಂಗಿದ್ರೂ ಬರಬೇಕು.'

—ಎಂದು ಹೇಳಿ ಶಾಮಣ್ಣ, ಕೈಸಾಲೆಯ ಮೇಲಿದ್ದ ಜಗಲಿಯ ಮೇಲೆ, ಉತ್ತರೀಯದಿಂದ ಬೆವರು ಒರೆಸಿಕೊಳ್ಳುತ್ತಾ ಕುಳಿತುಕೊಂಡ.

ಶಾಮಣ್ಣ ಇನ್ನೂ ಊಟ ಆಗಿಲ್ಲ ಎಂದು ಸೂಚಿಸಿದ್ದನ್ನರಿತು ಷಡಾಕ್ಷರಪ್ಪ ಒಳಗೆ ಹೋಗಿ, ಬಾಳೆಹಣ್ಣು, ಹಾಲು ತಂದಿಟ್ಟು, ಆಳಿಗೆ 'ಗಡಾನೆ ತೋಟಕ್ಹೋಗಿ ನಾಲ್ಕೆಳ್ನೀರು ಕಿತ್ಕೊಂಬಾ' ಎಂದು ಕಳಿಸಿ, ತಾನು ಎಲೆಯಡಕೆ ಜಗಿಯುತ್ತಾ—

'ಅದೇನಪ್ಪ ಪ್ರಾಣ ಹೋಗೋಂಥಾ ಕೆಲ್ಸ ಶಾಮಣ್ಣ?'

—ಎಂದ.

'ಕೆಲಸ ಏನು ಅಂತ ಹೇಳ್ತೀನಿ. ಆದ್ರೆ ನೀನು ಮಾಡಿಕೊಡಬೇಕು.'

'ನಿನಗಿಲ್ಲಾಂದ್ರೆ ಶಿವ ಮೆಚ್ತಾನಾ? ಅದೇನು ಹೇಳು. ರಾಮೋತ್ಸವಕ್ಕೆ ಗರೀನಾ? ಇನ್ನೇನು ಬಂತಲ್ಲ, ಆದೂನೂ.'

'ಅದಲ್ಲ ಷಡಾಕ್ಷರಪ್ಪ. ಈ ವೈಶಾಖದಲ್ಲಿ ನನ್ನ ಮಗಳ ಮದುವೆ ಮಾಡಬೇಕೂಂತ ನಿಶ್ಚಯ ಮಾಡಿದೀನಿ...'

'ಒಳ್ಳೆ ಕೆಲ್ಸ ಮಾಡ್ದೆ, ಗಂಡು ಯಾವ ಊರಿಂದು?'

'ದೇವೀಕೆರೇದು.'

'ಅಲ್ಲಿ ಯಾರು?'

'ಪರಸಪ್ಪನವರ ಮಗ...'

'ಅಂದ್ರೆ... ಜಾಜೂರು ಜೋಯಿಸರ ವಂಶದೋರ ಹುಡುಗನಾ? ಒಳ್ಳೇ ಸಂಬಂಧ. ಹೂ. ಒಂದೊಳ್ಳೆ ಸೀ ಊಟ ಹೊಡಿಸಿ ಬಿಡು. ರಾಮೋತ್ಸವದ ಸಮಾರಾಧನೇನೇ ಹಂಗ್ಮಾಡಸ್ತಿ. ಇನ್ನು ಮಗಳ ಮದುವೆ ಇನ್ನೆಷ್ಟು ಅದ್ಧೂರೀನೋ ನೋಡಾಣ.'

'ರಾಮೋತ್ಸವ ದೇವರ ಕೆಲಸ, ದೇವರಿಗೇನು ಕಡಮೆ ಹೇಳು; ತನ್ನ ಉತ್ಸವ ಹೇಗೆ ಬೇಕೋ ಹಾಗೆ ನಡಿಸಿಕೊಳ್ತಾನೆ. ಪಡಿಪಾಟಲೆಲ್ಲಾ ನಮ್ಮಂಥ ಬಡವರಿಗೆ ತಾನೇ.'

'ನಿನ್ನ ಬಡತನ—ನನ್ನ ಸವಕಾರಿಕೆ ಎರಡೂ ಒಂದೇ.'

—ಷಡಾಕ್ಷರಪ್ಪ ನಗುತ್ತಾ ಹೇಳಿದ.

'ಹೂ. ಅದನ್ನೇ ಅದಲು ಬದಲು ಮಾಡಿಕೊಳ್ಳೋಣಾಂತಬಂದಿರೋದು.'

'ಅಂದ್ರೆ...?'

—ಶಾಮಣ್ಣನ ಮಾತು ಅರ್ಥವಾಗದೆ ಕೇಳಿದ ಷಡಾಕ್ಷರಪ್ಪ.

'ಅದೇ ನನ್ನ ಬಡತನ— ನಿನ್ನ ಸಾವಕಾರಿಕೆ ಎರಡನ್ನೂ ಅದಲು ಬದಲು ಮಾಡಿಕೊಳ್ಳೋಣಾಂತ. ನಿನ್ನ ಸಾವಕಾರಿಕೆ ಎರಡುದಿನ ಕಡ ಕೊಟ್ಟಿರಬೇಕಲ್ಲಾ...'

'ಹಂಗಂದ್ರೇನು ಶಾಮಣ್ಣ?'

'ಮಗಳ ಮದುವೆ ಮಾಡೋಕೆ ನನ್ನ ಹತ್ತಿರ ಏನಿದೆ?'

'ಏಕೆ? ಮದುವೆಗೆ ಮುಖ್ಯವಾಗಿ ಬೇಕಾದ್ದೆಲ್ಲಾ ಇದೆಯಲ್ಲಾ?'

'ಏನಿದೆ?'

'ಹೆಣ್ಣು—ಗಂಡು.'

'ಅಷ್ಟೇ ಇರೋದು. ನೀವೆಲ್ಲಾ ಹೂ, ಆಗಬಹುದು ಅಂದ್ರೆ ನನಗೇನು, ಹುಡುಗನ ಕೈಲಿ ತಾಳಿ ಕಟ್ಟಿಸಿ, ಸಪ್ತಪದಿ ನಡೆಸಿ ಮದುವೆಆಗೋಯ್ತು ಅನ್ನಿಸಿ ಬಿಡ್ತೀನಿ.'

'ಅದ್ಹೆಂಗಾಗ್ತದೆ. ಸೀ ಊಟ ಇಲ್ದೆ ನಾಲ್ಗೆ ಒಪ್ಪಿಕೊಂಡೀತಾ?'

'ಎಲ್ಲಾರೂ ಹಾಗೇ ಅನ್ನಾರೆ. ಆದರೆ ಬೆಲ್ಲ, ತೊಗರಿಬೇಳೆಗೆಲ್ಲಿಗೆ ಹೋಗಲಿ?'

'ಅಷ್ಟಾದ್ರೆ ನಾನು ಕೊಟ್ಟೇನು ಬಿಡು.'

'ನೀನು ಅಷ್ಟೇ ಕೊಟ್ರೆ, ಕೇಳಿದ ನನ್ನ ಮರ್ಯಾದೆ ಏನುಳೀತು,' ಕೊಟ್ಟ ನಿನ್ನ ಮರ್ಯಾದೆ ಏನುಳೀತು?'

'ಹಂಗಾದ್ರೇನ ಮಾಡ್ಬೇಕು ಅಂತೀಯ.'

'ಇಷ್ಟೆ— ಇದು ನಿನ್ನ ಮಗಳ ಮದುವೆ ಅಂತ ತಿಳಕೊಂಡು. ಅದಕ್ಕೆ ಏನು ಬೇಕೋ ಎಲ್ಲಾನೂ ನೀನೇ ನಿಂತು ಮಾಡಿಸ್ಬೇಕು. ಯಾವುದಕ್ಕೂ ನಾನು ಯಾರನ್ನೂ ಕೇಳೋಕೆ ಹೋಗಲ್ಲ.'

ಶಾಮಣ್ಣನು ಹೇಳಿದುದನ್ನು ಕೇಳಿ, ಷಡಾಕ್ಷರಪ್ಪ ಮರುಮಾತಾಡದೆ ಸುಮ್ಮನೆ ಕುಳಿತ. ಶಾಮಣ್ಣನೂ ಆತನೇ ಮೊದಲು ಮಾತಾಡಲಿ ಎಂದು ತಾನೂ ಸುಮ್ಮನೆ ಕುಳಿತ. ಅಷ್ಟುಹೊತ್ತು ಸುಮ್ಮನಿದ್ದು ಬಳಿಕ ಷಡಾಕ್ಷರಪ್ಪ ಹೇಳಿದ—

'ಇದು ಭಾಳ ತೂಕದ ಕೆಲಸ ಆಯಿತಲ್ಲ ಶಾಮಣ್ಣ.'

'ಹೂ. ಆ ತೂಕ ಹೊರೋಕೆ ಯೋಗ್ತೆ ಇದೇಂತಾಲೇ ನಿನಗೆ ಹೇಳಿದ್ದು.

'ನಿಜಾನ್ನು. ಆದರೂ ಒಬ್ಬರೇ ಹೊರೋದು ಕಷ್ಟ. ಇನ್ನೂ ಒಂದಿಬ್ಬರು ಸೇರಿಕೊಂಡರೆ......'

'ನೋಡು ಷಡಾಕ್ಷರಪ್ಪ, ನಾನು, ನನ್ನ ಮಗಳ ಮದುವೆಗೆ ಧನ ಸಹಾಯಮಾಡಿ ಅಂತ ದೇಶಾವರ ಕೇಳೋಕೆ ಬಂದಿಲ್ಲ. ದಾನ ಕೇಳೋಕೆ ನಾನು ವೈದಿಕನಲ್ಲ. ಇದಕ್ಕಾಗುವ ಹಣ ಸಾಲ ಕೊಡು. ನಾನೋ, ನನ್ನ ಮಗನೋ ಯಾರಾದರೂ ತೀರಿಸಿ ಋಣಮುಕ್ತರಾಗ್ತೀವಿ. ಬಡ್ಡಿ ಬಿಡೊಂತ ಕೂಡಾ ಕೇಳೋಲ್ಲ'

—ಷಡಕ್ಷರಪ್ಪನ ಮಾತು ಕೇಳಿ ಶಾಮಣ್ಣ ಖಡಾಖಂಡಿತವಾಗಿ ಹೇಳಿದ

'ಎಷ್ಟು ಬೇಕಾಗಬಹುದು?'

ಅದೆಷ್ಟಾಗುತ್ತೊ, ನನಗೆ ಗೊತ್ತಿಲ್ಲ. ಏನಾಗುತ್ತೊ, ಎಲ್ಲಾ ಕೊಟ್ಟಿರ ಬೇಕು. ಮದುವೆ ಎಲ್ಲಾ ಮುಗಿದ ಮೇಲೆ ಇಷ್ಟಾಯಿತು ಅಂತ ಹೇಳಿ ಪತ್ರ ಬರಿ. ಅದಕ್ಕೆ ರುಜು ಹಾಕುತ್ತೇನೆ. ಇದೇನೂ ನಿನಗೆ ದೊಡ್ಡದಲ್ಲ. ಆಗ ಬಹುದು ತಾನೇ?'

'ಹಾಲು ಹಣ್ಣು ತಗೊಳ್ಳಿ. ಶಿವ ಅನ್ನೆ.'

ಶಿವ ಇರೋದು ಬಿಡೋದು ಬೇರೆ ಮಾತು. ಈಗ ನೀನು ನನ್ನಪರ ಇದೀಯೋ ಇಲ್ಲವೋ ಹೇಳು. ನಿನ್ನಿಂದಾಗದಿದ್ದರೆ ಇಲ್ಲಾಂತ ಹೇಳಿಬಿಡು. ಬೇರೆ ಯಾರ ಬಾಗಿಲಿಗಾದರೂ ಹೋಗುತ್ತೇನೆ.'

'ನಾನು ಇಲ್ಲಾಂದ್ನಾ ಶಾಮಣ್ಣ, ಆಯ್ತು ಅಂದ್ನಲ್ಲ.'

'ಸರಿ ಹಾಗಾದರೆ ಚಿಂತೆ ತೀರಿತು. ಈ ಭಾನುವಾರ ಚಳ್ಳಕೆರೆಗೆ ಹೋಗಿ ಬರೋಣ–ಜವಳಿ ಖರೀದಿ ಮಾಡಲು. ಅಂದಹಾಗೆ ನನಗೆ ಮರೆತು ಹೋಗಿತ್ತು. ಹಾಗೇ ನನಗೇಂತ ನೀನು ಒಂದು ಎಕರೆ ಗದ್ದೆ, ಅರ್ಧ ಎಕರೆ ತೋಟ ಖರೀದಿ ಮಾಡಬೇಕು.'

'ಅದ್ಯಾಕೆ ಈಗ?'

'ಅಳಿಯನಿಗೆ ಕೊಡಬೇಕು.'

'ಅದೂ ಕೇಳಿದ್ರಾ? ನಿಮ್ಮ ಬ್ರಾಂಬರು ಬಾಳ ಪೇತಾಸೆ ಜನ.'

'ಯಾರೂ ಏನನ್ನೂ ಕೇಳಿಲ್ಲ. ಇದನ್ನ ನಾನೇ ಕೊಡ್ತೀನಿ ಅಂದಿದೇನೆ.'

'ಹೂ ಅದೇನೇನು ಮಾಡ್ತೀಯೋ ಮಾಡು. ಮೈಸೂರಿಂದ ವಾಲಗ ದೋರ್‍ನ್ನೂ ತರಿಸಲೋ?'

—ನಗುತ್ತಾ ಕೇಳಿದ ಷಡಾಕ್ಷರಪ್ಪ.

'ಸಾಧ್ಯವಾದರೆ ಏಕಾಗಬಾರದು. ನನ್ನ ಮಗಳೇನು ಭಿಕಾರಿನೇನೊ ಷಡಾಕ್ಷರಪ್ಪ.'

—ಎಂದು ಶಾಮಣ್ಣನೂ, ಚಿಂತೆ ಬಗೆಹರಿದು ಹಗುರಾದ ಹೃದಯ ದಿಂದ ನಗುತ್ತಾ.

'ಹೂ, ಹೂ, ಹಾಗೇ ಬಳ್ಳಾರಿಯೋರ ತಾಫೇನೂ ಕಟ್ಸಿಸಿಬಿಡು,'

'ಅದು ಮದುವೇಲಲ್ಲ, ನಿಷೇಕದಲ್ಲಿ.'

'ಯಾಕೆ–ಮಗಳ ತಲೇಮೇಲೆ ಕಲ್ಲು ಎಳೀಲಿಕ್ಕಾ?'

'ಅಲ್ಲ–ಹೊಟ್ಟೆ ಉರಿಸಿಕೊಳ್ಳೋ ನಿಮ್ಮಂಥ ರಸಿಕರ ತೃಪ್ತಿಗೆ'

—ಎಂದು ನಕ್ಕು ಶಾಮಣ್ಣ ಮಾತು ಮುಗಿಸಿದ.

ಅಂದಿನಿಂದ ಶಾಮಣ್ಣನ ಮನೆಯಲ್ಲಿ ರಂಗಮ್ಮನ ಮದುವೆಗೆ ಸಿದ್ಧತೆಗಳು ಆರಂಭವಾದವು. ಶಾಮಣ್ಣ ಷಡಾಕ್ಷರಪ್ಪ ಇಬ್ಬರೂ ಚಳ್ಳಕೆರೆಗೆ ಹೋಗಿ ಕಟ್ಟಿಸಿಕೊಂಡು ಬಂದ ಜವಳಿಯನ್ನು ಕಂಡು ವೆಂಕಮ್ಮ ದಂಗುಬಡಿದು

ಹೋದಳು. ಆಕೆಗೆ ತನ್ನ ಕಣ್ಣುಗಳನ್ನೇ ನಂಬುವುದು ಅಸಾಧ್ಯವಾಯಿತು.

'ಎಲ್ಲೀದು ಇವೆಲ್ಲಾ?'

—ಎಂದು ಗಂಡನನ್ನು ಕೇಳಿದಳು.

'ಎಲ್ಲಿ, ಏಕೆ ಎಂದು ಕೇಳಬೇಡ ನಿನ್ನ ಮಗಳ ಮದುವೆಗೆ ಏನಾಗ ಬೇಕೋ ಹೇಳು. ಅಷ್ಟೆ'

—ಎಂದು ಶಾಮಣ್ಣ ಆಕೆಯ ಬಾಯಿ ಮುಚ್ಚಿಸಿದ.

ಆ ಬಳಿಕ ಆಕೆ ಹೆಚ್ಚು ಚರ್ಚಿಸಲಿಲ್ಲ; ಚರ್ಚಿಸಲು ವೇಳೆಯೂ ಇರಲಿಲ್ಲ. ಒಂಟಿ ಹೆಂಗಸು ಎಲ್ಲವನ್ನೂ ತಾನೇ ಅಣಿಮಾಡಿಕೊಳ್ಳಬೇಕೆಂದೇ ಕೆಲಸಕ್ಕೆ ತೊಡಗಿದಳು.

ಆದರೆ ದಿನಗಳೆದಂತೆ ವೆಂಕಮ್ಮನೇ ಕೈಬೀಸಿಕೊಂಡು ಕೊಡುವಷ್ಟು ಜನಸಹಾಯ ಒದಗಿ ಬಂತು. ಮದುವೆಗೆ ಬೇಕಾದ ಪಾತ್ರೆ ಪಡಗ, ಛತ್ರ, ಬೇಳೆ ಬೆಲ್ಲ, ಸಾಂಬಾರದ ಪದಾರ್ಥಗಳು, ಚಪ್ಪರದ ಸಾಮಾನು, ದೀಪಗಳು, ಜಮಖಾನೆಗಳು—ಎಲ್ಲವೂ ಕರೆ ಕಳಿಸಿದಂತೆ ಮನೆಬಾಗಿಲಿಗೆ ಬರತೊಡಗಿದವು.

ದೇವರ ಸಮಾರಾಧನೆಯ ದಿನದ ವೇಳೆಗೆ ಕಾಗದದ ಹೂವು, ಗುಳೂಪು, ಬಾಳೆಯ ಕಂಭಗಳಿಂದ ಅಲಂಕೃತವಾದ ವಿಶಾಲವಾದ ಚಪ್ಪರ ನಿರ್ಮಾಣವಾಗಿ, ಸುಣ್ಣ ಬಣ್ಣದ ಕಾರಣೆ, ಚಿತ್ರಗಳಿಂದ ರಂಜಿತವಾದ ವಿವಾಹವೇದಿಕೆ ಶೋಭಿಸಿತು.

ದೇವರ ಸಮಾರಾಧನೆಯ ದಿನಕ್ಕೆ ಪಾವಗಡದಿಂದ ಓಲಗದವರೂ ಬಂದರು.

ಇದೆಲ್ಲವನ್ನೂ ನೋಡಿ ವೆಂಕಮ್ಮ—

'ಇದು ಯಾಕೋ ಶಶಿರೇಖಾಪರಿಣಯದ ಹಾಗಿದೆ'

—ಎಂದಳು, ತನ್ನ ಆಶ್ಚರ್ಯವನ್ನು ಹತ್ತಿಕ್ಕಲಾಗದೆ.

'ಹೂ, ಹಾಗೇ, ರಂಗೂಂದರೆ ಯಾರೂಂತ ತಿಳಿದುಕೊಂಡಿದೀಯಾ?'

'ಇನ್ನು ಯಾರು, ನಿಮ್ಮ ಮಗಳು.'

'ಊಹೂ.'

'ಮತ್ತಿನ್ನೇನು—ದೇವಕನ್ನಿಕೇನೇ?'

'ಅಲ್ಲ—ಅದಕ್ಕಿಂತ ಹೆಚ್ಚು.'

'ಅಂದರೆ—'

'ರಂಗು ನನ್ನ ಮಗಳೂ ಅಲ್ಲ, ದೇವರ ಮಗಳೂ ಅಲ್ಲ, ಅವಳು ಈ ಊರಿನ ಮಗಳು. ಇಲ್ಲವಾದರೆ ನನ್ನಂಥ ನಿರ್ಭಾಗ್ಯನ ಹೊಟ್ಟೆಯಲ್ಲಿ ಹುಟ್ಟಿದವಳ ಮದುವೆಗೆ ಇಷ್ಟು ಸಡಗರ ಎಲ್ಲಿಂದ ಬರಬೇಕು.'

ಶಾಮಣ್ಣ ನಾಡಿದ ಮಾತನ್ನು ಕೇಳಿ ವೆಂಕಮ್ಮನ ಕಣ್ಣಲ್ಲಿ ತಟಕ್ಕನೆ ಕಂಬನಿ ಮೂಡಿತು. ಅದನ್ನು ಕಂಡು ಕೇಳಿದ ಶಾಮಣ್ಣ—

'ಒಳ್ಳೇ ಸಮಯದಲ್ಲಿ ಸಂತೋಷಪಡೋದು ಬಿಟ್ಟು ಕಣ್ಣಲ್ಲಿ ನೀರು ಯಾಕೆ ಹಾಕ್ತಿ?'

'ಏನೋ ಜ್ಞಾಪಕ ಬಂತು...ಅದಕ್ಕೆ'.

'ಏನು ಜ್ಞಾಪಕ...'

'ಇಷ್ಟು ದಿನ ನಿಮ್ಮ ವಿಷಯ ಏನೇನೋ ಆಡಿ ಅಂದೆ. ನಿಮ್ಮನ್ನೂ ಅಂದೆ. ಊರಿನವರನ್ನೂ ಬೈದೆ. ನನ್ನ ಬುದ್ಧಿಗಿಷ್ಟು ಬೆಂಕಿ ಹಾಕ. ನನಗೆ ಹಿಗೇಂತ ತಿಳೀಲಿಲ್ಲ. ಅದು ನೆನಪಾಯ್ತು. ಕಣ್ಣಲ್ಲಿ ನೀರು ಬಂತು'.

'ನೀನು ಹುಚ್ಚಿ ಅನ್ನೋದು ನಿಜ ನೋಡು. ಗಿಡಕ್ಕೆ ನೀರು ಹಾಕಿದರೇ ಹೂವು ಹಣ್ಣು ಕೊಡುತ್ತೆ. ಇನ್ನು ಜನಕ್ಕೆ ಸೇವೆ ಮಾಡಿದರೆ ಎಲ್ಲಿ ಹೋಗುತ್ತೆ ಹೇಳು.'

'ಅಷ್ಟು ಸಣ್ಣ ಮಾತು ಇಷ್ಟು ದಿನ ನನಗೆ ತೋಚಲಿಲ್ಲವಲ್ಲ. ನನ್ನ ಬುದ್ಧಿಗಿಂತ ನಾಲಗೇನೇ ಬೆಳೀತು.'

'ಆದ್ದಾವುದೂ ಅಂದುಕೋಬೇಡ. ನಿನ್ನ ಮನಸ್ಸಿಗೆ ಸಮಾಧಾನವಾಗಿದ್ದರೆ ನಗುನಗುತ್ತಾ ಓಡಾಡು ನನಗಷ್ಟೇ ಬೇಕಾಗಿರೋದು.'

'ನಗ್ತಾ ನಗ್ತಾ ಓಡಾಡ್ದೆ ಇರೋಕೆ ನನಗೇನಾಗಿರೋದು ಗೂದೆರೋಗ'
—ಎಂದಳು ವೆಂಕಮ್ಮ

'ಸಧ್ಯ, ನೀನು ಅಷ್ಟು ಮಾಡಿದರೆ ನಾನು ಬದುಕಿದೆ'
—ಎಂದ ಶಾಮಣ್ಣ.

## ೩೪

ಹಗಲು ದೇವರ ಸಮಾರಾಧನೆ ಮುಗಿಸಿಕೊಂಡು, ರಾತ್ರಿಗೆ ಪರಶುರಾಮ ಪುರಕ್ಕೆ ಹೋಗಲು ಗಾಡಿ ಕಟ್ಟಿಸುವುದೆಂದು ನಿರ್ಧಾರವಾಯಿತು. ಸುತ್ತಲ ಹಳ್ಳಿಗಳಿಂದ ನರಸಪ್ಪನವರು, ಲಕ್ಷ್ಮೀದೇವಮ್ಮನ ನೆಂಟರಿಷ್ಟರು ಕಲೆತು ನಾಲ್ಕು ಗಾಡಿ ಜನವಾಯಿತು. ಹಗಲಿನ ಕೆಲಸಕಾರ್ಯಗಳೆಲ್ಲಾ ಮುಗಿದು ರಾತ್ರಿಯ ಊಟ ಆದೊಡನೆ ಗಾಡಿಗಳನ್ನು ಕಟ್ಟತೊಡಗಿದರು. ಆದರೆ ನರಸಪ್ಪ ನವರ ಕಣ್ಣು ಆ ಗುಂಪಿನಲ್ಲಿ ಕಾಣದ ಯಾರನ್ನೋ ಹುಡುಕುತ್ತಿತ್ತು. ಅದನ್ನು ಗಮನಿಸಿದ ರಾಜೇಶ್ವರಿ—

'ಯಾರನ್ನಣ್ಣ ಹುಡುಕ್ತಾ ಇದೀಯ?

—ಎಂದು ಕೇಳಿದಳು.

'ಬರೋರು ಎಲ್ಲಾ ಬಂದಹಾಗಾಯಿತಲ್ಲವೇ ರಾಜೇಶ್ವರಿ.'

'ಹೂ. ಎಲ್ಲಾ ಬಂದಿದಾರೆ.'

'ಯಾಕೋ. ಯಾರೋ ಒಬ್ಬರು ಬರಬೇಕಾದವರು ಬಂದಹಾಗಿಲ್ಲ ರಾಜೇಶ್ವರಿ. ನೀನೇ ಒಂದು ಸಲ ಹೋಗಿ ಎಲ್ಲಾ ಗಾಡೀನೂ ನೋಡಿಕೊಂಡು ಬಾ.'

'ಇನ್ಯಾರು ಬರಬೇಕಾಗಿತ್ತು ಅಣ್ಣ'?

'ಎಲ್ಲಾರಿಗಿಂತ ಮುಖ್ಯವಾದೋರು...'

'ಯಾರು—ಮನ್ನೆಕೋಟೆ ರಾಮಣ್ಣ ಮಾವನೇ?'

'ಊಹೂ. ಅವರು ಯಾರೂ ಅಲ್ಲಮ್ಮ ಈಊರಿನವರೇ'.

'ಅಂದರೆ...'

'ವೀರಣ್ಣ—ಗೌರಮ್ಮ. ಬೆಳಿಗ್ಗೆ ಅವರು ಊಟಕ್ಕೂ ಬಂದಹಾಗಿರಲಿಲ್ಲ. ಎಲ್ಲೋ ನಾನು ಗದ್ದಲದಲ್ಲಿದ್ದಾಗ ಬಂದು ಹೋಗಿರಬಹುದು ಎಂದುಕೊಂಡೆ. ಈಗ ಎಲ್ಲಾ ಗಾಡೀನೂ ನೋಡಿಕೊಂಡು ಬಂದರೂ ಅವರು ಕಾಣಲಿಲ್ಲ. ಅದಕ್ಕೇ ನಿನಗೆ ಹೇಳಿದ್ದು.'

ನರಸಪ್ಪನವರ ಮಾತನ್ನು ಕೇಳಿ ರಾಜೇಶ್ವರಿ ಚಕಿತಳಾದಳು.

'ಅವರು ಯಾಕಣ್ಣಾ ಮದುವೇಗೆ, ಸುಮ್ಮನೆ ನಗೆಪಾಟಲು.'

'ಯಾರು ನಗೆಪಾಟಲು ಮಾಡೋದು.'

'ಇನ್ನು ಯಾರು—ಊರಿನವರು.'

'ನಿಮ್ಮಣ್ಣನ ಮದುವೆಗೆ ಒಪ್ಪಿಸಲಿಕ್ಕೆ ಅವಳ ಮನೆಗೆ ಹೋಗಿದ್ದಿರಲ್ಲಾ ಆಗ ನಗೆಪಾಟಲಾಗಲಿಲ್ಲವೇ? ಎಂಥ ಮಾತು ಆಡ್ತೀಯ ರಾಜೇಶ್ವರಿ. ಅವಳು ಮನಸ್ಸು ಮಾಡದಿದ್ದರೆ ನಿಮ್ಮಣ್ಣನ ಮದುವೆ ಆಗ್ತಾ ಇತ್ತೆ. ಅವಳನ್ನುಬಿಟ್ಟು ಹೋಗ್ತೀರಾ? ಯಾವ ದೇವರು ಒಪ್ಪೋ ಮಾತು ಇದು. ಹಾಗಾಗುವುದಿಲ್ಲ, ಅವರು ಬರದಿದ್ದರೆ ನೀನು ಹೋಗಿ ಕರೆದುಕೊಂಡು ಬಾ. ಹೋಗುವುದಕ್ಕೆ ನಿನಗೆ ಅವಮಾನವಾದರೆ ನಾನೇ ಹೋಗುತ್ತೇನೆ.'

'ಕರೀಲಿಕ್ಕೆ ನನಗೇನೂ ಅವಮಾನ ಇಲ್ಲಣ್ಣ' ಈ ಮಾತು ಮೊದಲೇ ಯೋಚನೆ ಮಾಡಿ ಬೆಳಿಗ್ಗೆ ಊಟಕ್ಕೆ ಕರೆಯಬೇಕಾಗಿತ್ತು. ಮೊದಲೇ ನಮ್ಮ ಜೊತೆಗೆ ಬರಬೇಕು ಅಂತ ಹೇಳಬೇಕಾಗಿತ್ತು. ಅದು ಬಿಟ್ಟು ಕಡೇ ಗಳಿಗೆಯಲ್ಲಿ ಕರೆದರೆ ಏನೆಂದುಕೊಳ್ಳಲಿಕ್ಕಿಲ್ಲ.'

'ನಿಜ ರಾಜೇಶ್ವರಿ ನಿನ್ನ ಮಾತು ನಿಜ. ಯಾವ ಕೇಡಿಗೊ ನನಗೆ ಬುದ್ಧಿ ಮಂಕಾಗಿಹೋಗಿದೆ.'

—ನರಸಪ್ಪನವರು ತಮ್ಮ ಮೇಲೆ ತಾವೇ ಸಿಟ್ಟಾಗಿ ಹೇಳಿದರು.

'ನೀನು ಒಳ್ಳೇ ಹೊತ್ತಿನಲ್ಲಿ ಆ ಹಾಳು ಮಾತೆಲ್ಲಾ ಆಡಬೇಡ ಅಣ್ಣ. ನಾನು ಹೋಗಿ ಕರೆದುಕೊಂಡು ಬರ್ತೀನಿ'

—ಎಂದು ರಾಜೇಶ್ವರಿ ಗೌರಮ್ಮನ ಮನೆಯತ್ತ ಹೋದಳು.

ಗೌರಮ್ಮನ ಮನೆಯ ಮುಂದೆ. ಎಲ್ಲಿಗೋ ಹೊರಡಲು ಸಿದ್ಧವಾದ ಗಾಡಿ ನಿಂತಿತ್ತು. ಆಗತಾನೆ ಊಟ ಮುಗಿಸಿ ಎಲೆಯಡಿಕೆ ಜಗಿಯುತ್ತಾ ಮನೆಯ ಮುಂದಿನ ಕಟ್ಟೆಯ ಮೇಲೆ, ಗಾಡಿಯ ಆಳು ಬರುವುದನ್ನು ಕಾಯುತ್ತಾ ಕುಳಿತಿದ್ದ ವೀರಣ್ಣ ಅವಸರವಾಗಿ ಬಂದ ರಾಜೇಶ್ವರಿಯನ್ನು ಕಂಡು—

'ದಿಬ್ಬಣದ ಗಾಡಿ ಎಲ್ಲಾ ಹೊಂಟ್ವಾ? ಇದೇನು ಇಷ್ಟು ಹೊತ್ನಾಗೆ ಹಿಂಗೆ ಬಂದೆ'

—ಎಂದು ಕೇಳಿದ.

'ಗೌರಕ್ಕ ಎಲ್ಲಿ?'

'ಒಳಗಪ್ಪೆ.'

'ನೀವೂ ಎಲ್ಲೋ ಹೊರಟಹಾಗಿದೆ…ಗಾಡಿ ನೋಡಿದರೆ.'

'ಮತ್ತೆ ನೀವೊಬ್ಬರೇನಾ ಹೋಗೋದು. ನಮ್ಗೂ ಒಂದು ಪಾಪ್ದ್ವೆ ಕೆಲ್ಸ ಐತೆ.'

'ಗೌರಮ್ಮನನ್ನು ನಿನ್ನ ಜೊತೆಗೆ ಕರೆದುಕೊಂಡು ಹೋಗ್ತೀಯಾ?'

'ಹೂ ಅವಳಿಲ್ದೆ ನಾನೆಲ್ಲಿಗೆ ಹೋಗಲಿ?'

'ಅದಾಗೋದಿಲ್ಲ ನಾನವಳಿಗೆ ಹೇಳ್ತೀನಿ.'

—ಎಂದು 'ಗೌರಕ್ಕ…ಗೌರಕ್ಕ ಎಂದು ಕೂಗುತ್ತಾ ರಾಜೇಶ್ವರಿ ಒಳಕ್ಕೆ ಹೋದಳು. ಅವಳ ಕೂಗು ಕೇಳಿ ನಡುಮನೆಯಲ್ಲೇ ಗೌರಮ್ಮ ಇದಿರಾಗಿ—

'ಏನು ರಾಜಕ್ಕಾ?'

—ಎಂದು ಕೇಳಿದಳು.

'ಈಗ ಏನು ಎಂತ, ಎತ್ತ ಎಲ್ಲಾಕೇಳೋಕೆ ಹೊತ್ತಿಲ್ಲ. ಮೊದಲು ನಿನ್ನ ಬಟ್ಟೆ ಬರೆ ತಗೋ. ಹೊರಡಬೇಕು.'

'ಎಲ್ಲಿಗೆ?'

'ಎಲ್ಲಿಗೆ ಅಂದ್ರೆ. ನಿನ್ನ ಸವತೀ ಮದುವೇಗೆ. ಹೂಂ ಬೇಗ'

'ನಾವೆಲ್ಲಾ. ಯಾಕೆ ರಾಜಕ್ಕಾ?'

'ಅದೆಲ್ಲ ಆಗೋದಿಲ್ಲ. ಅಣ್ಣ ನೀನು ಬರೋತನಕ ಗಾಡಿ ಹೊರಡಿಸೋಲ್ಲ ಅಂತ ಹಟ ಹಿಡಿದಿದ್ದಾನೆ.'

'ಯಾವ ಚಿಕ್ಕಬುದ್ಧಿಯೋರಾ?'

'ಅಲ್ಲ, ಅಪ್ಪಾಪ್ಪ! ಏಳು ನಿನ್ನೂ ವೀರಣ್ಣನ್ನೂ ಕರಕೊಂಡು ಬಾಂತ ಹೇಳಿದ. ಆದರೆ ವೀರಣ್ಣ ಎಲ್ಲೋ ಬೇರೆಕಡೆ ಹೋಗಲಿಕ್ಕೆ ಸಿದ್ಧವಾಗಿದ್ದಾನೆ. ನೀನಾದ್ರೂ ಬಂದೇ ತೀರಬೇಕು. ಇಲ್ದೆಹೋದ್ರೆ ನಾನೂ ಹೋಗೋಲ್ಲ. ಮುಂಚೆನೇ ಕರೀಲಿಲ್ಲ ಅಂತ ಕೋಪ ಮಾಡ್ಕೋಬೇಡ ಗೌರಕ್ಕ.'

—ಎಂದಳು ರಾಜೇಶ್ವರಿ.

'ಎಂತಾ ಮಾತಾಡ್ದೆ ನನ್ನವ್ವ. ಕ್ವಾಪಾನಾ? ಅದೂ ನಿಮ್ಮ ಮ್ಯೇಲೆ? ಉಂಟಾ ರಾಜಕ್ಕ. ನೀವು ಕರೀಬೇಕಾ ನಮ್ಮನ್ನು. ಇದು ನಮ್ಮನೆ ಕಾರ್ಯಾನೇ ಅಲ್ವ. ಅದ್ಕೇ ಅವರೂ ಅಲ್ಲಿಗೆ ಹೋಗಾಕೇ ಗಾಡಿ ಕಟ್ಸಿಸವ್ರೆ. ನೀವು

ಬ್ಯಾಡಾಂದ್ರೂ ಬಿಡಾಕಿಲ್ಲ. ನಾವು ನಮ್ಮ ಗಾಡೀಲಿ ಬರ್‍ತೀವಿ. ನಿಮ್ಮ ಜೊತೇಲಿ ಬ್ಯಾಡ. ನೀವು ಮುಂದೆ ಹೋಗ್ರಿ.'

'—ಎಂದಳು ಗೌರಮ್ಮ.'

'ನಿಜವಾಗಿಯೂ ಗೌರಕ್ಕ?'

—ಗೌರಮ್ಮನ ಮಾತುಗಳನ್ನು ನಂಬಲಾರದವಳಂತೆ ಕೇಳಿದಳು ರಾಜೇಶ್ವರಿ.

ನನ್ನ ಮನೇ ದೇವರಾಣೆ ನಿಜ. ಹಿಂದವ್ರು ಬರ್‍ತಾ ಅವ್ರೆ ಅಂತ ದೊಡ್ಡಪ್ಪ ದ್ಯೋರ್‍ಗೆ ಹೇಳು.'

ಎಂದಳು ಗೌರಮ್ಮ ಬಂದ ಕೆಲಸ ಮುಗಿಸಿಕೊಂಡು, ರಾಜೇಶ್ವರಿ ಮನೆ ಯತ್ತ ಓಡಿ, ತಂದೆಗೆ ಸುದ್ದಿಯನ್ನೆಲ್ಲಾ ಹೇಳಿದಳು. ಮಗಳು ಹೇಳಿದುದನ್ನು ಕೇಳಿ ನರಸಪ್ಪನವರು—

ಗೌರಿ ಬಂಗಾರದಂಥ ಹೆಣ್ಣು'

—ಎಂದು ಗಾಡಿಗಳು ಹೊರಡಲು ಅಪ್ಪಣೆ ಮಾಡಿದರು.

—ಒಳ್ಳೆಯ ಎತ್ತುಗಳನ್ನೇ ಆರಿಸಿ ಕಟ್ಟಿದ್ದ ಗಾಡಿಗಳು, ಗೆಜ್ಜೆಯ ಸದ್ದಿನಿಂದ ಇರುಳನ್ನು ಕಲಕುತ್ತಾ ವೇಗವಾಗಿ ನಡೆದವು. ಗಾಡಿಯವರು ಒಬ್ಬರನ್ನೊಬ್ಬರು ಸ್ಪರ್ಧಿಸಿ ಹಾಡು ಹೇಳಲಾರಂಭಿಸಿದರು. ಅವರೊಂದಿಗೆ ಗಾಡಿಯಲ್ಲಿದ್ದವರೂ ಬೆರೆತರು. ಗಾಡಿಯ ರೂಪದಲ್ಲಿ ಉತ್ಸಾಹ, ನಗು, ಹಾಡು, ಗೆಜ್ಜೆಯ ಸದ್ದೇ ಪ್ರಯಾಣ ಮಾಡುತ್ತಿರುವಂತಿತ್ತು.

ಆ ಗಾಡಿಗಳ ಹಿಂದೆ, ಅಷ್ಟು ದೂರದಲ್ಲಿ ಯಾವ ಸದ್ದೂ ಇಲ್ಲದೆ ವೀರಣ್ಣನ ಗಾಡಿಯೂ ಹಿಂಬಾಲಿಸಿತು.

ದಿಬ್ಬಣದ ಗಾಡಿಗಳನ್ನು ದಾರಿಯಲ್ಲೇ ಎದುರುಗೊಂಡು, ಶಾಮಣ್ಣ ಅವರನ್ನೆಲ್ಲಾ ಬೀಗರಿಗೆಂದು ಗೊತ್ತುಮಾಡಿದ ಮನೆಯಲ್ಲಿ ಇಳಿಸಿ, ಅವರ ಸ್ನಾನ, ಊಟದ ವ್ಯವಸ್ಥೆಮಾಡಲು ಹೋದ. ಆಳುಗಳು ಗಾಡಿಗಳಿಂದ ಬೀಗರ ಸಾಮಾನನ್ನು ಇಳಿಸಿ ಒಳಗಿಡುತ್ತಿದ್ದರು. ಸ್ನಾನಕ್ಕೆ ಏಳುವವರು ಆ ಗದ್ದಲದಲ್ಲಿದ್ದರು. ಹೆಂಗಸರು ಎಲ್ಲಾ ಸಾಮಾನು ಬಂದವೇ ಇಲ್ಲವೇ ಎಂದು ನೋಡಿಕೊಳ್ಳುವ ಗಡಿಬಿಡಿಯಲ್ಲಿದ್ದರು. ನರಸಪ್ಪನವರು ಮಾತ್ರ ಯಾವ ಗಡಿಬಿಡಿಯಲ್ಲೂ ಸೇರದೆ ಕಟ್ಟೆಯ ಮೇಲೆ ನಿಂತು ಕಾಯುತ್ತಾ ಇದ್ದರು. ಅವರನ್ನು

ಏನೋ ಕೇಳಬೇಕೆಂದು ಬಂದ ಲಕ್ಷ್ಮೀದೇವಮ್ಮ ಅವರನ್ನು ಕಂಡು—

'ಇದೇನು ಕಟ್ಟೇ ಮೇಲೆ ಯಾರಿಗೆ ಕಾಯ್ತಾ ಇದೀರಿ?'

—ಎಂದು ಕೇಳಿದಳು.

'ವೀರಣ್ಣನ ಗಾಡಿ ಹಿಂದೆ ಬರ್‍ತಾ ಇತ್ತು. ಇನ್ನೂ ಯಾಕೋ ಬರಲಿಲ್ಲ. ಈಗ ಬರುತ್ತೇನೋ ಅಂತ ಕಾಯ್ತಾ ಇದೀನಿ?'

'ಏನು! ವೀರಣ್ಣನ ಗಾಡಿನೇ – ಅಂದರೆ – ವೀರಣ್ಣ ಬರ್‍ತಾನೆಯೇ?

'ಹೂಂ'

'ಅವಳು?'

'ಗೌರಮ್ಮನೂ'.

'ಚನ್ನಾಯ್ತು. ಒಳ್ಳೇ ಬೆಕ್ಕನ್ನ ಕಂಕುಳಲ್ಲಿಟ್ಟುಕೊಂಡು ಶಕುನ ಕೇಳೋಕೆ ಹೋದ ಹಾಗಾಯ್ತು. ಅವರಿಗ್ಯಾರು ಬನ್ನಿ ಅಂತ ಕರೆದು ಕಪಳೆ ಹಿಡಿಸಿದ್ರೊ?'

'ಯಾರು ಅಂದರೆ—ನಾನೇ.'

'ಏಕೆ—ಊರಲ್ಲಾದ್ದು ಸಾಲದು, ಮಗನ ಕೀರ್ತಿ ಊರೂರಿಗೂ ಹರಡಲಿ ಎಂತಲೇ?'

'ಎಲ್ಲಾ ಮಾತಿಗೂ ನೀನು ಬಾಯಿ ಹಾಕಿಕೊಂಡು ಬರಬೇಡ. ನಿನ್ನ ಕೆಲಸ ನೀನು ನೋಡಿಕೋ ಹೋಗು'

—ಎಂದು ಹೆಂಡತಿಯನ್ನು ಕಳುಹಿಸಿ ರಾಜೇಶ್ವರಿಯನ್ನು ನೋಡಲು ಬಂದು ಒಳಗಿದ್ದ ಚಂದ್ರಶೇಖರನನ್ನು ಕರೆದು—

'ಚಂದ್ರಶೇಖರಾ, ನೀನು ಒಂದು ಕೆಲಸ ಮಾಡಬೇಕಪ್ಪಾ'

—ಎಂದರು.

'ಏನು ಮಾವ?'

'ನೋಡು—ಹಿಂದೆ ಬೇರೇ ಗಾಡೀಲಿ ವೀರಣ್ಣ, ಗೌರಮ್ಮ ಬರ್‍ತಿದಾರೆ. ನೀನೇ ಹೋಗಿ ಅವರನ್ನು ಕರಕೊಂಡು ಬಂದು ನಿಮ್ಮ ಮನೇಲಿ ಇಳಿಸಿಕೋ. ಇಲ್ಲಿದ್ದರೆ ಅಸಮಾಧಾನಕ್ಕೆ ಕಾರಣವಾದೀತು'

'ಹಾಗೇ ಆಗಲಿ.'

—ಎಂದು ಚಂದ್ರಶೇಖರ ವೀರಣ್ಣನನ್ನು ಎದುರುಗೊಳ್ಳಲು ಹೊರಟ ದಾರಿಯಲ್ಲೇ ಅವನಿಗೆ ಎದುರಿಗೆ ಸಿಕ್ಕಿದ ಶಾಮಣ್ಣ—

'ಎಲ್ಲಿಗೆ ಹೊರಟೆ ಚಂದ್ರಶೇಖರ. ನೀನೂ ಗಂಡಿನವರ ಕಡೆ ಸೇರಿ ಕೊಂಡು ಬಿಡಬೇಡ. ಈಗ ನೀನು ಹೆಣ್ಣಿನ ಕಡೆಯವನು. ಅಲ್ಲೇ ಇದ್ದು ಅವರಿಗೆ ಏನು ಬೇಕೋ ಎಲ್ಲಾ ವಿಚಾರಿಸಿಕೊ'

—ಎಂದ.

' ಆ ಕೆಲಸಕ್ಕೇ ಹೋಗ್ತಾ ಇದೀನಿ'

—ಎಂದ ಚಂದ್ರಶೇಖರ.

'ಏನು ಕೆಲಸ?'

'ಬರೊ ಗಂಡಿನ ಕಡೆ ಬೀಗರನ್ನು ಎದುರುಗೊಳ್ಳಲು ಒಂದು ಗಾಡಿ ಹಿಂದಾಯಿತಂತೆ. ಮಾವ ಹೇಳಿದರು.'

'ಯಾರಿದಾರಂತೆ ಆ ಗಾಡೀಲಿ.'

'ವೀರಣ್ಣ—ಗೌರಮ್ಮ.'

'ಅವರೂ ಬರ್‍ತಿದಾರೆಯೇ. ತುಂಬಾ ಸಂತೋಷ. ಏಕೋ ಅವರು ಬರಲಿಲ್ಲ ಎಂದುಕೊಳ್ಳುತ್ತಾ ಇದ್ದೆ. ಆದರೆ ಅದನ್ನು ಹೇಗೆ ಕೇಳೋದು ಅಂತ ಸುಮ್ಮನಾಗಿದ್ದೆ. ಅವರನ್ನು ನೆಟ್ಟಗೆ ಮನೆಗೆ ಕರೆದುಕೊಂಡು ಹೋಗು.'

'ಮಾವ ನಮ್ಮ ಮನೇಗೇ ಕರೆದುಕೊಂಡು ಹೋಗು ಎಂದರು.

'ಅದೆಲ್ಲಾ ಬೇಡ, ಅವರಿಗೆ ಇರಲು ನಾನು ಮನೆಯಲ್ಲೇ ವ್ಯವಸ್ಥೆ ಮಾಡಿದೀನಿ.'

'ಇದು ತಿಳಿದರೆ ವೆಂಕತ್ತೆ ಸುಮ್ಮನೆ ಬಿಟ್ಟಾಳೇ.'

ಅವಳಿಗೆ ನಾನೆಲ್ಲಾ ಹೇಳಿದೀನಿ. ಏನೂ ಅನ್ನೋಲ್ಲ. ರಂಗೂ ಒಬ್ಬ ಮಗಳು, ಗೌರಮ್ಮ ಇನ್ನೊಬ್ಬ ಮಗಳು. ಹೂಂ ಹೋಗು. ಬೀದೀಲಿ ಪಂಚಾಯಿತಿ ಮಾಡಬೇಡ. ನಾನು ಗುಡಿಗೆ ಹೋಗಿ ಅಲ್ಲಿ ವರಪೂಜೆಗೆಲ್ಲಾ ವ್ಯವಸ್ಥೆ ಆಗಿದೆಯೋ ಇಲ್ಲವೋ ನೋಡಿಕೊಂಡು ಬರ್‍ತೀನಿ'.

—ಎಂದು ಚಂದ್ರಶೇಖರನಿಗೆ ಹೇಳಿ ಶಾಮಣ್ಣ ಅವಸರವಾಗಿ ಗುಡಿಯ ಕಡೆ ಹೊರಟರು.

ಬೇರೇನೂ ಮಾಡಲು ತೋಚದೆ, ಚಂದ್ರಶೇಖರ ವೀರಣ್ಣನ ಗಾಡಿ ಯನ್ನು ನೋಡಲು ಮುಂದೆ ನಡೆದ.

ಮದುವೆಯ ಸಂಭ್ರಮ ನೆರೆದವರೆಲ್ಲರ ಮೊಮುಖಿನಲ್ಲೂ ಕಳ್ಳಿಸ ಆವಳಿ ನಂತೆ ಕವಿದಿತ್ತು. ಮದುವೆ ಮಾಡಿಸಿಕೊಳ್ಳುವವರಿಗಿಂತ, ಅದನ್ನು ನೋಡ ಬಂದವರ ಸಡಗರ ಹೆಚ್ಚಾಗಿತ್ತು. ಎಲ್ಲರಿಗೂ ಒಂದಲ್ಲ ಒಂದು ಬಗೆಯ ಗಡಿಬಿಡಿ, ಅವಸರ—ವಿವಾಹ ತಮ್ಮ ಹೆಗಲ ಮೇಲೆ ಕುಳಿತಿದೆಯೇನೋ, ಒಂದು ಸ್ವಲ್ಪ ಹೆಚ್ಚು ಕಡಿಮೆಯಾದರೆ ಅದು ಕೆಳಗುರುಳುವುದೇನೋ ಎಂಬ ಕಾತರ. ಗಂಡಿನ ಕಡೆಯ ನೆಂಟರಿಗೆ, ಗಂಡಿಗಿಂತ, ಗಂಡಿನ ತಂದೆ ತಾಯಿಗಳಿಗಿಂತ ತಾವೇ ಸ್ವಲ್ಪ ಹೆಚ್ಚು. ತಮ್ಮ ಸೇವೆಯಲ್ಲಿ ಎಳ್ಳುಕಾಳು ಮುಳ್ಳು ಕೊನೆಯಷ್ಟು ಲೋಪವಾಯಿತೊ ನೀವು ಕೆಟ್ಟಿರಿ ಎನ್ನುವ ಬಿಗಿಯಿಂದ ಹೆಣ್ಣಿನ ಕಡೆಯವ ರಿಂದ ಸೇವೆ ಸಲ್ಲಿಸಿಕೊಳ್ಳುವ ಹುರುಪು. ಹೆಂಗಸರಿಗಂತೂ ಗಳಿಗೆಗೊಂದು ಬಾರಿ ಕೇಶಾಲಂಕಾರ ತಿದ್ದಿಕೊಳ್ಳುವ, ಗಳಿಗೆಗೊಂದು ಬಾರಿ ಸೀರೆ ಬದಲಾ ಯಿಸುವ, ಆ ಅವಸರದಲ್ಲೇ ತಾವು ಕಂಡು ಕೇಳಿದ ಸುದ್ದಿ ಮಾತನಾಡುವ, ಟೀಕಿಸುವ, ಒಬ್ಬರೊಬ್ಬರ ರೂಪಾಲಂಕಾರವನ್ನು ಮೆಚ್ಚುವ, ಹಳಿಯುವ ಉಸಿ ರಾಡಿಸಲೂ ಬಿಡುವಿಲ್ಲದ ಗಡಿ ಬಿಡಿ. ಈ ಪಾರ್ಶ್ವ ಪ್ರದರ್ಶನವೇ ಮುಖ್ಯ ಘಟನೆಗಿಂತ ಹಿರಿದಾಗಿ, ಪುರೋಹಿತರ ಮಂತ್ರಕ್ಕೆ ಮಕ್ಕಳ ಅಳುವಿನಷ್ಟೇ ಪ್ರಾಶಸ್ತ್ಯ ದೊರಕಿತ್ತು. ಇದೆಲ್ಲದರ ನಡುವೆ ಆಗಾಗ ನಾನೂ ಒಂದು ಸದ್ದು ಮಾಡುವ ವಾದ್ಯ ಎಂದು ಸೂಚಿಸುವಂತೆ ಓಲಗದ ಧ್ವನಿ.

ಈ ಗದ್ದಲದಲ್ಲಿ ವೆಂಕಮ್ಮ, ರಾಜೇಶ್ವರಿ ಇಬ್ಬರೂ ಒಳಮನೆಯಲ್ಲಿ ಧಾರೆಗೆ ಮುನ್ನ ಗೌರಿ ಪೂಜೆಗೆ ಹೋಗುವ ರಂಗಮ್ಮನಿಗೆ ಹೆರಳು ಹಾಕುತ್ತಾ ಕುಳಿತಿದ್ದರು.

ಬಿಳಿ ಸಂಕಲಕೆಯ ಸೀರೆಯನ್ನುಟ್ಟು, ಮೊಳಕಾಲ್ಮುರುವಿನ ರೊಟ್ಟಿ ಅಂಚಿನ ಸೀರೆಯನ್ನು ಬೆನ್ನಮೇಲೆ ಹೊದ್ದುಕೊಂಡು, ಹಣೆಗೆ ಬಾಷಿಂಗ ಕಟ್ಟಿಕೊಂಡು, ತೊಡೆಯಲ್ಲಿ ಮುಖ ಮರೆಸಿಕೊಂಡು, ತಾನೇ ಗೌರಿಯಂತಿದ್ದ ರಂಗಮ್ಮನ ಎಣ್ಣೆ ನೀರಿನ ಮಜ್ಜನದಿಂದ ಹಗುರವಾದ ಕೂದಲಿನ ಸಿಕ್ಕನ್ನು ಸಿಕ್ಕಟ್ಟಿಗೆಯಿಂದ ಬಿಡಿಸುತ್ತಾ, ರಾಜೇಶ್ವರಿ—

'ಮೊದಲೇ ನನಗಾದರೂ ಹೇಳಬಾರದಾಗಿತ್ತೆ?'

—ಎಂದಳು.

'ಏನು ಹೇಳಬೇಕಾಗಿತ್ತು?'

ಎಂದು ಕೇಳಿದಳು ವೆಂಕಮ್ಮ.

'ಧಾರೆ ಮಣೆಮೇಲೆ ಕೂತುಕೊಳ್ಳೋ ಹುಡುಗಿ ಒಳ್ಳೇ ಬಿಚ್ಚಾಲೆ ಗೌರಿ ಇದ್ದ ಹಾಗಿದ್ದಾಳೆ. ಕೈಗಿಲ್ಲ, ಕಾಲಿಗಿಲ್ಲ. ನನ್ನದಾದರೂ ತಂದು ಇಡುತ್ತಿದ್ದೆ.'

'ನಾನು ಅವರಿಗೆ ಹೇಳಿದೆ ಅವರು ಒಪ್ಪಲಿಲ್ಲ ಕಣೆ.'

'ಏಕೋ?'

'ನನ್ನ ಮಗಳಿಗೆ ದೇವರು ಕೊಟ್ಟಿರೋ ಲಕ್ಷಣವಾದ ಕಣ್ಣು ಮೂಗಿನ ಅಲಂಕಾರವೇ ಸಾಕು. ಅದಿಲ್ಲದಿದ್ದವರಿಗೆ ಎರವಲು ಒಡವೆನಾದರೂ ತಂದು ಹಾಕಬೇಕು. ಏನೂ ಬೇಡ ಸ್ವಂತದ್ದು ಇದ್ದರೆ ಇದೆಯಲ್ಲಾಂತಾದರೂ ಹಾಕ ಬಹುದಾಗಿತ್ತು. ಅವರಿವರದು ಏಕೆ ಹಾಕಬೇಕು ಎಂದುಬಿಟ್ಟರು.

'ಸರಿ—ಶಾಮಣ್ಣ ಮಾವನಿಗೇನು. ಏನು ಬೇಕಾದರೂ ವೇದಾಂತ ಹೇಳ್ತಾನೆ. ಒಂದ್ಸಲವಾದರೂ ಮೈತುಂಬಾ ಒಡವೆ ಇಟ್ಟು ನೋಡಬೇಕೋ ಬೇಡವೋ. ಈ ಜನ್ಮಕ್ಕೇನು ಇವಳಿಗೆ ನಾಕುಸಲ ಮದುವೆ ಆಗುತ್ತೆಯೇ'? ಈ ಸಲ ಇಲ್ದೆ ಹೋದ್ರೆ ಹೋಗ್ಲಿ ಬಿಡು ಅನ್ನೋಕೆ.'

'ನಾನೂ ಹೇಳಿದೆ. ಆದರೆ ನನ್ನ ಮಾತು ಯಾರು ಕೇಳ್ತಾರೆ ಹೇಳು—ನಾನು ಯಾರಿಗೆ ಲೆಕ್ಕ. ಅವರಾಯಿತು ಅವರ ದಾರಿ ಆಯಿತು. ಹೋಗಲಿ ಬಿಡು. ಬಂದೋರಿಗೆ ಅಂಬಲಿ ಗಂಜಿ ಹಾಕದೆ ಮದುವೆ ಮಾಡಿದೆವಲ್ಲ ಅದೇ ಸಂತೋಷ. ಇಷ್ಟಕ್ಕಾದರೂ ದೇವರು ಬಾಯಿ ಕೊಡ್ತಾನೋ ಇಲ್ಲವೋ ಅಂತಿದ್ದೆ.'

'ಸಾಕು ಬಿಡು—ಅದೇನು ಮಾತು ಅಂತ ಆಡ್ತೀಯ ವೆಂಕತ್ತೆ. ಶಾಮಣ್ಣ ಮಾವನಿಗಂತೂ ಯಾವತ್ತೂ ಇದೇ ವೈರಾಗ್ಯ. ನಿನಗೆಲ್ಲಿಂದ ಬಂತು ಇದು?'

'ಇಷ್ಟು ದಿನ ನಾನು ಅವರನ್ನು ಅಂದು ಪಾಪ ಕಟ್ಟಿಕೊಂಡದ್ದೇ ಸಾಕು. ನೀನು ಯಾಕೆ ಆ ಪಾಪ ಕಟ್ಟಿಕೋತೀಯ. ಸುಮ್ಮನಿರು'

—ಎಂದಳು ವೆಂಕಮ್ಮ, ರಾಜೇಶ್ವರಿ ಗಂಡನನ್ನು ಟೀಕಿಸಿದುದನ್ನು ಕೇಳಿ, ವೆಂಕಮ್ಮನ ಬಾಯಿಂದ ಆ ಮಾತನ್ನು ಕೇಳಿ ರಾಜೇಶ್ವರಿ ಚಕಿತಳಾಗಿ ವೆಂಕಮ್ಮ ನತ್ತ ನೋಡಿದಳು. ಮುಂದೆ ಅವಳು ಏನು ಮಾತಾಡಬೇಕೆಂದಿದ್ದಳೋ

ಏನೋ ಅಷ್ಟರಲ್ಲಿ ಹಿತ್ತಲ ಕಡೆಯ ಕಿಟಕಿಯಿಂದ ಯಾರೋ 'ರಾಜಕ್ಕಾ' ಎಂದುದು ಕೇಳಿಸಿ ಅತ್ತ ನೋಡಿದಳು.

ಕಿಟಕಿಯಲ್ಲಿ ಗೌರಮ್ಮ ನಿಂತು ನೋಡುತ್ತಿದ್ದಳು.

'ಏನು ಗೌರಕ್ಕ? ಏನಾದ್ರೂ ಬೇಕಾಗಿತ್ತಾ?'

'ರಾಜೇಶ್ವರಿ ಕೇಳಿದಳು.

'ಇಲ್ಲಕ್ಕ, ಅಲಂಕಾರ ಮಾಡಿಕೊಂಡ ಹುಡುಗಿ ಹೇಗಿರ್‍ತಾಳೋ ನೋಡೋಣಾನ್ನಿಸ್ತು, ಅದ್ಕೆ ಹಂಗೆ ಬಂದು ನಿಂತ್ಕೊಂಡೆ, ಒಂದ್ಗಳಿಗೆ ಹೀಗೆ ಬರ್‍ತಿಯಾ?'

'ಹಿತ್ತಲ ಕಡೆ ಬಾಗಿಲು ತೆಗೆದಿದೆ. ನೀನೇ ಬಾ ಗೌರಮ್ಮ'

—ಎಂದಳು ವೆಂಕಮ್ಮ.

'ಬ್ಯಾಡ. ಮುಡಿಯೋರು ಓಡಾಡ್ತ ಇರ್‍ತಾರೆ, ಏನಾದ್ರೂ ಅಂದ್ಕೋ–ಡಾರು'.

'ಅವಳು ಹೇಳೋದೂ ನಿಜಾನೇ. ಒಂದು ಗಳಿಗೇಲಿ ಬಂದ್ಬಿಡ್ತೀನೀ

—ಎಂದು ರಾಜೇಶ್ವರಿ ತಾನೇ ಗೌರಮ್ಮನನ್ನು ನೋಡಲು ಹೋದಳು.

ಗೌರಮ್ಮ ರಾಜೇಶ್ವರಿಗಾಗಿ ಹಿತ್ತಲಲ್ಲಿ ಹೊರವಾಗಿ ಬೆಳೆದಿದ್ದ ಜಾಜಿ ಪೊದೆಯ ಮರೆಯಲ್ಲಿ ನಿಂತಿದ್ದಳು. ಮರೆಯಲ್ಲಿದ್ದ ಅವಳನ್ನು ಕಾಣದೆ ಎಲ್ಲಿ ಹೋದಳು ಎಂದು ಹುಡುಕುತ್ತಿದ್ದ ರಾಜೇಶ್ವರಿಯನ್ನು ಗೌರಮ್ಮನೇ 'ಇಲ್ಲಿನ್ನಿ ಬಾ ರಾಜಕ್ಕಾ' ಎಂದು ಕರೆದಳು.

'ಏನು ಗೌರಕ್ಕಾ?'

'ಅಲ್ಲಾ—ರಾಜಕ್ಕ ನೀನಿದ್ದೂ ಹಿಂಗ್ಯಾಗ್ಬೋದಾ?'

—ನೋವು ತುಂಬಿದ ಧ್ವನಿಯಲ್ಲಿ ಕೇಳಿದಳು ಗೌರಮ್ಮ.

'ಯಾಕೆ ನಾನೇನ್ಮಾಡ್ದೆ?'

'ರಂಗಕ್ಕನ್ನೇನು ಧಾರೆ ಮನೇಗೆ ಕಳಿಸ್ತಾ ಇದೀರೋ, ವನವಾಸಕ್ಕೆ ಕಳಿಸ್ತಾ ಇದೀರೋ. ಒಂದು ಕಿವೀಗಿಲ್ಲ. ಒಂದು ಮೂಗ್ಗಿಲ್ಲ ಸೀತಾಮ್ನೋರು ವನವಾಸಕ್ಕೆ ಹೊಂಟಾಗ ಇದ್ದಂಗವಳೆ. ಇಂಗಾದ್ರ ನಿಮ್ಮಣ್ಣಯ್ಯಂಗೆ ಹೆಣ್ಣಿಂದು ಕೊಳ್ಳೋದು?'

'ಅದಕ್ಕೆ ನಾನೇನು ಮಾಡಲಿ. ನನ್ನದಾದರೂ ಕೊಡ್ತೀನಿ ಅಂದರೆ

ಕೇಳಲಿಲ್ಲ. ನನ್ನ ಮಗಳಿಗೆ ಕಣ್ಣೊ ಮೂಗೇ ಒಡವೆ ಅಂದರಂತೆ ಶಾಮಣ್ಣ ಮಾವ.'

'ಗಂಡಸ್ರು, ಅವರಿಗೇನು ತಿಳೀತದೆ ರಾಜಕ್ಕ. ಕಣ್ಣೊ, ಮೂಗೇ ಒಡ್ವೆ ಅಂತೆ. ಅಂಥ ಮಾತೇ ಒಂದು ಅಲಂಕಾರ. ತೆಗಿ, ಹೀಗಾಗೋಕಿಲ್ಲ.'

'ಅವರಪ್ಪನಿಗೆ ಬೇಡ, ಅಮ್ಮನಿಗೆ ಬೇಡ, ಹಸೇಮೇಲೆ ಕೂತು ಕೊಳ್ಳೋಳು ಅವಳಿಗೆ ಬೇಡ, ನಾನೇನು ಮಾಡ್ಲಿ ಹೇಳು.'

'ನಾನೊಂದ್ಕೆಲ್ಸ ಹೇಳ್ತೀನಿ—ಮಾಡ್ತೀಯಾ?'

'ಏನು ಮಾಡ್ಲಿ?'

'ಇದು ತಗೋ. ಇದ್ರಾಗೆ ಒಂದಷ್ಟು ಒಡವೆ ಅವೆ. ಇಡು. ಒಡವೆ ಇಟ್ಟು ಕೊಂಡಾಗ ನಿಮ್ಮಣ್ಣಯ್ಯನ ಹೆಂಡ್ತಿ ಹೇಗೆ ಕಾಣ್ತಾಳೋ ನೋಡೋಣ'

—ಎಂದು ಗೌರಮ್ಮ ರೇಶಿಮೆಯ ರವಿಕೆಯ ಒಟ್ಟೆಯಲ್ಲಿ ಕಟ್ಟಿದ್ದ ಒಂದು ಸಣ್ಣ ಗಂಟನ್ನು ತೆಗೆದು ರಾಜೇಶ್ವರಿಯ ಕೈಗೆ ಹಾಕಿದಳು.

'ನಿನ್ನದೇನು ನನ್ನದೆ ಕೊಡ್ತಿದ್ದೆ ಗೌರಕ್ಕ. ಆದರೆ ಅವರಿಗೇ ಬೇಡವಲ್ಲಾ.'

'ಯಾಕೆ?'

'ಎರವಲು ಒಡವೆ ಬೇಡವಂತೆ. ಹೋಗಲಿ ನಮಗೇನು? ಯಾವತ್ತು ಅದೆಂಥ ಒಡವೆ ಮಾಡಿಸಿ ಹಾಕ್ತಾರೋ ಹಾಕಿಕೊಳ್ಳಲಿ'

'ಅದೂ ನಿಜಾ ಅನ್ನು. ಅವರದೇ ಒಡವೆ ಇರೋವಾಗ ಎರವಲದನ್ನು ಯಾಕೆ ಹಾಕಿಕೊಳ್ಳಬೇಕು.'

ಗೌರಮ್ಮನಗುತ್ತಾ ಹೇಳಿದಳು.

'ಹೂ. ಅವರದು ಇದೆ. ಇದ್ದಿದ್ರೆ ಇಷ್ಟೆಲ್ಲಾ ಮಾತು ಯಾಕೆ ಬೇಕಿತ್ತು?'

'ನಿನ್ನ ಕೈಲಿರೋದು ಯಾರದ್ದು ಅಂತ ತಿಳುಕೊಂಡೆ. ಅವರದೇ ಕೊಡ್ತೀನಿ.'

'ನಿನ್ನದು ಅವರದು ಹೇಗಾಗುತ್ತೆ ಗೌರಕ್ಕ. ವಿಚಿತ್ರವಾಗಿ ಮಾತಾಡ ಬೇಡ..'

'ನಾನು…ನಾನು…ನಾನು ಯಾರೇಳು ರಾಜಕ್ಕ? ಈ ಹೊತ್ನಾಗೆ ಅದೆಲ್ಲಾ ಕೇಳಬ್ಯಾಡ. ರಂಗಕ್ಕನಿಗೆ ಕೊಡಲಿಕ್ಕೇಂತಲೇ ತಂದದ್ದು ಅದೆಲ್ಲಾ. ಮಾತ್ರೇನು ನಾನು ಇಟ್ಕೊಂಡು ಮೆರೀಲಿಕ್ಕೆ ತಂದದ್ದು ಅಂದುಕೊಂಡ್ಯಾ? ಕೊಡ್ತೀನಿ.'

'ನಿನ್ನ ಬುದ್ಧಿ ನನಗೆ ಗೊತ್ತು ಗೌರಕ್ಕ. ನೀನು ಇಲ್ಲದ ಕಾರುಬಾರು ಮಾಡಲಿಕ್ಕೆ ಹೋಗಬೇಡ. ವೀರಣ್ಣ ಸುಮ್ನೆ ಇರ್ತಾನೆಯೇ?'

'ಅವರೇ ಹೇಳಿದ್ದು. ಹೊತ್ತಾಗ್ತದೆ. ಇದೆಲ್ಲಾ ಮುಗೀಲಿ ಆಮೇಲೆ ಮಾತಾಡೋಣ. ಈಗ ತಗೊಂಡ್ಹೋಗಿ ಕೊಡು. ಆಮೇಲೆ ನನ್ನೂ ಕರಿ ನನ್ನ ಸವತಿ ಹೇಗಿರ್ತಾಳೋ ಕಣ್ತುಂಬ ನೋಡಿ ಸಂತೋಷಪಡ್ತೀನಿ'

—ಎಂದು ಗೌರಮ್ಮ ರಾಜೇಶ್ವರಿ ಮತ್ತೆ ಮಾತು ಬೆಳೆಸಲು ಅವಕಾಶ ಕೊಡದೆ, ಹೊರಟುಹೋದಳು.

'ಯಾವ ಕೇಡಿಗೆ ಇವಳಿಗೆ ಈ ಬುದ್ಧಿ ಬಂದಿದೆಯೋ' ಎಂದು ಗೊಣಗಿ ಕೊಳ್ಳುತ್ತಾ, ರಾಜೇಶ್ವರಿ ಒಡವೆ ಗಂಟನ್ನು ತೆಗೆದುಕೊಂಡು ಒಳಗೆ ಹೋದಳು.

ರಾಜೇಶ್ವರಿಯ ಕೈಯ ಗಂಟನ್ನು ಕಂಡು ವೆಂಕಮ್ಮ—

'ಅದೇನೇ?'

—ಎಂದು ಕೇಳಿದಳು.

ಏನೋ ನೋಡು'

—ಎಂದು ಗಂಟನ್ನು ಬಿಚ್ಚಿದಳು. ಅದರಲ್ಲಿದ್ದ ಅಡ್ಡಿಕೆ, ಕಾಸಿನಸರ, ಬುಗುಡಿ, ಚೆಳತುಂಬು, ತೋಳಬಂದಿ, ನಾಗರ, ಕುಚ್ಚು, ತಾಯಿತು, ಮೊದಲಾದ ಒಡವೆಗಳನ್ನು ಕಂಡು ವೆಂಕಮ್ಮ—

'ಕಂಡೋರ ಒಡವೆ ಬ್ಯಾಡ ಅಂದ್ರೂ ಇದೆಲ್ಲಾ ಯಾಕೆ ತಗೊಂಡು ಬಂದೆ ಹೇಳು. ಅವ್ಯಾರದು ಇಸಿದುಕೊಂಡು ಬಂದೆಯೋ ಅವರಿಗೇ ಕೊಟ್ಟು ಬಿಡು'

—ಎಂದಳು.

'ಯಾರದೂ ಅಲ್ಲ. ನಿನ್ನ ಮಗಳದೇ, ಇದು.'

'ಮಗಳ್ದೇನೇ?'

'ಇವಳಿಗೆ, ಇವಳ ಸವತಿ ಉಡುಗೊರೆ.'

'ಯಾರ್ದು, ಗೌರಮ್ಮಂದೇ.'

'ಹೂ.'

'ಪಾಪ—ಅಕೆ ಒಡವೆ ನಮಗ್ಯಾಕೆ? ಎಷ್ಟು ಒಳ್ಳೊಳ್ಳೆ ಒಡವೆಗಳು,

'ನಾನೂ ಅದೇ ಹೇಳ್ದೆ ಕೇಳಲಿಲ್ಲ. ನನ್ನ ಸವತೀನ ಬಿಜ್ಮಾಡೆ ಗೌರಿ

ಮಾಡಿ ಹಸೇಮೇಲೆ ಕೂಡಿಸಿದರೆ ಬರಲು ತಗೊಂಡು ಬರ್ತೀನಿ ಅಂದಳು. ಹೆದರಿಕೊಂಡು ತಗೊಂಡು ಬಂದೆ. ನಿನಗೂ ಬ್ಯಾಡ ಅಂದ್ರೆ ತಿಪ್ಪೇಲಿ ಹಾಕಿ ಬಿಡ್ತೀನಿ.'

'ಊಟಿ ಅವಳ ಮನಸ್ಸು ನೋಯಿಸಿದೋರುಂಟೆ? ಆದರೆ...ಅವರು ಏನನ್ತಾರೋನ್ನೋದೇ ನನಗೆ ಭಯ.'

'ಏನಾದ್ರೂ ಅನ್ನೋಕೆ ಬಂದ್ರೆ ಗೌರಮ್ಮನ್ನೇ ತೋರಿಸು. ಇನ್ನು ಪುರೋಹಿತರು ಕೂಗಿಕೊಳ್ಳೋಕೆ ಶುರುಮಾಡ್ತಾರೆ. ಆ ರಂಪ ಎಲ್ಲಾ ಯಾಕೆ?'

—ರಾಜೇಶ್ವರಿ ಅವಸರ ಮಾಡಿದಳು.

'ನಾನೇನು ಮಾಡಲೇ ರಂಗೂ?'

'—ಎಂದು ವೆಂಕಮ್ಮ ಅಸಹಾಯಧ್ವನಿಯಲ್ಲಿ ಕೇಳಿದಳು ಮಗಳನ್ನು.

'ನನಗಿಂತ ಮೊದಲು ಅವರ ಕೈ ಹಿಡಿದೋಳು ಗೌರಮ್ಮ. ಆಕೆ ಹೇಗೆ ಹೇಳ್ತಾಳೋ ಹಾಗೆ ಮಾಡು.'

ರಾಜೇಶ್ವರಿ ವೆಂಕಮ್ಮ ಇಬ್ಬರೂ ರಂಗಮ್ಮ ಹೇಳಿದ ಮಾತನ್ನು ಕೇಳಿ, ಅವಕ್ಕಾಗಿ ಅವಳತ್ತ ನೋಡಿದರು.

'ಯಾಕೊ ನನ್ನ ಕಣ್ಣು, ಕಿವಿ ಒಂದೂ ನಂಬೋಕೇ ಆಗ್ತಾ ಇಲ್ಲ ರಾಜೇಶ್ವರಿ ನನಗೆ. ಇಂಥಾ ಹೆಂಗಸರೂ ಉಂಟಾ ಈ ಲೋಕದಲ್ಲಿ. ನಾನು ಮಗಳು ಅವಳ ಕೈಲಿ ಏನು ಊರೀಬೇಕೋ ಅಂತ ಹೆದರಿದ್ದೆ. ಅವರು ಹಾಗೇನೂ ಆಗೋಲ್ಲ ಅಂದಿದ್ರು. ಅವರ ಮಾತೇ ನೀಜ ಆಯ್ತು. ಗೌರಮ್ಮ ಕಲಿಯುಗದ ಹೆಂಗಸಲ್ಲ.'

'ಸರಿ ನೀನೂ ಅವಳಿಗೆ ಮರುಳಾದೆಯಾ? ಆಯಿತು ಬಿಡು. ಯಾರೂ ಉಳಿಯಲಿಲ್ಲ ಅವಳ ಕೈಲಿ.'

—ಎಂದು ರಾಜೇಶ್ವರಿ ಗೌರಮ್ಮನ ಒಡವೆಗಳಿಂದ ರಂಗಮ್ಮನನ್ನು ಸಿಂಗರಿಸಿ ಅದೆಲ್ಲಾ ಮುಗಿದ ಮೇಲೆ—

'ಎಲ್ಲೇ ರಂಗೂ ಮುಖ ಎತ್ತು. ಹೇಗೆ ಕಾಣ್ತೀಯೋ ನೋಡೋಣ'

—ಎಂದಳು.

ರಂಗಮ್ಮ ನಿಧಾನವಾಗಿ ಮುಖ ಎತ್ತಿದಳು. ಅವಳ ಕಣ್ಣಲ್ಲಿ ನೀರಾಡುತ್ತಿತ್ತು.

'ಅದ್ಯಾಕೆ—ಲಕ್ಷಣವಾಯ್ತು, ಈ ಹೊತ್ತಿನಲ್ಲಿ ಕಣ್ಣಲ್ಲಿ ನೀರೇಕೆ?'

—ರಾಜೇಶ್ವರಿ ಆಶ್ಚರ್ಯದಿಂದ ಕೇಳಿದಳು.

'ಏನಿಲ್ಲ—ರಾಜಕ್ಕ ಗೌರಮ್ಮನಂಥ ದೊಡ್ಡ ಬುದ್ಧಿ ನನಗೆ ಯಾವತ್ತಾದರೂ ಬರುತ್ತಾ?'

—ರಂಗಮ್ಮ ಕಂಬನಿ ಕಟ್ಟಿ ಗಾರಾದ ಸ್ವರದಲ್ಲಿ ಕೇಳಿದಳು.

ಆ ವೇಳೆಗೆ ಮಂಗಳ ಗೌರಿಪೂಜೆ ಸಿದ್ಧತೆ ಮುಗಿಯಿತೇನೋ ಎಂದು ವಿಚಾರಿಸಲು ಬಂದ ಶಾಮಣ್ಣ ಸಾಲಂಕೃತಳಾದ ರಂಗಮ್ಮನನ್ನು ಕಂಡು—

'ಇದೆಲ್ಲಾ ಎಲ್ಲಿಯದು? ಎಂದು ಮುಖ ಸಿಂಡರಿಸಿಕೊಂಡು ಕೇಳಿದ.

'ಗೌರಮ್ಮನ ಒಡವೆ ಮಾವ'

'—ಎಂದಳು ರಾಜೇಶ್ವರಿ.

ಆ ಮಾತು ಕೇಳಿ ಶಾಮಣ್ಣ ಒಂದು ಗಳಿಗೆ ಮಿಂಚು ಸೋಕಿದವನಂತೆ ಸುಮ್ಮನೆ ನಿಂತುಕೊಂಡ. ಬಳಿಕ ನಿಧಾನವಾಗಿ ಹೇಳಿದ–

'ರಂಗೂ—ನಿನ್ನ ಬದುಕಿಗೆ ಇದು ಮಾದರಿ.'

'—ಎಂದವನೇ—

'ಎಲ್ಲಾ ಬೇಗ ಮುಗಿಸಿ, ಗೌರಿಪೂಜೆ ಮಾಡಿಸಿ ಕರೆದುಕೊಂಡು ಬನ್ನಿ. ಪುರೋಹಿತರು ಮುಹೂರ್ತ ಮೀರಿ ಹೋಗುತ್ತೆ, ಅಂತ ಅವಸರ ಮಾಡ್ತಾ ಇದ್ದಾರೆ. ನೀವು ಹೆಂಗಸರು –ಹಿಡಿ ಛಾಸಸ, ಎಮ್ಮೆ ಹಾಲು ಕುಡಿದು ಬೆಳೆದೋರು'

—ಎಂದು ಹೇಳಿ ಅವಸರವಾಗಿ ಅಲ್ಲಿಂದ ಹೊರಟು ಹೋದ.

## ೩೬

ಏಳು ದಿನಗಳು ಮದುವೆ ನಿರ್ವಿಘ್ನವಾಗಿ ಮುಗಿದುಹೋಯಿತು. ಬಂದಿದ್ದವರೆಲ್ಲಾ 'ಬಹಳ ಅದ್ದೂರಿಯಾಗಿ ಮಗಳ ಮದುವೆ ಮಾಡಿಬಿಟ್ಟ ಶಾಮಣ್ಣ' ಎಂದು ಹೊಗಳಿದರು. 'ಮದ್ವೆ ಹೇಗೆ ಮಾಡ್ತಾನೋ ಅಂತಿದ್ರು ಅಳಿಯನಿಗೆ ಕೋಡುಬಳೇಗೆ ಗದ್ದೆ ತೋಟಾನೂ ಕೊಟ್ಟುಬಿಟ್ಟ' ಎಂದು ಕೆಲವರು ಮೆಚ್ಚಿಕೊಂಡರು; ಕೆಲವರು ಹಾಸ್ಯಮಾಡಿದರು. 'ಷಡಾಕ್ಷರಪ್ಪ ಸಾಲ ಕೊಟ್ಟಾಂತ ಕಾಣೆಸುತ್ತೆ, ಉಡಾಯಿಸಿಬಿಟ್ಟ. ಅಳಿಯನ ಕುರುಡು ಬೆಳಕು ಹರಿದ ಮೇಲೆ ತಾನೇ ಗೊತ್ತಾಗೋದು' ಎಂದು ಆಡಿಕೊಂಡರು. ಮದುವೆಗೆ ಗೌರಮ್ಮನೂ ಬಂದುದು ಮುತ್ತೈದೆಯರ ಗುಂಪಿನಲ್ಲಿ ಗುಸುಪಿಸಕ್ಕೆ ಕಾರಣವಾಯಿತು.

'ಗೌರಮ್ಮನ ಮಾತು ಕಿವಿಗೆ ಬಿದ್ದ ಲಕ್ಷ್ಮೀದೇವಮ್ಮನವರು —

'ನಾನು ಮೊದಲೇ ಬಡುಕೊಂಡೆ—ಈ ಶನೇಶ್ವರ ಇಲ್ಲಿ ಯಾಕೇಂತ, ಇವರು ಕೇಳಲಿಲ್ಲ.'

—ಎಂದಾಗ ರಾಜೇಶ್ವರಿ, ಗೌರಮ್ಮ ಮಾಡಿದುದನ್ನು ಹೇಳಿ ತನ್ನ ತಾಯಿಯ ಬಾಯಿ ಮುಚ್ಚಿಸಿದಳು.

'ಹೌದೇನೇ? ಇವರು ಅವಳ ವಿಷಯ ಅನ್ನಬೇಡ ಅಂತ ಇದ್ರು. ನಾನು ನಂಬಿರಲಿಲ್ಲ. ಮಗನಿಗೆ ಹಿಡಿಸಿದ ಹುಚ್ಚನ್ನೇ ಅಪ್ಪನಿಗೂ ಹಿಡಿಸಿಬಿಟ್ಟಳು ಅಂದ್ಕೊಂಡಿದ್ದೆ. ಇನ್ನು ನನ್ನ ನಾಲ್ಗೆ ಏನಾದ್ರೂ ಅವಳ ವಿಷಯದಲ್ಲಿ ಒಂದು ಅಪಶಬ್ದ ನುಡಿದರೆ ಈ ನಾಲ್ಗೆ ಸುಟ್ಹಾಕಿಬಿಡ್ತೀನಿ'

—ಎಂದು ಲಕ್ಷ್ಮೀದೇವಮ್ಮ ಸುಮ್ಮನಾದರು..

ಮದುವೆ ಎಲ್ಲಾ ಮುಗಿದು ಮನೆತುಂಬಿಸಿಕೊಳ್ಳುವ ಶಾಸ್ತ್ರ ನಡೆಸುವ ಮಾತು ಬಂದಾಗ ನರಸಪ್ಪನವರು—

'ಇಲ್ಲಿ ಬೇಡ, ಶಾಮಣ್ಣ ನೀನೂ ವೆಂಕಮ್ಮನೂ ಮಗಳನ್ನು ಕರೆದು ಕೊಂಡು ದೇವೀಕೆರೇಗೇ ಬಂದುಬಿಡಿ. ಅಲ್ಲೇ ಈ ಶಾಸ್ತ್ರ ಮುಗಿಸಿ ಬಿಡೋಣ'

—ಎಂದರು.

ಅವರ ವಿಚಿತ್ರವಾದ ಬೇಡಿಕೆಗೆ ಪೂ ಎನ್ನಲು ಶಾಮಣ್ಣ ಹಿಂದೆ ಮುಂದೆ ನೋಡಿದ.

'ಯಾರಾದರೂ ಏನಾದರೂ ಅಂದುಕೊಳ್ಳುವದಿಲ್ಲವೇ?'

'ಏನು' ಪಾದ ಹೂಡಿದ.

'ಯಾರ ಮಾತು ಕಟ್ಟಿಕೊಂಡು ನಮಗೇನಾಗಬೇಕು ಶಾಮಣ್ಣ. ಇದೊಂದು ಮಾತಿಗೆ ಬೇಡ ಅನ್ನಬೇಡ. ರೀತಿ-ರಿವಾಜು ನನಗೂ ಗೊತ್ತು. ಆದರೆ ತಾಯಿ ಏಕೋ ಅಲ್ಲೇ ಆಗಲಿ ಅನ್ತಾ ಇದಾಳೆ.'

'ತಾಯಿಯ ಮಾತು ಎನ್ನುವ ಕಾರಣದ ಮುಂದೆ ಬೇರೆ ಆಕ್ಷೇಪಣೇ ಇರಲಿಲ್ಲ ಶಾಮಣ್ಣನೂ ಅದಕ್ಕೆ ತಲೆಬಾಗಿದ.

ಮರನ ಕಡೆಯ ಗಾಡಿಗಳೊಂದಿಗೆ ಶಾಮಣ್ಣ, ವೆಂಕಮ್ಮ ರಂಗಮ್ಮ ಅವಳ ತಂಗಿ, ತಮ್ಮ, ಭಾಗಮ್ಮ, ಚಂದ್ರಶೇಖರ, ರಾಜೇಶ್ವರಿ ಎಲ್ಲರೂ ಹೊರಟರು.

ಗಾಡಿಗಳು ದೇವೀಕೇರೆಯ ಬಳಿ ಸಮೀಪಿಸುತ್ತಿದ್ದ ಹಾಗೇ ಲಕ್ಷ್ಮೀ ದೇವಮ್ಮ, ರಾಜೇಶ್ವರಿ ಇಬ್ಬರೂ ಮುಂದಾಗಿ ಗಾಡಿಯಿಂದ ಇಳಿದುಹೋಗಿ ಮನೆತುಂಬಿಸಿಕೊಳ್ಳುವ ಶಾಸ್ತ್ರಕ್ಕೆ ಬೇಕಾದ ವಸ್ತುಗಳನ್ನು ಸಿದ್ಧಪಡಿಸಿ, ಹೊಸಿಲು ತೊಳೆದು, ರಂಗೋಲಿ ಹಾಕಿ, ದೇವರ ಮುಂದೆ ತುಪ್ಪದ ದೀಪ ಹಚ್ಚಿ, ಹೊಸ್ತಿಲ ಮೇಲೆ ಅಕ್ಕಿಯ ಬಟ್ಟಲನ್ನಿಟ್ಟು ಕಾದರು.

ಮನೆ ಬಾಗಿಲಿಗೆ ಬರುತ್ತಿದ್ದ ಹಾಗೇ ವಧೂವರರಿಬ್ಬರಿಗೂ ಆರತಿ ಮಾಡಿ, ಕಾಯಿ ಇಳಿ ತೆಗೆದ ಮೇಲೆ ನರಸಪ್ಪನವರೇ ಮಂತ್ರೋಕ್ತವಾಗಿ, ಮನೆ ತುಂಬಿಸುವ ಶಾಸ್ತ್ರ ಮಾಡಿಸಿದರು.

ಬರುವ ದಾರಿಯಲ್ಲೇ ಶಾನುಭೋಗರ ಮನೆಯಲ್ಲಿ ಮಿಂದು, ಮಡಿ ಯಾಗಿ ಬಂದ ರಂಗಮ್ಮ ಬಲಗಾಲಿನಿಂದ ಅಕ್ಕಿ ಬಟ್ಟಲನ್ನು ಚಿಮ್ಮಿ ಗೃಹ ಪ್ರವೇಶ ಮಾಡಿದಳು.

ಮರುದಿನ ವೆಂಕಟದಾಸಪ್ಪನವರು, ರಂಗಮ್ಮನಿಗೆ ಅಭ್ಯಂಜನ ಸ್ನಾನ ವಾದ ಮೇಲೆ ಶುದ್ಧ ಮಡಿಯುಡಿಸಿ, ನರಸಪ್ಪನವರು ತಾವೇ ಅವರಿಬ್ಬರ ಕೈಲೂ ದೇವೀ ಪೂಜೆಮಾಡಿಸಿ ಮೊದಲು ಅವರಿಬ್ಬರಿಗೂ ತೀರ್ಥಪ್ರಸಾದ ಕೊಟ್ಟು—

'ರಂಗೂ...ಇವತ್ತಿನಿಂದ ಇವಳ ಸೇವೆ ನಿಮ್ಮ ಜವಾಬ್ದಾರಿ'

—ಎಂದರು ಸೊಸೆಗೆ.

ಆ ಮಾತು ಕೇಳಿ ಲಕ್ಷ್ಮೀದೇವಮ್ಮನಿಗೆ ಕರುಳು ಕಿವಿಚಿದಂತಾಯಿತು. ಆಗ ಏನೂ ಮಾತನಾಡದೆ ಮಧ್ಯಾಹ್ನದ ಮೇಲೆ ಗಂಡ ಒಂಟಿಯಾಗಿ ಸಿಕ್ಕಿದಾಗ—

'ಇದೇನು ವಿಚಿತ್ರ ಅಂದರೆ...'

—ಎಂದಳು.

'ಏನು ವಿಚಿತ್ರ'

—ನರಸಪ್ಪನವರು ಕೇಳಿದರು.

'ಮಗನ್ನ ಎದುರಿಗಿಟ್ಟುಕೊಂಡು ದೇವರನ್ನ ಸೊಸೇಗೆ ಒಪ್ಪಿಸೋದೆ? ಚೆನ್ನಾಯಿತು.'

ಅವಳಿಗೆ ಹೇಳಿದ ಮಾತು ಅವನಿಗೆ ಕೇಳಿಸೊಲ್ಲವೆ?'

'ಚೆನ್ನಾಯಿತು ಅವನಿಗೇ ಆ ಮಾತು ಹೇಳಿದ್ದರೆ ಏನಾಗುತ್ತಿತ್ತು. ಮದುವೆ ಇಷ್ಟು ದಿವಿನಾಗಿ ಆಯಿತು. ಅಲ್ಲೂ ಮಗನ ಕೈಲಿ ಒಂದೂ ಮಾತಾಡಲಿಲ್ಲ. ಬಂದೋರೆಲ್ಲಾ ಇದೇನು ವಿಚಿತ್ರ ಅಂದುಕೊಂಡು ಹೋದರು. ಅಲ್ಲಿ ಏಕೆ ಮಾತಾಡಲಿ ಅಂತ ಸುಮ್ಮನಿದ್ದೆ. ಏನೋ ಆಯ್ತು ಹೋಯ್ತು, ಅದೃಷ್ಟದಲ್ಲಿದ್ದುದು ಆಯ್ತು, ಎಲ್ಲಾ ಆದರೂ ಅವನ ಕೈಲಿ ಮಾತಾಡ ಬೇಡವೇ? ಅವನು ಎಷ್ಟು ನೊಂದುಕೊಳ್ಳಬಹುದು.'

'ಅದು ನನಗೂ ಗೊತ್ತು'

'ಗೊತ್ತಿದ್ದರೆ ಏನು ಸಾರ್ಥಕ ಅದ ಹಾಗಾಯಿತು.'

'ಅವನ ಕೈಲಿ ಮಾತಾಡೋ ದಿನಾನೂ ಹತ್ತಿರ ಬರ್‍ತಾ ಇದೆ. ಸುಮ್ಮನಿರು'.

—ಎಂದರು ನರಸಪ್ಪ ವಿಚಿತ್ರವಾದ ಧ್ವನಿಯಲ್ಲಿ. ಏಕೋ—ಆ ಮಾತು ಕೇಳಿದಮೇಲೆ ಲಕ್ಷ್ಮೀದೇವಮ್ಮನಿಗೆ ಮುಂದೆ ಮಾತಾಡಲಾಗಲಿಲ್ಲ. ಗೃಹ ಪ್ರವೇಶದ ಶಾಸ್ತ್ರ ಮುಗಿದ ಬಳಿಕ ಶಾಮಣ್ಣ ಪರಶುರಾಮಪುರಕ್ಕೆ ಹಿಂದಿ ರುಗಲು ಅವಸರ ಮಾಡತೊಡಗಿದರು. ಈವತ್ತು ನಾಳೆ ಎಂದು ಒಂದು ವಾರ ನಿಲ್ಲಿಸಿಕೊಂಡರು ನರಸಪ್ಪ.

'ಬಿಟ್ಟೆ, ಮನೆ ಬಿಟ್ಟೆ, ಹಾಗೆ ಬಂದಿದೀನಿ ಬೇಗ ಹೋಗಬೇಕು ಇನ್ನೇನು. ಇಲ್ಲಿನ ಕೆಲಸವೆಲ್ಲಾ ಆಯಿತಲ್ಲ'

—ಎಂದರು ಶಾಮಣ್ಣ,

'ಇನ್ನು ಸ್ವಲ್ಪ ಉಳಿದಿದೆ ಶಾಮಣ್ಣ.

'ಏನು?'

'ತಾಯಿ ಅಪ್ಪಣೆ ಕೊಡೋದು. ನಾನೂ ಅದಕ್ಕೆ ಕಾಯ್ತಾ ಇದೀನಿ. ತಡಿ'

—ಎಂದು ಮಾತು ಮುಗಿಸಿದರು ನರಸಪ್ಪ. ಮತ್ತೊಮ್ಮೆ ಶಾಮಣ್ಣ ಸುಮ್ಮನಾಗಬೇಕಾಯಿತು. ಆದರೂ ವೆಂಕಮ್ಮನ ಒತ್ತಾಯ ಹೆಚ್ಚಾಗಿ ಮತ್ತೆ ಮತ್ತೆ ಶಾಮಣ್ಣ ನರಸಪ್ಪನವರಿಗೆ ಹೊರಡುವ ಮಾತನ್ನು ನೆನಪಿಸ ಬೇಕಾಗುತ್ತಿತ್ತು.

'ನೋಡು—ಮಗ, ಸೊಸೆ, ಮಗಳು, ಅಳಿಯ, ಎಲ್ಲರೂ ಮನೇಲಿ ರೋದನ್ನ ಎರಡು ದಿನ ಕಣ್ಣು ತುಂಬ ನೋಡಬೇಕೂಂತ ಆಸೆ ನನಗೆ' ಆದರೆ ನೀನು ಅವಸರ ಮಾಡ್ತಾ ಇದೀಯ. ಹೋಗ್ಲಿ—ನಾಳಿದ್ದು ಹೊರಟು ಬಿಡೋಣಂತೆ. ನನ್ನ ಚಪಲಕ್ಕೆ ನಿಮ್ಮ ಕೆಲಸ ಏಕೆ ಕೆಡಬೇಕು. ನಾಳೇ ಶುಕ್ರವಾರ, ಎಲ್ಲರೂ ಒಟ್ಟಿಗೆ ಅಮ್ಮನೋರ ಗುಡೀಗೆ ಹೋಗೋಣ'

—ಎಂದರು ನರಸಪ್ಪ.

'ಆಯಿತು ನಿನ್ನ ಮನಸ್ಸಿನಲ್ಲಿ ಹೇಗಿದೆಯೋ ಹಾಗಾಗಲಿ'

—ಎಂದು ಶಾಮಣ್ಣ ಸುಮ್ಮನಾದ. ಆದರೆ ಏಕೋ ಅವನ ಮನಸ್ಸಿನಲ್ಲಿ ಏನೋ ಭಯ ಮಿಡಿಯುತ್ತಾ ಇತ್ತು.

## ೩೭

ಆ ಮಾತು ನಡೆದ ಮರುದಿನವೇ ಶುಕ್ರವಾರ. ಶುಕ್ರವಾರದೊಂದಿಗೆ ಹುಣ್ಣಿಮೆಯೂ ಕೂಡಿಬಂದಿತು. ಬೆಳಿಗ್ಗೆ ಅಷ್ಟು ಹೊತ್ತಿಗೇ ಗಾಡಿಯಲ್ಲಿ ಗುಡಿಯ ಬಳಿಗೆ ಅಡಿಗೆಯ ಪಾತ್ರೆ, ಸಾಮಾನುಗಳನ್ನು ಕಳಿಸಿ, ಎಲ್ಲರೂ ದೇವಾಲಯಕ್ಕೆ ಹೊರಟರು. ರಾಜೇಶ್ವರಿಗೆ ಹೇಳಿ, ನರಸಪ್ಪನವರು ವೀರಣ್ಣ ಗೌರಮ್ಮನನ್ನೂ ಅಲ್ಲಿಗೆ ಕರೆಸಿಕೊಂಡರು.

ಎಲ್ಲರೂ ದೇವಿಯ ಕೊಳದಲ್ಲಿ ಮಿಂದರು. ಹೆಂಗಸರು ತೋಟದಲ್ಲಿ ಒಲೆ ಹೂಡಿ ಅಡಿಗೆಗಳನ್ನು ಮಾಡತೊಡಗಿದರು. ನರಸಪ್ಪನವರು ಸ್ನಾನ ಮುಗಿಸಿ, ದೇವಾಲಯದೊಳಗೆ ಹೋಗಿ, ದೇವಿಯ ಪೂಜೆ ಆರಂಭಿಸಿದರು.

ದಿನವೂ ಒಂದು ಗಂಟೆಯ ಹೊತ್ತಿಗೆ ಮುಗಿಯುತ್ತಿದ್ದ ಅವರ ಪೂಜೆ ಆ ದಿನ ಮುಗಿಯುವ ವೇಳೆಗೆ ಸಂಜೆ ನಾಲ್ಕು ಗಂಟೆಯ ಹೊತ್ತಾಗಿತ್ತು.

ಪೂಜೆ ಮುಗಿಸಿದ ನರಸಪ್ಪನವರು ಎಲ್ಲರಿಗೂ ಊಟಕ್ಕೆ ಕೂಡಲು ಹೇಳಿ, ತಾವು ಮಾತ್ರ ಊಟ ಮಾಡದೆ, 'ಏಕೋ ತಲೆ ಸುತ್ತುತ್ತಾ ಇದೆ. ಅದು ಕಡಿಮೆಯಾದ ಬಳಿಕ ಊಟ ಮಾಡುತ್ತೇನೆ.'

—ಎಂದು ಹೇಳಿ ಗುಡಿಯಲ್ಲೇ ಒಂದು ಚಾಪೆ ಹಾಸಿಕೊಂಡು ಮಲಗಿದರು. ಎಲ್ಲರದೂ ಊಟವಾದ ಮೇಲೆ ನರಸಪ್ಪನವರು ಶಾಮಣ್ಣನನ್ನು ಕರೆದು—

'ನೀನು, ನಿನ್ನ ಅಳಿಯ ಇಬ್ಬರೂ ಹೊಸಹಳ್ಳಿಗೆ ಹೋಗಿ ಆಂಜನೇಯನ ಪೂಜೆ ಮಾಡಿಕೊಂಡು ಪ್ರಸಾದ ತಂದುಬಿಡಿ. ಮದುವೆ ಗದ್ದಲದಲ್ಲಿ ನಮ್ಮಪ್ಪನ ಪೂಜೇನೇ ಮರೆತು ಹೋಯಿತು, ಇವತ್ತು ಹೇಗೂ ಅನಾಯಾಸವಾಗಿ ಉಪವಾಸ ಆಯಿತು. ಆ ಪ್ರಸಾದನೂ ಅಷ್ಟು ಬಾಯಲ್ಲಿ ಹಾಕಿಕೊಂಡು ಬಿಡುತ್ತೇನೆ.'

—ಎಂದರು.

'ಆಯಿತು'

—ಎಂದು ಶಾಮಣ್ಣ, ವೆಂಕಟದಾಸಪ್ಪನವರಿಬ್ಬರೂ ಹಣ್ಣು, ಕಾಯಿ, ಹೂವು, ಕುಂಕುಮ, ಮಂಗಳಾರತಿಯ ಬತ್ತಿಯನ್ನು ತೆಗೆದುಕೊಂಡು ಹೊಸ ಹಳ್ಳಿಯ ಕಡೆಗೆ ಹೊರಟರು.

'ಇವತ್ತು ನರಸಣ್ಣ ಏನೋ ಒಂದು ತರಹ ಇದಾರೆ ದಾಸಣ್ಣ'

—ಎಂದ ಶಾಮಣ್ಣ, ಹೊಸಹಳ್ಳಿಯ ದಾರಿಯಲ್ಲಿ ನಡೆಯುತ್ತಾ.

'ಹೂ. ಒಂದೊಂದು ಸಲ ಹೀಗೇ. ಏನು ಪ್ರೇರಣೆಯಾಗಿದೆಯೋ ಯಾರು ಬಲ್ಲರು. ಹೇಳಿದ ಕೆಲಸ ಮಾಡೋದಷ್ಟು ನಮ್ಮ ಭಾರ.'

'ಆದ್ರೂ ...ಇವತ್ತು ನನಗೇನೂ ಒಂದು ತರಹಾ ಅನಿಸ್ತಾ ಇದೆ'

'ನನಗೂ ಹಾಗೆ ಇದೆ. ಯಾವುದರಲ್ಲೂ ಗೆಲುವಿಲ್ಲ. ಆದಷ್ಟು ಬೇಗ ಪೂಜೆ ಮುಗಿಸಿಕೊಂಡು ಹೋಗಬೇಕು.'

—ಎಂದರು ವೆಂಕಟದಾಸಪ್ಪ.

ಇಬ್ಬರೂ ವೇಗವಾಗಿ ನಡೆದು, ಹಳ್ಳದಲ್ಲಿ ಕೈಕಾಲು ತೊಳೆದುಕೊಂಡು, ಸಂಧ್ಯಾವಂದನೆಯ ಶಾಸ್ತ್ರ, ಆಂಜನೇಯನ ಪೂಜೆ ಮುಗಿಸಿದರು.

ಮಂಗಳಾರತಿಯನ್ನು ಮಾಡುತ್ತಿದ್ದ ವೆಂಕಟದಾಸಪ್ಪನವರು ಇದ್ದಕ್ಕಿದ್ದ ಹಾಗೇ—

'ಮಾವಾ ಏಕೋ ಅಣ್ಣ ಕೂಗ್ತಾ ಇರೋ ಹಾಗಿದೆ. ಬೇಗ ಹೋಗೋಣ'

—ಎಂದವರೇ ಒಂದು ಬಟ್ಟಲಲ್ಲಿ ತೀರ್ಥ ಸ್ವಲ್ಪ ಪ್ರಸಾದ ಹಿಡಿದು ಕೊಂಡು, ಶಾಮಣ್ಣ ಹಿಂಬಾಲಿಸಿ ಬರುವುದನ್ನೂ ಕಾಯದೆ ವೇಗವಾಗಿ ನಡೆದರು.

ಶಾಮಣ್ಣನೂ ಅಷ್ಟು ವೇಗವಾಗಿ ಅಳಿಯನನ್ನು ಹಿಂಬಾಲಿಸಿದ.

ಅಮ್ಮನವರ ಗುಡಿಯಲ್ಲಿ ಎಲ್ಲರೂ ನರಸಪ್ಪನವರು ಮಲಗಿದ್ದ ಚಾಪೆಯ ಸುತ್ತಾ ನೆರೆದಿದ್ದರು.

'ಏನು, ಏನಾಯಿತು?'

—ಎಂದು ಕೇಳಿದ ಶಾಮಣ್ಣ ಆ ಗುಂಪನ್ನು ಕಂಡು ಉದ್ವಿಗ್ನನಾಗಿ.

'ಯಾಕೋ...ಅವರಿಗೆ ಒಂದು ಸಲ ಭ್ರಾಂತಿ ಆಯ್ತು, ದಾಸಣ್ಣ, ತೀರಾ ಸುಸ್ತಾಗಿ ಮಲಗಿಬಿಟ್ಟಿದ್ದಾರೆ. ಊಟ ಮಾಡಿ ಅಂತ ಬಡಕೊಂಡ್ರೂ ನನ್ನ ಮಾತು ಕೇಳಲಿಲ್ಲ. ಉದ್ದಕ್ಕೂ ಇದೇ ಹಟ ಆಗಿಹೋಯ್ತು'

—ಎಂದರು ಲಕ್ಷ್ಮೀದೇವಮ್ಮ ಅಳುತ್ತಾ.

'ನನಗೇನಾಗಿದೆ ಅಂತ ಇಷ್ಟು ಗಾಬರಿ ಆಗ್ತಿ. ದಾಸಣ್ಣ ಬಂದನೇ?'

—ಎಂದು ಕ್ಷೀಣವಾದ ಸ್ವರದಲ್ಲಿ ಕೇಳಿದರು ನರಸಪ್ಪ.

'ಪ್ರಸಾದ ತಂದಿದೀನಿ ಅಣ್ಣ'

—ಎಂದರು ವೆಂಕಟದಾಸಪ್ಪ.

'ತಂದೆಯಾ–ಹಾಗೆ ಅಮ್ಮನವರಿಗೆ ಮಂಗಳಾರತಿ ಮಾಡಿ, ಆ ಮೇಲೆ ನನಗಷ್ಟು ತೀರ್ಥ ಪ್ರಸಾದ ಕೊಡು.'

—ಎಂದರು ನರಸಪ್ಪ ಮಗನಿಗೆ

ಅವರು ಮಗನೊಂದಿಗೆ ಮಾತಾಡಿದುದನ್ನು ಕಂಡು ಎಲ್ಲರಿಗೂ ಆಶ್ಚರ್ಯ ಆಯಿತು. ಆದರೆ ಲಕ್ಷ್ಮೀದೇವಮ್ಮನವರಿಗೆ ಮಾತ್ರ ಏಕೋ ಗಾಬರಿಯಾಯಿತು.

ವೆಂಕಟದಾಸಪ್ಪನವರು ಅಮ್ಮನವರಿಗೆ ಅವಸರದಲ್ಲಿ ಮಂಗಳಾರತಿ ಮಾಡಿ ತಂದೆಗೆ ಮಂಗಳಾರತಿ ತೀರ್ಥ ಪ್ರಸಾದ ಕೊಟ್ಟರು. ಅದನ್ನು ತೆಗೆದು ಕೊಂಡು ನರಸಪ್ಪನವರು—

'ಗೌರಕ್ಕಾ ಇಲ್ಲಿ ಬಾ...ರಂಗೂ ನೀನೂ ಹತ್ತಿರ ಬಾ'

—ಎಂದು ಅವರಿಬ್ಬರನ್ನು ಕರೆದು ತಮ್ಮ ಪಕ್ಕದಲ್ಲಿ ಕೂಡಿಸಿಕೊಂಡು:

'ರಂಗೂ ಗೌರಕ್ಕ ನಿನ್ನ ಸವತಿಯಲ್ಲ, ಅಕ್ಕ, ನಾನು ಅವಳ ಮನಸ್ಸನ್ನು ಬಹಳ ನೋಯಿಸಿದ್ದೇನೆ. ನೀನು ನೋಯಿಸಬಾರದು. ಅಕ್ಕತಂಗಿಯರ ಹಾಗಿರ ಬೇಕು. ಲಕ್ಷ್ಮೀ ನೀನೂ ಇವರಿಬ್ಬರಲ್ಲಿ ವ್ಯತ್ಯಾಸ ಮಾಡಬಾರದು. ನಿನ್ನ ಮನೆಗೆ ಇಬ್ಬರು ಸೊಸೆಯರು ಬರಬೇಕಾಗಿತ್ತು. ಒಬ್ಬ ಮಗ ಸಂನ್ಯಾಸಿಯಾದ ಅಂತ, ಒಬ್ಬನಿಗೇ ಇಬ್ಬರನ್ನು ಕಳಿಸಿದಾಳೆ ತಾಯಿ. ಇವರಲ್ಲಿ ಇವಳು ಹೆಚ್ಚು ಅವಳು ಕಡಿಮೆ ಅಂದರೆ ಅಮ್ಮನಿಗೆ ಸಿಟ್ಟು ಬರುತ್ತೆ. ಗೊತ್ತಾಯಿತೇ ನಾನು ಹೇಳಿದ ಮಾತು, ದಾಸಣ್ಣ ಇವತ್ತಿನ ವರೆಗೂ ನಿನ್ನ ಕೈಲಿ ಮಾತಾಡಲಿಲ್ಲ. ನೊಂದುಕೊಂಡೆಯೋನೋ, ಆದರೆ ಆ ಶಿಕ್ಷೆ ಅನುಭವಿಸಬೇಕೂಂತ ನನಗೆ ಅಮ್ಮನ ಅಪ್ಪಣೆಯಾಗಿತ್ತು. ನೋಡು–ರಂಗೂಗೆ ನೀನು ಹೆಚ್ಚು ಕಡಿಮೆ ಮಾಡಿದರೂ ಸರಿಯೇ, ಗೌರಮ್ಮನ ಮನಸ್ಸು ನೋಯಿಸಬೇಡ ಶಾಮಣ್ಣ... ನಿನ್ನ ಬಹಳ ದಿನ ನಿಲ್ಲಿಸಿಕೊಂಡು ಬಿಟ್ಟೆ, ಏನೂ ಅಂದುಕೋಬೇಡ–ಇವತ್ತು ನನ್ನ ಕಳಿಸಿಬಿಟ್ಟು ಆಮೇಲೆ ನೀನು ಹೋಗು, ದಾಸಣ್ಣ ಇವತ್ತಿಂದ ಶಾಮಣ್ಣ

ನಿನ್ನ ಮಡಾವನಲ್ಲ, ತಂದೆ, ರಾಜಕ್ಕಾ…ನಾನು ಹೋಗಿಬರಲೇ ಅಮ್ಮಾ. ನೀನು ಮಗಳಲ್ಲ, ಈ ಮನೆಯ ನಂದಾದೀಪ'

—ಎಂದು ಬಳಲಿದ ಧ್ವನಿಯಲ್ಲಿ ಹೇಳಿ ನರಸಪ್ಪನವರು ಕಣ್ಣು ಮುಚ್ಚಿ ದರು.

ಅವರು ಹೇಳಿದ ಮಾತನ್ನು ಕೇಳಿ ಹೆಂಗಸರೆಲ್ಲಾ ಅಳಲಾರಂಭಿಸಿದರು. ಇದ್ದಕ್ಕಿದ್ದ ಹಾಗೇ ಉಕ್ಕಿದ ಅಳುವಿನ ಧ್ವನಿ ಕೇಳಿ ತೋಟದ ಮರದಲ್ಲಿ ಮಲ ಗಿದ್ದ ಹಕ್ಕಿಗಳು ಎದ್ದು ಕೂಗಲಾರಂಭಿಸಿದವು.

ಮೂಡಲಲ್ಲಿ ಕುಂಕುಮದ ತಟ್ಟೆಯಂತೆ ಹುಣ್ಣಿಮೆಯ ಚಂದ್ರ ಹೊಳೆ ಯುತ್ತಿದ್ದ.

ಏನೋ ಶ್ಲೋಕವನ್ನು ಮನಸ್ಸಿನಲ್ಲಿ ಹೇಳಿಕೊಂಡು, ಮೂಕವಾಗಿ ಅಲುಗಾಡುತ್ತಿದ್ದ ನರಸಪ್ಪನವರ ತುಟಿಗಳ ಚಲನೆ ಮಂದ ಮಂದವಾಗಿ ನಿಂತು ಹೋಯಿತು.

'ರಾಮಾ—ನೀನೇ ಗತಿ'

—ಎಂದು ಒಮ್ಮೆ ಚೀರಿದ ಶಾಮಣ್ಣ ಗಟ್ಟಿಯಾಗಿ ಗೀತೆಯನ್ನು ಹೇಳಲಾರಂಭಿಸಿದರು.

'ಅಣ್ಣಾ…'

—ಎಂದು ಚೀರಿ ಕೆಳಗುರುಳಿದರು ವೆಂಕಟದಾಸಪ್ಪ. ಹೆಂಗಸರ ಅಳು ಕಾರ್ಗಾಲದ ಕಡಲಿನ ನೆರೆಯಂತೆ ಗಾಳಿಯನ್ನು ತುಂಬುತ್ತಿತ್ತು.

ಶಾಮಣ್ಣ ಗೀತೆಯನ್ನು ಹೇಳುತ್ತಿದ್ದ—

'ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ
ಶ್ರದ್ಧಾವಾನ್ ಭಜತೇ ಯೋಮಾಂ ಸಮೇ ಯುಕ್ತತಮೋ ಮತಃ'

---

# ೧

ನರಸಪ್ಪನವರ ಸಾವು ವೆಂಕಟದಾಸಪ್ಪನವರ ಪಾಲಿಗೆ ಸಿಡಿಲೇಟಿಗಿಂತಲೂ ಬಿರುಸಾಗಿತ್ತು!

ಎಂದೂ ಹುಟ್ಟು–ಸಾವುಗಳನ್ನು ಕಂಡರಿಯದ ವೆಂಕಟದಾಸಪ್ಪನವರಿಗೆ ತಮ್ಮ ಬಾಳಿನಲ್ಲಿ ಪ್ರಥಮ ಬಾರಿಗೆ ಆದ ಮೃತ್ಯುದರ್ಶನದಿಂದ, ಅವರ ಬದುಕಿನ ಅಸ್ತಿಭಾರವನ್ನೇ ಹಿಡಿದು ಅಲುಗಿಸಿದಂತಾಗಿತ್ತು.

ಸಾವು–ಅದೂ ಎಂಥ ಸಾವು?

ಆಳವಾಗಿ, ಬೇರು ಬಿಟ್ಟ ಹೆಮ್ಮರವನ್ನು, ಕಡ್ಡಾಯವಾಗಿ ಕಿತ್ತು ಉರುಳಿಸುವ ಛಲಗಾರ ಬಿರುಗಾಳಿಯಂಥ ಮೃತ್ಯುವಲ್ಲ. ಉದ್ರೇಕ, ಉದ್ವೇಗ, ಆಕ್ರೋಶ, ತೀವ್ರ ರಾಗ–ಭಾವಗಳ ಉಗ್ರ ಪ್ರದರ್ಶನ–ಯಾವೊಂದೂ ಇಲ್ಲದೆ, ಗಾಳಿಯಲ್ಲಿ ಹರಡಿದ ಗಂಧಪರಿಮಳ ಹೇಗೆ ಹರಡಿತು, ಹೇಗೆ, ಯಾವಾಗ ಕರಗಿತು ಎಂಬುದೂ ಅರಿವಾಗದೆ, ಎಲ್ಲೋ ಕರಗಿಹೋಗುವ ಹಾಗೆ ಮುಗಿದಿತ್ತು ನರಸಪ್ಪನವರ ಬಾಳು.

ಅವರು ಜೀವಂತರಾಗಿದ್ದಾಗ, ಅವರ ಬಾಳಿಗೆ ಬಣ್ಣ ಕೊಟ್ಟ ಬಯಕೆಗಳು, ನಿರೀಕ್ಷೆಗಳು, ಕೋಪತಾಪಗಳು, ಆಸೆ ನಿರಾಶೆಗಳು–ಎಲ್ಲವನ್ನೂ, ಅವು ತಾವು ಹೋಗಲಿದ್ದ ಲೋಕಕ್ಕೆ ಒಯ್ಯಬಾರದ ಮೈಲಿಗೆಗಳು ಎಂಬಂತೆ, ಈ ಲೋಕದಲ್ಲಿಯೇ ಬದುಕಿದ್ದವರ ಪಾಲಿಗೆ ಬಿಟ್ಟುಕೊಟ್ಟು ತೆರಳಿದ್ದರು. ಆ ಬಿಟ್ಟುಕೊಡುವ ರೀತಿಯೂ ಅಷ್ಟೇ ವಿಶಿಷ್ಟವಾಗಿತ್ತು.

ತನಗೆ ಸಂಬಂಧವಿಲ್ಲದ ಯಾವುದೋ ಪಂಚಾಯತಿಯಲ್ಲಿ ಸಿಲುಕಿದ ಮಧ್ಯಸ್ಥಗಾರ, ವ್ಯವಹಾರ ಮುಗಿದ ಬಳಿಕ, 'ನನಗೆ ಯಾವ ಪಕ್ಷದ ಆಗೂ ಹೋಗೂ ಸಂಬಂಧವಿಲ್ಲ. ನಿಮ್ಮಿಬ್ಬರ ಮಾತು ಕೇಳಿದ್ದಾಯಿತು; ನಿಮಗೆ ಹೇಳಬೇಕಾದುದನ್ನು ಹೇಳಿಯಾಯಿತು.' ಎಂದು ಹೇಳಿ, ನಿರ್ಲಿಪ್ತಮನೋಭಾವದಿಂದ, ಬದಿಗಿರಿಸಿದ ತನ್ನ ವಸ್ತ್ರವನ್ನು, ಧೂಳು ಕೊಡವಿ ಹೆಗಲ ಮೇಲೆ ಹಾಕಿಕೊಂಡು ಹೋಗುವ ಹಾಗೆ, ಬದುಕಿನಲ್ಲಿ ತಮ್ಮನ್ನು ಆಡಿಸಿದ ಲೋಭ ಮೋಹಗಳನ್ನೆಲ್ಲವನ್ನೂ, ಪಯಣದ ಗಳಿಗೆಯಲ್ಲಿ ಮರೆತು, ಎಲ್ಲರಿಗೂ ಹೇಳ

ಬೇಕಾದುದನ್ನು ಹೇಳಿ, ತಾವು ಯಾರಿಗೂ ಕೊರಗಾಗದೆ, ಯಾರಕೊರಗನ್ನೂ ತಾವೂ ಹಚ್ಚಿಕೊಳ್ಳದೆ, ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗುವವರ ಹಾಗೆ ಹೊರಟು ಹೋಗಿದ್ದರು ನರಸಪ್ಪ.

ತಂದೆಯು ಸಾವನ್ನು ಕಂಡು ವೆಂಕಟದಾಸಪ್ಪನವರಿಗೆ, ಹಳ್ಳಿಯ ನಾಟಕದಲ್ಲಿ 'ರಾಜಾ' ಪಾರ್ಟು ಹಾಕುತ್ತಿದ್ದ ಬೋರಯ್ಯ ಒಂದು ದಿನ ಹೇಳಿದ ಮಾತು ನೆನಪಾಗಿತ್ತು—

* * *

ಆ ದಿನ ಹಳ್ಳಿಯಲ್ಲಿ 'ಹರಿಶ್ಚಂದ್ರ' ನಾಟಕ ಆಡಿದ್ದರು. 'ರಾಜಾ ಪಾರ್ಟು' ಬೋರಯ್ಯ ಹರಿಶ್ಚಂದ್ರನ ಪಾತ್ರ ಧರಿಸಿದ್ದ. ಅಯೋಧ್ಯಾಧಿಪತಿಯಾದ ಹರಿಶ್ಚಂದ್ರ ಚಕ್ರವರ್ತಿ, ವಿಶ್ವಾಮಿತ್ರ ಮಹರ್ಷಿಯ ಛಲದ ದಾಳವಾಗಿ, ಮಸಣಗಾಹಿಯಾಗಿ, ತನ್ನ ಮಗನನ್ನೇ ಸುಡಲು ಬಂದ ಮಡದಿಯ ಕತ್ತನ್ನೇ ಕತ್ತರಿಸಲು ಸಿದ್ಧನಾದ ದೃಶ್ಯ ಆಗತಾನೇ ಮುಗಿದಿತ್ತು.

ಆ ದಿನ ಬೋರಯ್ಯನಿಗೆ ಏನೋ ಆವೇಶ ಬಂದು, ಅವನ ಪಾತ್ರಕ್ಕೆ ಹಿಂದೆಂದೂ ಇಲ್ಲದ 'ರಂಗು' ಏರಿತ್ತು. ಅವನ ಅಭಿನಯವನ್ನು ಕಂಡ ಗ್ರಾಮದ ಪ್ರೇಕ್ಷಕವೃಂದವೆಲ್ಲಾ ಕಣ್ಣೀರಿಟ್ಟಿತ್ತು. ಬೋರಯ್ಯ ತಾನೂ ಕಣ್ಣೀರು ಮಿಡಿದಿದ್ದ ಆ ಪಾತ್ರವನ್ನು ಅಭಿನಯಿಸುವಾಗ. ರಂಗಭೂಮಿಯ ಮೇಲಿದ್ದ ನಟ, ಅವನ ಮುಂದಿದ್ದ ಪ್ರೇಕ್ಷಕ ಸಮೂಹ, ಭಾವದ ಹೊಳೆಯಲ್ಲಿ ಕರಗಿ ಹೋಗುವುದಿರಲಿ, 'ಇದು ನಾಟಕ' ಎಂದು ಹೆಜ್ಜೆ ಹೆಜ್ಜೆಗೂ ಮನವರಿಕೆಯಾಗುತ್ತಿದ್ದ, ತೆರೆಯ ಹಿಂದಿನ 'ಬಣ್ಣದ ಮನೆ'ಯಲ್ಲಿದ್ದ 'ಕಂಪನಿ ಜನ'ರೂ 'ಅಯ್ಯೋ' ಎಂದು ಅತ್ತಿದ್ದರು.

ಪಾರ್ಶ್ವದಲ್ಲಿ ಕುಳಿತು ನಾಟಕವನ್ನು ನೋಡುತ್ತಿದ್ದ ವೆಂಕಟದಾಸಪ್ಪನವರ ಎದೆಯೂ ಉಕ್ಕಿಹರಿದ ಅಶ್ರುವರ್ಷದಿಂದ ತೊಯ್ದುಹೋಗಿತ್ತು. ಎಂತಲೇ ದೃಶ್ಯಾಂತದ ತೆರೆ ಬಿದ್ದು, ಬೋರಯ್ಯ ಒಳಗೆ ಬಂದಾಗ, ಅವನನ್ನು ಬಿಗಿದಪ್ಪಿ—

'ಬೋರಾ, ಇವತ್ತು ನನಗೆ ಹರಿಶ್ಚಂದ್ರನ ಸಾಕ್ಷಾತ್ಕಾರ ಮಾಡಿಸಿ ಬಿಟ್ಟೆ ಕಣೋ, ಭೇಷ್'

—ಎಂದು ಹೊಗಳಿದರು.

"ಎಂಗಾ ಬುದ್ಧಿ?"

—ವೆಂಕಟದಾಸಪ್ಪನವರ ಮೆಚ್ಚುಗೆಯ ಮಾತನ್ನು ನಂಬದವನಂತೆ ಕೇಳಿದ ಬೋರಯ್ಯ.

"ಸತ್ಯವಾಗಿ ಕಣೋ. ನನ್ನ ಮಾತು ನಂಬದೇ ಹೋದ್ರೆ, ನಿನಗೇನು ಬೇಕು ಕೇಳು, ಕೊಡ್ತೀನಿ".

"ಕೇಳಿದ್ದು ಕೊಡೋದಲ್ಲಾ ಇನ್ಯಾವತ್ತಾದ್ರೂ ಆಗ್ಲಿ. ಇವತ್ತು ನನ್ನ ವೇಷ ನಿಮಗಷ್ಟು 'ಖುಷಿ' ಆಗಿದ್ರೆ 'ಎಲ್ಲ ಬುಡ್ಡಿ'ಗೆ ಅಪ್ಪಣೆ ಮಾಡ್ಬಿಡಿ, ಪದ ಹೇಳಿ ಹೇಳಿ ಗಂಟಲು ಭಾಳ ಘಣಿದ್ಹೋಗಿದೆ."

—ಎಂದು ಕೈಮುಗಿದ ಬೋರಯ್ಯ.

"ಥೂ ಕಳ್ಳಬಡ್ಡಿಮಗನೇ! ಏನಾದ್ರೂ ಕೇಳು ಅಂದ್ರೆ ಇಂಥಾದ್ದೇನೋ ಕೇಳೋದು. ನೀನು ಹರಿಶ್ಚಂದ್ರನ ವೇಷ ಹಾಕಿದ್ದಕ್ಕೆ ಸಾರ್ಥಕ ಆಯ್ತು!'

—ಎಂದರು ವೆಂಕಟದಾಸಪ್ಪ, ನಗು—ಅಸಮಾಧಾನ ಬೆರೆತ ಧ್ವನಿಯಲ್ಲಿ.

"ಅದ್ಯಾಕೆ ಬುದ್ಧಿ ಹಂಗನ್ತೀರಾ? ನೀವು ಕೇಳು ಅಂದದ್ದಕ್ಕೆ ಕೇಳಿದ್ದೆ ತಪ್ಪೆ? ನೀವು ಕೇಳಿದ್ದು ನಂಗೆ ಬೇಕಾದ್ದು ಕೇಳೋ ಅಂತ್ಲೋ? ನಿಮ್ಗೆ ಬೇಕಾದ್ದು ಕೇಳೋ ಅಂತ್ಲೋ? ".

'ನಿನಗೆ ಬೇಕಾದ್ದನ್ನೇ ಕೇಳು ಅಂದದ್ದು.

'ಸರಿ ಮತ್ತೆ. ನಂಗೆ ಬೇಕಾದ್ದೇ ಕೇಳ್ದೆ. ಅದು ಬಿಟ್ಟು, ಹರಿಶ್ಚಂದ್ರನ ಯಾಸ ಹಾಕ್ಕೊಂಡು ಸುಳ್ಳು ಹೇಳು ಅಂತೀರಾ?'

—ಎಂದ ಬೋರಯ್ಯ ನಗುತ್ತ.

ಅವನ ಮಾದದ ಜಾಣ್ಮೆ ವೆಂಕಟದಾಸಪ್ಪನವರಿಗೂ ಮೆಚ್ಚಿಕೆಯಾಯಿತು. ಆ ಮೆಚ್ಚಿಕೆಯಲ್ಲಿ ನಗುತ್ತಾ—

'ಅದಲ್ಲಾ ಕಣೋ ನಾನು ಹೇಳಿದ್ದು ಮಹತ್ಮಾಳೆ. ಹರಿಶ್ಚಂದ್ರನ ಪಾತ್ರ ಅಷ್ಟು ತನ್ಮಯನಾಗಿ ಕಣ್ಣೀರು ಹಾಕುತ್ತಾ ಅಭಿನಯಿಸಿದೆಯಲ್ಲ. ಹಾಗಿರೋವಾಗ ಆ ಹಾಳು ಹೆಂಡದ ನೆನಪೆಲ್ಲಿತ್ತು ಅಂತ ಕೇಳಿದ್ದು".

'ಅದಾ—'

"ಹೂಂ, ಅದೇ.'

"ಅಟ್ಟದ ಮ್ಯಾಲಿದ್ದಾಗ ನಾನು ಹರಿಶ್ಚಂದ್ರಾಂತ ನೆಪ್ಪಿತ್ತು, ಬಣ್ಣದ ಮನೆಗೆ ಬಂದಾಗ ಮರತ್ಹೋಯ್ತು."

"ಹಾಗೆಲ್ಲಾದ್ರೂ ಮಾಡ್ತಾರೇನೋ, ಮೂರ್ಖ. ನಾವು ನಾಟಕ ಆಡೋದು ಯಾಕೋ?'

"ನಾನೇನೂ ಅರೀದವನಲ್ಲ. ನೀವೇ ಹೇಳಿ ಬುದ್ಧಿ–ಆಟ ಯಾಕಾಡೋದು?"

'ಜನ ನಾಟಕ ನೋಡಿ–ರಾಮನ ಹಾಗೆ ಪಿತೃವಾಕ್ಯ ಪರಿಪಾಲಕರಾಗ ಬೇಕು; ಹರಿಶ್ಚಂದ್ರನ ಹಾಗೆ ಸತ್ಯಸಂಧರಾಗಬೇಕು; ಸೀತಾಮಾತೆ, ಚಂದ್ರಮತಿ ದೇವಿಯರ ಹಾಗೆ ಪತಿವ್ರತೆಯರು, ಪುಣ್ಯಶೀಲೆಯರು ಆಗಬೇಕು ಎಂದು. ಇಲ್ದೆಹೋದ್ರೆ–ನಾವು ತಿಂಗಳುಗಟ್ಟಲೆ ಶ್ರಮಪಟ್ಟು ನಾಟಕ ಕಲಿತದ್ದೇನು ಸಾರ್ಥಕ–ನೋಡ್ದಾಗ ಮಾತ್ರ ಕಣ್ಣೀರಿಟ್ಟು ಮನೆಗೆ ಹೋಗಿ ಮರೆತಂಬಿಟ್ರೆ? ನೀನು ಕುಡಿಯೋ ಹೆಂಡ, ನಾಟಕ ಎರಡೂ ಒಂದೇ ದರ್ಜೆಗೆ ಸೇರುತ್ತವೆ"

—ಎಂದು ನಾಟಕದ ಉದ್ದೇಶವನ್ನು ವಿವರಿಸಿ ಹೇಳಿದರು ವೆಂಕಟ ದಾಸಪ್ಪ.

'ಅದೆಲ್ಲಾ ಸರೀನೇ ಬುದ್ಧಿ. ಆದರೆ...'

'ಏನು ಆದರೆ...'

'ನೀವು ಹೇಳಿದ್ದು ನೋಡೋನಿಗಾಯ್ತು...'

'ಮತ್ತೆ...'

'ಆಡೋನಿಗೆ ಹೋದಾಕಿಲ್ಲ'.

'ಏಕೆ?'

'ಅಲ್ಲ ಬುದ್ಧಿ—ಇಲ್ಲಿ ನಾನು ದಂಶ್ಯಾಸನನ ವೇಷ ಹಾಕ್ದೇಂತ ಮನೇಗೆ ಹೋಗಿ, ಕಂಡೋರ ಹೆಂಡ್ರು ಮೈ ಮುಟ್ಟಿದರೆ ಆಗ್ತದಾ. ಬುದ್ಧಿ?. ಅಟ್ಟದ ಮಾತು, ಅಟ್ಟೇಲಿ ಆಡಿದ್ರೆ ಮನೆ ಹೆಂಡ್ರು ಕೈಗೆ ಬರಲು ತಗೋತಾರೆ. ಅದ್ಕೆ ಬುದ್ಧಿ, ಇಲ್ಲಿ ಮಾತು ಇಲ್ಲಿ, ಅಲ್ಲಿ ಮಾತು ಅಲ್ಲಿ—ನಿಗವಾಗಿರ್ಬೇಕು. ಬಣ್ಣ ವರಸ್ಕೋತಿದ್ದ ಹಾಗೆ ಆಟದ ಮಾತೆಲ್ಲ ಮರತು ಮನೆಗೆ ಹೋಗ್ಬೇಕು.'

—ಎಂದು ಪಾತ್ರಧಾರಿಯ ಜೀವನದರ್ಶನವನ್ನು ವೆಂಕಟದಾಸಪ್ಪನವರಿಗೆ ವಿವರಿಸಿದ್ದ ಬೋರಯ್ಯ.

ಆ ದಿನ, ಬೋರಯ್ಯ ಆ ಮಾತು ಹೇಳಿದಾಗ ವೆಂಕಟದಾಸಪ್ಪ—

'ಅಂತೂ ನೀನು ನನಗೂ ವೇದಾಂತ ಹೇಳೋ ಹಾಗೆ ಆದೆ.'

—ಎಂದು ಹೇಳಿ ನಕ್ಕು, ಆ ಮಾತನ್ನು ಮರೆತು ಬಿಟ್ಟಿದ್ದರು.

ಆದರೆ, ನರಸಪ್ಪನವರ ಸಾವು, ಮತ್ತೆ ವೆಂಕಟದಾಸಪ್ಪನವರು ಆ ಮಾತನ್ನು ಜ್ಞಾಪಿಸಿಕೊಳ್ಳುವಂತೆ ಮಾಡಿತ್ತು. ಅಷ್ಟೇ ಅಲ್ಲ, ಬೋರಯ್ಯ ವಿನೋದವಾಗಿ ಆಡಿದ ಹಾಸ್ಯದ ಮಾತಿನಲ್ಲಿ ಹುದುಗಿದ ಸತ್ಯದ ಚಿತ್ರನ್ನು ಅವರ ಕಣ್ಣೆದಿರು ಬಿಚ್ಚಿ ತೋರಿಸಿತ್ತು.

* * *

'ಬಣ್ಣ ಬರೆಸಿಕೊಂಡು, 'ದಿರಸು' ತೆಗೆದಿರಿಸಿ ಮನೆಗೆ ಹೋಗುತ್ತಿದ್ದ ಹಾಗೇ, ತಾನು ರಂಗಭೂಮಿಯಲ್ಲಿ ಅಭಿನಯಿಸಿದ ಪಾತ್ರವನ್ನು ನಟಮರೆತು ಬಿಡಬೇಕು' ಎಂದು ಹೇಳಿದ ಹಾಗೇ ನರಸಪ್ಪನವರು, ಈ ಲೋಕದಮಾತು ಕಥೆ, ಭಾವ ರಾಗಗಳಿಗೆ, ಪರಲೋಕದಲ್ಲಿ ಎಡೆಯಿಲ್ಲ ಎಂಬಂತೆ ತಮ್ಮ ಬಾಳನ್ನು ಮುಗಿಸಿದ್ದರು.

ದುರಂತ ಘಟನೆಗಳಿಂದ ಕಿಕ್ಕಿರಿದ ನಾಟಕವೂ, ಅಂತ್ಯದಲ್ಲಿ ಮಂಗಳಾ ಚರಣೆಯಿಂದ ಮುಕ್ತಾಯವಾಗುವಂತೆ, ನಡುಗಾಲದಲ್ಲಿ, ಕ್ರೋಧ, ದ್ವೇಷ, ಛಲಗಳಿಗೆ ಬಲಿಯಾದ ನರಸಪ್ಪನವರ ಬಾಳು, ಅಂತ್ಯದಲ್ಲಿ ಪರಮಶಾಂತಿ, ವಿಶ್ವವ್ಯಾಪೀ ಸ್ನೇಹದಲ್ಲಿ ಮುಕ್ತಾಯವನ್ನು ಕಂಡಿತ್ತು.

ಆ ಸಾವು ವೆಂಕಟದಾಸಪ್ಪನವರ ಕಣ್ಣು ತೆರೆಸಿತ್ತು.

ಆ ಸಾವಿನಿಂದ ವೆಂಕಟದಾಸಪ್ಪನವರಿಗೆ ನಾಟಕ, ಜೀವನ ಎರಡರ ಅಂತರಾರ್ಥ ಅರಿವಾಗಿತ್ತು.

ಆ ಅರಿವಿನೊಂದಿಗೇ ತನ್ನ ತಂದೆಯ ಹಿರಿತನದ ಅರಿವೂ ಮೂಡಿತ್ತು.

'ಎಷ್ಟು ದೊಡ್ಡ ಜೀವ ಅವರು. ತೋರಿಕೆಗೆ ಮಹಾ ಕ್ರೋಧಪರವಶ ರಂತೆ, ಛಲಗಾರರಂತೆ, ಮಹಾ ನಿಷ್ಠುರಿಯಂತೆ ಕಂಡ ಅವರ ಹೃದಯಾಂತ ರಾಳದಲ್ಲಿ ಎಂಥ ಕುಸುಮ ಕೋಮಲತೆ ಹುದುಗಿತ್ತು. ಎಲ್ಲರೂ ತಮ್ಮ ಹಗೆಗಳೇನೋ ಎಂಬಂತೆ ವರ್ತಿಸಿದ ಅವರ ಹೃದಯದಲ್ಲಿ ಎಂಥ ಅಮೃತ ಸ್ನೇಹದ ಸೌರಭವಿತ್ತು. ಎಲ್ಲರೂ ಅಗ್ನಿಕುಂಭವೆಂದೇ ಕರೆದ ಆ ಜೀವದ

ಜೀವದಲ್ಲಿದ್ದ ನವನೀತದ ಮೃದುತೆ, ಆ 'ಘಟ' ಒಡೆಯುವವರೆಗೂ ಯಾರಿಗೂ ಕಾಣಲಿಲ್ಲವಲ್ಲ...'

'ಯಾರಿಗೂ ಕಾಣದಿದ್ದರೆ ಹೋಗಲಿ–ತಾನು, ಅವರ ಮಗ, ಆ ಜೀವ.ದ ಬಳ್ಳಿಯಲ್ಲೇ ಅರಳಿದ ಜೀವ–ತಾನೂ ಅವರನ್ನು ಅರ್ಥಮಾಡಿಕೊಳ್ಳಲಿಲ್ಲವಲ್ಲ.

'ಅರ್ಥ ಮಾಡಿಕೊಳ್ಳುವುದಿರಲಿ, ಅರ್ಥ ಮಾಡಿಕೊಳ್ಳುವ ಪ್ರಯತ್ನ ವನ್ನೂ ಮಾಡಿರಲಿಲ್ಲ.

'ತದ್ವಿರುದ್ಧವಾಗಿ, ಅವರ ಹಗೆಯಂತೆ, ಬದ್ಧವೈರಿಯಂತೆ, ಅವರ ಹಟಕ್ಕೆ ವಿರುದ್ಧವಾಗಿ ತನ್ನ ಛಲವನ್ನೇ ಮೆರೆಸಿದ್ದ–ನಿಮಗಿಂತ ನನ್ನದೇನು ಸಣ್ಣ ಕೊಡೇ ಎಂಬಂತೆ.

'ತಾನು ಮಾಡಿದುದು, ತನ್ನಿಂದಾದುದು, ಯಾರಾದರೂ ಹಳಿಯುವಂಥ ಕೆಲಸ ಎಂದು ತನಗೇ ತಿಳಿದಿದ್ದರೂ, ಅವರು ಮಾತು ಬಿಟ್ಟಾಗ, ತಾನೂ ಅವರೊಂದಿಗೆ ಮಾತನಾಡುವುದನ್ನು ಬಿಟ್ಟಿದ್ದ—

'ಮಾತಿಗೆ ಮಾತು, ಸಿಟ್ಟಿಗೆ ಸಿಟ್ಟು, ಹಟಕ್ಕೆ ಹಟ—

'ನಿಜ—'ನರಸಪ್ಪನವರು ಸತ್ಯ ದ್ವೇಷಿಗಳು, ಸ್ನೇಹ ಪ್ರೇಮಗಳನ್ನು ಅರ್ಥಮಾಡಿಕೊಳ್ಳಲಾಗದಂಥ ಅಂಧಮೂರ್ಖರು. ತಾನು ಮಾತ್ರ ಹಾಗಲ್ಲ ಮಹಾಸತ್ಯಪ್ರಿಯ, ಸ್ನೇಹಕ್ಕೆ, ನಂಬಿಕೆಗೆ ಪ್ರೇಮಕ್ಕೆ ಎಂದೂ ದ್ರೋಹ ಬಗೆಯದ ಮಹಾತ್ಮ' ಎಂದು ಲೋಕಕ್ಕೆ ಸಾರಿ ಹೇಳುವ ರೀತಿಯಲ್ಲಿ ವರ್ತಿಸಿದ್ದ.

'ತನ್ನ ಇಂಥ ಶತಮೂರ್ಖ ವರ್ತನೆಯಿಂದ ನರಸಪ್ಪನವರ ಹೃದಯಕ್ಕೆ ಎಷ್ಟು ನೋವಾಗಿರಬೇಕು, ಕಣ್ಣೆದುರಿಗೆ ಇದ್ದೊಬ್ಬ ಮಗನೂ ಕಣ್ಣು ಉರಿ ಯಾಗಿ, ಎಂಥ ಹಾಲಹಲವನ್ನು ಅನಿವಾರ್ಯವಾಗಿ ಉಣ್ಣುತ್ತ ನವೆದಿರಬೇಕು ಆ ತಂದೆ ಹೃದಯ.

'ಅವರು ಇದ್ದಷ್ಟು ದಿನ—

'ಒಂದು ದಿನ, ಒಂದೇ ಒಂದು ನಿಮಿಷವಾದರೂ ತಾನು ಆ ಜೀವವನ್ನು ಅರ್ಥಮಾಡಿಕೊಳ್ಳಲು ಯತ್ನಿಸಿರಲಿಲ್ಲ.

'ಒಂದು ದಿನ, ಒಂದೇ ಒಂದು ದಿನವಾದರೂ, ಸ್ನೇಹಧರ್ಮಕ್ಕೆ ಚ್ಯುತಿ ಬರದಂತೆ ನಡೆದುಕೊಳ್ಳುವಷ್ಟೇ, ಪುತ್ರಧರ್ಮಕ್ಕೂ ಚ್ಯುತಿಬರದಂತೆ ನಡೆದು

ಕೊಳ್ಳಬೇಕು ಎಂದು ಯೋಚಿಸಿ, ತಂದೆಯ ಹೃದಯದಲ್ಲಿದ್ದ ಅಭಿಮಾನ ಜ್ಯೋತಿಗೆ ತನ್ನ ಪ್ರೇಮತೈಲವನ್ನೆರೆಯುವ ಪ್ರಯತ್ನ ಮಾಡಿರಲಿಲ್ಲ.

'ಊಹೂ—ಅವರಿಗೆ ಸಂತೋಷ ಕೊಡುವುದಕ್ಕಿಂತ ಹೆಚ್ಚಿಗೆ, ಅವರನ್ನು ಕೊರಗಿಸುವುದಕ್ಕೆ ಹುಟ್ಟಿದವನಂತೆ ನಡೆದುಕೊಂಡಿದ್ದ ಅಂಥ ತನ್ನಲ್ಲೂ ಅವರು ಕೊನೆಗಳಿಗೆಯಲ್ಲಿ ಎಂಥ ಭಾವನೆ ವ್ಯಕ್ತಪಡಿಸಿದರು. ಕೊನೆಗಾಲದಲ್ಲಿ ತನ್ನ ಅಪರಾಧವನ್ನು ಹೆಗಲ ಮೇಲೇ ಹಾಕಿಕೊಂಡು—

'ದಾಸಣ್ಣ ಇವತ್ತಿನವರೆಗೂ ನಿನ್ನ ಕೈಲಿ ಮಾತಾಡಲಿಲ್ಲ. ನೊಂದು ಕೊಂಡೆಯೇನೋ. ಆದರೆ ಆ ಶಿಕ್ಷೆ ಅನುಭವಿಸಬೇಕೆಂದು ನನಗೆ ಅಮ್ಮನ 'ಅಪ್ಪಣೆ' ಯಾಗಿತ್ತು'—

ಎಂದೇ ಹೇಳಿದರು.

'ಅವರು —ಎಂಥ ಹಿರಿಯ ಜೀವ'.

ಆ ಭಾವನೆಯೊಂದಿಗೇ, ಜೊತೆಜೊತೆಯಾಗಿ, ಅವಳಿ-ಜವಳಿಯಾಗಿ ಮತ್ತೊಂದು ಮಾತೂ ಮಿಡಿಯಲಾರಂಭಿಸಿತು, ವೆಂಕಟದಾಸಪ್ಪನವರ ಹೃದಯದಲ್ಲಿ, ತನ್ನ ತಂದೆಯ ಹಿರಿಮೆ ಅರಿವಾದಾಗ.

'ಅವರು ಹಿರಿಯರು. ಮಹಾಚೈತನ್ಯ'

'ನಿಜ—ನಾನು?'

'ಅವರು ಎಷ್ಟು ಹಿರಿಯರೊ ಅಷ್ಟು ಅಧಮ, ನೀಚ ಪರಮ ನೀಚ. ಆ ಜೀವಕ್ಕೆ ಕೊನೆಗಳಿಗೆಯುವರೆಗೂ ಪುತ್ರಸ್ನೇಹದ ದರ್ಶನ ಮಾಡಿಸದ ಪಾಪಿ. ಕರ್ತವ್ಯ ಭ್ರಷ್ಟ.'

ತಮ್ಮ ತಂದೆಯ ಹಿರಿತನದ ಅರಿವಾದ ಹಾಗೇ, ಅದರೊಂದಿಗೆ ಈ ಆತ್ಮಖಂಡನೆಯ ಮಾತಿನ ಮೊಳಗೂ ಉಗ್ರವಾಗಿ, ವೆಂಕಟದಾಸಪ್ಪನವರು ಹಣ್ಣಾಗಿ ಹೋದರು.

ದಿನದಿನಕ್ಕೆ ಅವರ ಹೃದಯದಲ್ಲಿ 'ತಾನು ಮಾಡಬಾರದ ಕೆಲಸ ಮಾಡಿದ ಪಾಪಿ' ಎಂಬ ಭಾವನೆಯೇ ಬೆಳೆಯತೊಡಗಿತು.

ತನ್ನ ತಂದೆ ಬಾಳಿನಲ್ಲಿ ಮೆರೆದ ಹಿರಿಮೆಯನ್ನು ಮೆಚ್ಚುತ್ತ ಕುಳಿತಾಗ ಸಹಜವಾಗಿ ಉಬ್ಬಿದ ಹೃದಯ, ಈ ಪ್ರತಿಭಾವನೆ ಮಾಡುತ್ತಿದ್ದ ಹಾಗೆ ಕುಗ್ಗಿ ಪಾತಾಳಕ್ಕಿಳಿದು ಹೋಗುವುದು.

ಆ ಕಗ್ಗತ್ತಲಿನಲ್ಲಿ ತೊಳಲುತ್ತ, ತೊಳಲುತ್ತ. ಅವರ ಬುದ್ಧಿ—
'ನಾನೇ ಅವರ ಸಾವಿಗೆ ಕಾರಣ'.
—ಎಂಬ ಕೊನೆಗೆ ಮುಟ್ಟುವುದು.

'ನಿಜ. ನಾನೇ ಅವರನ್ನು ಇದ್ದಷ್ಟು ದಿನ ಕೊರಗಿಸಿ, ಕೊರಗಿಸಿ ಅವರು ಅಷ್ಟು ಬೇಗ ಸಾಯುವಂತೆ ಮಾಡಿದೆ. ಹಾಗಲ್ಲದೆ ಮೊದಲೇ ವಿಹಿತವಾಗಿ ನಡೆದುಕೊಂಡಿದ್ದರೆ, ಅವರ ಹೃದಯಕ್ಕೆ ಹರ್ಷವನ್ನು ನೀಡಿದ್ದರೆ ಅವರು ಇಷ್ಟು ಬೇಗ ಸಾಯುತ್ತಿರಲಿಲ್ಲವೇನೋ. ಇನ್ನೂ ಅಷ್ಟು ದಿನ ಬದುಕಿ ಹರಸುತ್ತಿದ್ದರೇನೋ.'

—ಎಂದೇ ಅನಿಸುತ್ತಿತ್ತು ವೆಂಕಟದಾಸಪ್ಪನವರಿಗೆ.

ಆ ಭಾವನೆ ಮೂಡಿದ ಗಳಿಗೆಯಿಂದ ವೆಂಕಟದಾಸಪ್ಪನವರು ತಮ್ಮನ್ನು ತಾವೇ 'ಪಿತೃಘಾತಕಿ' ಎಂದು ಹಳಿದುಕೊಳ್ಳಲಾರಂಭಿಸಿದರು.

ಅಂದಿನಿಂದ ಅವರಿಗೆ ತಮ್ಮ ಬಾಳು ಹೊರಲಾಗದ ಅಸಹ್ಯ ಹೊರೆ ಯಾಯಿತು. ಮನೆಯಲ್ಲಿ, ಮನೆಯ ಹೊರಗೆ, ಯಾರೊಬ್ಬರಿಗೂ ಮುಖ ತೋರಿಸಲು ಸಾಧ್ಯವಾಗದಂತಾಯಿತು.

ತಮ್ಮನ್ನು ತಾವೇ ಹಳಿದುಕೊಂಡ ಅವರಿಗೆ, ಇಡೀ ಜಗತ್ತೆ ತಮ್ಮನ್ನು ಹಳಿಯುತ್ತಿರುವಂತೆ ತೋರಿ, ಯಾರೊಂದಿಗೂ ಮಾತಾಡದೆ, ಯಾರಿಗೂ ಹೆಚ್ಚಾಗಿ ಮುಖ ತೋರಿಸದೆ, ಎಲ್ಲರಿಗೂ ಮುಖ ತಪ್ಪಿಸಿ, ಕಣ್ಣು ತಪ್ಪಿಸಿ ಇರತೊಡಗಿದರು.

ಹಗಲಿನಿಂದ ಸಂಜೆಯುವರೆಗೂ, ತಂದೆಯ ದಿವಸಕಾಲದ ಕರ್ಮವನ್ನು ನೆರವೇರಿಸಲು, ಅವರು ಮನೆಯಲ್ಲೇ ಇರುವುದು ಅಗತ್ಯವಾಗಿತ್ತು. ಹಾಗೆ ಅನಿವಾರ್ಯವಾಗಿ ಇರಲೇಬೇಕಾಗಿ ಬಂದಾಗ, ಯಾರೊಂದಿಗೂ ಹೆಚ್ಚಾಗಿ ಬೆರೆಯದೆ ಇದ್ದು, ಮನೆಯ ಕೆಲಸಕಾರ್ಯಗಳು ತೀರುತ್ತಿದ್ದ ಹಾಗೇ, ದೇವೀ ಕೊಳದ ತೋಪಿಗೆ ಹೋಗಿ ಒಂಟಿಯಾಗಿ, ಕೊಳದ ಮೆಟ್ಟಲುಗಳ ಮೇಲೆ ಕಂಬನಿಗರೆಯುತ್ತಾ ಕುಳಿತು ಬಿಡುತ್ತಿದ್ದರು—

ತಮ್ಮನ್ನು ತಾವೇ ಹಳಿದು ಹಿಯ್ಯಾಳಿಸಿಕೊಳ್ಳುತ್ತ.

ಯಾರ ಮುಂದೂ ಹೇಳಿಕೊಳ್ಳಲಾಗದ ಈ ಕೊರಗಿನಲ್ಲಿ ದಿನದಿನಕ್ಕೆ ಸವೆಯುತೊಡಗಿದರು ವೆಂಕಟದಾಸಪ್ಪ.

## ೨

ವೆಂಕಟದಾಸಪ್ಪನವರ ಹೃದಯದಲ್ಲಿ ಮಹಾವ್ಯಥೆಯು ಅಗ್ನಿತಾಂಡವ ನಡೆಸುತ್ತಿದ್ದ ನರಸಪ್ಪನವರ ಸಾವಿನ ದುಃಖ, ಆ ಮನೆಯಲ್ಲಿದ್ದವರೆಲ್ಲರನ್ನೂ ಅಷ್ಟೇ ತೀವ್ರವಾದ ದುಃಖದ ಸುಳಿಗೆ ಸಿಕ್ಕಿಸಿತ್ತು.

ನರಸಪ್ಪನವರ ಬಳಿಕ ಮನೆಗೆ ಹಿರಿಯರಾದ ಲಕ್ಷ್ಮೀದೇವಮ್ಮ ಪತಿ ಮರಣದ ಪ್ರಚಂಡದುಃಖದಲ್ಲಿ ಜಗತ್ತಿನ ಪಾಲಿಗೆ ಕುರುಡಾಗಿ ಹೋಗಿದ್ದರು. ಅವರಿಗೆ ಜಗತ್ತೇ ಬೇಕಿರಲಿಲ್ಲ. ಒಂದುಗಳಿಗೆ ಸುಮ್ಮನಿದ್ದವರು, ಮರುಗಳಿಗೆ ಗಂಡನನ್ನು ನೆನೆಸಿಕೊಂಡು, ಹುಚ್ಚಾಗಿ ಅಳಲಾರಂಭಿಸುತ್ತಿದ್ದರು.

ನರಸಪ್ಪನವರು, ಇಹಲೋಕ ತ್ಯಜಿಸಿ ನಾಲ್ಕಾರು ದಿನವಾದರೂ, ಅವರ ದುಃಖದ ನೆರೆ ಇಳಿದಿರಲಿಲ್ಲ. ಅಷ್ಟೇ ಅಲ್ಲ, ಆ ದುಃಖ, ಯಾವ ಗಳಿಗೆಯಲ್ಲಿ ಅವರಿಂದ ಏನು ಮಾಡಿಸೀತೋ ಎಂದು ಉಳಿದವರಿಗೂ ಭಯಕ್ಕೆ ಕಾರಣವಾಗಿತ್ತು.

ಒಂದು ಕಡೆ ನರಸಪ್ಪನವರ ಸಾವು—ಇನ್ನೊಂದು ಕಡೆ ಲಕ್ಷ್ಮೀದೇವಮ್ಮನವರ ದುಃಖದ ಈ ವಿಪರೀತಾವಸ್ಥೆ—

ಇವೆರಡರ ನಡುವೆ ಸಿಕ್ಕಿದ ಚಂದ್ರಶೇಖರ, ರಾಜೇಶ್ವರಿಯರಿಗೆ, ಬೇರಾವುದರ ಕಡೆಗೂ ಕಣ್ಣು ಹಾಯಿಸಲೂ ಅವಕಾಶವಿರಲಿಲ್ಲ.

ಎಂತಲೇ ಈ ಸ್ಥಿತಿಯಲ್ಲಿ ಅವರು ವೆಂಕಟದಾಸಪ್ಪನವರ ಅವಸ್ಥೆಯನ್ನು ಗಮನಿಸಲಿಲ್ಲ.

ಮೊದಲು ಅದನ್ನು ಕಂಡುಕೊಂಡವಳು, ವೆಂಕಟದಾಸಪ್ಪನವರ ಅತ್ತೆ ವೆಂಕಮ್ಮ.

ವೆಂಕಮ್ಮ ಮೊದಲಿನಿಂದಲೂ ಒಂದಲ್ಲ ಒಂದು ರೀತಿಯ ಭಯದಲ್ಲಿ ಬೆಳೆದಾಕೆ. ಸಂಸಾರದ ಹೊಣೆಗಾರಿಕೆಯನ್ನು ಹೊರಲು ಸಿದ್ಧವಿಲ್ಲದ ಗಂಡನನ್ನು ಕಟ್ಟಿಕೊಂಡು, ಹೆಣ್ಣುಮಕ್ಕಳ ತಾಯಾದ ಆಕೆ, ಸದಾ, ಯಾರ ಕಣ್ಣು ಏನು ನೋಡುವುದೋ, ಯಾರ ನಾಲಿಗೆ ಏನು ನುಡಿಯುವುದೋ ಎಂದೇ ಚಿಂತಿಸುತ್ತಿದ್ದಳು.

ಬದುಕನ್ನು ಈ ಭೀತಿ ಕೋಣದಿಂದಲೇ ನೋಡುವುದು ಅಭ್ಯಾಸವಾದ ಆಕೆಗೆ, ನರಸಪ್ಪನವರ ಸಾವು ದುಃಖಕ್ಕೆ ಕಾರಣವಾದಂತೆಯೇ ಭೀತಿಗೂ ಕಾರಣವಾಗಿತ್ತು.

ಆಕೆಯದು—ಲೋಕಾಪವಾದದ ಭೀತಿ.

ಮದುವೆಯಾದ ಮೊದಲಿನಲ್ಲೇ, ತನ್ನ ಮಗಳು ಗಂಡನ ಮನೆಗೆ ಕಾಲಿಡುತ್ತಿದ್ದ ಹಾಗೇ ನರಸಪ್ಪನವರು ತೀರಿಕೊಂಡದನ್ನು ಕಂಡು, ವೆಂಕಮ್ಮ ನಿಗೆ ಮನೆಯವರೋ, ಊರಿನ ಜನವೋ, ಎಲ್ಲಿ—

'ಎಲ್ಲೋ ಕರಿಗಾಲು' ಹುಡುಗೀನ ಕಟ್ಟಿಕೊಂಡು ಬಂದರು. ಅದಕ್ಕೇ ಆ ಹುಡುಗಿ ಮನೆಗೆ ಕಾಲಿಡುತ್ತಿದ್ದ ಹಾಗೇ ಮಾವನನ್ನೇ ತಿಂದುಕೊಂಡಳು.'

—ಎಂದು ಆಡುತ್ತಾರೋ ಎಂಬ ಭಯ ಆಕೆಯ ಹೃದಯವನ್ನು ಹೊಕ್ಕು, ಆಕೆಯ ಬದುಕನ್ನೇ ಅಲ್ಲಾಡಿಸುತ್ತಿತ್ತು.

'ಭಗವಂತಾ! ಹೆಣ್ಣು ಹಡೆದ ತಪ್ಪಿಗೆ ತನ್ನ ಬೇಕಾದ್ರೆ ಬಲಿ ತಗೋ ಆದ್ರೆ ಅಂಥ ಮಾತು ಮಾತ್ರ ಕೇಳೋ ಅವಸ್ಥೆ ತಂದಿಡಬೇಡ.'

—ಎಂದು ದಿನವೂ ಒಳಗೊಳಗೇ ತಪಿಸುತ್ತಿದ್ದಳು.

ತೋರಿಕೆಗೆ ಬಾಯಾಳಿಯಾಗಿ ಕಂಡರೂ ಸಹಜವಾಗಿ ಮೃದುಸ್ವಭಾವ ದಾಕೆಯಾದ ವೆಂಕಮ್ಮನಿಗೆ ಆ ದುಃಖ ಭೀತಿಗಳೇ ಸಾಕಾಗಿತ್ತು—ಬಳಲಿ ಬೆಂಡಾಗಲು.

ಅದರೊಂದಿಗೆ ದಿನದಿನಕ್ಕೆ ಅಳಿಯ ಬಡವಾಗುತ್ತಿರುವುದರ ಕೊರಗೂ ಸೇರಿತು.

ದಿನದಿನಕ್ಕೆ ದುಃಖದಗ್ಧರಾಗಿ, ಬಿಸಲಿಗೆ ಬಿದ್ದ ಎಳೆ ಬಾಳೆಯ ಎಲೆ ಯಂತಾದ ವೆಂಕಟಸುಬ್ಬಯ್ಯನವರನ್ನು ನೋಡಿದಾಗ, ಒಮ್ಮೊಮ್ಮೆ ಆಕೆಗೆ ಏನೋ ಭಯವಾಗುತ್ತಿತ್ತು.

'ಏನು ದುಃಖವೋ, ಏನು ಕೊರಗೋ—ದಿನದಿನಕ್ಕೆ ಹೀಗಾಗುತ್ತಿ ದ್ದಾನೆ. ಯಾರಾದರೂ ಆ ಹುಡುಗನನ್ನು ಕೂಡಿಸಿಕೊಂಡು, ಅಷ್ಟು ಹಿತವಾಗಿ ಮಾತಾಡಿ ಸಮಾಧಾನ ಹೇಳಬಾರದೆ?'

—ಎಂದು ಕೊಳ್ಳುತ್ತಿದ್ದರು.

ಆದರೆ ಯಾರಿಗೆ ಯಾರು ಸಮಾಧಾನ ಹೇಳಬೇಕು?

ಉಳಿದವರಿಗೆ ಯಾವುದಕ್ಕೂ ವ್ಯವಧಾನವಿಲ್ಲ. ತನಗೆ ಅವಕಾಶವಿಲ್ಲ. ಅವಕಾಶ ದೊರಕಿದರೂ ಹೇಳುವಷ್ಟು ಸಲಿಗೆಯಿಲ್ಲ.

ಆದರೆ ಹಾಗೆಂದುಕೊಂಡು. ಆಕೆ ಸುಮ್ಮನಿರುವುದೂ ಸಾಧ್ಯವಿರಲಿಲ್ಲ.

'ಹುಡುಗ ಹೀಗೇ ಕೊರಗಿ, ಕೊರಗಿ ಹಾಸಿಗೆ ಹಿಡಿದರೇನು ಗತಿ?' ಎಂಬ ಭಯ ಆಕೆಯನ್ನು ಬಿಡದಂತೆ ಬಾಧಿಸುತ್ತಿತ್ತು.

ಆಕೆ ಹೀಗೆ ಏನು ಮಾಡುವುದೆಂದು ತೋಚದೆ ಬಳಲುತ್ತಿರುವಾಗಲೇ ಒಂದು ದಿನ ಮಧ್ಯಾಹ್ನ—

ಆ ದಿನದ ಮಧ್ಯಾಹ್ನ ಎರಡು ಗಂಟೆಯ ವೇಳೆಗೆ ಆ ದಿನ ಕಾರ್ಯ ಕಲಾಪಗಳೆಲ್ಲವೂ ಮುಗಿದು, ಕೆಲಸದಲ್ಲಿ ಬಳಲಿದ ಮನೆಯ ಜನ, ವೈಶಾಖದ ಬೇಸಿಗೆಯ ಸುಡುಬಿಸಿಲಿನಲ್ಲಿ ದಣಿದು, ಎಲ್ಲಿದ್ದವರು ಅಲ್ಲಿ ಹಾಗೇ ಉರುಳಿ ಕೊಂಡಿದ್ದರು.

ಶಾಮಣ್ಣ ಪಡಸಾಲೆಯಲ್ಲಿ. ಚಾಪೆ ಹಾಸಿಕೊಂಡು, ತೋಳನ್ನೇ ತಲೆ ದಿಂಬಾಗಿ ಮಾಡಿಕೊಂಡು ಮಲಗಿದ್ದ. ಮಲಗಿದ್ದರೂ ಆತ ನಿದ್ದೆ ಬರದೆ. ಸುಮ್ಮನೆ ಒಂದು ಮಗ್ಗುಲಿನಿಂದ ಇನ್ನೊಂದು ಮಗ್ಗುಲಿಗೆ ಹೊರಳುತ್ತಿದ್ದ. ಅಷ್ಟು ಹೊತ್ತು ಹಾಗೇ ಹೊರಳಾಡಿ—

'ರಂಗೂ...ರಂಗೂ...'

—ಎಂದು ಅಡಿಗೆಮನೆಯಲ್ಲಿ ತಾಯಿಯೊಂದಿಗಿದ್ದ ಮಗಳನ್ನು ಕೂಗಿದ.

'ಯಾಕೋ ನಿಮ್ಮಣ್ಣ ಕೂಗ್ತಾರೆ ನೋಡೆ ರಂಗೂ. ಏನು ಬೇಕೋ ವಿಚಾರಿಸಿಕೊಂಡು ಬಾ.'

—ಎಂದು ವೆಂಕಮ್ಮನೇ ಮಗಳಿಗೆ, ತನ್ನ ತಂದೆಯ ಬಳಿ ಹೋಗಲು ಹೇಳಿ. ಹಾಗೇ ಏನನ್ನೋ ಜ್ಞಾಪಿಸಿಕೊಂಡು—

'ಹಾಗೆ ಒಂದು ಕೆಲಸ ಮಾಡ್ತೀಯಾ ರಂಗೂ...'

'ಏನಮ್ಮ?'

'ಪಡಸಾಲೇಲಿ ಎಲ್ಲಾರೂ ನಿದ್ದೆ ಮಾಡಿದ್ರೆ. ನಿಮ್ಮಣ್ಣನ್ನ ಒಂದು ಗಳಿಗೆ ಹೀಗೆ ಬಂದು ಹೋಗೂಂತ ಹೇಳ್ತೀಯಾ?'

'ಹೂ'

—ಎಂದು ಹೇಳಿ ರಂಗಮ್ಮ, ಶಾಮಣ್ಣನ ಬಳಿ ಹೋಗಿ—

'ಏನು ಬೇಕಣ್ಣ'?

—ಎಂದು ಕೇಳಿದಳು.

'ಯಾಕೋ ವಿಪರೀತ ಬಾಯಾರಿಕೆ ಆಗಿದೆ. ಒಂದು ಥಾಲಿ ಕುಡಿಯೋ ನೀರು ತಂದುಕೊಡಮ್ಮ.'

—ಎಂದು ಕೇಳಿದ ಶಾಮಣ್ಣ.

'ಹೂ.'

—ಎಂದರೂ ರಂಗಮ್ಮ ಅಲ್ಲಿಂದ ನೀರು ತರಲು ಹೋಗದೆ, ಸುತ್ತು ಮುತ್ತ ಮಲಗಿದವರನ್ನು ನೋಡುತ್ತಿದ್ದುದನ್ನು ಕಂಡು, ಶಾಮಣ್ಣನೇ—

'ಏನು ಬೇಕಾಗಿತ್ತಮ್ಮ?'

—ಎಂದು ಕೇಳಿದ.

'ಅಮ್ಮ...ನಿನ್ನ ...ಯಾಕೋ...ನೋಡಬೇಕೂಂದ್ಲು...'

—ಅಷ್ಟು ಹೇಳಲೂ ನಾಚುತ್ತ ಪಿಸುಧ್ವನಿಯಲ್ಲಿ ಹೇಳಿದಳು ರಂಗಮ್ಮ.

'ಸರಿ...ಸರಿ...ನಿಮ್ಮಮ್ಮನ ರಾಜಕಾರಣ ಎಲ್ಲಾ ಇಂಥ ತಲೆ ಸಿಡಿಯೋ ಹೊತ್ತಿನಲ್ಲೇ...'

—ಎಂದು ಗೊಣಗಿ. ಶಾಮಣ್ಣ—

'ಆಯ್ತು. ಬರ್ತೀನೀಂತ ಹೇಳು. ಮೊದಲು ಕುಡಿಯೋಕಷ್ಟು ನೀರು ತಂದುಕೊಡು.'

—ಎಂದ.

ತಂದೆಗೆ ನೀರು ತರಲು ಹೋದ ರಂಗಮ್ಮ, ತಾಯಿಗೆ ಆ ಸುದ್ದಿ ಮುಟ್ಟಿಸಿದಳು.

'ಸರಿ ಅವರು ಬಂದ್ರೆ ನಾನು ಹಿತ್ತಲಲ್ಲಿ ಭಾವಿಕಟ್ಟೆ ಹತ್ತಿರ ಇರ್ತೀನೀಂತ ಹೇಳು.'

—ಎಂದು ಮಗಳಿಗೆ ಅಪ್ಪಣೆ ಮಾಡಿ, ವೆಂಕಮ್ಮ, ತಾನೂ ಮುಂದಾಗಿಯೇ ಅಡಿಗೆಮನೆಯಿಂದ ಎದ್ದು, ಭಾವಿಯಕಟ್ಟೆಯ ಬಳಿ ಹೋದಳು.

ಸ್ವಲ್ಪ ಹೊತ್ತಿನಲ್ಲೆ ಶಾಮಣ್ಣನೂ ಅಲ್ಲಿಗೆ ಬಂದ.

ತನ್ನ ಬಳಿ ಬಂದ ಗಂಡನನ್ನು ಕಂಡು ವೆಂಕಮ್ಮ ಥಟಕ್ಕನೆ ಯಾರಾದರೂ ಹಿತ್ತಲಿಗೆ ಬಂದರೆ, ತಾನು ಕೂಡಲೇ ಕಾಣದಿರುವಂತೆ, ಭಾವಿಕಟ್ಟೆಯ ಮರೆಯಲ್ಲಿ ಕುಳಿತು—

'ನೀವು ಸ್ವಲ್ಪ ಹಾಗೆ ಬಾಗಿಲಿಗೆ ಎದುರಾಗಿ ಕೂತ್ಕೊಳ್ಳಿ. ಯಾರಾದ್ರೂ ಬಂದ್ರೆ ಕಾಣುತ್ತೆ.'

—ಎಂದುಹೇಳಿದಳು.

'ಅಂದ್ರೆ –ಭಾಳ ದೊಡ್ಡ ಭಾಷಣಕ್ಕೆ 'ಪೀಠಿಕೆ ಹಾಕ್ತಾ ಇರೋಹಾಗಿದೆ. ಏನು ಸಮಾಚಾರ?'

—ಎಂದು ಕೇಳಿದ ಶಾಮಣ್ಣ, ಆಕೆ ಹೇಳಿದ ಹಾಗೇ ಕುಳಿತುಕೊಂಡು.

'ಅಷ್ಟು ಗಟ್ಟಿಯಾಗಿ. ಊರಿಗೆಲ್ಲಾ ಕೇಳೋ ಹಾಗೆಮಾತಾಡಬೇಡಿ ...ಭಾಷಣವೂ ಇಲ್ಲ, ಭಾರತ ಕಥೇನೂ ಇಲ್ಲ...ಇವತ್ತು ನಿನ್ನೆ, ನಿಮ್ಮ ಅಳಿಯಂದಿರನ್ನೇನಾದ್ರೂ ಮಾತಾಡಿಸಿದ್ರಾ?'

—ಎಂದು ಕೇಳಿದಳು ಪಂಕಮ್ಮ ಪಿಸುಧ್ವನಿಯಲ್ಲಿ.

'ಏಕೆ? ಏನಾದ್ರೂ ಮಾತಾಡಿಸಬೇಕಾದ ವಿಷಯ ಇತ್ತೆ?'

'ಅದು ಹೋಗ್ಲಿ—ಈಚೆಗೆ ಅವರ ಮುಖಾನಾದ್ರೂ ನೋಡಿದ್ದೀರಾ?"

ಹೆಂಡತಿಯ ಪ್ರಶ್ನೆಯನ್ನು ಕೇಳಿ ಶಾಮಣ್ಣ ಚಕಿತನಾದ.

'ಹಾಗಂದ್ರೇನು ?ಒಂದೇ ಮನೇಲಿದ್ದುಕೊಂಡು ಮುಖ ನೋಡಿದ್ಯಾಂತ ಕೇಳ್ತಿದ್ದೀಯಲ್ಲಾ—ಏನು ವಿಷಯ?'

'ನನಗ್ಯಾಕೋ ಅವರ ಮುಖ ನೋಡಿದ್ರೆ ಏನೋ ಭಯವಾಗುತ್ತೆ. ಭಾಳ ಬಡವಾಗಿ ಹೋಗಿದಾರೆ'.

'ಎಂಥೋರೋ ಬಡವಾಗೋ ಅಂಥಾದ್ದೇ ಈ ದುಃಖ...'

'ಹಾಗಂತ ಎಲ್ಲರೂ ಬಾಯಿಗೆ ಬೀಗ ಬಡಕೊಂಡು ಕೂತಂಕೊಂಡ್ರೆ ಹ್ಯಾಗೆ? ನೀವಾದ್ರೂ ಹೋಗಿ ನಾಲ್ಕು ಸಮಾಧಾನದ ಮಾತು ಹೇಳಬಾರದೆ ನನಗ್ಯಾಕೋ ಅವರನ್ನು ನೋಡಿದ್ರೆ, ಬರೀ ಈ ದುಃಖಾನೇ ಅಲ್ಲಾ, ಇನ್ನೂ ಏನೋ ಕೊರಗು ಇದ್ದ ಹಾಗಿದೆ. ಒಬ್ಬರ ಸಂಗಡ ಮಾತಿಲ್ಲ, ಕಥೆಯಿಲ್ಲ— ಕರಗ ಹೊತ್ಕೊಂಡೋರ ಹಾಗೆ ಸುತ್ತುತ್ತಾ ಇರ್ತಾರೆ. ನನಗಂತೂ ಅವರ ಮುಖ ನೋಡಿದ್ರೆ—ಎದೇನೇ ಒಡೆದು ಹೋಗೋಹಾಗಾಗುತ್ತೆ....'

'ನಿನಗೆ ಬಿಡು, ಎದ್ದರೆ ಕೂತರೆ—ಎಲ್ಲಾ—ಭಯಾನೇ'.

'ಹಾಗಾಲ್ದೆ ಹೆಣ್ಣು [ಹಡೆದೋಳು, ನಿಮ್ಮ ಹಾಗೆ ಬೆಲ್ಲ ಬಡಿದ ಬೆನಕಪ್ಪನ ಹಾಗಿರೋದಂ ಸಾಧ್ಯವೇ? ಎಲ್ಲಾ ಕೆಲಸ ಮಾಡಿದ ಹಾಗೆ

ಇದಕ್ಕೂ ಉದಾಸೀನ ಮಾಡಬೇಡಿ. 'ಹೋಗಿ—ಏನು ಕಷ್ಟಾನೋ, ದುಃಖಾನೋ ವಿಚಾರಿಸಿ, ತಿಳಿದ ನಾಲ್ಕು ಮಾತು ಹೇಳಿ ಬನ್ನಿ. ಮೊದಲೇ ನಮ್ಮ ಅದೃಷ್ಟ ನೆಟ್ಟಗಿಲ್ಲ. ಈಗಲೇ ಜನ ಏನು ಆಡಿಕೋತಾರೆ ಅಂತ ಭಯ ಕಿತ್ಕೊಂಡು ತಿನ್ತಾ ಇದೆ.'

'ಜನ ಆಡ್ಕೊತಾರೆ...ಯಾಕೆ?'

—ಹೆಂಡತಿಯ ಮಾತೇ ಅರ್ಥವಾಗದೆ ಕೇಳಿದ ಶಾಮಣ್ಣ.

'ಯಾಕೆ ಅನ್ನೋದು ಯಾವತ್ತಾದ್ರೂ ಹತ್ತು ಜನದ ನಡುವೆ ಇದ್ದಿದ್ರೆ ನಿಮಗೆ ಗೊತ್ತಾಗೋದು. ಹೇಸಿಗೆ ಮಾಡಿದೋರು ಯಾರು ಅಂದ್ರೆ ಮಾಸಿದ ಸೀರೆಯೋಳನ್ನ ಶೂಲಕ್ಕೇರಿಸು' ಅನ್ನುತ್ತೆ ಈ ಲೋಕ. ಅಂಥ ಜನ—ನಾಳೆ ತಮ್ಮ ಹುಡುಗಿ ಅದೃಷ್ಟಾನೇ ಅಂದು ಆಡಬಹುದು...'

'ಏನಂತ...'

'ಕಾಲಿಟ್ಟಗಳಿಗೆ ಕೆಟ್ಟದೂಂತ. ಈಗಾಗಿರೋದೇ ಸಾಕು—ಇನ್ನು ಇವರ ಮೇಲೆ ಅಳಿಯಂದಿರೇನಾದ್ರೂ ಕೊರಗು ಹತ್ತಿಕೊಂಡು ಹಾಸಿಗೆ ಹಿಡಿದರೆ, ನಾಳೆ ಯಾರಿಗೂ ಮುಖ ತೋರಿಸೋಕೇ ಸಾಧ್ಯ ಇರೊಲ್ಲ. ಅದಕ್ಕೆ ಹೋಗಿ ಸಮಾಧಾನ ಹೇಳಿ ಅಂದದ್ದು.'

—ಎಂದಳು ವೆಂಕಮ್ಮ, ಶಾಮಣ್ಣನಿಗೆ ತನ್ನ ಭೀತಿಯನ್ನು ವಿವರಿಸಿ ಹೇಳಿ.

ಆ ಮಾತನ್ನು ಕೇಳಿ ಶಾಮಣ್ಣನಿಗೆ, ಹೆಂಡತಿಗೆ 'ನಿನ್ನದು ಅಕಾರಣ ಭೀತಿ', ಎಂದು ಹೇಳಬೇಕೆನಿಸಿದರೂ, ಏಕೋ ಆ ಮಾತಾಡಲು ಬಾಯಿ ಬರಲಿಲ್ಲ. ಆಕೆಯ ಮಾತಿನಲ್ಲಿ ತರ್ಕವಿರದಿದ್ದರೂ ವ್ಯಾವಹಾರಿಕತೆ ಇತ್ತು, ವಾಸ್ತವಿಕತೆಯ ಅರಿವು ಇತ್ತು.

'ನಿಜ—ನೀನು ಹೇಳೋದು'.

'ಅದಕ್ಕೆ ಹೋಗಿ, ಮಾತಾಡಿಸಿ ಎಂದದ್ದು.'

ವೆಂಕಮ್ಮ ಹೇಳಿದಳು.

'ಆಯಿತು. ಹಾಗೆ ಮಾಡ್ತೀನೀ.'

—ಎಂದು ಹೆಂಡತಿಗೆ ಮಾತುಕೊಟ್ಟು, ಶಾಮಣ್ಣ ಅಲ್ಲಿಂದ ಎದ್ದು ಹೋದ.

ತನ್ನ ಭೀತಿಯನ್ನು ಗಂಡನ ಹೆಗಲ ಮೇಲೆ ಹಾಕಿದ ಮೇಲೆ ವೆಂಕಮ್ಮನಿಗೂ ಕೊಂಚ ಹೃದಯ ಹಗುರವಾದ ಹಾಗಾಯಿತು.

೩

ಹೆಂಡತಿಯೊಂದಿಗೆ ಮಾತು ಮುಗಿಸಿ ಬಂದ ಬಳಿಕ, ಮಧ್ಯಾಹ್ನದ ಬಿಸಿಲಿನಲ್ಲಿ ಝಳಕ್ಕೆ ಕಣ್ಣು ಬಾಡಿಹೋಗುತ್ತಿದ್ದರೂ, ಶಾಮಣ್ಣನಿಗೆ ಮಾತ್ರ ನಿದ್ರೆ ಹತ್ತಲಿಲ್ಲ. ಆಕೆಯ ಚಿಂತೆ ಆತನನ್ನು ಕಾಡಲಾರಂಭಿಸಿತ್ತು.

ಅಳಿಯನೊಂದಿಗೆ, ಯಾವಾಗ ಹೇಗೆ ಮಾತಾಡುವುದೆಂದು ಯೋಚನೆಯಲ್ಲೇ ಮಧ್ಯಾಹ್ನವನ್ನೆಲ್ಲಾ ಕಳೆದು, ಆ ಸಂಜೆ, ವೆಂಕಟದಾಸಪ್ಪ ಮನೆಬಿಟ್ಟು ಹೊರಟಾಗ—,

'ಎತ್ಲಾಗೆ ಹೊರಟೆ ದಾಸಣ್ಣ?'

—ಎಂದು ಕೇಳಿದ.

'ಹಾಗೆ ಎಲ್ಲಾದ್ರೂ ಸುತ್ತಾಡಿಕೊಂಡು ಬರ್ತೀನಿ.'

—ಎಂದರು ವೆಂಕಟದಾಸಪ್ಪ.

'ನಾನು ಬರ್ತೀನಿ ನಡಿ, ನನಗೂ ಬೇಜಾರಾಗಿದೆ.'

—ಎಂದು ಶಾಮಣ್ಣ ಹೆಗಲಮೇಲೆ ಉತ್ತರೀಯ ಎಳೆದುಕೊಂಡು ಹೊರಟ.

ವೆಂಕಟದಾಸಪ್ಪನವರಿಗೆ, ತಮ್ಮ ಪಾಪ, ತಮ್ಮನ್ನು ಹಿಂಬಾಲಿಸುವುದು ಇಷ್ಟವಿರಲಿಲ್ಲ. ಆದರೂ ತಾನಾಗಿಯೆ 'ಜೊತೆಗೆ ಬರುತ್ತೇನೆ' ಎಂದವರಿಗೆ ಹೇಗೆ ಬೇಡ ಎಂದು ಹೇಳುವುದು ಎಂಬ ಸಂಕೋಚಕ್ಕೆ ಕಟ್ಟುಬಿದ್ದು ಸಮ್ಮತಿ ಸೂಚಿಸಿ ತಲೆ ಹಾಕಿದರು.

ಮಾವ, ಅಳಿಯಂದಿರಿಬ್ಬರೂ ಮನೆಯಿಂದ ಹೊರಟು, ಹಳ್ಳಿಯನ್ನು ದಾಟಿ, ಕೆರೆಯ ಏರಿಯ ಹಿಂಭಾಗದಲ್ಲಿ ಕಿರಿದಾದ ದಾರಿಯಲ್ಲಿ ಕೋಡಿಯ ಕಡೆ ನಡೆದರು.

ಏರಿಯ ಹಿಂದಿನ ದಾರಿ, ಏರಿಯಷ್ಟೇ ವಕ್ರವಾಗಿತ್ತು. ದಾರಿಯ ಒಂದು ಬದಿಯಲ್ಲಿ ಎತ್ತರವಾದ ಏರಿ. ಮತ್ತೊಂದು ಬದಿಯಲ್ಲಿ ಸಣ್ಣಗೆ ನೀರು ಹರಿವ ಕಾಲುವೆ. ಅದರ ಪಕ್ಕದಲ್ಲಿ ಉದ್ದಕ್ಕೂ ತೆಂಗು, ಅಡಕೆಯ ತೋಟಗಳು. ಕೆರೆಯ ನೀರಿನ ಮೇಲೆ, ತೋಟಗಳ ಹಸಿರಿನ ಮೇಲೆ ಬೀಸಿ

ಬರುವ ಗಾಳಿ, ಮಧ್ಯಾಹ್ನ ಇಡೀ, ಬೇಸಿಗೆಯ ಬಿಸಿಲಿನಲ್ಲಿ ಬೆಂದ ಮೈಗೆ ಅಪ್ಯಾಯಮಾನವಾಗಿತ್ತು.

ಇಬ್ಬರೂ ಹಾಗೆ ಕಲೆತು, ಕೆರೆಯ ಮತ್ತೊಂದು ತುದಿಯಲ್ಲಿದ್ದ ಕೋಡಿಯ ಸಮೀಪಕ್ಕೆ ಬಂದರು.

ವೈಶಾಖ ಮಾಸವಾದುದರಿಂದ, ಕೆರೆಯಲ್ಲಿ ಸಾಕಷ್ಟು ನೀರು ಇರಲಿಲ್ಲ ವಾದರೂ, ತೋಟಗಳಿಗೆಂದು ನೀರು ಬಿಟ್ಟದ್ದರಿಂದ, ಕೋಡಿಯಲ್ಲಿ ನೀರು ಸಣ್ಣಗೆ ಹರಿಯುತ್ತಿತ್ತು.

'ಕೂತುಕೊಳ್ಳೋಕೆ ಇಲ್ಲೇ ಪ್ರಶಸ್ತವಾಗಿದೆ'

—ಎಂದರು ಶಾಮಣ್ಣ, ಕೋಡಿಯ ಬಳಿಯಲ್ಲಿ ಕಲ್ಲುಬಂಡೆಯನ್ನು ತೋರಿಸಿ.

'ಹೂ.'

—ಎಂದು ಅಷ್ಟೇ ಹೇಳಿ ವೆಂಕಟದಾಸಪ್ಪ ಬಂಡೆಯ ಮೇಲೆ ಕುಳಿತು ಕೊಂಡರು.

ಶಾಮಣ್ಣ ಅವರ ಪಕ್ಕದಲ್ಲೇ ಕುಳಿತುಕೊಂಡ.

ವೈಶಾಖಮಾಸದ ಸಂಜೆಯ ನೀಲಿಯಾಕಾಶದಲ್ಲಿ ಎಲ್ಲೂ ಮೋಡ-ವಿಲ್ಲದೆ, ಅಸ್ತಮಯದ ಕೆಂಪು ಮುಗಿಲಗಲಕ್ಕೂ ಹಬ್ಬಿತ್ತು. ಕೋಡಿಯ ಕಟ್ಟೆ ಯಿಂದ ಸಣ್ಣಗೆ ಮರ್ಮರಿಸುತ್ತ ಧುಮುಕುವ ನೀರಿನ ಶಬ್ದವೂ ಮನಸ್ಸಿನಲ್ಲಿ ಏನೋ ತಂಪಿನ ಭಾವನೆಯನ್ನು ಮೂಡಿಸುತ್ತಿತ್ತು. ಬಳ್ಳಿಯ ತೋಟದ ಹಸಿರು, ಆಗಸದ ಶುಭ್ರ ನೀಲವರ್ಣವೂ ಕಣ್ಣಿಗೆ ತಂಪೆರೆಯುತ್ತಿತ್ತು.

ಆದರೆ ಅದನ್ನು ನೋಡುತ್ತ ಕುಳಿತ ಅವರಿಬ್ಬರ ಹೃದಯದಲ್ಲಿ ಮಾತ್ರ, ಅಂಥ ದೃಶ್ಯ ದರ್ಶನದಿಂದ ಮೂಡಬೇಕಾದ ಶಾಂತಿ ಇರಲಿಲ್ಲ.

ಅಷ್ಟು ಹೊತ್ತು ಇಬ್ಬರೂ ಮೌನವಾಗಿ ಕುಳಿತುಕೊಂಡಿದ್ದರು. ಬಳಿಕ, ತಾನೇ ಮಾತು ಆರಂಭಿಸದೆ, ಬೇರೆ ಗತ್ಯಂತರವೇ ಇಲ್ಲದೆ, ಶಾಮಣ್ಣನೇ—

'ದಾಸಣ್ಣಾ...'

—ಎಂದು ಮಾತಿಗೆ ಮೊದಲಿಟ್ಟ.

'ಏನು ಮಾವಾ?'

—ಜಡನಾದ, ನಿರ್ಜೀವವಾದ ಸ್ವರದಲ್ಲಿ ಕೇಳಿದರು ವೆಂಕಟದಾಸಪ್ಪ.

"ನಿನಗಿಂತ ನಾನು ಹಿರಿಯ, ದಾಸಣ್ಣ—ವಯಸ್ಸಿನಲ್ಲಿ ಅಷ್ಟೇ. ಬುದ್ಧಿಯಲ್ಲಿಲ್ಲ. ಆದರೂ ವಯಸ್ಸಿನ ಹಿರಿಮೆಯನ್ನೇ ಮುಂದುಮಾಡಿಕೊಂಡು ನಿನಗೊಂದು ಮಾತು ಹೇಳಬೇಕೊಂತ ಇವತ್ತು ನಿನ್ನ ಜೊತೇಲಿ ಬಂದೆ..."

"ಏನು ಮಾವ, ಹೇಳಿ?"

"ವೇದಾಂತ, ಶಾಸ್ತ್ರಗಳು, ಗೀತೋಪನಿಷತ್ತುಗಳು ಹೇಳೋದೆಲ್ಲಾ ಸತ್ಯವೇ ಅಲ್ಲವೇ?"

—ಶಾಮಣ್ಣ ನಿಧಾನವಾಗಿ, ಮಾತುಮಾತಿಗೂ ತಡೆತಡೆದು ಕೇಳಿದರು.

"ಹೂ."

"ಆದರೂ ಅದಕ್ಕೆ ಜನ ಅಷ್ಟಾಗಿ ಬೆಲೆ ಕೊಡೋದಿಲ್ಲ. ಈ ಕಿವೀಲಿ ಕೇಳಿ, ಆ ಕಿವೀಲಿ ಬಿಟ್ಟು ಬಿಡ್ತಾರೆ. ಏಕೆ ಗೊತ್ತೆ?"

'ಊಹೂಂ."

"ಅದಕ್ಕಿಷ್ಟೇ ಕಾರಣ—ವೇದಾಂತ ಹೇಳೋ ಜನ, ತಮ್ಮ ಜೀವನದಲ್ಲಿ ಸಂದರ್ಭ ಒದಗಿದಾಗ, ತಾವು ಆಡಿದ ಶಾಸ್ತ್ರದ ಮಾತಿನಂತೆ ಅಷ್ಟಾಗಿ ನಡೆದುಕೊಳ್ಳುವುದಿಲ್ಲ."

"ಇರಬಹುದು—ಆದರೆ ಈಗ ಆ ಮಾತೆಲ್ಲಾ ಏಕೆ ಮಾವ?"

"ಮಾತು ಬಂದದ್ದಕ್ಕೇ ಹೇಳಿದ್ದು."

"ಏನು?"

"ಈಗ ನೀನು ಮಾಡ್ತಾ ಇರೋದು ಹಾಗೇ."

"ಅಂದರೆ..."

"ಆತ್ಮ ಅಮೃತ, ಅವಿನಾಶಿಯಾದದ್ದು ಅಂತ ಉಪನಿಷತ್ತುಗಳು ಸಾರಿವೆ. ಗೀತೆ, 'ಆತ್ಮನಿಗೆ ಸಾವಿಲ್ಲ, ಸಾವು ಈ ದೇಹಕ್ಕೆ ಮಾತ್ರ. ಮನುಷ್ಯ ಹಳೆಯ ಬಟ್ಟೆ ಬಿಟ್ಟು ಹೊಸ ಬಟ್ಟೆ ಧರಿಸುವಂತೆ, ಹಳೆಯ ಮನೆ ಬಿಟ್ಟು ಹೊಸ ಮನೆಗೆ ಹೋಗುವಂತೆ, ದೇಹ ಗಳಿತವಾದಾಗ, ಆತ್ಮ ಅದನ್ನು ತ್ಯಜಿಸಿ ಹೋಗುತ್ತದೆ'. ಎಂದು ಸಾರಿ ಸಾರಿ ಹೇಳಿದೆ. ಭಗವಾನ್ ಶಂಕರಾಚಾರ್ಯರಂತೂ—

ಪುನರಪಿ ಜನನಂ
ಪುನರಪಿ ಮರಣಂ
ಪುನರಪಿ ಜನನೀ ಜಠರೇ ಶಯನಂ
ಭಜಗೋವಿಂದಂ, ಭಜಗೋವಿಂದಂ ಭಜ ಮೂಢಮತೇ॥

—ಎಂದು ಎಳೆಯ ಮಕ್ಕಳಿಗೂ ತಿಳಿಯುವಂತೆ ಹೇಳಿದ್ದಾರೆ. ಅವೆಲ್ಲಾ ನಿಜ ಅನ್ನೋದು ನಮಗೂ ಗೊತ್ತು. ಆದರೂ ನಮಗೆ ಮೋಹಮೂಲವಾದ ದುಃಖದಿಂದ ಮುಕ್ತಿ ದೊರಕಿಲ್ಲ. ಪಂಚಭೂತ ನಿರ್ಮಿತವಾದ ಈ ದೇಹಕ್ಕೆ ಲೋಭ, ಮೋಹ, ಕ್ರೋಧ, ದುಃಖಗಳು ತಪ್ಪಿದ್ದಲ್ಲ—ನಿಜ. ಆದರೆ ಅವು ಎಷ್ಟು ಅನಿವಾರ್ಯವೋ, ಅಷ್ಟೇ ಅನಗತ್ಯ. ಅಂದ ಮೇಲೆ, ಅಷ್ಟೆಲ್ಲಾ ತಿಳಿದವನು ದುಃಖ ಪಡುವುದಕ್ಕಾದರೂ ಒಂದು ಮಿತಿ ಬೇಡವೇ ದಾಸಣ್ಣ?"

—ಶಾಮಣ್ಣ ವಾದದ ಧಾಟಿಯಲ್ಲಿ ಹೇಳಿದರೂ, ಬಹು ಮೃದುವಾಗಿ ಹೇಳಿದ.

"ಆ ಮಾತು ನಿಜ ಮಾವಯ್ಯ."

"ಒಪ್ಪಿಕೋತೀಯಾ?"

"ಹೂ."

"ಹಾಗಾದರೆ, ಇದೆಲ್ಲಾ ತಿಳಿದೂ ತಿಳಿದೂ ಇಷ್ಟು ಕೊರಗ್ತಾ ಇದೀಯಲ್ಲ. ಅದಕ್ಕೇನು ಹೇಳಲಿ?"

"ನನ್ನ ವಿಷಯ ನೀವು ತಪ್ಪು ತಿಳಿದುಕೊಂಡಿದೀರ ಮಾವ. ನೀವಿದೆಲ್ಲಾ ಏಕೆ ಆಡ್ತಾ ಇದೀರಾಂತ ನಾನು ಬಲ್ಲೆ".

ವೆಂಕಟದಾಸಪ್ಪನವರು ಹೇಳಿದುದನ್ನು ಕೇಳಿ, ಶಾಮಣ್ಣನಿಗೆ ಬೆಕ್ಕಸ ಬೆರಗಾಗಿ, ವೆಂಕಟದಾಸಪ್ಪನವರ ಮಾತಿನ ಜಾಡೇ ಅರ್ಥವಾಗದೆ—

"ಹಾಗಂದರೇನು ದಾಸಣ್ಣ?"

—ಎಂದು ಕೇಳಿದ.

"ಅಣ್ಣ ತೀರಿಕೋಡದ್ದಕ್ಕಾಗಿ ನಾನು ಇಷ್ಟು ವ್ಯಸನಪಡ್ತಿದೀನಿ ಅಂತ ಅಲ್ಲವೇ ನೀವು ತಿಳಿದುಕೊಂಡಿರೋದು."

'ಹೌದು.'".

"ಆದರೆ ಅಣ್ಣನಿಗೋಸ್ಕರ ಅಲ್ಲ ನಾನು ದುಃಖಪಡ್ತಿರೋದು"—

"ಮತ್ತೆ?"

—ವೆಂಕಟದಾಸಪ್ಪನವರ ಮಾತು ಕೇಳಿ ಶಾಮಣ್ಣ ಚಕಿತನಾಗಿ ಉದ್ಗರಿಸಿದ.

"ನನಗೋಸ್ಕರ ನಾನು ಇಷ್ಟು ದುಃಖಪಡ್ತಿದೇನೆ—ಬೇರೆ ಯಾರಿಗಾಗಿಯೂ ಅಲ್ಲ."

ವೆಂಕಟದಾಸಪ್ಪನವರು ಹೇಳಿದ ಆ ಮಾತನ್ನು ಕೇಳಿ ಶಾಮಣ್ಣ ಮತ್ತಷ್ಟು ಚಕಿತನಾದ. ಆ ಉತ್ತರವನ್ನು ಕೇಳಿದ ಬಳಿಕ ಒಂದು ಗಳಿಗೆ ಶಾಮಣ್ಣನಿಗೆ ಏನು ಹೇಳುವುದೂ ತೋಚಲಿಲ್ಲ. ಅಷ್ಟೇ ಮಟ್ಟಿಗೆ ಅವರು ತಮಗಾಗಿ ತಾವೇ ಏಕೆ ದುಃಖಿಪಡಬೇಕೆಂಬುದೂ ಅರ್ಥವಾಗಲಿಲ್ಲ. ಅಂಥದು ಏನಾಗಿದೆ ಎಂದು ಯೋಚಿಸಿ, ಏನೊಂದೂ ತೋರದೆ, ಕೊನೆಗೆ ಕೇಳಿದ–

"ನಿನ್ನ ಮಾತೇ ನನಗೆ ಅರ್ಥವಾಗೋಲ್ಲ ದಾಸಣ್ಣ. ನಿನಗಾಗಿ ನೀನು ದುಃಖಿಪಡೋ ಅಂಥದೋದು ಈಗ ಏನಾಗಿದೆ?

"ಇಷ್ಟು ದಿನ ಇಲ್ಲದ್ದು, ಈಗ ನನಗೇ ನನ್ನ ಅಯೋಗ್ಯತೆಯ ಅರಿವಾಗಿದೆ. ಅಣ್ಣನ ಸಾವು ನನ್ನ ಕಣ್ಣು ತೆರೆಸಿತು."

–ಎಂದರು ವೆಂಕಟದಾಸಪ್ಪ ಆತ್ಮಖಂಡನೆಯ ಪರುಷಸ್ವರದಲ್ಲಿ.

"ಇವೊತ್ತು ಯಾಕೋ ನಿನ್ನ ಮಾತೇ ನನಗೆ ಅರ್ಥವಾಗ್ತಾ ಇಲ್ಲ ದಾಸಣ್ಣ–ಎಲ್ಲಾ ಮಾತೂ ಒಗಟಿನ ಹಾಗಿದೆ. ನರಸಪ್ಪನೋರನ್ನ ಕಳಕೊಂಡ ದುಃಖ, ನಿನಗೆಷ್ಟಿದೆಯೋ, ನಮಗೂ ಅಷ್ಟೇ ಇದೆ. ಆದರೆ ಹಾಗಂತ ಕೊರಗಿ ಬಡವಾದರೆ ಹೇಗೆ ಹೇಳು? ನನಗ್ಯಾಕೋ ನಿನ್ನ ದುಃಖ ನೀನಿರೋ ರೀತಿ ನೋಡಿದರೆ ನರಸಪ್ಪನವರ ಸಾವಿಗಿಂತ ಹೆಚ್ಚಾಗಿ ಮತ್ಯಾವುದೋ ನೋವು ನಿನ್ನ ಬಾಧಿಸುತ್ತಾ ಇರೋ ಹಾಗಿದೆ. ಅದೇನು ವ್ಯಥೆ ದಾಸಣ್ಣ?"

–ಎಂದು ಶಾಮಣ್ಣ, ವೆಂಕಟದಾಸಪ್ಪನವರ ಹೃದಯವನ್ನು ಇರಿಯುತ್ತಿದ್ದ ವಿಷಯದ ಬಗ್ಗೆ ನೇರವಾಗಿ ಪ್ರಶ್ನೆ ಮಾಡಿದರು.

ಆ ಪ್ರಶ್ನೆಗೆ, ಕೂಡಲೇ ಉತ್ತರ ಕೊಡದೆ ವೆಂಕಟದಾಸಪ್ಪನವರು, ಅಷ್ಟು ಹೊತ್ತು ತಮಗೆ ತಾವೇ, ತಮ್ಮ ಕೊರಗಿನ ವಿಷಯವನ್ನು ಹೇಳುವುದೇ ಬಿಡುವುದೇ ಎಂದು ಯೋಚಿಸುತ್ತಾ ಕುಳಿತರು.

ವೆಂಕಟದಾಸಪ್ಪನವರು ಸುಮ್ಮನೆ ಕುಳಿತಿದ್ದನ್ನು ಕಂಡು, ಶಾಮಣ್ಣನಿಗೆ ತನ್ನ ಹೆಂಡತಿಯ ಭಯವೇ ನಿಜವೇನೋ ಎನಿಸಿ ವ್ಯಥೆಯಾಗಿ–

"ನಿನ್ನ ಮನಸ್ಸಿಗೆ ನೋವಾಗುವ ವಿಷಯ ಅಂತ ಹೇಳಲು ಹಿಂಜರಿಯಬೇಡ ದಾಸಣ್ಣ. ಏನು ಯೋಚನೆ ಇದ್ದರೂ ಹೇಳು. ನಮಗೆ ಬೇಕಾದವರಲ್ಲಿ ಆಡಿಕೊಂಡರೆ, ಎಂಥ ಕೊರಗಿನ ತಾಪವೂ ಅಷ್ಟು ಕಡಿಮೆ ಆಗುತ್ತದೆ. ಆದರೆ–ನಾನು ನಿನ್ನ ಹಿತೈಷಿ ಅಂತ ನಿನಗೆ ನಂಬಿಕೆ ಇದೆ ತಾನೇ?"

—ಎಂದು ಕೇಳಿದ.

"ನೀವು ನನ್ನ ಪಿತೃಶಿಷಿಗಳು ಎಂಬ ವಿಷಯದಲ್ಲಿ ನನಗೆ ಏನೇನೂ ಅನುಮಾನವಿಲ್ಲ ಮಾವ."

"ಹಾಗಿದ್ದರೆ ಇದ್ದದ್ದನ್ನು ಬಾಯಿ ಬಿಟ್ಟಾಡಲು ಸಂಕೋಚವೇಕೆ?"

ಆ ಪ್ರಶ್ನೆಗೆ ಉತ್ತರ ಕೊಡದಿರಲು ಅಸಾಧ್ಯವಾಗಿ, ವೆಂಕಟದಾಸಪ್ಪನವರು, ಶಾಮಣ್ಣನಿಗೆ, ತಂದೆಯ ಸಾವು ತಮ್ಮ ಹೃದಯದಲ್ಲಿ ಮೂಡಿಸಿದ ಯೋಚನಾತರಂಗಗಳನ್ನು ವಿವರಿಸಿ—

"ಅಣ್ಣನಂಥ ತಂದೆಗೆ ನಾನು ತಕ್ಕ ಮಗನಾಗಲಿಲ್ಲ ಮಾವ. ಕಬ್ಬಿನ ಹೊಟ್ಟೆಯಲ್ಲಿ ಸೂಲಂಗಿ ಹುಟ್ಟಿದ ಹಾಗಾಯ್ತು. ಈ ನಾಚಿಕೆ ನನ್ನ ಕೊಂದು ತಿನ್ನುತ್ತಾ ಇದೆ. ಇದು ಅರ್ಥವಾಗಿ ನಾನು ಹೇಗೆ ಮುಖ ಎತ್ತಿಕೊಂಡು ತಿರುಗಾಡಲಿ?"

—ಎಂದು ತಮ್ಮ ದುಃಖವನ್ನು ತೋಡಿಕೊಂಡು ಹೇಳಿದರು ವೆಂಕಟದಾಸಪ್ಪ.

ಅವರ ಉತ್ತರದಿಂದ ಶಾಮಣ್ಣನಿಗೆ, ಸದ್ಯ ತನ್ನ ಭಯ ಸತ್ಯವಾಗಲಿಲ್ಲ ಎಂದು ಸಂತೋಷವಾದರೂ, ಅಳಿಯನ ವಿಚಿತ್ರ ವ್ಯಥೆ ಅವನಿಗೂ ವ್ಯಥೆಗೆ ಕಾರಣವಾಯಿತು. ಅವರ ಆ ಪ್ರಶ್ನೆಗೆ ಏನು ಉತ್ತರ ಹೇಳಬೇಕೆಂದು ಸ್ವಲ್ಪ ಹೊತ್ತು ಆಲೋಚಿಸಿ, ಬಳಿಕ ಶಾಮಣ್ಣ—

"ದಾಸಣ್ಣ, ನಿನ್ನ ವ್ಯಥೆ ಅರ್ಧ ನಿಜ, ಅರ್ಧ ಸುಳ್ಳು."

—ಎಂದ.

"ಹಾಗಂದರೇನು ಮಾವ?"

"ನರಸಪ್ಪ ದೊಡ್ಡ ಜೀವ ಎನ್ನುವುದರಲ್ಲಿ ಏನೂ ಸಂಶಯವಿಲ್ಲ. ಆದರೆ ಆ ತಂದೆಗೆ ನೀನು ತಕ್ಕ ಮಗನಲ್ಲ ಎಂಬ ಮಾತನ್ನು ನಾನು ಒಪ್ಪಲಾರೆ. ನಿನ್ನ ಮುಖ ಮೆಚ್ಚಿಸುವುದಕ್ಕೆ ನಾನು ಈ ಮಾತು ಹೇಳುತ್ತಿಲ್ಲ. ಮದುವೆಗೆ ಮೊದಲು, ನೀನು ನನ್ನ ಮುಂದೆ ಗೌರಮ್ಮನ ವಿಷಯವನ್ನು ಹೇಳಿದಾಗಲೇ, ನಿನ್ನ ಸತ್ಯಪ್ರಿಯತೆಯನ್ನು ಕಂಡು ನನಗೆ, ತಂದೆಗೆ ಒಳ್ಳೆ ಹೆಸರು ತರುವ ಮಗ ಎನಿಸಿತ್ತು. ಈಗ ನಿನ್ನನ್ನು ಸುಡುತ್ತಿರುವ ಈ ಪಶ್ಚಾತ್ತಾಪವೂ ಸಹಜ ಸಜ್ಜನನ ಲಕ್ಷಣವೇ; ಬೆಳೆಯುವ ಗಿಡದ ಚಿಹ್ನೆಗಳೇ..."

"ಏನಿದ್ದರೇನು ಪಾಪ. ಅಂಥ ತಂದೆಗೆ ಸುಖ ಕೊಡಲಾಗದ ನನ್ನಂಥ ಪಾಪಿಗೆ ಏಳಿಗೆಯುಂಟೆ?"

–ಶಾಮಣ್ಣ ತನ್ನ ಮಾತು ಮುಗಿಸುವ ಮುನ್ನವೇ ನಡುವೆ ಬಾಯಿ ಹಾಕಿ ಹೇಳಿದರು ವೆಂಕಟದಾಸಪ್ಪ.

"ನಿಜ ಹೇಳಲೇ?"

"ಹೇಳಿ ಪಾಪ."

"ನೀನು ಹೀಗೇ ಕಣ್ಣೀರಿಡುತ್ತಾ ಕುಳಿತರೆ ಏಳಿಗೆಯಿಲ್ಲ. ನನ್ನ ಮಾತ ಕೇಳು–ದಾಸಣ್ಣ: ಪಶ್ಚಾತ್ತಾಪ ಪುನರ್ಜನ್ಮದ ಹೆಬ್ಬಾಗಿಲಾಗಬೇಕೇ ಹೊರತು, ಬರಡು ಕಂಬನಿಯಾಗೇ ಮುಕ್ತಾಯವಾಗಬಾರದು. ಆ ತಂದೆಗೆ ನಾನು ತಕ್ಕ ಮಗನಲ್ಲ ಎನ್ನುವ ನಿನ್ನ ಮಾತನ್ನು ನಾನು ಒಪ್ಪುವುದಿಲ್ಲ. ಮಾವಿನ ಮರದಲ್ಲಿ ಬೇವಿನಕಾಯಿ ಹುಟ್ಟುವುದು ಸಾಧ್ಯವಿಲ್ಲ. ಹಾಗೂ ಒಂದು ವೇಳೆ, ಯೌವನದ ಕುರುಡಿನಲ್ಲಿ ತಪ್ಪು ದಾರಿ ಇಟ್ಟೆ ಎನ್ನು– ಅದಕ್ಕೆ ಈಗ ಏನು ಮಾಡಬೇಕು? ಪಶ್ಚಾತ್ತಾಪಪಟ್ಟು ಕಣ್ಣೀರು ಕರೆದುಬಿಟ್ಟರೆ ಏನು ಸಾರ್ಥಕವಾಯಿತು? ಪಶ್ಚಾತ್ತಾಪದಿಂದ ಹೃದಯ ಶುದ್ಧಿ ಮಾಡಿಕೊಂಡ ಬಳಿಕ, ನೀನು ಹೊಸ ಬಾಳು ಕಟ್ಟಲು ಯತ್ನಿಸದಿದ್ದರೆ, ನಿನ್ನ ಪಶ್ಚಾತ್ತಾಪಕ್ಕೆ ಕುರುಡು ಕವಡೆಯ ಬೆಲೆಯೂ ಬರುವುದಿಲ್ಲ. ಅಂಥ ದುಃಖ, ವ್ಯಥೆ ತುರುಬು ನೆನೆಸಿ ಕೊಂಡು ಅತ್ತ ಹಾಗೆ, ಅಷ್ಟೆ. ನಿನ್ನ ಬಾಳು. ಪಶ್ಚಾತ್ತಾಪ ಹಾಗೆ ವಿಫಲತೆಯ ದಾರಿ ಹಿಡಿಯಬಾರದು. ಪಶ್ಚಾತ್ತಾಪ ತೀವ್ರವಾದ ಹೊತ್ತಿನಲ್ಲಿ ಮುಂದೇನೂ ದಾರಿ ಕಾಣದಂತಾಗುವುದು ಒಂದು ರೀತಿಯ ಆತ್ಮಗ್ಲಾನಿ. ಇಂಥ ಹೊತ್ತಿನಲ್ಲೇ ಭಗವಾನ್ ಶ್ರೀ ಕೃಷ್ಣ, ಅರ್ಜುನನಿಗೆ 'ಕ್ಷುದ್ರಂ ಹೃದಯ ದೌರ್ಬಲ್ಯಂ–ತ್ಯಕ್ತ್ವೋತ್ತಿಷ್ಠ ಪರಂತಪ' ಎಂದು ಹೇಳಿದುದು. ಈ ಕ್ಲೈಬ್ಯ, ಬೆಳೆಯುವ ಜೀವಕ್ಕೆ ಸಲ್ಲದು. ಅದನ್ನು ಬಿಡು ದಾಸಣ್ಣ."

–ಎಂದ ಶಾಮಣ್ಣ.

ಆ ಮಾತಿಗೆ ವೆಂಕಟದಾಸಪ್ಪನವರೂ ಏನೊಂದೂ ಉತ್ತರ ಕೊಡಲಿಲ್ಲ. ಅವರು ಸುಮ್ಮನೆ ಕುಳಿತಿದ್ದುದನ್ನು ಕಂಡು ಶಾಮಣ್ಣನೇ ತನ್ನ ಮಾತನ್ನು ಮುಂದುವರಿಸಿದ–

"ಈಗ ನಿನ್ನ ದುಃಖಕ್ಕೆ ಕಾರಣ ಇಷ್ಟೇ ತಾನೆ– ಆ ತಂದೆಗೆ ನಾನು

ತಕ್ಕ ಮಗನಾಗಲಿಲ್ಲ. ಇದ್ದಾಗ ಅವನಿಗೆ ಸಂತೋಷವಾಗುವಂತೆ ಇರಲಿಲ್ಲ'. ಆಯಿತು—ಈಗ ನೀನು ಕಣ್ಣೀರಿಟ್ಟು, ಕೈ ಮುದುರಿಕೊಂಡು ಕುಳಿತುಬಿಟ್ಟರೆ, ಆ ದೋಷ ಪರಿಹಾರವಾಗುತ್ತದೆಯೇ? ಈಗಲೂ ಅವರ ಆತ್ಮಕ್ಕೆ ಸಂತೋಷ ವಾಗಬೇಕು ಎಂಬ ಭಾವನೆ ನಿನಗಿದ್ದರೆ, ಅವರು ಬದುಕಿದ್ದಾಗ ಏನು ಮಾಡಿದ್ದರೆ ಅವರಿಗೆ ಸಂತೋಷವಾಗುತ್ತಿತ್ತೋ, ಆ ಕೆಲಸವನ್ನು ಈಗಲಾ ದರೂ ಮಾಡು. ಯಾವುದರಿಂದ ಅವರು ದೊಡ್ಡವರು ಎನಿಸಿಕೊಂಡರೋ, ಆ ಗುಣಗಳನ್ನು ನಿನ್ನಲ್ಲಿ ನೀನು ಬೆಳೆಸಿಕೊಂಡು, ನಿನ್ನ ರೂಪದಲ್ಲಿ ಅವರು ಬದುಕಿ ದ್ದಾರೆ ಎಂದು ಲೋಕಕ್ಕೆ ತೋರಿಸಿಕೊಡು. ಅದು ನೀನು ಮಾಡಬೇಕಾದದ್ದು."

"ಆದರೆ ಅದು ನನ್ನಿಂದ ಸಾಧ್ಯವಿದೆಯೆ ಮಾವ?"

"ಇದೆಯೇ ಎಂಬ ಶಂಕೆ ಹೇಡಿತನ. ಶಕ್ತಿ ಇಲ್ಲದ್ದನ್ನು ಸಾಧಿಸುತ್ತೇನೆ ಎನ್ನುವುದು ಪುರುಷ ಲಕ್ಷಣ. ಮನುಷ್ಯ ಪ್ರಯತ್ನಕ್ಕೆ ಯಾವುದು ಅಸಾಧ್ಯ ದಾಸಣ್ಣ? ಭಗೀರಥ ಸ್ವರ್ಗದ ಗಂಗೆಯನ್ನು ನೆಲಕ್ಕೆ ತರಲಿಲ್ಲವೇ? ವಿಶ್ವಾಮಿತ್ರ ತನ್ನ ಹುಟ್ಟನ್ನೇ ಬದಲಾಯಿಸಿ ಬ್ರಹ್ಮರ್ಷಿಯಾಗಲಿಲ್ಲವೇ? ನಮಗೆ ಸಾಧ್ಯ ವಾಗದುದನ್ನು ಸಾಧ್ಯಮಾಡಿಕೊಳ್ಳುವ ಶಕ್ತಿಯನ್ನು ಗಳಿಸಿಕೊಳ್ಳುವುದಕ್ಕೇ ತಾನೇ ಗಾಯತ್ರಿ ಉಪಾಸನೆ ಮಾಡುವುದು. 'ಗಾಯತ್ರಿ ಬ್ರಾಹ್ಮಣನ ಕೈಯ ಬ್ರಹ್ಮಾಸ್ತ್ರ.' ಆ ಬಲವನ್ನು ಪಡೆದು, 'ಅದು ಮಾಡಲಾರೆ, ಇದು ನನಗೆ ಸಾಧ್ಯವಿಲ್ಲ' ಎಂದು ಕೈಯೂರಿ ಕುಳಿತುಕೊಳ್ಳುವ ಬ್ರಾಹ್ಮಣ ಚಂಡಾಲನಿಗಿಂತ ಅಧಮ. ಮನಸ್ಸು ಮಾಡು. ಈ ಷಂಡ ಕಂಬನಿಗಳನ್ನು ತೊಡೆದು ಹಾಕಿ ಗಂಡಾಗಿ ನಿಂತುಕೋ. ಯಾವುದು ಅಸಾಧ್ಯವಾಗುತ್ತದೋ ನೀನೇ ನೋಡು. ನರಸಪ್ಪನವರ ವಂಶಲತೆಗೆ ಇವತ್ತು ನೀನು ಆಧಾರಸ್ತಂಭವಾಗಿ ನಿಂತು, ಆ ಬಳ್ಳಿಯನ್ನು ಬೆಳೆಸಬೇಕು ದಾಸಣ್ಣ. ಹಾಗಿರುವಾಗ ನೀನೇ ಇಷ್ಟು ದುರ್ಬಲನಾದರೆ ಆಗದು. ಆ ತಂದೆಗೆ ತಕ್ಕ ಮಗನಾಗು."

ಶಾಮಣ್ಣ ಹೇಳಿದ ಮಾತುಗಳನ್ನು ಕೇಳಕೇಳುತ್ತಾ, ವೆಂಕಟದಾಸಪ್ಪ ನವರ ಮೈಯಲ್ಲಿ ಏಕೋ ತಣ್ಣಗಾಗಿದ್ದ ರಕ್ತ ಬಿಸಿಯೇರಿತು. ಶಾಮಣ್ಣ ಆಡಿದ ಒಂದೊಂದು ಮಾತೂ ಮಿಂಚಿನ ಎಳೆಗಳಾಗಿ, ಕತ್ತಲು ಕವಿದ ಅವರ ಕಣ್ಣೆ ದುರು ನರ್ತಿಸಿದವು. ಎಂಥದೋ ಕುಳಿರು ಹಿಡಿದು ಜಡವಾಗಿದ್ದ ಮೈಯನ್ನು ಕೊಡವಿಕೊಂಡು, ಬಾಗಿದ ಬೆನ್ನೆಲುಬನ್ನು ಸೆಟೆಸಿ ನಿಲ್ಲಬೇಕು ಎನಿಸಿತು.

'ಗಾಯತ್ರಿ ಬ್ರಾಹ್ಮಣನ ಕೈಯ ಬ್ರಹ್ಮಾಸ್ತ್ರ. ಆ ಬಲವನ್ನು ಪಡೆದು, ಅದು ಮಾಡಲಾರೆ, ಇದು ನನಗೆ ಸಾಧ್ಯವಿಲ್ಲ ಎಂದು ಕೈಯೂರಿ ಕುಳಿತು ಕೊಳ್ಳುವ ಬ್ರಾಹ್ಮಣ ಚಂಡಾಲನಿಗಿಂತ ಅಧಮ'.

–ಎಂದ ಶಾಮಣ್ಣನ ಮಾತುಗಳನ್ನು ಕೇಳಿ, ವೆಂಕಟದಾಸಪ್ಪನವರ ಎದುಳನ್ನು ಕೆಣಕಿದಂತಾಗಿ, ಹಿಂದೆಂದೋ ಅವರು ತಮ್ಮ ತಾಯಿಯ ಬಾಯಲ್ಲಿ ಕೇಳಿದ ಮಾತು ನೆನಪಾಯಿತು–

'ಹುಚ್ಚ......... ಹುಚ್ಚ......... ನಾಟಕ ಬರೆಯೋದಂತೆ......... ಅರಮನೆ ಮುಂದೆ ಹೋಗಿ ಅಂಬಲಿ ಭಿಕ್ಷೆ ಕೇಳಿದ ಹಾಗೆ. ಗಾಯತ್ರಿದೇವಿ ಮನಸ್ಸು ಮಾಡಿದರೆ. ನಾಟಕ ಬರೆಯೋದೇನು. ವೇದವನ್ನೇ ಬರೆಯಬಹುದು. ಅದನ್ನು ಮರೆತದ್ದಕ್ಕೇ ನಿನ್ನ ನಾಲಿಗೆ ತರಗೆಲೆಯಾಗಿರೋದು.'

ಆ ದಿನವೂ, ತನ್ನ ತಾಯಿ ಆ ಮಾತು ಹೇಳಿದ ದಿನವೂ, ಅವರ ಚಿತ್ತ ವನ್ನು ಇಂಥದೇ ಸಂಶಯದ ಕಾವಳ ಕವಿದಿತ್ತು.–

'ನಾನು ಈ ಕೆಲಸ ಮಾಡಬಲ್ಲೆನೇ?'

ಈ ದಿನವೂ ಮತ್ತೆ ಅಂಥದೇ ಚಿತ್ತಗ್ಲಾನಿ–

'ಆ ತಂದೆಗೆ ನಾನು ತಕ್ಕ ಮಗನಾಗಬಲ್ಲನೇ?'

ಎರಡು ದಿನವೂ–ಅಂದು ತಾಯಾಗಿ–ಇಂದು ಮಾವನಾಗಿ, ಯಾವುದೋ ವಾಣಿ ನುಡಿಯುತ್ತಿದೆ–

'ಗಾಯತ್ರಿಗೆ ಶರಣಾಗು–ನಿನಗೆ ಸೋಲಿಲ್ಲ.'

ಆ ಮಾತು ನೆನಪಾಗಿ, ಅವರ ಚಿತ್ತ ಮತ್ತಾವುದೋ ಜಾಡಿನಲ್ಲಿ ನಡೆದು. ತನ್ನನ್ನು ತಾನೇ ಪ್ರಶ್ನಿಸಿಕೊಂಡಿತು–

'ಒಮ್ಮೊಮ್ಮೆ ನನ್ನ ಹೃದಯವನ್ನು ದೌರ್ಬಲ್ಯ ಆವರಿಸಿದಾಗಲೂ, ಗಾಯತ್ರಿಯ ಮಾತೇ ಏಕೆ ಬರುತ್ತಿದೆ? ಕಲಿತು ಮಾತಾಡಿಕೊಂಡವರ ಹಾಗೇ ಎಲ್ಲರೂ ನನಗೆ ಗಾಯತ್ರಿಯನ್ನೇ ಹಿಡಿ ಎಂದು ಏಕೆ ಹೇಳುತ್ತಾರೆ? ...

'ಆ ತಾಯಿಯೇ ಎಲ್ಲರ ಹೃದಯದಲ್ಲೂ ಕುಳಿತು, ಅವರಿಗೆ ಪ್ರೇರೇಪಣೆ ಮಾಡಿ, ಅವರ ಬಾಯಿ ಮೂಲಕ ನನಗೆ ಅಪ್ಪಣೆ ಮಾಡುತ್ತಿದ್ದಾಳೆಯೇ–'ನನ್ನ ಬಳಿಗೆ ಬಾ' ಎಂದು...

'ಆಕೆಗೆ ನನ್ನಲ್ಲಿ ಅಷ್ಟು ಪ್ರೀತಿಯೇ, ವಾತ್ಸಲ್ಯವೇ?...

'ಇರಬೇಕು—ಇಲ್ಲವಾದರೆ, ನಾನು ಕರೆಯದಿದ್ದರೂ 'ನಾನು ಇದ್ದೇನೆ' ಎಂದು ತನ್ನ ನೆನಪು ಮಾಡಿಕೊಡುತ್ತಿದ್ದಳೇಕೆ?'

ಆ ಪ್ರಶ್ನೆ ಹೃದಯದಲ್ಲಿ ಮಿಡಿಯುತ್ತಿದ್ದಾಗಲೇ ಅವರಿಗೆ ತಮ್ಮ ಮನೆತನದ ಕಥೆ ನೆನಪಾಯಿತು—

'ದೇವಿ ನಿಮ್ಮ ವಂಶಕ್ಕೆ ತಾನಾಗಿ ಒಲಿದು ಬಂದ ದೇವತೆ.'

ಆ ಮಾತು ನೆನಪಾಗುತ್ತಿದ್ದ ಹಾಗೇ, ವೆಂಕಟದಾಸಪ್ಪನವರ ಮೈಯ ನರನರವನ್ನೂ ಹಿಡಿದು ಅಲುಗಿಸಿದಂತಾಗಿ, ರೋಮಾಂಚನವಾಗಿ, ತಾನೇ ತಾನಾಗಿ ಕಣ್ಣಲ್ಲಿ ಹನಿಯೊಡೆದವು.

ಆ ಭಾವೋದ್ರೇಕದಲ್ಲೇ ಪರವಶಚಿತ್ತರಾಗಿ ಹೇಳಿದರು—

"ನಿಜ, ನಿಜ ನಾರಾಯ್ಯ, ತಾಯಿಯನ್ನು ಮರೆತು ನಾನು ಚಂಡಾಲ ನಾಗಿದ್ದೆ. ಅದನ್ನು ಜ್ಞಾಪಿಸಿ ನೀನು ನನ್ನನ್ನು ಉದ್ಧಾರಮಾಡಿದೆ. ಖಂಡಿತ, ಖಂಡಿತವಾಗಿಯೂ ಇನ್ನು ಹೀಗೆ ಕಣ್ಣೀರು ಹಾಕುವುದಿಲ್ಲ. ತಂದೆಗೆ ತಕ್ಕ ಮಗನಾಗುತ್ತೇನೆ. 'ಆ' ತಾಯಿಗೆ ತಕ್ಕ ಮಗನಾಗುತ್ತೇನೆ."

ವೆಂಕಟದಾಸಪ್ಪನವರು ಹೇಳಿದ ಆ ಮಾತುಗಳನ್ನು ಕೇಳಿ, ಶಾಮಣ್ಣನಿಗೆ, ಕತ್ತಲು ಕವಿದು ನಕ್ಷತ್ರ ಖಚಿತವಾದ ಮುಗಿಲು ಏಕೋ ಥಳಥಳಿಸುತ್ತ ಕಂಪಿಸಿ ದಂತೆ ಭಾಸವಾಯಿತು.

ತನಗೆ ತಾನೇ—

'ತಾಯೀ ಶಿಲೆಯಲ್ಲಡಗಿದ ಮಹಾಶಿಲ್ಪವನ್ನು ಹೊರತಂದು ಜಗತ್ತಿಗೆ ತೋರುವ ಪುಣ್ಯ, ಹುಲು ಉಳಿಗೆ ನಿನ್ನ ಕೃಪಾಕಟಾಕ್ಷದಿಂದ ಲಭ್ಯವಾದಂತೆ, ಆ ಪುಣ್ಯವನ್ನಿಂದು ನನಗೂ ದೊರಕಿಸಿಕೊಟ್ಟೆಯಾ ಮಹಾತಾಯಿ'

—ಎಂದು, ಮನಸ್ಸಿನಲ್ಲೇ ಹೇಳಿಕೊಂಡು, ಇರುಳಿನ ತಂಗಾಳಿಯಲ್ಲಿ ಸುಳಿಯುತ್ತಿದ್ದ ಯಾವುದೋ ಅವ್ಯಕ್ತಶಕ್ತಿಗೆ ಕೈ ಮುಗಿದ.

ಆದರೆ ಬಾಯಿಂದ ಮಾತ್ರ ಒಂದು ಮಾತೂ ಹೊರಬೀಳಲಿಲ್ಲ.

## ೪

ಯಾವುದೋ ನಿಶ್ಚಿತ ಗತಿಯನ್ನು ಅನುಸರಿಸಿ ಹರಿಯುವ ಪ್ರವಾಹದಲ್ಲಿ, ಮೇಲಿನಿಂದ ಏನೋ ಒಂದು ವಸ್ತು ಬಿದ್ದಾಗ, ಆ ನೀರಿನಲ್ಲಿ ಒಂದು ಗಳಿಗೆ ಕಲಕಲವಾಗಿ, ನೀರು ಸುಳಿ ಸುತ್ತಿ, ಬುದ್ಬುದಗಳಾಡಿ, ಮತ್ತೆ ಮೊದಲಿನಂತೇ ಶಾಂತವಾಗಿ ಹರಿಯತೊಡಗುವಂತೆ, ನರಸಪ್ಪನವರ ಶಾಪದಿಂದ ಆ ಮನೆಯಲ್ಲಿ ಮೂಡಿದ ಅಶಾಂತಿ, ಉದ್ವಿಗ್ನತೆ, ದಿನಕಳೆದಂತೆ ಕಡಮೆಯಾಗಿ, ಮನೆಯಲ್ಲಿದ್ದ ವರು, ಅನಿವಾರ್ಯವಾದ ಪರಿಸ್ಥಿತಿಗೆ ತಲೆಬಾಗಿ, ಮನೆಯಲ್ಲಿ ಶಾಂತಿಯ ವಾತಾವರಣ ಮೂಡಿತು.

ಮಗಳನ್ನು ಮನೆ ತುಂಬಿಸಿಕೊಡಲೆಂದು ಬಂದ ಶಾಮಣ್ಣ ವೈಕುಂಠ ಸಮಾರಾಧನೆ ಮುಗಿಸಿಕೊಂಡ ಬಳಿಕ ತನ್ನ ಹೆಂಡತಿ ಮಕ್ಕಳೊಂದಿಗೆ ಪರಶು ರಾಮಪುರಕ್ಕೆ ಹಿಂದಿರುಗಿದ.

ಉಪಾಧ್ಯಾಯನಾದ ಚಂದ್ರಶೇಖರನಿಗೂ, ಅಲ್ಲಿ ಹೆಚ್ಚು ದಿನ ಇರು ವುದು ಸಾಧ್ಯವಾಗದೆ, ರಾಜೇಶ್ವರಿಯನ್ನು ಮಾತ್ರ ತಾಯಿಗೆ ನೆರವಾಗಲೆಂದು ಅಲ್ಲೇ ಬಿಟ್ಟುಹೋದ.

ದೇವೀಕೆರೆಯಿಂದ ಹೊರಡುವಾಗ, ಶಾಮಣ್ಣ, ಚಂದ್ರಶೇಖರ, ಇಬ್ಬರೂ ವೆಂಕಟದಾಸಪ್ಪನವರಿಗೆ—

'ಏನು ವಿಷಯವಿದ್ದರೂ ಹೇಳಿ ಕಳಿಸು. ಯಾವುದಕ್ಕೂ ಸಂಕೋಚ ಮಾಡಬೇಡ. ಯಾವ ಚಿಂತೆಯನ್ನು ಹೆಚ್ಚಾಗಿ ಹಚ್ಚಿಕೊಳ್ಳಬೇಡ. ಎಂಥದೇ ಸಂದರ್ಭದಲ್ಲೂ, ಈಗ ನೀನು ಮನೆಯ ಯಜಮಾನ ಎಂಬುದನ್ನು ಮರೆಯ ಬೇಡ'.

—ಎಂದು ಹೇಳಬೇಕಾದ ಬುದ್ಧಿಯ ಮಾತನ್ನು ಹೇಳಿ ಹೋದರು. ಆದರೆ ವೆಂಕಟದಾಸಪ್ಪನವರಿಗೆ ಮಾತ್ರ ಆ ಯಾವ ಬುದ್ಧಿವಾದದ ಮಾತಿನ ಆಗತ್ಯವೂ ಇದ್ದಂತಿರಲಿಲ್ಲ.

ತಂದೆಯ ಮರಣದ ಮೊದಲ ದಿನಗಳಲ್ಲಿ ಅವರ ಹೃದಯದಲ್ಲಿ ಹೊಯ್ದಾಡುತ್ತಿದ್ದ ಅಶಾಂತಿಯ ಭಾವನೆ, ಆ ದಿನ ಶಾಮಣ್ಣನೊಂದಿಗೆ ಮಾತನಾಡಿದ ಬಳಿಕ, ಅವರ ಹೃದಯದಿಂದ ತೊಲಗಿಹೋಗಿತ್ತು.

ಅಂದಿನವರೆಗೂ ಕಿರು ತೊರೆಯಂತೆ, ವಿಶೇಷ ಸಪ್ಪಳ ಮಾಡುತ್ತ ಹರಿಯುತ್ತಿದ್ದ ಅವರ ಬಾಳಝರಿ ಈಗ, ಹೊಸ ನೀರು ಬಂದಂತಾಗಿ ಅದರ ಆಳ, ಅಗಲ ಎಲ್ಲವೂ ಹೆಚ್ಚಿ, ಅದು ಶಾಂತವಾಗಿ, ಗಂಭೀರವಾಗಿ ಹರಿಯ ಲಾರಂಭಿಸಿತ್ತು.

ಸ್ವಭಾವತಃ ಹೆಚ್ಚು ವಾಚಾಳಿಯಲ್ಲದ ವೆಂಕಟದಾಸಪ್ಪನವರು, ಈಗಂತೂ ಇದ್ದದ್ದೂ ಬಾಯಿ ಕಟ್ಟಿದಂತವರಾದರು.

ಅವರ ನೋಟದಲ್ಲಿ ಏನೋ ಅಂತರ್ಮುಖತೆ ಮೂಡಿ, ಮುಖದಲ್ಲಿ ಪ್ರಶಾಂತ ಗಂಭೀರತೆ ನೆಲೆಸಿತು.

ಆದರಿಂದಾಗಿ, ಅವರು ಬೇರೆಯವರೊಂದಿಗೆ ಹೆಚ್ಚಾಗಿ ಮಾತಾಡುವು ದಿರಲಿ—ಅವರೊಂದಿಗೆ ಮಾತನಾಡಬೇಕೆಂದು ಬಂದವರಿಗೂ, ಅವರ ಮುಖ ವನ್ನು ನೋಡಿದಾಗ, ತಾವು ಮಾತನಾಡಿದರೆ, ಏನೋ ಧ್ಯಾನಕ್ಕೆ ಭಂಗ ತಂದಂತಾಗಿ, ಬಾಯಿ ಕಟ್ಟಿಹೋಗುತ್ತಿತ್ತು.

ಹಾಗೆಂದು—ಅವರ ಗಂಭೀರತೆಯಲ್ಲಿ, ನೋಡಿದವರನ್ನು ಬೆದರಿಸುವಂಥ ಉಗ್ರತೆಯಿರಲಿಲ್ಲ; ಕಂಡ ಹೃದಯವನ್ನು ತನ್ನದಾಗಿ ಮಾಡಿಕೊಳ್ಳುವ ಮಾರ್ದವತೆಯಿತ್ತು.

ಸದಾ ಅಂತರ್ಮುಖವಾದ ಅವರ ಕಣ್ಣುಗಳು, ಅಗಲವಾಗಿ ತೆರೆದು ಹೊರಗಿನದನ್ನು ನೋಡಿದಾಗ–ಆ ಕಣ್ಣನ್ನು ಕಂಡವರಿಗೆ, ಇದ್ದಕ್ಕಿದ್ದ ಹಾಗೇ ತಂಗಾಳಿ ಸುಳಿದು, ಬೆಳದಿಂಗಳು ಬಿದ್ದಂತೆ ಭಾಸವಾಗುತ್ತಿತ್ತು.

ಬಹುಬೇಗ ಅವರಲ್ಲಾದ ಈ ಪರಿವರ್ತನೆ, ಸುತ್ತಲವರೆಲ್ಲರಿಗೂ ಅರಿವಾಗತೊಡಗಿತು.

ತಂದೆ ತೀರಿಕೊಂಡ ಮೊದಲ ಎರಡು ತಿಂಗಳ ಕಾಲ ಆ ಮನೆಯಲ್ಲಿದ್ದ ರಾಜೇಶ್ವರಿ, ಎಷ್ಟೋ ಬಾರಿ ವೆಂಕಟದಾಸಪ್ಪನವರನ್ನು ನೋಡಿ, ತನ್ನ ತಾಯಿಗೆ—

'ಅಮ್ಮ, ಈಗೀಗ ಒಂದೊಂದು ಸಲ ದಾಸಣ್ಣನನ್ನು ನೋಡಿದರೆ, ತಟಕ್ಕನೆ ಅಣ್ಣನನ್ನು ನೋಡಿದ ಹಾಗಾಗುತ್ತೆ.'

—ಎಂದು ಹೇಳಿದ್ದಳು.

ಹಳ್ಳಿಯವರೂ—

'ದೊಡ್ಡ ಬುದ್ಧಿಯೋರು ಹೋದ್ರೇ ಹೋದ್ರು, ದಾಸಣ್ಣನೋರು ಏನೋ ಒಂದು ಥರಾ ಆಗ್ಹೋಗಿದಾರೆ. ಯಾವಾಗ ನೋಡು–ಯಾಕೋ ಆಗತಾನೇ ಪೂಜೆ ಮುಗಿಸಿಕೊಂಡು ಬಂದೋರ್ಹಾಗೆ ಕಾಣ್ತಾರೆ.'

—ಎನ್ನಲಾರಂಭಿಸಿದರು.

ಆದರೆ ಉಳಿದೆಲ್ಲರಿಗಿಂತಲೂ ಹೆಚ್ಚಾಗಿ, ಅವರಲ್ಲಾದ ಪರಿವರ್ತನೆಯು ಪರಿಚಯವಾದದ್ದು, ಅವರ ಅತ್ಯಂತ ಆಪ್ತ ಸಂಪರ್ಕವನ್ನು ಪಡೆದಿದ್ದ ಗೌರಮ್ಮನಿಗೆ.

ನರಸಪ್ಪನವರು ತೀರಿಕೊಳ್ಳುವವರೆಗೂ, ಒಮ್ಮೆಯಾದರೂ ಆ ಮನೆಯಲ್ಲಿ ಕಾಲಿಡದ ಗೌರಮ್ಮ, ಅವರು ತೀರಿಕೊಂಡ ಬಳಿಕ, ಪ್ರತಿದಿನವೂ ಅವರ ಮನೆಗೆ ಬಂದು ಹೋಗಲಾರಂಭಿಸಿದ್ದಳು.

ರಾಜೇಶ್ವರಿಯಂತೂ ಎಂದೋ ತನ್ನ ಹೃದಯವನ್ನು ಗೌರಮ್ಮನಿಗೆ ಒಪ್ಪಿಸಿದ್ದಳು. ಈಗ ಲಕ್ಷ್ಮಿದೇವಮ್ಮನೂ, ನರಸಪ್ಪನವರು ಸಾಯುವಾಗ ಹೇಳಿದಂತೆ, ಗೌರಮ್ಮನನ್ನು ಮನೆಯ ಸೊಸೆಯಂತೇ ಪ್ರೀತಿವಿಶ್ವಾಸದಿಂದ ಕಾಣತೊಡಗಿದ್ದಳು.

ಹಿರಿಯರು ಹೋದ ಆ ಮನೆಗೆ ವೀರಣ್ಣನೇ ಈಗ ಹಿರಿಯನಂತಾಗಿದ್ದ. ಮನೆಯಲ್ಲಿ, ಹಳ್ಳಿಯಲ್ಲಿ ಏನು ಕೆಲಸವಾಗಬೇಕಾಗಿದ್ದರೂ, ಅದಕ್ಕೆ ಎಲ್ಲರೂ ಆತನನ್ನೇ ಕೇಳುತ್ತಿದ್ದರು. ಏನು ತರುವುದು, ಕೊಡುವುದಿದ್ದರೂ ವೆಂಕಟ ದಾಸಪ್ಪನವರು—

'ವೀರಣ್ಣನಿಗೆ ಹೇಳಿ'.

—ಎನ್ನುತ್ತಿದ್ದರು.

ಆ ಗಂಡ ಹೆಂಡಿರು, ನರಸಪ್ಪನವರ ಮನೆಯಲ್ಲಿ ಅಷ್ಟು ವಿಶೇಷವಾಗಿ ಓಡಾಡುವುದು ಹಳ್ಳಿಯಲ್ಲಿ ಬಹು ಜನಕ್ಕೆ, ಅದರಲ್ಲೂ ಹಳ್ಳಿಯ ಬ್ರಾಹ್ಮಣ ಕುಟುಂಬಗಳಿಗೆ ವಿಶೇಷ ಅಸಮಾಧಾನಕ್ಕೆ ಕಾರಣವಾಗಿತ್ತು.

ದೇವೀಕೆರೆಯಲ್ಲಿ ಬ್ರಾಹ್ಮಣರ ಮನೆಗಳು ಹೆಚ್ಚಾಗಿರಲಿಲ್ಲ. ಸರಸಪ್ಪನವರ ಮನೆಯನ್ನು ಬಿಟ್ಟರೆ-- ಉಳಿದದ್ದು ಮೂರೇ ಮೂರು. ಪುರೋಹಿತ ಅಚ್ಚಣ್ಣ ಭಟ್ಟರು, ಶಾನುಭೋಗ ಶ್ರೀನಿವಾಸರಾಯರು, ವೆಂಕಟಗಿರಿ ಜೋಯಿಸರ ಮನೆಗಳು.

ಹಳ್ಳಿಯಲ್ಲಿ ಈ ನಾಲ್ಕಲ್ಲದೆ ಬೇರೆ ಬ್ರಾಹ್ಮಣರ ಮನೆಗಳೇ ಇಲ್ಲದ್ದರಿಂದ, ಶುಭಾಶುಭ ಕಾರ್ಯಗಳಲ್ಲಿ ಒಬ್ಬರ ನೆರವು ಮತ್ತೊಬ್ಬರಿಗೆ ಬೇಕಿತ್ತಾಗಿ, ನಾಲ್ಕು ಕುಟುಂಬಗಳೂ ಹೊಂದಿಕೊಂಡೇ ಹೋಗುತ್ತಿದ್ದರು. ತೋರಿಕೆಗೆ ಒಬ್ಬರೊಬ್ಬರಿಗೆ ವಿಶೇಷ ಸ್ನೇಹವಿದ್ದರೂ, ಈ ಸಂಸಾರಗಳಲ್ಲಿ ಒಳಗೊಳಗೆ ಅಸಮಾಧಾನವಿಲ್ಲದೆ ಇರಲಿಲ್ಲ.

ಅದರಲ್ಲಿಯೂ ಅಚ್ಚಣ್ಣಭಟ್ಟರಿಗಂತೂ ಎಲ್ಲರ ವಿಷಯದಲ್ಲೂ ಅಸಮಾಧಾನವೇ.

ಕರ್ಮಕಾಂಡದ ಪೂರ್ವಾಪರ ಪ್ರಯೋಗಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದ ಅಚ್ಚಣ್ಣಭಟ್ಟರು, ದೇವೀಕೆರೆಯ ಬ್ರಾಹ್ಮಣ ಕುಟುಂಬಗಳಿಗೇ ಅಲ್ಲ, ಎಲ್ಲ ಕೋಮಿನ ಎಲ್ಲರಿಗೂ ಪುರೋಹಿತರಾಗಿದ್ದರು. ಹಳ್ಳಿಯಲ್ಲಿ ಲಗ್ನ, ಮುಂಜಿ, ಪ್ರಸ್ತ, ಶಾಂತಿ—ಏನು ನಡೆದರೂ ಎಲ್ಲವೂ ಅವರ ಮೂಲಕವೇ ನಡೆಯುತ್ತಿತ್ತು. ಹಳ್ಳಿಯಲ್ಲಿದ್ದ ಮೂರು ನಾಲ್ಕು ಗುಡಿಗಳ—ಮಾರಮ್ಮನ ಗುಡಿಯೊಂದು ವಿನಾ—ಪೂಜೆಯ ಕೆಲಸವೂ ಅವರದೇ ಆಗಿತ್ತು.

ಇದರಿಂದಾಗಿ ಗ್ರಾಮದ ಮನೆಗಳು, ದೇವತೆಗಳು ಎಲ್ಲವೂ ತಮ್ಮ ಹಕ್ಕಿಗೆ ಒಳಪಟ್ಟ ಆಸ್ತಿ ಎಂದು ಭಾವಿಸಿದ್ದರು ಅಚ್ಚಣ್ಣಭಟ್ಟರು.

ಹೀಗಿರುವಾಗ, ಹಳ್ಳಿಯ ಅತ್ಯಂತ ಪ್ರಮುಖ ಉತ್ಸವವಾದ ಜಾತ್ರೆಯಲ್ಲಿ, ನವರಾತ್ರಿಯ ಉತ್ಸವದಲ್ಲಿ ಸರಸಪ್ಪನವರ ಮನೆಗೆ ಅಗ್ರಮರ್ಯಾದೆ ದೊರಕುವುದು, ತಮ್ಮ ಹಕ್ಕಿಗೆ ಏನೋ ಲೋಪ ಬಂದಂತೆಯೇ, ತಮ್ಮ ಮರ್ಯಾದೆಗೆ ಅಷ್ಟು ಊನ ಬಂದಂತೆಯೇ ಎಂದು ಅಚ್ಚಣ್ಣಭಟ್ಟರು ಭಾವಿಸಿದ್ದರು.

ಅವರೆ, ದೇವೀ ಜಾತ್ರೆಯಲ್ಲಿ, ಅಗ್ರಪೂಜೆ ವೆಂಕಟದಾಸಪ್ಪನವರ

ಮನೆಯವರಿಂದಲೇ ನಡೆಯಬೇಕೆಂಬುದು ತಲೆತಲಾಂತರದಿಂದ ಬಂದ ಮಾತಾದುದರಿಂದ, ಆ ವಿಷಯದಲ್ಲಿ ತಾವು ಕೊಂಕು ಮಾತಾಡಿದರೆ, ತಮ್ಮ ತಲೆ ಉಳಿಯುವುದು ಕಷ್ಟವೆಂದರಿತು, ಅಚ್ಚಣ್ಣಭಟ್ಟರು. ಹೊಟ್ಟೆಯೊಳಗಿದ್ದ ಮಾತನ್ನು ಹೊರಗೆ ಆಡಲಾರದೆ ಬಾಯಿ ಮುಚ್ಚಿಕೊಂಡಿದ್ದರು.

ವೆಂಕಟದಾಸಪ್ಪನವರ ಬಾಳಿನಲ್ಲಿ ಗೌರಮ್ಮನ ಪ್ರವೇಶವಾದ ಒಳಿಕ, ಬೆಸುಗೆ ಹಾಕಿದಂತೆ ಬಂಧಿತವಾಗಿದ್ದ ಅಚ್ಚಣ್ಣಭಟ್ಟರ ಬಾಯಿಗೆ ಕೊಂಚ ಸ್ವಾತಂತ್ರ್ಯ ಲಭಿಸಿತ್ತು.

ಆಗಲೂ ನೇರವಾಗಿ ನರಸಪ್ಪನವರನ್ನು, ಅವರ ವಂಶವನ್ನು ಹಳಿಯುವುದು ಅಸಾಧ್ಯವಾದರೂ—

'ದೇವಿಪೂಜೆ ಮಾಡೋ ಮನೇಲಿ ಇಂಥ ಮಡಿ—ಮೈಲಿಗೆ ಕಲೆಸಿದರೆ ಹೇಗೆ? ನಾಯಕರೋಳನ್ನು ಮುಟ್ಟಿದ ಕೈಲಿ, ದೇವೀನ ಮುಟ್ಟಿದರೆ,ಮೂರು ಮೂರು ತಲೆಮಾರು ತೊಡೆದುಬಿಡ್ತಾಳೆ ದೇವಿ'.

—ಎಂದು ತಾವೇ ದೇವಿಯ ಪ್ರತಿನಿಧಿಯೆಂಬಂತೆ ಆಡಿದ್ದರು.

ಅವರ ಬಾಯಲ್ಲಿ ಈ ಮಾತನ್ನು ಕೇಳಿದ ಜನ, ಅದಕ್ಕೆ ಸಮ್ಮತಿ ಸೂಚಿಸದಿದ್ದರೂ, ವಿರೋಧಿಸದಿದ್ದುದೇ, ಅಚ್ಚಣ್ಣಭಟ್ಟರಿಗೆ ಸಾಕಷ್ಟು ಪ್ರೋತ್ಸಾಹ ಕೊಟ್ಟಂತಾಗಿತ್ತು.

ಅಂದಿನಿಂದ ಅವರು ಇಂದಲ್ಲ—ನಾಳೆ ದೇವೀಪೂಜೆಯ ಸರ್ವಸ್ವಾಮ್ಯವನ್ನು ಪಡೆಯುವ ಕನಸು ಕಾಣತೊಡಗಿದ್ದರು. ಎಷ್ಟೋ ಬಾರಿ ತಮ್ಮ ಹೆಂಡತಿ ಸೀತಾಲಕ್ಷ್ಮಮ್ಮನ ಎದುರಿಗೆ—

'ನೋಡ್ತಾ ಇರು ಸೀತಾಲಕ್ಷ್ಮೀ, ಯಾವತ್ತಿದ್ದರೂ ಅಮ್ಮನೋರ ಗುಡಿ ಪೂಜೆ ನನ್ನದೇ ಆಗುತ್ತೆ. ಹಿಂದಿದ್ದರೂ ಅದು ನರಸಪ್ಪನೋರ ತಲೆಗೇ ಕೊನೆ'

—ಎಂದಿದ್ದರು.

ಹಳ್ಳಿಯ ಮದುವೆ, ಮುಂಜಿಗಳಲ್ಲೆಲ್ಲಾ, ಹಳ್ಳಿಯವರು ಅಮ್ಮನವರ ಹೆಸರಿಗೆ ಕೊಟ್ಟ ಸೀರೆ, ಕುಬುಸ, ಕಾಣಿಕೆ ಲಕ್ಷ್ಮೀದೇವಮ್ಮನ ಪಾಲಾಗುವುದನ್ನು ಕಂಡು ಹೊಟ್ಟೆ ಉರಿದುಕೊಂಡಿದ್ದ ಸೀತಾಲಕ್ಷ್ಮಮ್ಮನಿಗೂ ಅದು ಅಪ್ರಿಯವಾಗಿರಲಿಲ್ಲ.

'ಅಷ್ಟಲ್ದೇ ಏನೊಂದ್ರೆ–ಅವರ ಮನೇಲಿ, ಯಾವತ್ತೋ ಓಬಿರಾಯನ ಕಾಲದಲ್ಲಿ ಯಾರಿಗೋ ದೇವಿ ಕಾಣಿಸಿಕೊಂಡ ಮಾತ್ರಕ್ಕೆ ಗುಡಿ ಅವರಪ್ಪನ ಮನೆ ಆಸ್ತಿ ಆಗಿಹೋಯಿತೆ? ಆ ಲಕ್ಷ್ಮೀದೇವಿ ತಾನೇ ಅದೆಷ್ಟು ಮೆರೀತಾಳೆ. ಯಾರ ಮನೇಗಾದ್ರೂ ಅರಿಷಿಣ ಕುಂಕುಮಕ್ಕೆ ಬರಬೇಕೊಂದ್ರೆ ಸಾಕ್ಷಾತ್ ಅಮ್ಮನೋರನ್ನೇ ಬಿಜಯ ಮಾಡಿಸದ ಹಾಗಾಗುತ್ತೆ. ಅಷ್ಟು ಸೊಕ್ಕಿ ಮೆರೆಯೋ ಹೊತ್ತಿಗೇ ಮತ್ತೆ, ಅವಳ ಹೊಟ್ಟೇಲಿ ಅಂಥ ಮುಖಕ್ಕೆ ಮಸಿ ಬಳಿಯೋ ಮಗ ಹುಟ್ಟಿ, ನಾಯಕರೋಳನ್ನ ಅವಳ ಸೊಸೆ ಮಾಡಿದ್ದು'

—ಎಂದು ತಾನೂ ಗಂಡನ ಮಾತಿಗೆ ಧ್ವನಿ ಕೂಡಿಸಿ ಮೂಗು ಮುರಿದಿದ್ದಳು.

ಅಷ್ಟೇ ಅಲ್ಲ—ಸಂದರ್ಭ ಒದಗಿದಾಗ ಈ ಬಗೆಯ ಮಾತನ್ನು ಇತರ ಹೆಂಗಳೆಯರ ಮುಂದೆ ಆಡಲೂ ಹಿಂಜರಿದಿರಲಿಲ್ಲ.

ಆಕೆಯ ಬಾಯಿಂದ ಇಂಥ ಮಾತನ್ನು ಕೇಳಿದ ವೆಂಕಟಗಿರಿಜೋಯಿಸರ ಹೆಂಡತಿ ಲಲಿತಮ್ಮ, ತಾನು ಕೇಳಿದ ಮಾತನ್ನು ಗಂಡನ ಮುಂದೆ ಹೇಳಿದಾಗ ವೆಂಕಟಗಿರಿಜೋಯಿಸರು—

'ಅಚ್ಚಣ್ಣಭಟ್ಟನ ಮನೆಯೋರ ಮಾತು ಕೇಳಿಕೊಂಡು, ಹಾಗೆ ನೀನು ಬೇರೆ ಎಲ್ಲಾದರೂ ಆಡಿಯೇ? ನಮ್ಮ ಮನೆತನ ಸುಟ್ಟು ಬೂದಿಯಾಗಿ ಹೋದೀತು—ಯಾವುದೋ ಮಾತಿಗೆ, ಬೇರಾವುದೋ ವಿಷಯ ಕಲೆಸಿದರೆ. ನೀನು ಕೇಳಿಯೂ ಕೇಳಿಸಿಕೊಳ್ಳದಿದ್ದ ಹಾಗೆ ಸುಮ್ಮನಿರು. ಅಚ್ಚಣ್ಣಭಟ್ಟನಿಗೆ ಬುದ್ಧಿಯಿಲ್ಲ: ದೇವರು ಕೊಟ್ಟಷ್ಟರಲ್ಲಿ ತೃಪ್ತಿಯಿಂದಿರದೆ, ನೆಲ ನನ್ನದಾದ ಮೇಲೆ, ಅದರ ಮೇಲಿರೋ ಆಕಾಶಾನೂ ನನ್ನದೇ ಆಗಬೇಕು ಅಂತಾನೆ. ಕಾಲಿದ್ದದ್ದಕ್ಕೆ ಭೂಮಿ ಲೇಸು, ರೆಕ್ಕೆ ಇದ್ದದ್ದಕ್ಕೆ ಆಕಾಶ ಲೇಸು ಅನ್ನೋ ವಿವೇಚನೆ ಇಲ್ಲ. ಏನೋ ಅವರು ಮಾಡಿದ್ದು ಅವರಿಗೆ–ನಮಗ್ಯಾಕೆ? ನೀನು ಮಾತ್ರ ಇದು ಯಾವುದರ ಸಂಪರ್ಕಾನೂ ಹಚ್ಚಿಕೊಳ್ಳದಿದ್ದ ಹಾಗೆ ಇದ್ದು ಬಿಡು'.

—ಎಂದು ಹೆಂಡತಿಯನ್ನು ಎಚ್ಚರಿಸಿದ್ದರು.

ಹಳ್ಳಿಯ ಮನೆಗಳಲ್ಲಿ ಒಳಗೊಳಗೇ ಕವರುತ್ತಿದ್ದ ಈ ಬೆಂಕಿಯ ವಾಸನೆ, ಶಾನುಭೋಗ ಶ್ರೀನಿವಾಸರಾಯರಿಗೂ ಸೋಕದೇ ಇರಲಿಲ್ಲ.

ವೆಂಕಟದಾಸಪ್ಪ–ಗೌರಮ್ಮನ ಸ್ನೇಹವಂತೂ, ಯಾರ ಪಾಲಿಗೂ ಮುಚ್ಚುಮರೆಯಾಗಿರಲಿಲ್ಲ.

ಶ್ರೀನಿವಾಸರಾಯರು ಒಂದು ರೀತಿಯಲ್ಲಿ ಗ್ರಾಮದ ಅಧಿಪತಿಗಳಾಗಿದ್ದಾಗ್ಯೂ, ಯಾರೂ ಯಾರ ಮೇಲೂ ಮಕಾರು ಮಾಡದೇ, ಅವರು ಈ ವಿಷಯದಲ್ಲಿ ಪ್ರವೇಶ ಮಾಡುವಂತಿರಲಿಲ್ಲ.

ಅವರಿಗೆ ನರಸಪ್ಪನವರು, ಅವರ ಮನೆತನದ ಬಗ್ಗೆ ವಿಶೇಷವಾದ ಅಭಿಮಾನವಿದ್ದರೂ, ವೆಂಕಟದಾಸಪ್ಪ ನಾಯಕರ ಹೆಣ್ಣಿನೊಂದಿಗೆ ಸ್ನೇಹ ಬೆಳೆಸಿ, ಬ್ರಾಹ್ಮಣಕುಲಕ್ಕೇ ಕೆಟ್ಟ ಹೆಸರು ತಂದರೆಂದು ಅಸಮಾಧಾನ ಮೂಡಿತ್ತು. ವೆಂಕಟದಾಸಪ್ಪ–ಗೌರಮ್ಮನ ಸ್ನೇಹ ತೀರಾ ಬಹಿರಂಗವಾಗಿದ್ದುದು. ಆ ಅಸಮಾಧಾನವನ್ನು ಮತ್ತಷ್ಟು ಹೆಚ್ಚಿಸಿತ್ತು.

ನರಸಪ್ಪನವರು ಆ ಸ್ನೇಹಕ್ಕೆ ವಿರೋಧವಾಗಿ ನಿಂತು ಮಗನೊಂದಿಗೆ ಮಾತು ಬಿಟ್ಟುದರಿಂದ. ಶ್ರೀನಿವಾಸರಾಯರ ಸಂಪ್ರದಾಯ ಬದ್ಧ ಜೀವಕ್ಕೆ ಅಲ್ಪಸ್ವಲ್ಪ ಸಮಾಧಾನವಾಗಿತ್ತು.

ಆದರೆ ಸಾಯುವ ಕಾಲಕ್ಕೆ ನರಸಪ್ಪನವರು ತಮ್ಮ ಬುದ್ಧಿಯನ್ನು ಬದಲಿಸಿದುದು, ವೆಂಕಟದಾಸಪ್ಪನವರ ಮದುವೆಗೆ ವೀರಣ್ಣ, ಗೌರಮ್ಮನನ್ನು ಕರೆದೊಯ್ದುದು, ಸಾಯುವ ಕಾಲಕ್ಕೆ ಗೌರಮ್ಮನನ್ನು ಸೊಸೆಯಾಗಿ ಸ್ವೀಕರಿಸಿದ್ದು, ಅವರ ಮರಣಾನಂತರ ಗೌರಮ್ಮ. ವೀರಣ್ಣ, ನರಸಪ್ಪನವರ ಮನೆಯಲ್ಲಿ ಹೆಚ್ಚು ಓಡಾಡಲಾರಂಭಿಸಿದುದು–ಇದೆಲ್ಲಾ ಅವರು ಆ ಮನೆಯ ವಿಷಯದಲ್ಲಿ ತೀವ್ರವಾದ ಬೇಸರವನ್ನಿಟ್ಟುಕೊಳ್ಳಲು ಕಾರಣವಾಗಿತ್ತು.

ಎಂತಲೇ ಅಚ್ಚಣ್ಣಭಟ್ಟರು—

'ಏನು ಸ್ವಾಮಿ ಹೀಗಾಗಿಹೋಯ್ತು ಸಣ್ಣೋರು ಮಾಡಿದ ತಪ್ಪಿಗೆ ದೊಡ್ಡೋರು ತಾಳ ಹಾಕಿದರೆ, ಬ್ರಾಹ್ಮಣ್ಯ ಉಳಿಯೋದು ಹೇಗೆ?'

—ಎಂದಾಗ, ಶ್ರೀನಿವಾಸರಾಯರು—

'ಬರಬರುತ್ತಾ ಕಾಲ ಕೆಟ್ಟು ಹೋಯ್ತು ಅಚ್ಚಣ್ಣ: ಆದರೇನು ಮಾಡೋದು? ಲೋಕಕ್ಕೆ ಬುದ್ಧಿ ಹೇಳೋ ಶಕ್ತಿ ಇರೋರಿಗೆ, ನಾನು ನೀನು ಬುದ್ಧಿ ಹೇಳೋದು ಸಾಧ್ಯವೇ? ಏನೋ–ಯಾರು ಹೇಗಾದರಾಗಲಿ, ನಮ್ಮ ಬ್ರಾಹ್ಮಣಿಕೆ ನಾವು ಉಳಿಸಿಕೊಂಡರೆ ಸರಿ'

—ಎಂದಿದ್ದರು.

ಅವರು ಅಷ್ಟು ಹೇಳಿದುದನ್ನು ಕೇಳಿಯೇ ಅಚ್ಚಣ್ಣಭಟ್ಟರ ತೋಳಿಗೆ ರೆಕ್ಕೆ ಬಂದಂತಾಗಿತ್ತು.

ಎಂತಲೇ ನರಸಪ್ಪನವರು ತೀರಿಕೊಂಡಾಗ ಆ 'ಬ್ರಾಹ್ಮಣಿಕೆ' ಉಳಿಸಿಕೊಳ್ಳುವ ನೆಪದಲ್ಲಿಯೇ ಹಳ್ಳಿಯಲ್ಲಿ ನರಸಪ್ಪನವರ ಮನೆಗಿದ್ದ ಪ್ರತಿಷ್ಠೆಯನ್ನು ಮುರಿಯಲೆತ್ನಿಸಿದ್ದರು.

೬

ಅಮ್ಮನವರ ಗುಡಿಯಲ್ಲಿ ನರಸಪ್ಪನವರು ತೀರಿಕೊಂಡ ಸುದ್ದಿಯನ್ನು ವೀರಣ್ಣ ಹಳ್ಳಿಯಲ್ಲಿ ಹೇಳುತ್ತಿದ್ದ ಹಾಗೇ, ಮುಂದಿನ ಕೆಲಸ ಕಾರ್ಯಗಳಿಗೆ ತಾನೇ ನಿಲ್ಲಬೇಕಾಗುವುದೆಂಬುದನ್ನು ಊಹಿಸಿದ ಅಚ್ಚಣ್ಣಭಟ್ಟರು, ಆ ಸುದ್ದಿ ಕಿವಿಗೆ ಬೀಳುತ್ತಿದ್ದ ಹಾಗೇ ಶ್ರೀನಿವಾಸರಾಯರನ್ನು ಕಾಣಲು ಹೋದರು.

'ಕೇಳಿದಿರಾ ಶಾನುಭೋಗರೇ ಸುದ್ದೀನಾ?'

—ಎಂದು ಅಚ್ಚಣ್ಣಭಟ್ಟ ಹೇಳುತ್ತಿದ್ದ ಹಾಗೇ—

'ಕೇಳಿದೆ ಸ್ವಾಮಿ, ಎಂಥ ಅನ್ಯಾಯ! ನಮ್ಮ ಹಳ್ಳಿಗಿದ್ದ ಒಂದು ಕಳಶಾನೇ ಕಳಚಿಹೋದ ಹಾಗಾಯ್ತು. ಇದ್ದಷ್ಟುದಿನ ಅಮ್ಮನೋರ ಸೇವೆ ಮಾಡಿ, ಕೊನೆಗೆ ಆಕೆ ಪಾದದಲ್ಲೇ ಕಣ್ಣು ಮುಚ್ಚಿಕೊಂಡ ನರಸಪ್ಪ, ಪುಣ್ಯಾತ್ಮ. ಅವನಿಗೇನೋ ಒಳ್ಳೇ ಸಾವೇ ಬಂತು. ಆದರೆ ಈ ಕಾಲದಲ್ಲಿ, ಮನೆಗೆ ಹೊಸ ಸೊಸೆ ಬಂದ ಕಾಲದಲ್ಲಿ ಮಾತ್ರ ಬರಬಾರದಾಗಿತ್ತು. ಆದರೆ ಅದನ್ನೆಲ್ಲಾ ಈಗ ಚಿಂತಿಸಿ ಏನು ಉಪಯೋಗ? ಹೊರಡಿ—ಮುಂದಿನ ಕೆಲಸಕ್ಕೆ ಏನೇನು ಬೇಕೋ ಎಲ್ಲಾ ಸಿದ್ಧಮಾಡಿಕೊಳ್ಳಿ'

—ಎಂದರು ಶ್ರೀನಿವಾಸರಾಯರು.

'ನಾನೇನು ಸ್ವಾಮಿ ಸದಾ ಸಿದ್ಧವಾಗೇ ಇದೀನಿ...ಆದರೆ...'

'ಸಿದ್ಧವಾಗಿದ್ದರೆ ಹೊರಡಿ ಮತ್ತೆ? ಆಮಂತ್ರಣಕ್ಕೆ ಕಾಯ್ತಾ ಇದೀರಾ?'

'ಊಹೂ...'

'ಮತ್ತೆ...'

'ನನಗೊಂದು ಸಂಶಯಕ ಬಾಧಿಸ್ತಾ ಇದೆ ಸ್ವಾಮಿ. ತಾವು ಎಷ್ಟಾದರೂ ಗ್ರಾಮದ ಧಣಿ, ಬ್ರಾಹ್ಮಣ ಗುಂಪಿಗೂ ಮುಖಂಡರು. ಆದಕ್ಕಾಗಿ ತಮ್ಮ ಹತ್ತಿರ ಸಂಶಯ ನಿವಾರಣೆ ಮಾಡಿಕೋಬೇಕೂಂತ ಬಂದೆ.'

'ಏನು ಸಂಶಯ?'

'ಈಗ ನರಸಪ್ಪನವರ ಕರ್ಮಗಳನ್ನೆಲ್ಲಾ ವೆಂಕಟದಾಸಪ್ಪನೇ ಮಾಡ ಬೇಕಲ್ಲಾ...'

'ನಿಜ—ಅವನೇ ಉತ್ತರಾಧಿಕಾರಿ. ಅದರಲ್ಲೇನು ಅನುಮಾನ?'

'ಆ ವಿಷಯದಲ್ಲೇನೂ ಅನುಮಾನವಿಲ್ಲ. ಆದರೆ ಅನ್ಯಜಾತಿ ಸ್ತ್ರೀ ಸಂಸರ್ಗ ಮಾಡಿದ ಆತನೊಂದಿಗೆ ನಾವು ಹೊಕ್ಕು ಬಳಸುವುದು ಹೇಗೆ? ನಾಳೆ ಅವನೇ ಆಪೋಶನ ಹಾಕಬೇಕಲ್ಲಾ—ಅವನ್ನು ತೆಗೆದುಕೊಳ್ಳುವುದು ಹೇಗೆ? ಜಾತಿ, ನೀತಿ ಕೆಟ್ಟವನ ಸಂಸರ್ಗ ಮಾಡಿದರೆ ನಮ್ಮ ಬ್ರಾಹ್ಮಣಿಕೆ ಉಳಿದೀತೇ?'

—ಎಂದರು ಅಚ್ಚಣ್ಣಭಟ್ಟರು.

ಅವರು ಹೇಳಿದ ಮಾತನ್ನು ಕೇಳಿ ಶ್ರೀನಿವಾಸರಾಯರ ಚಿತ್ತದಲ್ಲೂ ಸಂಶಯದ ಸುಳಿ ಆಡಿತು. ಎಂತಲೇ ನೇರವಾಗಿ ಉತ್ತರ ಕೊಡಲಾರದೆ—

'ಅದೇನೋ ನಿಜವೇ. ಅದಕ್ಕೇನು ಮಾಡಬೇಕು ಎನ್ನುತ್ತೀರ? ಶಾಸ್ತ್ರ ತಿಳಿದವರು ನೀವೇ ಅದಕ್ಕೆ ಏನಾದರೂ ಪರಿಹಾರ ಹೇಳಬೇಕು,'

—ಎಂದರು.

ಈ ವಿಷಯದಲ್ಲಿ ಶಾಸ್ತ್ರ ಏನು ಹೇಳುತ್ತೆ ಅಂತ ನಾನಿನ್ನೂ 'ಧರ್ಮ ಸಿಂಧು', ನೋಡಿಲ್ಲ. ಮನು, ಯಾಜ್ಞವಲ್ಕ್ಯರು ಇಂಥ ಪಾಪಕ್ಕೆ ಏನು ಪ್ರಾಯಶ್ಚಿತ್ತವಾದ ಬಳಿಕ ಕರ್ಮಾಧಿಕಾರ ಬರುತ್ತೆ ಎಂತ ಹೇಳ್ತಾರೋ ನೋಡಬೇಕು...'

'ಅದುವರೆಗೂ...'

'ಏನು—ಅಪ್ಪಣೆ ಕೊಡಿಸಿ'

'ನೀವು ಶಾಸ್ತ್ರ ನೋಡಿ, ಹೀಗೆಂತ ನಿರ್ಧಾರಮಾಡಿ, ಪ್ರಾಯಶ್ಚಿತ ಪುಣ್ಯಾಹವಾಚನೆ ಮಾಡಿಸೋವರೆಗೂ, ನರಸಪ್ಪನವರ ಹೆಣ ಹಾಗೇ ಇರಬೇಕು ಅನ್ನೀರಾ...'

'ಸಂದರ್ಭ ಹಾಗೇ ಇದೆ ಸ್ವಾಮಿ...'

—ಎಂದರು ಅಚ್ಚಣ್ಣಭಟ್ಟರು.

ಆ ಮಾತು ಕೇಳಿ ಶ್ರೀನಿವಾಸರಾಯರಿಗೆ ಸಿಡಿಲೆರಗಿದಂತಾಗಿ ಹಾಗೆಯೇ ಕುಸಿದು ಕುಳಿತು ಬಿಟ್ಟರು.

ಅವರು ಹಾಗೆ ಕುಳಿತಿರುವಾಗಲೇ, ಶ್ರೀನಿವಾಸರಾಯರ ತಾಯಿ ಕಾವೇರಮ್ಮ ಒಳಗಿನಿಂದ—

'ಶೀನಾ...ಶೀನಾ...'

—ಎಂದು ಮಗನನ್ನು ಕೂಗಿಕೊಂಡು, ಪಡಸಾಲೆಗೆ ಬಂದು—

'ಕೇಳಿದೆಯೇನೋ ಸುದ್ದೀನಾ...ಲಕ್ಷ್ಮೀದೇವಿ ಮಗನ ಕೈಲಿ ಸೊಸೆಗೆ ತಾಳಿ ಕಟ್ಟಿಸ್ತಿದ್ದ ಹಾಗೇ, ಅವಳ ತಾಳೀನೇ ಕಿತ್ಕೊಂಡು ಬಿಟ್ಟಲ್ಲೋ ಆ ಹಾಳಾದ ವಿಧಿ.'

—ಎಂದಳು ಗಟ್ಟಿಯಾಗಿ ಅಳುತ್ತಾ.

'ಕೇಳಿದ್ನಮ್ಮಾ, ನನಗೂ ಸಿಡಿಲು ಬಡಿದ ಹಾಗಾಗಿದೆ.'

—ಎಂದರು ಶ್ರೀನಿವಾಸರಾಯರು.

'ಶಿವ ಶಿವಾ...ಆಗಬಾರದ್ದು ಆಗಿಹೋಯಿತು...'

—ಎಂದು ಒಂದು ಗಳಿಗೆ ಅತ್ತು, ಹಾಗೇ ಸಮಾಧಾನ ತಂದುಕೊಂಡು ಕಾವೇರಮ್ಮ—

'ಏನೋ ಆಯ್ತು, ನೀನು ಮೊದಲು ಅಲ್ಲಿಗೆ ಹೋಗು. ಹುಡುಗರು ಪುಪ್ಪಟೆ ಏನು ಮಾಡಿಕೊಂಡ್ರೋ ನೋಡು. ಅಚ್ಚಣ್ಣಭಟ್ಟರೂ ಇಲ್ಲೇ ಇದ್ದಾರಲ್ಲಾ ಕರೆದುಕೊಂಡು ಹೋಗಿ, ಮುಂದೇನು ಮಾಡಬೇಕೋ ಎಲ್ಲಾನೂ ನೀನೇ ನಿಂತು ಮಾಡಿಸಿ ಬಾ. ದಾಸಣ್ಣನಿಗೆ ಒಂದೂ ತಿಳಿಯೋಲ್ಲ. ಶುದ್ಧ ಹುಡುಗ. ಹಾಗೇ ಲಲಿತಮ್ಮನೋರನ್ನೂ ಕರಕೊಂಡ್ಹೋಗಿ ಅಚ್ಚಣ್ಣಭಟ್ಟರೆ, ನಾನೂ ನನ್ನ ಸೊಸೇನ ಕಳಿಸ್ತೀನಿ. ಈ ಹೊತ್ತಿನಲ್ಲಿ ಲಕ್ಷ್ಮೀದೇವಿಗೆ ಧೈರ್ಯ ಹೇಳೋಕೆ ಯಾರಾದ್ರೂ ಹೆಂಗಸರು ಹತ್ತಿರ ಇರಬೇಕು.'

—ಎಂದು ಅವರಿಬ್ಬರಿಗೂ ಮುಂದೆ ಮಾಡಬೇಕಾದ ಕೆಲಸ ಸೂಚಿಸಿದರು.

'ನಾವೂ ಅಲ್ಲಿಗೇ ಹೊರಟಿದ್ವಿ ಅಮ್ಮ...'

'ಹೊರಟಿದ್ರೆ—ಮತ್ಯಾಕೆ ಇಲ್ಲಿ ಕುಕ್ಕರಿಸಿಕೊಂಡೆ......ಮುಹೂರ್ತಾ ನೋಡ್ತಾ ಇದ್ದೇನು?'

—ತನ್ನ ಅಸಮಾಧಾನ, ದುಃಖದಲ್ಲಿ ತಟಕ್ಕನೆ ಸಿಟ್ಟಾಗಿ ಹೇಳಿದಳು ಕಾವೇರಮ್ಮ.

'ಊಹೂ...ಹಾಗೇನೂ ಅಲ್ಲ...'

'ಮತ್ತೇನು ಬೆಕ್ಕು ಅಡ್ಡ ಆಯ್ತೋ...'

'ಅಚ್ಚಣ್ಣಭಟ್ರೆ...ನೀವೇ ಹೇಳಿ...ನನಗ್ಯಾಕೋ ಆ ಮಾತು ಆಡೋಕೂ ಬಾಯಿ ಬರೋದಿಲ್ಲ.'

—ಎಂದು ತಾವು ಆಡಲಾಗದ ಮಾತನ್ನು ಹೇಳಲು ಅಚ್ಚಣ್ಣಭಟ್ಟರ ನೆರವು ಕೋರಿದರು ಶ್ರೀನಿವಾಸರಾಯರು.

ಶ್ರೀನಿವಾಸರಾಯರ ಮುಂದೆ ಧಾರಾಳವಾಗಿ ಆಡಿದ ಮಾತನ್ನು ಅಷ್ಟೇ ಧಾರಾಳವಾಗಿ, ಕಾವೇರಮ್ಮನ ಮುಂದೆ ಆಡಲು ಸಾಧ್ಯವಾಗದೆ, ಒಂದೆರಡು ಗಳಿಗೆ ಹಿಂದೆ ಮುಂದೆ ನೋಡಿ, ಖೇಕರಿಸಿ, ಕೆಮ್ಮಿ, ಉಗುಳು ನುಂಗಿ ಗಂಟಲು ಸರಿಪಡಿಸಿಕೊಂಡು ಅಚ್ಚಣ್ಣಭಟ್ಟರು—

'ಈಗ...ಈಗ... ನಮಗೊಂದು ಧರ್ಮಸಂಕಟ ಪ್ರಾಪ್ತವಾಗಿದೆ...'

—ಎಂದರು.

'ಅದೇನು...ಬೇಗ ಹೇಳಿ'.

—ಎಂದಳು ಕಾವೇರಮ್ಮ, ಮುಖ ಸಿಂಡರಿಸಿಕೊಂಡೇ.

ತಡವರಿಸುತ್ತಲೇ, ಆದಷ್ಟು ನಯವಾಗಿ ಅಚ್ಚಣ್ಣಭಟ್ಟರು ತಮಗೆ ಒದಗಿದ ಸಂದೇಹವನ್ನು ಕಾವೇರಮ್ಮನಿಗೆ ವಿವರಿಸಿದರು. ಅವರು ಆಡಿದ ಮಾತನ್ನು ಕೇಳುತ್ತಿದ್ದ ಹಾಗೇ ಕಾವೇರಮ್ಮನ ಮುಖ ಕೆಂಪೇರಿತು. ಕಣ್ಣಲ್ಲಿ ಹರಿಯುತ್ತಿದ್ದ ಕಣ್ಣೀರು ಬತ್ತಿಹೋಗಿ, ಆಕೆಯ ಕಣ್ಣುಗಳು ಕೆಂಡ ಕಾರಿದವು.

'ಛಿ! ಎಂಥ ಮಾತಾಡ್ತೀರ ಅಚ್ಚಣ್ಣಭಟ್ಟರೆ. ಆ ಮಹಾ ಬ್ರಾಹ್ಮಣರ ಶವಸಂಸ್ಕಾರ ಮಾಡೋಕೆ ಧರ್ಮಸಿಂಧು ನೋಡಬೇಕೇ. ನಿಮ್ಮ ಮನು, ಯಾಜ್ಞವಲ್ಕ್ಯ, ಪರಾಶರ ಎಲ್ಲಾರಿಗೂ ಬೆಂಕಿ ಹಚ್ಚಿ, ಮೊದಲು ಹೋಗಿ. ಬ್ರಾಹ್ಮಣನ ಹೆಣ ಹಾಗಿರಬಾರದು—ಸಂಸ್ಕಾರ ಇಲ್ಲದೆ ಇದ್ದಷ್ಟು ಹೊತ್ತು ಆ ಆತ್ಮಕ್ಕೆ ನರಕಯಾತನೆ...'

—ಎಂದಳು ಕಿಡಿಯುಗುಳುತ್ತ.

'ಏನು ಮಾಡೋದು—ಎಷ್ಟು ಹೊತ್ತು ಆ ಯಾತನೆ ಅನುಭವಿಸ ಬೇಕೂಂತ ನರಸಪ್ಪನವರ ಹಣೇಲಿ ಬರೆದಿದೆಯೋ, ಅಷ್ಟು ಹೊತ್ತು ಅನುಭವಿಸಲೇಬೇಕು. ಹಾಗಂತ ಅವಸರ ಮಾಡಿ ನಾವು ಬ್ರಾಹ್ಮಣಿಕೆ ಕೆಡಿಸಿ ಕೊಳ್ಳಲಿಕ್ಕೇ ಆಗುತ್ಯೆ? ಏನು ಸ್ವಾಮಿ ಶ್ರೀನಿವಾಸರಾಯರೇ. ಹೆಂಗಸರಿಗೆ ಅಷ್ಟೆಲ್ಲಾ ಧರ್ಮ ಸೂಕ್ಷ್ಮ ಅರ್ಥವಾಗೋಲ್ಲ. ನೀವೇ ಹೇಳಿ...'

ಅಚ್ಚಣ್ಣಭಟ್ಟರು ಶ್ರೀನಿವಾಸರಾಯರಿಗೆ ಹೇಳಿದರು.

ಆ ಮಾತಿಗೆ ಶ್ರೀನಿವಾಸರಾಯರು ಏನು ಹೇಳುತ್ತಿದ್ದರೋ ಏನೋ. ಆದರೆ ಕಾವೇರಮ್ಮ ಯಾರಿಗೂ ಮಾತಾಡಲು ಅವಕಾಶ ಕೊಡಲಿಲ್ಲ. ಅಚ್ಚಣ್ಣ ಭಟ್ಟರ ಮಾತು ಕೇಳಿ ಆಕೆ ಜ್ವಾಲಾಮುಖಿಯಾಗಿದ್ದಳು.

'ನಿಮ್ಮ ಧರ್ಮಸೂಕ್ಷ್ಮಕ್ಕಿಷ್ಟು ಬೆಂಕಿಹಾಕ. ಈ ಮಾತೆಲ್ಲಾ ನೀವು ಯಾಕೆ ಎತ್ತಿದ್ದೀರೀಂತ ನನಗೆಲ್ಲಾ ಗೊತ್ತಿದೆ. ಕಣ್ಣು ಕಾಣದ ಮುಪ್ಪಿನ ಮುದುಕಿ ಆದ್ರೂ ನನ್ನ ಕಿವಿ ಉರಿದುಹೋಗಿಲ್ಲ. ನೀವೂ, ನಿಮ್ಮ ಹೆಂಡತಿ ಆಡಿಕೊಂಡಿರೋದೆಲ್ಲಾ ನನಗೆ ಗೊತ್ತಿದೆ. ಈಗೇನು ಒಳ್ಳೇ ಮಾತಿನಲ್ಲಿ ಹೋಗಿ ಕಮಕ್‌ಕಿಮಕ್ ಅನ್ನದೆ, ನರಸಪ್ಪನೋರ ಕೆಲಸ ಮುಗಿಸಿ ಬರ್ತೀರೋ ಅಥವಾ ಈ ಊರಿನಲ್ಲಿರೋದಕ್ಕೆ ತಿಲಾಂಜಲಿ ಕೊಡ್ತೀರೋ ಹೇಳಿ...,'

—ಎಂದು, ಮಗನ ಕಡೆಗೆ ಕೆಂಗಣ್ಣು ಹೊರಳಿಸಿ—

'ಶೀನಾ—ನಿನಗೇನು ಕೇಡುಗಾಲಕ್ಕೆ ಇಂಥ ಮಾತಿಗೆ ಕಿವಿ ಜೋಲು ಬಿಟ್ಟು ಕೂತಿದೀಯ. ಎದ್ಹೋಗು—ಅಚ್ಚಣ್ಣಭಟ್ಟರು ಬೇಕಾದ್ರೆ ಅವರ ಬ್ರಾಹ್ಮಣಿಕೆ ಉಳಿಸಿಕೊಂಡು ಊರು ಬಿಟ್ಟು ಹೋಗಲಿ. ಅವರು ಬರದೇ ಹೋದರೆ ಲೋಕ ಹಾಳಾಗಲಿಲ್ಲ. ಮನ್ನೆ ಕೋಟೆಯಿಂದ ಶ್ರೀನಿವಾಸಾವಧಾನಿ ಗಳನ್ನು ಕರೆಸಿ ಕೆಲಸ ಮಾಡಿಸ್ತೀನಿ.'

—ಎಂದಳು.

ಆಕೆಯ ಮಾತನ್ನು ಕೇಳಿ ಅಚ್ಚಣ್ಣಭಟ್ಟರಿಗೆ ಜಂಘಾಬಲವೇ ಬಿದ್ದು ಹೋಯಿತು. ಕಾವೇರಮ್ಮನ ದ್ವೇಷ ಕಟ್ಟಿಕೊಂಡು ದೇವೀಕೆರೆಯಲ್ಲಿ ಒಂದು ಗಳಿಗೆಯೂ ಬಾಳುವುದು ಸಾಧ್ಯವಿಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಎಂತಲೇ ಕಕ್ಕಾಬಿಕ್ಕಿಯಾಗಿ, ಶ್ರೀನಿವಾಸರಾಯರ ಕಡೆ ತಿರುಗಿ—

"ಏನು ಸ್ವಾಮಿ ಶಾನುಭೋಗರೇ...,"

—ಎಂದರು.

"ಅವನ್ನೇನು ಕೇಳ್ತೀರ—ಅವನ್ನ ಹಡೆದೋಳು ನಾನು ಹೇಳ್ತೀನಿ. ಶೀನಾ—ನೀನು ಹೋಗ್ತೀಯೋ ಇಲ್ವೋ— ಇಲ್ದೇ ಹೋದ್ರೆ ಇವತ್ತೇ ನನಗೂ —ನಿನ್ನ ಮನೆಗೂ ಕೊನೆ. ನಾಚಿಕೆ ಆಗೋಲ್ವೇನೋ ದರಿದ್ರದೋನೇ ಬ್ರಾಹ್ಮಣ ನಾಗಿ ಹುಟ್ಟಿ, ಇಂಥ ಕಾಲದಲ್ಲಿ ಹಿಂದು ಮುಂದೂ ನೋಡ್ತಾ ಕೂತಿದೀಯಲ್ಲಾ,

ನಿಮ್ಮಂಥ ಬ್ರಾಹ್ಮಣರಿಗಿಂತ ಹೊಲೆಮಾದಿಗರು ವಾಸಿ. ಹೀಗೆ ಯೋಚನೆ ಮಾಡೋಲ್ಲ..."

—ಎಂದು—

"ಗಂಗಾ...ಗಂಗಾ..."

—ಎಂದು ಸೊಸೆಯನ್ನು ಕೂಗಿ—

"ಈ ಜಾತಿ ಇದ್ದೋರು ಇಲ್ಲೇ ನೆಗೆದುಬಿದ್ದು ಹೋಗ್ಲಿ......ನಡಿ...... ನಾವಿಬ್ರೂ ಜಾತಿ ಕೆಟ್ಟೋರು ಹೋಗಿ, ಆ ಬ್ರಾಹ್ಮಣನ ಹೆಣಕ್ಕೆ ಒಂದು ಗತಿ ಕಾಣಿಸಿ ಬರೋಣ. ನಮ್ಮ ಜಾತಿ ಹೋದ್ರೆ ಅಷ್ಟೇ ಹೋಯ್ತು—ದೇವ್ರಾದ್ರೂ ಮೆಚ್ತಾನೆ."

—ಎಂದು ತಾನೇ ಹೊರಡಲು ಸಿದ್ಧಳಾದಳು.

ತಾಯಿ ಹೇಳಿದ ಮಾತನ್ನು ಕೇಳಿ, ಶ್ರೀನಿವಾಸರಾಯರಿಗೂ ಕಣ್ಣನ್ನು ಕವಿದ ಪೊರೆ ಕಳಚಿ ಬಿದ್ದಹಾಗಾಯಿತು. ತಟಕ್ಕನೆ ಮೇಲೆದ್ದು—

"ನಿಜ ಕಣಮ್ಮ ನೀನು ಹೇಳಿದ್ದು— ದೇವರಿಗಿಂತ ಜಾತಿ ದೊಡ್ಡದಲ್ಲ. ನನಗೂ ಏಕೋ ಮಂಕು ಕವಿದಿತ್ತು."

—ಎಂದು ಅಚ್ಚಣ್ಣಭಟ್ಟರ ಕಡೆಗೆ ತಿರುಗಿ—

"ಏನು ಭಟ್ಟರೆ—ನೀವು ಬರ್ತೀರೋ ಇಲ್ವೋ"

—ಎಂದು ಕೇಳಿದರು.

ಶ್ರೀನಿವಾಸರಾಯರೂ ತಮಗೆ ವಿರೋಧವಾದ ಬಳಿಕ, ಅಚ್ಚಣ್ಣ ಭಟ್ಟರಿಗೆ ಅವರನ್ನು ಅನುಸರಿಸದೆ ಬೇರೆ ದಾರಿಯೇ ಉಳಿಯಲಿಲ್ಲ.

"ಸರಿ ಸ್ವಾಮಿ. ದೊಡ್ಡಮ್ಮಾವರು ಹೇಳಿದ ಮೇಲೆ ಬದಲು ಹೇಳೋದು ಸಾಧ್ಯವೇ? ಧರ್ಮ, ಕರ್ಮ, ಏನಿದ್ದರೂ ಅವರಿಗೇ ಇರಲಿ."

—ಎಂದರು.

"ಹಾಗೇ ಮಾಡಿ. ಆ ಬ್ರಾಹ್ಮಣನ ಹೆಣವನ್ನು ಹೇಗೆ ಬೇಕೋ ಹಾಗೆ ಮಂತ್ರೋಕ್ತವಾಗಿ ದಹನ ಮಾಡಿ ಬನ್ನಿ. ಆ ಪಾಪ ಏನು ಬಂದರೂ ನನಗೇ ಬರಲಿ..."

—ಎಂದು, ಏನೋ ಜ್ಞಾಪಿಸಿಕೊಂಡು—

"ಅಚ್ಚಣ್ಣ ಭಟ್ಟರೆ—ಇನ್ನೊಂದು ಮಾತಿದೆ. ಅದನ್ನೂ ಈಗಲೇ ಹೇಳಿ

ಬಿಡುತ್ತೇನೆ.''

—ಎಂದಳು ಕಾವೇರಮ್ಮ.

''ಏನವಮ್ಮ...''

—''ಮತ್ತೇನು ಗ್ರಹಚಾರವೋ ಎಂದು ಹೆದರುತ್ತಲೇ ಕೇಳಿದರು ಅಚ್ಚಣ್ಣ ಭಟ್ಟರು.

''ಹೆಚ್ಚಿನ್ನೇನೂ ಇಲ್ಲ–ಇಷ್ಟೆ. ಇವತ್ತು ಇಲ್ಲಾಡಿದ ಮಾತನ್ನು, ಬೇರೆ ಎಲ್ಲಾದರೂ ಆಡಿದರೆ, ನರಸಪ್ಪನೋರ ಕೆಲಸ ಕಾರ್ಯ ಮುಗಿಯೋ ವರೆಗೆ ಎಲ್ಲಾದರೂ ನೀವು ಬಾಯಿ ಬಿಟ್ಟಿರೀಂತ ನನಗೆ ತಿಳಿದರೆ–ಅವತ್ತು. ಆ ಗಳಿಗೆಗೇ ನಿಮಗೂ ಈ ಊರಿಗೂ ಕೊನೆ ಅಂತ ತಿಳಿದುಕೊಂಡುಬಿಡಿ.'

—ಎಂದಳು ಕಾವೇರಮ್ಮ.

ಆ ಮಾತಿಗೆ ಅಚ್ಚಣ್ಣ ಭಟ್ಟರು ಏನೂ ಬದಲು ಹೇಳಲಿಲ್ಲ.

''ಮನೆಯ ಕಡೆ ಹೋಗಿ, ಸಾಮಾನು ಹೊಂದಿಸಿಕೊಂಡು ಬರ್ತೀನಿ, ಸ್ವಾಮಿ. ವೆಂಕಟಗಿರಿ ಜೋಯಿಸರಿಗೂ ಹೇಳಿಕಳಿಸಿ.'

—ಎಂದು ಹೇಳಿ ದುರ್ದಾನ ತೆಗೆದುಕೊಂಡವರಂತೆ ಅಲ್ಲಿಂದ ಹೊರಟರು.

* * * *

ಅಚ್ಚಣ್ಣ ಭಟ್ಟರು ಕಾವೇರಮ್ಮ ಹೇಳಿದ ಎಚ್ಚರಿಕೆಯ ಮಾತನ್ನು ಮಾತ್ರ ಮರೆಯಲಿಲ್ಲ. ಮತ್ತೆ ಯಾರ ಮುಂದೂ ಪ್ರಾಯಶ್ಚಿತ್ತದ ಮಾತು ಎತ್ತಲಿಲ್ಲ. ಆದರೆ ಅವರ ಹೃದಯದಲ್ಲಿ ಮಾತ್ರ ದಿನದಿನಕ್ಕೆ ಉರಿ ಹೆಚ್ಚುತ್ತಿತ್ತು.

## ೭

ಅಚ್ಚಣ್ಣಭಟ್ಟರೇನೋ ಯಾರ ಮುಂದೂ ಆ ಮಾತಾಡಲಿಲ್ಲ.

ಆದರೆ ಮುದುಕಿ ಕಾವೇರಮ್ಮನಿಗೇ ಬಾಯಿ ತಡೆಯಲಿಲ್ಲ.

ನರಸಪ್ಪನವರ ದಿವಸ–ಕಾಲ ಮುಗಿದು ಮನೆಗೆ ಬಂದಿದ್ದವರೆಲ್ಲಾ ತಮ್ಮ ಊರಿಗೆ ಹೊರಟು ಹೋದ ಬಳಿಕ, ಒಂದು ದಿನ ಮಧ್ಯಾಹ್ನ ಕಾವೇರಮ್ಮ ಲಕ್ಷ್ಮೀದೇವಮ್ಮನನ್ನು ಮಾತನಾಡಿಸಿಕೊಂಡು ಬರಲೆಂದು ನರಸಪ್ಪನವರ ಮನೆಗೆ ಹೊರಟಳು.

ಕಾವೇರಮ್ಮ ಅಲ್ಲಿಗೆ ಬಂದಾಗ ಅಚ್ಚಣ್ಣಭಟ್ಟರ ಹೆಂಡತಿ ಸೀತಾ ಲಕ್ಷ್ಮಮ್ಮನೂ, ರಾಜೇಶ್ವರಿಯೊಂದಿಗೆ ಮಾತನಾಡುತ್ತಾ, ಅವಳು ಮಾಡುತ್ತಿದ್ದ ಕೆಲಸಕ್ಕೆ ನೆರವಾಗಿ ಕುಳಿತುಕೊಂಡಿದ್ದಳು.

"ಲಕ್ಷ್ಮೀದೇವಿ ಏನು ಮಾಡ್ತಾ ಇದಾಳೈ ರಾಜೇಶ್ವರಿ..."

–ಎಂದು ಕೇಳಿಕೊಂಡು ಬಂದ ಕಾವೇರಮ್ಮನನ್ನು ನೋಡಿ ಸೀತಾಲಕ್ಷ್ಮಮ್ಮನಿಗೆ ಅಲ್ಲಿ ಕುಳಿತುಕೊಳ್ಳುವುದು ಸಾಧ್ಯವಾಗಲಿಲ್ಲ.

"ಬನ್ನಿ ಕಾವೇರಜ್ಜಿ...."

–ಎಂದು ತಾನೇ ಕಾವೇರಮ್ಮನನ್ನು ಕರೆದು ಕೂಡಿಸಿ, ತಟಕ್ಕನೆ ಏನೋ ನೆನಪಾದವಳ ಹಾಗೆ–

"ಅಯ್ಯೋ ಮರೆತೇ ಹೋಗಿತ್ತು. ಬಂದು ಭಾಳ ಹೊತ್ತಾಯ್ತು. ಮಗು ಎದ್ದು ಅಳ್ತಾ ಇದ್ಯೋ ಏನೊ"

–ಎಂದು ತನಗೆ ತಾನೇ ಹೇಳಿಕೊಂಡು–

"ನಾನು ಬರ್ತೀನಿ ರಾಜೇಶ್ವರಿ. ನಿನಗೆ ಹೇಗೂ ಮಾತಾಡೋಕೆ ಕಾವೇರಜ್ಜಿ ಜೊತೆ ಸಿಕ್ಕರಲ್ಲಾ"

–ಎಂದು ಹೇಳಿ, ರಾಜೇಶ್ವರಿ–

"ಕುಂಕುಮ ಇಟ್ಕೊಂಡುಹೋಗಿ'

–ಎಂದು ಹೇಳಿದರೂ, ಆ ಮಾತೇ ಕಿವಿಗೆ ಬೀಳದವಳ ಹಾಗೆ ಆವಸರವಾಗಿ ಹೊರಟು ಹೋದಳು.

ಅದನ್ನು ನೋಡಿ ಕಾವೇರಮ್ಮ ಗಟ್ಟಿಯಾಗಿ ನಗಲಾರಂಭಿಸಿದಳು.

ಸೀತಾಲಕ್ಷ್ಮಮ್ಮ ಅವಸರವಾಗಿ ಹೋದ ರೀತಿಯನ್ನು ಕಂಡು, ಕಾವೇರಮ್ಮನ ನಗುವನ್ನು ಕೇಳಿ ರಾಜೇಶ್ವರಿಗೆ, ಇದರ ಹಿಂದೆ ಏನೋ ಸ್ವಾರಸ್ಯ ಅಡಗಿರಬೇಕು ಎನಿಸಿ–

"ಅದ್ಯಾಕಜ್ಜಿ ಹಾಗೆ ನಗ್ತಿ?"

–ಎಂದು ಕೇಳಿದಳು.

"ನನ್ನ ನೋಡಿ ಸೀತಾಲಕ್ಷ್ಮಿ ಹಾಗೆ ಎದ್ದು ಹೋದಳಲ್ಲಾ ಅದಕ್ಕೇ ನಗು ಬಂತು."

"ಸೈ, ಸೈ, ನಿನ್ನ ನೋಡಿ ಯಾಕೆ ಹೋಗ್ತಾರೆ. ಮನೇಲಿ ಮಗೂನ ಬಿಟ್ಟು ಬಂದಿದ್ರು. ಅದಕ್ಕೇ ಹೋಗಬೇಕು ಅಂತ ಹೇಳ್ಲಿಲ್ವೆ?"

–ಕಾವೇರಮ್ಮನ ಮಾತನ್ನು ನಂಬದೆ ಕೇಳಿದಳು ರಾಜೇಶ್ವರಿ.

"ನಿನಗೆ ತಿಳಿಯದು ಕಣೇ ರಾಜೇಶ್ವರಿ–ಆ ಗಂಡ ಹೆಂಡಿರು– ಆಡೋದೇ ಒಂದು, ಹಿಂದೆ ಮಾಡೋದೇ ಒಂದು. ಮಹಾ ಹೊಟ್ಟೆ ಉರುಕ ಜನ– ಯಾತಕ್ಕೂ ಹೇಸೋರಲ್ಲ."

–ಕಾವೇರಮ್ಮ ಕಟುವಾಗಿ ಹೇಳಿದಳು.

"ಛಿ...ಛಿ... ಎಲ್ಲಾದ್ರೂ ಉಂಟೇ ಅಜ್ಜಿ– ಸೀತಾಲಕ್ಷ್ಮಮ್ಮ ಅಂಥೋರಲ್ಲ, ಎಷ್ಟು ಪ್ರೀತಿ, ಎಷ್ಟು ವಿಶ್ವಾಸ..."

"ಅವರ ಪ್ರೀತಿ, ವಿಶ್ವಾಸಕ್ಕಿಷ್ಟು ಬೆಂಕಿ ಹಾಕಿದರು. ಅವರನ್ನು ನಂಬಿ ಕೊಂಡೋರಿಗೆ ಮುಳುಗುನೀರೇ ಗತಿ–"

–ರಾಜೇಶ್ವರಿ ತನ್ನ ಮಾತು ಮುಗಿಸುವ ಮೊದಲೇ ಕಾವೇರಮ್ಮ ಘಾಟಾಗಿ ಹೇಳಿದಳು–

"ಮೊದ ಮೊದಲು ನಾನೂ ಹಾಗೇ ಅದ್ಕೊಂಡು ಮನೆಗೆ ಸೇರಿಸಿದ್ದೆ. ಆ ಅಚ್ಚಣ್ಣ ಭಟ್ಟರೆಂದರೆ, ಮಹಾನಿಷ್ಠ ಬ್ರಾಹ್ಮಣ ಅಂತ ಅಂದ್ಕೊಂಡಿದ್ದೆ. ಆದರೆ, ಮಹರಾಯ– ನಿಮ್ಮಪ್ಪನಿಗೆ ಬೆಂಕಿ ಕಾಣಿಸೋಕೇ ಅಡ್ಡವಾಗಿದ್ದ..."

ಆ ಮಾತನ್ನು ಕೇಳಿ ರಾಜೇಶ್ವರಿ ಬೆಕ್ಕಸ ಬೆರಗಾಗಿ ಕೇಳಿದಳು–

"ಹಾಗಂದರೇನು ಅಜ್ಜಿ..."

"ಅನ್ನೋದೇನು ಬಂತು– ನಿಮ್ಮಣ್ಣ ಆ ನಾಯಕರ ಗೌರಿ ಸ್ನೇಹ

ಮಾಡಿದಾನಲ್ಲಾ, ಅದನ್ನು ನೆಪ ಮಾಡಿಕೊಂಡು, ಅಂಥೋರ್ನ ಮನೇಲಿಟ್ಟು ಕೊಂಡ ನಿಮ್ಮಪ್ಪನ ಕರ್ಮಾಂತರ ಮಾಡಿಸೋಕೆ ಬ್ರಾಹ್ಮಣರು ಹೋಗ ಬಹುದೇ, ನಿಮ್ಮನೇಲಿ ಬ್ರಾಹ್ಮಣರು ಊಟ ಮಾಡಬಹುದೆ ಅಂತ ಇಲ್ಲದ ಧರ್ಮಶಾಸ್ತ್ರಾನ ನಮ್ಮ ಸೀನಿ ಕಿವೀಲಿ ಊದಂತಾ ಇದ್ದ–ನರಸಪ್ಪ ತೀರಿ ಕೊಂಡ ದಿನ..."

"ಹಾಗೇ–ಮತ್ತೆ ಆವರೇ ಬಂದು ಎಲ್ಲಾ ಕರ್ಮಾನೂ ಮಾಡಿ ಸಿದರು...

"ನಾನು ತರಾಟೆಗೆ ತಗೊಂಡೆ–ಈ ಕೆಟ್ಬಾಟ ಎಲ್ಲಾ ಆಡಿದರೆ ಊರು ಬಿಟ್ಟು ಓಡಿಸ್ತೀನಿ ಅಂತ. ಆಗ ಬಾಯಿ ಮುಚ್ಚಿಕೊಂಡರು. ನಿನಗೆ ಇದೆಲ್ಲಾ ತಿಳೀದು. ನಿಮ್ಮಮ್ಮನಿಗೂ ಅಷ್ಟೆ–ಬಡಬಡ ಹೊಟ್ಟೆಲಿದ್ದದ್ದೆಲ್ಲಾ ಆಡಿ ಬಿಡ್ತಾಳೆ. ಇನ್ನು ಮೇಲೆ ಆ ಸೀತಾಲಕ್ಷ್ಮಿ ಹತ್ತಿರ ಮಾತಾಡೋವಾಗ ಹುಷಾರಾಗಿರು."

ಕಾವೇರಮ್ಮ ಹೇಳಿದುದನ್ನು ಕೇಳಿ ರಾಜೇಶ್ವರಿಗೆ ತನ್ನ ಕಿವಿಗಳನ್ನು ನಂಬುವುದೇ ಅಸಾಧ್ಯವಾಯಿತು.

"ಹೌದೇನಜ್ಜಿ..."

–ಎಂದಳು.

"ಮತ್ತೆ, ನಾನೇನು ಸುಳ್ಳು ಹೇಳ್ತೀನೇ? ಬೇಕಾದ್ರೆ ಆ ಅಚ್ಚಣ್ಣ ಭಟ್ಟನ್ನೇ ಕರೆಸು– ನಿನ್ನೆದುರಿಗೇ ನಿಲ್ಲಿಸಿಕೊಂಡು ಕೇಳ್ತೀನಿ. "ಹೌದೋ ಇಲ್ವೋ ದೊಡ್ಡಮನುಷ್ಯಾಂತ."

"ನಮ್ಮ ಮ್ಯಾಲೆ ಯಾಕಜ್ಜಿ ಅವರಿಗಿಷ್ಟು ಅಸವಾದಾನ...... ನಾವೇನು ಅಪರಾಧ ಮಾಡಿದ್ವಿ ಅವರಿಗೆ?'

"ಕಡಿಯೋ ಚೇಳು ನೀನು ತಪ್ಪು ಮಾಡಿದೇಂತ ಕಡಿಯೋಲ್ಲ. ತನ್ನ ಕೊಂಡಿ ನವೆ ತಡೀಲಾರ್ದೆ ಕಡಿಯುತ್ತೆ. ಇವರೂ ಅಷ್ಟೆ. ಊರ್ನಲ್ಲಿರೋದೆಲ್ಲಾ ಅವರಿಗೇ ಆಗಬೇಕು. ಎಲ್ಲಾ ಗುಡಿ, ದೇವರ ದುಡ್ಡು ಅವರಿಗೇ ಬೇಕು".

"ಇಟ್ಕೊಳ್ಳಲಿ–ಅದಕ್ಕೆ ನಾವು ಬೇಡಾಂದ್ವೆ?"

"ನೀವು ಬೇಡಾಂತಲೂ ಅನ್ನಲಿಲ್ಲ, ಬೇಕೂಂತಲೂ ಅನ್ನಲಿಲ್ಲ. ಆದ್ರೆ ಜಾತ್ರೇಲಿ ನಿಮ್ಮ ಮನೆಗೆ ಅಗ್ರ ತಾಂಬೂಲಸಿಗುತ್ತೆ. ಮದುವೆ, ಮುಂಜೀಲಿ,

ಅಮ್ಮನೋರಿಗೆ ಹರಸಿಕೊಂಡ ಕಾಣಿಕೆ ನಿಮ್ಮನೇಗೆ ಬರುತ್ತೆ. ಅದೇ ಹೊಟ್ಟೆ ಉರಿ.''

''ಛೆ...ಛೆ......ಎಲ್ಲಾದ್ರೂ ಉಂಟೆ ಅಜ್ಜಿ.''

''ಸೈ. ಸೈ. ಆ ಹಾತ್ನ ಇದೇ ಸೀತಾಲಕ್ಷ್ಮಿನಮ್ಮಗಂಗೂ ಹುಂದೆ ಬಾಯಿಬಿಟ್ಟು ಆಡಿದಾಳೆ. ಇಲ್ದೆ ಹೋಗಿದ್ರೆ ನನಗೆಲ್ಲಿ ತಿಳೀತಿತ್ತು. ಆದಕ್ಕೆ ಅವತ್ತು ಅಚ್ಚಣ್ಣಭಟ್ಟನಿಗೆ ಚೆನ್ನಾಗಿ ಲಾಟಿಸಿ, 'ನೀನು ಬರ್ದೆ ಹೋದ್ರೆ ನೀನೇ ಕೆಟ್ಟೆ, ಹೋಗು. ಹುನ್ನೆಕೋಟೆಯಿಂದ ಶ್ರೀನಿವಾಸಾವಧಾನಿಗಳನ್ನು ಕರಸ್ತೀನಿ' ಅಂದಾಗ ತೆಪ್ಪಗಾದ. ಅವತ್ತು ಅಷ್ಟೆಲ್ಲಾ ಹರಗಣ ಆದ ಹೊತ್ತಿಗೇ ಅವಳು ಇವತ್ತು ನನ್ನ ಮುಖ ಕಂಡು ಹಾಗೆ ಹೋದದ್ದು. ಅಂತೂ ಅವರ ವಿಷಯ ಹುಷಾರಾಗಿರು. ನಿಮ್ಮಣ್ಣನಿಗೂ ಹೇಳು– ಆದಂತೂ ಶುದ್ಧ ಹುಡುಗು. ಏನೂ ತಿಳಿಯೋದಿಲ್ಲ; ಅಚ್ಚಣ್ಣಭಟ್ಟರ ಹಿತಸ್ಥಿಕೆ ನಂಬಬೇಡಾಂತ ಕಾವೇರಜ್ಜಿ ಹೇಳಿದಳೂಂತ ಹೇಳು.''

–ಎಂದು ರಾಜೇಶ್ವರಿಗೆ ಬುದ್ಧಿವಾದ ಹೇಳಿದಳು ಕಾವೇರಮ್ಮ.

''ಹಾಗೇ ಕಾವೇರಜ್ಜಿ? ನಾನು ಅವರು ಅಂಥೋರು ಅಂತ ನೀನಲ್ದೆ ಬೇರೆ ಯಾರು ಹೇಳಿದ್ರೂ ನಂಬ್ತಾ ಇರಲಿಲ್ಲ. ಗೌರಿ ಪ್ರಸಂಗ ತೀರಿತು ಅಂದ್ಕೊಂಡಿದ್ದೆ ನಾನು. ಅಂತು ಇನ್ನೂ ಜನ ಹಲ್ಲು ಮಸೀತಾ ಇದಾರೇನ್ನು...''

''ಹಲ್ಲೂ ಮಸೀತಾ ಇದಾರೆ, ಕತ್ತೀನಾ ಮಸೀತಾ ಇದಾರೆ. ಆದ್ರೆ ಎಲ್ಲಾ ಒಳಗೊಳಗೆ...ಹೋಗ್ಲಿ... ಇನ್ನಾದ್ರೂ ದಾಸಣ್ಣನಿಗೆ ಆ ಹುಡುಗ ತನ ಎಲ್ಲಾ ಬಿಟ್ಟು ಬಿಡೂಂತ ಹೇಳು. ಇನ್ನು ಮ್ಯಾಲೆ ಅವನೇ ದೇವರು– ದಿಂಡರು ಪೂಜೆ ಪುನಸ್ಕಾರ ಮಾಡಬೇಕು. ಆದರಲ್ಲೂ ಆಮ್ಮನೋರ ಪೂಜೆ ಮಾಡೋರು ಎಷ್ಟು ಮಡಿ ಮಾಡಿದರೂ ಸಾಲದು. ಆಮೇಲೆ ಅಲ್ಲೂ ಹುಡುಗತನ ಮಾಡಲಿಕ್ಕೆ ಹೋಗಿ, ಒಂದು ಹೋಗಿ ಇನ್ನೊಂದಾದೀತು.''

''ಏನು ಬೇಕಾದ್ರೂ ಮಾಡಬಹುದು ಕಾವೇರಜ್ಜಿ– ಹುಲಿ ಹಾಲು ಬೇಕೂಂದ್ರೂ ತರಬಹುದು. ಆದ್ರೆ ಆದೊಂದು ಮಾತ್ರ ಸಾಧ್ಯವಿಲ್ಲ.''

''ಯಾವುದು?''

''ಗೌರಮ್ಮನಿಂದ ದಾಸಣ್ಣನನ್ನು ಬಿಡಿಸೋದು.''

''ಯಾಕೆ–ಮದ್ವೆ ಆದ ಮೇಲೂ ಅಷ್ಟು ಕಷ್ಟಾನೇ?''

"ಒಂದಲ್ಲ, ಹತ್ತು ಮದ್ವೆ ಆದ್ರೂ ಅಷ್ಟೆ. ಗೌರಮ್ಮನ ವಿಷಯ ನಿನಗೆ ತಿಳೀದು ಕಾವೇರಜ್ಜಿ—ಅವಳ ಕಾಲು ತೊಳೆದು ನೀರು ಕುಡೀಬೇಕು ಆ ಒಳ್ಳೇತನ ಬರೋಕೆ— "

—ಎಂದು ರಾಜೇಶ್ವರಿ, ಗೌರಮ್ಮನೇ ವೆಂಕಟದಾಸಪ್ಪನವರ ಮದುವೆಗೆ ನರಸಪ್ಪನವರನ್ನು ಒಪ್ಪಿಸಿದ್ದು, ಮದುವೆಯಲ್ಲಿ ತನ್ನ ಒಡವೆಗಳನ್ನೆಲ್ಲಾ ತೆಗೆದು ರಂಗಮ್ಮನಿಗೆ ತೊಡಿಸಿದ್ದು—ಎಲ್ಲವನ್ನೂ ಹೇಳಿದಳು.

"ಹಾಗೇ—ಅವಳು ಅಂತೋಳೂಂತ ನನಗೆ ತಿಳಿದಿರಲಿಲ್ಲ. ಜಾತಿ ಯಾವುದಾದರೇನು, ನೀತಿಗೆ ಮನ್ನಣೆ ಕೊಡಬೇಕು. ಆದು ಹ್ಯಾಗಾದ್ರೂ ಆಗ್ಲಿ—ಇವಳನ್ನು ಕಟ್ಟಿಕೊಂಡೇ ನಿಮ್ಮಣ್ಣ ಅಮ್ಮನೋರ ಪೂಜೆ ಮಾಡ್ತಾನೇನೇ ?"

"ಏನು ಮಾಡ್ತಾನೋ ಅಜ್ಜಿ... ನೋಡಬೇಕು"

"ನೋಡಬೇಕು ಅಂತ ರಾಗ ಎಳದ್ರೇನಾಯ್ತು. ಜಾತ್ರೆ ಹತ್ತಿರಕ್ಕೆ ಬಂತಲ್ಲ. ವೈಶಾಖ ಶುದ್ಧ ಸಪ್ತಮಿಗೆ ಇನ್ನೇನು ಎರಡು ದಿನಾನೋ ಮೂರು ದಿನಾನೋ ಇದೆ."

"ಹೌದೇನಜ್ಜಿ..."

"ಹೂಂ, ಚೈತ್ರ ಶುಕ್ಲ ಹುಣ್ಣಿಮೆ ನಿಮ್ಮಪ್ಪ ತೀರಿಕೊಂಡದ್ದು... ಅಲ್ಲಿಂದೀಚೆಗೆ ಇಪ್ಪತ್ತು ದಿನ ಆಯ್ತಲ್ಲ. ಇವತ್ತೇನು ಬಿದಿಗೇನೋ, ತದಿಗೇನೋ ಇರಬೇಕು..."

"ದಿವಸ ಎಷ್ಟು ಬೇಗ ಓಡುತ್ತಜ್ಜಿ...ನನಗಂತೂ ಜಾತ್ರೆ ಇಷ್ಟು ಹತ್ತಿರ ಬಂದದ್ದು ಗೊತ್ತೇ ಇರಲಿಲ್ಲ."

"ಮನೆ ಬಿಟ್ಟು ಹೊರಗೆ ಬಂದರೆ ತಾನೇ ನಿನಗೆ ಗೊತ್ತಾಗೋದು. ಶೂದ್ರಾದಿಗಳು ಆಗಲೇ ಮನೆಗೆ ಸುಣ್ಣ ಬಣ್ಣ ಮಾಡಿಸೋಕೆ ಆರಂಭಮಾಡಿ ದಾರೆ. ಅಂತೂ ಜಾತ್ರೆ ಹೊತ್ತಿಗೆ ಅಚ್ಚಣ್ಣಭಟ್ಟರು ಇದನ್ನು ಕೆಣಕಿದರೂ ಕೆಣಕಬಹುದು. ನಿಮ್ಮಣ್ಣನಿಗೆ ಈಗಲೇ ಹುಷಾರಾಗಿರು ಅಂತ ಹೇಳು. ನಾಳೆ ಊರು ಪಂಚಾಯ್ತಿ ಏನಾದ್ರೂ ಆದೀತು. "

—ಎಂದು ಎಚ್ಚರಿಕೆ ಹೇಳಿದಳು ಕಾವೇರಜ್ಜಿ.

ಆಕೆ ಹೇಳಿದುದನ್ನು ಕೇಳಿ ರಾಜೇಶ್ವರಿಗೆ ಏಕೋ, ಇದ್ದಕ್ಕಿದ್ದ ಹಾಗೇ ನಿರಭ್ರವಾಗಿದ್ದ ಮುಗಿಲಿನಲ್ಲಿ ಮೋಡಕಟ್ಟಿ. ಬರಸಿಡಿಲ ಮೊದಲ ಗುಡುಗು ಮೊಳಗಿದಂತಾಯಿತು.

ಅದಕ್ಕೇ ಕಾವೇರಮ್ಮನ ಮಾತಿಗೆ ಏನೂ ಉತ್ತರಹೇಳದೆ ಸುಮ್ಮನೆ ಕುಳಿತು ಬಿಟ್ಟಳು.

೮

ಸಂಜೆ ಮನೆಗೆ ಬರುತ್ತಿದ್ದ ಹಾಗೇ ರಾಜೇಶ್ವರಿ ಹೇಳಿದುದೆಲ್ಲವನ್ನು ಕೇಳಿ ವೆಂಕಟದಾಸಪ್ಪನವರೂ ಒಂದು ಗಳಿಗೆ ಗರಬಡಿದಂತೆ ಕುಳಿತುಬಿಟ್ಟರು.

"ಸುಮ್ಮನೆ ಕೂತರೆ ಹ್ಯಾಗೆ –ನಾಳೆ ಒಳ್ಳೇ ಹೊತ್ತಿನಲ್ಲಿ ಅಚ್ಚಣ್ಣ ಭಟ್ಟರು ಏನಾದರೂ ಗದ್ದಲ ತೆಗೆದರೆ ಏನುಮಾಡ್ತೀಯಾ?"

—ರಾಜೇಶ್ವರಿ ಕಾತುರಳಾಗಿ ಕೇಳಿದಳು ?

"ಅವರು ಗದ್ದಲ ಮಾಡಬಹುದೂಂತಲೇ ಅನಿಸುತ್ತೇ ನಿನಗೆ ರಾಜೇಶ್ವರಿ."

'ಕಾವೇರಜ್ಜಿ ಹೇಳಿದ್ದನ್ನು ಕೇಳಿದ್ರೆ ಯಾಕೋ ಹಾಗೇ ಅನಿಸಂತ್ತೆ.'

'ಸರಿ—"

"ಅಂದ್ರೆ—"

"ನೋಡೋಣ– ತಾಯಿ ಇಚ್ಛೆ ಹೇಗಿದೆಯೋ ಹಾಗಾಗಲಿ."

—ಎಂದು ಆ ಮಾತನ್ನು ಅಲ್ಲಿಗೇ ಮುಗಿಸಿದರು ವೆಂಕಟದಾಸಪ್ಪನವರು

ಅವರು ಆ ಮಾತು ಮುಗಿಸಿದ ರೀತಿಯನ್ನು ಕಂಡು ರಾಜೇಶ್ವರಿಗೂ ಏಕೋ ಆ ಮಾತನ್ನು ಮುಂದುವರಿಸುವುದು ಮನಸ್ಸಾಗಲಿಲ್ಲ.

"ಏನೋ ನೋಡು–ದಾಸಣ್ಣ, ಎಲ್ಲಾ ನಿನಗೆ ಸೇರಿದೆ. ಅಣ್ಣ ಹೋದ ಕೊರಗಿನಲ್ಲೇ ಅಮ್ಮ ನೆಲ ಹತ್ತಿದಾಳೆ. ಇನ್ನು ಈ ಹಗರಣಾನೂ ಆಗಿ ಹೋದ್ರೆ ಅವಳು ಖಂಡಿತ ಬದುಕೋಲ್ಲ. ನಿನಗೆ ಹ್ಯಾಗೆ ಸರಿ ಅನಿಸಿದರೆ ಹಾಗೆ ಮಾಡು.'

—ಎಂದಷ್ಟೇ ಹೇಳಿಸುಮ್ಮನಾದಳು.

ರಾಜೇಶ್ವರಿ ಅಷ್ಟಕ್ಕೆ ಆ ಮಾತು ಮುಗಿಸಿದರೂ , ಆ ಮಾತು ಮಾತ್ರ ವೆಂಕಟದಾಸಪ್ಪನವರ ಮನಸ್ಸಿನಲ್ಲಿ ಮುಳ್ಳಿನಂತೆ ಇರಿಯುತ್ತಲೆ ಇತ್ತು. ಅಚ್ಚಣ್ಣಭಟ್ಟರು ತಮ್ಮ ವಿರುದ್ಧ ಕತ್ತಿ ಮಸೆಯುತ್ತಿದ್ದಾರೆ, ತಮ್ಮ ತಂದೆಗೆ ಶವ ಸಂಸ್ಕಾರ ಕಾರ್ಯಕ್ಕೂ ಅವರು ಅಡ್ಡಿಯಾಗುವುದರಲ್ಲಿದ್ದರು ಎಂಬುದನ್ನು ಕೇಳಿ, ಅವರ ಚಿತ್ತ ಬಹು ಪ್ರಕ್ಷುಬ್ಧವಾಗಿತ್ತು.

ವಿನಾ ಕಾರಣ ತಮ್ಮ ವಿಷಯದಲ್ಲಿ ಹಗೆತನ ಸಾಧಿಸುತ್ತಿದ್ದ ಅಚ್ಚಣ್ಣ ಭಟ್ಟರನ್ನು, ಹಿಡಿದು, ಸೀಳಿ ಊರ ಬಾಗಿಲಿಗೆ ತೋರಣ ಕಟ್ಟಬೇಕು ಎನ್ನುತ್ತಿತ್ತು ಅವರ ಕ್ರೋಧಪರವಶವಾದ ಬುದ್ಧಿ.

ಆ ಸಿಟ್ಟಿನಲ್ಲೇ ಕೈಕಾಲು ತೊಳೆದುಕೊಂಡು, ದೇವರ ಮನೆಗೆ ಹೋಗಿ ಮಡಿಯುಟ್ಟು, ಸಾಯಂ–ಸಂಧ್ಯಾವಂದನೆಗೆ ಕುಳಿತರು.

ಒಂದು ಕಡೆ, ಅಚ್ಚಣ್ಣ ಭಟ್ಟರ ಮೇಲೆ ಸಿಟ್ಟು—

ಇನ್ನೊಂದು ಕಡೆ, ರಾಜೇಶ್ವರಿ ಹೇಳಿದಂತೆ ಊರಿನಲ್ಲಿ ಹಗರಣವಾದರೇನು ಗತಿ ಎಂಬ ಚಿಂತೆ—

ಈ ಚಿಂತೆಯಲ್ಲಿ ಸಂಧ್ಯಾವಂದನೆಯ ಕೆಲಸವೂ ಸರಿಯಾಗಿ ನಡೆಯಲಿಲ್ಲ. ಚೆನ್ನಾಗಿ ಅಭ್ಯಾಸವಾದ ಮಂತ್ರಗಳೂ ಹಿಂದು ಮುಂದಾಗತೊಡಗಿದವು.

ಈ ಪರಿಸ್ಥಿತಿಯನ್ನು ಹೇಗೆ ಎದುರಿಸುವುದು?

ಹೇಗೆ ಎದುರಿಸುವುದು ಎಂದು ಯಾರನ್ನು ಕೇಳುವುದು?

ಅಚ್ಚಣ್ಣಭಟ್ಟರನ್ನೇ ಹೋಗಿ ಕೇಳುವುದೇ–ಏನೆಂದು?

"ಸ್ವಾಮಿ ನಿಮ್ಮ ಮನಸ್ಸಿನಲ್ಲಿ ಏನಿದೆ ಹೇಳಿ, ಊರಿನಲ್ಲಿ ಹಗರಣ ಮಾಡಬೇಡಿ. ನನ್ನ ಮರ್ಯಾದೆ ಉಳಿಸಿ"

—ಎಂದು ಬೇಡುವುದೇ ?

ಏಕೋ ಆ ಭಾವನೆ ಮನಸ್ಸಿನಲ್ಲಿ ಸುಳಿಯುತ್ತಿದ್ದ ಹಾಗೇ, ತಮ್ಮ ಬಗ್ಗೆಯೇ ಅವರಿಗೆ ಹೇಸಿಗೆಯಾಯಿತು.

'ಛಿ–ಊಟಿ? ಅಪರಾಧ ಮಾಡಿದವರ ಹಾಗೆ ಅವರ ಕಾಲಿಗೆ ಬಿದ್ದು ಕೇಳುವುದೇ? ನನ್ನ ವಿರುದ್ಧ ಹಟ ಸಾಧಿಸಲೆತ್ನಿಸಿದ ಅವರಿಗೆ ಮುಖ ಮುರಿದು ಬುದ್ಧಿ ಕಲಿಸುವುದನ್ನು ಬಿಟ್ಟು, ಅವರನ್ನೇ ಕೇಳಿಕೊಳ್ಳುವುದೇ?'

ಆ ಭಾವನೆಗೆ ಅವನ ಮನಸ್ಸು ಮುದುಡಿಕೊಂಡು 'ಊಹೂ' ಎಂದಿತು.

ಹಾಗಾದರೆ—

ಆ ಚಿಂತೆಯಲ್ಲೇ ಮತ್ತೊಂದು ಚಿಂತೆ—

"ಪರಜಾತೀಯಳ ಸ್ಪರ್ಶ ಮಾಡಿದ ನಾನು ಅಮ್ಮನವರನ್ನು ಮುಟ್ಟಬಹುದೇ? ಆಕೆಯ ಪೂಜೆ ಮಾಡಲು ನಾನು ಅರ್ಹನೇ?"

ಅವರ ತಲೆಯಲ್ಲಿ ಆ ಯೋಚನೆ ಸುಳಿದಾಗಲೇ, ಅವರಿಗೆ ಇದ್ದಕ್ಕಿದ್ದ ಹಾಗೇ ನೆನಪಾಯಿತು —

ರಂಗಮ್ಮನನ್ನು ಮನೆ ತುಂಬಿಸಿಕೊಂಡ ಮರುದಿನ, ನರಸಪ್ಪನವರು ತಮ್ಮಿಬ್ಬರಿಂದಲೂ ದೇವೀಪೂಜೆ ಮಾಡಿಸಿ—

'ರಂಗೂ... ಇವತ್ತಿನಿಂದ ಇವಳ ಪೂಜೆ ನಿನ್ನ ಜವಾಬ್ದಾರಿ''

—ಎಂದಿದ್ದರು.

ಅವರು ಹಾಗೇಕೆ ಮಾಡಿದರು? ನಾನು ದೇವೀಪೂಜೆಗೆ ಅನರ್ಹನೆಂದೆ?

ಹಾಗಾದರೆ ನನಗೆ ದೇವಿ ಪೂಜೆ ಮಾಡುವ ಭಾಗ್ಯವೇ ಇಲ್ಲವೇ? ನನ್ನ ತಂದೆಯೇ ಅನರ್ಹ ಎಂದು ಭಾವಿಸಿದ ಮೇಲೆ, ಅಚ್ಚಣ್ಣಭಟ್ಟರು ಅನರ್ಹ ಎಂದು ಹೇಳುವುದರಲ್ಲಿ ತಪ್ಪೇನಿದೆ?

ನನ್ನ ಗೌರಿಯ ಸ್ನೇಹ ಪಾಪವೆಂದೇ ತಿಳಿದಿದ್ದರೆ, ಕಡ ಗಳಿಗೆಯಲ್ಲಿ—

'ರಂಗಮ್ಮನ ಮನಸ್ಸು ನೋಯಿಸಿದರೂ ಸರಿಯೇ—ಗೌರಮ್ಮನ ಮನಸ್ಸು ನೋಯಿಸ ಬೇಡ'

—ಎಂದು ತನಗೆ ಅವರು ಅಪ್ಪಣೆ ಮಾಡಿದ್ದೇಕೆ?

ಕೇವಲ ಗೌರಮ್ಮನ ಮೇಲಿನ ವಿಶ್ವಾಸಕ್ಕೆ ಸೋತು ಆ ಮಾತು ಹೇಳಿದರೇ?

ಏಕೋ ಆ ಭಾವನೆ ಸರಿಯೆಂದು ಅವರಿಗೆ ತೋರಲಿಲ್ಲ. ಎಲ್ಲ ಲೋಭ, ಮೋಹ, ಮದ, ಮಾತ್ಸರ್ಯಗಳನ್ನೂ ಗೆದ್ದು ದೇವಿಯ ಪಾದದಲ್ಲಿ ಐಕ್ಯರಾದ ನರಸಪ್ಪನವರನ್ನು ಕೊನೆಯ ಗಳಿಗೆಯಲ್ಲೂ ಯಾವುದೋ ಮೋಹ ಕವಿದಿತ್ತು ಎಂದು ಊಹಿಸುವುದೂ ಅವರಿಗೆ ಸಾಧ್ಯವಾಗಲಿಲ್ಲ.

ಹಾಗಾದರೆ—?

ಆ ಪ್ರಶ್ನೆಗೆ ಉತ್ತರವೇ ತೋಚಲಿಲ್ಲ ಅವರಿಗೆ.

ಆ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದಿರುವಾಗಲೇ ಮತ್ತೊಂದು ಪ್ರಶ್ನೆ—

'ಒಂದು ವೇಳೆ ಅಚ್ಚಣ್ಣಭಟ್ಟರು ಹಗರಣ ಮಾಡಿದರೆ, ಯಾರಿಗಾದರೂ ಹೇಳಿ ಹಗರಣ ಮಾಡಿಸಿದರೆ ಏನು ಮಾಡುವುದು? ಹಟ ಹಿಡಿದು ಅಮ್ಮನವರ ಪೂಜೆ ಮಾಡುವುದೇ?

ಆದದ್ದಾಗಲಿ ಎಂದು ಸೆಟೆದು ನಿಲ್ಲುವುದೇ?

ಏನು ಮಾಡುವುದು?'

ಏಕೋ ನೂರಾರು ಪ್ರಶ್ನೆಗಳು ಸಾಲು ಸಾಲಾಗಿ ಕವಾಯತಿಗೆ ನಿಲ್ಲುವ ಸೈನಿಕರಂತೆ ವೆಂಕಟದಾಸಪ್ಪನವರ ಕಣ್ಣೆದುರಿಗೆ ನಿಂತವು. ಉತ್ತರ ಮಾತ್ರ–ಒಂದಕ್ಕೂ ಕಾಣಲಿಲ್ಲ.

ಆ ಪ್ರಶ್ನೆಗಳ ಸುಳಿಯಲ್ಲಿ ಸಿಲುಕಿ, ಆದ ಹಾಗಾಗಲಿ ಎಂದು ಸಂಧ್ಯಾವಂದನೆಯನ್ನು ಮುಗಿಸಿ, ಆ ಪ್ರಶ್ನೆಗಳ ಬೇಗೆಯಲ್ಲಿ ಮನೆಯಲ್ಲಿ ಕುಳ್ಳಿರಲಾಗದೆ, ಎದ್ದು ವೀರಣ್ಣನ ಮನೆಯ ಕಡೆ ಹೊರಟರು.

೬

ಕೇವಲ ಸ್ವಲ್ಪ ಹೊತ್ತಿನ ಕೆಳಗೆ 'ಮನೆಗೆ ಹೋಗುತ್ತೇನೆ' ಎಂದು ಹೇಳಿ ಹೋದ ವೆಂಕಟದಾಸಪ್ಪನವರು, ಹೋದ ಸ್ವಲ್ಪ ಹೊತ್ತಿನಲ್ಲೇ ಮತ್ತೆ ಮನೆಗೆ ಬಂದಿದ್ದನ್ನು ಕಂಡು ಗೌರಮ್ಮನಿಗೆ ಆಶ್ಚರ್ಯವಾಯಿತು. ಆ ಆಶ್ಚರಿಯನ್ನು ನಗೆಯಾಗಿ ಮಾರ್ಪಡಿಸಿ—

"ಮನೇಲಿ ಕಾಲು ನಿಲ್ಲೋಕಿಲ್ಲಾಂತೈತಾ?"

—ಎಂದು ಕೇಳಿದಳು ನಗುತ್ತಾ.

"ಬುದ್ಧಿ ಎಲ್ಲಾದ್ರೂ ಒಂದು ಕಡೆ ಸ್ಥಿರವಾಗಿ ನಿಂತರೇ ತಾನೇ, ಕಾಲು ಹೋದ ಕಡೆ ನಿಲ್ಲೋದು. ಈಗ ಆ ಮಾತೆಲ್ಲಾ ಇರಲಿ—ಮೊದಲು ಮಗಡೆ, ಹಾಸು ತಗಿ."

—ಎಂದರು ವೆಂಕಟದಾಸಪ್ಪ.

"ಇದೇನಿವತ್ತೂ ಯಾವತ್ತು ಇಲ್ಲದ ಆಟದ ಗೀಳು. ಅದೂ ಒಳ್ಳೆ ದೀಪ ಮುಟ್ಟಿಸೋ ಹೊತ್ನಲ್ಲಿ!... "

"ಸುಮ್ನೆ ಇಲ್ಲದ ಪಂಚಾಂಗ ಎಲ್ಲಾ ಓದ್ಬೇಡ ಗೌರ. ಸುಮ್ಮನೆ ಹೇಳಿದಷ್ಟು ಮಾಡು."

ಬಹು ನೀರಸವಾದ, ಗಡುಸಾದ ಧ್ವನಿಯಲ್ಲಿ ವೆಂಕಟದಾಸಪ್ಪನವರು ಹೇಳಿದ ಆ ಮಾತನ್ನು ಕೇಳಿ, ಆಕಸ್ಮಿಕವಾಗಿ ಕೆಂಡ ಮುಟ್ಟಿದಂತಾಗಿ, ಗೌರಮ್ಮನ ತುಟಿಯ ಮೇಲಿದ್ದ ನಗು ಹಾಗೇ ಮಾಯವಾಗಿಹೋಯಿತು.

"ಆಯ್ತು, ದೀಪ ಹೊತ್ತಿಸಿ ಬರ್ತೀನಿ."

—ಎಂದು, ಮತ್ತೆ ಮರುಮಾತಾಡದೆ, ದೀಪವನ್ನು ಹೊತ್ತಿಸಿ, ಅದನ್ನು, ಅದರ ಬೆಳಕು ಆಟಕ್ಕೆ ಸರಿಯಾಗಿ ಬೀಳುವಂತೆ ಇಟ್ಟು, ಕುಳಿತುಕೊಳ್ಳಲು ಜಮಖಾನ ಹಾಸಿ, ಆಟಕ್ಕೆ ಹಾಸನ್ನು ಹೂಡಿದರು.

ವೆಂಕಟದಾಸಪ್ಪನವರು ನಡುಮನೆಯ ಕಂಭಕ್ಕೆ ಒರಗಿ ಕುಳಿತುಕೊಂಡು, ಗೌರಮ್ಮ ಆಟಕ್ಕೆ ಸಿದ್ಧಮಾಡುವುದನ್ನೇ ನೋಡುತ್ತಿದ್ದರು.

ಇದ್ದಕ್ಕಿದ್ದ ಹಾಗೇ ಅವರ ತಲೆಯಲ್ಲಿ ಏನೋ ಒಂದು ಯೋಚನೆ ಹೊಳೆದು, ಚಕ್ಕನೆ ಮೈಯಲ್ಲಿ ಮಿಂಚು ಓಡಿದಂತಾಯಿತು.

ಗೌರಮ್ಮ ಆಟಕ್ಕೆ ಎಲ್ಲವನ್ನೂ ಸಿದ್ಧಪಡಿಸಿದ ಬಳಿಕ, ಪಗಡೆಯ ಹಾಸಿನ ಬಳಿ ಸರಿದು ಕುಳಿತು. ತಮಗೆ ಬೇಕಾದ ಬಣ್ಣದ ಕಾಯನ್ನು ಆರಿಸಿಕೊಂಡು, ಹಾಸಿನ ಮೇಲೆ ಹೂಡಿ, ದಾಳಗಳನ್ನು ಕೈಯಲ್ಲಿ ಉಜ್ಜುತ್ತಾ, ಇದುರಿಗೆ ಕುಳಿತ ಗೌರಮ್ಮನ ಮುಖವನ್ನೇ ದಿಟ್ಟಿಸಿ ನೋಡುತ್ತಾ ಕುಳಿತರು ವೆಂಕಟದಾಸಪ್ಪ.

ಇದುರಿಗೆ ಕುಳಿತ ಗೌರಮ್ಮ—

ಕೆಂಪು ಸ್ವಲ್ಪ ಹೆಚ್ಚಾಗಿ ಬೆರೆದ ಗೋಧಿಯ ಬಣ್ಣದ, ದುಂಡಾದ ಸೌಮ್ಯ ಮುಖ. ತುಂಬಿದ ಕೆನ್ನೆಗಳು. ಎಲೆಯಡಿಕೆಯ ಜಗತದಿಂದ ಕೆಂಪೇರಿದ ತುಂಬು ತುಟಿಗಳು. ಆ ತುಟಿಗಳ ಮಾಟಕ್ಕೆ ಮೆರಗುಕೊಟ್ಟ ನಾಸಿಕ. ಮುಖದ ಮುಗಿಲಿನಲ್ಲಿ ಜೋಡಿ ಚಂದ್ರರಂತೆ ಹೊಳೆಯುವ ವಿಶಾಲ ಸುಂದರ ನೇತ್ರದ್ವಯ. ಆ ಕಣ್ಣ ಮೇಲಿನ ನೀಳವಾದ ಎವೆಗೂದಲು. ಅಚ್ಚುಕಪ್ಪಾದ, ಬಿಲ್ಲಿನಂತೆ ಬಾಗಿದ ಹುಬ್ಬು. ವಿಶಾಲ ಫಾಲದ ವಿಸ್ತಾರತೆಯನ್ನು ಮತ್ತಷ್ಟು ಹೆಚ್ಚಿಸುವ ಅಗಲವಾದ ಕುಂಕುಮದ ಬೊಟ್ಟು—

ಹರಳೆಣ್ಣೆಯ ದೀಪದ ಬೆಳಕಿನಲ್ಲಿ ಆ ಮುಖ ಸೌಂದರ್ಯಕ್ಕೆ ಏನೋ ಒಂದು ಅಲೌಕಿಕತೆಯ ಮೆರಗು ಬಂದಿತ್ತು.

ಇದುರಿಗೆ ಕುಳಿತ ಗೌರಮ್ಮನನ್ನು ನೋಡಿಯೇ ನೋಡಿದರು ವೆಂಕಟದಾಸಪ್ಪ.

ಹಿಂದೆಂದೂ ಅವರ ಕಣ್ಣಿಗೆ ಆಕೆ ಅಷ್ಟು ಚೆಲುವೆಯಾಗಿ ಕಂಡಿರಲಿಲ್ಲ.

ಆಟಕ್ಕೆ ಎಲ್ಲವೂ ಸಿದ್ಧವಾಗಿದ್ದರೂ, ಆಟ ಆಡುವುದನ್ನು ಬಿಟ್ಟು, ದಾಳಗಳನ್ನು ಉರುಳಿಸದೆ, ಕೈಯಲ್ಲಿ ಉಜ್ಜುತ್ತಾ ಒಂದೇ ಸಮ ತನ್ನ ಮುಖವನ್ನೇ ದಿಟ್ಟಿಸಿ ನೋಡುವ ವೆಂಕಟದಾಸಪ್ಪನವರನ್ನು ಕಂಡು, ಗೌರಮ್ಮನ ಮುಖ ತನ್ನಷ್ಟಕ್ಕೆ ತಾನೇ ಕೆಂಪೇರಿತು.

ಆ ನಾಣ್ಚಿಕೆಯಿಂದ ಆಕೆಯ ಮುಖ ಸೌಂದರ್ಯಕ್ಕೆ ಮತ್ತಷ್ಟು ಮೆರಗು ಕೊಟ್ಟಂತಾಯಿತು.

"ಅದ್ಯಾಕ್ಹಂಗೆ ನೋಡ್ತೀರಾ? ನನ್ನ್ಯಾವತ್ತೂ ನೋಡಿಲ್ವಾ?"

—ನಾಚಿಕೆಯ ಮಿದುನಗೆ ನಕ್ಕು ತಡೆತಡೆದು ಕೇಳಿದಳು ಗೌರಮ್ಮ.

"ನೋಡಿದ್ದೆ..."

"ಮತ್ತೆ..."

"ಆದರೆ ನೀನು ಕಣ್ಣಿಗೆ ಇಷ್ಟೊಂದು ಚೆಲುವೆಯಾಗಿ ಎಂದೂ ಕಂಡಿರಲಿಲ್ಲ."

—ಎಂದರು ವೆಂಕಟದಾಸಪ್ಪ ಯಾವ ಬಣ್ಣನೆಯೂ ಇಲ್ಲದೆ ಕಂಡದ್ದನ್ನು ಮಾತ್ರ ಹೇಳುವ ಯಥಾರ್ಥವಾದಿಯ ಧ್ವನಿಯಲ್ಲಿ.

ಸಾಕಷ್ಟು ಹಳತಾದ ಅವರೀರ್ವರ ಪ್ರಣಯ ಜೀವನದಲ್ಲಿ ಪರಸ್ಪರ ಸೌಂದರ್ಯ ಪ್ರಶಂಸೆಯ ಮಾತು ಎಂದೂ ಬಂದಿರಲಿಲ್ಲ. ಒಬ್ಬರನ್ನೊಬ್ಬರು ಮೆಚ್ಚಿಕೊಂಡಿದ್ದರೂ, ಅದನ್ನು ಇಬ್ಬರೂ ಬಾಯಿಬಿಟ್ಟು ಆಡಿರಲಿಲ್ಲ. ಎಂತಲೇ ಈ ದಿನ ಅಪರೂಪವಾಗಿ ಅವರ ಬಾಯಿಂದ ತನ್ನ ಸೌಂದರ್ಯ ಪ್ರಶಂಸೆಯ ಮಾತನ್ನು ಕೇಳಿ ಗೌರಮ್ಮನಿಗೆ ಎದೆ ತುಂಬಿ ಬಿರಿಯುವಷ್ಟು ಹರ್ಷವಾಯಿತು. ಆ ಸಂತೋಷದಲ್ಲಿ ಕೊಚ್ಚಿ ಹೋಗುತ್ತಾ—

"ಹೌದಾ—"

—ಎಂದು ತುಟಿ, ಹುಬ್ಬುಗಳನ್ನು ಕೊಂಕಿಸಿ ಕೇಳಿದಳು.

ನಸುಂವಕ್ರವಾದ ಆಕೆಯ ತುಟಿಗಳನ್ನು ಕಂಡು ವೆಂಕಟದಾಸಪ್ಪನವರಿಗೆ ಏಕೋ ಕರಳು ಕಿವುಚಿದಂತಾಯಿತು. ಏಕೋ ತುಟಿ, ನಾಲಿಗೆಗಳು ಒಣಗಿ ಮೈಯಲ್ಲಿ ಕಾವೇರಿತು.

"ಹೂ."

—ಎಂದು ಹಾಗೇ ಆಕೆಯತ್ತ ಬಾಗಿ, ಆಕೆಯ ಹಣೆಯ ಮೇಲೆ ಆಡುತ್ತಿದ್ದ ಕುರುಳನ್ನು ಬೆರಳ ತುದಿಯಿಂದ ನೇವರಿಸಿದರು.

ಆಕೆಯ ಹಣೆಯನ್ನು ಅವರ ಬೆರಳ ತುದಿ ಸೋಕುತ್ತಿದ್ದ ಹಾಗೇ, ಆಕೆಯ ಮೈ, ಅವರನ್ನು ಅಯಸ್ಕಾಂತದಂತೆ ಸೆಳೆದು, ಅಷ್ಟು ದೂರ ಕುಳಿತ ಗೌರಮ್ಮ ನನ್ನು ತನ್ನತ್ತ ಬಾಚಿ, ಸೆಳೆದು ತೋಳಲ್ಲಿ ಬಿಗಿದುಕೊಂಡು, ಆಕೆಯ ತುಟಿಗಳ ಮೇಲೆ ಮುತ್ತಿನ ಮಳೆಗರೆದರು.

ತುಟಿಗೆ ತುಟಿ ಮುತ್ತು ಕೊಡುವಾಗ, ಏಕೋ ಅವರ ಕಣ್ಣಲ್ಲಿ ನೀರಾಡಿತು.

ಮುತ್ತಿನ ಮತ್ತೇರಿ ಒಂದು ಗಳಿಗೆ ಹಾಗೇ ಅವರ ತೋಳಿನೊಳಗೆ ಮಲಗಿದ್ದ ಗೌರಮ್ಮ, ಸ್ವಲ್ಪ ಹೊತ್ತಾದ ಮೇಲೆ ಪ್ರಜ್ಞೆ ತಂದುಕೊಂಡು—

"ಚೆಂದಾಯ್ತು. ತಲಬಾಕ್ಲೂ ಹಾಕಿಲ್ಲ ಇವತ್ಯಾಕೋ ನಿಮ್ಮ ಬುದ್ಧೀನೇ ಕೆಟ್ಹೋಗದೆ."

—ಎಂದು ಹೇಳಿ, ಜಾರಿದ ಸೆರಗನ್ನು ಸರಿಪಡಿಸಿಕೊಂಡಳು.

"ಗೌರಾ..."

—ಬಿಗಿದು ಕಂಪಿಸುತ್ತಿದ್ದ ಧ್ವನಿಯಲ್ಲಿ ಕರೆದರು ವೆಂಕಟದಾಸಪ್ಪ.

"ಏನು?"

"ತಲೆಬಾಗಿಲು ಹಾಕಿ ಬಿಡು."

ಆ ಮಾತನ್ನು ಕೇಳಿ ಗೌರಮ್ಮ ತಟಕ್ಕನೆ ತಲೆ ಎತ್ತಿ ವೆಂಕಟದಾಸಪ್ಪನವರ ಮುಖವನ್ನೇ ನೋಡಿದಳು.

ಏಕೋ ಅವಳಿಗೆ ಅವರ ಕೂಗು ಪ್ರಣಯಾರ್ತರ ಕೂಗಿನಂತೆ ಕೇಳದೆ, ಪ್ರಾಣಾರ್ತರ ಕೂಗಿನಂತೆ ಕೇಳಿಸಿತು. ಅವಳ ಹೃದಯದಲ್ಲಿ ತಟಕ್ಕನೆ ಭೀತಿ ಹುಟ್ಟಿ ಹರಡಿ. ತನ್ನಿಂದ ನಸು ದೂರದಲ್ಲಿ ಕುಳಿತ ವೆಂಕಟದಾಸಪ್ಪನವರು, ತನ್ನನ್ನು ಬಿಟ್ಟು ಎಲ್ಲೋ ದೂರ, ಬಹು ದೂರ ಜಾರಿಹೋಗುತ್ತಿದ್ದಂತೆ ಭಾಸವಾಗಿ ತಟಕ್ಕನೆ ತಾನೇ ಅವರನ್ನು ತನ್ನ ತೋಳೊಳಗಿಟ್ಟುಕೊಂಡಳು—ಮಗುವನ್ನಪ್ಪುವ ತಾಯಿಯಂತೆ.

ಅಷ್ಟು ಹೊತ್ತು ಇಬ್ಬರೂ ಸುಮ್ಮನೆ ಕುಳಿತಿದ್ದರು.

ಅವರಿಬ್ಬರ ಸುತ್ತಲೂ ವ್ಯಾಪಿಸಿದ ಮೌನ, ಸುತ್ತ ಕಿಚ್ಚನ್ನು ಒಟ್ಟಿದಂತೆ ಅಸಹ್ಯವಾಗಿತ್ತು.

ಆ ಮೌನದ ಅಸಹನೀಯ ಯಾತನೆಯನ್ನು ತಡೆಯಲಾರದೆ, ಗೌರಮ್ಮನೇ ಅದನ್ನು ಮುರಿದು—

ಅಂಗಾದ್ರೆ......ಅಂಗಾದ್ರೆ...... ಆಟ ಆಡೋದು...... ಬ್ಯಾಡ್ವಾ..."

—ಎಂದು ಕೇಳಿದಳು.

ಆಕೆಯ ಮಾತು ಕೇಳಿ ವೆಂಕಟದಾಸಪ್ಪನವರಿಗೂ ಮರೆತು ಹೋದ ಆಟದ ನೆನಪಾಯಿತು. ಆಕೆಯ ಎದೆಯ ಮೇಲೆ ತಲೆಯನ್ನಿಟ್ಟುಕೊಂಡೇ ದೃಷ್ಟಿಯನ್ನು ನೆಲದತ್ತ ಬಾಗಿಸಿ, ಪಗಡೆಯ ಹಾಸನ್ನು ನೋಡಿದರು.

ಅವರು ಕೈಯಲ್ಲಿ ಹಿಡಿದ ದಾಳ ಎಲ್ಲೋ ಬಿದ್ದಿದ್ದವು. ಹಾಸಿನ ಮೇಲೆ

ಮೂಡಿದ ಕಾಯಿಗಳು ಕಲಬೆರಕೆಯಾಗಿ ಕಲ್ಲಾಬಿಲ್ಲಿಯಾಗಿದ್ದವು. ಅಚ್ಚುಗಟ್ಟಾಗಿ ಹಾಸಿದ ಹಾಸು. ಅಲ್ಲಲ್ಲಿ ಸುಕ್ಕಾಗಿ. ರೆಕ್ಕೆ ಮುರಿದ ಹಕ್ಕಿಯಂತೆ ಮುದುರಿತ್ತು.

ಅದನ್ನು ನೋಡಿ, ಹಾಗೇ ದೃಷ್ಟಿಯನ್ನು ಮೇಲೆತ್ತಿ ಛಾವಣಿಯತ್ತ ನೋಡುತ್ತಲೇ, ತಮ್ಮ ತಲೆಯ ಹಿಂದಿದ್ದ ಗೌರಮ್ಮನ ಕೆನ್ನೆಗಳನ್ನು, ತುಟಿಗಳನ್ನು, ಮುಂದಲೆಯನ್ನು ಮೃದುವಾಗಿ ನೇವರಿಸಿ, ಹಾಗೇ ಅವಳ ಕೆನ್ನೆಯನ್ನು ತಮ್ಮ ತಲೆಗೆ ಒತ್ತಿಕೊಂಡರು.

ಅದೆಲ್ಲವೂ ಗೌರಮ್ಮನಿಗೆ ಏನೋ ಒಂದು ಅಪೂರ್ವ ಅನುಭವವಾದಂತಾಗಿ, ಆಕೆ ಕಡೆದ ಗೊಂಬೆಯಂತೆ ಸುಮ್ಮನೆ ಕುಳಿತಳು.

ಗೌರಮ್ಮನ ಸಾಮೀಪ್ಯ ವೆಂಕಟದಾಸಪ್ಪನವರಿಗೆ ಎಷ್ಟು ಹಿತವಾಗಿತ್ತೋ ಅಷ್ಟೇ ಯಾತನಾಪೂರ್ಣವಾಗಿತ್ತು. ಸುಮ್ಮನೆ ಏನನ್ನೋ ಯೋಚಿಸುತ್ತಾ ಕುಳಿತ ವೆಂಕಟದಾಸಪ್ಪನವರು, ತಮ್ಮ ಕಣ್ಣನ್ನು ಮತ್ತೊಮ್ಮೆ ಪಗಡೆಯ ಹಾಸಿನತ್ತ ಹೊರಳಿಸಿದರು.

ಮುದುಡಿಕೊಂಡ ಪಗಡೆಯ ಹಾಸು ವಿಧಿಯ ಸವಾಲಿನಂತೆ ಕಂಡಿತು ಅವರ ಕಣ್ಣುಗಳಿಗೆ.

ಅದನ್ನು ನೋಡನೋಡುತ್ತಾ ಅವರ ಮುಖದಿಂದ ಬಹು ಭಾರವಾದ ನಿಟ್ಟುಸಿರು ಹೊರಹೊಮ್ಮಿತು. ಮತ್ತೊಂದು ಗಳಿಗೆ ಸುಮ್ಮನಿದ್ದು—

"ಪಗಡೆ ಆಡುತ್ತೀಯಾ ಗೌರಾ...?"

—ಎಂದು ಕೇಳಿದರು.

ಆ ಬಹು ಸರಳವಾದ ಪ್ರಶ್ನೆ ಗೌರಮ್ಮನನ್ನು ಬಹು ವಿಚಿತ್ರವಾದ ಗೊಂದಲಕ್ಕೀಡು ಮಾಡಿತು.

ತಾನು ಅವರನ್ನು ಪಗಡೆ ಆಡಲು ಕರೆದಿರಲಿಲ್ಲ. ಆಡುವ ಆಸೆಯನ್ನು ತಾನಾಗಿ ವ್ಯಕ್ತಪಡಿಸಿರಲಿಲ್ಲ. ಆಡಲು ಕರೆದವರು ಅವರೇ; ಈಗ ಅವರೇ 'ಆಡುತ್ತೀಯಾ' ಎಂದು ಕೇಳುತ್ತಿದ್ದಾರೆ. ಇಂಥ ವಿಚಿತ್ರ ಪ್ರಶ್ನೆಗೆ ಏನು ಉತ್ತರ ಹೇಳಬೇಕು?

ಆ ಗೊಂದಲದೊಂದಿಗೇ, ಆ ಸರಳವಾದ ಪ್ರಶ್ನೆಗೆ ಕೂಡಲೇ ಉತ್ತರ ಕೊಡಲು ಆಕೆಗೆ ಏಕೋ ಬಾಯಿ ಬರಲಿಲ್ಲ. ಆಕೆಯ ಮೈಯಲ್ಲಿ ಸೆಖೆಯಂಥ

ವಿಚಿತ್ರ ಭೀತಿ ಮೂಡಿ, ಬಾಯನ್ನು ಬಿಗಿದಿತ್ತು.

"ಪಗಡೆ ಆಡ್ತೀಯಾ ಗೌರಾ..."

—ಗೌರಮ್ಮ ತಮ್ಮ ಪ್ರಶ್ನೆಗೆ ಉತ್ತರ ಕೊಡದಿದ್ದುದನ್ನು ಕಂಡು ವೆಂಕಟದಾಸಪ್ಪನವರೇ ಮತ್ತೊಮ್ಮೆ ಕೇಳಿದರು.

ಆ ಪ್ರಶ್ನೆ ಬರೀ ಪ್ರಶ್ನೆಯೇ ಆಗಿರಲಿಲ್ಲ. ಅದರಲ್ಲಿ 'ಬೇಡ' ಎಂದು ಹೇಳು ಎಂಬ ಬೇಡಿಕೆಯ ಧ್ವನಿಯಿದ್ದಂತೆ ತೋರಿತು ಗೌರಮ್ಮನಿಗೆ.

"ಆಡೋದು. ಬಿಡೋದು ಅಪ್ಪ್ಯಾಲ್ಯಾಗ್ಲಿ—ಮೊದಲು ಇವತ್ಯಾಕ್ಹೀಗೆ ಆಡ್ತಾ ಇದೀರ—ಹೇಳಿ?"

—ಎಂದಳು ಗೌರಮ್ಮ, ಕಕ್ಕುಲತೆ ತುಂಬಿದ ಧ್ವನಿಯಲ್ಲಿ.

ಆ ಪ್ರಶ್ನೆಯನ್ನು ಕೇಳಿ ವೆಂಕಟದಾಸಪ್ಪನವರು ತಟಕ್ಕನೆ ಎದ್ದು ಕುಳಿತು. ದೂರ ಸರಿದು—

"ಆಟ ಮುಗಿಯಲಿ—ಆ ಮೇಲೆ ಏಕೆ ಏನು ಅಂತ ಹೇಳ್ತೀನಿ. ಹಾಸು ಸರಿಮಾಡಿ . ಕಾಯಿ ಹೂಡು ಗೌರಿ"

—ಎಂದರು.

ಆ ಮಾತನಾಡಿದ ವೆಂಕಟದಾಸಪ್ಪನವರ ಧ್ವನಿಯಲ್ಲಿ ಹಿಂದಿನ ಮಾತು ಮಿಡಿಯುತ್ತಿದ್ದ ಯಾತನೆ, ಬೇಡಿಕೆ ಯಾವುದೊಂದೂ ಇರದೆ, ನಿರ್ಧಾರದ ಬಿರುಸಿತ್ತು, ಅಪ್ಪಣೆ ಮಾಡುವ ಧೋರಣೆಯಿತ್ತು.

## ೧೦

ಆ ಮಾತನ್ನು ಕೇಳಿ ಗೌರಮ್ಮನಿಗೆ 'ಇಂದೇನೋ ಅದೃಷ್ಟ ಪರೀಕ್ಷೆಯ ಆಟ ನಡೆಯುತ್ತಿದೆ' ಎಂದೇ ತೋರಿ, ಅವಳ ಕೈ ಕಂಪಿಸಲಾರಂಭಿಸಿತು. ಆದರೂ ಏನೊಂದೂ ಮಾತಾಡದೆ, ಮನಸ್ಸಿನಲ್ಲಿ, 'ಶಿವಾ—ನೀನೇ ಗತಿ' ಎಂದುಕೊಂಡು, ನಡುಗುವ ಕೈಗಳಿಂದಲೇ ಮುದುರಿದ ಹಾಸನ್ನು ಸರಿಪಡಿಸಿ, ಮತ್ತೆ, ಹಾಸಿನ ಮನೆಗಳಲ್ಲಿ ಕಾಯಿ ಹೂಡಿ, ದಾಳವನ್ನು ವೆಂಕಟದಾಸಪ್ಪನವರ ಕೈಗೆ ಕೊಟ್ಟಳು.

ವೆಂಕಟದಾಸಪ್ಪನವರು ಗೌರಮ್ಮ ಕೊಟ್ಟ ದಾಳಗಳನ್ನು ಹಿಡಿದು ಅಂಗೈಯಲ್ಲಿ ಉಜ್ಜುತ್ತಾ—

"ಇದು ಹುಡುಗಾಟದ ಆಟವಲ್ಲ ಗೌರಿ—ಬಹಳ ಎಚ್ಚರವಾಗಿ ಆಡು. ಇವತ್ತು—ನಿನ್ನನ್ನು ಸೋಲಿಸಬೇಕು ಎಂದೇ ನಾನು ಆಟ ಆಡುತ್ತಿದ್ದೇನೆ"

—ಎಂದರು.

"ಆಯಿತು—ಸೋಲಿಸಿ. ಇವತ್ತೇನು—ಎಂದೋ ನಾನು ನಿಮಗೆ ಸೋತಿದ್ದೇನೆ. ಇವೊತ್ತೊಂದು ದಿನ ಸೋತರೇನು ತಪ್ಪು?"

ಎಂದಳು ಗೌರಮ್ಮ ಮನದಲ್ಲಿ ಮೂಡಿದ ಭೀತಿಯನ್ನು ಮಾತಿನಲ್ಲಿ ತೋರದಿರಲು ಯತ್ನಿಸಿ ನಗುತ್ತಾ.

ಊಹೂ— ಅದು ಕೂಡದು. ಇವತ್ತು ನಾನು ನಿನ್ನನ್ನು ಸೋಲಿಸ ಲೆಂದೇ ಆಡುತ್ತೇನೆ. ನೀನೂ ಗೆಲ್ಲಬೇಕೆಂದೇ ಆಡಬೇಕು''.

—ಎಂದರು ವೆಂಕಟದಾಸಪ್ಪ ಬಹು ಕಠಿಣವಾದ ಧ್ವನಿಯಲ್ಲಿ.

"ಆಯ್ತು—ಶಿವನಿಚ್ಛೆ ಹೆಂಗಿದ್ರೆ ಹಂಗಾಗ್ಲಿ. ದಾಳ ಹಾಕಿ."

—ಎಂದಳು ಗೌರಮ್ಮ. ಅನಿವಾರ್ಯವಾದುದನ್ನು ಎದುರಿಸಬೇಕಾಗಿ ಬಂದ ಧ್ವನಿಯಲ್ಲಿ.

"ಸರಿ"

—ಎಂದು ವೆಂಕಟದಾಸಪ್ಪನವರು ದಾಳ ಉರುಳಿಸಿ, ಬಿದ್ದ ಗರವನ್ನು ನೋಡಿಕೊಂಡು, ಯೋಚಿಸಿ ತಮ್ಮ ಕಾಯಿ ನಡೆಸಿದರು.

ಅವರು ಕಾಯಿ ನಡೆಸುವಾಗ ಗೌರಮ್ಮ ಅವರ ಮುಖವನ್ನೇ ನೋಡುತ್ತಿದ್ದಳು. ಕಾಯಿ ನಡೆಸುವಾಗ ಅವರ ಮುಖದಲ್ಲಿ ಮೂಡಿದ ಯಾತನೆಯನ್ನು ನೋಡಿದರೆ, ಗೌರಮ್ಮನಿಗೆ ಅವರು ಕಾಯಿ ನಡೆಸುತ್ತಿದ್ದಂತೆ ತೋರಲಿಲ್ಲ; ತಮ್ಮ ಕರುಳನ್ನು ಕಿತ್ತು ಹರಡುತ್ತಿದ್ದಂತೆ ತೋರಿ, ಆಕೆಯ ಕಣ್ಣಲ್ಲಿ ಹನಿಯೊಡೆದಿತು.

ಆಕೆಯೂ ಮಾತನಾಡದೆ ದಾಳ ಉರುಳಿಸಿ, ತನ್ನ ಕಾಯಿ ನಡೆಸಿದಳು.

ಆಟ ಆರಂಭವಾಯಿತು.

ಮೇಲಿಂದ ಮೇಲೆ ದಾಳಗಳು ಗಡಗಡ ಸದ್ದು ಮಾಡುತ್ತಾ ಉರುಳಿದವು. ಕೈ ಬೆರಳುಗಳು ಕಾಯಿಗಳನ್ನು ಬಿಚ್ಚಿ, ಕೂಡಿಸಿ, ಮತ್ತೆ ಬಿಚ್ಚಿ, ಮತ್ತೆ ಕೂಡಿಸಿ ಅಷ್ಟು ದೂರ ಜೊತೆಯಾಗಿ ನಡೆಸಿದವು.

ಒಮ್ಮೊಮ್ಮೆ ಕಾಯಿ ನಡೆಸುವಾಗಲೂ, ನಡೆಸುವ ಕೈ ಬೆರಳು ಏಕೋ ಕಂಪಿಸಿ, ಅದಷ್ಟು ನಿಧಾನವಾಗಿ ಚಲಿಸುತ್ತಿದ್ದವು.

ಅವರಿಬ್ಬರ ನಡುವೆ, ಅಷ್ಟು ಎತ್ತರವಾದ ಪೆಟ್ಟಿಗೆಯ ಮೇಲೆ ಕುಳಿತ ಹರಳೆಣ್ಣೆಯ ದೀಪ ಮಂಕಾಗಿ ಅವರಿಬ್ಬರನ್ನು ನೋಡುತ್ತಿತ್ತು.

ಮನೆಯೊಳಗಿನ ಗಾಳಿಯೂ, ಆಟವನ್ನು ನೋಡುವ ಕುತೂಹಲದಿಂದ ಚಲನೆಯನ್ನು ಬಿಟ್ಟು, ನಿಂತಂತಿತ್ತು.

ಅಭೇದ್ಯ ಮೌನ ನೆಲೆಸಿದ ಮನೆಯಲ್ಲಿ, ಆಟವಾಡುವವರ ಉಸುರಿನ ಸದ್ದೂ ಬಹು ಸ್ಪಷ್ಟವಾಗಿ, ತಿದಿಯೊತ್ತುವ ಸದ್ದಿನಂತೆ ಕೇಳುತ್ತಿತ್ತು.

ಆಟ ಮುಂದುವರಿಯಿತು.

ಇಬ್ಬರದೂ ಎರಡೆರಡು ಜೊತೆ ಕಾಯಿ ಹಣ್ಣಾಗಿ, ಎರಡೆರಡು ಜೊತೆಗಳು ಉಳಿದವು

ಬಣ್ಣದ ಹಗುರವಾದ ಕಾಯನ್ನು ಎತ್ತಿಡುವುದು ಆಟಗಾರರಿಬ್ಬರ ಪಾಲಿಗೂ ಸೀಸದ ಘಟ್ಟಿಗಳನ್ನು ಎತ್ತಿ ಇಳಿಸಿದಷ್ಟು ಆಯಾಸವಾಗಿ, ಇಬ್ಬರ ಹಣೆಯ ಮೇಲೂ ಬೆವರ ಹನಿಗಳು ಮೂಡಿದ್ದವು.

ಆಟ ಮುಂದುವರಿಯಿತು.

ವೆಂಕಟದಾಸಪ್ಪನವರದು ಮತ್ತೆರಡು ಕಾಯಿ 'ಹಣ್ಣಾ'ದವು. ಗೌರಮ್ಮನ 'ಹಣ್ಣಿ'ಗೆ ಬಂದ ಜೋಡಿಯೊಂದು, 'ಒಳಮನೆ'ಗೆ ಪ್ರವೇಶ

ಮಾಡುವ ಹೊತ್ತಿನಲ್ಲಿ ಕಡಿಸಿಕೊಂಡು 'ಹುಟ್ಟಿದ ಮನೆ' ಗೆ ಹಿಂದಿರುಗಿತ್ತು.

"ಗೌರಾ..."

ಏನೋ ನೋವು ತುಂಬಿ ತುಳುಕುತ್ತಿರುವ ಸ್ವರದಲ್ಲಿ ಮೃದುವಾಗಿ ಕೂಗಿದರು ವೆಂಕಟದಾಸಪ್ಪ.

"ಏನು?"

—ಗೌರಮ್ಮ ತಲೆಯೆತ್ತಿ ನೋಡಿ ಕೇಳಿದಳು.

ಮಾತು ಕೇಳಿ, ಅವರ ಮುಖದತ್ತ ನೋಡಿದಳು. ಯಾತನೆಯಲ್ಲಿ ಅದ್ದಿ ಹಿಂಡಿದಂತಿತ್ತು ವೆಂಕಟದಾಸಪ್ಪನವರ ಮುಖ. ಅದನ್ನು ನೋಡಿ ಆಕೆಯ ಹೃದಯವನ್ನು ಹೊಸಗಿದಂತಾಯಿತು.

"ಏನು?".

—ಮತ್ತೊಮ್ಮೆ ಬಹು ಮೃದುವಾಗಿ ಕೇಳಿದಳು ಗೌರಮ್ಮ.

"ಕುಡೀಲಿಕ್ಕೆ ಒಂದು ಥಾಲಿ ನೀರು ತಂದುಕೊಡ್ತಿಯಾ? ಇವತ್ಯಾಕೋ ಬಹಳ ಬಾಯಾರಿಕೆಯಾಗ್ತಾ ಇದೆ."

"ಹೂಂ"

—ಎಂದಷ್ಟೇ ಹೇಳಿ, ಗೌರಮ್ಮ ಅಲ್ಲಿಂದ ಎದ್ದು ಹೋಗಿ. ಕಂಚಿನ ತಂಬಿಗೆಯಲ್ಲಿ ನೀರು, ಕುಡಿಯಲು ಥಾಲಿ ತಂದುಕೊಟ್ಟಳು.

ವೆಂಕಟದಾಸಪ್ಪನವರಿಗೇಕೋ ಹಿಂದೆಂದೂ ಇಲ್ಲದಷ್ಟು ಬಾಯಾರಿಕೆ ಯಾದಂತಿತ್ತು. ಎರಡು ಮೂರು ಥಾಲಿ ನೀರು ಬೊಗ್ಗಿಸಿಕೊಂಡು ಗಟಗಟ ಕುಡಿದು—

"ಹೂ, ಆಟ ಸಾಗಲಿ."

—ಎಂದರು.

ಗೌರಮ್ಮ ಅವರ ಆಜ್ಞೆಯಂತೆ ಚಲಿಸುವ ಯಂತ್ರದಂತೆ ದಾಳ ಉರುಳಿಸಿದಳು.

ಆಟ ಮುಂದುವರಿಯಿತು.

ವೆಂಕಟದಾಸಪ್ಪನವರ ಕಾಯಿಗಳಿಗೆ ಆ ದಿನ ಗೌರಮ್ಮನ ಕಾಯಿಗಳನ್ನು ಕೊಂದು ತಿಂದು ತೇಗುವ ದಾಹವಿದ್ದಂತಿತ್ತು. ಸುತ್ತಲೂ ಕೊಲ್ಲಲು ಸಿದ್ಧರಾದ ಬೇಟೆಗಾರ ವ್ಯೂಹದೊಳಗಿನಿಂದ ಬಹು ಹುಷಾರಾಗಿ ನಡೆಯುವ ಜಿಂಕೆಯಂತೆ,

ಹೇಗೋ ನುಸುಳಿಕೊಂಡು ಬಂದ ಗೌರಮ್ಮನ ಒಂಟಿ ಕಾಯೊಂದು ಮತ್ತೆ 'ಒಳಮನೆಗೆ' ಹತ್ತಿರವಾದಾಗಲೇ. ವೇಗವಾಗಿ ನುಗ್ಗಿ ಬಂದ ವೆಂಕಟದಾಸಪ್ಪನವರ ಕಾಯಿಂದ ಕಡಿಸಿಕೊಂಡು. ಹುಟ್ಟುವ ಮನೆ ಸೇರಿತು.

ಆಕೆ ಒಮ್ಮೊಮ್ಮೆ ದಾಳ ಉರುಳಿಸಿ ಕಾಯಿ ನಡೆಸುವಾಗಲೂ. ವೆಂಕಟದಾಸಪ್ಪನವರಿಗೆ ಏಕೋ 'ಬೇಡ. ಬೇಡ. ಅದನ್ನು ಹಾಗೆ ನಡೆಸಬೇಡ. ಅದು ಸಾಯುವುದು ಖಂಡಿತ' ಎಂದು ಎಚ್ಚರಿಕೆಯನ್ನು ಚೀರಿ ಹೇಳಬೇಕು ಎನಿಸುತ್ತಿತ್ತು.

ಆದರೆ ಕಚ್ಚಿದ ತುಟಿ ಬಿಚ್ಚುತ್ತಿರಲಿಲ್ಲ. ಮುಖ ಮಾತ್ರ ಗಳಿಗೆ ಗಳಿಗೆಗೆ ಉಗ್ರವಾಗುತ್ತಿತ್ತು.

ಏಕೋ ಆಕೆ ಕಾಯಿ ನಡೆಸಿದಾಗ. ಆ ಕಾಯನ್ನು ಕೊಲ್ಲಲು ಅಗತ್ಯವಾದ ಗರವೇ ಬೀಳುತ್ತಿತ್ತು ವೆಂಕಟದಾಸಪ್ಪನವರಿಗೆ.

ಆದರೆ ಗೌರಮ್ಮನ ಪಾಲಿಗೆ ಮಾತ್ರ ಆ ದಿನ ದಾಳಗಳು ಮುನಿಸಿಕೊಂಡಂತಿತ್ತು. ಬಯಸಿದ ಗರ ಬೀಳುತ್ತಿರಲಿಲ್ಲ. ಇಲ್ಲ ಒಂದು ಹೆಚ್ಚು. ಇಲ್ಲ ಒಂದು ಕಡಮೆ—

ಅಂತೂ ವೆಂಕಟದಾಸಪ್ಪನವರ ಕಾಯಿಗೆ ಸಾವಿರಲಿಲ್ಲ.

ಗೌರಮ್ಮನ ಒಂದು ಒಂಟಿ ಕಾಯಿಗೆ. ವೆಂಕಟದಾಸಪ್ಪನವರ ಒಂದು ಜೊತೆ ಹಣ್ಣಾಗಿ. ಆಕೆಯದು ಮೂರು. ಇವರದು ಎರಡು ಕಾಯಿ ಉಳಿದವು.

ಏಕೋ ಇದ್ದಕ್ಕಿದ್ದ ಹಾಗೇ ಗೌರಮ್ಮನ ಕಣ್ಣುಗಳಿಂದ ಕಂಬನಿ ಉರುಳಿ. ನೆಲವನ್ನು ತೋಯಿಸಿತು.

ವೆಂಕಟದಾಸಪ್ಪನವರ ಹೃದಯದಲ್ಲಿ ಭಯಂಕರ ಜ್ವಾಲೆ ಉರಿಯಲಾರಂಭಿಸಿತು.

'ಗೌರಿ. ಮೈಮೇಲೆ ಪ್ರಜ್ಞೆ ಇಟ್ಟುಕೊಂಡು ಆಟ ಆಡು—ಇದೇನು ಸೋಲೋಕೆ ಆಡ್ತೀಯೋ. ಗೆಲ್ಲೋಕೆ ಆಡ್ತೀಯೋ?'

—ಎಂದು ಗುಡುಗಿದರು ವೆಂಕಟದಾಸಪ್ಪ.

ಆ ಮಾತು ಚಾಟಿಯ ಏಟಿನಂತೆ ಬಿತ್ತು ಗೌರಮ್ಮನ ಹೃದಯದ ಮೇಲೆ. ಆ ಮಾತು ಕೇಳಿ ಆಕೆ ತಲೆಯೆತ್ತಿ ವೆಂಕಟದಾಸಪ್ಪನವರ ಮುಖ ನೋಡಿ—

'ಶಿವ ಅಪ್ಪ.'

—ಎಂದು ಬಿಗಿದ ಧ್ವನಿಯಲ್ಲಿ ಹೇಳಿ—

'ನಿಮ್ಮ ಆ ಒಂಟಿ ಕಾಯಿ ಉಳಿಸಿಕೊಳ್ಳಿ'

—ಎಂದು ದಾಳವನ್ನು ಉಜ್ಜಿ ಉಜ್ಜಿ ಉರುಳಿಸಿದಳು. ರಾಮಬಾಣದಂತೆ ಬಿತ್ತು ಗರ. ವೆಂಕಟದಾಸಪ್ಪನವರ ಕಾಯಿ ಕಡಿಸಿಕೊಂಡು ಹಿಂದಿರುಗಿತ್ತು.

'ಹಾಗೆ...ಹಾಗೆ ಜಿದ್ದಿನಿಂದ ಆಡಬೇಕು'

—ಎಂದು ಮೃದುವಾಗಿ ಗೌರಮ್ಮನ ಕೆನ್ನೆಯನ್ನು ತಟ್ಟಿ. ತಾವು ದಾಳ ಉರುಳಿಸಿದರು ವೆಂಕಟದಾಸಪ್ಪ.

ಆಟ ಮುಂದುವರಿಯಿತು.

ಗೌರಮ್ಮನದು ಒಂದು ಕಾಯಿ, ವೆಂಕಟದಾಸಪ್ಪನವರದು ಒಂದು ಕಾಯಿ ಹಣ್ಣಾಗಿ. ಗೌರಮ್ಮನದು ಎರಡು. ವೆಂಕಟದಾಸಪ್ಪನವರದು ಒಂದು ಕಾಯಿ ಉಳಿಯಿತು.

'ಗೌರಿ—ನೀನು ಸೋಲೋದು ಖಂಡಿತ'

—ಇನ್ನೇನು ಸಿಡಿದೊಡೆಯುವುದು ಎಂಬಷ್ಟು ಬಿಗಿದ ಧ್ವನಿಯಲ್ಲಿ ಹೇಳಿದರು ವೆಂಕಟದಾಸಪ್ಪ.

ಆ ಮಾತು ಕೇಳಿ ಗೌರಮ್ಮನ ಮೈ ಒಮ್ಮೆ ಕಂಪಿಸಿ ಬಿರುಸಾಯಿತು.

'ಒಂಟಿ ಕಾಯಿಗೆ ಎಂಟು ಲತ್ತೆ—ಗೊತ್ತಿಲ್ವೇ?'

—ಎಂದಳು ದಾಳ ಉರುಳಿಸಿ.

'ಸುಮ್ಮನೆ ಆಡು'

—ವೆಂಕಟದಾಸಪ್ಪ ಬಹು ಬಿರುಸಾಗಿ ಹೇಳಿದರು.

ಅವರು ಹಾಗೆ ಹೇಳುತ್ತಿರುವಾಗಲೇ. ಅದುವರೆಗೂ ಎಲ್ಲೋ ಹೊರಗೆ ಹೋಗಿದ್ದ ವೀರಣ್ಣ ಮನೆಯೊಳಗೆ ಬಂದು. ಅವರು ಆಟವಾಡುತ್ತಿದ್ದುದನ್ನು ನೋಡಿ—

'ಭೇಷ್, ಭೇಷ್ ಒಳ್ಳೆ ಹೊತ್ಗೆ ಬಂದಾಗಾಯ್ತು. ಯಾರ್ದು ಮೇಲು ಗೈ—ಹೆಣ್ಣಿಂದೋ, ಗಂಡಿಂದೋ'.

—ಎಂದು ಹಾಸಿನತ್ತ, ಬಗ್ಗಿ ನೋಡಿ—

'ಒಂದು ಕಾಯಿ ಉಳಿದಿರೋದು ಯಾರದು ದಾಸಣ್ಣ'

—ಎಂದ.

ಆತನ ಪ್ರಶ್ನೆಗೆ ಏನೊಂದೂ ಉತ್ತರ ಕೊಡದೆ ವೆಂಕಟದಾಸಪ್ಪ ವೀರಣ್ಣನತ್ತ ಕಣ್ಣು ಕೆಕ್ಕರಿಸಿ ನೋಡಿದರು.

'ಅವರದು.'

—ಎಂದು ವೀರಣ್ಣನ ಪ್ರಶ್ನೆಗೆ ಗೌರಮ್ಮನೇ ಉತ್ತರ ಕೊಟ್ಟಳು.

'ಹಂಗಾ–ಹಾಂಗಾದ್ರೆ ನೀನೇ ಗೆಲ್ಲೋದು ಗೆಲ್ಲು...ಗೆಲ್ಲು... ದಾಸಣ್ಣ, ಈ ಲೌಡಿ ಸೊಕ್ಕು ಮುರೀಲಿ'

—ಎಂದ ವೀರಣ್ಣ ಉತ್ಸಾಹದಿಂದ.

'ಇಲ್ಲಿಂದ ಎದ್ದೋಗ್ತೀಯೋ ಇಲ್ಲೋ ವೀರಣ್ಣ. ನಿನ್ನ ಯಾರು ಕರೆಸಿದರು–ಹೋಗು.''

—ಫಟಕ್ಕನೆ ಗದರಿಸಿ ಹೇಳಿದರು ವೆಂಕಟದಾಸಪ್ಪ.

ಅವರಾಡಿದ ಮಾತನ್ನು ಕೇಳಿ, ವೀರಣ್ಣನ ಮುಖದ ಮೇಲೆ ಇದ್ದ ಉತ್ಸಾಹ ಹಾಗೇ ಇಳಿದುಹೋಗಿ ಮುಖ ಸಪ್ಪಗಾಯಿತು.

'ನೀನು ಗೆಲ್ಲು ಅಂತ ಹೇಳಿದ್ದೇ ತಪ್ಪಾಯ್ತಾ?'

—ಉತ್ಸಾಹಹೀನವಾಗಿ ಒಣಗಿದ ಧ್ವನಿಯಲ್ಲಿ ಕೇಳಿದ ವೀರಣ್ಣ.

'ಈಗ ಅದ್ಯಾವ ಮಾತೂ ಬೇಡ–ಮೊದಲು ನೀನು ಇಲ್ಲಿಂದ ಹೊರಟು ಹೋಗು.'

—ಮೊದಲಿಗಿಂತಲೂ ಮತ್ತಷ್ಟು ಕಠಿಣವಾಗಿ ಗದರಿಸಿ ಹೇಳಿದರು ವೆಂಕಟದಾಸಪ್ಪ.

ಆ ಮಾತು ಕೇಳಿ ವೀರಣ್ಣ, ತಾಯಿಯಿಂದ ಮೆಚ್ಚುಗೆಯನ್ನು ನಿರೀಕ್ಷಿಸಿ ಆಟವಾಡುತ್ತಿದ್ದಾಗ, ಆಕೆಯಿಂದಲೇ ಪೆಟ್ಟು ತಿಂದ ಮಗುವಿನಂತಾದ.

ಆತನ ಮುಖವನ್ನು ಕಂಡು, ಗೌರಮ್ಮನಿಗ ಕರುಳಿನ ಮೇಲೆ ಕೆಂಡ ಚೆಲ್ಲಿದಂತಾಗಿ, ವೆಕಟದಾಸಪ್ಪನವರ ಅನಿರೀಕ್ಷಿತ ಒರಟು ಮಾತಿನಿಂದ ಮೂಡಿದ ಬೇಸರ ತುಂಬಿದ ಧ್ವನಿಯಲ್ಲಿ—

'ನೀವು ಹೋಗಿ. ಇವತ್ಯಾಕೋ ಅಯ್ನೋರು ಬಾಳ ವಿಚಿತ್ರವಾಗವ್ರೆ. ನೀವಿದ್ರೆ ಸೋಲ್ತೀನೀಂತ ಭಯಾನೇನೋ. ಒಬ್ರೆ ಇದ್ದು ಅದೆಂಗೆ ಗೆಲ್ತಾರೋ ನಾನೂ ನೋಡ್ತೀನಿ'.

—ಎಂದಳು.

'ಸರಿ—ನಿಮ್ಮಿಬ್ಬರಿಗೂ ಬ್ಯಾಡಾದ ಮೇಲೆ ನಾನ್ಯಾಕಿಲ್ಲಿರ್ಲಿ ಹೊರಗೆ ಕಟ್ಟೆಮೇಲೆ ಕುಂತ್ಕೊಂಡಿರ್ರ್ತೀನಿ. ಆಟ ಮುಗಿದ ಮೇಲೆ ಕರೀರಿ. ಗೌರಿ ಆದ್ದಾಗಲಿ—ಬಿಡಬ್ಯಾಡ. ದಾಸಣ್ಣನ್ನ ಸೋಲ್ಸು.'

—ಎಂದು ಗೌರಮ್ಮನ ಬೆನ್ನು ತಟ್ಟಿ ಹೊರಗೆ ಹೋದ ವೀರಣ್ಣ.

'ಹೂ ಆಟ ಆಡಿ'

—ಎಂದು ಗೌರಮ್ಮ ದಾಳಗಳನ್ನು ವೆಂಕಟದಾಸಪ್ಪನವರತ್ತ ಚೆಲ್ಲಿದಳು.

ಆಟ ಮುಂದುವರಿಯಿತು.

ಗೌರಮ್ಮ ತುಟಿ ಕಚ್ಚಿ ಆಟ ಆಡತೊಡಗಿದಳು. ವೆಂಕಟದಾಸಪ್ಪನವರ ಒಂದು ಕಾಯನ್ನು ಗೌರಮ್ಮನ ಎರಡು ಕಾಯಿಗಳು ಕೊಲ್ಲಲು ಸಿದ್ಧ ವಾದವು. ಏಕೋ ಆಟವಾಡುವಾಗ ಮೊದಮೊದಲು ಆಕೆಗಿದ್ದ ಭಯ. ಕೊನೆಯ ಘಟ್ಟದಲ್ಲಿ ತೊಲಗಿ ಹೋಗಿ, ಗೌರಮ್ಮ ಧೀರತನದ ಆಟ ಆಡತೊಡಗಿದಳು.

ಆಕೆಯ ಆಟದಲ್ಲಿ ಉತ್ಸಾಹವಿತ್ತು. ಧೀರತನವಿತ್ತು. ಸ್ಫೂರ್ತಿ ಇತ್ತು.

ಕೊಲ್ಲಿಸಿಕೊಳ್ಳುವುದಕ್ಕೇ ನುಗ್ಗಿ ಬಂದಂತೆ ಒಂದು ಕಾಯಿ ಮುಂದೆ ನಡೆದು ಬಂದು, ತನ್ನನ್ನು ಅಟ್ಟಿಸಿಕೊಂಡು ಬಂದ ವೆಂಕಟದಾಸಪ್ಪನವರ ಕಾಯನ್ನೇ ಕಡಿದು ಮುಂದುವರಿದರೆ, ಮತ್ತೊಂದು ಕಾಯಿ, ವೆಂಕಟದಾಸಪ್ಪ ನವರ ಕಾಯಿ ಒಳಮನೆಯಿಂದ ಹುಟ್ಟಿ ಹೊರಬರುವುದನ್ನೇ ಮುಗ್ಗಲು ಮನೆಯಲ್ಲಿ ಕುಳಿತು ಕಾಯತೊಡಗಿತು.

ಅನನುಕೂಲವಾದ ಗರಬಿದ್ದಾಗ ನಡೆಸಲು ಎರಡು ಕಾಯಿಗಳಿದ್ದುದು ಗೌರಮ್ಮನಿಗೆ ಅನುಕೂಲವಾಗಿತ್ತು. ಆದರೆ 'ಒಂಟಿ ಕಾಯಾ' ದ ವೆಂಕಟ ದಾಸಪ್ಪನವರಿಗೆ ಆ ಅನುಕೂಲವಿರಲಿಲ್ಲ. ಎಂಥ ಕೆಟ್ಟ ಗರ ಬಿದ್ದರೂ, ಆ ಗರಕ್ಕೆ ಕಾಯಿ ನಡೆಸಿದರೆ ಸಾವು ಸಿದ್ಧವೆಂದು ತಿಳಿದಿದ್ದರೂ ಅದನ್ನೇ ನಡೆಸ ಬೇಕಾಗಿತ್ತು.

ಆ ಪರಿಸ್ಥಿತಿಯಲ್ಲೂ ವೆಂಕಟದಾಸಪ್ಪನವರು ಗೌರಮ್ಮನನ್ನು ಸೋಲಿ ಸಲು ವಿಶ್ವಪ್ರಯತ್ನ ಮಾಡತೊಡಗಿದರು.

ಆದರೆ ಆಟದ ಆರಂಭದಲ್ಲಿ ಅವರ ಪರವಾಗಿದ್ದ ದಾಳಗಳು, ಕೊನೆ ಗಳಿಗೆಯಲ್ಲಿ ಅವರ ವಿರುದ್ಧ ಪಕ್ಷ ಸೇರಿದಂತಿದ್ದವು.

ಉಜ್ಜಿ,ಉಜ್ಜಿ ದಾಳಗಳು ಕಡಿಗಾರುವವರೆಗೂ ಉಜ್ಜಿ,ಕಚ್ಚಿದ ತುಟಿಯಿಂದ ರಕ್ತದ ಹನಿ ಹೊರಹೊಮ್ಮುವವರೆಗೂ ತುಟಿ ಕಚ್ಚಿ ದಾಳ ಉರುಳಿಸಿದರು.

'ಕುಂಟು ಗರ' ವಲ್ಲದೆ ಬೇರೆ ಬೀಳಲಿಲ್ಲ. ಒಮ್ಮೆಯಾದರೂ ಗೌರಮ್ಮನ ಕಾಯನ್ನು ಕಡಿಯಬೇಕೆಂಬ ಅವರ ಪ್ರಯತ್ನ ಸಫಲವಾಗಲಿಲ್ಲ.

ಹೀಗಾಗಿ, ಗೌರಮ್ಮನ ಒಂದು ಕಾಯಿ ಹಣ್ಣಾಗಿ ಮತ್ತೊಂದು ಕಾಯಿ, ಗೆಲುವಿನಿಂದ ಹಣ್ಣಿನ ಮನೆಯ ಕಡೆ ನಡೆದು, ಕಡಿತದ ಭಯವಿಲ್ಲದ ಒಳಮನೆ ಸೇರಿತು.

ಗೌರಮ್ಮನ ಕಾಯಿ ಒಳಮನೆಯನ್ನು ಸೇರಿದ ಬಳಿಕ ವೆಂಕಟದಾಸಪ್ಪ ನವರ ಕಾಯಿಗೂ ಕಡಿತದ ಭಯವಿರಲಿಲ್ಲ. ಈಗಲಾದರೂ ಜೋಡಿ ಗರ ಬಿದ್ದರೆ, ಗೌರಮ್ಮನನ್ನು ಸೋಲಿಸಬಹುದು ಎಂದು ಆಡಿದರು.

ಅವರ ಇತ್ತಿಗ, ಎಂಟು, ಹನ್ನೆರಡು, ಮೊದಲಾದ ಜೋಡಿ ಗರಗಳು ಬೀಳಲಿಲ್ಲ. ಕೊನೆಗೆ, ಮತ್ತೊಂದು ಬಾರಿ ದಾಳ ಉರುಳಿಸುವ ಅವಕಾಶ ಕೊಡುವ, ಕನಿಷ್ಟ ದರ್ಜೆಯ 'ದುಗ'ವೂ ಅವರಿಗೆ ಒಲಿಯಲಿಲ್ಲ.

ಮೂರು—ಒಂದು, ನಾಲ್ಕು—ಒಂದು; ಬಹಳ ಹೆಚ್ಚಾದರೆ ಆರು—ಒಂದು. ಕುಂಟುತಾ ನಡೆದಿತ್ತು ಅವರ ಕಾಯಿ.

'ಇಗೋ—ಇತ್ತಿಗ'.

—ಎಂದು ಹೇಳಿ, ಆರು ಮನೆ ದೂರದಲ್ಲಿದ್ದ ತನ್ನ ಕೊನೆಯ ಕಾಯನ್ನು ಹಣ್ಣು ಮಾಡಿದಳು ಗೌರಮ್ಮ, ಗೆಲುವಿನ ನಗೆ ನಗುತ್ತಾ.

ಆ ಗರ ಬಿದ್ದ ದಾಳವನ್ನೇ ದಿಟ್ಟಿಸಿ ನೋಡಿದರು ವೆಂಕಟದಾಸಪ್ಪನವರು.

ಅವರ ಮೈ, ಬಲವಾದ ಗಾಳಿಗೆ ಸಿಲುಕಿದ ಮರದ ತೆಳುಗೊಂಬೆ ಯಂತೆ ಕಂಪಿಸುತ್ತಿತ್ತು.

ಒಂದು ಗಳಿಗೆ—ಆ ದಾಳಗಳನ್ನು ನುಂಗುವಂತೆ ನೋಡಿದರು. ಮರು ಗಳಿಗೆಯೇ—

'ಗೌರೀ...ಗೌರೀ...ಗೆದ್ದೆ...ನಾನು ಗೆದ್ದೆ...'

—ಎಂದು ಸುತ್ತಲ ನಾಲ್ಕು ಮನೆಗಳಿಗೆ ಕೇಳುವಷ್ಟು ಗಟ್ಟಿಯಾಗಿ ಹೇಳಿ, ಗೌರಮ್ಮನನ್ನು ಬಿಗಿಯಾಗಿ ತಬ್ಬಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದರು.

ಅದನ್ನು ಕೇಳಿ ಗೌರಮ್ಮನಿಗೆ ಉಸಿರು ಸ್ತಬ್ಧವಾದಂತಾಯಿತು. ತಾನೂ ವಿಹ್ವಲಳಾಗಿ ಅವರನ್ನು ಬಿಗಿದಪ್ಪಿದಳು.

೧೧

'ಗೌರೀ...ಗೌರಿ...ಗೆದ್ದೆ...ನಾನು ಗೆದ್ದೆ...'

—ಎಂದು ಕೂಗಿದ ವೆಂಕಟದಾಸಪ್ಪನವರ ಧ್ವನಿಯನ್ನು ಕೇಳಿ—

'ಹೌದಾ, ಕೊನೆಗೂ ಅಯ್ನೋರೇ ಗೆದ್ದು ಬಿಟ್ರಾ?"

—ಎಂದು ಕೇಳಿಕೊಳ್ಳುತ್ತಲೇ ಒಳಗೆ ಓಡಿಬಂದ ವೀರಣ್ಣ, ಕಣ್ಣೆದುರಿನ ದೃಶ್ಯವನ್ನು ಕಂಡು ಗರಬಡಿದಂತೆ ನಿಂತು ಬಿಟ್ಟ.

ಆದರೆ ವೆಂಕಟದಾಸಪ್ಪನವರಿಗೆ ಎದುರಿಗೆ ವೀರಣ್ಣ ನಿಂತಿದ್ದುದೂ ಎಚ್ಚರ ವಿರಲಿಲ್ಲ.

'ಗೌರೀ...ಗೌರಿ...ಗೆದ್ದೆ...ಇವತ್ತು ನಾನು ಗೆದ್ದೆ... ಇವತ್ತು ನಿನ್ನನ್ನು ನಾನು ಗೆದ್ದೆ'.

—ಎಂದರು ತಮ್ಮ ತೋಳೊಳಗಿದ್ದ ಗೌರಮ್ಮನ ದೇಹವನ್ನು ಮತ್ತಷ್ಟು ಬಿಗಿಯಾಗಿ ಬಿಗಿಯುತ್ತಾ.

'ಹೂ...ನಾನು ಗೆದ್ರೂ ನೀವು ಗೆದ್ದಂಗೇ'.

—ಎಂದು ಉದ್ರಿಕ್ತವಾದ ಎಳೆಯ ಮಗುವನ್ನು ನೇವರಿಸುವ ತಾಯಿ ಯಂತೆ. ವೆಂಕಟದಾಸಪ್ಪನವರ ಮೈಯನ್ನು ನೇವರಿಸಿ, ಅವರ ತೋಳಿಂದ ಜಾರಿ, ದೂರ ಕುಳಿತು—

'ಇದ್ಯಾಕಿವತ್ತು ಹಿಂಗಾಡ್ತಾ ಇದೀರಾ?'

—ಎಂದು ಕೇಳಿದಳು ಗೌರಮ್ಮ.

'ಇವತ್ತೇನು 'ಅಮ್ಮ' ಮೈಮ್ಯಾಲೇ ಬಂದಿದಾಳಾ ದಾಸಣ್ಣ?'

—ಎಂದ ವೀರಣ್ಣ

'ಹೂ. ಇಷ್ಟು ದಿನ ಆಡಿದ ಆಟ, ಆಟ ಅಲ್ಲ ವೀರಣ್ಣ, ಹುಡುಗಾಟ. ಆಟ ಅಂದ್ರೆ ಇವತ್ತಿನದೇ—ಸಾವು ಬದುಕಿನ ಆಟ. ನಿನಗೆ ಗೊತ್ತಿಲ್ಲ. ಗೌರಿ—ಆಟ ಗೆದ್ದು ನನ್ನನ್ನು ಗೆಲ್ಲಿಸಿದಳು.'

—ಎಂದರು ವೆಂಕಟದಾಸಪ್ಪ. ಆ ಮಾತಾಡುವಾಗ ಅವರ ಎರಡೂ ಕಣ್ಣುಗಳಿಂದ ನೀರು ಧಾರೆಗಟ್ಟಿ ಹರಿಯುತ್ತಿತ್ತು.

'ಹಂಗೆಂದ್ರೇನು...'

—ಗೌರಮ್ಮ, ವೀರಣ್ಣ ಇಬ್ಬರೂ ಚಕಿತರಾಗಿ ಕೇಳಿದರು.

'ಗೌರಾ...ಇವತ್ತು ನಾನು ಗೆದ್ದು, ನೀನು ಸೋತಿದ್ರೆ ಏನಾಗ್ತಿತ್ತು ಗೊತ್ತಾ?'

—ಏನೋ ತೃಪ್ತಿಯ ನಗು ನಗುತ್ತ ಕೇಳಿದರು ವೆಂಕಟದಾಸಪ್ಪ.

'ಏನಾಗ್ತಿತ್ತು?'

'ಹೇಳಲೇ...'

'ಹೂ...ಹೇಳಿ...'

'ಆಮೇಲೆ ಎಂಥೋರು ಅಂತ ಬೈಯಬೇಡ'.

'ಊಹೂ...'

'ಇವೊತ್ತು ನಾನು ಗೆದ್ದಿದ್ರೆ...ಗೆದ್ದಿದ್ರೆ...ನನ್ನ ನಿನ್ನ ಸಂಬಂಧ ಕಡಿದು ಹೋಗ್ತಾ ಇತ್ತು.'

'ಅ್ಞ!'

—ಆ ಮಾತು ಕೇಳಿಯೇ ಗಡಗಡ ನಡುಗುತ್ತ ಕೇಳಿದಳು ಗೌರಮ್ಮ. ಆ ಮಾತು ಕೇಳಿ ವೀರಣ್ಣನೂ ನಿಟ್ಟುಬಿದ್ದ.

'ನಿಜ ಗೌರಾ—ನಮ್ಮಿಬ್ಬರ ಸಂಬಂಧ ಇರಬೇಕೇ ಹೋಗಬೇಕೇ ಎಂಬ ಸಮಸ್ಯೆ ನನ್ನ ಮುಂದೆ ನಿಂತಿತ್ತು...'

'ಯಾಕೆ—ನನ್ನ ಕಂಡ್ರೆ ಅಷ್ಟು ಬೇಸರ ಬಂತಾ...'

—ಕಣ್ಣೀರ ಹನಿ ಉದುರಿಸಿ ಕೇಳಿದಳು ಗೌರಮ್ಮ.

'ಊಹೂ...ಈ ಜನ್ಮಕ್ಕೆ ನೀನೆಂದೂ ಬೇಸರವಾಗುವುದಿಲ್ಲ.'

'ಹಾಗಾದ್ರೆ ಮತ್ಯಾಕೆ ಅಂಥ ಕೆಟ್ಟ ಪಂಥ ಕಟ್ಟಿಕೊಂಡು ನನ್ನ ಆಟಕೆ ಕೂಡಿಸಿಕೊಂಡ್ರಿ...'

'ಅದಕ್ಕೆ ಕಾರಣ ಆಮೇಲೆ ಹೇಳ್ತೀನಿ...'

'ಊಹೂ...ಈಗ್ಲೇ ಹೇಳಿ'.

'ಈಗ ಬೇಡ ಗೌರಾ—ಈ ಮಾತು ಮುಗಿಸಿ ಆಮೇಲೆ ಹೇಳ್ತೀನಿ...'

'ಹಂಗಂದು ಆಮೇಲೆ ಹೇಳ್ದೆ ಹೋದ್ರೆ...'

'ನನ್ನಾಣೆಗೂ ಹೇಳ್ತೀನಿ–ಖಂಡಿತವಾಗಿಯೂ ನಿನ್ನಿಂದ ಮುಚ್ಚುಮರೆ ಮಾಡೋಲ್ಲ.'

'ಹಾಗಾದ್ರೆ ಸರಿ–ಹೇಳಿ'.

—ಎಂದಳು ಗೌರಮ್ಮ.

'ಇವತ್ತಿನ ಸಂಜೆಯವರೆಗೂ ನಾನು, ನನ್ನ ನಿನ್ನ ಸಂಬಂಧದ ವಿಷಯ ಯೋಚಿಸಿರಲಿಲ್ಲ. ಅದಕ್ಕೆ ಕಾರಣವೂ ಇರಲಿಲ್ಲ. ಆದರೆ ಇವತ್ತು ಸಂಜೆ ಇದ್ದಕ್ಕಿದ್ದಹಾಗೇ 'ನಿನ್ನನ್ನು ಬಿಡಬೇಕೇ, ಕೂಡದೇ?' ಎಂಬ ಸಮಸ್ಯೆ ಬಂತು ನನ್ನ ಪಾಲಿಗೆ ನಿನ್ನನ್ನು ಬಿಡುವುದೂ ಒಂದೇ, ಜೀವ ಬಿಡುವುದೂ ಒಂದೇ. ಅದಕ್ಕೆ ಎಷ್ಟೆಷ್ಟೊ ಚಿಂತಿಸಿದರೂ ನನ್ನ ಸಮಸ್ಯೆ ಬಗೆಹರಿಯಲಿಲ್ಲ. ಬಗೆ ಹರಿಯದಿದ್ದರೆ ಹೋಗಲಿ ಎಂದು ಬಿಡುವಂಥ ಸಮಸ್ಯೆಯೂ ಅದಾಗಿರಲಿಲ್ಲ ಯಾವುದಾದರೂ ಒಂದು ರೀತಿ ನಿರ್ಧರಿಸಲೇ ಬೇಕಾಗಿತ್ತು. ಹೇಗೆ ನಿರ್ಧರಿಸಲಿ ಎಂಬ ಯೋಚನೆಯಲ್ಲೇ ಬದುಕು ಬೇಸರವಾಗಿ, ಇಲ್ಲಿಗೆ ಬಂದು ಆ ಬೇಸರ ಕಳೆದುಕೊಳ್ಳಲು ನಿನ್ನನ್ನು ಪಗಡೆ ಆಟಕ್ಕೆ ಕರೆದೆ. ಅಮೇಲೆ ನೀನು ಪಗಡೆ ಹಾಸು ಹಾಸ್ತಾ ಇದ್ಯಲ್ಲಾ–ಆಗ ನನಗೆ ಇದ್ದಕ್ಕಿದ್ದ ಹಾಗೇ ಒಂದು ಪರಿಹಾರೋಪಾಯ ಹೊಳೀತು...'

'ಏನು?'

—ಕಾತರರಾದ ಮೀರಣ್ಣ, ಗೌರಮ್ಮ ಇಬ್ಬರೂ ಒಟ್ಟಿಗೇ ಕೇಳಿದರು

'ನಮ್ಮಿಬ್ಬರನ್ನೂ ಜೊತೆಗೂಡಿಸಿದ್ದು ಈ ಪಗಡೆಯಾಟವೇ ಅಲ್ಲವೇ ಗೌರಾ...'

'ಹೂ'.

'ಈಗ–ನಾವಿಬ್ಬರೂ ಜೊತೆಯಾಗಿ ಉಳಿಯಬೇಕೋ ಬೇಡವೋ ಎನ್ನು ವುದನ್ನು ಪಗಡೆಯಾಟವೇ ನಿರ್ಧರಿಸಲಿ ಎನ್ನಿಸಿತು. ಅದಕ್ಕೇ ಆಟಕ್ಕೆ ಮೊದಲು 'ನಾನು ಇವತ್ತು ನಿನ್ನ ಸೋಲಿಸಲಿಕ್ಕೇ ಆಟ ಆಡುತ್ತೇನೆ. ನೀನೂ ಗೆಲ್ಲ ಬೇಕೆಂದೇ ಆಟ ಆಡಬೇಕು' ಎಂದು ಹೇಳಿದ್ದು...'

'ಹಂಗಾ...'

'ಹೌದು ಗೌರ–ಇವತ್ತು ಈ ಆಟಕ್ಕೆ ನಾನು ನನ್ನ ಜೀವವನ್ನೇ ಪಣವಾಗಿ ಒಡ್ಡಿದ್ದೆ. ನಾನೇ ಗೆದ್ದಿದ್ದರೆ ನಾನು ಬದುಕುತ್ತಿದ್ದೆನೋ ಇಲ್ಲವೋ

ಹೇಳಲಾರೆ. ಅದಕ್ಕೇ ವೀರಣ್ಣ 'ನೀನೇ ಗೆಲ್ತೀಯ' ಎಂದು ನನಗೆ ಹೇಳಿದಾಗ ಇನ್ನಿಲ್ಲದಷ್ಟು ಸಿಟ್ಟು ಬಂದು ಅಷ್ಟು ಒರಟಾಗಿ ಗದರಿಸಿಕೊಂಡೆ. ನಿನ್ನದು ಎರಡು ಕಾಯಿ ಉಳಿದು, ನನ್ನದು ಒಂದೇ ಕಾಯಿ ಉಳಿದು, ಗೆಲುವು ನನ್ನದೇ ಎನಿಸಿದಾಗ, ನನ್ನ ಹೃದಯಕ್ಕಾದ ವ್ಯಥೆಯನ್ನು ನಾನು ಹೇಳಲಾರೆ, ಗೌರು, ನನ್ನ ಪ್ರಾಣ ಗಂಟಲಿಗೆ ಬಂದಿತ್ತು. ಇವತ್ತು ನೀನು ಗೆದ್ದು ನನ್ನನ್ನು ಉಳಿಸಿದೆ. ...ಗೌರಾ...'

—ಎಂದರು ವೆಂಕಟದಾಸಪ್ಪ, ಆ ಮಾತಾಡುತ್ತಾ ಆಡುತ್ತಾ ಇದುರಿಗೆ ವೀರಣ್ಣ ಇರುವುದನ್ನೂ ಮರೆತು ಗೌರಮ್ಮನನ್ನು ತಬ್ಬಿ.

'ಅಂತೂ...ಈ ಪಗಡೆ ಅವೊತ್ತೊಂದು ಥರ, ಇವತ್ತೊಂದು ಥರ ನನ್ನ ಪ್ರಾಣಕ್ಕೇ ಸಂಚಕಾರ ತಂದಿತ್ತು.'

—ಎಂದಳು ಗೌರಮ್ಮ. ಇನ್ನೂ ಹಾಸಿದ ಹಾಗೇ ಇದ್ದ ಪಗಡೆಯ ಹಾಸನ್ನು ಕಣ್ಣು ಕೆಕ್ಕರಿಸಿ ನೋಡಿ.'

'ನನ್ನ ಪ್ರಾಣಕ್ಕಲ್ಲ, ನನ್ನ ಪ್ರಾಣಕ್ಕೇ ಸಂಚಕಾರ ತಂದಿತ್ತು.'

'ನಿಮ್ಮದೇನು...ನನ್ನದೇನು...ಇಬ್ಬರದೂ ಒಂದೇ...ಥೂ... ಮನೆ ಹಾಳು ಮುಂಡೇದೇ!'

—ಎಂದು ಸಿಟ್ಟಾಗಿ ಹೇಳಿ, ನೆಲದ ಮೇಲಿದ್ದ ಹಾಸನ್ನು ಥಟಕ್ಕನೆ ಎಳೆದುಕೊಂಡು, ಅದನ್ನು ಹಣತೆಯ ಉರಿಗೆ ಹಿಡಿದಳು.

'ಅರೆ—ಇದೇನು ಮಾಡ್ತಿದೀಯ...'

—ಎಂದು ವೆಂಕಟದಾಸಪ್ಪ ಅವಳ ಕೈಯಿಂದ, ಉರಿಗೆ ಹಿಡಿದ ಹಾಸನ್ನು ಕಿತ್ತುಕೊಳ್ಳಲು ಯತ್ನಿಸಿದರು.

'ನೀವು ಸುಮ್ಮಿರಿ—ಸುಟ್ಟು ಬೂದಿಯಾಗಿ ಹೋಗ್ಲಿ ಇದು.'

—ಎಂದು ವೆಂಕಟದಾಸಪ್ಪನವರ ಕೈಯನ್ನು ಅತ್ತ ನೂಕಿದಳು ಗೌರಮ್ಮ.

ಉರಿಗೆ ಹಿಡಿದ ಹಾಸು, ಹೊಗೆಯಾಡಿ, ನಿಧಾನವಾಗಿ ಹೊತ್ತಿ ಉರಿಯಲಾರಂಭಿಸಿತು. ಅದು ಉರಿಯುವವರೆಗೂ ಸುಮ್ಮನಿದ್ದು, ಬಳಿಕ ಗೌರಮ್ಮ ಹೇಳಿದಳು—

'ಇನ್ಮೇಲೆ ನಾನು ಬದುಕಿರೋಗಂಟಾ ಈ ದಾಳ, ಪಗಡೆ

ಮುಟ್ಕೊಳ್ಳಿಲ್ಲ.'

—ಎಂದಳು ಶಪಥ ಮಾಡುವ ಧ್ವನಿಯಲ್ಲಿ—

'ನೀವೂ ಅಷ್ಟೆ—ಇನ್ಮೇಲೆ ನನ್ನವ ಇಂಥ ಪಂಥದಾಟ ಮಾತ್ನಾಗೂ ಆಡಬಾರದು. ಬ್ಯಾಡಾನ್ನಿಸಿದರೆ ಭಾವೀಲಿ ಹಾಕಿಬಿಡಿ. ಹೀಗೆ ಹೇಳ್ದೆ ಕೇಳ್ದೆ ಕತ್ತು ಮುರೀಬ್ಯಾಡಿ.'

'ಇನ್ನು ನಾನು ಬದುಕಿರುವವರೆಗೂ ಆ ಪ್ರಶ್ನೆಯೇ ಇಲ್ಲ ಗೌರಾ—ಅವತ್ತು ನಾನು ನಿನ್ನನ್ನು ಗೆದ್ದುಕೊಂಡಿದ್ದೆ. ಇವತ್ತು ನೀನು ನನ್ನನ್ನು ಗೆದ್ದುಕೊಂಡಿದೀಯ. ಇನ್ನು ಅಮ್ಮನವರ ಪೂಜೆ ತಪ್ಪೋದಲ್ಲ, ಪ್ರಪಂಚ ಪ್ರಳಯವಾದರೂ ಸರಿಯೆ—ನಾನು ನಿನ್ನ ಬಿಡೋದಿಲ್ಲ.'

—ಎಂದರು ವೆಂಕಟದಾಸಪ್ಪ, ಆಣೆ ಇಡುವಂತೆ ಗೌರಮ್ಮನ ಕೈಯನ್ನು ಹಿಡಿದು.

ಆ ಮಾತು ಕೇಳಿ ಗೌರಮ್ಮನ ಕಣ್ಣಲ್ಲಿ ಮತ್ತೆ ನೀರು ಧಾರೆಗಟ್ಟಿ ಹರಿಯಿತು.

## ೧೨

'ಇನ್ನು ಪ್ರಪಂಚ ಪ್ರಳಯವಾದರೂ ಸರಿಯೆ, ನಾನು ನಿನ್ನ ಬಿಡೋದಿಲ್ಲ'.

—ಎಂದು ವೆಂಕಟದಾಸಪ್ಪನವರು ಹೇಳಿದುದನ್ನು ಕೇಳಿ, ಗೌರಮ್ಮನಿಗೆ ಇನ್ನೇನೂ ಹೇಳುವುದೂ ಬೇಡ, ಇನ್ನೇನೂ ಕೇಳುವುದೂ ಬೇಡ ಎಂಬಷ್ಟು ತೃಪ್ತಿಯಾಗಿ, ಆ ಅಮಲಿನಲ್ಲೇ ಬೇರೇನೂ ಮಾತಾಡದೆ ಕುಳಿತಿದ್ದಳು.

ಆದರೆ ಅವರಿಬ್ಬರ ಮಾತಿನ ನಡುವೆ ಏನೊಂದೂ ಮಾತಾಡದೆ. ಸುಮ್ಮನೆ ಕುಳಿತಿದ್ದ ವೀರಣ್ಣನಿಗೆ ಮಾತ್ರ ವೆಂಕಟದಾಸಪ್ಪನವರು 'ಅಮ್ಮ-ನೋರ ಪೂಜೆ ತಪ್ಪೋದಲ್ಲ...'ಎಂದು ಹೇಳಿದುದನ್ನು ಕೇಳಿ, ಕುಳಿತ ಭೂಮಿ ಕಂಪಿಸಿದಂತಾಗಿತ್ತು.

'ಆ ಮಾತೆಲ್ಲಾ ಹಂಗಿರ್‍ಲಿ...ಅದೇನು ನೀನು ಅಂದದ್ದು...'

—ಎಂದು ಕೇಳಿದ ವೀರಣ್ಣ.

'ಏನು ಅಂದದ್ದು...?'

—ವೀರಣ್ಣನ ಮಾತೇ ಅರ್ಥವಾಗದಂತೆ ಕೇಳಿದರು ವೆಂಕಟದಾಸಪ್ಪ.

'ಅಮ್ಮನೋರ ಪೂಜೆ ತಪ್ಪಿದರೂ ಸರಿಯೇ ಅಂದ್ಯೆಲ್ಲಾ...ಆ ಮಾತು ಯಾಕೆ ಬಂತು? ಇವಳಿಗೂ ಅಮ್ಮನೋರ ಪೂಜೆಗೂ ಏನು ಸಂಬಂಧ?'

'ಈಗ ಸವಾಲು ಹಾಗೇ ಇದೆ.'

'ಹಂಗಂದ್ರೇನು?'

'ಇಲ್ಲ ನಾನು ಗೌರಿಯನ್ನು ಬಿಡಬೇಕು, ಇಲ್ಲವೇ ಜಾತ್ರೆಯಲ್ಲಿ ಅಮ್ಮ-ನವರ ಪೂಜೆ ಮಾಡುವ ಅಧಿಕಾರ ಬಿಟ್ಟುಕೊಡಬೇಕು...'

'ಅಂಥ ಷರಾರತ್ತಿನ ಮಾತು ಯಾವೋನು ಆಡ್ದೋನು...ಯಾವೋ ನಿಗಷ್ಟು ಧೈರ್ಯ...ನನ್ನೆದ್ರಿಗೆ ಯಾವೋನಾದ್ರೂ ಆಡ್ಲಿ...'

—ತಟಕ್ಕನೆ ಹಲ್ಲು ಕಡಿಯುತ್ತಾ, ಹೇಳಿದ ವೀರಣ್ಣ.

'ನಿನ್ನ ಎದುರಿಗೆ ಆಡೋದಿರಲಿ, ಈ ಗಳಿಗೆಯವರೆಗೂ ನನ್ನ ಎದುರಿಗೂ ಯಾರೂ ಆ ಮಾತು ಆಡಿಲ್ಲ...'

'ಮತ್ತೆ...'

'ನಾಳೆ ಆ ಮಾತು ಆಡೋ ಸಂದರ್ಭ ಬಂದರೂ ಬರಬಹುದು...

'ಅಂದ್ರೆ...'

—ವೀರಣ್ಣ ಕೇಳಿದ.

'ಕನಸು ಕಂಡು ಈ ಆಟಾ ಎಲ್ಲಾ ಆಡಿದ್ರಾ...'

—ಗೌರಮ್ಮನೂ ನಗುತ್ತಾ ಕೇಳಿದಳು.

'ಇದು ನಗೋ ಮಾತಲ್ಲ ಗೌರ. ವಿಷಯ ಬಹಳ ಗಂಭೀರವಾಗಿದೆ. ವೀರಣ್ಣ...ನೀನು ಯಾರ ಮೇಲೂ ಸಿಟ್ಟುಮಾಡಿಕೊಳ್ಳೋಲ್ಲಾಂದ್ರೆ ಎಲ್ಲಾ ಹೇಳ್ತೀನಿ.'

—ಎಂದರು ವೆಂಕಟದಾಸಪ್ಪ.

'ಸಿಟ್ಟು, ಷರಾರತ್ತು ಎಲ್ಲಾ ನಿಮ್ಮ ವಂಶಕ್ಕೇ ಬಂದದ್ದು—ಇರ್ಲಿ, ಅದೇನು ಹೇಳಿ?'

—ಎಂದು ಪ್ರಶ್ನೆ ಮಾಡಿದ ವೀರಣ್ಣ.

ಆ ಪ್ರಶ್ನೆಗೆ ಉತ್ತರವಾಗಿ ವೆಂಕಟದಾಸಪ್ಪನವರು, ರಾಜೇಶ್ವರಿಯಿಂದ ತಮಗೆ ತಿಳಿದು ಬಂದ ಅಚ್ಚಣ್ಣಭಟ್ಟರ ಮಸಲತ್ತಿನ ವಿಷಯವೆಲ್ಲವನ್ನೂ ಹೇಳಿದರು.

'ಆ್ಹ—ಅಚ್ಚಣ್ಣಭಟ್ರು ಇಂಥ ಹುಲ್ಲಾಗಿನ ಹಾವಾ?'

—ವೆಂಕಟದಾಸಪ್ಪನವರು ಹೇಳಿದುದನ್ನು ಕೇಳಿ, ಅಚ್ಚರಿ—ತಾತ್ಸಾರ ಬೆರೆತ ಧ್ವನಿಯಲ್ಲಿ ಹೇಳಿದಳು ಗೌರಮ್ಮ.

'ಹೂ—ಅವಯ್ಯನಿಗ್ಯಾಕೋ ದೇವೀಕೆರೆ ನೀರಿನ ಋಣತೀರ್ದಂಗಿದೆ...'

—ಗೌರಮ್ಮನೊಂದಿಗೆ ಧ್ವನಿ ಬೆರೆಸಿ ಹೇಳಿದ ವೀರಣ್ಣ.

'ಅಂಥ ಮಾತಾಡಿ ಏನೂ ಉಪಯೋಗವಿಲ್ಲ ವೀರಣ್ಣ ಯಾವುದೇ ಕಾರಣಕ್ಕಾಗಿ ಹಗರಣ ಮಾಡುವುದಾಗಲಿ, ಯಾರದಾದರೂ ಹಗೆತನ ಕಟ್ಟಿ ಕೊಳ್ಳುವುದಾಗಲಿ ನನಗೆ ಇಷ್ಟವಿಲ್ಲ.'

—ನಿರ್ಧಾರಕ್ಕೆ ಬಂದ ರೀತಿಯಲ್ಲಿ ಹೇಳಿದರು ವೆಂಕಟದಾಸಪ್ಪ.

'ಇದ್ರಲ್ಲಿ ಹಗೆತನಾನೂ ಇಲ್ಲ, ಒಗೆತನಾನೂ ಇಲ್ಲ. ನಿಮ್ಮ ಪಾಲಿಗೆ ಬಂದದ್ದು ನೀವು, ಅವರ ಪಾಲಿಗೆ ಬಂದದ್ದು ಅವರು—ನಡೆಸಿಕೊಂಡು ಹೋಗಿ—

ಯಾರು ಬ್ಯಾಡಾಂತಾರೆ...ಅದು ಬಿಟ್ಟು ಏಂಥದೋ ನೆಪ ಮಾಡಿಕೊಂಡು ಕಂಡೋರ್ದನ್ನ ಕಬಳಿಸಬೇಕು ಅಂತಪೊರಟ್ರೆ ಊರೋರು ಸುಮ್ಮಿರೋಕಾದೀತಾ?'

'ಅದೇ ನಾನು ಬೇಡ ಅನ್ನೋದು...'

'ಯಾವ್ದು?'

'ಈ ಪ್ರಸಂಗದಲ್ಲಿ ಊರಿನವರು ತಲೆಹಾಕುವುದು.'

'ಯಾಕೆ?'

'ನಾನು ನಿಮಗೆ ಬೇಕಾದವನು ಅನ್ನುವ ಮಮತೆಯನ್ನು ಸ್ವಲ್ಪ ಬದಿಗಿರಿಸಿ ಯೋಚಿಸಿ ನೋಡು ವೀರಣ್ಣ...ಅಚ್ಚಣ್ಣಭಟ್ಟರ ಮಾತಿನಲ್ಲೂ ಕೊಂಚ ಅರ್ಥವಿದೆ...'

'ಏನು ಅರ್ಥ ಐತೋ ಭಗವಂತ್ನೇ ಬಲ್ಲ. ಎಲ್ಲಾ ಬರೀ ಅಪಾರ್ಥನೇ ಇರೋ ಹಂಗೆ ಕಾಣ್ತದೆ.'

—ಗೌರಮ್ಮ ನಡುವೆ ಬಾಯಿ ಹಾಕಿ ಹೇಳಿದಳು.

'ಹಾಗಲ್ಲ—ಅಚ್ಚಣ್ಣಭಟ್ಟರಿಗೆ, ಅಮ್ಮನವರ ಗುಡಿ ಆದಾಯದ ಆಸೆ ಇರಬಹುದು. ಆದರೆ ಅವಕ್ಕೆ ಪೋಷಕವಾಗಿ ತರ್ಕಬದ್ಧವಾದ ವಾದವೂ ಇದೆ. ಅಮ್ಮನವರ ಗುಡಿಯ ವಿಚಾರದಲ್ಲಿ ಜನ ಬಹಳ ಮಡಿ—ಹುಡಿಯಿಂದ ನಡೆದು ಕೊಳ್ಳುತ್ತಾರೆ. ಜಾತ್ರೆಯ ಮೊದಲ ದಿನ ಸಕಲ ಜಾತಿಯೂ ಒಟ್ಟೆಯುಟ್ಟೇ ದೇವಾಲಯ ಪ್ರವೇಶ ಮಾಡುತ್ತದೆ. ಅಷ್ಟು ಕಟ್ಟುನಿಟ್ಟು. ಅಂಥಾದ್ದರಲ್ಲಿ ನಾನು, ಅಮ್ಮನವರ ಪೂಜೆ ಮಾಡಬೇಕಾದ ವ್ಯಕ್ತಿ, ಮತ್ತಷ್ಟು ಪರಿಶುದ್ಧವಾಗಿರಬೇಕಾದುದು ಅತ್ಯಗತ್ಯ. ಹಾಗಿರುವಾಗ ನಾನು ಪರಜಾತಿ ಸಂಪರ್ಕದಿಂದ ಅಪವಿತ್ರನಾದವನು, ಅಮ್ಮನವರನ್ನು ಮುಟ್ಟ ಬಾರದು ಎಂದರೆ, ಯಾರಾದರೂ ಒಪ್ಪುವ ಮಾತೇ'

ವೆಂಕಟದಾಸಪ್ಪನವರು ಹೇಳಿದ ಆ ಮಾತನ್ನು ಕೇಳಿ ಗೌರಮ್ಮನ ಮುಖ ಕೆಂಪೇರಿತು.

'ಹಂಗಂದ್ರೆ...ಹಂಗಂದ್ರೆ...?'

—ಎಂದು ಏನೋ ಹೇಳಹೋಗಿ, ಆಗದೆ ತಡವರಿಸಿದಳು.

'ಏನು ಗೌರಾ?'

'ನಮ್ಮಿಬ್ಬರ ಸಂಬಂಧ ಪಾಪಾನಾ...?'

—ನೆಲದತ್ತ ತಲೆ ಮಾಡಿ, ಭಾರವಾದ ಧ್ವನಿಯಲ್ಲಿ ಕೇಳಿದಳು ಗೌರಮ್ಮ.

'ಮನುಷ್ಯನ ದೃಷ್ಟಿಯಲ್ಲಿ ಇರಬಹುದು. ಆದರೆ ದೇವರ ದೃಷ್ಟಿಯಲ್ಲಲ್ಲ. ಹಾಗಿದ್ದಿದ್ದರೆ ಅಣ್ಣ ನಿನ್ನನ್ನು ಸೊಸೆ ಎಂದು ಕರೆಯುತ್ತಿರಲಿಲ್ಲ'.

'ಮತ್ತೆ—ದೇವರ ದೃಷ್ಟೀಲಿ ಪಾಪ ಅಲ್ಲದ ಮ್ಯಾಲೆ ಇಂಥ ಪೊಳ್ಳು ಮಾತಿಗೆಲ್ಲಾ ಹೆದರೋದ್ಯಾಕೆ?'

'ಮನುಷ್ಯ ಮನುಷ್ಯರ ನಡುವೆ ವಿದ್ರೋಹದ ಬೆಂಕಿ ಹೊತ್ತಬಾರದೆಂದು ಆತ್ಮಸಾಕ್ಷಿಗೆ ವಿರೋಧವಾಗಿಯಾದರೂ, ಕೆಲವು ಬಾರಿ ಸಮಾಜ ನಿಯಮಗಳಿಗೆ ಶರಣಾಗಬೇಕಾಗುತ್ತದೆ ವೀರಣ್ಣ...'

ಯಾವುದೋ ಒಂದು ತತ್ವವನ್ನು ವಿವರಿಸುವಂತೆ ಹೇಳಿದರು ವೆಂಕಟ ದಾಸಪ್ಪ.

'ಊ...ಹೂ...'

—ದೊಡ್ಡದಾಗಿ ತಲೆಯಲ್ಲಾಡಿಸಿ ಹೇಳಿದ ವೀರಣ್ಣ—

'ನನಗ್ಯಾಕೋ ನಿಮ್ಮ ಮಾತೇ ಅರ್ಥವಾಗೋದಿಲ್ಲ.'

'ಇಷ್ಟೆ—ಮಾತು ಬಹಳ ಸುಲಭವಾಗಿದೆ ವೀರಣ್ಣ —ಈಗ ನೋಡು— ಪರಜಾತಿಯ ಸ್ತ್ರೀಯ ಸಂಪರ್ಕ ಮಾಡಿದ ನಾನು ಅಮ್ಮನವರ ಪೂಜೆ ಮಾಡಿದರೆ, ಆಕೆಗೆ ಮೈಲಿಗೆಯಾಗುತ್ತದೆ ಎಂದು ಅಚ್ಚಣ್ಣಭಟ್ಟರು ಭಾವಿಸಿ ದ್ದಾರೆ. ಆ ಭಾವನೆ, ಸಮಾಜ ಬಹು ವರ್ಷಗಳಿಂದ ಒಪ್ಪಿಕೊಂಡು ಬಂದ ಸಂಪ್ರದಾಯ...'

'ನೀವೂ ಅದ್ನ ನಿಜ ಅಂತಾಲೇ ಒಪ್ಕೋತೀರಾ?'

'ಊಹೂ'

'ಯಾಕೆ?'

'ಎಲ್ಲ ಹೊಲೆಯನ್ನೂ ಪವಿತ್ರಗೊಳಿಸುವ ಗಂಗಾಮಾತೆಗೆ ಚಂಡಾಲ ಸ್ಪರ್ಶದಿಂದ ಅಪವಿತ್ರತೆಯೊದಗಿತು ಎನ್ನುವುದಾದರೆ, ನಾವು ಆ ಶಕ್ತಿಗೇ ಅವಮಾನ ಮಾಡಿದಂತೆ,' ನಮ್ಮ ಅಲ್ಪತನವನ್ನು ಆ ದೇವಿಗೂ ಆರೋಪಿಸಿ ದಂತೆ. ಅದು ತಪ್ಪು. ಯಾರು ಯೋಚಿಸಿದರೂ ಅವರಿಗೆ ಆ ಭಾವನೆ ತಪ್ಪು

ಎನ್ನುವುದೂ ಕಾಣುತ್ತದೆ. ಆದರೆ ಸಂಪ್ರದಾಯವೇ ಸತ್ಯವೆಂದು ಭ್ರಮಿಸಿದ ಜನ ತಮ್ಮ ವಿಚಾರ ಶಕ್ತಿಯನ್ನು ಸಂಪೂರ್ಣವಾಗಿ ಕಳೆದುಕೊಂಡಿರುತ್ತಾರೆ...'

'ಅಂದ್ರೆ ಜಾತಿ–ನೀತಿ ಕಟ್ಟೇ ಇಲ್ವೇ?'

—ವೆಂಕಟದಾಸಪ್ಪನವರು ಹೇಳಿದುದು ಪೂರ್ಣ ಅರ್ಥವಾಗದೆ ದಿಗ್ಭ್ರಾಂತನಾಗಿ ಕೇಳಿದ ವೀರಣ್ಣ.

'ಇದೆ'.

'ಮತ್ತೆ...'

'ಆದರೆ ಜಾತಿ ಹುಟ್ಟಿನಿಂದ ಬರುವುದಿಲ್ಲ ವೀರಣ್ಣ',

'ಹುಟ್ಟಿನಿಂದ ಬರದೆ ಮತ್ತೆಂಗೆ ಬರ್‍ತದೆ–ಬಿಡು ದಾಸಣ್ಣ–ನೀನ್ಯಾಕೋ ಬಾಳ ಜೋಜಿಗ ಮಾತಾಡ್ತಾ ಇದೀಯ!...'

'ಅದು ನಾನು ಹೇಳೋ ಮಾತಲ್ಲ ವೀರಣ್ಣ...'

'ಮತ್ಯಾರು ಹೇಳಿದ್ದು—'

'ಭಗವಾನ್ ಶ್ರೀಕೃಷ್ಣ ಪರಮಾತ್ಮನೇ, ಗೀತೆಯಲ್ಲಿ ಹೇಳಿದಾನೆ– 'ನಾಲ್ಕು ವರ್ಣಗಳೂ ನನ್ನ ಸೃಷ್ಟಿ; ಈ ನಾಲ್ಕು –ಗುಣ, ಕರ್ಮ, ರೀತ್ಯಾ ವಿಭಾಗಿಸಲ್ಪಟ್ಟಿವೆ' ಎಂದು. ಅಂದ ಮೇಲೆ ಹುಟ್ಟಿನಿಂದ ಯಾರನ್ನಾದರೂ ಹಾರುವ, ಹೊಲೆಯ ಎಂದು ಕರೆಯುವುದಕ್ಕೆ ಹೇಗೆ ಸಾಧ್ಯ?'

'ಅಚ್ಚಣ್ಣ ಭಟ್ಟರಿಗೆ ಈ ಮಾತು ಗೊತ್ತಿಲ್ವಾ ದಾಸಣ್ಣ. ಮಾತೆತ್ತಿದರೆ ಶಾಸ್ತ್ರ ಪುರಾಣ ಅಂತಾರಲ್ಲ...'

'ಗೊತ್ತಿಲ್ಲದೆ ಇಲ್ಲ ವೀರಣ್ಣ, ಎಲ್ಲರಿಗೂ ತಿಳಿದ ಮಾತೇ ಅದು. ಆದರೆ ಕೆಲವರು ತಿಳಿದುದನ್ನು ಒಪ್ಪಿಕೊಳ್ಳುತ್ತಾರೆ, ಕೆಲವರು ಒಪ್ಪಿಕೊಳ್ಳುವುದಿಲ್ಲ.

'ಏಕೆ?'

'ಹಾಗೆ ಒಪ್ಪಿಕೊಳ್ಳಲು ಕೆಲವು ವೇಳೆ ಸ್ವಾರ್ಥ, ಕೆಲವು ವೇಳೆ ಸಂಪ್ರದಾಯ, ಅಂಧಶ್ರದ್ಧೆ ಅಡ್ಡಿಯಾಗುತ್ತದೆ. ಹೋಗಲಿ ಬಿಡು–ಅವರಿವರನ್ನು ತೆಗಳಿ, ಆಡ್ಡರು ಎಂದು ನಮಗಾಗಬೇಕಾದ ಲಾಭವೇನು? ನಮ್ಮ ಬದುಕಿನ ದಾರಿ ನಾವು ನೋಡಿಕೊಂಡರೆ ಸರಿ...'

'ಅದೇನೋ ಸರಿ–ಯಾರು ಹೆಂಗಿದ್ರೇನು? ಅದ್ಕೆ ನೀವೀಗ ಏನು ಮಾಡಬೇಕೂಂತ ಇದೀರ...'

—'ಗೌರಮ್ಮ ಕೇಳಿದಳು.

'ಲೋಕಾಭಿಪ್ರಾಯಕ್ಕೆ ಮನ್ನಣೆ ಕೊಟ್ಟು ನಿನ್ನಿಂದ ದೂರವಾಗುವುದೇ' ಎಂದು ಯೋಚಿಸಿ, ಅದನ್ನು ಬಗೆಹರಿಸಲು ದಾರಿ ಕಾಣದೆ, 'ತಾಯಿ ನಿನ್ನಿಚ್ಛೆ ಇದ್ದಂತಾಗಲಿ' ಎಂದು ಪಗಡೆ ಆಡಿದೆ. ನಿನ್ನನ್ನು ಬಿಡುವುದು ದೈವಕ್ಕೆ ಒಪ್ಪಿಗೆ ಯಾಗಲಿಲ್ಲ. ಆದ್ದರಿಂದ ಈಗ ಅಮ್ಮನವರ ಪೂಜೆಯ ಭಾರವನ್ನು ಅಚ್ಚಣ್ಣ ಭಟ್ಟರಿಗೇ ಒಪ್ಪಿಸಿಬಿಡುತ್ತೇನೆ.'

'ಅದ್ಯಾಕೆ?'

'ಮತ್ತೆ ಅದೇ ಪ್ರಶ್ನೆ ಕೇಳುತ್ತೀಯಲ್ಲ ವೀರಣ್ಣ. ನನಗೆ ಊರಲ್ಲಿ ಇಬ್ಬಣವಾಗುವುದು ಇಷ್ಟವಿಲ್ಲ. ಒಂದು ವೇಳೆ ಅಚ್ಚಣ್ಣಭಟ್ಟರು ಇವತ್ತು ಒಳಗೇ ಆಡುತ್ತಿರುವ ಪ್ರಶ್ನೆಯನ್ನು, ನಾಳೆ ಬಹಿರಂಗವಾಗಿ ಆಡಿದರೆ ನಿನ್ನಂಥವರು ಕೆಲವರು ನನ್ನ ಪರ ವಾದಿಸುತ್ತೀರ; ಮತ್ತೆ ಕೆಲವರು ಅವರ ಪರ ವಾದಿಸುತ್ತಾರೆ. ಹಾಗಾಗಿ ಊರು ಇಬ್ಬಣವಾಗುತ್ತದೆ. ಊರಿನಲ್ಲಿ ದ್ವೇಷದ ಕಿಚ್ಚು ಹಬ್ಬಲು ಅವಕಾಶ ಕೊಟ್ಟು, ನಾನು ಅಮ್ಮನವರ ಪೂಜೆ ಮಾಡಿದರೆ, ಅದರಿಂದ ಲೋಕಮಾತೆ ತೃಪ್ತಳಾಗುತ್ತಾಳೆಯೇ? ಸಂತುಷ್ಟ ಳಾಗುತ್ತಾಳೆಯೇ?'

'ಇರಭೋದು—ಹಾಗಂತ ವಂಶಕ್ಕೆ ಬಂದದ್ದು ಬಿಟ್ಟುಬಿಡೋದೇ?
—ಅಲ್ಲಿಗೂ ಜಗ್ಗದೆ ಕೇಳಿದ ವೀರಣ್ಣ.

'ಬಿಡುವುದಕ್ಕೆ, ಕಟ್ಟಿಕೊಳ್ಳುವುದಕ್ಕೆ ನಾನು ಯಾರು ವೀರಣ್ಣ. ನಮ್ಮ ಹಿರಿಯರ ಕಥೆ ಕೇಳಿದೀಯಲ್ಲಾ...'

'ಹೂ'

'ತಾನಾಗಿ ನನ್ನನ್ನು ಪೂಜೆ ಮಾಡಿ' ಎಂದು ದೇವಿಯೇ ನಮ್ಮ ಮನೆಗೆ ಬಂದಳು. ಇಷ್ಟು ದಿನ ನಾವೂ ಆಕೆಯ ಪೂಜೆ ಮಾಡಿದೆವು. ಈಗ ಆಕೆಗೆ ನಮ್ಮಿಂದ ಪೂಜೆ ಕೈಗೊಳ್ಳುವುದು ಬೇಡವಾಗಿದೆಯೇನೋ—ಅದಕ್ಕೆ ಈ ನೆಪದಲ್ಲಿ ದೂರವಾಗುತ್ತಿದ್ದಾಳೆ. ಸರಿ—ಆಕೆಯ ಚಿತ್ತ ಹೇಗಿದೆಯೋ ಹಾಗಾಗಲಿ.'

—ಎಂದರು ವೆಂಕಟದಾಸಪ್ಪ.

'ನಿನ್ನ ವಯಸ್ಸಿನೋರು ಆಡೋ ಮಾತಲ್ಲ ದಾಸಣ್ಣ ಇದು. ನಿನ್ನ ಪರಾರತ್ತೆಲ್ಲಾ ಎಲ್ಹೋಯ್ತು'?

—ವೀರಣ್ಣ ಚಕಿತನಾಗಿ, ವ್ಯಥಿತನಾಗಿ ಕೇಳಿದ.

"ಆ ಹಟ, ಜಿದ್ದು, ಷರಾರತ್ತು—ಎಲ್ಲಾನೂ ಅಣ್ಣನ ಜೊತೆಯಲ್ಲೇ ಕಳಿಸಿಬಿಟ್ಟೆ."

"ಅಂದರೆ..."

"ಅಂದರೆ ಇಷ್ಟೆ—ಅಣ್ಣ ಹೇಗೆ ಬದುಕಿದರೋ ಹಾಗೇ, ನಾನೂ ಬಾಳಬೇಕು ವೀರಣ್ಣ. ಇಲ್ಲವಾದರೆ ನಾನು ಅವರ ಮಗ ಅನ್ನಿಸಿಕೊಂಡು ಏನು ಸಾರ್ಥಕವಾದ ಹಾಗಾಯಿತು? ಅಣ್ಣ ಕೊನೆಗಾಲದಲ್ಲಿ ಹೇಗೆ ಸಿಟ್ಟು ಸೆಡವು ಮರೆತು, ಎಲ್ಲರೂ ನನ್ನವರು ಎಂದುಕೊಂಡು ಕಣ್ಣು ಮುಚ್ಚಿದರೋ ನಾನೂ ಹಾಗೇ ಬಾಳಬೇಕು ಅಂತ ನಿಶ್ಚಯಕ್ಕೆ ಬಂದಿದ್ದೇನೆ. ಆದಷ್ಟು ಹಾಗೆ ಬಾಳಲು ಯತ್ನಿಸುತ್ತೇನೆ. ಯಾರಲ್ಲೂ ಸಿಟ್ಟು ಮಾಡುವುದಿಲ್ಲ; ಎಲ್ಲೂ ಕ್ರೋಧ ಬೆಳೆಯಲೂ ಅವಕಾಶ ಕೊಡುವುದಿಲ್ಲ.'

—ತಮ್ಮ ಬಾಳಿನ ಅಂತಿಮ ನಿರ್ಧಾರವನ್ನು ಸೂಚಿಸಿ ಹೇಳಿದರು ವೆಂಕಟ ದಾಸಪ್ಪನವರು—

"ಜಗತ್ತು ನನಗೆ ಅದೇ ಪಾಠ ಕಲಿಸಿದೆ ವೀರಣ್ಣ. ನೀನು ನಿನ್ನ ಗೌರವಕ್ಕಿಂತ ಸ್ನೇಹ ಹೆಚ್ಚಿನದೆಂದು ತೋರಿಸಿಕೊಟ್ಟೆ: ಗೌರಾ ನನಗೆ ಸ್ವಾರ್ಥ ಕ್ಕಿಂತ ತ್ಯಾಗ ಮಿಗಿಲು ಎಂದು ತೋರಿಸಿಕೊಟ್ಟಿದ್ದಾಳೆ. ಅಣ್ಣ ನನಗೆ ಛಲ, ಕ್ರೋಧಗಳಿಗಿಂತ, ಕ್ಷಮೆ. ಪ್ರೇಮಗಳು ಹಿಮಾಲಯದಷ್ಟು ಹಿರಿದು ಎಂದು ತೋರಿಸಿಕೊಟ್ಟು ಹೋದ. ನೀವೆಲ್ಲರೂ ಕಲಿಸಿದ ಪಾಠವನ್ನು, ನಾನು ನನ್ನ ಜೀವನದಲ್ಲಿ ಅಣುವಿನಷ್ಟನ್ನಾದರೂ ಅನುಷ್ಠಾನಕ್ಕೆ ತರದೆ ಹೋದರೆ, ನಿಮ್ಮೆಲ್ಲರ ಪ್ರೇಮಕ್ಕೂ ನಾನು ಅಪಾತ್ರನಾಗುವುದಿಲ್ಲವೇ ವೀರಣ್ಣ? ನೀವೆಲ್ಲಾ ದಾರಿ ತೋರಿಸಿದಿರಿ; ನಾನು ಆ ದಾರಿಯಲ್ಲಿ ನಡೆಯುತ್ತಿದ್ದೇನೆ. ತಾಯಿ ಯಾವ ಕೊನೆಗೆ ಸೇರಿಸುತ್ತಾಳೋ ಸೇರಿಸಲಿ."

ಅವರು ಆಡಿದ ಮಾತನ್ನು ಕೇಳಿ, ಗೌರಮ್ಮ, ವೀರಣ್ಣ ಇಬ್ಬರ ಕಣ್ಣಲ್ಲೂ ಹನಿಗಟ್ಟಿತು.

"ಏನಾರ ಮಾಡ್ಕೋ—ನಿನ್ನಂತೋರಿಗೆ ಯಾರು ಬುದ್ಧಿ ಹೇಳೋಕೆ ಸಾಧ್ಯ?"

—ಎಂದು ಹೇಳಿ, ವೀರಣ್ಣ, ತನ್ನ ಕಂಬನಿಯನ್ನು ವೆಂಕಟದಾಸಪ್ಪನಿಗೆ

ತೋರಗೊಡದಿರಲೆಂದು ಅಲ್ಲಿಂದ ಎದ್ದು ಹೋದ.

ಗೌರಮ್ಮ ಅವರ ಹತ್ತಿರ ಸರಿದು ಕುಳಿತು—

"ಅಂತೂ ಪರುಷ ಶಿಲೆ ಮುಟ್ಟಿ ಕಬ್ಬಿಣ ಬಂಗಾರ ಆದ ಕಥೇನ ಸತ್ಯ ಮಾಡ್ಬಿಟ್ರಿ."

—ಎಂದಳು ಮೃದುವಾಗಿ.

"ಏಕೆ? "

"ನನ್ನಂಥ ಕಾಡು ಮೂಳೀನೂ ಅಯ್ನೋರ ಸಾಲಿಗೆ ಸೇರಿಸ್ಬಿಟ್ರಿ."

"ಅದೇ ನಿನ್ನ ಹಿರಿಮೆ ಗೌರಾ. ಹೂವಿಗೆ ತನ್ನ ಪರಿಮಳದ ಹಿರಿಮೆ ತಿಳಿದಿರುವುದಿಲ್ಲ. ಅದು ತಿಳಿಯುವುದು ಹೊರಗಿನಿಂದ ಅದನ್ನು ಆಘ್ರಾಣಿಸಿದವನಿಗೆ ಮಾತ್ರ"

—ಎಂದರು ಗೌರಮ್ಮನ ನೆತ್ತಿಯನ್ನು ನೇವರಿಸಿ.

"ಅದೆಂಗಾದ್ರೂ ಆಗ್ಲಿ. ಅಂತೂ ನನಗೋಸ್ಕರ ಅಮ್ನೋರ ಪೂಜೆ ಬಿಟ್ಬಿಡ್ತೀರಿ...'

"ಊಹೂ..."

"ಮತ್ತೆ?".

"ನಿನ್ನ ರೂಪದಲ್ಲೇ ಆಕೆಯನ್ನು ಆರಾಧನೆ ಮಾಡುತ್ತೇನೆ ಗೌರಾ. ತಾಯಿ, ತಂಗಿ, ಮಗಳು, ಪ್ರೇಯಸಿ—ರೂಪ ಏನು ಬೇರೆಯಾದರೂ ಮೂಲ ಶಕ್ತಿ ಒಂದೇ. ಅಲ್ಲಿ ಸ್ತನಪಾನದ ಮೂಲಕ ಚೈತನ್ಯ ಮೂಡಿಸುವ ತಾಯಿ, ಇಲ್ಲಿ ಅಧರ ಪಾನದ ಮೂಲಕ ಶಕ್ತಿ ನೀಡುತ್ತಾಳೆ. ಅಮ್ಮನಲ್ಲಿ ಒಂದು ಸ್ವರೂಪವನ್ನು ಕಂಡೆ, ರಾಜೇಶ್ವರಿಯಲ್ಲಿ ಮತ್ತೊಂದು ಸ್ವರೂಪ ಕಂಡೆ; ಈಗ ನಿನ್ನಲ್ಲಿ ಬೇರೊಂದು ಸ್ವರೂಪವನ್ನು ಕಾಣುತ್ತೇನೆ ಗೌರಾ—ನನ್ನ ಪಾಲಿಗೆ ನೀನೂ ದೇವಿಯೇ—ನಿನ್ನಲ್ಲಿ ಆಲಿಂಗನ, ಚುಂಬನಗಳೇ ನನ್ನ ಆರಾಧನಾ ವಿಧಾನ".

—ಎಂದರು ವೆಂಕಟದಾಸಪ್ಪ ಎತ್ತಲೋ ನೋಡುತ್ತ.

ಆ ಮಾತು ಕೇಳಿ ಗೌರಮ್ಮ ಕಡೆದ ವಿಗ್ರಹದಂತಾದಳು. ಕಣ್ಣುಗಳಿಂದ ಹರಿಯುತ್ತಿದ್ದ ಕಂಬನಿಯೊಂದೇ ಆವಳು ಬದುಕಿದ್ದಾಳೆ ಎನ್ನುವುದಕ್ಕೆ ಸಾಕ್ಷಿಯಾಗಿತ್ತು.

೧

ವೀರಣ್ಣನ ಮನೆಯಿಂದ ಹೊರಬಿದ್ದ ವೆಂಕಟದಾಸಪ್ಪನವರು, ಅಲ್ಲಿಂದ ನೇರವಾಗಿ ಅಚ್ಚಣ್ಣಭಟ್ಟರ ಮನೆಯ ಕಡೆ ನಡೆದರು.

ಆ ದಿನ ಗೌರಮ್ಮ ಪಗಡೆಯಾಟದಲ್ಲಿ ಗೆದ್ದುದು, ವೆಂಕಟದಾಸಪ್ಪನವರ ಪಾಲಿಗೆ, ಬಾಳಿನ ಬಹು ಸಮಸ್ಯೆಗಳನ್ನು ಇತ್ಯರ್ಥಗೊಳಿಸಿದಂತಾಗಿ, ಅಶಾಂತಿಯಿಂದ ಹೊಯ್ದಾಡುತ್ತಿದ್ದ ಅವರ ಹೃದಯ ಶಾಂತವಾಗಿತ್ತು.

ಅಲ್ಲಿ ಅವರು ಆಡಿದ ಮಾತುಗಳಿಂದ , ವೀರಣ್ಣ, ಗೌರಮ್ಮನ ಮೇಲೆ ಏನಾದರೂ ಪರಿಣಾಮವಾಗಿರಲಿ, ವೆಂಕಟದಾಸಪ್ಪನವರ ಮಟ್ಟಿಗಂತೂ, ಅಂದಿನ ವರೆಗೆ ಅರ್ಥವಾಗದಿದ್ದ ಎಷ್ಟೋ ಮಾತುಗಳು ಅರ್ಥವಾದಂತಾಗಿ, ಅವರ ಹೃದಯದಲ್ಲಿ ಅನಿರ್ವಚನೀಯವಾದ ಶಾಂತಿ, ಹರ್ಷಗಳು ಮೂಡಿದ್ದವು.

ಆ ದಿನ–ಗೌರಮ್ಮ, ವೀರಣ್ಣನ ಪ್ರಶ್ನೆಗಳಿಗೆ ಉತ್ತರ ಕೊಟ್ಟಾಗ. ಅವರಿಗೆ, ಬೇರೆ ಯಾರೋ ತಮ್ಮದೇ ಹಲವಾರು ಪ್ರಶ್ನೆಗಳಿಗೆ ಉತ್ತರ ಕೊಟ್ಟು, ಅವರ ಬಾಳು ಹೀಗೇ ನಡೆಯಬೇಕೆಂದು ನಿರ್ದೇಶಿಸಿದಂತಾಗಿತ್ತು.

ಶಾಮಣ್ಣ ಗೀತೆಯ ವಿಷಯವನ್ನು ಹೇಳಿದ ದಿನದಿಂದ ವೆಂಕಟದಾಸಪ್ಪನವರಲ್ಲಿ, ಗೀತೆಯ ಬಗ್ಗೆ ಆಸಕ್ತಿ ಕೆರಳಿ, ದಿನವೂ, ದಿನದ ಪೂಜೆ, ಸಂಧ್ಯಾವಂದನೆಗಳೊಂದಿಗೆ ಗೀತಾ ಪಾರಾಯಣವನ್ನು ಆರಂಭಿಸಿದ್ದರು. ಮೊದಲ ಎರಡು ದಿನ ಗೀತೆ ಶುಷ್ಕವಾಗಿ ಕಂಡು, ಅದನ್ನು ಮತ್ತೆ ಮತ್ತೆ ಬೇಸರವೆನಿಸಿದರೂ, ಆ ಬೇಸರಕ್ಕೆ ಗೀತೆಯನ್ನು ಅರ್ಥ ಮಾಡಿಕೊಳ್ಳಲಾಗದ ತಮ್ಮ ಚಿತ್ತ ದೌರ್ಬಲ್ಯವೇ ಕಾರಣವೆಂದುಕೊಂಡು ಪಾರಾಯಣವನ್ನು ಮುಂದುವರಿಸಿದ್ದರು.

ಎರಡು ಮೂರು ದಿನ ಹೀಗಾದ ಮೇಲೆ, ಗೀತೆಯ ಅರ್ಥ ಮಸು ಮಸುಕಾಗಿ ಆಗತೊಡಗಿ, ಗೀತೆಯ ಒಂದೊಂದು ನುಡಿಯೂ ಬೆಳಕಿನ ಕಿಡಿಗಳಾಗಿ ಕಂಡಿತ್ತು.

ಈ ದಿನ, ಯಾವುದೋ ಶಕ್ತಿ ನುಡಿಸಿದಂತೆ, ವೀರಣ್ಣ, ಗೌರಮ್ಮ ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಟ್ಟ ಬಳಿಕ, ತಾವು ಆಡಿದ ಮಾತುಗಳನ್ನು ತಾವೇ ಜ್ಞಾಪ್ತಿಸಿಕೊಂಡು ಚಿಂತಿಸಿದಾಗ, ಬಹುದಿನ ಬರಡು ಎಂದು ಕೊಂಡ

ಹಸು, ಇದ್ದಕ್ಕಿದ್ದ ಹಾಗೇ ಕೊಡಗಟ್ಟಲೆ ಹಾಲು ಕರೆದು, ಜೀವವನ್ನು ತಣಿಸಿ ದಷ್ಟು ತೃಪ್ತಿಯಾಗಿತ್ತು.

ಯಾವುದೋ ಶಕ್ತಿ ತಾನೇ ನನ್ನಿಂದ ಆ ಮಾತು ಆಡಿಸಿತು—

ನನ್ನಿಂದಲೇ ಮಾತಾಡಿಸಿ ನನ್ನ ಬಾಳಿಗೆ ಮಾರ್ಗನಿರ್ದೇಶನ ಮಾಡಿತು—

ನನ್ನೊಳಗೇ ಕುಳಿತ ಅಗೋಚರ ಶಕ್ತಿಯೊಂದು ನನ್ನಿಂದ ಇಷ್ಟು ಕೆಲಸ ಮಾಡಿಸಿತು —

ಆ ಭಾವನೆಯೆನಿಸಿ, ವೆಂಕಟದಾಸಪ್ಪನವರ ನರನರದಲ್ಲೂ ಉದ್ರೇಕರಹಿತ ಹರ್ಷ ತುಂಬಿತು.

ತಂಗಾಳಿ ಸುಳಿದು ತಂಪಾಗಿ, ತೃಪ್ತಿಯಿಂದ ನಕ್ಷತ್ರಕಾಂತಿಯನ್ನು ಮಿನುಗಿಸುವ ಇರುಳ ಬಾನಿನಂತಾಗಿತ್ತು ಅವರ ಹೃದಯ. ಶಾಂತಿ, ತೃಪ್ತಿ— ಏನೋ ಲೋಕವನ್ನೇ ಗೆದ್ದಂಥ ಹರ್ಷ ಅವರದಾಗಿತ್ತು, ಆ ದಿನ.

ಆ ಹರ್ಷದಲ್ಲಿ ತೂಗುತ್ತಾ ನಡೆಯುತ್ತಿರುವಾಗ ಅವರ ಪಾಲಿಗೆ, ಹಳ್ಳಿಯ ಕಾಡು ದಾರಿಯೂ ಹಂಸತುಲಿಕಾತಲ್ಪದಷ್ಟು ಮೃದುವಾಗಿತ್ತು.

* * * *

ವೆಂಕಟದಾಸಪ್ಪನವರು ಅಚ್ಚಣ್ಣ ಭಟ್ಟರ ಮನೆಯ ಬಾಗಿಲು ಸೇರಿದಾಗ, ಬಾಗಿಲು ಮುಂದೆ ಮಾಡಿ, ಒಳಗೆ ಭಟ್ಟರು ಗಟ್ಟಿಯಾಗಿ ಗೀತೆಯನ್ನು ಹೇಳುತ್ತಿರುವುದು ಕೇಳಿಸಿತು.

ಅದನ್ನು ಕೇಳಿ, ಭಟ್ಟರ ಗೀತಾವಾಚನಕ್ಕೆ ಭಂಗ ತರಲಾಗದೆ, 'ಅದು ಮುಗಿಯಲಿ. ಆ ಮೇಲೆ ಮಾತಾಡಿಸಿದರಾಯಿತು' ಎಂದುಕೊಂಡು ವೆಂಕಟ ದಾಸಪ್ಪನವರು, ಹಾಗೇ ಮನೆಯ ಮುಂದಿನ, ಕತ್ತಲು ಕವಿದ ಜಗುಲಿಯ ಮೇಲೆ ನಿಂತರು.

ಅಚ್ಚಣ್ಣಭಟ್ಟರು ಹೇಳುತ್ತಿದ್ದರು—

ಯತೇಂದ್ರಿಯ ಮನೋಬುದ್ಧಿರ್ಮುನಿರ್ಮೋಕ್ಷ ಪರಾಯಣಃ
ವಿಗತೇಚ್ಛಾ ಭಯ ಕ್ರೋಧೋ ಯಃ ಸದಾ ಮುಕ್ತ ಏವ ಸಃ॥

ಭೋಕ್ತಾರಂ ಯಜ್ಞತಪಸಾಂ ಸರ್ವಲೋಕ ಮಹೇಶ್ವರಂ
ಸುಹೃದಂ ಸರ್ವ ಭೂತಾನಾಂ ಜ್ಞಾತ್ವಾಮಾಂ ಶಾಂತಿಮೃಚ್ಛತಿ॥

(ಇಂದ್ರಿಯಗಳನ್ನು, ಮನಸ್ಸನ್ನೂ, ಬುದ್ಧಿಯನ್ನೂ, ನಿರೋಧಿಸಿ, ಇಚ್ಛೆ, ಭಯ, ಕ್ರೋಧಗಳನ್ನು ಕಳೆದುಕೊಂಡು. ಮೋಕ್ಷಪರಾಯಣನಾಗಿರುವ ಮುನಿಯು ಯಾವಾಗಲೂ ಮುಕ್ತನು.

ಯಜ್ಞ, ತಪಸ್ಸುಗಳ ಭೋಕ್ತೃವೂ, ಎಲ್ಲ ಲೋಕಗಳ ಮಹೇಶ್ವರನೂ, ಎಲ್ಲ ಭೂತಗಳ ಸುಹಿನೂ ಆದ ನನ್ನನ್ನು ತಿಳಿದು ಆ ಮನುಷ್ಯನು ಶಾಂತಿಯನ್ನು ಪಡೆಯುವನು—ಗೀತಾ ಅಧ್ಯಾಯ: ೫: ಶ್ಲೋಕ: ೨೮–೨೯)

ಅಚ್ಚಣ್ಣ ಭಟ್ಟರು ತಮಗೆ ತಾವೇ ಹೇಳಿಕೊಳ್ಳುತ್ತಿದ್ದ ಗೀತೆಯನ್ನು ಕೇಳಿ, ವೆಂಕಟದಾಸಪ್ಪನವರ ತುಟಿಗಳ ಮೇಲೆ ನಸುನಗು ಮೂಡಿತು.

ನಸುನಗುತ್ತಲೇ ಅಚ್ಚಣ್ಣಭಟ್ಟರು 'ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ, ಅಧ್ಯಾತ್ಮಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಪಂಚಮೋಧ್ಯಾಯಃ ಸಮಾಪ್ತಂ' ಎಂದು ಹೇಳಿ ಮುಗಿಸುವ ವರೆಗೂ ಸುಮ್ಮನಿದ್ದು ಬಳಿಕ—

"ಅಚ್ಚಣ್ಣ ಭಟ್ಟರೇ... ಅಚ್ಚಣ್ಣ ಭಟ್ಟರೇ..."

—ಎಂದು ಕೂಗಿದರು.

ಅಚ್ಚಣ್ಣಭಟ್ಟರಿಗೆ ಕೂಡಲೇ ವೆಂಕಟದಾಸಪ್ಪನವರ ಧ್ವನಿಯ ಗುರುತು ಹತ್ತಲಿಲ್ಲವೆಂದು ಕಾಣುತ್ತದೆ. ಎಂತಲೇ ಬಾಗಿಲು ತೆಗೆಯದೆ ಒಳಗಿನಿಂದಲೇ—

"ಯಾರು?"

—ಎಂದು ಕೇಳಿದರು.

"ನಾನು, ದಾಸಣ್ಣ"

"ಯಾರು –ನರಸಪ್ಪನವರ ಮಗ ದಾಸಣ್ಣನೇ..."

—ಎಂದು ಕೇಳಿಕೊಂಡೇ ಬಂದು ಬಾಗಿಲು ತೆಗೆದು—

"ಒಳಗೆ ಬಾ ದಾಸಣ್ಣ. ಏನು ಇಷ್ಟು ಹೊತ್ತಿನಲ್ಲಿ ಬಂದೆ?"

—ಎಂದರು ಅಚ್ಚಣ್ಣಭಟ್ಟರು.

"ಏನೋ ಸ್ವಲ್ಪ ಮಾತಾಡೋದಿತ್ತು...."

"ಒಳಗೆ ಬಾ..."

"ಏನೂ ಬೇಡ– ಇಲ್ಲೇ, ಹೊರಗೆ, ತಣ್ಣಗಿದೆ. ಇಲ್ಲೇ ಬನ್ನಿ."

—ಎಂದರು ವೆಂಕಟದಾಸಪ್ಪ.

ತಮ್ಮ ಮನೆಯ ಬಾಗಿಲಿಗೆ ಎಂದೂ ಬರದ ವೆಂಕಟದಾಸಪ್ಪನವರು, ಬಂದುದನ್ನು ಕಂಡೇ ಅಚ್ಚಣ್ಣಭಟ್ಟರಿಗೆ ಆಶ್ಚರ್ಯವಾಗಿತ್ತು. ಅದರೊಂದಿಗೆ 'ನಿಮ್ಮೊಂದಿಗೆ ಮಾತನಾಡುವುದಿದೆ'' ಎಂದು ಹೇಳಿದುದನ್ನು ಕೇಳಿ, ಅಂಥ ಮಾತಿಗೆ ಯಾವ ಕಾರಣವೂ ಅರಿವಾಗದೆ, ಅಚ್ಚರಿ ಮತ್ತಷ್ಟು ಹೆಚ್ಚಾಗಿ, 'ಏನಿರಬಹುದು' ಎಂದು ತಲೆಕೆರೆದುಕೊಂಡು ಯೋಚಿಸುತ್ತಲೇ ಹೊರಬಂದರು ಅಚ್ಚಣ್ಣಭಟ್ಟರು.

ಅಚ್ಚಣ್ಣಭಟ್ಟರು ಹೊರಗೆ ಬಂದ ಬಳಿಕ ವೆಂಕಟದಾಸಪ್ಪನವರು, ಜಗಲಿಯ ಕಂಭಕ್ಕೆ ಒರಗಿ ಕುಳಿತುಕೊಂಡು, ಹಾಗೇ ಅಚ್ಚಣ್ಣಭಟ್ಟರ ಮುಖ ನೋಡಿದರು.

ಅವರ ಅಲ್ಲಲ್ಲಿ ವಿಭೂತಿಯ ಪಟ್ಟೆಗಳು ತುಂಬಿದ ಬಡಕಲು ಮೈ, ಹಣೆಯಲ್ಲಿ ಮೂರೆಳೆಗಳೂ ಲಕ್ಷಣವಾಗಿ ಕಾಣುವಂತೆ ವಿಭೂತಿ ಇಟ್ಟುಕೊಂಡೆ, ಗುಳಿಬಿದ್ದ ಕೆನ್ನೆಗಳ, ಮೊನಚು ಮೂಗಿನ ಮುಖ, ಚಂಡಿಕೆಯ ವಿನಾ ನುಣ್ಣಗೆ ಬೋಳಿಸಿದ ತಲೆ, ಮೊಣಕಾಲವರೆಗೆ ಬಂದ, ಕೆಂಬಣಕ್ಕೆ ತಿರುಗಿದ ಪಂಚೆ–

"ಏನು ವಿಶೇಷ ದಾಸಣ್ಣ, ಇಷ್ಟು ದೂರ ಬಂದೆ?"

—ಎಂದು ಕೇಳಿದರು ಅಚ್ಚಣ್ಣಭಟ್ಟರು, ವೆಂಕಟದಾಸಪ್ಪನವರ ಇದುರಿಗೆ ಅಷ್ಟು ದೂರವಾಗಿ ಕುಳಿತು.

"ಇವತ್ತೇನು ತಿಥಿ ಭಟ್ಟರೇ ..."

"ವೈಶಾಖ ಶುದ್ಧ ತದಿಗೆ... ಯಾಕೆ? ನರಸಪ್ಪನವರ ಮಾಸಿಕ ಹುಣ್ಣಿಮೆ ದಿನ ತಾನೇ."

"ಅದಕ್ಕಲ್ಲ ತಿಥಿ ಕೇಳಿದ್ದು'.'

"ಮತ್ತೇ..."

"ಇವತ್ತು ತದಿಗೆ ಅಂದರೆ—ಅಮ್ಮನೋರ ಜಾತ್ರೆಗೆ—ಸಪ್ತಮಿಗೆ—ಇನ್ನು ನಾಲ್ಕೇ ನಾಲ್ಕು ದಿನ ಉಳೀತು ಅಲ್ಲವೇ?"

"ಹೂ"

"ನಮ್ಮ ಮನೆ ಗದ್ದಲದಲ್ಲಿ ನನಗೆ ಜಾತ್ರೆ ಇಷ್ಟು ಹತ್ತಿರ ಬಂದಿರೋದೇ

ಮರೆತು ಹೋಗಿತ್ತು. ಇವತ್ತು ಯಾಕೋ ಅದು ನೆನಪಾಯಿತು. ಅದಕ್ಕೇ ಆ ವಿಷಯ ನಿಮ್ಮ ಹತ್ತಿರ ಮಾತಾಡಬೇಕೂಂತ ಬಂದೆ...''

''ಏನು ಹೇಳು?''

''ಇಷ್ಟು ದಿನ ಜಾತ್ರೆ ಮೊದಲ ದಿನದ, ಸಪ್ತಮಿ ಪೂಜೆ ಅಣ್ಣನೇ ಮಾಡ್ತಾ ಇದ್ದ...''

''ಹೌದು... ಒಳ್ಳೇ ಜಾತ್ರೆ ಮುಂದೇ ನರಸಪ್ಪನವರು ತೀರಿಕೊಂಡು ಬಿಟ್ಟರು. ಅವರಿದ್ದಿದ್ದರೆ, ಅವರಿಂದ ಜಾತ್ರೆಗೇ ಒಂದು ಥರಾ ಖಳೆ ಬರ್‍ತಾ ಇತ್ತು...! ಎಂಥ ಅನ್ಯಾಯವಾಗಿ ಹೋಯಿತು...''

—ಎಂದರು ಅಚ್ಚಣ್ಣಭಟ್ಟರು. ಮರುಕಸೂಚಕವಾಗಿ ಲೊಚಗುಟ್ಟುತ್ತ.

''ದೈವೇಚ್ಛೆಗೆ ಯಾರು ಇದಿರು ಹೇಳಿ? ಈಗ ನಾನು ನಿಮ್ಮ ಮೇಲೆ ಒಂದು ದೊಡ್ಡ ಭಾರ ಹೊರಿಸಲು ಬಂದಿದೀನಿ...''

''ಏನು ಹೇಳು. ನಾನು ಹೊರಬಹುದಾದಂಥ ಭಾರ ಆದರೆ ಖಂಡಿತ ಹೊರುತ್ತೇನೆ.''

''ಇನ್ನೇನೂ ಇಲ್ಲ—ಈ ವರ್ಷದಿಂದ ಅಮ್ಮನೋರ ಗುಡಿಯಲ್ಲಿ ಸಪ್ತಮಿ ಪೂಜೆ ಮಾಡೋ ಜವಾಬ್ದಾರಿ ನೀವು ವಹಿಸಿಕೊಂಡು ಬಿಡಿ ಅಚ್ಚಣ್ಣ ಭಟ್ಟರೇ...''

—ನಿರ್ವಿಕಾರವಾದ ಧ್ವನಿಯಲ್ಲಿ ಹೇಳಿದರು ವೆಂಕಟದಾಸಪ್ಪ.

ಅದನ್ನು ಕೇಳಿ, ಅಚ್ಚಣ್ಣಭಟ್ಟರಿಗೆ ಎತ್ತಿ ಕುಕ್ಕುವಷ್ಟು ಆಶ್ಚರ್ಯ ವಾಯಿತು.

''ಅಂದರೆ...ಅಂದರೆ......''

—ಎಂದು ವೆಂಕಟದಾಸಪ್ಪನವರ ಮಾತೇ ಅರ್ಥವಾಗದವರಂತೆ ಕೇಳಿದರು.

''ಇನ್ನೇನೂ ಇಲ್ಲ. ಇದು ಗ್ರಾಮದ ಕೆಲಸ. ಬಹಳ ಕಟ್ಟುನಿಟ್ಟಾಗಿ ನಡೆಯಬೇಕು. ಇಲ್ಲವೆ ಹೋದರೆ ಗ್ರಾಮಕ್ಕೇ ಕೇಡಾಗಬಹುದು. ಅಷ್ಟು ಮಡಿಮೈಲಿಗೆ, ಕಟ್ಟುನಿಟ್ಟು ನನ್ನಿಂದಾಗದು. ಆದ್ದರಿಂದ ನನಗಿಂತ ಆ ಕೆಲಸ ಮಾಡುವುದಕ್ಕೆ ನೀವೇ ಅರ್ಹರು. ಈ ವರ್ಷದಿಂದ ನೀವೇ ಪೂಜೆ ಕೆಲಸ ನಡೆಸಿಕೊಂಡು ಹೋಗಿ...''

"ಆದರೆ–ಅದು ನನ್ನ ನಿನ್ನ ಮಾತಲ್ಲ ದಾಸಣ್ಣ–ಗ್ರಾಮದವರು ಒಪ್ಪಬೇಕು."

"ನೀವು ಜವಾಬ್ದಾರಿ ಹೊರಲು ಒಪ್ಪಿಕೊಳ್ಳಿ–ಗ್ರಾಮದವರನ್ನು ನಾನು ಒಪ್ಪಿಸುತ್ತೇನೆ."

"ಆದರೆ–ಆ ದಿನ ನಿಮ್ಮ ಮನೆಯಿಂದ ದೇವಸ್ಥಾನಕ್ಕೆ ಪೂಜಾಮೂರ್ತಿ ಬರಬೇಕಲ್ಲ..."

"ಬಂದು–ಎಂದಿನ ಹಾಗೇ ತೆಗೆಸಿಕೊಂಡು ಹೋಗಿ.. ಅದಕ್ಕೆ ನಾನೇನೂ ಅಡ್ಡಿ ಮಾಡುವುದಿಲ್ಲ..."

—ಎಲ್ಲ ವಿಚಾರವನ್ನು ಚಿಂತಿಸಿ ನಿರ್ಧಾರಕ್ಕೆ ಬಂದವರಂತೆ ಹೇಳಿದರು ವೆಂಕಟದಾಸಪ್ಪ.

"ಇದಕ್ಕೆ ನಿಮ್ಮ ತಾಯಿ ಒಪ್ಪಿದರೇ?"

"ಒಪ್ಪುವುದು ಬಿಡುವುದು ನನ್ನ ಕೆಲಸ– ನಾನೇ ತಾನೇ ಬಂದು ಪೂಜೆ ಮಾಡಬೇಕಾದವನು. ನಾನೇ ಬೇಡ ಎಂದರೆ ಅಮ್ಮ ತಾನೇ ಇನ್ನೇನು ಹೇಳುತ್ತಾಳೆ."

"ಅದೆಲ್ಲಾ ಹೇಗಾದರಾಗಲಿ–ಅದೇನದು– ಇದ್ದಕ್ಕಿದ್ದ ಹಾಗೇ ಹೀಗೆ ತೀರ್ಮಾನಮಾಡಿದೆ?"

"ಮೊದಲನೆಯದಾಗಿ– ಪೂಜೆ ಪುನಸ್ಕಾರ ಇವೆಲ್ಲಾ ನನಗೆ ತಿಳಿಯದ ವಿದ್ಯೆ. ಮನೆಯಲ್ಲಿ ಮಾಮೂಲಿ ಪೂಜೆ ಮಾಡೋ ಅಷ್ಟೇ ಮಂತ್ರತಂತ್ರ ನನಗೆ ತಿಳಿದಿರೋದು..."

"ಅಲ್ಲಿ ಮಾಡಬೇಕಾದ್ದೂ ಅಷ್ಟೆ. ಉಳಿದದ್ದಕ್ಕೆಲ್ಲ ನಾವಿರ್ತೇವಲ್ಲ..."

"ನೀವೆಲ್ಲಾ ಇರ್ತೀರ ಅನ್ನೋದು ನಿಜವೇ. ಆದರೆ ಅದಕ್ಕಿಂತ ದೊಡ್ಡ ಅಭ್ಯಂತರ ಇನ್ನೊಂದಿದೆ."

"ಅದೇನು–ನರಸಪ್ಪನವರು ತೀರಿಕೊಂಡ ವರ್ಷ, ಈ ಪೂಜೆ ಮಾಡ ಬಹುದೋ, ಇಲ್ಲವೋ ಎನ್ನುವ ಅನುಮಾನವೇ? 'ಶುಭ ಸ್ವೀಕಾರ' ವಾದ ಮೇಲೇ ಆ ಶೌಚವೆಲ್ಲಾ ತೀರಿಹೋಯಿತಲ್ಲ, ಮತ್ತೇನಂ ಅಭ್ಯಂತರ? ಅಲ್ಲದೆ ಮಾಸಿಕಕ್ಕೂ ಅಡ್ಡಿಯಾಗುವುದಿಲ್ಲ. ಆದಾಗುವುದು ಹುಣ್ಣಿಮೆಯ ದಿನ. ಹಾಗಿರೋವಾಗ ಸಪ್ತಮಿ ಪೂಜೆಗೆ ಏನು ಅಡ್ಡಿ?"

"ಉಳಿದ ಎಲ್ಲಕ್ಕಿಂತ ಹೆಚ್ಚಾಗಿ—ನಾನೇ ಅಡ್ಡಿ."

"ಅಂದರೆ—?"

"ನಾನು ಅಮ್ಮನವರ ಪೂಜೆ ಮಾಡುವಷ್ಟು ಶುದ್ಧ ಬ್ರಾಹ್ಮಣನಲ್ಲ. ಜಾತಿಸಂಕರದಿಂದ ಅಪವಿತ್ರನಾದವನು."

"ಯಾರು ಹಾಗಂತ ಅಂದದ್ದು... ಹಾಗೆ ಅಂದವರ ಬಾಯಲ್ಲಿ ಹುಳ ಸುರೀಬೇಕು..."

"ಛಿ......ಛಿ......ಹಾಗೆಲ್ಲಾ ಆಡಬಾರದು..."

—ಎಂದು ವೆಂಕಟದಾಸಪ್ಪನವರೇ ಅಚ್ಚಣ್ಣಭಟ್ಟರು ಶಪಿಸುವುದನ್ನು ತಡೆದರು.

"ಮತ್ತೆ... ಅನ್ನಬಾರದ್ದು ಅಂದರೆ..."

"ಯಾರು ಅನ್ನುವುದೇನು ಅಚ್ಚಣ್ಣಭಟ್ಟರೇ? ಅಂಗೈ ಹುಣ್ಣು ನೋಡಲು ಕನ್ನಡಿ ಬೇಕೇ? ನಮ್ಮ ದೋಷ ನಮಗೇ ತಿಳಿದಿರೋವಾಗ, ಅದನ್ನು ಬೇರೆಯವರು ಆಡಿದರೆಷ್ಟು, ಬಿಟ್ಟರೆಷ್ಟು...... ಅಂತೂ ನೀವು ದೊಡ್ಡ ಮನಸ್ಸು ಮಾಡಿ, ಈ ಭಾರ ಒಪ್ಪಿಸಿಕೊಂಡರೆ, ನಾನು ನಿಶ್ಚಿಂತೆಯಿಂದ ಮನೆಗೆ ಹೋಗುತ್ತೇನೆ."

"ಆದರೆ ಇದು ಇಷ್ಟು ಅವಸರದಲ್ಲಿ ತೀರ್ಮಾನವಾಗೋ ಅಂಥ ವಿಷಯ ವಲ್ಲ ದಾಸಣ್ಣ, ನಾನು ಒಪ್ಪಿದ ಹಾಗೇ ಬೇರೆಯವರೂ ಒಪ್ಪಬೇಕು...... ಇದು ಎಷ್ಟೋ ತಲೆಮಾರುಗಳ ಸಂಪ್ರದಾಯದ ವಿಷಯ. ಇಂಥಾದ್ದರಲ್ಲಿ ಬದಲು ಮಾಡಲು ಜನ ಬೇಗ ಒಪ್ಪುವುದಿಲ್ಲ... ಆದರೆ ನೀನು ಹೇಳುವ ಮಾತಿನಲ್ಲೂ ಅರ್ಥವಿದೆ. ಏನಾದರೂ ಹೆಚ್ಚು ಕಡಿಮೆಯಾದರೆ ಗ್ರಾಮಕ್ಕೇ ಅಪಾಯ. ಅದೂ ಯೋಚಿಸಬೇಕಾದ್ದೆ... ಆಯಿತು—ಹ್ಯಾಗೂ ನೀನು ಇವತ್ತು ಇದನ್ನ ನನ್ನ ಕಿವಿ ಮೇಲೆ ಹಾಕಿದೀಯಲ್ಲ. ನಾಳೇ ನಾನೂ ಈ ವಿಷಯವಾಗಿ ಶ್ಯಾನುಭೋಗರ ಹತ್ತಿರ, ಗ್ರಾಮದ ಮುಖಂಡರ ಹತ್ತಿರ ಮಾತಾಡಿ ನೋಡ್ತೀನಿ. ಎಲ್ಲಾರೂ ಹೇಗೆ ಹೇಳಿದ್ರೆ ಹಾಗಾಗಲಿ......ಅಂತೂ ನಿನ್ನ ವಿಷಯ ನಾನು ತಪ್ಪು ತಿಳಿದುಕೊಂಡಿದ್ದೆ ದಾಸಣ್ಣ......"

"ಏಕೆ?"

"ಶುದ್ಧ ಹುಡುಗ—ಪೂರ್ವಾಪರ ವಿವೇಚನೆ ಮಾಡದವನು ಎಂದಿದ್ದೆ.

ಆವರೆ ಎಷ್ಟಾದರೂ ಸರಸಪ್ಪನವರ ಮಗನಲ್ಲವೇ! ವಂಶಪರಂಪರಾಗತವಾಗಿ ಬಂದ ದೈವಭೀತಿ ಎಲ್ಲಿ ಹೋಗುತ್ತೆ? ಹಿಂದೆ ಎಷ್ಟೋ ಜನ ನಿಮ್ಮ ವಿಷಯವಾಗಿ ಲಘುವಾಗಿ ಮಾತಾಡಿದಾಗ ನಾನೇ ಹೇಳಿದ್ದೆ ದಾಸಣ್ಣ—''

—ವೆಂಕಟದಾಸಪ್ಪನವರನ್ನು ಹೊಗಳಲೆತ್ನಿಸಿ ಹೇಳಿದರು ಅಚ್ಚಣ್ಣ ಭಟ್ಟರು.

"ಏನೆಂದು?''

"ಇವತ್ತು ಹೀಗಿದಾನೆ. ನಾಳೆ ಸಾಕ್ಷಾತ್ ಮಹರ್ಷಿ ಆದ ಹಾಗೆ ಆಗ್ತಾನೆ ಅಂತ. ನನ್ನ ಮಾತು ಸುಳ್ಳಾಗಲಿಲ್ಲ. ಬೆಳೆಯೋ ಚೇತನದ ಲಕ್ಷಣ ಗಳೆಲ್ಲಾ ಇದೆ. ಇಲ್ಲದಿದ್ದರೆ ಇಷ್ಟು ಮುಂದಾಲೋಚನೆ ಇರುತ್ತಿತ್ತೇ......''

"ಅದೆಲ್ಲಾ ಎಲ್ಲಾದರೂ ಹೋಗಲಿ—ಈಗ ನನ್ನ ಪ್ರಶ್ನೆಗೆ ಏನು ಉತ್ತರ ಹೇಳಿದ ಹಾಗಾಯಿತು...''

—ಅಚ್ಚಣ್ಣಭಟ್ಟರ ಮುಖಸ್ತುತಿ ಅಸಹ್ಯವಾಗಿ, ಅದಕ್ಕೆ ಮಧ್ಯದಲ್ಲೇ ತುಂಡು ಹಾಕಿ ಹೇಳಿದರು ವೆಂಕಟದಾಸಪ್ಪ.

"ನಾಳೆ ಶಾನುಭೋಗರ ಹತ್ತಿರ ಮಾತಾಡಿ ಹೇಳಿ ಕಳಿಸ್ತೀನಿ.''

"ಸರಿ—ಹಾಗಾದರೆ ನಾನಿನ್ನು ಬರಲೇ?''

"ಹೊರಟೇಬಿಟ್ರೀಯಾ?''

"ಹೂ. ಮತ್ತೆ ನಾಳೆ ಕಾಣ್ತೀನಿ. ನಮಸ್ಕಾರ.

—ಎಂದು ಕೈ ಮುಗಿದು, ಅಚ್ಚಣ್ಣ ಭಟ್ಟರು ಯಾವ ಮಾತನ್ನೂ ಮುಂದುವರಿಸಲು ಅವಕಾಶಕೊಡದೆ ಅಲ್ಲಿಂದ ಹೊರಟುಹೋದರು ವೆಂಕಟ ದಾಸಪ್ಪ.

ಮನೆಯತ್ತ ಹೋಗುತ್ತಿದ್ದ ವೆಂಕಟದಾಸಪ್ಪನವರನ್ನು ಕಣ್ಣುಮರೆಯಾಗುವ ವರೆಗೂ, ಅಚ್ಚಣ್ಣಭಟ್ಟರು ಅತ್ತಲೇ ನೋಡುತ್ತಿದ್ದರು.

ವೆಂಕಟದಾಸಪ್ಪನವರು ಹೇಳಿದುದನ್ನು ಕೇಳಿ ಅವರಿಗೆ ಬಯಸಿದ ಸಾಮ್ರಾಜ್ಯ ಲಭಿಸಿದಷ್ಟು ಸಂತೋಷವಾಗಿತ್ತು. ವೆಂಕಟದಾಸಪ್ಪನಿದಿರು. ಪ್ರಯತ್ನಪೂರ್ವಕವಾಗಿ ತಡೆಹಿಡಿದ ಹರ್ಷವನ್ನು, ಅವರು ಕಣ್ಣುಮರೆಯಾದ ಬಳಿಕ ಹುದುಗಿಸಿಟ್ಟುಕೊಳ್ಳಲಾರದೆ, ಸಂತೋಷದಲ್ಲಿ ಬೀಗುತ್ತಾ—

"ಲೇ...ಲೇ... ಕೇಳ್ದಿಯೇನೇ...''

—ಎಂದು ಹೆಂಡತಿಯನ್ನು ಕೂಗುತ್ತ ಒಳಗೆ ಹೋದರು.

"ಏನು?"

—ಎಂದು ಗಂಡನ ಕೂಗನ್ನು ಕೇಳಿ ಅಡಿಗೆಯ ಮನೆಯ ಬಾಗಿಲಿಗೆ ಬಂದು ಕೇಳಿದಳು ಸೀತಾಲಕ್ಷ್ಮಮ್ಮ.

"ದಾಸಣ್ಣ ಯಾಕೆ ಬಂದಿದ್ದ ಗೊತ್ತೆ?"

"ಯಾಕಂತೆ..."

"ಅಮ್ನೋರ ಗುಡಿ ಪೂಜೆ ನನಗೆ ಒಪ್ಪಿಸಿ ಹೋಗೋಕೆ ಬಂದಿದ್ದ. ಈ ಸಲದ ಜಾತ್ರೆಯಿಂದ ನಾನೇ ಅಮ್ನೋರ ಪೂಜೆ ಮಾಡಬೇಕಂತೆ......"

"ಹೌದೇ—ಹಾಗಂದ್ನೇ?"

—ಗಂಡನ ಮಾತನ್ನು ನಂಬಲಾಗದವಳಂತೆ ಕೇಳಿದಳು ಸೀತಾಲಕ್ಷ್ಮಮ್ಮ.

"ಮತ್ತಿನ್ನೇನೂಂತ ತಿಳಕೊಂಡೆ. ಜಾತ್ರೆಗೆ ಮುಂದೇನೇ ನರಸಪ್ಪ ಸತ್ತಾಗಲೇ ನಾನು ಅಂದ್ಕೊಂಡೆ—ಇನ್ನು ಆ ಮನೇಗೂ ಅಮ್ನೋರ ಗುಡಿಗೂ ಋಣಾನುಬಂಧ ಮುಗಿದುಹೋಯಿತೂಂತ. ನಾನು ಅಂದ್ಕೊಂಡ ಹಾಗೇ ಆಯ್ತು."

—ಉತ್ಸಾಹದಿಂದ ಹೇಳಿದರು ಅಚ್ಚಣ್ಣ ಭಟ್ಟರು.

"ಅಲ್ಲ. ಅಷ್ಟು ಸುಲಭವಾಗಿ, ಯಾರೂ ಹೇಳ್ದೆ ಕೇಳ್ದೆ ದಾಸಣ್ಣ ಇದಕ್ಕ್ಯಾಕೆ ಒಪ್ಪಿಕೊಂಡಾಂತೀನಿ..."

"ಮತ್ತೆ—ಅಮ್ನೋರು ಅಂದ್ರೇನು ಸಾಮಾನ್ಯ ಅಂದುಕೊಂಡೆಯಾ? ಅಂಥ ಕರ್ಮ ಚಂಡಾಲನಿಗೆ ಅಮ್ನೋರನ್ನ ಮುಟ್ಟೋ ಧೈರ್ಯ ಎಲ್ಲೀದು? ಎಲ್ಲೊ, ಕನಸಿನಲ್ಲೋ, ಮತ್ತೆಲ್ಲೋ ಬಿಸಿ ಮುಟ್ಟಿಸಿರಬೇಕು. ಅದಕ್ಕೆ ತಾನೇ, 'ಸ್ವಾಮಿ ಇದು ನನ್ನ ಕೈಲಾಗದು, ನೀವೇ ಒಪ್ಪಿಸಿಕೊಳ್ಳಿ' ಅಂತ ಹೇಳೋಕೆ ಓಡಿಬಂದ. ಹ್ಹ! ಅಮ್ನೋರ ಪೂಜೆ ಮಾಡೋದೂಂದ್ರೆ. ನಾಯಕರೋಳ್ನ ತೊಡೇ ಮೇಲೆ ಮಲಗಿಸಿಕೊಂಡಷ್ಟು ಸುಲಭ ಅಂದ್ಕೊಂಡ್ಯಾ? ಅವನ ಅದೃಷ್ಟ ನೆಟ್ಟಗಿತ್ತು. ಅದಕ್ಕೇ ನಾಲ್ಕು ದಿನದ ಮುಂಚೇನೇ ವಿವೇಕ ಬಂತು. ಇಲ್ದೇ ಹೋಗಿದ್ರೆ ವಂಶಕ್ಕೆ ವಂಶಾನೇ ತೊಡೆದುಹೋಗೋದು..."

"ಅಪ್ನೋರ ಪೂಜೆ ಮಾಡೋದು ಅಷ್ಟು ಅಪಾಯದ ಕೆಲಸಾನೇ?'

"ಮತ್ತೇನು ಮಕ್ಕಳಾಟ ಅಂದ್ಕೊಂಡ್ಯಾ……ಹೋಗು……ಹೋಗು ...ಮೊದಲು ದೇವರಿಗೊಂದು ತುಪ್ಪದ ದೀಪ ಹಚ್ಚಿಡು."

—ಎಂದು, ಮೂರು ಲೋಕವನ್ನೇ ಗೆದ್ದು ಬಂದವನಂತೆ ಹೆಂಡತಿಗೆ ಅಪ್ಪಣೆ ಮಾಡಿದರು ಅಚ್ಚಣ್ಣಭಟ್ಟರು.

# ೨

ದೇವಿಕೆರೆಯಲ್ಲೆಲ್ಲಾ ಗುಲ್ಲೋಗುಲ್ಲಾಗಿ ಹೋಯಿತು?

ಯಾರ ಬಾಯಲ್ಲಿ ಕೇಳಿದರೂ ಅದೇ ಮಾತು. ಎಲ್ಲಿ ಹೋದರೂ ಅದೇ ಸುದ್ದಿ—

"ಈ ವರ್ಷ ಜಾತ್ರೆಯ ಮೊದಲ ದಿನದ ಅಮ್ಮನವರ ಪೂಜೆಯನ್ನು ವೆಂಕಟದಾಸಪ್ಪನವರು ಮಾಡುವುದಿಲ್ಲ; ಅಚ್ಚಣ್ಣಭಟ್ಟರು ಮಾಡುತ್ತಾರೆ."

ಬಹು ಪವಿತ್ರವಾದ ಜಾತ್ರೆಗೆಂದು, ಸಡಗರದಿಂದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದ ದೇವೀಕೆರೆಯ ಗ್ರಾಮಸ್ಥರಿಗೆ, ಈ ಸುದ್ದಿ ತಿಳಿದಾಗ, ಏಕೋ ಅವರ ತೋಳಲ್ಲಿದ್ದ ಉತ್ಸಾಹವೇ ಉಡುಗಿ ಹೋದಂತಾಯಿತು. ಮುಖದಲ್ಲಿದ್ದ ಖಳೆ ಅರ್ಧಕ್ಕರ್ಧ ಇಳಿದು ಹೋಯಿತು.

ಎಲ್ಲರ ಬಾಯಲ್ಲೂ ಒಂದೇ ಮಾತು—

"ನರಸಪ್ಪನೋರ ಮಕ್ಕಳು ಅಮ್ನೋರ ಪೂಜೆ ಮಾಡೋಲ್ಲ."

ಆವರೆ ಹಳ್ಳಿಯ ಬಹುಜನಕ್ಕೆ ಈ ಅನಿರೀಕ್ಷಿತ, ಆಕಸ್ಮಿಕ ಬದಲಾವಣೆಗೆ ನಿಜವಾದ ಕಾರಣ ಏನೆಂಬುದು ತಿಳಿದಿರಲಿಲ್ಲ.

ಎಲ್ಲರಿಗೂ ತಿಳಿದಿದ್ದುದಿಷ್ಟು—

ಶಾನುಭೋಗ ಶ್ರೀನಿವಾಸರಾಯರ ಮನೆಯಲ್ಲಿ ಗ್ರಾಮದ ಮುಖಂಡರೆಲ್ಲರ ರಹಸ್ಯ ಸಭೆ ಸೇರಿತ್ತು. ಆ ಸಭೆಗೆ ವೆಂಕಟದಾಸಪ್ಪನವರೂ ಹೋಗಿದ್ದರು. ಅಲ್ಲಿ ಏನು ನಡೆಯಿತೋ, ಏನೇನು ಮಾತುಗಳಾದವೋ— ಅಂತೂ ಬಹಳ ಹೊತ್ತು ನಡೆದ ಆ ಸಭೆಯಲ್ಲಿ, ಈ ವರ್ಷದಿಂದ ಜಾತ್ರೆಯ ಮೊದಲ ದಿನದ 'ಕಟ್ಟಿನ ಪೂಜೆ' ಯನ್ನು ಅಚ್ಚಣ್ಣಭಟ್ಟರು ಮಾಡುವುದು ಎಂದು ತೀರ್ಮಾನವಾಯಿತು.

ಆ ಸಭೆ ಮುಗಿಸಿಕೊಂಡು, ಶಾನುಭೋಗರ ಮನೆಯಿಂದ ಹೊರಬಂದ ಗ್ರಾಮದ ಮುಖ್ಯಸ್ಥರ ಯಾರ ಮುಖದಲ್ಲೂ ಕಾಂತಿ ಇರಲಿಲ್ಲ. ಎಲ್ಲರ ಮುಖಗಳೂ ನಿಸ್ತೇಜವಾಗಿ, ವಿವರ್ಣವಾಗಿ ಬಿಗಿದುಕೊಂಡಿದ್ದವು.

ಅಷ್ಟಿಷ್ಟು ಗೆಲುವಿದ್ದುದು ಅಚ್ಚಣ್ಣಭಟ್ಟರೊಬ್ಬರ ಮುಖದ ಮೇಲೆ ಮಾತ್ರ.

ವೆಂಕಟದಾಸಪ್ಪನವರ ಮುಖ– ಊಹೂಂ ಆ ಮುಖದಲ್ಲಿ ಏನು ಭಾವವಿತ್ತೆಂದೂ ಯಾರೂ ಹೇಳುವುದು ಸಾಧ್ಯವಾಗಲಿಲ್ಲ.

ಶಾನುಭೋಗರ ಮನೆಯಿಂದ ಹೊರಬಿದ್ದ ವೆಂಕಟದಾಸಪ್ಪನವರು, ಮನೆಯ ಮುಂದೆ ಕಲೆತಿದ್ದ ಜನರ ಕಡೆ ತಲೆ ಎತ್ತಿ ಕೂಡಾ ನೋಡದೆ. ತಲೆ ತಗ್ಗಿಸಿ. ತಮ್ಮ ಮನೆಯ ಕಡೆ ಹೊರಟುಹೋಗಿದ್ದರು.

ಮಧ್ಯಾಹ್ನ ಊಟದ ವೇಳೆಗಾದ ಈ ತೀರ್ಮಾನ ಅಪರಾಹ್ನದ ವೇಳೆಗೆ ಗ್ರಾಮದಲ್ಲೆಲ್ಲಾ ಹಬ್ಬಿ, ಈ ತೀರ್ಮಾನಕ್ಕೆ ಸಂಬಂಧಿಸಿದ ಗ್ರಾಮದ ಹಿರಿಯರಂ ಒಬ್ಬೊಬ್ಬರ ಮನೆಯ ಮುಂದೂ ರೈತರ ಗುಂಪು ಕಲೆಯಿತು.

ಗ್ರಾಮದಲ್ಲಿದ್ದ ಒಂದೊಂದು ಕೋಮಿನವರೂ, ಬೆಳಗಿನ ಸಭೆಗೆ ಹೋಗಿದ್ದ ತಮ್ಮ ಕುಲದ ಹಿರಿಯರನ್ನು ಕಂಡು ಈ ತೀರ್ಮಾನಕ್ಕೆ ಕಾರಣವೇನೆಂದು ವಿಚಾರಿಸಿದರು.

ಯಾರನ್ನು ವಿಚಾರಿಸಿದರೂ, ಹೇಳಿದಂದು ಇಷ್ಟೇ—

"ಪಾಮೂಲು ತಪ್ಪಿಸಲಿಕ್ಕೆ ನಮಗ್ಯಾರಿಗೂ ಇಷ್ಟ ಇರಲಿಲ್ಲ. ಆದರೆ ದಾಸಣ್ಣ ಬುದ್ಧಿ ಯಾಕೋ– 'ಇದು ನನಗೆ ಬ್ಯಾಡಾಂದ್ರು,' ನಾವು ಹೇಳೋ ಅಷ್ಟೇಲ್ಲಾ ಹೇಳಿದ್ವಿ. ಆದರೆ ಬುದ್ಧಿಯೋರು ತಮ್ಮ ಮಾತು ಬದಲಾಯಿ ಸಲಿಲ್ಲ. ಕೊನೆಗೆ ನಾವೂ ಬ್ಯಾರೆ ದಾರಿ ಕಾಣದೆ– ಒಬ್ಬರಿಗೋಸ್ಕರ ಗ್ರಾಮದೇವತೆ ಜಾತ್ರೆ ನಿಲ್ಲೋದು ಯಾಕೇಂತ ಒಪ್ಪಿಗೊಂಡ್ವಿ. ಎಂಗಾಗ್ತದೋ– 'ಆಕೆ ಇಷ್ಟ ಇದ್ದಂಗಾಗ್ಲಿ.''

"ಅದ್ಯಾಕೆ ದಾಸಣ್ಣನೋರು ಬ್ಯಾಡಾಂದ್ರು? ಅವರ ಮನೆತನಕ್ಕೆ ನಡಕೊಂಡು ಬಂದದ್ದನ್ನ ಬ್ಯಾಡ್ಯಾನ್ನೋಕೆ ಏನು ಕಾರಣ ಆಯ್ತು?"

—ಎಲ್ಲರ ಬಾಯಿಂದಲೂ ಕೇಳಿ ಬಂದ ಈ ಪ್ರಶ್ನೆಗೆ ಮಾತ್ರ ಉತ್ತರ ಹೇಳಲು ಯಾರೂ ತಯಾರಿರಲಿಲ್ಲ.

"ಯಾಕೆ, ಏನು ಅಂತ ಕಟ್ಕೊಂಡು ಏನಾಗೋದದೆ– ಅವರು, ಬ್ಯಾಡಾಂದ್ರು ಅಷ್ಟು ಮುಖ್ಯ''

ಆದರೆ ರೈತರ ಕಾತರಪೂರ್ಣವಾದ ಕುತೂಹಲ ಇಂಥ 'ಅಡ್ಡಗೋಡೆ ದೀಪ'ದ ಹಾರಿಕೆ ಉತ್ತರಗಳಿಂದ ಸಮಾಧಾನವಾಗಲಿಲ್ಲ. ತಮ್ಮ ಪ್ರಶ್ನೆಗೆ ಖಚಿತವಾದ ಉತ್ತರ ಹೇಳುವ ಸ್ಥಿತಿಯಲ್ಲಿದ್ದವರು ಯಾರು ಉತ್ತರ ಕೊಡ

ದಿದ್ದಾಗ, ಜನ ತಮ್ಮ ಸಂದೇಹಕ್ಕೆ ತಾವೇ, ತಮಗೆ ಸರಿ ಕಂಡ ಉತ್ತರ ಕಲ್ಪಿಸಿಕೊಳ್ಳಲಾರಂಭಿಸಿದರು.

ಕೆಲವರು—

"ದೊಡ್ಡಬುದ್ಧಿಯೋರು ಹೋದ ವರ್ಷ. ಅದಕ್ಕೇ ಬ್ಯಾಡಾಂದ್ರು."

—ಎಂದರೆ. ಮತ್ತೆ ಕೆಲವರು—

"ಚಿಕ್ಕಬುದ್ಧಿಯೋರಿಗೆ ಪೂಜೆ ಪಾಟ ಆಗಿಲ್ಲಂತೆ. ಅದಕ್ಕೆ ಬ್ಯಾಡಾಂದ್ರಂತೆ."

—ಎಂದರು.

ಆದರೆ ಆ ಬಗೆಯ ಸರಳವಾದ ಸಮಾಧಾನವನ್ನುಕಲ್ಪಿಸಿಕೊಂಡವರ ಸಂಖ್ಯೆ ಬಹು ವಿರಳವಾಗಿತ್ತು. ಬಹುಭಾಗದ ಜನಕ್ಕೆ, ಯಾರೊಬ್ಬರೂ ಬಾಯಿಬಿಟ್ಟು ಹೇಳದಿದ್ದರೂ 'ವೆಂಕಟದಾಸಪ್ಪನವರು ಪೂಜಾಧಿಕಾರ ಬಿಟ್ಟು ಕೊಟ್ಟದ್ದಕ್ಕೂ, ಅವರು ಗೌರಮ್ಮನೊಂದಿಗೆ ಸಖ್ಯ ಬೆಳೆಸಿದುದಕ್ಕೂ ಏನೋ ಸಂಬಂಧವಿದೆ' ಎಂದೇ ತಿಳಿದಿತ್ತು.

ಗ್ರಾಮದ ಮುಖಂಡರು ಈ ತೀರ್ಮಾನ ಮಾಡುವ ಮೊದಲೇ ಹಳ್ಳಿಯಲ್ಲಿ ಒಬ್ಬಿಬ್ಬರು—

"ನಾಯಕರೋಳ್ನ ಮಡಗಿಕೊಂಡೋರು, ಅವ್ರೋರ್ನ ಹೆಂಗೆ ಮುಟ್ಟಿ ಪೂಜೆ ಮಾಡ್ತಾರೆ? ಅಂಥೋರು ಮಾಡಿದ್ರೆ ಅವ್ರೋರ ದೇವಸ್ಥಾನಾನೇ ಅಪವಿತ್ರ ಆಗೋಕಿಲ್ವಾ?"

—ಎಂದು ಸಂದೇಹ ವ್ಯಕ್ತಪಡಿಸಿದ್ದರು.

"ಗ್ರಾಮದೇವತೆ ಪೂಜೆ ಮಾಡೋರು ಇಂಥ ಅನಾಚಾರ ಮಾಡಬಾರದು".

—ಎಂದು ಅಸಮಾಧಾನವನ್ನು ವ್ಯಕ್ತಪಡಿಸಿದ್ದರು.

ಆದರೆ ಆ ಕಾರಣಕ್ಕಾಗಿ ಪರಂಪರಾಗತವಾಗಿ ಬಂದ ಪೂಜಾಧಿಕಾರವನ್ನು ವೆಂಕಟದಾಸಪ್ಪನವರಿಂದ ಕಿತ್ತುಕೊಳ್ಳುವ ಧೈರ್ಯವಾಗಲಿ, ಬಯಕೆಯಾಗಲಿ ಯಾರೊಬ್ಬರಿಗೂ ಇರಲಿಲ್ಲ.

ಅಷ್ಟೇಕೆ—ವೆಂಕಟದಾಸಪ್ಪ, ಗೌರಮ್ಮನವರ ಪ್ರಣಯ ವಿಚಾರ ಮೊದಲು ಬಹಿರಂಗವಾದಾಗ—

"ಬುದ್ಧೋರು ಹಿಂಗ್ಮಾಡಬಾರದಾಗಿತ್ತು. ಅಂಥೋರು ಮಾಡೋ ಬದುಕಲ್ಲ ಇದು. ಅವರೇ ಹಿಂಗ್ಮಾಡಿದ್ರೆ ಸಣ್ಣಪುಟ್ಟ ಜನಕ್ಕೆ ಬುದ್ಧಿ ಹೇಳೋರು ಯಾರು?"

—ಎಂದು ಅಸಮಾಧಾನ ವ್ಯಕ್ತಪಡಿಸಿದರೂ, ಸಾಕಷ್ಟು `ಕಾಲ ಕಳೆದ ಮೇಲೆ

"ಏನು ಲೋಕದಾಗೆ ಯಾರೂ ಮಾಡಬಾರದ್ದು ಮಾಡವ್ರಾ? ಹಿಂಗಾಗ ಬೇಕು ಅಂತ ಅವರಣೇಲಿ ಬರೆದಿತ್ತು–ಆಗೋಯ್ತು. ಗೊಲ್ಲತೀರ ಸ್ನೇಹ ಮಾಡ್ದಾಂತ ಕೃಷ್ಣದೇವರ ಮಹಿಮೆಗೇ ಕುಂದು ಬಂತಾ? ಅಹಲ್ಯೆತವ ಹೋದಾಂತ, ಇಂದ್ರನ್ನ ಸ್ವರ್ಗಬಿಟ್ಟು ಓಡಿಸಿದ್ರಾ? ಅಂಗೇ ಬುದ್ಧೋರ್ರೂ ಅವರೇನೂ ಕೆಡಲಿಲ್ಲ. ಗೌರವ್ವ ಯಾವ ಜನುಮದಾಗೆ ಏನು ಪೂಜೆ ಮಾಡಿ ಈ ವರ ಕೇಳಿಕೊಂಡು ಬಂದಿದ್ಲೋ, ಆಯ್ನೋರಂಥೋರ ಸ್ನೇಹ ಆಯ್ತು.

—ಎಂದು ಒಂದು ರೀತಿಯಲ್ಲಿ ಸಮಾಧಾನ ಪಟ್ಕೊಂಡಿದ್ದರು.

ಈ ಕೃತ್ಯಕ್ಕಾಗಿ ವೆಂಕಟದಾಸಪ್ಪನವರನ್ನು ತೆಗಳುವವರು ಇದ್ದ ಹಾಗೇ, ಹಳ್ಳಿಯಲ್ಲಿ—

"ನೀವೇನಾರ ಅನ್ನಿ— ದಾಸಣ್ಣನೋರು ಮಾಡಿದ್ದು ಪಾಪದ ಅಲ್ಲ. ಮಾಡೋದು ರಾಜಾರೋಷಾಗಿ ಮಾಡಿದ್ರು. ಹೆಂಡತಿಹಂಗೆ ನಡೆಸ್ಕೊಂಡು ಹೋಗ್ತಿದ್ದಾರ. ಆ ನಿಯತ್ತು ಎಷ್ಟು ಜನಕ್ಕಿರುತ್ತೆ. ಕತ್ತಲು ಹೊತ್ತಿನಲ್ಲಿ, ಕಂಬಳಿ ಮುಸುಕು ಹಾಕಿಕೊಂಡು ದಿನಕ್ಕೊಬ್ಬಳತವ ಹೋಗೋ ಲುಚ್ಚಾಗಿರಿ ಅಲ್ಲ ಅವರು ಮಾಡಿದ್ದು. ಇವರನ್ನು ಹಡೆದೋರು, ಆಕೆ ಕೈಹಿಡಿದೋರೂ ಒಪ್ಪಿ ಕೊಳ್ಳೋಹಂಗೆ ವಿಶ್ವಾಸಮಾಡಿದ್ರು."

—ಎಂದು ಮೆಚ್ಚಿಕೊಳ್ಳುವವರೂ ಇಲ್ಲದಿರಲಿಲ್ಲ.

ಈ ಭಾವ ವೈವಿಧ್ಯಕ್ಕಿಂತ ಹೆಚ್ಚಾಗಿ, ಹಳ್ಳಿಯವರಿಗೆ ವೆಂಕಟದಾಸಪ್ಪ ನವರ ವಂಶದಲ್ಲಿದ್ದ 'ನಮ್ಮಳ್ಳಿಗೆ ಅಪ್ನೋರ್ನ ಕರಕೊಂಡು ಬಂದವ್ರು' ಎಂಬ ಭಯಮಿಶ್ರಿತ ಅಪಾರ ಗೌರವ, ಈ ವಿಷಯವನ್ನು ಮರೆತು, ವೆಂಕಟದಾಸಪ್ಪ ನವರ ವಿಷಯದಲ್ಲೂ ಗೌರವವನ್ನೇ ಇಟ್ಟುಕೊಳ್ಳುವಂತೆ ಮಾಡಿತ್ತು.

ಎಂತಲೇ ಗ್ರಾಮದೊಳಗೆ ಅಚ್ಚಣ್ಣಭಟ್ಟರು, ವೆಂಕಟದಾಸಪ್ಪನವರ ವಿಷಯದಲ್ಲಿ ಹಬ್ಬಿಸಲು ಯತ್ನಿಸಿದ ವಿಷಬಳ್ಳಿಯ ಬೀಜ ಅಷ್ಟಾಗಿ ನಾಟಿರಲಿಲ್ಲ.

ಅದಕ್ಕಿಂತ ಹೆಚ್ಚಾಗಿ, ವೆಂಕಟದಾಸಪ್ಪನವರ ವಿಷಯದಲ್ಲಿ, ಸಂದೇಹಾತೀತವಾದ, ಅಭೇದ್ಯವಾದ ಪ್ರೇಮವನ್ನಿಟ್ಟುಕೊಂಡ ಜನ, ವೆಂಕಟದಾಸಪ್ಪನವರ ವಿಷಯದಲ್ಲಿ 'ಅಡ್ಡ ಸುದ್ದಿ' ಹಬ್ಬಿಸಲು ಯತ್ನಿಸಿದ ಅಜ್ಜಣ್ಣಭಟ್ಟರ ವಿಷಯವಲ್ಲೇ ಸಿಡಿಮಿಡಿಗೊಂಡಿತ್ತು.

ಅಂಥ ಅಭಿಮಾನಿಗಳಲ್ಲಿ ಅಗ್ರಪಂಕ್ತಿಗೆ ಸೇರಿದ್ದು– ಹಳ್ಳಿಯ ನಾಟಕದ ಗುಂಪು.

ದೇವೀಕೆರೆಯವರಿಗೆ ಅಪಮಾನವಾಡಲೆತ್ನಿಸಿದ ಕೋಡೀಹಳ್ಳಿಯವರಿಗೆ ಬುದ್ಧಿ ಕಲಿಸಲು ವೆಂಕಟದಾಸಪ್ಪನವರು ಸ್ವತಹ ನಾಟಕವನ್ನು ಬರೆದು, ಆಡಿಸಿದ ಬಳಿಕ, ಆ ಗುಂಪಿನ ದೃಷ್ಟಿಯಲ್ಲಿ ವೆಂಕಟದಾಸಪ್ಪ 'ಸಾಕ್ಷಾತ್ ಸರಸ್ವತಿ'ಯ ಅವತಾರ ಆಗಿದ್ದರು. ದೇವಿ ವೆಂಕಟದಾಸಪ್ಪನವರಿಗೆ ಸಂಪೂರ್ಣವಾಗಿ ಒಲಿದಿದ್ದಾಳೆ ಎಂಬ ನಂಬಿಕೆ ಅವರಲ್ಲಿ ಮೂಡಿತ್ತು. ಹಳ್ಳಿಯ ಕೀರ್ತಿ ಮಸುಳದಂತೆ ಕಾಪಾಡಿದ ವೆಂಕಟದಾಸಪ್ಪ ತಮ್ಮ ಹಳ್ಳಿಯ ಕೀರ್ತಿ ಕಲಶವೆಂದೇ ಭಾವಿಸಿದ್ದರು.

ಅವರ ಅಭಿಮಾನ ತುಂಬಿದ ಕಣ್ಣುಗಳಿಗೆ, ಇತರರಿಗೆ ಮಹಾಪರಾಧವಂತೆ ಕಂಡ ಗೌರಮ್ಮನ ಪ್ರಣಯ ಪ್ರಸಂಗ ಅತ್ಯಲ್ಪ ವಸ್ತುವಿನಂತೆ ಕಂಡಿತ್ತು.

ಆ ಗುಂಪಿಗೆ ನಾಟಕ ಕಲಿಸುವ ಅಯ್ಯ—

"ಹೆಂಗಸು ಕಾಣ್ದೋರಿಗೆ ನಾಟಕ ವಿದ್ಯೆ ಒಲಿಯಾಕಿಲ್ಲ. ಸಂಸ್ಕೃತದಾಗೆ 'ಶಕುಂತಲಾ' ನಾಟಕ ಬರೆದ ಕಾಳಿದಾಸ ಕವಿ ಮೂರೊತ್ತೂ ಹೆಣ್ಣಿನ ತೊಡೆಮ್ಯಾಲೇ ಇರ್ತಿದ್ನಂತೆ. ಅಂಥಾದ್ರಾಗೆ ದಾಸಣ್ಣನೋರು ಮಾಡಿದ್ದು ಏನು ಮಹಾ."

—ಎಂದೇ ವಾದಿಸಿದ್ದ.

ಆ ಗುಂಪಿನ ಜನಕ್ಕೆಲ್ಲಾ ಅವನ ವಾದ ಸರಿ ಎನಿಸಿತ್ತು.

ಎಂತಲೇ ಹಳ್ಳಿಯಲ್ಲಿ ಬೇರೆಯವರು ವೆಂಕಟದಾಸಪ್ಪನವರ ವಿಷಯದಲ್ಲಿ ಲಘುವಾಗಿ ಮಾತಾಡಿದಾಗ, ಬರೀ 'ಪಡ್ಡೇ ಹುಡುಗ'ರೇ ತುಂಬಿದ್ದ ಈ ಗುಂಪು—

"ಬಾಯಾಗಿರೋ ಹಲ್ಲು ಬಾಯಾಗೇ ಇರಬೇಕೂಂತ ಆಸೆ ಇದ್ರೆ, ನಾಲ್ಗೇನ ಹರೀ ಬಿಡ್ದಂಗೆ ಇಟ್ಕೋಬೇಕು".

—ಎಂದು ಬೆದರಿಸಿತ್ತು.

ಅಚ್ಚಣ್ಣಭಟ್ಟರು, 'ಕುಂಟ ಮಾತು' ಆಡುತ್ತಾರೆ ಎಂದು ಕೇಳಿದಾಗ—

“ಭಟ್ಟರಿಗೆ, ವೆಂಕಟಗಿರಿಯಪ್ಪನೋರ ಹತ್ರ ಹೋಗಿ ಜಾತಕ ತೋರಿಸ್ಕೊಂಡು ಬರೋಕೆ ಹೇಳಿ—ಕೈಕಾಲು ಗಟ್ಟಿಯಾಗಿಟ್ಟುಕೊಂಡು ಬದುಕೋ ಯೋಗ ಇದ್ದಂಗಿಲ್ಲ ಭಟ್ಟರಿಗೆ.”

—ಎಂದು ಸವಾಲು ಕಳಿಸಿತ್ತು.

ಆ ಅಭಿಮಾನಿಗಳ ಗುಂಪಿಗೆ, ಶಾನುಭೋಗರ ಮನೆಯಲ್ಲಾದ ತೀರ್ಮಾನದ ಸುದ್ದಿ ಕೇಳಿ ಸಿಡಿಲು ಬಡಿದ ಹಾಗಾಯಿತು.

೩

ದೇವಿಕೆರೆಯ ನಾಟಕ ಮಂಡಲಿಯವರ ನಾಟಕಾಭ್ಯಾಸಕ್ಕೆ, ಆ ವರ್ಷ, ಹಿಂದೆಂದೂ ಇಲ್ಲದಷ್ಟು 'ರಂಗು' ಬಂದಿತ್ತು.

ಪ್ರತಿ ವರ್ಷದಂತೆಯೇ, ಆ ವರ್ಷವೂ ಜಾತ್ರೆಗೆ ಇನ್ನು ಎರಡು ತಿಂಗಳು ಇದೆ ಎನ್ನುವಾಗಲೇ , ಆಟ ಯಾವುದೆಂದು ಇತ್ಯರ್ಥವಾಗಿತ್ತು.

ಆ ವರ್ಷ ಇವರು ಆಟ ಇತ್ಯರ್ಥವಾಗುವ ವೇಳೆಗೆ, ಆ ಗುಂಪಿನ ಜೀವ ಜೀವಾಳವಾದ ವೆಂಕಟದಾಸಪ್ಪನವರ ಲಗ್ನವೂ ನಿಶ್ಚಯವಾಗಿತ್ತು.

ಎಂತಲೇ ಆ ವರ್ಷ ಯಾವ ಆಟ ತೆಗೆದುಕೊಳ್ಳಬೇಕು ಎಂಬ ಮಾತು ಚರ್ಚೆಗೆ ಬಂದಾಗ, ಅಯ್ಯ—

"ಎಂಗೂ ಈ ಸಲ ಜಾತ್ರೆ ಹೊತ್ಗೆ ದಾಸಣ್ಣನೋರಿಗೂ ಕಲ್ಯಾಣ ಆಗಿರ್ತದೆ, ಅದಕ್ಕೇ ನಾವೂ ಯಾವ್ದಾರ ಕಲ್ಯಾಣಾನೇ ಆಡೋಣ. ಪಸಂದಾಗಿರುತ್ತದೆ."

—ಎಂದು ಸಲಹೆ ಮಾಡಿದ್ದ.

ಅದನ್ನು ಕೇಳಿ ವೆಂಕಟದಾಸಪ್ಪನವರ ಮುಖ ಕೆಂಪೇರಿದ್ದರೂ, ಮಂಡಲಿಯ ಉಳಿದ ಗೆಳೆಯರು ಆ ಸಲಹೆಯನ್ನು ಉತ್ಸಾಹದಿಂದ ಸ್ವಾಗತಿಸಿದ್ದರು.

ಆ ಬಳಿಕ ಗುಂಪಿನವರು ವಿವಾಹದಲ್ಲಿ ಮುಕ್ತಾಯವಾಗುತ್ತಿದ್ದ 'ಕನಕಾಂಗಿ ಕಲ್ಯಾಣ', 'ಉಷಾ ಪರಿಣಯ', 'ಶಶಿರೇಖಾ ಪರಿಣಯ' 'ರುಕ್ಮಿಣಿ ಹರಣ' 'ದಮಯಂತಿ' 'ಸ್ವಯಂವರ' ಸೀತಾ ಕಲ್ಯಾಣ'—ಹಲವಾರು ನಾಟಕಗಳಲ್ಲ ಯಾವುದನ್ನು ಅಭ್ಯಾಸಕ್ಕೆ ತೆಗೆದುಕೊಳ್ಳುವುದೆಂದು ಚರ್ಚಿಸಿದರು.

ಆದರೆ ಒಬ್ಬೊಬ್ಬರಿಗೆ ಒಂದೊಂದು ಹಿಡಿಸಲಿಲ್ಲ. ಎಲ್ಲರೂ 'ಅದು' 'ಇದು' ಎಂದು ಚರ್ಚಿಸುತ್ತಿದ್ದಾಗ ಅಯ್ಯ—

"ಅದ್ಯಾವ್ದೂ ಬ್ಯಾಡ ಕಣ್ರಲೇ— ಸುಮ್ಕೆ 'ಗಿರಿಜಾ ಕಲ್ಯಾಣ' ಮಾಡಾಣ. ಏನು ದಾಸಣ್ಣ. ಅಗ್ಬೋದಾ? ನೀನೇನೇಳ್ತಿ?":

—ಎಂದು ಕೇಳಿದ್ದ, ವೆಂಕಟದಾಸಪ್ಪನವರತ್ತ ನೋಡಿ ಅರ್ಥಗರ್ಭಿತ ವಾದ ನಗೆ ನಕ್ಕ.

ಬಾಯಲ್ಲಿ 'ಗಿರಿಜೆ' ಎಂದರೂ ಮನಸ್ಸಿನಲ್ಲಿ 'ಗೌರಿ' ಎಂದೇ ಹೇಳಿದ ಅಯ್ಯನ ಮಾತಿನ ಅರ್ಥ ವೆಂಕಟದಾಸಪ್ಪನವರಿಗೂ ಅರಿವಾಯಿತು. ಆದರೆ ಅಯ್ಯನದು ಅಪಾರ್ಥವಿಲ್ಲದ ಹಾಸ್ಯ ಎಂಬುದು ತಿಳಿದಿದ್ದುದರಿಂದ ಅವರೂ ನಕ್ಕು—

"ಯಾಪದಾದರೂ ಆಡಿಕೊಳ್ಳಿ, ನನಗೇನು— ಆಡ್ಕೋರುಂಟು ಆಡ್ನೋರುಂಟು"

—ಎಂದು ಹೇಳಿದ್ದರು.

ಮಂಡಲಿಯ ಉಳಿದವರಿಗೂ ಅಯ್ಯನ ಮನೋಭಾವ ಅರ್ಥವಾದುದ ರಿಂದ, ಅವರೂ ಉತ್ಸಾಹದಿಂದ ಸಲಹೆಗೆ ಒಪ್ಪಿಗೆ ಇತ್ತಿದ್ದರು.

ಆ ತೀರ್ಮಾನವಾದ ಮರುದಿನದಿಂದಲೇ ನಾಟಕಾಭ್ಯಾಸ ಆರಂಭ ವಾಗಿತ್ತು.

ನಾಟಕಾಭ್ಯಾಸ ಒಂದು ಹದಕ್ಕೆ ಬರುವ ಹೊತ್ತಿನಲ್ಲೇ, ಗುಂಪಿನವ ರೆಲ್ಲರೂ ವೆಂಕಟದಾಸಪ್ಪನವರ ಮದುವೆಗೆ ಪರಶುರಾಮಪುರಕ್ಕೆ ಹೋಗ ಬೇಕಾಗಿ ಬಂದುದರಿಂದ, ಮಧ್ಯೆ ಒಂದು ವಾರ ಕಾಲ ನಾಟಕಾಭ್ಯಾಸ ನಿಂತು ಹೋಗಿತ್ತು.

ಅದಾದ ಬಳಿಕ ನರಸಪ್ಪನವರ ಸಾವಿನಿಂದ ಒಂದೆರಡು ದಿನ ನಿಂತಿತ್ತು.

ಮಧ್ಯೆ ಮಧ್ಯೆ ಅಭ್ಯಾಸಕ್ಕೆ ಈ ವಿಘ್ನಗಳು ಬಂದದ್ದರಿಂದ, ಅಯ್ಯ ಜಾತ್ರೆ ಸಮೀಪಿಸಿದ ಹಾಗೆ ಚುರುಕು ಮಾಡಿದ್ದ. ನಾಟಕದಲ್ಲಿ ಪಾತ್ರವಹಿಸಲು ಒಪ್ಪಿ- ಕೊಂಡವರಿಗೆ 'ಮುದ್ದೆ ಮುಟ್ಟಲು' ಕೂಡಾ ಮನೆಗೆ ಬಿಡದೆ ಆರೆಯುತೊಡಗಿದ್ದ.

ಹಗಲಿರುಳೂ 'ತುರಿಸಿಕೊಳ್ಳುವುದಕ್ಕೂ' ಪುರುಸೊತ್ತಿಲ್ಲದಂತೆ ಅಭ್ಯಾಸ ನಡೆದಿತ್ತು.

ಪಾತ್ರಧಾರಿಗಳು, ಬೀಡಿ ಕುಡಿಯಲು ಹೊರಗೆ ಹೋದರೂ, ಈ ಬಾರಿಯ ನಾಟಕವನ್ನು 'ನಭೂತೋ ನಭವಿಷ್ಯತಿ'ಯಾಗಿ ಮಾಡಬೇಕೆಂದು ಪಣತೊಟ್ಟ ಅಯ್ಯ ರುದ್ರಾವತಾರ ತಾಳುತ್ತಿದ್ದ. ಮುಖ್ಯ ಪಾತ್ರದಲ್ಲಿರಲಿ, ಹೆಚ್ಚು ಕೆಲಸ

ವಿಲ್ಲದ ಚಿಲ್ಲರೆ ಪಾತ್ರದವರೂ, ಕೆಲಸ ಇರಲಿ, ಬಿಡಲಿ, ತೂಕಡಿಸುತ್ತಾ ಅಲ್ಲೇ ಕುಳಿತಿರಬೇಕಾಗಿತ್ತು.

ಅಂಥಾದ್ದರಲ್ಲಿ, ಈ ದಿನ ಉಳಿದ ಎಲ್ಲರಿಗಿಂತಲೂ ಮುಖ್ಯವಾದ ಗಿರಿಜೆಯ ಪಾತ್ರ ಧರಿಸುತ್ತಿದ್ದ ಚೆಲುವಾಚಾರಿ, ಒಳ್ಳೆ 'ಐನಾತಿ' ಸಮಯದಲ್ಲೇ ಕೈಕೊಟ್ಟಿದ್ದ.

ರಾತ್ರಿ ಎಲ್ಲಾ ಅಭ್ಯಾಸಮಾಡಿ, ಹಗಲು ತಡವಾಗಿ ಎದ್ದು—

"ಮನೆತವ ಹೋಗಿ, ಹಗಲೂಟ ಉಂಡು ಗಡಾನೆ ಬಂದ್ಬಿಡ್ತೀನಿ."

—ಎಂದು ಹೇಳಿ ಹೋದವನು ಮಧ್ಯಾಹ್ನದ ಹೊತ್ತಾದರೂ ಬಂದಿರಲಿಲ್ಲ.

"ಆ ಬಡ್ಡೀ ಮಗನಿಗೆ ಗಂಟ್ಲಾಗೆ ಮುದ್ದೆ ಸಿಕ್ಕೊಂಡದೇನೋ ನೋಡಿ ಬಾರ್ಲಾ—ನೀನೂ ಹಂಗೇ ಹೋಗಿ ಬಿಡಬ್ಯಾಡ. ಏನ್ಮಾಡ್ತಿದಾನೋ ನೋಡ್ಕೊಂಡು ಜಟ್ನೆ ಬಂದ್ಬಿಡು"

—ಎಂದು ಎಚ್ಚರಿಕೆ ಹೇಳಿ ಕಳಿಸಿಕೊಟ್ಟ ನಕಲಿ ಪಾರ್ಟಿನ ಸಾಬ್ರುವೂ 'ಅಲ್ಲೇ ಹಾಳಾಗಿ ಹೋಗಿಬಿಟ್ಟು', ಅಯ್ಯ ಸಿಟ್ಟಿನಲ್ಲಿ ಪಾದರಸವಾಗಿ ಕುದಿಯುತ್ತಾ ಕುಳಿತಿದ್ದ.

ಕಾದು ಕಾದೂ ಸಾಕಾಗಿ, ಕಡೆಗೆ ಅಯ್ಯನೇ ಪಕ್ಕದಲ್ಲಿಟ್ಟು ಕೊಂಡಿರುತ್ತಿದ್ದ ತಂಗಟೆ ಬರಲು ಹಿಡಿದು ತನ್ನ ಶಿಷ್ಯನನ್ನು ಹುಡುಕಿಕೊಂಡು ಬರಬೇಕು ಎಂದಿದ್ದಾಗ, ಸಾಬ್ರು ಏಳು ಬೀಳುವುದನ್ನು ಕಾಣದೆ, ದೆವ್ವ ಅಟ್ಟಿಸಿಕೊಂಡು ಬಂದವನ ಹಾಗೆ—

"ಅಯ್ನೋರೇ......ಅಯ್ನೋರೇ......"

—ಎಂದು ಕೂಗಿಕೊಂಡು ಬಂದ.

"ಥೂ, ಪೋಕರಿ ಭಡವಾ—ಇಷ್ಟೊತ್ತು ಎಲ್ಲಿ ಹಾಳಾಗಿ ಹೋಗಿದ್ಯೋ? ಚೆಲುವ ಎಲ್ಲಿ ನೆಗದ್ಬಿದ್ದೋದ? ಹಿಂಗಾದ್ರೆ ನಾಟಕ ಆಡ್ದಂಗೇ ಆಯ್ತು"

—ಎಂದು ಅಬ್ಬರಿಸಿದ ಅಯ್ಯ.

"ಆಟಾನೂ ಬ್ಯಾಡ, ಆಟಮಾಟಾನೂ ಬ್ಯಾಡ. ಈ ವರ್ಸ ಆಡ್ದಂಗೇ ಆಯ್ತು. ಪೆಟ್ಗೆ ಎತ್ತಿಟ್ಬುಡಿ."

—ಎಂದ ಸಾಬ್ಜಾನ್.

" 'ಶುಭ ನುಡಿಯೋ ಹಾರುವಯ್ಯ ಅಂದ್ರೆ ಮದುವಣಗಿತ್ತಿ ಮಂಂಡೇನ ಹಸೇಗೆ ಕರಿ' ಅಂದ ಹಾಗೆ ಮಾತಾಡ್ತೀಯಾ ದನವೇ.''

—ಅಂದ ಅಯ್ಯ ರೇಗುತ್ತಾ.

"ಖುದಾಕೆ ಖಸಂ ಅಯ್ಯಾ— ಈ ವರ್ಸ ಆಟ ಆಗಾಕಿಲ್ಲ, ನಾನಂ ತಮಾಸೆ ಮಾಡ್ತಾ ಇಲ್ಲ.''

"ಯಾಕೆ?''

"ದಾಸಣ್ಣ ಬುದ್ಯೋರಂ ಅಮ್ನೋರ ಪೂಜೆ ಮಾಡೋದಂ ಬಿಟ್ಬಿಟ್ರಂತೆ. ಮತ್ಯಾಕೆ ನಾವು ಆಟ ಆಡಿ ಮುಂಡಮೋಚಿಕೊಳ್ಳೋದಂ'.

—ಕಹಿಯಾಗಿ ಹೇಳಿದ ಸಾಬ್ಜಿ.

"ಏನೋ ಹಂಗಂದ್ರೆ......ಸರಿಯಾಗಿ, ಅರ್ಥವಾಗೋ ಹಾಗೆ ಬೊಗಳೋ.''

—ಸಾಬ್ಜಿ ಹೇಳಿದುದನ್ನು ಕೇಳಿ ಅಯ್ಯ ತಬ್ಬಿಬ್ಬಲಾಗಿ ಕೇಳಿದ.

"ಕೊರಮ ಬಡ್ಡಿಮಗ ಅಯ್ನೋರೆ, ನಕಲಿ ಮಾಡ್ತವ್ನೆ. ನೀವೂ ಅವನ ಮಾತು ನಿಜಾಂತ ನಂಬ್ಕೋತೀರಲ್ಲ. ದಾಸಣ್ಣನೋರು ಅಮ್ಮನೋರ ಪೂಜೆ ಮಾಡ್ದೆ ಹೋದ್ರೆ, ಇನ್ನೇನು ಈ ಸಾಬಿ ಅಪ್ಪ ಕೊಲಿಮೆ ಖುದ್ದೂಸ್ ಮಾಡ್ತಾನಾ...''

—ಎಂದ ಬೋರಯ್ಯ ನಗುತ್ತಾ.

"ನಕಲಿ ಅಲ್ಲ ಬೋರಣ್ಣ. ಊರಿನ ಜನ ಎಲ್ಲಾ ಆಡ್ಕೋತಿದೆ. ಇವತ್ತು 'ಸಬೇರೇ' ಶಾನುಭೋಗರ ಮನೆಯಾಗೆ ಊರ ಯಂಜಮಾನ್ರೆಲ್ಲಾ ಸೇರಿದ್ರಂತೆ, ಇದೇ ಪಂಚಾಯ್ತಿ ಮಾಡೋಕೆ. ಅಲ್ಲಿ ದಾಸಣ್ಣ ಬುದ್ಯೋರೇ 'ಈ ವರ್ಸದಿಂದ ನಾನು ಪೂಜೆ ಮಾಡಾಕಿಲ್ಲಾ, ಅಚ್ಚಣ್ಣಭಟ್ರು ಮಾಡಲಿ' ಅಂತ ಅಂದ್ರಂತೆ. ಆಖೈರಿಗೇ ಅದೇ ಮಾತು ನಿಘಂಟಾಯ್ತಂತೆ. ಚೆಲುವಾಚಾರಿ ಅಪ್ನೂ ಅಲ್ಲೇ ಹೋಗಿದ್ನಂತೆ. ಅದ್ಕೆ ಏನಾಗ್ತದೋಂತ ಚೆಲುವ ಅವರಪ್ಪನ್ನೇ ಕಾದು ಕುಂತ್ಕೊಂಡಿದ್ದ. ಬೇಕಾದ್ರೆ ನೀನೂ ನೋಡೋಗು—ಶಾನುಭೋಗರ ಮನೆತವ ಹಳ್ಳಿಜನ ಜಮಾಯ್ಸಿದೆ.''

—ಎಂದ ಸಾಬ್ಜಿ.

ಆ ಮಾತು ಕೇಳಿ, ಆ ಮಾತು ಹೇಳುತ್ತಾ, ಬೆವರಿಳಿಯುತ್ತಿದ್ದ ಸಾಬ್ಜಿವಿನ

ಅಶಾಂತ ಮುಖವನ್ನು ಕಂಡು ಅಭ್ಯಾಸದ ಮನೆಯಲ್ಲಿದ್ದವರೆಲ್ಲರಿಗೂ, ಅವನು ಸತ್ಯವನ್ನೇ ಹೇಳುತ್ತಿದ್ದಾನೆಂದು ಮನವರಿಕೆಯಾಗಿ, ಹಾಗೇ ಸದ್ದಡಗಿ ಹೋಯಿತು.

"ಇವೆಲ್ಲಾ ಆ ಗೇಟೆ ಅಲ್ಲಾಡ್ಸೋ ಭಟ್ರಿಂದೇ ಕಿತಾಪತಿ."

—ಎಂದ, ಅಷ್ಟು ಹೊತ್ತು ಸುಮ್ಮನಿದ್ದ ಬೋರಯ್ಯ.

"ಹಂಗೇನ್ರಿಯಾ?"

—ಅಯ್ಯ ಕೇಳಿದ.

"ಹೂ—ಅವಯ್ಯಿಂದೇ ಇರಬೇಕು. ಬಾಳ ದಿನದಿಂದ ಆವಯ್ಯನಿಗೆ ಅವರ ಮ್ಯಾಲೆ ಕಣ್ಣಿತ್ತು. ಅಲ್ಲ ಇಲ್ಲಿ 'ನೀತಿ ನಿಯತ್ತಿಲ್ಲದೋರು ಅವ್ನೋರ ಪೂಜೆ ಮಾಡ್ತಾರೆ' ಅಂತ ಆಡ್ಕೊಂಡಿದ್ನಂತೆ...'

—ಓಬಯ್ಯ ಹೇಳಿದ.

"ಹೂಹೂ...ನಂಗೂ ಆ ಮಾತು ಕಿವಿಗೆ ಬಿದ್ದಿತ್ತು. ಆದರೆ ಊರು ಪಂಚಾಯ್ತಿ ಕರೆಯೋ ಅಷ್ಟು ದೂರ ಹೋಗ್ತಾರೇಂತ ಅಂದ್ಕೊಂಡಿರಲಿಲ್ಲ."

—ಅಯ್ಯ ಕಿಡಿಕಿಡಿಯಾಗಿ ಹೇಳಿದ.

"ಅಷ್ಟೇ ಅಲ್ಲ ಅಯ್ನೋರೇ—ನಮ್ಮೋಳು ಭಟ್ರ ಮನೆಗೆ ಹಿಟ್ಟು ಬೀಸಿಕೊಡಾಕೇಂತ ಹೋದಾಗ, ಭಟ್ರ ಹೆಂಡ್ತಿ 'ಮನೇಲಿ ಇಂಥಾ ಅನಾಚಾರ ಆದದ್ದಕ್ಕೆ, ಜಾತ್ರೆಗೆ ಮುಂಚೇನೇ ಅವ್ನೋರು ನರಸಪ್ಪನೋರ್ನ ಬಲಿ ತಗೊಂಡ್ರೂಂತ' ಅಂದಳಂತೆ..."

"ಆದೂ ಅಂದಿದ್ದಾಯ್ತಾ?"

—ಎಂದು ಬೋರಯ್ಯ—

"ಅಯ್ಯಾ—ನೆಪ್ಪಿದೆಯಿಲ್ವೋ 'ರಾಜಸೂಯ'ದ ಹಾಡು—

ಅರರೆ ಧರ್ಮಜ ಕೇಳಿವನ ಮಾತೆಗೆ
ನೂರು ತಪ್ಪನು ಮರೆತು ಪೊರೆವೆನು
ಬರಿದೆ ಚಿಂತಿಸಬೇಡೆಂದು ವರವನಿತ್ತೆನು ಕರುಣದಿಂದ।
ತೀರಿತಾ ಗಡುವಿಂದು ಖಳನಿವ
ಮೀರಿ ಸೊಕ್ಕಿದನಿವನ ತಲೆಯನು
ತರಿದು ತೆಗೆಯುವೆನೆಂದು ಮೇಲೆದ್ದನಸುರಾರಿ ಘುಡುಘುಡಿಸಿ॥'

—ಎಂದು ಹಾಡ್ಸ[illegible] ಕಣ್ಣುಗಳಿಂದ ಕಿಡಿಗಾರುತ್ತಾ ಮೇಲೆದ್ದ. ಅವನನ್ನು ಹಿಂಬಾಲಿಸಿ, ಅಭ್ಯಾಸದ ಮನೆಯಲ್ಲಿದ್ದವರೆಲ್ಲರೂ ಮೇಲೆದ್ದರು.

ಆ ಉರುಬಿನಲ್ಲೇ ಎಲ್ಲರೂ ಅಲ್ಲಿಂದ ಅಚ್ಚಣ್ಣಭಟ್ಟರೆ ಹೊರಟಿದ್ದರೆ, ಆ ದಿನ ಅಚ್ಚಣ್ಣಭಟ್ಟರ ಗತಿ ಏನಾಗುತ್ತಿತ್ತೋ ಏನೋ. ಆದರೆ ಬೋರಯ್ಯನ ಮಾತು ಕೇಳಿ ಉದ್ರಿಕ್ತನಾದ ಅಯ್ಯನಲ್ಲಿ, ಗುಂಪಿನ ಉದ್ರೇಕವನ್ನು ಕಂಡು ವಿವೇಚನೆ ಮೂಡಿತು. ಗುಂಪನ್ನು ತಡೆದ—

"ಹಂಗೆಲ್ಲಾ ದಬಾದುಬಿ ಮಾಡೋದು ಚೆಂದಾಗಿರೋಕಿಲ್ಲ. ಮೊದ್ಲೆ ಊರಾಗಿನ ಹಿರೇರು ನಾಟಕದ ಹೈಕಳದು ಶುದ್ಧ ಪೋಲಿಪಟಾಲಮ್ಮೂಂತ ಅನ್ನವರೆ—ನಾವೂ ಹಂಗೇ ಮಾಡೋದಲ್ಲ. ಮೊದ್ಲಿದೆಲ್ಲಾ ಏನಾಯ್ತು, ಯಾಕಾಯ್ತು ಅಂತ ದಾಸಣ್ಣನ್ನ ಕೇಳಿ ತಿಳಿಕೊಳ್ಳೋಣ. ಆ ಮೇಲೆ ಹೆಂಗಾದ್ರೆ ಹಂಗಾಗ್ಲಿ."

—ಎಂದು ಬುದ್ಧಿವಾದ ಹೇಳಿದ.

"ಬಿಡಿ ಅಯ್ನೋರೆ—ಬಕ್ರಾನ ಕೇಳಿ ಮಸಾಲೆ ಅರೀತಾರ? ಎಲ್ಲಾ ನಮಗೆ ಗೊತ್ತಿರೋದೇ. ಬೋರಣ್ಣ ಹೇಳಿದ್ದೇ ಸಚ್ಚೀಬಾತ್. ಬ್ಯಾಡಾಂದ್ರೆ ನೀವೆಲ್ಲಾ ಸುಮ್ಕಿದ್ದು ಬಿಡಿ. ನಾನೊಬ್ನೇ ಭಟ್ರಿಗೆ ಸಾಬಿ ಕೈ ತೋರಸ್ತೀನಿ. ಬ್ಯಾರೇರ್ನ ಅನ್ನೋದು ಭಾಳ ಸಸ್ತಾ ಆಗೋಗದೆ ಭಟ್ರಿಗೆ. ಜುಟ್ಟು ಜನಿವಾರ ಕಿತ್ತು ಕೈಗೆ ಕೊಟ್ಟು ಬರ್ತೀನಿ."

—ಎಂದ ಸಾಬ್ಜು.

"ಊಹೂ— ಅದೆಲ್ಲಾ ಆಗದ ಮಾತು. ಮೊದಲು ದಾಸಣ್ಣನ ಹತ್ತಿರ ಮಾತಾಡಿ, ನಿಜ ಏನು ಅಂತ ತಿಳ್ಕೊಳ್ಳೋದು. ಆಮೇಲೆ ಊರಾಗಿರೋ ದೊಡ್ಡೋರ್ನೂ ಒಂದು ಮಾತು ಕೇಳೋದು. ಆಮೇಲೆ ಇದ್ದೇ ಇದೆ—ನಮ್ಮ ಕೈ, ನಮ್ಮ ಬಾಯಿ."

—ಎಂದ ಅಯ್ಯ.

ಎಲ್ಲರೂ ಆ ಮಾತಿಗೆ ಕಟ್ಟು ಬಿದ್ದರು.

ಗುಂಪಿಗೆ ಗುಂಪೇ ವೆಂಕಟದಾಸಪ್ಪನವರ ಮನೆಯ ಕಡೆ ಹೊರಟಿತು.

## ೪

ಶಾನುಭೋಗರ ಮನೆಯಲ್ಲಾದ ತೀರ್ಮಾನದಿಂದ ಗ್ರಾಮದ ಹೃದಯ ದಲ್ಲಿ ಹೊತ್ತಿದ ಅಶಾಂತಿಯೇ, ಆ ತೀರ್ಮಾನಕ್ಕೆ ಮೂಲಭೂತ ಕಾರಣರಾದ ವೆಂಕಟದಾಸಪ್ಪನವರ ಹೃದಯದಲ್ಲೂ ಹೊತ್ತಿತ್ತು.

ರಾಜೇಶ್ವರಿಯಿಂದ, ಅಚ್ಚಣ್ಣಭಟ್ಟರು ತಮ್ಮ ವಿಷಯದಲ್ಲಿ ವ್ಯಕ್ತಪಡಿಸಿದ ಭಾವನೆಗಳನ್ನು ಕೇಳಿ ಅಶಾಂತವಾಗಿದ್ದ ವೆಂಕಟದಾಸಪ್ಪನವರು, ಆ ಅಶಾಂತಿ, ಉದ್ವೇಗ, ತಾವಾಗಿಯೇ ಪೂಜಾಧಿಕಾರವನ್ನು ಅಚ್ಚಣ್ಣಭಟ್ಟರಿಗೆ ಬಿಟ್ಟು ಕೊಟ್ಟರೆ, ಸ್ವಾರ್ಥಕ್ಕೆ ಇದಿರಾಗಿ ತ್ಯಾಗವನ್ನು ಹೂಡಿದರೆ ಶಾಂತವಾಗಬಹುದು ಎಂದುಕೊಂಡಿದ್ದರು. ಪಗಡೆಯಾಟದಿಂದ, ತಮ್ಮ ಬಾಳಿನಲ್ಲಿ ಗೌರವ ಇರಬೇಕೇ ಬಿಡಬೇಕೇ ಎಂಬುದು ವಿಧಿಯ ಇಚ್ಛಾನುಸಾರವಾಗಿ ಇತ್ಯರ್ಥವಾದ ಬಳಿಕ, ಅವರ ಆ ಭಾವನೆ ಮತ್ತಷ್ಟು ಬಲಗೊಂಡಿತ್ತು.

ಅವರು ನಿರೀಕ್ಷಿಸಿದುದೇ ಒಂದು—ಆವರೆ ಆದುದೇ ಬೇರೊಂದು.

ತಮ್ಮ ಬಾಳಿನಲ್ಲಿ ಅಮ್ಮನವರನ್ನು ವೆಂಕಟದಾಸಪ್ಪನವರು ಎಂದೂ ಪೂಜಿಸಿರಲಿಲ್ಲ; ಎಂದೂ ಆ ದೇವಾಲಯ, ಅಲ್ಲಿಯ ದೇವಿಯ ಪೂಜಾಧಿಕಾರ ತಮ್ಮದು ಎಂದು ಭಾವಿಸಿರಲಿಲ್ಲ.

ಆದರೂ ಅಲ್ಲಿಯ ಪೂಜಾಧಿಕಾರವನ್ನು ಅಚ್ಚಣ್ಣಭಟ್ಟರಿಗೆ ಒಪ್ಪಿಸಿ ಕೊಟ್ಟು ಬಂದ ಬಳಿಕ, ಅವರಿಗೆ, ಏಕೋ ತಮ್ಮ ಪಾಲಿನ ಜಗತ್ತೇ ಶೂನ್ಯ ವಾದಂತೆ ಭಾಸವಾಗಿತ್ತು.

ಜನಗಳಿಂದ ತುಂಬಿದ ಗ್ರಾಮ, ಅವರ ಪಾಲಿಗೆ ನಿಟ್ಟುಸಿರಿನಂಥ ಬಿಸಿ ಗಾಳಿ ಸುಯ್ಯುವ ಮರುಳುಗಾಡಿನಂತಾಗಿತ್ತು.

ನರಸಪ್ಪನವರು ತೀರಿಕೊಂಡಾಗಲೂ ಆಗದಂಥ ಉಗ್ರ ವಿಯೋಗ ವ್ಯಥೆ, ದಳ್ಳುರಿಯಾಗಿ ಅವರ ಹೃದಯದಲ್ಲಿ ದಹಿಸಲಾರಂಭಿಸಿತ್ತು.

'ಹೀಗೇಕೆ, ನನಗೆ ಹೀಗೇಕೆ ಇಷ್ಟು ವ್ಯಥೆಯಾಗುತ್ತಿದೆ' ಎಂದು ಚಿಂತಿಸಿ, ಕಾರಣವನ್ನು ಕಂಡುಕೊಂಡರೆ ಪರಿಹಾರೋಪಾಯವೂ ಹೊಳೆಯ ಬಹುದೆಂದು ಹೃದಯದಲ್ಲಿದ್ದ ಮೂಕ ಯಾತನೆಗೆ ಕಾರಣ ಹುಡುಕಲು ಯತ್ನಿಸಿದರು.

'ಏಕೆ, ನನಗೇಕೆ ಇಷ್ಟು ವ್ಯಥೆಯಾಗುತ್ತಿದೆ?'

'ನಿಜವಾಗಿಯೂ ನನಗೆ ಅಚ್ಚಣ್ಣಭಟ್ಟರಿಗೆ ಅಮ್ಮನವರ ಪೂಜೆಯ ಅಧಿಕಾರವನ್ನು ಒಪ್ಪಿಸಲು ಇಷ್ಟವಿರಲಿಲ್ಲವೇ?'

'ನಾನು ತ್ಯಾಗವೆಂದು ಮಾಡಿದುದು, ನನ್ನ ಅಂತರಾತ್ಮಕ್ಕೆ ಒಪ್ಪಿಗೆ ಇರಲಿಲ್ಲವೇ?'

'ಹಾಗಿದ್ದರೆ... ಹಾಗಿದ್ದರೆ......

'ನಾನು ಮಾಡಿದುದು ತ್ಯಾಗವಲ್ಲ, ಆತ್ಮ ದ್ರೋಹ.'

'ಆತ್ಮ ದ್ರೋಹ!'

ಅವರ ಹೃದಯದ ಒಳಗಿನ ಒಳದನಿಯೊಂದು ಆ ಮಾತು ಹೇಳುತ್ತಿದ್ದ ಹಾಗೇ ವೆಂಕಟದಾಸಪ್ಪನವರಿಗೆ ಚಾವಟಿಯಿಂದ ಹೊಡೆದಂತಾಯಿತು.

'ಇಲ್ಲ...ಇಲ್ಲ......, ನಾನು ನನ್ನ ಅಂತಸಾಕ್ಷಿಗೆ ವಿರುದ್ಧವಾಗಿ ಈ ಕೆಲಸ ಮಾಡಲಿಲ್ಲ. ಕಾಯಾ, ವಾಚಾ, ಮನಸಾ ನಾನೇ ಒಪ್ಪಿ ಬಿಟ್ಟು ಕೊಟ್ಟಿದೇನೆ'

—ಎಂದು ತಮಗೆ ತಾವೇ ಹೇಳಿಕೊಂಡರು.

'ಹಾಗಿದ್ದರೆ—ಹೃತ್ಪೂರ್ವಕವಾಗಿ ತ್ಯಾಗ ಮಾಡಿದ್ದರೆ, ಅಂತರಂಗದಲ್ಲಿ ಈ ಅಲ್ಲೋಲ ಕಲ್ಲೋಲ ವೇಕೆ? ಅಶಾಂತಿಯೇಕೆ? ಹೊರಗೆ ಶಾಂತವಾಗಿ ಕಂಡರೂ, ಒಳಗೆ ಲೋಕವನ್ನೇ ಕಳೆದುಕೊಂಡಂತೆ ಕಣ್ಣೀರು ಕರೆಯುತ್ತಿರುವುದೇಕೆ?

'ನನಗೆ ದುಃಖವಾಗಿದೆ–

'ನಿಜ, ದುಃಖವಾಗಿದೆ—ಹೃದಯ ಶರಶಯ್ಯೆಯ ಮೇಲೆ ಮಲಗಿದಂತೆ ಹೊಯ್ದಾಡುತ್ತಿರುವುದೇ ಅದಕ್ಕೆ ಸಾಕ್ಷಿ.

'ನನಗೆ ದುಃಖವಾಗಿದೆ. ಆಗಿದ್ದರೆ ಅದರ ಅರ್ಥ, ನಾನು ಮಾಡಿದ ಕೆಲಸ, ನನ್ನ ಹೃದಯಕ್ಕೆ ಒಪ್ಪಿಗೆಯಾದುದಲ್ಲ. ಅದಲ್ಲದೆ ಬೇರೇನು ಅರ್ಥ ಕೊಡಲು ಸಾಧ್ಯ?

'ಸ್ವಸಂತೋಷಪೂರ್ವಕವಾಗಿ ಮಾಡಿದ ಕೆಲಸ ಹರ್ಷವನ್ನು ಕೊಡದೆ, ದುಃಖವನ್ನು ತರುವುದು ಸಾಧ್ಯವೇ ಇಲ್ಲ. ಈಗಾಗಿರುವುದು ಅದಕ್ಕೆ ವ್ಯತಿರಿಕ್ತವಾದ ಪರಿಣಾಮ. ನನ್ನಲ್ಲಿ ಶಾಂತಿ, ತೃಪ್ತಿ, ಸಂತೋಷದ ಭಾವನೆಗಳಿಲ್ಲ: ಅಶಾಂತಿ ಹಬ್ಬಿದೆ. ಹಾಗಿದ್ದರೆ ನಾನು ಮಾಡಿದುದು ನನ್ನ ಹೃತ್ಪೂರ್ವಕವಾಗಿಯಲ್ಲ.

'ಅಂದರೆ ನನ್ನ ಆತ್ಮತೃಪ್ತಿಗಾಗಿ ನಾನಿದನ್ನು ಮಾಡಲಿಲ್ಲ, ಇತರರಿಗಾಗಿ ಮಾಡಿದೆ.

'ಜಗತ್ತಿನ ಇದಿರು ನನ್ನ ಮುಖ ಉಳಿಸಿಕೊಳ್ಳಲು, ನನ್ನ ಪ್ರಣಯ ಪ್ರಸಂಗ ಬಹಿರಂಗ ಹಗರಣವಾಗದಿರಲು, ಲೋಕ ಏನು ಮಾಡೀತೋ ಎಂಬ ಭೀತಿಯಿಂದ ಈ ಕೆಲಸ ಮಾಡಿದೆ.

'ನಿಜ, ನಿಜ, ಇದೇ ನಿಜವಾದ ಅರ್ಥವಿರಬೇಕು ನನ್ನ ಕೃತ್ಯಕ್ಕೆ ಇಲ್ಲವಾದಲ್ಲಿ ಅಲ್ಲಿ ಬಹಿರಂಗವಾಗಿ ಬಿಟ್ಟು ಬಂದುದಕ್ಕೆ ನಾನಿಲ್ಲಿ, ಅಂತರಂಗದಲ್ಲಿ ಇಷ್ಟು ವ್ಯಥೆಪಡುತ್ತಿರಲಿಲ್ಲ.'

ಈ ಭಾವನೆ ಮೂಡಿ ವೆಂಕಟದಾಸಪ್ಪನವರು ತಮ್ಮನ್ನು ತಾವೇ 'ಆತ್ಮವಂಚಕ', 'ಆತ್ಮದ್ರೋಹಿ', 'ಹೇಡಿ' ಎಂದು ಮುಂತಾಗಿ ಹಳಿದು ಕೊಂಡರು. ಆ ಭಾವನೆಯೇ ಗಳಿಗೆಗಳಿಗೆಗೆ ಬಲಿದು, ಏಕೋ ಅವರಿಗೆ ಯಾರಿಗೂ ಮುಖ ತೋರಿಸಲು ಮನಸ್ಸಾಗಲಿಲ್ಲ.

ಎಂತಲೇ ಶಾನುಭೋಗರ ಮನೆಯಿಂದ ನೇರವಾಗಿ ತಮ್ಮ ಮನೆಗೆ, ಹೊರಡಬೇಕೆಂದು ಹೊರಟ ವೆಂಕಟದಾಸಪ್ಪನವರು ಮನೆಗೆ ಹೋಗಲಾಗದೆ, ನಡುದಾರಿಯಲ್ಲೇ, ತಮ್ಮ ನಡಿಗೆಯ ದಿಕ್ಕು ಬದಲಿಸಿ, ಅಮ್ಮನವರ ಗುಡಿಯ ಕಡೆ ಹೆಜ್ಜೆ ಹಾಕಿದರು.

ಬೀದಿಯಲ್ಲಿ ಅಕ್ಕಪಕ್ಕದಲ್ಲಿ ಓಡಾಡುತ್ತಿದ್ದ ಜನ, ಇಬ್ಬದಿಯ ಮನೆಗಳು— ಯಾವುದನ್ನೂ ನೋಡಲು ಅವರಿಗೆ ಧೈರ್ಯವಾಗಲಿಲ್ಲ. ಏನೋ ಅಳುಕು ಅವರ ತಲೆಯನ್ನು ನೆಲದತ್ತ ಜಗಿಸುತ್ತಿತ್ತು.

ತಗ್ಗಿಸಿದ ತಲೆಯನ್ನು ಮೇಲೆತ್ತದೆ ಗುಡಿಯ ಕಡೆ ಹೊರಟರು.

ಅವರು ದೇವಾಲಯದ ಬಳಿ ಸೇರಿದಾಗ ನಡುಹಗಲಿನ ಉರಿಬಿಸಿಲು, ಧಗಧಗಿಸುತ್ತಿತ್ತು. ಆ ಬಿಸಿಲಿನಲ್ಲಿ ಬೆಂದು ಜಗತ್ತೇ ಜಡವಾದಂತಿತ್ತು.

ಉರಿ ಬಿಸಿಲಿನಲ್ಲಿ ದೇವಿಯ ಗುಡಿಯ ಮುಂದಿನ ತೋಪಿನಲ್ಲಿದ್ದ ಆಲ, ಅರಳಿಯ ಮರಗಳ ಹೊಳಪು ಎಲೆಗಳು, ನೂರಾರು ಉರಿಗಣ್ಣುಗಳಂತೆ ಲಕಲಕಿಸುತ್ತಿದ್ದವು. ಗಾಳಿಯಾಡದೆ ತೋಪಿನ ಮರಗಳ ಸಣ್ಣ ಎಲೆಯೂ ಅಲುಗದೆ, ಏಕೋ ಅವೆಲ್ಲವೂ ನಿರ್ಜೀವ ಪ್ರೇತಗಳಂತೆ ನಿಂತಿದ್ದವು.

ತೋಪಿನಲ್ಲಿ ಹಬ್ಬಿದ ಮಸಣ ಮೌಢ್ಯವನ್ನು ಮುರಿಯಲು, ತೋಪಿ

ನಲ್ಲಿದ್ದ ನೂರಾರು ಮರಗಳಲ್ಲಿ ಇದ್ದಿರಲೇಬೇಕಾದ ನೂರಾರು ಹಕ್ಕಿಗಳಲ್ಲಿ, ಒಂದರದಾದರೂ, ಕೂಗಿನ ಸದ್ದಿರಲಿ, ರೆಕ್ಕೆಯ ಶಬ್ದವೂ ಕೇಳದೆ, ಎಲ್ಲದರ ಮೇಲೂ ಮೌನದ ದಟ್ಟವಾದ ಮುಸುಕು ಬಿದ್ದು, ನಿರ್ಜನ ನೀರವತೆಯನ್ನು ಮತ್ತಷ್ಟು ಗಂಭೀರಗೊಳಿಸಿತ್ತು.

ಮೌನ, ಮೌನ, ಮಹಾ ಮೌನ—ಎಲ್ಲೆಲ್ಲಿಯೂ ಮೌನ—

ಉರಿಬಿಸಿಲಿನಷ್ಟೇ ಕಾವೇರಿದ, ದುರ್ಭರ ಗಂಭೀರ ಮೌನ— ಹೊರಗೆ ಒಳಗೆ—

ಹುಯ್ಯಲು—ಕಿವಿದೆರೆಗಳನ್ನು ಸೀಳುವಂಥ ಕಡಲಬ್ಬರದ ಅಶಾಂತ ಹುಯ್ಯಲು.

ಹೊರಗಿನ ಮೌನ, ಒಳಗಿನ ಹುಯ್ಯಲು— ಎರಡನ್ನೂ ಸಹಿಸಲಾಗದೆ, ತೂಗಾಡುತ್ತಾ, ವೆಂಕಟದಾಸಪ್ಪನವರು, ಅಮ್ಮನವರ ಗುಡಿಯ ಮುಂದಿನ ಚಾವಡಿಯಲ್ಲಿ ಕುಳಿತರು.

ಆ ಚಾವಡಿಯ ತಂಪು ನೆರಳಿನಲ್ಲಿ ಕುಳಿತುಕೊಳ್ಳುತ್ತಿದ್ದ ಹಾಗೇ ನೆನಪೊಂದು ಅವರ ಮಿದುಳನ್ನು ಇರಿಯಿತು.

ಆ ಚಾವಡಿ—

ನರಸಪ್ಪನವರು ಇಹಲೋಕಯಾತ್ರೆಯನ್ನು ಮುಗಿಸಿ, ದೇವಿಯ ಪಾದಾರವಿಂದದಲ್ಲಿ ಲೀನವಾದ ಚಾವಡಿ!

ನರಸಪ್ಪನವರ ಸಾವು—

ವೆಂಕಟದಾಸಪ್ಪನವರ ಬದುಕಿಗೆ ಮಾರ್ಗದರ್ಶಿಯಾದ ಸಾವು.

ತಂದೆಯ ಸಾವಿನ ಬಗ್ಗೆ ಚಿಂತಿಸುತ್ತ, ತಾವು ಅವರ ಹಾಗೆ ಆಗಬೇಕು. ಕ್ರೋಧ ಲೋಭಗಳನ್ನು ಗೆದ್ದು, ಅನುದ್ವಿಗ್ನಚಿತ್ತನಾಗಿ ಬಾಳಬೇಕು. ಆ ತಂದೆಗೆ ತಕ್ಕ ಮಗನಾಗಬೇಕು—ಎಂದು ತಮ್ಮ ಬಾಳಮಾರ್ಗವನ್ನು ನಿರ್ಧರಿಸಿ ಕೊಂಡಿದ್ದರು.

ಆ ಸಮಯದಲ್ಲಿ ಅವರ ಮಾವ ಶಾಮಣ್ಣ—

'ಎದ್ದೇಳು—ಈ ಕಣ್ಣೀರುಗರೆವ ಅಬಲತೆಯನ್ನು ಬಿಡು. ಧೀರನಾಗಿ ಬಾಳಗುರಿಯನ್ನು ಸಾಧಿಸು. ಆ ಸಾಧನೆಗೆ ಮಹಾಸ್ತ್ರವಾಗಿ ಗಾಯತ್ರಿ ನಿನ್ನ ಬಳಿ ಇದೆ. ಅದರ ಉಪಾಸನೆಯಿಂದ ನೀನು ದುಸ್ಸಾಧ್ಯವಾದುದನ್ನೂಸಾಧ್ಯ ಮಾಡಿಕೊಳ್ಳಬಹುದು. ಅಲಭ್ಯವಾದುದನ್ನು ಲಭ್ಯಮಾಡಿಕೊಳ್ಳಬಹುದು.'

—ಎಂದು ಹೇಳಿ ಗೀತೆಯ ಮಾತನ್ನು ಹೇಳಿದ್ದರು—

'ಕ್ಷುದ್ರಂ ಹೃದಯ ದೌರ್ಬಲ್ಯಂ–ತ್ಯಕ್ತ್ವೋತ್ತಿಷ್ಠ ಪರಂತಪ'

ಅಂದಿನಿಂದ ವೆಂಕಟದಾಸಪ್ಪನವರು ತಮ್ಮ ಗುರಿ ಸಿದ್ಧಿಗಾಗಿ ಗಾಯತ್ರೀ ಅನುಷ್ಠಾನವನ್ನು ಆರಂಭಿಸಿದ್ದರು. ಗೀತಾ ಪಾರಾಯಣವನ್ನು ಮಾಡುತ್ತಿದ್ದರು.

ತನ್ನ ತಂದೆಯಂತೆ ತಾನು ಆಗುವುದು ಹೇಗೆ?

ದಿನದಿನವೂ ಅವರ ಹೃದಯ ಕೇಳುತ್ತಿದ್ದ ಆ ಪ್ರಶ್ನೆಯನ್ನೇ. ಕುರು ಕ್ಷೇತ್ರದ ಮಹಾರಣರಂಗದಲ್ಲಿ, ದುರ್ಬಲ ಹೃದಯನಾದ, ಸಮ್ಮೂಢಚಿತ್ತ ನಾದ ಅರ್ಜುನನೂ, ಶ್ರೀಕೃಷ್ಣನನ್ನು ಕೇಳಿದ್ದ—

ಸ್ಥಿತಪ್ರಜ್ಞಸ್ಯ ಕಾ ಭಾಷಾ। ಸಮಾಧಿಸ್ಥಸ್ಯ ಕೇಶವ।
ಸ್ಥಿತಧೀಃ ಕಿಂ ಪ್ರಭಾಷೇತ। ಕಿಮಾಸೀತ ವ್ರಜೇತಕಿಮ್॥

[ಕೇಶವ, ಆತ್ಮನಲ್ಲಿಯೇ ನೆಲೆಯಾಗಿ ನಿಂತ ಸ್ಥಿತಪ್ರಜ್ಞನ ಲಕ್ಷಣಗಳೇನು? ಆತ ಏನು ಹೇಳುತ್ತಾನೆ? ಏನಂ ಮಾಡುತ್ತಾನೆ?]

ಪಾರ್ಥನ ಆ ಪ್ರಶ್ನೆಗೆ ಉತ್ತರವಾಗಿ ಭಗವಾನ ಸ್ಥಿತಪ್ರಜ್ಞನ ಲಕ್ಷಣ ಗಳನ್ನು ಬಹು ಸ್ಪಷ್ಟವಾಗಿ, ಯಾವೊಂದು ಬಗೆಯ ಸಂಶಯಕ್ಕೂ ಅವಕಾಶ ವಿಲ್ಲದಂತೆ ವಿವರಿಸಿದ್ದ—

'ಪ್ರಜಹಾತಿ ಯದಾ ಕಾಮಾನ್। ಸರ್ವಾನ್ ಪಾರ್ಥ ಮನೋಗತಾನ್।
ಆತ್ಮನ್ಯೇವಾತ್ಮನಾತುಷ್ಟಃ। ಸ್ಥಿತಪ್ರಜ್ಞಸ್ತದೋಚ್ಯತೇ॥

[ಎಲೈ ಅರ್ಜುನ, ಆತ್ಮನಲ್ಲಿಯೇ, ಆತ್ಮನಿಂದಲೇ ಸಂತುಷ್ಟನಾಗಿ ಯಾವಾಗ ಯೋಗಿಯ ಮನಸ್ಸಿನಲ್ಲಿರುವ ಸಮಸ್ತ ಕಾಮಗಳನ್ನು ತ್ಯಾಗ' ಮಾಡುತ್ತಾನೆಯೋ ಆಗ ಸ್ಥಿತಪ್ರಜ್ಞನೆಂದು ಹೇಳಲ್ಪಡುವನು.]

ದುಃಖೇಷ್ವನುದ್ವಿಗ್ನ ಮನಾಃ। ಸುಖೇಷು ವಿಗತಸ್ಪೃಹಃ।
ವೀತರಾಗ ಭಯಕ್ರೋಧಃ। ಸ್ಥಿತಮುರ್ನಿರುಚ್ಯತೇ॥'

[ದುಃಖಗಳಲ್ಲಿ ಉದ್ರೇಕವಿಲ್ಲದ ಮನಸ್ಸುಳವನೂ, ಸುಖಗಳಲ್ಲಿ ಆಸೆ ಇಲ್ಲದವನೂ, ಆಸಕ್ತಿ, ಭಯ, ಕ್ರೋಧಗಳಿಲ್ಲದವನೂ ಆದ ಮುನಿಯು ಸ್ಥಿತಪ್ರಜ್ಞನೆಂದು ಹೇಳಲ್ಪಡುವನು]

'ಇದು ಲಕ್ಷಣ. ಈ ಸ್ಥಿತಿಯನ್ನು ಸಾಧಿಸುವ ದಾರಿ—?'

'ಆ ದಾರಿಯನ್ನೂ ಶ್ರೀಕೃಷ್ಣನೇ ಹೇಳಿದ್ದ—

ಯಃ ಸರ್ವತ್ರಾs ನಭಿಸ್ನೇಹಃ। ತ್ತ್ವತತ್ಪ್ರಾಪ್ಯಶುಭಾಶುಭಂ।

ನಾಭಿನಂದತಿ ನದ್ವೇಷ್ಟಿ। ತಸ್ಯ ಪ್ರಜ್ಞಾ ಪ್ರತಿಷ್ಠಿತಾ

[ಯಾವನು ಸರ್ವ ವಸ್ತುಗಳಲ್ಲಿಯೂ ಆಸಕ್ತಿರಹಿತನಾಗಿ, ಆಯಾ ಪ್ರಿಯಾ ಪ್ರಿಯ ವಿಷಯಗಳನ್ನು ಪಡೆದಾಗ ಸಂತೋಷಿಸುವುದಿಲ್ಲವೋ, ದ್ವೇಷಿಸುವುದಿಲ್ಲವೋ ಆತನ ಪ್ರಜ್ಞೆಯು ಸ್ಥಿರವಾಗಿರುವುದು].

ಯದಾ ಸಂಹರತೇ ಚಾಯಂ। ಕೂರ್ಮೋಂಗಾನೀವ ಸರ್ವಶಃ।

ಇಂದ್ರಿಯಾಣೇಂದ್ರಿಯಾರ್ಥೇಭ್ಯಃ। ತಸ್ಯ ಪ್ರಜ್ಞಾ ಪ್ರತಿಷ್ಠಿತಾ

[ಆಮೆಯು ತನ್ನ ಅಂಗಗಳನ್ನು ಒಳಕ್ಕೆ ಎಳೆದುಕೊಳ್ಳುವಂತೆ, ಜ್ಞಾನ ನಿಷ್ಠನಾದ ಯೋಗಿಯು ಯಾವಾಗ ಎಲ್ಲಾ ಕಡೆಗಳಿಂದಲೂ ತನ್ನ ಇಂದ್ರಿಯ ಗಳನ್ನು ಅವುಗಳ ವಿಷಯಗಳಿಂದ ಎಳೆದುಕೊಳ್ಳುವನೋ ಆಗ ಆತನ ಪ್ರಜ್ಞೆಯು ಸ್ಥಿರವಾಗಿರುವುದು].

ವಿಷಯಾ ವಿನಿವರ್ತಂತೇ। ನಿರಾಹಾರಸ್ಯ ದೇಹಿನಃ।

ರಸವರ್ಜಂ ರಸೋಽಪ್ಯಸ್ಯ। ಪರಂ ದೃಷ್ಟ್ವಾ ನಿವರ್ತತೇ

[ನಿರಾಹಾರವಾದ ದೇಹಿಯನ್ನು ತೊರೆದು ಇಂದ್ರಿಯಗಳ ವಿಷಯಗಳು ಹಿಂದಿರುಗುತ್ತವೆ; ಆದರೆ ತೃಷ್ಣೆಯು ಬಿಟ್ಟಿರುವುದಿಲ್ಲ, ಪರಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡ ಮೇಲೆ ಇವನ ತೃಷ್ಣೆಯು ಕೂಡಾ ಹಿಂದಿರು ಗುವುದು].

ಯತತೋಹ್ಯಪಿ ಕೌಂತೇಯ। ಪುರುಷಸ್ಯ ವಿಪಶ್ಚಿತಃ।

ಇಂದ್ರಿಯಾಣಿ ಪ್ರಮಾಥೀನಿ। ಹರಂತಿ ಪ್ರಸಭ ಮನಃ

[ಎಲೈ ಅರ್ಜುನನೇ, ವಿಕ್ಷೇಪವನ್ನುಂಟುಮಾಡುವ ಇಂದ್ರಿಯಗಳು ಪ್ರಯತ್ನ ಶೀಲನೂ ಜ್ಞಾನಿಯೂ ಆವ ಪುರುಷನ ಮನಸ್ಸನ್ನು ಕೂಡಾ ಬಲಾತ್ಕಾರದಿಂದ ಹರಣ ಮಾಡುತ್ತವೆ].

ತಾನಿ ಸರ್ವಾನ್ ಸಂಯಮ್ಯ। ಯುಕ್ತ ಆಸೀತ ಮತ್ಪರಃ

ವಶೇಹಿ ಯಸ್ಯೇಂದ್ರಿಯಾಣಿ। ತಸ್ಯ ಪ್ರಜ್ಞಾ ಪ್ರತಿಷ್ಠಿತಾ

[ಆದುದರಿಂದ ಇಂದ್ರಿಯಗಳನ್ನೆಲ್ಲಾ ನಿಗ್ರಹಿಸಿ ಮತ್ಪರಾಯಣನಾಗಿ

[ನಾನೇ ಪರಮಾತ್ಮನೆಂಬ ಭಾವನೆಯುಳ್ಳವನಾಗಿ] ಸಮಾಹಿತಚಿತ್ತನಾಗಬೇಕು: ಏಕೆಂದರೆ ಯಾವನ ಇಂದ್ರಿಯಂಗಳು ವಶದಲ್ಲಿರುವವೋ ಆವನ ಪ್ರಜ್ಞೆಯು ಸ್ಥಿರವಾಗಿರುವುದು]

ಧ್ಯಾಯತೋ ವಿಷಯಾನ್ ಪುಂಸಃ। ಸಂಗಸ್ತೇಷೂಪಜಾಯತೇ।
ಸಂಗಾತ್ ಸಂಜಾಯತೇ ಕಾಮಃ। ಕಾಮಾತ್ ಕ್ರೋಧಾಭಿಜಾಯತೇ

[ವಿಷಯುಗಳನ್ನು ಚಿಂತಿಸುತ್ತಿರುವ ಪುರುಷನಿಗೆ ಅವುಗಳಲ್ಲಿ ಆಸಕ್ತಿಯು ಹುಟ್ಟುತ್ತದೆ. ಆಸಕ್ತಿಯಿಂದ ಕಾಮವು ಜನಿಸುತ್ತದೆ; ಕಾಮದಿಂದ ಕ್ರೋಧವು ಹುಟ್ಟುತ್ತದೆ]

ಕ್ರೋಧಾದ್ಭವತಿ ಸಮ್ಮೋಹಃ। ಸಮ್ಮೋಹಾತ್ ಸ್ಮೃತಿವಿಭ್ರಮಃ।
ಸ್ಮೃತಿಭ್ರಂಶಾದ್ಬುದ್ಧಿನಾಶೋ। ಬುದ್ಧಿನಾಶಾತ್ ಪ್ರಣಶ್ಯತಿ

[ಕ್ರೋಧದಿಂದ ಸಂಮೋಹವು ಜನಿಸುತ್ತದೆ; ಆ ಸಂಮೋಹದಿಂದ ಸ್ಮೃತಿಯು ಭ್ರಮೆಯುಂಟಾಗುತ್ತದೆ; ಸ್ಮೃತಿ ಭ್ರಮೆಯಿಂದ ಬುದ್ಧಿ ನಾಶ ವಾಗುತ್ತದೆ; ಬುದ್ಧಿ ನಾಶದಿಂದ (ಪುರುಷನು) ನಾಶವಾಗುತ್ತಾನೆ].

ರಾಗದ್ವೇಷವಿಯುಕ್ತೈಸ್ತು। ವಿಷಯಾನಿಂದ್ರಿಯೈಶ್ಚರನ್।
ಆತ್ಮವಶ್ಯೈರ್ವಿಧೇಯಾತ್ಮಾ। ಪ್ರಸಾದಮಧಿಗಚ್ಛತಿ

[ಆದರೆ ರಾಗದ್ವೇಷಗಳಿಂದ ಬಿಡುಗಡೆಯನ್ನು ಹೊಂದಿ, ತನ್ನ ವಶ ದಲ್ಲಿರುವ ಇಂದ್ರಿಯಗಳಿಂದ ವಿಷಯುಗಳನ್ನು ಅನುಭವಿಸುತ್ತಿರುವ ಸಂಯುತ ಚಿತ್ತವುಳ್ಳ ಮನುಷ್ಯನು ಪ್ರಸನ್ನತೆಯನ್ನು ಹೊಂದುವನು].

ಪ್ರಸಾದೇ ಸರ್ವ ದುಃಖಾನಾಂ। ಹಾನಿರಸ್ಯೋಪಜಾಯತೇ।
ಪ್ರಸನ್ನ ಚೇತಸೋಹ್ಯಾಶು। ಬುದ್ಧಿಃ ಪರ್ಯವತಿಷ್ಠತಿ

[ಚಿತ್ತದ ಪ್ರಸನ್ನತೆಯುಂಟಾದರೆ, ಇವನ ಸಮಸ್ತ ದುಃಖಗಳು ನಾಶವಾಗುತ್ತದೆ. ಏಕೆಂದರೆ ಶುದ್ಧಚಿತ್ತವುಳ್ಳವನ ಬುದ್ಧಿಯು ಬಹು ಬೇಗ ಸ್ಥಿರವಾಗುತ್ತದೆ]

ನಾಸ್ತಿ ಬುದ್ಧಿರಯುಕ್ತಸ್ಯ। ನಚಾಯುಕ್ತಸ್ಯ ಭಾವನಾ।
ನಚಾಭಾವಯತಃ ಶಾಂತಿಃ। ಅಶಾಂತಸ್ಯ ಕುತಃ ಸುಖಮ್

[ಅಯುಕ್ತನಾದವನಿಗೆ ಬುದ್ಧಿಯು ಇರುವುದಿಲ್ಲ; ಆಯುಕ್ತನಾದವನಿಗೆ

ಭಾವನೆಯೂ ಇಲ್ಲ; ಭಾವನೆಯನ್ನು ಮಾಡದವನಿಗೆ ಶಾಂತಿಯಿಲ್ಲ; ಶಾಂತಿ ಇಲ್ಲದವನಿಗೆ ಸುಖವೆಲ್ಲಿಯದು ? ]

ಇಂದ್ರಿಯಾಣಾಂ ಹಿ ಚರತಾಂ। ಯನ್ಮನೋನು ವಿಧೀಯತೇ।
ತದಸ್ಯ ಹರತಿ ಪ್ರಜ್ಞಾಂ। ವಾಯುರ್ನಾವಮಿವಾಂಭಸಿ

[ಯಾವನ ಮನಸ್ಸು ಚಲಿಸುತ್ತಿರುವ ಇಂದ್ರಿಯಗಳನ್ನು ಅನುಸರಿಸುತ್ತದೆಯೋ, ಅಂಥ ಪ್ರಜ್ಞೆಯನ್ನು, ನೀರಿನಲ್ಲಿರುವ ದೋಣಿಯನ್ನು ಗಾಳಿಯು ಹೊಡೆದುಕೊಂಡು ಹೋಗುವಂತೆ, ಇಂದ್ರಿಯಗಳು ಅಪಹರಿಸುತ್ತವೆ.]

ತಸ್ಮಾದಸ್ಯ ಮಹಾಬಾಹೋ। ನಿಗೃಹೀತಾನಿ ಸರ್ವಶಃ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಃ। ತಸ್ಯಪ್ರಜ್ಞಾ ಪ್ರತಿಷ್ಠಿತಾ

[ಆದುದರಿಂದ, ಯಾವನು ತನ್ನ ಇಂದ್ರಿಯಗಳನ್ನು ಸರ್ವ ಪ್ರಕಾರದಿಂದಲೂ, ಇಂದ್ರಿಯಗಳ ವಿಷಯಗಳಿಂದ ಸೆಳೆದು ನಿಗ್ರಹಿಸುತ್ತಾನೋ ಆವನ ಪ್ರಜ್ಞೆಯು ಸ್ಥಿರವಾಗಿರುವುದು].

ಯಾ ನಿಶಾ ಸರ್ವ ಭೂತಾನಾಂ। ತಸ್ಯಾಂ ಜಾಗರ್ತಿ ಸಂಯಮೀ।
ಯಸ್ಯಾಂ ಜಾಗ್ರತಿ ಭೂತಾನಿ। ಸಾ ನಿಶಾ ಪಶ್ಯತೋ ಮುನೇಃ

[ಎಲ್ಲಾ ಪ್ರಾಣಿಗಳಿಗೆ ಯಾವುದು ರಾತ್ರಿಯೋ, ಅದರಲ್ಲಿ ಜಿತೇಂದ್ರಿಯನು ಎಚ್ಚತ್ತಿರುತ್ತಾನೆ; ಯಾವುದರಲ್ಲಿ ಪ್ರಾಣಿಗಳು ಎಚ್ಚತ್ತಿರುವವೋ, ಅದು ಮುನಿಗೆ ರಾತ್ರಿಯಾಗಿರುತ್ತದೆ.]

ಆಪೂರ್ಯಮಾಣಮಚಲಪ್ರತಿಷ್ಠಂ।
ಸಮುದ್ರಮಾಪಃ ಪ್ರವಿಶಂತಿ ಯದ್ವತ್।
ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ।
ಸ ಶಾಂತಿ ಮಾಪ್ನೋತಿ ನ ಕಾಮ ಕಾಮೀ

[ಪೂರ್ಣವಾಗಿಯೂ, ಅಚಲವಾಗಿಯೂ ಇರುವ ಸಮುದ್ರವನ್ನು ನೀರುಗಳು ಹೇಗೆ ಪ್ರವೇಶಿಸುವವೋ, ಹಾಗೆಯೇ ಎಲ್ಲಾ ಕಾಮಗಳೂ ಯಾವನಲ್ಲಿ ಪ್ರವೇಶಿಸುವವೋ ಅಂಥವನು ಶಾಂತಿಯನ್ನು ಹೊಂದುತ್ತಾನೆ: ಆದರೆ ಕಾಮಗಳನ್ನು ಬಯಸುವವನು ಶಾಂತಿಯನ್ನು ಹೊಂದಲಾರನು.]

ವಿಹಾಯ ಕಾಮಾನ್ ಯಃ ಸರ್ವಾನ್। ಪುಮಾಂಶ್ಚರತಿ ನಿಸ್ಪೃಹಃ।
ನಿರ್ಮಮೋ ನಿರಹಂಕಾರಃ। ಸ ಶಾಂತಿ ಮಧಿಗಚ್ಛತಿ

[ಯಾವ ಪುರುಷನು ಕಾಮಗಳೆಲ್ಲವನ್ನೂ ಬಿಟ್ಟು, ಆಸೆಯಿಲ್ಲದವನಾಗಿ, ಮಮತೆ ಇಲ್ಲದವನಾಗಿ, ಅಹಂಕಾರವಿಲ್ಲದವನಾಗಿ ತಿರುಗುತ್ತಾನೋ ಅಂಥವನು ಶಾಂತಿಯನ್ನು ಹೊಂದುತ್ತಾನೆ]

ಏಷಾಂ ಬ್ರಾಹ್ಮೀ ಸ್ಥಿತಿಃ ಪಾರ್ಥ। ನೈನಾಂ ಪ್ರಾಪ್ಯ ವಿಮುಹ್ಯತಿ।
ಸ್ಥಿತ್ವಾಸ್ಯಾಮಂತ ಕಾಲೇಽಪಿ। ಬ್ರಹ್ಮ ನಿರ್ವಾಣ ಮೃಚ್ಛತಿ

[ಎಲೆ ಅರ್ಜುನ, ಇದು ಬ್ರಾಹ್ಮೀಸ್ಥಿತಿಯು. ಇದನ್ನು ಪಡೆದವನಿಗೆ ಮೋಹವಿಲ್ಲ. ಅಂತ್ಯಕಾಲದಲ್ಲಿ ಈತನು, ಬ್ರಹ್ಮ ನಿರ್ವಾಣವನ್ನು ಪಡೆಯುತ್ತಾನೆ.]
[ಗೀತಾ—ಅಧ್ಯಾಯ: ೨: ಶ್ಲೋಕ: ೫೪—೭೨]

ಈ ಶ್ಲೋಕಗಳಲ್ಲಿ ಶ್ರೀಕೃಷ್ಣ ಲೋಕಕ್ಕೆ ಸ್ಥಿತಪ್ರಜ್ಞ, ಅವನ ಲಕ್ಷಣಗಳು, ಆ ಸ್ಥಿತಿಯನ್ನು ಪಡೆಯುವ ದಾರಿ, ಆ ದಾರಿಯಲ್ಲಿ ಬರಬಹುದಾದ ಎಡರು ತೊಡರುಗಳು, ಅವೆಲ್ಲವನ್ನು ಗೆದ್ದು ನಿಂತಾಗ ದೊರೆಯುವ ಫಲ—ಪ್ರತಿಯೊಂದನ್ನೂ, ಮುಳ್ಳು ಮುಳ್ಳಾದ ಹಲಸಿನಕಾಯನ್ನು ಬಿಡಿಸಿ, ರಸ ಗರೆಯುವ ತೊಳೆಗಳನ್ನು ತಿನ್ನಲು ಅನುಕೂಲವಾಗಿ ಇದುರಿಗಿಟ್ಟಂತೆ ವಿವರಿಸಿದ್ದ.

ಆ ಶ್ಲೋಕಗಳನ್ನು ಹತ್ತಾರು ಬಾರಿ, ಮತ್ತೆ ಮತ್ತೆ ಓದಿದ್ದರು ವೆಂಕಟದಾಸಪ್ಪನವರು.

ಓದಿದಾಗ ತಾವೂ ಆ ದಾರಿಯಲ್ಲೇ ನಡೆಯುತ್ತಿರುವಂತೆ, ಬ್ರಾಹ್ಮೀ ಸ್ಥಿತಿ ತಮಗೆ ಬಹು ಹತ್ತಿರವಾದಂತೆ ಭಾವಿಸಿದ್ದರು.

ಆ ಸ್ಥಿತಿಯನ್ನು ಪಡೆದವರಂತೇ ತ್ಯಾಗಮಾಡಲು ಯತ್ನಿಸಿದ್ದರು.

ಮಹಾಸಿದ್ಧರಂತೆ ಗೌರಮ್ಮ, ವೀರಣ್ಣ—ಇವರಿಗೆ ಉಪದೇಶ ಮಾಡಿದ್ದರು.

ಅಚ್ಚಣ್ಣಭಟ್ಟರ ಗೀತಾವಾಚನವನ್ನು ಕೇಳಿ ನಕ್ಕಿದ್ದರು.

ಆದರೆ ಈಗ—

ಈಗ ತಮ್ಮ ಮನಸ್ಸಿನ ಅಶಾಂತ ಸ್ಥಿತಿಯೇ ತಮ್ಮನ್ನು ಅಣಕಿಸುತ್ತಿದೆ—

ಇದು ಬ್ರಾಹ್ಮೀಸ್ಥಿತಿಯೇ?

ಅಲ್ಲ...ಅಲ್ಲ—ಅವರ ಅಶಾಂತಸ್ಥಿತಿ ಬ್ರಾಹ್ಮೀಸ್ಥಿತಿಯಲ್ಲ; ನೂರಾರು ಆಶೆಗಳನ್ನಿಟ್ಟುಕೊಂಡು, ಸಾವಿನಾಚೆಯೂ ಅವನ್ನು ತೊರೆಯಲಾರದೆ ಪ್ರೇತವಾಗಿ ಅಲೆಯುವವರಂತಿದೆ ಅವರ ಸ್ಥಿತಿ.

ಇದುವರೆಗೂ ಅವರು ಸಾಧಿಸಿದೆ ಎಂದುಕೊಂಡಿದ್ದುದು ಸಿದ್ಧಿಯಲ್ಲ, ಸಿದ್ಧಿಯ ಭ್ರಮೆ.

ಆ ಭ್ರಮೆಗೆ ಸಿಲುಕಿ ಅವರು ಮಾಡಿದುದು ತ್ಯಾಗವಲ್ಲ, ವಂಚನೆ—ಆತ್ಮ ವಂಚನೆ, ಲೋಕವಂಚನೆ.

ಗಾಜಿನ ಹಳುಕನ್ನು ಹಿಡಿದು, ಸೂರ್ಯನನ್ನು ಹಿಡಿದೆ ಎಂದು ಹೇಳಿದವನಂತಿದೆ ಅವರ ವರ್ತನೆ.

ಈ ಮಾತು ಮನವರಿಕೆಯಾಗಿ, ಮೈ ಉರಿಸೋಕಿದ ಮೇಣದಂತೆ ಕರಗಿ—

'ತಾಯೀ, ತಾಯೀ...ನನ್ನನ್ನು ಮನ್ನಿಸು...ಅಮ್ಮಾ...ದಾರಿತೋರಂ...'

—ಎಂದಂ ಬೇಡುತ್ತಾ, ಹಾಗೇ ಗರ್ಭಗುಂಡಿಯತ್ತ, ತಲೆಮಾಡಿ ನೆಲಕ್ಕೆ ಉರುಳಿದರಂ.

ಕಣ್ಣೀರು, ಅವರ ಕಣ್ಣುಗಳಿಂದ ಧಾರಾಕಾರವಾಗಿ ಹರಿಯುತ್ತಿತ್ತು.

* * * *

ತಾವು ಹಾಗೆ ಎಷ್ಟು ಹೊತ್ತು ಉರುಳಿದ್ದರೆಂಬುದೂ ವೆಂಕಟದಾಸಪ್ಪನವರಿಗೆ ಅರಿವಿರಲಿಲ್ಲ.

ಎಷ್ಟು ಹೊತ್ತು ಹಾಗೆ ಮಲಗಿದ್ದರೋ—ಸಂಜೆಯ ತಂಪು ಗಾಳಿಗೆ ಎಚ್ಚರಗೊಂಡ ಹಕ್ಕಿಗಳು ತೋಟದಲ್ಲಿ ಕಲಕಲ ಧ್ವನಿ ಮಾಡಿದಾಗಲೇ ಅವರಿಗೆ ಎಚ್ಚರವಾದದ್ದು.

ಎಚ್ಚರವಾಗಿ, ಮೈಯೊಂದಿಗೆ ಬುದ್ಧಿಯೂ ಎಚ್ಚರವಾಗಿ, ತಮ್ಮ ಆರ್ತ ಪರಿಸ್ಥಿತಿ ಅರಿವಾಯಿತು—ತಮಗೆ ತಾವೇ ಹೇಳಿಕೊಂಡರು.—

'ಹೀಗೆ...ಹೀಗೆ...ಹಾಗಾಗಬೇಕು, ಹೀಗಾಗಬೇಕು ಎಂದು ಬಯಸಿ, ಬಯಸಿದ್ದನ್ನು ಸಾಧಿಸಲಾಗದೆ ಎಷ್ಟು ದಿನ ಅಳುತ್ತಾ ಕೂಡುವುದು? ವಿಫಲವಾಗಿ ಅತ್ತು, ಸಾಧಿಸುವುದೇನು?'

ಮತ್ತೊಮ್ಮೆ ಅವರಿಗೆ ಶಾಮಣ್ಣ ಗೀತೆಯನ್ನು ಉದಹರಿಸಿ ಹೇಳಿದುದು ನೆನಪಾಯಿತು—

ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ
ನೈತತ್ತ್ವಯ್ಯುಪಪದ್ಯತೇ।
ಕ್ಷುದ್ರಂ ಹೃದಯ ದೌರ್ಬಲ್ಯಂ।
ತ್ಯಕ್ತ್ವೋತ್ತಿಷ್ಠ ಪರಂತಪ॥

ಸಾಧ್ಯವಿದೆ. ಎಲ್ಲವೂ ಸಾಧ್ಯವಿದೆ. ಪುರುಷ ಪ್ರಯತ್ನಕ್ಕೆ ಅಸಾಧ್ಯವಾದುದು ಯಾವುದೂ ಇಲ್ಲ. ನಮಗೆ ಸಾಧ್ಯವಾಗದುದನ್ನು ಸಾಧ್ಯ ಮಾಡಿಕೊಳ್ಳುವ ಶಕ್ತಿಯನ್ನು ಗಳಿಸಿಕೊಳ್ಳುವುದಕ್ಕೇ ಗಾಯತ್ರಿ ಇರುವುದು. ಗಾಯತ್ರಿ ಬ್ರಾಹ್ಮಣನ ಕೈಯ ಬ್ರಹ್ಮಾಸ್ತ್ರ. ಆ ಬಲವನ್ನು ಪಡೆದೂ, 'ಅದು ಮಾಡಲಾರೆ, ಇದು ನನಗೆ ಸಾಧ್ಯವಿಲ್ಲ ಎನ್ನುವ ಬ್ರಾಹ್ಮಣ ಚಂಡಾಲನಿಗಿಂತ ಅಧಮ. ಮನಸ್ಸು ಮಾಡು. ಈ ಷಂಢ ಕಂಬನಿಗಳನ್ನು ತೊಡೆದು ಹಾಕಿ, ಗಂಡಾಗಿ ನಿಂತುಕೋ'

ಆ ಮಾತು ನೆನಪಿನಲ್ಲಿ ಸುಡಿದು, ತೋಪಿನಲ್ಲಿ ಸುಳಿದ ತಂಗಾಳಿ, ತೋಪಿನಲ್ಲಿ, ಮುಗಿಲಿನಲ್ಲಿ ಕಲಕಲ ಮಾಡುವ ನೂರಾರು ಹಕ್ಕಿಗಳ ಧ್ವನಿ ಎಲ್ಲವೂ ವೆಂಕಟದಾಸಪ್ಪನವರಿಗೆ—

'ತ್ಯಕ್ತ್ವೋತ್ತಿಷ್ಠ ಪರಂತಪ'

—ಎಂದು ಹೇಳಿದಂತಾಯಿತು.

'ಏಳುತ್ತೇನೆ. ಮೇಲೇಳುತ್ತೇನೆ. ಬಯಸಿದ ಗುರಿಯನ್ನು ಸಾಧಿಸುತ್ತೇನೆ. ಈ ದಿನ ಹಿಂದೆ ಮುಂದೆ ಕಾಣದೆ ಏನೋ ಒಂದು ಹೆಜ್ಜೆಯನ್ನಿಟ್ಟೆ. ಅದೇ ನನ್ನ ಸಾಧನೆಯ ಮೊದಲ ಹೆಜ್ಜೆಯಾಗಿ, ಗುರಿಯತ್ತ ನಡೆಯುತ್ತೇನೆ

—ಎಂದು ತಮಗೆ ತಾವೇ ಹತ್ತಾರು ಬಾರಿ ಹೇಳಿಕೊಂಡರು.

ಆಮಾತು ಹೇಳಿಕೊಂಡ ಬಳಿಕ, ಅವರ ಚಿತ್ತದ ಉದ್ವಿಗ್ನತೆ ಕೊಂಚ, ಕಡಮೆಯಾಯಿತು. ಅದುವರೆಗೂ ಕಂಬನಿಗರೆದು, ಉರಿ ಹೊತ್ತಿದಂತೆ ದಹಿಸುತ್ತಿದ್ದ ಅವರ ಕಣ್ಣುಗಳು ತಂಪಾದವು.

ಹಾಗೇ ಸುತ್ತಲೂ ನೋಡಿದರು—

ತೋಪಿನ ಬದಿಯ ಕೆರೆಯಂಚಿನ ಕಿರುದಾರಿಯಲ್ಲಿ, ಮೇಯಲು ಹೋದ ಹಳ್ಳಿಯ ಹಸು-ಕರುಗಳು ಗ್ರಾಮದತ್ತ ಹಿಂದಿರುಗುತ್ತಿದ್ದವು. ಆಗ ತಾನೇ ಮುಳುಗಿದ ಸೂರ್ಯನ ಕ್ಷೀಣಾರುಣ ಕಾಂತಿಯಲ್ಲಿ, ಗೋಧನದ ಕಾಲಿನಿಂದೆದ್ದ ಹೊಂಧೂಳಿ, ಅವರಿಗೆ ಸಾಯಂಸಂಧ್ಯಾವಂದನೆಯ ವೇಳೆಯಾದುದನ್ನು ನೆನಪಿಸಿತು.

ಗುಡಿಯ ಚಾವಡಿಯಿಂದ ಇಳಿದು, ಕೊಳದ ಬಳಿ ಹೋಗಿ, ಕೈಕಾಲು

ಮುಖ ತೊಳೆದು, ಹೊದ್ದ ಉತ್ತರೀಯವನ್ನೇ ತೋಯಿಸಿ ಮಡಿಯುಟ್ಟು ಕೊಳದ ಮೆಟ್ಟಿಲ ಮೇಲೆ ಸಂಧ್ಯಾವಂದನೆ ಮಾಡ ಕುಳಿತರು.

ಆರಂಭದ ಆಪೋ ಮಂತ್ರಪುನಶ್ಚರಣೆ, ಅರ್ಘ್ಯಪ್ರದಾನವಾದ ಬಳಿಕ, ಮಂತ್ರ ತಂತ್ರ ಪುರಸ್ಸರವಾಗಿ ದಿಗ್ಬಂಧನೆ ಮಾಡಿಕೊಂಡು, ಸಂಕಲ್ಪವಾದ ಗಾಯತ್ರಿ ಧ್ಯಾನಶ್ಲೋಕವನ್ನು ಹೇಳಿಕೊಂಡರು—

ಮುಕ್ತಾವಿದ್ರುಮ ಹೇಮ ನೀಲ ಧವಳಚ್ಛಾಯೈಃ
ಮುಖೈಃ ತ್ರೈಕ್ಷಣೈಃ।
ಯುಕ್ತಾಬಿಂದು ನಿಬದ್ಧ ರತ್ನ ಮಕುಟಾಂ ತತ್ವಾರ್ಥ ವರ್ಣಾತ್ಮಿಕಾಂ॥
ಗಾಯತ್ರಿಂ ವರದಾಂ ಅಭಯಾಂ ಅಂಕುಶಕಶಾಂ
ಶುಭ್ರಂ ಕಪಾಲಂ ಗದಾಂ।
ಶಂಕಂ ಚಕ್ರಮಥಾರವಿಂದಯುಗಳಾಂ ಹಸ್ತೈರ್ವಹಂತೀಂ ಭಜೇ॥

ಏಕೋ ಆ ದಿನ, ದೇವಿಯ ಸ್ವರೂಪವನ್ನು ವಿವರಿಸುವ ಆ ಧ್ಯಾನ ಶ್ಲೋಕವನ್ನು ಒಂದು ಬಾರಿ ಹೇಳಿಕೊಂಡುದು ಸಾಕಾಗಲಿಲ್ಲ. ಮೂರು—ನಾಲ್ಕು ಬಾರಿ, ಶಬ್ದ ಶಬ್ದವನ್ನು ನುಡಿದ ಶಬ್ದ ಹೃದಯದಲ್ಲಿ ಚಿತ್ರವಾಗಿ ಮೂಡು ವಂತೆ ಹೇಳಿಕೊಂಡರು.

ಹಾಗೆ ಆ ಧ್ಯಾನ ಶ್ಲೋಕವನ್ನು ಹೇಳಿಕೊಳ್ಳುತ್ತಿರುವಾಗಲೇ ವಿಶ್ವಾ ಮಿತ್ರ ಮಹರ್ಷಿ ಗಾಯತ್ರಿ ಮಂತ್ರವನ್ನು ಸೃಷ್ಟಿಮಾಡಿದ ಸಂದರ್ಭವೂ ನೆನಪಾಯಿತು.

ತಾನೊಬ್ಬನು ಬ್ರಹ್ಮರ್ಷಿಯಾಗಬೇಕು ಎಂಬ ಸಂಕಲ್ಪದಿಂದ ತಪೋ ಜೀವನವನ್ನು ಆರಂಭಿಸಿದ ವಿಶ್ವಾಮಿತ್ರ ಮಹರ್ಷಿ, ಕೊನೆಗೆ ಜಗತ್ತಿನ ಮಾನವರೆಲ್ಲರನ್ನೂ ಬ್ರಾಹ್ಮಣರನ್ನಾಗಿಸುವ ಉದ್ದೇಶದಿಂದ, ಅಂಥ ಪ್ರಚಂಡ ಶಕ್ತಿಯನ್ನು ಪಡೆದ ಗಾಯತ್ರೀ ಮಂತ್ರವನ್ನು ಸೃಷ್ಟಿಸಿದ್ದ.

ಬ್ರಾಹ್ಮಣನಾಗಬೇಕು ಎಂದರೆ ಬ್ರಹ್ಮಜ್ಞಾನ ಪಡೆಯಬೇಕು—ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆಯಬೇಕು.

ಆ ಬ್ರಹ್ಮ ಸಾಕ್ಷಾತ್ಕಾರವಾದಾಗ ಲಭ್ಯವಾಗುವುದೇ, ಶ್ರೀಕೃಷ್ಣ ಗೀತೆ ಯಲ್ಲಿ ಹೇಳಿದ ಬ್ರಾಹ್ಮೀಸ್ಥಿತಿ.

ಬ್ರಾಹ್ಮೀಸ್ಥಿತಿಯನ್ನು ಪಡೆದು ಬ್ರಾಹ್ಮಣನಾಗಬೇಕು. ಗೀತೆಯ ಸ್ಥಿತ ಪ್ರಜ್ಞನಾಗಬೇಕು–ಅದಂ ಗುರಿ; ದಾರಿ–ಗಾಯತ್ರಿ!

ವೆಂಕಟದಾಸಪ್ಪನವರ ಮೈಯಲ್ಲಿ ನೂರಾರು ಮಿಂಚುಗಳು ತುಳುಕಿ ದಂತಾಗಿ, ತಮ್ಮ ಸುತ್ತಲೂ ಹರ್ಷ ತರಂಗಗಳನ್ನು ತುಳುಕಿಸುವ ಪ್ರಭಾ ಪಲಯವೊಂದು ಹಬ್ಬಿದಂತೆ ಭಾಸವಾಯಿತು.

ಎಲ್ಲೋ ಹುಟ್ಟಿ, ಲಕ್ಷೋಪಲಕ್ಷ ಕಿರಣಶಾಖೆಗಳನ್ನು ಹಬ್ಬಿಸಿ, ನೆಲಮುಗಿಲ ನ್ನಾವರಿಸಿ ಹರಡಿದೆ–ಬೆಳಕಿನ ಬಳ್ಳಿ.

ಆ ಬಳ್ಳಿಯ ಎಲೆಗಳೂ ಆಗತಾನೇ ಕರಗಿಸಿ ಎರಕಹೊಯ್ದ ಶುದ್ಧ ಬೆಳ್ಳಿಯವು.

ಒಂದೊಂದು ಎಲೆಯ ಆಸರೆಯಲ್ಲೂ ಹತ್ತಾರು ತೇಜೋವಿರಾಜಮಾನ ವಾದ ನಕ್ಷತ್ರ ಕುಸುಮಗಳು, ಶುಭ್ರ ಧವಳಕಾಂತಿಯನ್ನು ಚೆಲ್ಲಿ ಅರಳಿವೆ.

ಆ ಬೆಳಕು—

ಆ ಬೆಳಕು ಬಿದ್ದ ಕಣಕಣವೂ ಸೂರ್ಯಕಾಂತಿಯನ್ನುಂಡು ತಣ್ಣಗೆ ಹೊಳೆಯುವ ಚಂದ್ರನಂತಾಗಿವೆ.

ಆ ಬೆಳಕು—

ಕಣ್ಣು ಕೋರೈಸುವ ಪ್ರಚಂಡ ದೀಧಿತಿಯಲ್ಲ–ಶಾಂತ ಹೃದಯದಿಂದ ಮೂಡುವ, ನಿಷ್ಕಲ್ಮಷ ಮಂದಹಾಸದ ಪವಿತ್ರ ಕೋಮಲ ಕಾಂತಿ.

ಆ ದಿವ್ಯೋಜ್ವಲ ಧವಳ ಕಾಂತಿಯ ದರ್ಶನಮಾಡಿ, ತಾನಾಗಿ ಹೃದಯದಲ್ಲಿ ಉಕ್ಕಿ ಬಂದ ಹರ್ಷದಲ್ಲಿ ವೆಂಕಟದಾಸಪ್ಪನವರು ಜಪಿಸಿದರು—

ಓಂ ಭೂರ್ಭುವಸ್ಸುವಃ
ಓಂ ತತ್ಸವಿತೃವರೇಣ್ಯಂ
ಭರ್ಗೋದೇವಸ್ಯ ಧೀಮಹಿ
ಧಿಯೋಯೋನಃ ಪ್ರಚೋದಯಾತ್॥

ಒಂದು ಬಾರಿ, ಹತ್ತು ಬಾರಿ, ನೂರೆಂಟು ಬಾರಿ, ಎರಡು ನೂರೆಂಟು ಬಾರಿ, ನಾಲ್ಕು ನೂರೆಂಟು ಬಾರಿ—

ಶುದ್ಧ ಶ್ರುತಿಮುಗ್ಧಚಿತ್ತನಾಗಿ ಹಾಡಿದುದನ್ನೇ ಹಾಡುವ ಗಾಯಕ ನಂತೆ–ಜಪಿಸಿದರು—

ಓಂ ಭೂರ್ಭುವಸ್ಸುವಃ
ಓಂ ತತ್‌ಸವಿತೃರ್ವರೇಣ್ಯಂ
ಭರ್ಗೋದೇವಸ್ಯ ಧೀಮಹಿ
ಧಿಯೋಯೋನಃ ಪ್ರಚೋದಯಾತ್॥

ಅಷ್ಟುಹೊತ್ತು, ಅವರ ಸುತ್ತ ಹರಿದರೂ, ಅವರನ್ನು ಸೋಕದಿದ್ದ ಬೆಳಕಿನ ಹೊಳೆ, ನಿಧಾನವಾಗಿ, ಮಂದವಾಗಿ, ತಣ್ಣಗೆ ಥಳಥಳಿಸುತ್ತಾ—

ಅಲೆಮಾಲೆಯಾಗಿ, ವರ್ತುಲ ವರ್ತುಲವಾಗಿ—

ಅವರ ಸುತ್ತಲೂಹರಡಿ, ರೋಮರೋಮದ ಕೂಪದಿಂದಲೂ, ಹನಿಹನಿಯಾಗಿ ಒಳಗಿಳಿದು—

ಅವರ ಹೃದಯದಲ್ಲಿ ಮಡುಗಟ್ಟಿ, ಷೋಡಶಕಳಾಪೂರ್ಣ ಪೂರ್ಣಿಮಾ ಚಂದ್ರಕಾಂತಿಯಿಂದ ಹೊಳೆಯಿತು.

ಇದ್ದಕ್ಕಿದ್ದ ಹಾಗೇ—

ಅವರ ಮೈಯ ರೋಮರೋಮವೂ ಆ ಬೆಳಕಿನ ಶತಕೋಟಿ ಶಲಾಕಗಳಾಗಿ ನಿಮಿರಿದವು.

ಬೆಳಕು–ಸುತ್ತಲೂ ಬೆಳಕು. ಆ ಬೆಳಕಿನ ನಡುವೆ ಕುಳಿತ ತಾನೂ ಬೆಳಕು!

ವೆಂಕಟದಾಸಪ್ಪನವರ ಮೈಮೇಲೆ ಪ್ರಜ್ಞೆ ತಪ್ಪಿದಂತಾಯಿತು.

* * * *

ಅವರಿಗೆ ಎಚ್ಚರವಾದಾಗ, ಮುಗಿಲಿನಲ್ಲಿ ನೂರಾರು ನಕ್ಷತ್ರಗಳು ಹೊಳೆಯುತ್ತಿದ್ದವು. ಮುಗಿಲನ್ನು ಬಿಂಬಿಸಿ ಕೊಳದ ನೀರೂ ಮುಗಿಲಿನಂತೆ ಹೊಳೆಯುತ್ತಿತ್ತು.

ನಾಲಗೆ ಇನ್ನೂ ಸದ್ದುಮಾಡದೆ, ಗಾಯತ್ರೀ ಮಂತ್ರವನ್ನು ಉಚ್ಚರಿಸುತ್ತಿತ್ತು.

ಅವರ ಮನಸ್ಸು ಪ್ರಫುಲ್ಲವಾಗಿತ್ತು.

ಮೈ, ಹೂವಿನ ಹಾಸಿಗೆಯ ಮೇಲೆ ಮಲಗಿ ಎದ್ದಂತೆ ಹಗುರಾಗಿತ್ತು

ಹೃದಯದೊಳಗೇನೊ ಅನಿರ್ವಚನೀಯವಾದ, ಆದರೂ ಒಳಗೇ ಮುದುಗಿಸಲಾಗದಂಥ ಹರ್ಷ.

ಏನೋ ಕನಸು ಕಂಡು ನಗುವ ಮಗುವಿನ ಹಾಗೆ ಗಟ್ಟಿಯಾಗಿ, ಮೃದುವಾಗಿ ನಕ್ಕರು ವೆಂಕಟದಾಸಪ್ಪ.

ಆ ನಗುವಿನಲ್ಲಿ ಅವರ ಹೃದಯದಲ್ಲಿದ್ದ ಅಶಾಂತಿ, ಉದ್ವೇಗ ಎಲ್ಲವೂ ತೊಳೆದುಹೋಗಿ, ಅವರ ಬುದ್ಧಿ ಪುಟಕ್ಕಿಟ್ಟ ಚಿನ್ನದಂತಾಯಿತು.

ಅವಸರವಸರವಾಗಿ, ದಿಗ್ವಿಮೋಚನೆ ಮಾಡಿ, ಉಳಿದ ಸಂಧ್ಯಾವಂದನಾ ಕಾರ್ಯವನ್ನು ಮುಗಿಸಿ, ಕೊಳದಿಂದ ಮೇಲೆದ್ದು, ಅಮ್ಮನವರ ಗುಡಿಗೆ ಬಂದು—

"ತಾಯೀ ನಿನ್ನ ಪೂಜೆಯನ್ನು ನಾನು ಬಿಡುತ್ತೇನೆ ಎಂದರೂ, ನೀನು ನನ್ನ ಕೈ ಬಿಡಲಿಲ್ಲ. ಇನ್ನು ದಿನವೂ ಹೀಗೆ ನನ್ನ ಹೃದಯ ಮಂದಿರದಲ್ಲಿ ಪೂಜೆಯನ್ನು ಸ್ವೀಕರಿಸುತ್ತಾ, ಪ್ರಸನ್ನಳಾಗಿರು"

—ಎಂದು ಪ್ರಾರ್ಥಿಸಿ, ನಮಸ್ಕರಿಸಿ, ಮನೆಯ ಕಡೆ ಹೊರಟರು.

೫

ತೋಟದ ಬಳಿಯಿಂದ ಮನೆಯ ಕಡೆ ನಡೆದಾಗ ವೆಂಕಟದಾಸಪ್ಪನವರ ಹೃದಯದಲ್ಲಿ ಹಿಂದೆಂದೂ ಇರದಂಥ ಶಾಂತಿ ತುಂಬಿತ್ತು. ಮೈ ಮಿಂಚುಳ್ಳಿ ಹಕ್ಕಿಯ ತುಪ್ಪಳ ಗರಿಯಷ್ಟು ಹಗುರಾಗಿ, ಆಗಾಗ ಯಾವುದೋ ಅನಿರ್ವಾಚ್ಯ ನೀಯವಾದ ಅನುಭವದ ನೆನಪಾಗಿ, ಮೈ ತನ್ನಷ್ಟಕ್ಕೆ ತಾನೇ ಪುಲಕಿತ ವಾಗುತ್ತಿತ್ತು.

ಆ ಹರ್ಷ, ರೋಮಾಂಚನಗಳಲ್ಲಿ, ದಾರಿಯ ಅಕ್ಕಪಕ್ಕವನ್ನೂ ಗಮನಿಸದೆ, ತಮ್ಮ ಮನೆಯ ಬಳಿ ಬಂದರು.

ಆದರೆ—ಮನೆಯ ಬಾಗಿಲಿಗೆ ಬರುವ ವೇಳೆಗೆ, ಅವರ ಅಚಲವಾದ ಚಿತ್ತ ಶಾಂತಿಯನ್ನೂ ಕಲುಕುವಂಥ ಸನ್ನಿವೇಶವೊಂದು, ಅವರಿಗಾಗಿ, ಅವರ ಮನೆಯ ಬಾಗಿಲಿನಲ್ಲೇ ಕಾದಿತ್ತು.

ತಮ್ಮ ಮನೆ ಇನ್ನೂ ಅಷ್ಟು ದೂರ ಇದೆ ಎನ್ನುವಾಗಲೇ, ಕತ್ತಲ ಮಬ್ಬಿನಲ್ಲೂ, ಅವರಿಗೆ ತಮ್ಮ ಮನೆಯ ಕಿರುಜಗಲಿಯ ಮೇಲೆ ಹತ್ತಿಪ್ಪತ್ತು ಜನದ ಗುಂಪು ಕಲೆತಿರುವುದು ಕಾಣಿಸಿತು.

"ಇದೇನು, ಹೀಗೇಕೆ ಇಷ್ಟು ಜನ ಮನೆಯ ಮುಂದೆ ಕಲೆತಿದಾರೆ?"

—ಎನಿಸಿತು.

ಆ ನೋಟದಿಂದ ಮೂಡಿದ ಕುತೂಹಲದಲ್ಲೇ ನಡಿಗೆಯನ್ನು ಚುರುಕು ಮಾಡಿ ಮನೆಯ ಬಳಿ ಸೇರಿ, 'ಯಾರೋ?' ಎಂದು ಇಣುಕಿ ನೋಡಿದರು ಮನೆಯ ಮುಂದೆ ನೆರೆದಿದ್ದದು—ಅವರ ನಾಟಕದ ಗುಂಪಿನ ಬಳಗವೇ

ಹಳ್ಳಿಯ ನಾಟಕದ ಗುಂಪಿನ ಜನವೆಲ್ಲಾ ಅಲ್ಲಿ ಕಲೆತಿತ್ತು— ಅದರೊಂದಿಗೆ ಹಳ್ಳಿಯವರೂ ಕೆಲವರು.

"ಇವರೆಲ್ಲಾ ಹೀಗೇಕೆ ನೆರೆದಿದಾರೆ?"

—ಎಂದು ಚಿಂತಿಸುತ್ತಾ, ಅವರು, ಆ ಗುಂಪನ್ನು ಪ್ರಶ್ನಿಸುವ ಮೊದಲೇ, ನಾಟಕ ಕಲಿಸುವ ಚನ್ನಬಸಯ್ಯ—

"ಅಗೋ —ದಾಸಣ್ಣನೋರೆ ಬಂದ್ರು"

—ಎಂದ.

ಆತ ಹೇಳಿದುದನ್ನು ಕೇಳಿ ಜಗಲಿಯ ಮೇಲೆ ನೆರೆದಿದ್ದವರ ಕಣ್ಣು ಗಳೆಲ್ಲವೂ ವೆಂಕಟದಾಸಪ್ಪನವರ ಕಡೆ ತಿರುಗಿದವು. ಒಂದು ಗಳಿಗೆ ಯಾರೊಬ್ಬರೂ ಮಾತನಾಡಲಿಲ್ಲ.

ಮಾತನಾಡದೆ ತಮ್ಮತ್ತಲೇ ನೋಡುತ್ತಿದ್ದ ಗುಂಪನ್ನು ವೆಂಕಟದಾಸಪ್ಪ ನವರೂ ನೋಡಿದರು.

ವೆಂಕಟದಾಸಪ್ಪನವರು ಅಲ್ಲಿಗೆ ಬರುವವರೆಗೆ ತಮ್ಮ ಪಾಡಿಗೆ ತಾವು, ಗುಜು ಗುಜು ಮಾತಾಡಿಕೊಳ್ಳುತ್ತಿದ್ದ ಗುಂಪಿಗೆ, ಅವರು ಬಂದ ಮೇಲೆ ಏನೋ ಮಾತಾಡಲು ಬಾಯಿ ಕಟ್ಟಿದಂತಾಗಿತ್ತು.

ಕೊನೆಗೆ ವೆಂಕಟದಾಸಪ್ಪನವರೇ ಆ ಮೌನವನ್ನು ಮುರಿದು—

''ಇದೇನೆಲ್ಲಾ ಇಲ್ಲಿ ಫೇರಾಯಿಸಿಬಿಟ್ಟಿದೀರ. ಇವತ್ತೇನು ಅಭ್ಯಾಸ ಇಲ್ಲವೋ?''

—ಎಂದು ಕೇಳಿದರು.

''ಇನ್ಮೇಲೆ ಆಟಾನೂ ಇಲ್ಲ, ಪಾಟಾನೂ ಇಲ್ಲ, ಎಲ್ಲಾದ್ಕೂ ಎಳ್ಳು ನೀರು ಬಿಟ್ಟುಬಿಟ್ವಿ.''

—ಗುಂಪಿನ ಪರವಾಗಿ, ವೆಂಕಟದಾಸಪ್ಪನವರಲ್ಲಿ ಕೊಂಚ ಸಲಿಗೆಯಿದ್ದ ರಾಜಾ ಪಾರ್ಟಿನ ಬೋರಯ್ಯ ಹೇಳಿದ.

''ಯಾಕೆ ಅಭ್ಯಾಸಮಾಡೋದು ಕೈಲಾಗಲಿಲ್ವೆ? ಚನ್ನಬಸಯ್ಯ, ಇಂಥ ರಣಹೇಡಿ ಮಾತಾಡೋನ್ನ, ಗಾಣಕ್ಕೆ ಹಾಕಿ ಅರೆಸೋದುಬಿಟ್ಟು ಇಲ್ಲಿಗ್ಯಾಕೆ ಕರಕೊಂಡು ಬಂದೆ...ಎಳಕೊಂಡ್ಹೋಗು... ಹಾಗೇ ನಾಲ್ಕು ತಂಗಟೆ ಬರಲು ಹತ್ತಿರ ಇಟ್ಟುಕೋ...... ಬರಲು ಕಾಣುತ್ತಿದ್ದ ಹಾಗೆ, ಪದ ತನ್ನಷ್ಟಕ್ಕೆ ತಾನೇ ಬಾಯಲ್ಲಿ ಹೊರಡುತ್ತೆ.''

—ಎಂದರು ವೆಂಕಟದಾಸಪ್ಪ, ನಗುತ್ತ.

''ಇದು ನಗೋ ಮಾತಲ್ಲ ದಾಸಣ್ಣ—ನಾವು ಆಟ ಆಡಾಕಿಲ್ಲ!'

—ಬೋರಯ್ಯ ಹಟ ಹಿಡಿದಂತೆ ಹೇಳಿದ.

''ಏಕೆ?''

''ನೀವೇ ಅವ್ರೋರ ಪೂಜೆ ಮಾಡ್ತೇ ಇರ್ರೋ ಜಾತ್ರೆಗೆ ನಾವ್ಯಾಕೆ ಆಟ

ಆಡ್ಬೇಕು? ಅವ್ನೋರ ಪೂಜೆ ಮಾಡ್ಕೋರು. ತಮಗೆ ಬೇಕಾದ್ದೋರ ಕೈಲಿ ಆಟಾನೂ ಆಡಿಸ್ಕೋತಾರೆ''.

—ಚೆನ್ನಬಸಯ್ಯ ತಾವೆಲ್ಲಾ ಆಗಲೇ ಆ ವಿಷಯವನ್ನು ಚರ್ಚಿಸಿ ತೀರ್ಮಾನಕ್ಕೆ ಬಂದವರಂತೆ ಹೇಳಿದ.

ಆತ ಹೇಳಿದ ಆ ಮಾತನ್ನು ಕೇಳಿ ವೆಂಕಟದಾಸಪ್ಪನವರೂ ಕೂಡಲೇ ಉತ್ತರ ಕೊಡದೆ ಸುಮ್ಮನಾದರು. ಅವರಿಗೆ ಚೆನ್ನಬಸಯ್ಯನ ಮಾತಿಗೆ ಏನು ಉತ್ತರ ಹೇಳಬೇಕೆಂದು ತೋಚಲಿಲ್ಲ. ಏನು ಹೇಳುವುದು ಎಂದು ಯೋಚಿಸುತ್ತ, ಸುಮ್ಮನೆ ಹೋಗಿ ಜಗಲಿಯ ಕೊನೆಯಲ್ಲಿ ಕುಳಿತರು.

ಚನ್ನಬಸಯ್ಯ ಹೇಳಿದುದನ್ನು ಕೇಳಿ, ಒಂದು ಗಳಿಗೆ ವೆಂಕಟದಾಸಪ್ಪ ನವರ ಬುದ್ಧಿಗೆ ಮಂಕು ಹಿಡಿದಂತಾಗಿತ್ತು.

ಅಮ್ಮನವರ ಪೂಜಾಧಿಕಾರವನ್ನು ಅಚ್ಚಣ್ಣಭಟ್ಟರಿಗೆ ಒಪ್ಪಿಸಿದ ತಮ್ಮ ನಿರ್ಧಾರ ಈ ಬಗೆಯ ಪರಿಣಾಮಕ್ಕೆ ಎಡೆಗೊಡಬಹುದೆಂದು ಅವರು ಕನಸು ಮನಸ್ಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ.

ತಾವು, ತಮ್ಮ ವಂಶ ಪಾರಂಪರ್ಯವಾಗಿ ಬಂದ ಪೂಜಾಧಿಕಾರದ ಹಕ್ಕನ್ನು ಚಲಾಯಿಸಲೆಳಸಿದರೆ, ಅದರಿಂದಾಗಿ ಹಳ್ಳಿಯಲ್ಲಿ ಅಸಮಾಧಾನ ಹೊಗೆಯಾಡಬಹುದೆಂದು ಭಾವಿಸಿದ್ದರೇ ಆಗಲಿ, ತಾವಾಗಿಯೇ ಯಾವ ಒಡಕು ಮಾತಿಗೂ ಅವಕಾಶ ಕೊಡದೆ ಪೂಜಾಧಿಕಾರವನ್ನು ಒಪ್ಪಿಸಿದರೆ, ಅದರಿಂದ ಹೊಸ ಸಮಸ್ಯೆ ಮೂಡಬಹುದು ಎಂದು ಯೋಚಿಸಿರಲಿಲ್ಲ. ಅಚ್ಚಣ್ಣಭಟ್ಟರಿಗೆ ಪೂಜಾಧಿಕಾರ ಒಪ್ಪಿಸಿ, ಅಲ್ಲಿಗೆ ಎಲ್ಲ ಸಮಸ್ಯೆಯೂ ಬಗೆಹರಿಯಿತೆಂದೇ ನಂಬಿದ್ದರು.

ಆದರೆ ಈಗ, ಅವರ ಪರಿಹಾರೋಪಾಯವೇ ನೂತನ ಸಮಸ್ಯೆಯೊಂದಕ್ಕೆ ದಾರಿಮಾಡಿಕೊಟ್ಟುದು, ಕುರುಡನಿಗೂ ಕಾಣುವಷ್ಟು ಸ್ಪಷ್ಟವಾಗಿತ್ತು.

ಈ ಅನಿರೀಕ್ಷಿತ ನೂತನ ಸಮಸ್ಯೆಗೆ ಏನು ಪರಿಹಾರೋಪಾಯ?

ತಾವು ಪೂಜಾಧಿಕಾರವನ್ನು ಬಿಟ್ಟುಕೊಟ್ಟುದ್ದರ ಫಲವಾಗಿ ಜಾತ್ರೆಯ ಪ್ರಮುಖ ಆಕರ್ಷಣೆಗಳಲ್ಲೊಂದಾದ ನಾಟಕವನ್ನೇ ಆಡುವುದಿಲ್ಲ ಎಂದು ಕುಳಿತಿರುವ ಈ ಜನಕ್ಕೆ ಹೇಗೆ ಸಮಾಧಾನ ಹೇಳುವುದು?

ಈ ವಿಷಯವನ್ನೇ ಯೋಚಿಸುತ್ತಾ ವೆಂಕಟದಾಸಪ್ಪನವರು ಸುಮ್ಮನೆ ಕುಳಿತಿದ್ದರು.

"ಮಾಡೋದೆಲ್ಲಾ ಮಾಡಿ. ಈಗ ಮಳ್ಳಿ, ಹಾಗೆ ಕುಂತ್ರೆ ಏನಾ ದಂಗಾಯ್ತು—ದಾಸಣ್ಣ?"

—ಎಂದ ಬೋರಯ್ಯ ಆ ಮೌನವನ್ನು ಮುರಿದು.

"ಮತ್ತೆ—ಸುಮ್ಮನೆ ಕುಳಿತುಕೊಳ್ಳದೆ ನಾನಿನ್ನೇನು ಮಾಡಲಿ—ನೀವು. ನನ್ನ ಸ್ನೇಹಿತರು, ಅಭಿಮಾನಿಗಳೇ ಹೀಗೆ ಮಾಡಿದರೆ?"

—ವೆಂಕಟದಾಸಪ್ಪ ಏನೋ ಯೋಚಿಸುತ್ತಾ ಹೇಳಿದರು.

"ನಾವೇನು ಮಾಡಿದ್ವಿ ದಾಸಣ್ಣ? ಎಲ್ಲಾ ಮಾಡಿದ್ದೂ ನೀವೇ. ನಮ್ಮ ಸಂತೋಷಾನೇ ಮುರಿದು ಬಿಟ್ರಿ."

—ಚನ್ನಬಸಯ್ಯ ಹೇಳಿದ.

"ಏಕೆ?"

"ಇದು ನಿಮಗೆ ಮುದ್ನೆ ಆದ ವರ್ಷ. ಹೊಸ ಆಟ, ಸೀನು ಎಲ್ಲಾ ನೋಡಿ ಸಂತೋಷ ಪಡೋಹಂಗೆ ಆಡಬೇಕು ಅಂತ ಹುಡುಗ್ರೆಲ್ಲಾ ಭಾಳ ಖುಷಿಯಾಗಿದ್ರು. ಈಗ ಹಿಂಗಾದ್ದು ಕಂಡು ಅವರು ಯಾರಿಗೂ ಆಟ್ಟ ಪತ್ರೋ ಆಸೆ ಇಲ್ಲ. ಎಲ್ಲಾ 'ಎಲ್ಲಾದ್ರೂ ಹಾಳಾಗಿಗೋಗ್ಲಿ. ನಮಗೆ ಬೇಕಾದೋರ್ಗೆ ಹಿಂಗಾದ್ಮೇಲೆ ನಾವಿನ್ಯಾರ ಸುಖಕ್ಕೆ ಆಟ ಆಡ್ಬೇಕು' ಅಂತ ಮೊಕ ತಿರುಗಿಸಿ ಕೊಂಡು ಕುಂತವ್ರೆ."

"ಅದಕ್ಕೂ ಇದಕ್ಕೂ ಏನು ಸಂಬಂಧ ಆಯ್ತೋರೇ—ನಾನು ಅಮ್ಮನೋರ ಪೂಜೆ ಮಾಡೊಲ್ಲಾಂದ್ರೆ ಮಾತ್ರಕ್ಕೆ, 'ಆಟ ನೋಡೊಲ್ಲ, ನೋಡಿ ಸಂತೋಷ ಪಡೋಲ್ಲ' ಅಂತ ಏನಾದ್ರೂ ಹೇಳಿದ್ನೇ? ಅವರ ಪಾಡು ಅವಕ್ಕೆ. ಇವರ ಪಾಡು ಇವಕ್ಕೆ. ಇವೆರಡಕ್ಕೂ ಯಾಕೆ ತಾಳೆ ಹಾಕಿದಿರಿ..."

"ಮತ್ತೆ —ನಮ್ಮೋರಿಗೆ ಅವಮಾನ ಆದ್ರೂ ಬಾಯ್ಮುಚ್ಚಿಕೊಂಡಿರ ಬೇಕಾಗಿತ್ತು, ಅಂತೀರಾ?"

—ಉಳಿದವರ ಪರವಾಗಿ ಬೋರಯ್ಯ ಸವಾಲು ಹಾಕಿ ಹೇಳಿದ.

"ಈಗ ನಮ್ಮೋರಿಗೆ ಯಾರು ಅವಮಾನ ಮಾಡೋಕೆ ಹೊರಟಿದಾರೆ ಬೋರಣ್ಣ—ಸುಮ್ಮನೆ ಇಲ್ಲದ್ದೆಲ್ಲಾ ಕಲ್ಪಿಸಿಕೊಳ್ಳುವುದು ಒಳ್ಳೆಯದಲ್ಲ."

—ಬೋರಯ್ಯನನ್ನು ಸಮಾಧಾನಗೊಳಿಸುವ ಸ್ವರದಲ್ಲಿ ಹೇಳಿದರು ವೆಂಕಟದಾಸಪ್ಪ.

"ನೀವು ಮಸಿ ಸುಮ್ಕಿರಿ ಬುದ್ಧಿ—"

—ವೆಂಕಟದಾಸಪ್ಪನವರ ಮಾತಿನಿಂದ ಬೋರಯ್ಯ ಸಮಾಧಾನ ಗೊಳ್ಳದೆ, ಅದಕ್ಕೆ ಪ್ರತಿಯಾಗಿ ತಟಕ್ಕನೆ ಉದ್ರಿಕ್ತನಾಗಿ ಹೇಳಿದ.

"ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದ್ರೆ ನೋಡೋರಿಗೂ ಕಾಣೋಕಿಲ್ವಾ. ನಮ್ಗೆಲ್ಲಾ ಗೊತ್ತದೆ. ಅಚ್ಚಣ್ಣಭಟ್ಟರ ಕಿತಾಪತಿ ಯಾರಿಗೆ. ಗೊತ್ತಿಲ್ಲಾಂದ್ಕೊಂಡಿದೀರ? ಏನೋ ಹಸಿರು ಹಾವು ಅಂದ್ಕೊಂಡು ಸುಮ್ನಿದ್ವಿ ಇಂಥ ವಿಷ ಸರ್ಪ ಅಂತ ಗೊತ್ತಿದ್ರೆ ಯಾವೊತ್ತೋ ಕಾಳಿಂಗ ಮರ್ಧನ ಮಾಡಿ ಬಿಡ್ತಾ ಇದ್ವಿ!"

ಬೋರಯ್ಯನ ಸಿಟ್ಟಿನ ಮಾತುಗಳನ್ನು ಕೇಳಿ ವೆಂಕಟದಾಸಪ್ಪನವರು ಒಂದು ಗಳಿಗೆ ಸುಮ್ಮನಿದ್ದು ಬಳಿಕ ಕೇಳಿದರು—

"ಇದೆಲ್ಲಾ ಯಾರ ಮೇಲಿನ ಸಿಟ್ಟು, ಬೋರಯ್ಯ—ನನ್ನ ಮೇಲೇ?"

"ಅಲ್ಲ—"

"ಮತ್ತೆ?"

"ಅಮ್ನೋರ ಪೂಜೆ ನೆಪತಗೊಂಡು, ನಿಮ್ಮ ಮೊಕ ಮುರದ್ರಲ್ಲಾ ಅಚ್ಚಣ್ಣಭಟ್ಟರು—ಅವರ ಮ್ಯಾಲೆ."

"ಅಚ್ಚಣ್ಣ ಭಟ್ಟರ ಮೇಲೇಕಿಷ್ಟು ಸಿಟ್ಟು ಬೋರಯ್ಯ—ಅವರು ನನಗೇನೂ ಮಾಡಲಿಲ್ಲ. ಅಮ್ಮನವರ ಪೂಜೆ ಮಾಡಕೂಡದೂಂತ, ಅವರೇನೂ ನನ್ನನ್ನು ನಿಷೇಧಿಸಲಿಲ್ಲ. ನಾನೇ ಬೇಡಾಂದೆ."

"ಯಾಕೆ?"

—ಬಾಣದೇಟಿನಂತೆ ಕೇಳಿದ ಬೋರಯ್ಯ.

ಆ ನೇರವಾದ ಪ್ರಶ್ನೆಯ ಇದಿರು ವೆಂಕಟದಾಸಪ್ಪನವರೂ ತತ್ತರಿಸಿ ಹೋದರು. ಆ ಪ್ರಶ್ನೆಗೆ ಉತ್ತರ ಕೊಡಲಾಗದೆ—

"ಬೋರಣ್ಣಾ ಈ ಮಾತೆಲ್ಲಾ ಈಗ ಅಗತ್ಯವಿಲ್ಲ, ನೀವೆಲ್ಲಾ ನನ್ನ ಅಭಿಮಾನಿಗಳು ಆಹಂದೋ ಅಲ್ಲವೋ—?"

—ಎಂದರು ನಸು ಅಸಮಾಧಾನ ತುಂಬಿದ ಧ್ವನಿಯಲ್ಲಿ, ಆದಷ್ಟು ಬೇಗ, ಹೆಚ್ಚು ಚರ್ಚೆಯಿಲ್ಲದೆ ಆ ಪ್ರಸಂಗವನ್ನು ಮುಕ್ತಾಯಗೊಳಿಸಲು.

"ಅಷ್ಟಲ್ಲದೆ, ಬ್ಯಾರೇರ ಹಾಗೆ ನಾವೇನು ಮಾರೇಲಿ ಕತ್ತು ಕೊಯ್ಯೋರೂಂತ ತಿಳುಕೊಂಡ್ಯಾ ದಾಸಣ್ಣ!..."

—ಅದುವರೆಗೂ ಸುಮ್ಮನಿದ್ದ ಚೆಲುವಾಚಾರಿ ಕೇಳಿದ.

"ಅಂದರೆ—ನೀವೆಲ್ಲಾ ನನ್ನ ಸ್ನೇಹಿತರು ತಾನೇ—?"

"ಹೌದಂ."

"ಆದರೆ ನನ್ನ ಮನಸ್ಸಿಗೆ ನೋವಾಗುವಂಥ ಕೆಲಸ ಮಾಡುವವರು ನನ್ನ ಸ್ನೇಹಿತರಾಗಲು ತಕ್ಕವರಲ್ಲ—ಅಲ್ಲವೇ?"

—ವೆಂಕಟದಾಸಪ್ಪನವರು ಚುರುಕಾಗಿ ಕೇಳಿದರು.

ಯಾವುದೋ ಜಾಡಿನಲ್ಲಿ ನಡೆಯುತ್ತಿದ್ದ ಮಾತು, ತಟಕ್ಕನೆ ಬೇರಾವುದೋ ಜಾಡಿನಲ್ಲಿ ನಡೆಯಲಾರಂಭಿಸಿದುದನ್ನು ಕಂಡು ಗುಂಪಿನವರು ಅವಾಕ್ಕಾದರು.

"ಇದು...ಇದು... ಯಾರಿಗೆ ಹೇಳೋ ಮಾತು...ದಾಸಣ್ಣ?"

—ಚೆನ್ನಬಸಪ್ಪ ಸಂದೇಹಪಟ್ಟು, ತೂಗಾಡುತ್ತಾ ಕೇಳಿದ.

'ನಿಮಗೇ'

'ಅರೆ ಏ ಕೈಸಾ ಬಾತ್!'

—ವೆಂಕಟದಾಸಪ್ಪನವರ ಉತ್ತರ ಕೇಳಿ ಚಕಿತನಾದ ಸಾಬ್ಜಾನಹೇಳಿದ

'ನೀನು ಸುಮ್ಮನಿರು ಸಾಬ್ಜಾನ—ನಕಲಿ ಮಾತಾಡಬೇಡ'

—ಎಂದು ಸಾಬ್ಜಾನನ್ನು ಸುಮ್ಮನಿರಿಸಿ, ವೆಂಕಟದಾಸಪ್ಪನವರೇ ಮುಂದುವರಿಸಿ ಹೇಳಿದರು—

'ಚೆನ್ನಬಸಣ್ಣ, ಬೋರಯ್ಯ—ನನ್ನ ಮಾತು ಚೆನ್ನಾಗಿ ಕೇಳಿಕೊಳ್ಳಿ—ಅಮ್ಮನವರ ಪೂಜೆಯ ಹಕ್ಕನ್ನು ನಾನಾಗಿಯೇ ಅಚ್ಚಣ್ಣಭಟ್ಟರಿಗೆ ಒಪ್ಪಿಸಿದ್ದೇನೆ; ಗೊತ್ತಾಯಿತೇ? ಅದರಲ್ಲಿ ಯಾರ ಒತ್ತಾಯವೂ ಇಲ್ಲ. ಯಾರ ಪ್ರೇರೇಪಣೆಯೂ ಇಲ್ಲ. ನಾನು ಆ ಹಕ್ಕನ್ನು ಬಿಟ್ಟುಕೊಟ್ಟದ್ದು ಅಮ್ಮನವರ ಪೂಜೆ ಶಾಂತವಾಗಿ, ನಿರ್ಬಾಧಕವಾಗಿ, ಯಾರ ಮನಸ್ಸಿಗೂ, ಕಿಂಕೃತಿ ಇಲ್ಲದಂತೆ ನಡೆಯಲಿ ಎಂದು. ಅದೇ ನನ್ನ ಉದ್ದೇಶ. ನನ್ನ ಉದ್ದೇಶಕ್ಕೆ ವಿರುದ್ಧವಾಗಿ

ವರ್ತಿಸುವವರು, ಎಂದೂ ನನ್ನ ಮಿತ್ರರಾಗಲಾರರು, ನನ್ನ ಅಭಿಮಾನಿಗಳಾಗ ಲಾರರು. ಆದ್ದರಿಂದ ಖಂಡಿತವಾಗಿ ಹೇಳಿಬಿಡುತ್ತೇನೆ—ಕೇಳಿ. ನೀವು ನನ್ನ ಮಿತ್ರರಾದರೆ, ನಾನೇ ಪೂಜೆ ಮಾಡಿದ್ದರೆ, ಜಾತ್ರೆಯಲ್ಲಿ ಎಷ್ಟು ಸಂತೋಷ ದಿಂದ ಭಾಗವಹಿಸುತ್ತಿದ್ದಿರೋ, ಈಗಲೂ ಅಷ್ಟೇ ಸಂತೋಷವಾಗಿ, ನೀವೂ ಬೇಸರಮಾಡಿಕೊಳ್ಳದೆ, ಯಾರ ಮನಸ್ಸಿಗೂ ಬೇಸರ ಮಾಡದೆ, ಜಾತ್ರೆಯ ಕೆಲಸಗಳಲ್ಲಿ ಭಾಗವಹಿಸಿ. ಹಾಗಲ್ಲದೆ, ನನ್ನ ಮೇಲಿನ ವಿಶ್ವಾಸದಿಂದ, ಜಾತ್ರೆಗೆ ಬರುವ ಸಾವಿರಾರು ಜನರ ಬೇಸರಕ್ಕೆ ನೀವು ಕಾರಣವಾಗುವುದಾದರೆ, ನೀವು ಖಂಡಿತವಾಗಿಯೂ ನನ್ನ ಸ್ನೇಹಿತರಲ್ಲ—ನಮ್ಮ ಸ್ನೇಹಕ್ಕೆ ಇಂದು ಕೊನೆ ಯಾಗುತ್ತದೆ. ಹೇಳಿ—ನೀವು ನನ್ನ ಮಿತ್ರರೋ, ಅಲ್ಲವೋ?'

ಗಡುಸಾದ, ಬಿರುಸಾದ ಧ್ವನಿಯಲ್ಲಿ ವೆಂಕಟದಾಸಪ್ಪನವರು ಹೇಳಿದು ದನ್ನು ಕೇಳಿ ಆ ಗುಂಪು ಸದ್ದಡಗಿ ಸುಮ್ಮನೆ ನಿಂತಿತು.

ಗುಂಪಿನಲ್ಲಿದ್ದ ಯಾರಿಗೂ ಏಕೋ ಮಾತಾಡಲು ಧೈರ್ಯವಾಗಲಿಲ್ಲ.

'ಸರಿ. ನೀವೆಲ್ಲಾ ನನ್ನ ಸ್ನೇಹಿತರೇ. ಹೋಗಿ ನಾಟಕಾಭ್ಯಾಸ ಮುಂದು ವರಿಸಿ. ಈ ಸಾರಿಯ ನಾಟಕ, ಉಳಿದೆಲ್ಲ ಸಾರಿಯ ನಾಟಕಗಳಿಗಿಂತ ಚೆನ್ನಾಗ ಬೇಕು. ಅಯ್ನೋರೇ—ಚೆನ್ನಾಗಿ ಕಲಿಸಿ. ನಾಳಿನಿಂದ ನಾನೂ ಅಭ್ಯಾಸದ ಹೊತ್ತಿಗೆ ಬಂದು ಕೂತುಕೋತೀನಿ'.

—ಎಂದವರೇ ವೆಂಕಟದಾಸಪ್ಪನವರು ಮತ್ತೆ ಮಾತು ಮುಂದುವರಿಯಲು ಅವಕಾಶ ಕೊಡದೆ, ತಲೆಬಾಗಿಲಿನ ಕಡೆ ನಡೆದು, ಮುಂದೆ ಹಾಕಿದ ಬಾಗಿಲನ್ನು ದಬ್ಬಿಕೊಂಡು, ಮನೆಯೊಳಗೆ ಪ್ರವೇಶಿಸಿ, ಮತ್ತೆ ಬಾಗಿಲು ಹಾಕಿಕೊಂಡರು.

ಅವರು ಮನೆಯೊಳಗೆ ಪ್ರವೇಶಿಸುತ್ತಿದ್ದ ಹಾಗೇ ಹಜಾರದಲ್ಲಿ ಕುಳಿತಿದ್ದ ಲಕ್ಷ್ಮೀದೇವಮ್ಮ, ಮತ್ತು ರಾಜೇಶ್ವರಿ ವೆಂಕಟದಾಸಪ್ಪನವರ ಕಣ್ಣಿಗೆ ಬಿದ್ದರು.

ತಲೆಯ ಮೇಲೆ ಆಕಾಶವೇ ಕವಿದು ಬಿದ್ದಂತೆ ಕುಳಿತಿದ್ದ ತಾಯಿ, ಹತಾಶಳಾಗಿ, ಕಂಭಕ್ಕೆ ಒರಗಿಕೊಂಡು ಕುಳಿತ ತಂಗಿ—ಆ ಇಬ್ಬರನ್ನೂ ನೋಡಿದ ಬಳಿಕ ವೆಂಕಟದಾಸಪ್ಪನವರಿಗೆ ಏಕೋ ಮುಂದೆ ಕಾಲಿಡಲಾಗಲಿಲ್ಲ. ನಿರಪಾಯ ವಾದ ದಾರಿಯಲ್ಲಿ ನಡೆಯುತ್ತಿರುವಾಗ, ಇದ್ದಕ್ಕಿದ್ದಂತೇ ಘಟಸರ್ಪವನ್ನು ಕಂಡು, ನಿಬ್ಬೆರಗಾಗಿ ನಿಲ್ಲುವ ಪಾಂಥನಂತೆ, ವೆಂಕಟದಾಸಪ್ಪನವರು ಹಾಗೇ ಮುಚ್ಚಿದ ತಲೆಬಾಗಿಲಿಗೆ ಬೆನ್ನು ಕೊಟ್ಟು ನಿಂತರು.

೬

'ಕಿರ್' ಎಂದು ತೆರೆದು ಮುಚ್ಚಿದ ಭಾರವಾದ ತಲೆಬಾಗಿಲಿನ ಸದ್ದಿನಿಂದಲೇ ಲಕ್ಷ್ಮೀದೇವಮ್ಮ, ರಾಜೇಶ್ವರಿ ಇಬ್ಬರಿಗೂ ವೆಂಕಟದಾಸಪ್ಪನವರು ಮನೆಯೊಳಗೆ ಬಂದುದು ತಿಳಿದಿತ್ತು.

ಆದರೆ ಆ ಇಬ್ಬರಲ್ಲಿ ಒಬ್ಬರೂ—

ವೆಂಕಟದಾಸಪ್ಪನವರನ್ನು ಮಾತನಾಡಿಸಲಿಲ್ಲ;

ಅವರ ಕಡೆ ತಿರುಗಿಯೂ ನೋಡಲಿಲ್ಲ.

ಮನೆಯ ಹೊರಗಿದ್ದ ಗುಂಪು ಏನೋ ಗುಜುಗುಜು ಮಾತಾಡಿಕೊಳ್ಳುತ್ತಿತ್ತು. ಹಜಾರದ ಗೂಡಿನಲ್ಲಿಟ್ಟ, ಹಣತೆಯ ದೀಪ ಮಂಕಾಗಿ ಉರಿಯುತ್ತಿತ್ತು.

ಮನೆಯ ಹೊರಗಿನಿಂದ ಕೇಳಿಬರುತ್ತಿದ್ದ ಸದ್ದೂ ಕ್ರಮೇಣ ಕಡಿಮೆಯಾಗಿ ಕಡೆಗೆ ಸಂಪೂರ್ಣವಾಗಿ ನಿಂತುಹೋಗಿ, ಮನೆಯ ಹೊರಗೆ ಮೌನ ವ್ಯಾಪಿಸಿತು.

ಹೊರಗಿನ ಮೌನವೇ ಮನೆಯೊಳಗೂ ಹಬ್ಬಿತು.

ಮೌನ ಕವಿದ ಮನೆ, ಮಂಕಾಗಿ ಉರಿವ ದೀಪ, ಮಾತನಾಡದೆ ಗಂಟು ತಲೆಯ ಮೇಲೆ ಕವಿದು ಬಿದ್ದಂತೆ ಕಂಳಿತ ಆ ತಾಯಿ ಮಕ್ಕಳು—

ಅದನ್ನು ಕಂಡು ವೆಂಕಟದಾಸಪ್ಪನವರೂ ಒಂದು ಗಳಿಗೆ ಮೂಕರಾದರು. ಆ ದೃಶ್ಯವನ್ನು ಕಂಡ ಬಳಿಕ ಏಕೋ ಅವರ ಚಿತ್ತಸ್ಥೈರ್ಯವೂ ಸಡಿಲವಾಗಿ, ಹೃದಯದಲ್ಲಿ ಕಳವಳ ಮೂಡಿತು. ಏಕೋ ಆ ಗಳಿಗೆಯಲ್ಲಿ ಅವರಿಗೆ 'ಅಮ್ಮಾ ನನ್ನಿಂದ ತಪ್ಪಾಯಿತು, ಮನ್ನಿಸು' ಎಂದು ಬೇಡಿಕೊಳ್ಳಬೇಕಂ ಎನಿಸಿತು. ಏಕೋ ಆ ದಿನ ಅವರ ಸಂಕಲ್ಪಕ್ಕೆ ವಿರುದ್ಧವಾಗಿ ಹೆಜ್ಜೆಗೊಂದು ಪರೀಕ್ಷೆ ಕಾದಿದ್ದಂತೆ ತೋರಿಬಂದು, ಎದೆಯಲ್ಲಿ ಭೀತಿಯ ಛಾಯೆ ಸುಳಿಯಿತು.

ಹತ್ತು ಗಳಿಗೆ ಹಾಗೇ ನಿಂತಿದ್ದು ಬಳಿಕ, ಗಳಿಗೆಗಳಿಗೆ ಅಧೈರ್ಯವನ್ನು ಬಲಿಸುತ್ತಿದ್ದ ಮೌನವನ್ನು ಮುರಿಯದಿದ್ದರೆ, ಅದರ ಆಘಾತಕ್ಕೆ ತಮ್ಮ ಸಂಕಲ್ಪವೇ ಮುರಿದು ಬೀಳಬಹುದೆಂದು ಹೆದರಿ, ತಾವೇ—

'ಇದೇನು ರಾಜೇಶ್ವರಿ, ಹೀಗೆ ಕುಳಿತಿದೀರಾ?'

—ಎಂದು ತಮ್ಮ ತಂಗಿಯನ್ನು ಮಾತಾಡಿಸಿದರು.

ಅವರ ಪ್ರಶ್ನೆಗೆ ರಾಜೇಶ್ವರಿ ಉತ್ತರ ಕೊಡುವ ಮೊದಲು ಲಕ್ಷ್ಮೀದೇವಮ್ಮನೇ ಹೇಳಿದಳು–

'ಇನ್ನೇನ್ಮಾಡೋದಪ್ಪಾ–ಹೊಟ್ಟೆಗೆ ಹಾಲು ಹುಯ್ಕೊಂಡಹಾಗಾಗಿದೆ ಅದಕ್ಕೇ ತಣ್ಣಗೆ ಕುಳಿತಿದೀವಿ'.

ಆಕೆಯ ನಯವಾದ ಮಾತು, ಆಗ ತಾನೇ ಮಸೆದ ಅಲಗಿನಷ್ಟು ಹರಿತವಾಗಿತ್ತು.

ಆ ಮಸೆದ ಮಾತಿನ ಇರಿತವೇ ಸಾಲದೆಂಬಂತೆ ರಾಜೇಶ್ವರಿ, ತಟಕ್ಕನೆ ಕೆರಳಿ, ಕರ್ಕಶವಾದ ಸ್ವರದಲ್ಲಿ ಹೇಳಿದಳು–

'ಅಂತೂ ನಾವು ಹಳ್ಳೀಲಿ ತಲೆ ಎತ್ತಿಕೊಂಡು ತಿರುಗಬಾರದೊಂತ್ಲೇ ನಿರ್ಧಾರಮಾಡಿಬಿಟ್ಟಿದಿಯನ್ನೂ. ಸುಮ್ಮನೆ ದಿನಕ್ಕೊಂದು ತರಪ ಹಡೆದೋರನ್ನು ಕೊರಗಿಸುವದರ ಬದಲು, ಒಂದು ಸಲ ಅವರ ಕತ್ತು ಮುರಿದುಬಿಡಬಾರದೇ ದಾಸಣ್ಣ–ಆಮೇಲೆ ಹಾಯಾಗಿ ನಿನಗೆ ಹ್ಯಾಗೆ ಬೇಕೋ ಹಾಗೆ ಆಡಿಕೊಂಡು ಇರಬಹುದು.'

ತಮ್ಮ ವಿಷಯದಲ್ಲಿ ಎಂದೂ ಕಠಿಣವಾಗಿ ನುಡಿಯದ ರಾಜೇಶ್ವರಿ ಆಡಿದ ಆ ಮಾತುಗಳು, ವೆಂಕಟದಾಸಪ್ಪನವರ ಹೃದಯವನ್ನು ಸಹಸ್ರ ಕಶಾಘಾತದಂತೆ ಕತ್ತರಿಸಿತು. ನುಂಗಲಾರದ ಆ ನೋವನ್ನು, ಹಾಗೇ ಕಣ್ಣು ಮುಚ್ಚಿ ನುಂಗಿ–

'ಅಂತೂ–ನಾನು ಮಾಡಿದ್ದು ತಪ್ಪೊಂತಲೇ ನಿನ್ನ ಅಭಿಪ್ರಾಯ...'

—ಎಂದರು.

'ತಪ್ಪು, ಒಂದು ಸಲ ಅಲ್ಲ ಸಾವಿರ ಸಲ ಆ ಮಾತು ಹೇಳು. ಬರೀ ತಪ್ಪಲ್ಲ–ನೀನು ಮಾಡಿದ್ದು ಶುದ್ಧ ನಾಚಿಕೆಗೇಡಿನ ಕೆಲಸ. ನಮ್ಮನ್ನೆಲ್ಲಾ ಇದ್ದೂ ಸತ್ತೊರನ್ನ ಮಾಡಿಬಿಟ್ಟೆ.'

—ಮತ್ತಷ್ಟು ಕಟುವಾಗಿ ಹೇಳಿದಳು ರಾಜೇಶ್ವರಿ.

'ಸರಿ...ಸರಿ...ಅವನ ಪಾಲಿಗೆ ನಾವೆಲ್ಲಾ ಬದುಕಿದ್ದ ಲೆಕ್ಕಕ್ಕೆ ಸೇರಿದ್ದರೆ ತಾನೇ, ಅವನಿಗೆ ನಮ್ಮ ಯೋಚನೆ ಬರೋದು–ಅವನ ದೃಷ್ಟೀಲಿ ನಾವು ಇದ್ದರೂ ಸತ್ತ ಹಾಗೆ.'

—ರಾಜೇಶ್ವರಿಯೊಂದಿಗೆ ಧ್ವನಿಕೂಡಿಸಿ, ಅವಳ ಮಾತು ಹೊತ್ತಿಸಿದ ಉರಿಗೆ ತೈಲವರೆಯುತ್ತ ಹೇಳಿದಳು ಲಕ್ಷ್ಮೀದೇವಮ್ಮ—

'ಇಂಥಾದೆಲ್ಲಾ ನೋಡಿಕೊಂಡು ಬದುಕಿರೋಕಿಂತ, ಸತ್ತು ಬೂದಿಯಾಗೋದು ಲೇಸು. ಅವರು—ಪುಣ್ಯಾತ್ಮರು—ಕಣ್ಣು ಮುಚ್ಚಿಕೊಂಡು ಬದುಕಿದರು...'

'ಅಮ್ಮಾ—'

ತಾಯಿಯ ಮಾತನ್ನು ಕೇಳಿ, ವ್ಯಥೆಯನ್ನು ತಡೆಯಲಾಗದ ಆರ್ತ ಸ್ವರದಲ್ಲಿ ಹೇಳಿದರು ವೆಂಕಟದಾಸಪ್ಪ—

'ಇಲ್ಲಿ ನೋಡು—ನಾನು ಮಾಡಿರೋ ಕೆಲಸದಿಂದ ನಿನಗೆ ವ್ಯಥೆಯಾಗಿರೋದು ನಿಜ. ಆದರೆ ನಾನು ಹಾಗ್ಯಾಕೆ ಮಾಡ್ದೆ ಅಂತ ಕೇಳದೆ, ಸುಮ್ನೆ ಆಡಬಾರದ ಮಾತೆಲ್ಲಾ ಆಡಬೇಡ.'

'ಅದೊಂದೇ ಬಾಕಿ ಉಳಿದಿರೋದು...'

—ಕಹಿಯಾಗಿ ಹೇಳಿದಳು ಲಕ್ಷ್ಮೀದೇವಮ್ಮ.

'ಏನು?'

'ಬಾಯಿಗೆ ಬೀಗ ಬಡುಕೊಂಡು ಕೂತುಕೊಳ್ಳೋದು! ನಿರ್ಭಾಗ್ಯ... ನಿರ್ಭಾಗ್ಯ...ನಿರ್ಭಾಗ್ಯ...ಇನ್ನು ಏಳೇಳು ಜನ್ಮಕ್ಕೆ ಈ ಮನೆ ತಲೆ ಎತ್ತದ ಹಾಗೆ ಮಾಡಿಬಿಟ್ಟೆ. ಆ ಗೌರೀನ ಕಟ್ಕೊಂಡು—ಇನ್ನೂ ಏನೇನು ಆಗಬೇಕಾಗಿದೆಯೋ...ಏನೇನು ನೋಡಬೇಕೋ...ಏನೇನು ಕೇಳಬೇಕೋ...ಅಂತೂ ಆ ಪುಣ್ಯಾತಗಿತ್ತಿ—ಈ ಮನೇನ ತೊಳೆದು ಬಳಿದು ಸಾರಿಸಿ ರಂಗೋಲೆ ಇಟ್ಟು, ಆಮೇಲೆ ನಗೆದ್ಬಿದ್ದು ಹೋಗ್ತಾಳೇಂತ ಕಾಣುತ್ತೆ. ರಾಮ... ರಾಮ...ಯಾವ ಕೇಡಿಗೆ ನಿನಗಿಂಥ ಬುದ್ಧಿ ಬಂತೋ...ಅದ್ಯಾವ ಅಗ್ನಿ ನಕ್ಷತ್ರದಲ್ಲಿ ಆ ಮಹಾರಾಯ್ತಿ ಸಂಗಮಾಡಿದ್ಯೋ...'

—ತನ್ನ ಹೃದಯದಲ್ಲಿ ಹೊತ್ತಿದ ಕ್ರೋಧದಲ್ಲಿ ಕುರುಡಾಗಿ, ಸಿಕ್ಕಕಡೆ ಸಿಟ್ಟು ತೂರುತ್ತಾ ಹೇಳಿದಳು ಲಕ್ಷ್ಮೀದೇವಮ್ಮ.

ಆಕೆಯ ಮಾತುಗಳನ್ನು ಕೇಳಿ ವೆಂಕಟದಾಸಪ್ಪನವರ ಮೈ ಇದ್ದಕ್ಕಿದ್ದಂತೆಯೇ ಬಿರುಸಾಯಿತು. ಗೌರಮ್ಮನ ನಿಂದೆಯನ್ನು ಕೇಳಿ, ನರನಾಡಿಗಳಲ್ಲಿ ಸಿಟ್ಟು ತುಂಬಿ ತುಳುಕಿತು.

ಒಂದು ಗಳಿಗೆ—ಎಲ್ಲ ಹತೋಟಿಯನ್ನು ಕಡಿದೊಗೆದು ನುಗ್ಗಿಪ್ಪು ದೇನೋ ಎಂಬ ಹಾಗೆ ವಿಜೃಂಭಿಸಿತು ಸಿಟ್ಟು. ಆದರೆ ಮರುಗಳಿಗೆಯೇ ಅವರ ಅಂತರ್ವಾಣಿ ನುಡಿಯಿತು—

ಧ್ಯಾಯತೇ ವಿಷಯಾನ್ ಪುಂಸಃ।
ಸಂಗಸ್ತೇಷೂಪ ಜಾಯತೇ॥
ಸಂಗಾತ್ ಸಂಜಾಯತೇ ಕಾಮಃ॥
ಕಾಮಾತ್ ಕ್ರೋಧೋಽಭಿಜಾಯತೇ॥
ಕ್ರೋಧಾದ್ಭವತಿ ಸಮ್ಮೋಹಃ।
ಸಮ್ಮೋಹಾತ್ ಸ್ಮೃತಿ ವಿಭ್ರಮಃ॥
ಸ್ಮೃತಿಭ್ರಂಶಾದ್ಬುದ್ಧಿನಾಶೋ।
ಬುದ್ಧಿ ನಾಶಾತ್ ಪ್ರಣಶ್ಯತಿ॥

ಆ ಗೀತೆಯ ಮಾತು ನೆನಪಾಗುತ್ತಿದ್ದ ಹಾಗೇ, ವೆಂಕಟದಾಸಪ್ಪನವರ ಮೈಯನ್ನು ತುಂಬಿದ ಸಿಟ್ಟು, ಉರಿಬಿಸಿಲು ಸೋಕಿದ ಇಬ್ಬನಿಯಂತೆ ಮಾಯ ವಾಗಿ ಹೋಯಿತು.

'ಎಷ್ಟು ಅಸ್ಥಿರ, ಎಷ್ಟು ಚಪಲ ನನ್ನ ಮನಸ್ಸು! ಸುಳಿಗಾಳಿಗೂ, ಬುಡ ಕಳಚಿ ಬೀಳುವ ಬಳ್ಳಿಯಂತೆ, ಅಲ್ಪ ಘಟನೆಗೂ ಇಷ್ಟು ಅಲುಕುತ್ತ ವಲ್ಲಾ ಈ ಚಿತ್ತವಲ್ಲರಿ! ಇಂಥ ದುರ್ಬಲ ವಸ್ತುವಿಗೆ ದಾಸನಾಗಿ, ನಾನು ನನ್ನ ವ್ಯಾಮೋಹವನ್ನೇ ಗೆಲ್ಲಲಾರದೆ ಹೋದರೆ, ಇನ್ನು ಬ್ರಹ್ಮವನ್ನು ಗೆಲ್ಲು ವುದು ಸಾಧ್ಯವಾದೀತೇ? ಛಿ, ಛಿ, ಈ ಚಿತ್ತಚಂಚಲತೆಯನ್ನು ಗೆಲ್ಲಬೇಕು. ಜಗತ್ತನ್ನೆಲ್ಲಾ ಪ್ರೀತಿಯಿಂದ ಕಾಣಬೇಕು ಎಂದುಕೊಂಡ ನಾನು, ನನ್ನ ತಾಯಿಯ ಮಾತಿಗೆ ಸಿಟ್ಟಾದರೆ ಹೇಗೆ? ಕೂಡದು, ಕೂಡದು ನನ್ನ ಚಿತ್ತಕ್ಕೆಂದೂ ಕ್ರೋಧದ ಮೈಲಿಗೆ ಸೋಕಕೂಡದು.'

—ಎಂದು ತಮಗೆ ತಾವೇ ಬುದ್ಧಿ ಹೇಳಿಕೊಂಡರು ವೆಂಕಟದಾಸಪ್ಪ.

ಆ ಅರಿವಿನೊಂದಿಗೆ ಅವರ ಮುಖದ ಮೇಲಿದ್ದ ಬಿರುಸೂ ಕರಗಿ ಹೋಗಿ ಮುಖದ ಮೇಲೆ ಪ್ರಸನ್ನತೆ ಮೂಡಿತು.

ವೆಂಕಟದಾಸಪ್ಪನವರ ಮನಸ್ಸು ಒಂದು ಗಳಿಗೆ ಹೊಯ್ದಾಡಿ ಸ್ವಮಿಂತಕ್ಕೆ

ಬಂದು, ಅವರು ತಮ್ಮ ತಾಯಿಯ ಮಾತಿಗೆ ಏನಾದರೂ ಉತ್ತರ ಕೊಡುವ ಮೊದಲು, ರಾಜೇಶ್ವರಿಯೇ ಮಾತಾಡಿದಳು.

ವೆಂಕಟದಾಸಪ್ಪನವರ ಮೇಲೆ, ಅವಳಿಗೂ, ತನ್ನ ತಾಯಿಯಷ್ಟೇ ಸಿಟ್ಟು ಬಂದಿತ್ತು. ಆದರೆ ಆಕೆ ತನ್ನ ಸಿಟ್ಟಿನಲ್ಲಿ ವಿವೇಚನೆಯನ್ನು ಪೂರಾ ಕಳೆದು ಕೊಂಡಿರಲಿಲ್ಲ. ಎಂತಲೇ ಅಕೆಗೆ, ತನ್ನ ತಾಯಿ, ಸಿಟ್ಟಿನಲ್ಲಿ ಮೈಮರೆತು, ವೆಂಕಟದಾಸಪ್ಪನವರ ಮೇಲಿನ ಬೇಸರವನ್ನು ಗೌರಮ್ಮನ ನೀಂದೆಯಾಗಿ ತಿರುಗಿಸಿದುದನ್ನು ಕಂಡು—

'ಅಲ್ಲಮ್ಮ, ನಮ್ಮನೇದು ಕಿಪ್ಪಡು ಹಿತ್ತಾಳೇಂತ, ಬೇರೆಯೋರ ಮನೆ ಚಿನ್ನಾನ ಜೈದು ಏನು ಫಲ ಹೇಳು? ಮುಖ್ಯ ನಮ್ಮದೃಷ್ಟ ಕೆಟ್ಟದು ಬಂದದ್ದು ಅನುಭವಿಸಬೇಕು. ಅದಕ್ಕೆ ಆ ನಿರಾಪರಾಧೀನ ಅಂದು ಯಾಕೆ ಪಾಪ ಕಟ್ಕೊಳ್ಳೋದು. ನಮ್ಮ ಮನೆ ಉಳಿಸೋಕೆ ಪ್ರಾಣಾನಾದ್ರೂ ಕೊಡ್ತೀನಿ ಅನ್ನೋ ಅಂಥ ಹೆಂಗಸು ಗೌರಮ್ಮ.' ಇವನ್ನ ಕಟ್ಕೊಂಡು, ಅವಳು ತಾನೇ ಪಟ್ಟ ಸುಖ ಏನು? ಉದ್ದಕ್ಕೂ ಒಂದಲ್ಲ ಒಂದು ಥರ, ಎಲ್ಲಾರ ಕೈಲೂ ಅನ್ನಿಸಿಕೊಂಡು ಉರಿದದ್ದೇ ಆಯ್ತು.'

—ಎಂದಳು.

'ಅದೆಲ್ಲಾ ನಿಜ ಕಣೆ ರಾಜೇಶ್ವರಿ. ಆದ್ರೆ ಈಗೇನು ಮಾಡಬೇಕೊಂತ ಹೇಳ್ತೀಯ—ಹೇಳು. ನಾವೇನು ಜೀವಂತವಾಗಿ ಇರಬೇಕೇ, ಉರುಲು ಹಾಕಿ ಕೊಂಡು ಸಾಯಬೇಕೇ?'

—ಲಕ್ಷ್ಮೀದೇವಮ್ಮ ಕೊಂಚ ಮೆತ್ತಗಾಗಿ ಕೇಳಿದಳು.

'ಈಗ ಉರುಲು ಹಾಕಿಕೊಳ್ಳೋ ಅಂಥಾದು ಏನು ಬಂದಿದೆಯಮ್ಮ. ದೇವಸ್ಥಾನದ ಪೂಜೆ ಬಿಟ್ಟ ಮಾತ್ರಕ್ಕೆ; ದೇವರನ್ನು ಮನೆ ಬಿಟ್ಟು ಅಟ್ಟಿಬಿಟ್ಟ ಹಾಗಾಯ್ತು? ಅಲ್ಲಿ ವರ್ಷದಲ್ಲಿ ಒಂದು ದಿನ ಮಾಡ್ತಿದ್ದ ಪೂಜೆ ತಪ್ಪಿದ್ದಕ್ಕೆ ಬೇಕಾದ್ರೆ ಮನೇಲಿ ದಿನಾ, ಮೂರು ಮೂರು ಹೊತ್ತು ಪೂಜೆ ಮಾಡಿ ಪ್ರಾಯಶ್ಚಿತ್ತ ಮಾಡಿಕೋತೀನಿ—ಆಯ್ತೆ—?'

—ವೆಂಕಟದಾಸಪ್ಪನವರು ಸಿಟ್ಟಾದ ತಾಯಿಯನ್ನು ಸಂತೈಸಲು ಸಮಾಧಾನವಾಗಿ ಹೇಳಿದರು.

'ಎಲ್ಲಿ ಪೂಜೆ ಮಾಡಿ ಏನಾದ ಹಾಗಾಯ್ತು—ಯಾವ ಲೋಕ ಉದ್ಧಾರ

ಆಯ್ತು? ಮನೇಲಿ ಮೂರು ಹೊತ್ತು ಗಂಟೆ ಬಾರಿಸಿದರೆ. ಹೊಟ್ಟೆ ತುಂಬುತ್ತ್ಯೇನೋ?"

—ಬಹು ವ್ಯಂಗ್ಯವಾಗಿ ಕೇಳಿದಳು ಲಕ್ಷ್ಮೀದೇವಮ್ಮ.

'ಹಾಗಂದ್ರೇನೆವ್ಮಾ?"

—ತಾಯಿಯ ಈ ಹೊಸ ಮಾತಿನ ಅರ್ಥ ತಿಳಿಯದೆ ಕೇಳಿದರು ವೆಂಕಟದಾಸಪ್ಪ.

'ಅದಕ್ಕೆ ಮತ್ತೆ—ನಿನಗೇನು ಗೊತ್ತಿದೇಂತ—ಈ ದೊಡ್ಡಸ್ಥಿಕೆ ಮಾಡೋಕೆ ಹೋದೆ? ಅವರಂತೂ ಇಲ್ಲ—ಆದರೆ ನಿನ್ನ ಪಾಲಿಗೆ ನಾನೂ ನೆಗೆದುಬಿದ್ದು ಹೋಗಿದ್ನೇ? ನನ್ನ. ಒಂದು ಮಾತು ಕೇಳಿದ್ದೇನು, ನಿನ್ನ ಬಾಯಲ್ಲಿ ಹುಳಾ ಸುರೀತಿತ್ತೆ'?

'ಅದೆಲ್ಲಾ ಇರಲಿ—ಈಗ ಆದದ್ದೇನು ಹೇಳು?'

'ಆಗೋದೇನು—ನಾಳೆ, ನೀನೂ, ನಿನ್ನ ಹೆಂಡ್ತಿ ಇಬ್ಬರೂ ಹೆಗಲಿಗೆ ಜೋಳಿಗೆ ಹಾಕಿಕೊಂಡು ಹೋಗಿ, ಹತ್ತು ಮನೆ ತಿರುಪೆ ಎತ್ತಿ ಜೀವನ ಮಾಡೋಸ್ಥಿತಿ ಬಂತು.'

'ಏಕೆ?'

'ನೀನು ದಿನಾ ತಿನ್ನೋ ಅನ್ನ ಎಲ್ಲೀದು ನಿನಗೆ ಗೊತ್ತ?'

'ಎಲ್ಲೀದು?'

'ಅಮ್ಮನವರ ಗುಡಿ ಹೊಲದ್ದು,'

'ಇರಬಹುದು...'

'ಬಹುದು ಗಿಹದು ಏನು ಬಂತು—ಅಲ್ಲೀದೇ. ಅಲ್ಲಿ ಬೆಳೆದ ಭತ್ತ ಮನೆಗೆ ಬರದೆ ಹೋದ್ರೆ, ಮನೆ ಅನ್ನದ ತಪ್ಪಲೆ, ನಿನ್ನ ಹೊಟ್ಟೆ ಎರಡೂ ಲೊಟ' ಲೊಟಾಂತ ಅನ್ನಬೇಕಾದ್ದೆ...'

'ಇರಬಹುದಂ...'

'ಮತ್ತದೇ ಅದೇ ಆಡಿದ್ದನ್ನೇ ಆರಗಿಣಿ ಹಾಗೆ ಆಡಿದ್ರೆ ಏನಾಯ್ತು? ಈಗ ಅವಕ್ಕೆ ಎಳ್ಳು ನೀರಂ ಬಿಟ್ಟ್ಯಲ್ಲಾ—ನಾಳೆ ಹೆಂಡಿರಂ ಮಕ್ಕಳ ಹೊಟ್ಟೆಗೆ ಎಲ್ಲಿಂದ ತಂದ್ಹಾಕ್ತೀಯಾ?' ನಿಮ್ಮಪ್ಪ ಲಕ್ಷ ರೂಪಾಯಿನ ಆಸ್ತಿ ಬಿಟ್ಟು ಹೋಗಿದಾರೇಂತ ತಿಳುಕೊಂಡಿದೀಯಾ—ಮಂಗ ಮಲಗಿಕೊಂಡು ತಿನ್ನಲೀಂತ."

'ಅದೇನೋ ಇಲ್ಲ—ನಾವು ಶ್ರೀಮಂತರಲ್ಲ ಅನ್ನೋದು ನನಗೂ ಗೊತ್ತು. ಆದರೆ—ಅಮ್ಮನೋರ ಪೂಜೆ ಬಿಟ್ಟ ಮಾತ್ರಕ್ಕೆ ನಮಗೆ ತಿರುಪೆ ಎತ್ತೋ ಅಂಥ ಸ್ಥಿತಿ ಬರುತ್ತೇನ್ನೋ ನಿನ್ನ ಮಾತು ಮಾತ್ರ ನನಗೆ ಅರ್ಥ ಆಗಲಿಲ್ಲ.''

'ಅರ್ಥ ಆಗಿದ್ದಿದ್ರೆ, ನೀನ್ಯಾಕೆ ಈ ಮಣ್ಣು ತಿನ್ನೋ ಕೆಲಸ ಮಾಡ್ತಿದ್ದೆ? ಅಚ್ಚಣ್ಣಭಟ್ಟ, ಮಾಡೋಕೆ ಬೇರೆ ಕೆಲ್ಸಾ ಇಲ್ಲಾಂತ, ಅಮ್ಮನೋರ ಗುಡಿ ಪೂಜೆ ಬೇಕು ಅಂತ ಆಸೆಪಟ್ಟನೇ? ಈ ಹಳ್ಳೀಲೆಲ್ಲಾ ಈ ದೇವಸ್ಥಾನಕ್ಕಿರೋ ಭೂಮಿ, ಕಾಣಿ ಬೇರೆ ಯಾವ ದೇವಸ್ಥಾನಕ್ಕೂ ಇಲ್ಲ. ಅದರ ಮೇಲೆ ಮದುವೆ ಮುಂಜೀಲಿ ಬೇಕಾದಷ್ಟು 'ಆದೀಕ' ಇದೆ. ಒಂದು ಸಂಸಾರ ಸುಖವಾಗಿ ವರ್ಷಾವಧಿ ಜೀವನ ಮಾಡೋ ಅಷ್ಟು ಆದಾಯ ಬರುತ್ತೆ ಅಮ್ಮನೋರ ಗುಡಿಯಿಂದ. ಅದಕ್ಕೆ ಅಚ್ಚಣ್ಣಭಟ್ಟ ಇದರ ಮೇಲೆ ಕಣ್ಣುಹಾಕಿದ್ದು ಈಗ ನೀನಾಗಿ ನೀನೇ ಎಲ್ಲಾ ತಗೊಂಡು ಹೋಗಿ, ಅಚ್ಚಣ್ಣಭಟ್ಟನ ಬಾಯಿಗಿಟ್ಟು ನೀರು ಬಿಟ್ಟು ಬಂದ್ಯಲ್ಲಾ, ನಾಳೆ ಅಚ್ಚಣ್ಣಭಟ್ಟನ ಅಪ್ಪ ನಿನ್ನ ಸಂಸಾರ ಸಾಕ್ತಾನೆಯೋ?...

'ಆದ್ರೆ...ಆದ್ರೆ...'

'ಮತ್ತಿನ್ನೇನು ನಿನ್ನ—ಆದ್ರೆ—?'

'ಅಲ್ಲಮ್ಮ—ನಾನು ಪೂಜೆ ಬಿಟ್ಟುಕೊಟ್ಟ ಮಾತ್ರಕ್ಕೆ ಹೊಲ, ಮನೇನೂ ಅವರಿಗೆ ಒಪ್ಪಿಸಿಬಿಟ್ಟ ಹಾಗಾಯ್ತೆ?'

'ಅಷ್ಟಲ್ಲದೆ ಮತ್ತೇನಿದೆ—ಆ ಗುಡೀದು ಭೂಮಿ, ಕಾಣಿ ಎಲ್ಲಾ ಏನು ನಿನ್ನ ಮುದ್ದು ಮುಖ ನೋಡಿಕೊಂಡು ಕೊಟ್ಟಿದ್ರೆ? ಯಾರು ಪೂಜೆ ಮಾಡ್ತಾರೋ, ಅವರಿಗೆ ಆ ಆಸ್ತಿ ಅನುಭವ. ಹಿಂದಿನಿಂದ ನಿಮ್ಮ ವಂಶದೋರು ಅಮ್ಮನೋರ ಪೂಜೆ ಪುನಸ್ಕಾರ ಮಾಡ್ತಾ ಇದ್ರು. ಅವರಿಗಾಗಿತ್ತು. ಈಗ, ಅದೂ ಇದೂ ಎಲ್ಲಾ ಅಚ್ಚಣ್ಣಭಟ್ಟನಿಗಾಯ್ತು. ಅದಕ್ಕೇ ಅವನಿಗೆ ಮೊದಲಿನಿಂದಲೂ ನಮ್ಮ ಮೇಲೆ ಹೊಟ್ಟೆ ಉರಿ ಇದ್ದೇ ಇತ್ತು. ಈಗ ನೀನಾಗಿ ನೀನು ನಮ್ಮ ಹೊಟ್ಟೆಗೆ ಬೆಂಕಿ ಹಾಕಿ, ಅವನ ಹೊಟ್ಟೆ ತಣ್ಣಗೆ ಮಾಡಿದೆ. ಇಲ್ಲದ ದೊಡ್ಡಸ್ತಿಕೆ ಮಾಡಿ ಬಂದ್ಯಲ್ಲಾ—ಈಗ ಈ ಸಂಸಾರ ಸಾಕೋಕೆ ಏನು ಗೊಬ್ಬರ ಹೊರೋಕೆ ಹೋಗ್ತೀಯಾ?'

—ಘಟ್ಟಿಸಿ ಕೇಳಿದಳು ಲಕ್ಷ್ಮೀದೇವಮ್ಮ.

ಆ ಮಾತಿಗೆ ವೆಂಕಟದಾಸಪ್ಪನವರಿಗೆ ಏನೂ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ಸುಮ್ಮನೆ ಕುಳಿತುಬಿಟ್ಟರು.

'ಈಗ ಹಾಗೆ ಕೂತರೆ ಏನಾದ ಹಾಗಾಯ್ತು, ದಾಸಣ್ಣ. ಎಷ್ಟಾದರೂ ನೀನು ಹುಡುಗ, ತಿಳೀದೋನು, ಹಿಂದೆ ಮುಂದೆ ತಿಳೀದೇ ಮಾಡಿಬಿಟ್ಟೆ'...

—ಅದುವರೆಗೂ ಸುಮ್ಮನಿದ್ದ ರಾಜೇಶ್ವರಿ ಹೇಳಿದಳು.

'ಹೂ—ಈಗ...'

—ರಾಜೇಶ್ವರಿಯ ಮಾತಿಗೆ ಉತ್ತರವಾಗಿ ಕೇಳಿದರು ವೆಂಕಟದಾಸಪ್ಪ.

'ಹ್ಯಾಗೂ—ನೀನು ಅಮ್ಮನೋರ ಗುಡಿ ಪೂಜೇನ ಅಚ್ಚಣ್ಣಭಟ್ಟರಿಗೆ ಒಪ್ಪಿಸಿದ್ದು ಭಾಳ ಜನಕ್ಕೆ ಒಪ್ಪಿಗೆ ಆಗಿಲ್ಲ...'

''ಇರಬಹುದು. ಹಾಗಂತ ಈಗ, ಒಮ್ಮೆ ನಾನಾಗಿಯೇ ಬಿಟ್ಟು ಕೊಟ್ಟಿದಕ್ಕೆ, ಮತ್ತೆ ಏನೋ ಕುಂಟುನೆಪ ಸಿಕ್ಕಿತೂಂತ ಆಸೆಪಡಲೇ...?''

'ಆಸೆಪಡದೆ ಮತ್ತೇನು ಹೊಟ್ಟೆಗೆ ಕೇರು ಹುಯ್ಯೋತೀಯಾ? ನೀನು ಇಲ್ಲದ ದೊಡ್ಡಸ್ಥಿಕೆ ಮಾಡೋಕೆ ಹೋಗಬೇಡ. ಯಾರಾದ್ರೂ ಮತ್ತೇನಾದ್ರೂ ಕೇಳಿದ್ರೆ—ಮನೇಲಿ ದೊಡ್ಡೋರು ಇದಾರೇಂತ ಅಂದುಬಿಟ್ಟು, ನಿನ್ನ ಪಾಡಿಗೆ ನೀನು ಹುಡುಗನ ಹಾಗಿರು. ಅಚ್ಚಣ್ಣಭಟ್ಟ—ಇದನ್ನು ಹ್ಯಾಗೆ ಜೀರ್ಣಿಸಿ ಕೋತಾನೋ ನಾನೂ ನೋಡ್ತೀನಿ. ಅವನಿಗೆ ಹತ್ತು ಜನ ಬೆಂಬಲ ಇದ್ರೆ—ನಮಗೂ ಒಬ್ಬಿಬ್ಬರಾದ್ರೂ ಇದ್ದೇ ಇದೆ ಈ ಹಳ್ಳೀಲಿ. ಮತ್ತೆ ಆ ಮಾತು ಬರ್ಲಿ—ಶಾನುಭೋಗರ ಶೀನನ್ನ ನಾನೂ ಕೇಳ್ತೀನಿ—ಇಂಥ ಮನೆಹಾಳು ಪಂಚಾಯ್ತಿ ಹ್ಯಾಗೆ ಮಾಡಿಸ್ತಾನಂತ ಹಾಗಲ್ದೆ—ಮತ್ತೇನಾದ್ರೂ ದೊಡ್ಡಸ್ಥಿಕೆ ಮಾಡೋಕೆ ಹೋದ್ಯೋ—ನನಗೂ, ನಿನಗೂ—ಇಗೋ—ಇವತ್ತಿಗೇ ಕೊನೆ. ನಾನು ನಿನ್ನ ಪಾಲಿಗೆ ಇಲ್ಲಾಂತ ತಿಳುಕೊಂಡು ಬಿಡು.'

—ಎಲ್ಲ ವಿಷಯವನ್ನು ಚಿಂತಿಸಿ, ತಾನು ಆಗಲೇ ಇತ್ಯರ್ಥ ಮಾಡಿದವಳಂತೆ ಹೇಳಿದಳು ಲಕ್ಷ್ಮೀದೇವಮ್ಮ.

ಆಕೆಯ ಮಾತು ಕೇಳಿ ವೆಂಕಟದಾಸಪ್ಪನವರ ಮುಖ ಇದ್ದಕ್ಕಿದ್ದ ಹಾಗೇ ಕಪ್ಪಿಟ್ಟುಹೋಯಿತು.

೭

ತಾಯಿಯ ಮಾತನ್ನು ಕೇಳಿದ ಬಳಿಕ ವೆಂಕಟದಾಸಪ್ಪನವರ ಹೃದಯದಲ್ಲಿ ಪ್ರಚಂಡ ಹೊಯ್ದಾಟ ಆರಂಭವಾಗಿತ್ತು. ಅಷ್ಟು ಹೊತ್ತು ಬೆಳದಿಂಗಳ ಬೆಳಕು ಹೊಳೆಯುತ್ತಿದ್ದ ಮುಗಿಲಿನಲ್ಲಿ, ಇದ್ದಕ್ಕಿದ್ದಂತೇ ಎದೆಗೆಡಿಸುವಷ್ಟು ಘೋರಾಕಾರದ ಕಾರ್ಮೋಡಗಳು ದಟ್ಟೈಯಿಸಿದಂತಾಗಿತ್ತು.

ತಮ್ಮ ತೀರ್ಮಾನಕ್ಕೆ ವಿರುದ್ಧವಾದ, ತಮ್ಮ ಮಿತ್ರವರ್ಗದ ಪ್ರತಿಭಟನೆಯಿಂದ ಕಲಕಿದ ಅವರ ಚಿತ್ತಜಲಧಿ, ತಮ್ಮ ತಾಯಿಯ ಮಾತಿನಿಂದ ಮತ್ತಷ್ಟು ಪ್ರಕ್ಷುಬ್ಧವಾಗಿತ್ತು.

ತಮ್ಮ ಗೆಳೆಯರಿಗೆ ವೆಂಕಟದಾಸಪ್ಪನವರು, ತಮ್ಮ ವಿರುದ್ಧ ವರ್ತಿಸಿದರೆ, ಮತ್ತೆ ಎಂದೆಂದೂ ಅವರ ಸ್ನೇಹ ಮಾಡದ ಬೆದರಿಕೆ ಹಾಕಿ ಕಳಿಸಿದ್ದರು.

ಆದರೆ ಈಗ ಅವರ ತಾಯಿಯೇ, ಅವರಿಗೆ–

'ನಿನ್ನ ನಿರ್ಧಾರವನ್ನು ನೀನು ಬದಲಿಸದಿದ್ದರೆ, ನಿನಗೂ ನನಗೂ ಇದೇ ಕೊನೆ'

—ಎಂಬ ಬೆದರಿಕೆಯ ಬ್ರಹ್ಮಾಸ್ತ್ರವನ್ನು ಹೂಡಿದ್ದಳು.

ಜಗತ್ತಿನಲ್ಲಿ ಯಾರ ಮುಂದಾದರೂ ತಮ್ಮ ಹಟವನ್ನೇ ಮೆರೆಸಿ ಬಂದದ್ದನ್ನು ಅನುಭವಿಸಬಹುದು. ಆದರೆ ತನ್ನ ತಾಯಿಯ ವಿರುದ್ಧ–

ಅದೂ ಪತಿವಿಯೋಗದ ದುರ್ಭರಾಗ್ನಿಯಲ್ಲಿ ಬೆಂದು ಗಳಿತ ಶರೀರಳಾಗಿ, 'ಈಗಲೋ–ಇನ್ನೊಂದು ಗಳಿಗೆಗೋ' ಎಂಬಷ್ಟು ಬಳಲಿದ ತಾಯಿಯ ವಿರುದ್ಧವಾಗಿ ನಿಲ್ಲುವುದು ಹೇಗೆ ಸಾಧ್ಯ?

ಹಾಗಲ್ಲದೆ ತಾಯಿಯ ಮಾತಿಗೆ ತಲೆಬಾಗಿದರೆ–ತಮ್ಮ ನಿರ್ಧಾರ?

ಏಕೋ ಅವರಿಗೆ ತಮ್ಮ ತಾಯಿಯ ಇದುರಿಗೆ ಕುಳಿತು, ನಿರಾತಂಕವಾಗಿ ಯೋಚಿಸುವುದೂ ಸಾಧ್ಯವಾಗದೆ–

'ಆಗಲಿ, ಬೆಳಕು ಹರೀಲಿ–ನೋಡೋಣ'

—ಎಂದಷ್ಟು ಹೇಳಿ, ಅಲ್ಲಿಂದ ಮೇಲಕ್ಕೆ ಎದ್ದರು.

ಹಾಗೆ ಎದ್ದ ಅವರನ್ನು ಕಂಡು ರಾಜೇಶ್ವರಿ. ಅವರು ಎಲ್ಲಾದರೂ ಹೊರಗೆ ಹೋಗುತ್ತಾರೋ ಏನೋ ಎಂದು ಯೋಚಿಸಿ—

'ಬೆಳಗ್ಗೆ ಹೋದೋನು ಈಗ್ತಾನೆ ಮನೆಗೆ ಬರ್‍ತಿದೀಯ ದಾಸಣ್ಣ. ಮಧ್ಯಾಹ್ನ ಊಟಕ್ಕೆ ಕೂಡಾ ಬರಲಿಲ್ಲ. ಈಗಲೂ ಎಲ್ಲಿಗೋ ಹೊರಟ್ರು ಬಿಡಬೇಡ. ಕೈಕಾಲು ತೊಳೆದುಕೊಂಡು ಊಟಕ್ಕೇಳು. ನೀನು ಸಂಧ್ಯಾವಂದನೆ ಮುಗಿಸೋದರಲ್ಲಿ ಎಲೆ ಹಾಕ್ತೀನಿ,'

—ಎಂದಳು.

'ಸಂಧ್ಯಾವಂದನೆ ಆಗಲೇ ಮುಗೀತು'

'ಸರಿ ಹಾಗಾದರೆ—ಊಟಕ್ಕೆ ಎದ್ದುಬಿಡು ಅದೂ ಒಂದು ಕೆಲಸ ಮುಗಿದೇ ಹೋಗಲಿ,'

'ನನಗೆ ಇವತ್ಯಾಕೋ ಹಸಿವೆ ಇಲ್ಲ ರಾಜೇಶ್ವರಿ...'

'ಲಕ್ಷಣ ಆಯ್ತು ಬಿಡು. ಯಾವದು ಯಾವುದರ ಮೇಲಿನ ಸಿಟ್ಟನ್ನೋ, ಹೊಟ್ಟೇ ಮೇಲೆ ತೀರಿಸಬೇಡ. ಹೀಗೆ ಮಾಡಿದ್ರೆ ಮೈ ಗತಿ ಏನಾಗಬೇಕು? ಸುಮ್ನೆ ಊಟಕ್ಕೇಳು. ನಾನು ಎಲೆ ಹಾಕೋದ್ರಲ್ಲಿ ಎಲ್ಲಾದ್ರೂ ಹೋಗಿಬಿಟ್ರೆ-ನನ್ನಾಣೆ'.

—ಎಂದು ವೆಂಕಟದಾಸಪ್ಪನವರು ಎಲ್ಲೂ ಹೋಗದಂತೆ ಕಟ್ಟು ಮಾಡಿ. ಎಲೆ ಹಾಕಲು ಅಡಿಗೆಮನೆಗೆ ಹೋದಳು.

ಏಕೋ ತಾಯಿಯ ಇದಿರು ಕುಳಿತುಕೊಳ್ಳಲಾಗದೆ, ವೆಂಕಟದಾಸಪ್ಪ ನವರೂ ರಾಜೇಶ್ವರಿಯನ್ನು ಹಿಂಬಾಲಿಸಿ, ತಾವೂ ಹೋಗಿ, ಕೈಕಾಲು ತೊಳೆದು ಕೊಂಡು ಬಂದು 'ಸಂಜೆ ಮಡಿ'ಯನ್ನುಟ್ಟು, ತಾವೇ ಎಲೆ ಹಾಕಿಕೊಂಡು ಊಟಕ್ಕೆ ಕುಳಿತರು.

ರಾಜೇಶ್ವರಿಯೂ ಅವರನ್ನು ಏನೊಂದೂ ಮಾತಾಡಿಸದೆ, ಅವರ ಎಲೆಯ ಕೊನೆಗೆ ಉಪ್ಪು ಹಾಕಿ, ಅನ್ನ ಬಡಿಸಿ 'ಅಭಿಗಾರ' ಮಾಡಿ—

'ಊಟಕ್ಕೆ ಕೂತುಕೋ'

—ಎಂದಳು.

ರಾಜೇಶ್ವರಿ ಎಲೆಯ ಮೇಲೆ ಬಡಿಸಿದ ಅನ್ನವನ್ನು ನೋಡುತ್ತಲೇ ತಟಕ್ಕನೆ ವೆಂಕಟದಾಸಪ್ಪನವರಿಗೆ ಲಕ್ಷ್ಮೀದೇವಮ್ಮ ಹೇಳಿದ ಮಾತಿನ ನೆನಪಾಯಿತು—

'ನೀನು ದಿನಾ ತಿನ್ನೋ ಅನ್ನಾ ಎಲ್ಲೀದು ಗೊತ್ತೆ?'

'ಎಲ್ಲೀದು?'

'ಅಮ್ಮನವರ ಗುಡಿ ಹೊಲದ್ದು, ಅಲ್ಲಿ ಬೆಳೆದು ಮನೆಗೆ ಬಂದರೇ, ಇಲ್ಲಿ ಅನ್ನ ಬೇಯೋದು.'

'ಅಮ್ಮನವರ ಪೂಜೆಗೂ, ತಾವು ದಿನವೂ ತಿನ್ನುವ ಅನ್ನಕ್ಕೂ ಎಷ್ಟು ನಿಕಟ ಸಂಬಂಧ.

ಅಲ್ಲಿ ಬೆಳೆಯಬೇಕು, ಇಲ್ಲಿ ತಿನ್ನಬೇಕು. ಅಲ್ಲಿ ಬೆಳೆದದ್ದು ಬೇರೆಲ್ಲಿಗಾದರೂ ಹೋದರೆ, ಇಲ್ಲಿ, ಇವರಿಗೆ ನಿರಾಹಾರವೇ ಗತಿ.

ಅಮ್ಮನವರ ಪೂಜೆಯ ಮಾತು ಬರೀ ಸಂಪ್ರದಾಯದ, ಮನೆತನದ ಪಕ್ಕಿನ ಮಾತಲ್ಲ—ತಮ್ಮ ಅನ್ನ ಸಮಸ್ಯೆ. ಪೂಜೆ ಮಾಡಿದರೆ ಅನ್ನ, ಇಲ್ಲವಾದರೆ ಬರೀ ಜಲಪಾನ—

ಅದೂ—ತಮ್ಮೊಬ್ಬರಿಗೇ ಅಲ್ಲ: ಇಡೀ ಕುಟುಂಬಕ್ಕೆ.

ಅದೂ—ಒಂದು ದಿನಕ್ಕೆ ಅಲ್ಲ—ತಲೆ ತಲೆಮಾರಿಗೂ.

ತಮ್ಮ ಒಂದು ದಿನದ,—ನಿಜ, ಆ ದಿನದಲ್ಲೂ, ಚಿತ್ತದುರ್ಬಲವಾದ ಒಂದು ಗಳಿಗೆ—ಹೆಜ್ಜೆ ಜಾರುವಿಕೆಗಾಗಿ, ಇಷ್ಟು ದಿನ ಹೆತ್ತವರಿಗೆ, ಹೆರವರಿಗೆ ನೋವು ಕೊಟ್ಟದ್ದೇ ಅಲ್ಲದೆ ಈಗ, ಮುತ್ತೊಮ್ಮೆ ಮನೆತನಕ್ಕೆ ಬಂದ ದೇವತಾರ್ಚನೆಗೂ ಮೂಲವಾಗಿ, ಅದು ಸಾಲದೆಂಬಂತೆ, ಮುಂಬರುವ ತಲೆಮಾರುಗಳೂ ತಮ್ಮ ಬಗ್ಗೆ ನಾಚಿ ತಲೆತಗ್ಗಿಸುವಂತೆ, ಹಸಿದು ಬಳಲಿ ಶಪಿಸುವಂತೆ ಮಾಡಬೇಕೆ?

ಇದೆಂಥ ದಾರುಣ ವಿಷಮ ಪರಿಸ್ಥಿತಿ?

ಈಪರಿಸ್ಥಿತಿಯಿಂದ ಪಾರಾಗುವುದು ಹೇಗೆ

ಈ ಜಟಿಲ ಪರಿಸ್ಥಿತಿಯಲ್ಲಿ ಯಾವ ಜಾಡು ಸರಿ?

ಏಕೋ ಆ ದಿನ ಅವನ ಸುತ್ತಲೂ ಕತ್ತಲು ಕವಿದಂತಿತ್ತು. ಆ ಕತ್ತಲಿನಲ್ಲಿ ದಾರಿಗಾಣದೆ, ಮುಂದೆ, ಎಲೆಯ ಮೇಲಿದ್ದ ಅನ್ನದ ಅಗಳು ಹಿಸುಕುತ್ತಾ, ಅತ್ತಿತ್ತ ನೋಡುತ್ತಿರುವಾಗ, ಆಕಸ್ಮಿಕವಾಗಿ ಅವರ ಕಣ್ಣು ಅಡಿಗೆಯಮನೆಯಲ್ಲೇ ಇದ್ದ ದೇವರ ಮಂದಾಸನದ ಬಳಿ ಸುಳಿಯಿತು.

ನರಸಪ್ಪನವರ ಮನೆಯಲ್ಲಿ ದೇವರಿಗೆಂದು ಪ್ರತ್ಯೇಕವಾದ ಕೋಣೆ

ಇರಲಿಲ್ಲ. ಅಡಿಗೆಯ ಮನೆಯಲ್ಲೇ ಎರಡು ಸಣ್ಣ ಬಂಡಿ ನಿಲ್ಲಿಸಿ, ಅದರ ಮೇಲೆ ಸುಮಾರು ಎಂಟು ಅಡಿ ಉದ್ದವಿದ್ದ, ಇನ್ನೊಂದು ಬಂಡೆಯನ್ನು ಹಾಸಿ, ಅದರ ಮೇಲೆ ಸಣ್ಣ, ಮೆಟ್ಟಿಲು ಮೆಟ್ಟಿಲಾದ ಅಡ್ಡಗೋಡೆಯೊಂದನ್ನು ಕಟ್ಟಿ, ಅದರ ಮರೆಯಲ್ಲಿ, ಪೂರ್ವಾಭಿಮುಖವಾಗಿ, ಕುಳಿತು ಪೂಜೆ ಮಾಡಲು ಅನುಕೂಲವಾಗುವಂತೆ, ದೇವರ ಮಂಟಪವನ್ನಿಟ್ಟಿದ್ದರು.

ಆ ಮಂಟಪ ಹಳೆಯ ಕಾಲದ, ಕರಿಯ ಮರದ, ಸಾಕಷ್ಟು ದೊಡ್ಡದಾದ ಮಂಟಪ, ಆ ಮಂಟಪದಲ್ಲಿ ಮೂರು ಮೆಟ್ಟಲಿನ ಮರದ ಪೀಠವೊಂದನ್ನು ಇರಿಸಿದ್ದರು.

ಪೀಠದ ಮೇಲ್ಭಾಗದಲ್ಲಿ ವೆಂಕಟದಾಸಪ್ಪನವರ ಮನೆಯ ಆರಾಧ್ಯದೈವ ವಾದ ಶ್ರೀ ರಾಜರಾಜೇಶ್ವರಿಯ ಪುಟ್ಟದಾದ, ಆದರೆ ಬಹು ಸುಂದರವಾದ, ಶುದ್ಧ ಅಪರಂಜಿಯ ವಿಗ್ರಹ, ಬೆಳ್ಳಿಯ ಪೀಠದ ಮೇಲೆ ಕುಳಿತು ವಿರಾಜಿಸು ತ್ತಿತ್ತು. ಅದರ ಇಬ್ಬದಿಯಲ್ಲಿ ತಾಮ್ರದ ರೇಖಿನಲ್ಲಿ ಚಿತ್ರಿತವಾದ ಸೂರ್ಯ, ಚಂದ್ರ ಯಂತ್ರಗಳು.

ಅದರ ಕೆಳಗಿನ ಮೆಟ್ಟಲಿನಲ್ಲಿ—ಮೇರುಪ್ರಸ್ತಾರದ ಶ್ರೀಚಕ್ರ. ಅದರ ಬದಿಯಲ್ಲೇ ಧಾತು ಗೌರಿಯ ಮೂರ್ತಿ, ಗಣಪತಿ ವಿಗ್ರಹ. ಮತ್ತೊಂದು ಬದಿ ಯಲ್ಲಿ, ಸಾಲಿಗ್ರಾಮಗಳು, ಶಿವಪಂಚಾಯತನವಿದ್ದ, ಹಿತ್ತಾಳೆಯ ಕಾಶೀ ಸಂಪುಟ.

ಅದಕ್ಕೂ ಕೆಳಗಿನ ಮೂರನೆಯ ಮೆಟ್ಟಿಲ ಮೇಲೆ, ಒಂದು ಬದಿಯಲ್ಲಿ ತಾಮ್ರದ ಪೀಠದ ಮೇಲಿದ್ದ ಶಂಖ ಮತ್ತೊಂದು ಬದಿಯಲ್ಲಿ, ಹಿಡಿಯಲ್ಲಿ ಆಂಜನೇಯ ವಿಗ್ರಹವಿದ್ದ ಶುದ್ಧ ಕಂಚಿನ ಸಣ್ಣ ಗಂಟೆ.

ಮಂಟಪದ ಪಕ್ಕದಲ್ಲಿದ್ದ ಕಿರುಮಾಡದಲ್ಲಿ ಚೆನ್ನಾಗಿ ಹುಣಸೇಹಣ್ಣು ಹಚ್ಚಿ ತೊಳೆದು ಕೆಂಪಗೆ ಹೊಳೆಯುವ ತಾಮ್ರದ ಅಭಿಷೇಕದ ತಟ್ಟೆ, ಆ ತಟ್ಟೆಯನ್ನಿಟ್ಟುಕೊಳ್ಳುವ ಹಿತ್ತಾಳೆಯ ಪೀಠ, ತಾಮ್ರದ ಅಗ್ರೋದಕದ ತಂಬಿಗೆ, ಅರ್ಘ್ಯ ಪಾತ್ರೆ, ಉದ್ಧರಣೆ, ತಾಮ್ರದ ಥಾಲಿ, ವಿಭೂತಿಯ ಡಬ್ಬಿ 'ಪಂಚಪಾಳೆ' ಮೊದಲಾದ ಪೂಜಾ ಪಾತ್ರೆಗಳಿದ್ದವು.

ಮಂಟಪದ ಮತ್ತೊಂದು ಪಕ್ಕದಲ್ಲಿ, ವ್ಯಾಸ ಪೀಠದಲ್ಲಿ, ಗೀತೆ ಉಪನಿಷತ್ತು, ರಾಮಾಯಣ, ದೇವೀ ಭಾಗವತ, ಗುರುಚರಿತ್ರೆ ಸಹಸ್ರ

ನಾಮಾವಳಿ, ತ್ರಿಪುರಾ ರಹಸ್ಯ ಮೊದಲಾದ ಪಾರಾಯಣ ಗ್ರಂಥಗಳು.

ಗಾಜಿನ ಮೇಲೆ ಬರೆಯಲ್ಪಟ್ಟ, ಚಾಮುಂಡೇಶ್ವರಿ, ರಾಮಪಂಚಾಯ ತನ, ದತ್ತಾತ್ರೇಯ, ಗೋಪಾಲಕೃಷ್ಣ, ಲಕ್ಷ್ಮೀ, ಶಾರದೆ—ಇವರ ಚಿತ್ರಗಳು ಮಂಟಪದ ಇಬ್ಬದಿಯ ಗೋಡೆಯನ್ನು ಅಲಂಕರಿಸಿದ್ದವು.

ಅಡಿಗೆಯ ಮನೆಯಲ್ಲಿ ಸಾಕಷ್ಟು ಕತ್ತಲಿದ್ದರೂ, ಮಂಟಪದ ಬಳಿ ಮಾತ್ರ ಎರಡು ಜೊತೆ ನೀಲಾಂಜನಗಳು, ಮತ್ತು ನಂದಾದೀಪದಲ್ಲಿ ದೀಪದ ಕುಡಿಗಳು ಉರಿಯುತ್ತಿದ್ದುದರಿಂದ, ಮಂಟಪದಲ್ಲಿ ಸಾಕಷ್ಟು ಬೆಳಕು ಬಿದ್ದು, ಮಂಟಪದಲ್ಲಿದ್ದ ಪ್ರತಿಯೊಂದು ಮೂರ್ತಿಯೂ ಸ್ಪಷ್ಟವಾಗಿ ಕಾಣುತ್ತಿತ್ತು.

ಎಲ್ಲಕ್ಕಿಂತ ಹೆಚ್ಚಾಗಿ, ರಾಜರಾಜೇಶ್ವರಿಯ ಶುದ್ಧ ಸುವರ್ಣಮೂರ್ತಿ ಬೆಳಕಿನ ಉಂಡೆಯಂತೆ ಹೊಳೆಯುತ್ತಿತ್ತು. ಆ ವಿಗ್ರಹದ ವಕ್ಷಮಾಲೆಯಲ್ಲಿ ಕೂಡಿಸಿದ, ಕಿಡಿಗಾತ್ರದ ಸಣ್ಣ ವಜ್ರದ ಹರಳು, ಆ ಹೊಳೆಯುವ ಬಂಗಾರ ದಲ್ಲೂ ರಸನೀಲವರ್ಣವಾಗಿ ಬೆಳಕಿನ ಹನಿಯಂತೆ ಲಕಲಕಿಸುತ್ತಿತ್ತು.

ಅನ್ನದ ಅಗಳು ಹಿಸುಕುತ್ತಾ, ಏಕೋ ಅತ್ತ ಕಣ್ಣು ಹೊರಳಿಸಿದಾಗ, ಆಕಸ್ಮಿಕವಾಗಿ ದೇವಿಯ ವಿಗ್ರಹ ಕಣ್ಣಿಗೆ ಬಿದ್ದು, ವೆಂಕಟದಾಸಪ್ಪನವರಿಗೆ ಮಿಂಚು ಮುಟ್ಟಿದಂತಾಯಿತು. ಆ ಕಡೆ ತಿರುಗಿಸಿದ ಕಣ್ಣನ್ನು ಏಕೋ ಬೇರೆಯ ಕಡೆ ತಿರುಗಿಸಲಾಗಲಿಲ್ಲ.

ಮಂದಾಸನದಲ್ಲಿ ಕುಳಿತ ಆ ದಿವ್ಯ ದೇವೀಮೂರ್ತಿ— ಎಲೆಯ ಮೇಲಿನ ಅನ್ನ—ಈ ಎರಡಕ್ಕೂ ಎಷ್ಟು ನೇರವಾದ, ನಿಕಟವಾದ ಸಂಪರ್ಕ.

ಆಕೆಯ ಪೂಜೆಯಿಂದ ಈ ಅನ್ನ—

ಹಾಗಾದರೆ—

ಈ ಅನ್ನಕ್ಕಾಗಿ ಆಕೆಯ ಪೂಜೆಯೇ?

ಆ ಭಾವನೆ ಮನದಲ್ಲಿ ಮೂಡಿದಾಗ ಅವರಿಗೆ ತಮ್ಮ ಮುಂದಿನ ಎಲೆ ಯಲ್ಲಿದ್ದ ಅನ್ನ ಘೋರ ಹಾಲಾಹಲದಂತೆ ತೋರಿತು.

ಈ ಅನ್ನಕ್ಕಾಗಿ, ಹಿಡಿ ತುತ್ತಿಗಾಗಿ, ನಾನು ಆಕೆಯ ಪೂಜೆಯನ್ನು ತ್ಯಜಿಸಬಾರದೆಂದೇ ಆಕೆಯ ಇಚ್ಛೆಯೇ?

ಅದಕ್ಕಾಗಿಯೇ, ತಮಗೆ ಈ ಬಗೆಬಗೆಯ ಪರೀಕ್ಷೆಗಳನ್ನು ತಂದೊಡ್ಡು ತ್ತಿದ್ದಾಳೆಯೇ?

ಇರಲಾರದು—ಇರಲಾರದು—

ಇದೇ 'ಆಕೆಯ' ಇಚ್ಛೆಯಾಗಿದ್ದಲ್ಲಿ ಗೌರಿಯನ್ನು ಪಗಡೆಯಾಟವಲ್ಲಿ ಗೆಲಿಸಿದ್ದೇಕೆ?

ಗೌರಿಯನ್ನು ತ್ಯಜಿಸಬೇಕೆಂಬುದೇ ದೇವಿಯ ಉದ್ದೇಶವಾಗಿದ್ದಲ್ಲಿ, ತಂದೆ, ಗೌರಿಯನ್ನು ಸೊಸೆಯೆಂದು ಗ್ರಹಿಸಿದ್ದೇಕೆ?

ಯಾವುದು ಸರಿ, ಯಾವುದು ತಪ್ಪು—ಈ ಚಿಂತೆಯಲ್ಲಿ, ದಾರಿಗಾಣದೆ ವೆಂಕಟದಾಸಪ್ಪನವರು ಸುಮ್ಮನೆ ಅಗಳು ಹಿಸುಕುತ್ತಾ ಕುಳಿತರು.

ಅವರು ಹಾಗೆ ಕುಳಿತಿದ್ದನ್ನು ಕಂಡು ರಾಜೇಶ್ವರಿ ಅವರ ವರ್ತನೆಗೆ ಬೇರೆ ಕಾರಣವನ್ನೇ ಊಹಿಸಿದಳು.

ವೆಂಕಟದಾಸಪ್ಪನವರಿಗೆ ಗೌರಮ್ಮನ ವಿಷಯದಲ್ಲಿ ಎಷ್ಟು ಅಭಿಮಾನ ವಿತ್ತು. ಎಂಥ ಭಾವನೆ ಇತ್ತು ಎಂಬುದು, ಉಳಿದೆಲ್ಲರಿಗಿಂತಲೂ ಹೆಚ್ಚಾಗಿ ರಾಜೇಶ್ವರಿಗೆ ತಿಳಿದಿತ್ತು. ಎಂತಲೇ ಆ ದಿನ ತನ್ನ ತಾಯಿ, ವೆಂಕಟದಾಸಪ್ಪ ನವರ ಇದುರಿಗೇ ಗೌರಮ್ಮನ ವಿಷಯದಲ್ಲಿ ಬಹು ಕಟುವಾಗಿ ಮಾತುಗಳನ್ನು ಆಡಿದುದರಿಂದ, ಅದರಿಂದಾದ ವ್ಯಥೆಯಲ್ಲಿ, ಅವರಿಗೆ ಅನ್ನ ಸೇರದಂತೆ ಆಗಿದೆ ಎಂದು ಊಹಿಸಿ—

'ನಿನ್ನ ಸಹವಾಸ ಬಲು ಕಷ್ಟ ದಾಸಣ್ಣ. ಒಂದಾಡಿದರೆ ಕಡಮೆ, ಎರಡು ಆಡಿದರೆ ಹೆಚ್ಚು. ಯಾರು ಏನು ಮಾತಾಡಿದರೂ ತಟಕ್ಕನೆ ಅಪಾರ್ಥ ತಿಳಿದು ಕೊಳ್ಳುತ್ತೀಯ...'

—ಎಂದಳು.

ಆಕೆಯ ಆ ಮಾತಿಗೆ ವೆಂಕಟದಾಸಪ್ಪನವರು ಏನೂ ಉತ್ತರ ಕೊಡಲಿಲ್ಲ. ಅದನ್ನು ಕಂಡು ರಾಜೇಶ್ವರಿಯೇ ತನ್ನ ಮಾತನ್ನು ಮುಂದುವರಿಸಿ, ವೆಂಕಟ ದಾಸಪ್ಪನವರನ್ನು ಸಮಾಧಾನಗೊಳಿಸುವ ಸ್ವರದಲ್ಲಿ ಹೇಳಿದಳು—

'ಅಮ್ಮನ ಸ್ವಭಾವ ನಿನಗೇನೂ ತಿಳಿಯದ ವಿಷಯವಲ್ಲ ದಾಸಣ್ಣ, ಮೊದಲೇ ಆಕೆಯದು ಮಹಾ ಕಕ್ಕುಲಾತಿ ಸ್ವಭಾವ. ಎಳ್ಳಕಾಳಷ್ಟಾದರೂ ಬೆಟ್ಟದಷ್ಟು ಹಚ್ಚಿಕೋತಾಳೆ. ಮೊದಲೇ ಹಾಗೇ—ಈಗಂತೂ ಆ ಕಕ್ಕುಲಾತಿ ಇದ್ದದ್ದೂ ಹೆಚ್ಚಾಗಿದೆ ಅದೆಲ್ಲಾ ತಿಳಿದೂ ತಿಳಿದೂ ನೀನು ಆಕೆ ಮಾತ್ನ ಅಷ್ಟು ಹಚ್ಚಿ ಕೋಬಾರದು ದಾಸಣ್ಣ......"

'ಈಗ ಆಕೆ ಏನೋ ಅಂದಳೂಂತ ನಾನು ವ್ಯಥೆಪಡ್ತಾ ಇಲ್ಲ ರಾಜೇಶ್ವರಿ...'

"ಮಾತ್ನಿನ್ನೇನು......ಹಾಗಾದ್ರೆ ಎಲೆ ಮುಂದೆ ಕೂತುಕೊಂಡೇನು ತಪಸ್ಸು ಮಾಡ್ತಾ ಇದೀಯ. ಎಲೇಲಿ ಹಾಕಿದ ಅನ್ನ ಆರಿ ಅಕ್ಷತೇ ಆಗಿ ಹೋಯ್ತು. ನೀನೇನೇ ಹೇಳು–ದಾಸಣ್ಣ, ನನಗೂ ಅಷ್ಟಿಷ್ಟು ಅರ್ಥವಾಗುತ್ತೆ. ಅಪ್ಮ ಏನೋ ಅಂದ್ಳೂಂತ ನಿನಗೆ ಅಸಮಾಧಾನ ಆಗಿರಬಹುದು. ಏನಾದ್ರೂ-ನೀನು ಮಾಡಿದ್ದು ಪೂರ್ವಾಪರ ವಿವೇಚನೆ ಇಲ್ಲದ ಕೆಲಸ.'

ಈ 'ಭೂಮಿ ಕಾಣಿ ವಿಷಯ ನನಗೆ ಗೊತ್ತಿರಲಿಲ್ಲ ರಾಜೇಶ್ವರಿ...'

'ನಿನ್ನ ಭೂಮಿ ಕಾಣಿಗಿಷ್ಟು ಬೆಂಕಿ ಹಾಕು ದಾಸಣ್ಣ. ಅದುಹೋಗುತ್ತೇಂತ ನಾನು ಅಳೋಲ್ಲ. ದೇವರು ನಿನಗೆ ಯೋಗ್ಯತೆ, ಅದೃಷ್ಟ ಕೊಟ್ಟರೆ ಅದರ ಹತ್ತರಷ್ಟನ್ನು ಸಂಪಾದಿಸಬಹುದು. ಆದ್ರೆ ಈಗ ಇದರಿಂದ ಊರಲ್ಲಿ ಎಷ್ಟು ಅವಮಾನ ನೋಡು. ಜಾತ್ರೆ ಬಂತು. ಆದರೆ ಈ ಸಲ ನಾವು ಯಾರಾದ್ರೂ ತಲೆ ಎತ್ತಿಕೊಂಡು, ಗುಡಿಗೆ ಹೋಗಲಿಕ್ಕುಂಟೆ? ಇನ್ನು ಈ ವಿಷಯ ಸೀಮೆ ಸೀಮೆಗೆಲ್ಲಾ ಹರಡುತ್ತೆ. ಇದನ್ನಾದ್ರೂ ನೀನು ಯೋಚಿಸ ಬೇಕಾಗಿತ್ತೋ ಬೇಡವೋ?'

—ರಾಜೇಶ್ವರಿ ಕೇಳಿದಳು.

'ಅದು ನನಗೂ ಗೊತ್ತು, ರಾಜೇಶ್ವರಿ– ಇದು ಹಗರಣ ಆಗಬಾರದು, ನಾಳೆ ಯಾರೂ ಈ ವಿಷಯ ಮಾತಾಡಬಾರದು ಅಂತಾಲೇ ನಾನು ಅಚ್ಚಣ್ಣ ಭಟ್ಟರಿಗೆ ಪೂಜೆ ಬಿಟ್ಟುಕೊಟ್ಟದ್ದು.'

'ಅದ್ರಿಂದ ಏನಾದ ಹಾಗಾಯ್ತು?'

'ಏಕೆ?'

ನೀನಾಗಿ ನೀನೇ ಊರೆಲ್ಲಾ–'ನನಗೆ ಪೂಜೆ ಮಾಡೋ ಅರ್ಹತೆ ಇಲ್ಲ' ಅಂತ ಡಾಣಾಡಂಗುರ ಸಾರಿದ ಹಾಗಾಯ್ತು–ಅಷ್ಟೇ. ಇತ್ಲಾಗೆ ಮರ್ಯಾ ದೇನೂ ಉಳೀಲಿಲ್ಲ; ಅತ್ಲಾಗೆ—ತಿನ್ನೋ ಬಾಯಿಗೂ ಮಣ್ಣು ಬಿತ್ತು. ಅಷ್ಟೆ–ನಿನ್ನ ಕೆಲಸದಿಂದ ಆದದ್ದು. ನೀನೇನಾದ್ರೂ ಹೇಳು– ದಾಸಣ್ಣ, ನೀನು ಮಾಡಿದ್ದು ತಪ್ಪು'

'ಇರಬಹುದು—ನಿಜ—ನನ್ನ ಬೆನ್ನು ನನಗೆ ಕಾಣೋಲ್ಲ. ಆದ್ದರಿಂದ ಈಗ ಅದಕ್ಕೆ ಏನು ಮಾಡಬೇಕೂಂತೀಯ...'

'ಏನೂ ಇಲ್ಲ—ನೀನಿನ್ನು ಹುಡುಗನ ಹಾಗೆ ಸುಮ್ಮನಿದ್ದು ಬಿಟ್ಟು, ಅಮ್ಮ ಹ್ಯಾಗೆ ಹೇಳ್ತಾಳೋ ಹಾಗೆ ಕೇಳಿಕೊಂಡು ಇದ್ದಂಬಿಡು. ಅವಳು ಹೇಗೆ ಹೇಳಿದರೆ ಹಾಗೆ ಕೇಳಿಬಿಡು. ಎಷ್ಟಾದರೂ ಈಗ ಅಮ್ಮನೇ ಮನೆಗೆ ದೊಡ್ಡವಳು. ಅವಳಿಗೆ ಹೇಗೆ ತಿಳಿಯುತ್ತೋ ಹಾಗೆ ಮಾಡಲಿ.'

'ಅಷ್ಟೆ ಅನ್ತೀಯಾ?'

'ಈಗ ಉಳಿದಿರೋದು ಅಷ್ಟೆ.'

—ಖಚಿತವಾಗಿ ಹೇಳಿದಳು ರಾಜೇಶ್ವರಿ.

ಆಕೆಯ ಮಾತು ಕೇಳಿ ವೆಂಕಟದಾಸಪ್ಪನವರು ಒಂದು ಗಳಿಗೆ ಸುಮ್ಮನಿದ್ದು ಒಳಿಕ ಕೇಳಿದರು—

'ಅಮ್ಮ ಏನಾದ್ರೂ ಹೇಳಲಿ—ನೀನು...ನೀನೂ ಅಷ್ಟೆ ಅನ್ತೀಯಾ ರಾಜೇಶ್ವರಿ?'

'ನಾನು ಹೇಳೋದೇನು, ಯಾರು ಹೇಳೋದೇನು?— ಮಂಟಪದಲ್ಲಿರೋ ದೇವರನ್ನು ಕೇಳಿದರೆ—ಅದು ಹೇಳೋದೂ ಅಷ್ಟೆ.'

ರಾಜೇಶ್ವರಿ ಹೇಳಿದ ಆ ಮಾತನ್ನು ಕೇಳಿ, ವೆಂಕಟದಾಸಪ್ಪನವರು ಮತ್ತೊಮ್ಮೆ ಮಂದಾಸನದ ಕಡೆ ನೋಡಿದರು.

ಮಂದಾಸನದಲ್ಲಿ, ದೇವಿಯ ವಿಗ್ರಹ ಬೆಳಕಿನ ಉಂಡೆಯಂತೆ ಹೊಳೆಯುತ್ತಿತ್ತು.

ದೇವಿಯ ವಕ್ಷಹಾರದ ಸಣ್ಣ ವಜ್ರದ ಹಳಕು ಮಿಂಚಿನ ನೀರ ಹನಿಯಂತೆ ಲಕಲಕಿಸುತ್ತಿತ್ತು.

ಅಷ್ಟು ಹೊತ್ತು ಸುಮ್ಮನೆ ಆ ವಿಗ್ರಹವನ್ನೇ ನೋಡುತ್ತಾ ಕುಳಿತಿದ್ದರು.

ಆ ವಿಗ್ರಹವನ್ನು ನೋಡನೋಡುತ್ತಾ, ಪುರಾತನ ವಾಣಿಯೊಂದು ಅವರ ಕಿವಿಯಲ್ಲಿ ಉಸಿರಿದಂತಾಯಿತು—

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ
ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್।
ಅಮಂತವೋ ಮಾಂ ತ ಉಪ ಕ್ಷಿಯಂತಿ
ಶ್ರುಧಿ ಶ್ರುತ ಶ್ರದ್ಧಿವಂತೇ ವದಾಮಿ॥

[ಯಾವನು ಅನ್ನವನ್ನು ತಿನ್ನುತ್ತಾನೋ, ನೋಡುತ್ತಾನೋ, ಉಸಿರಾಡುತ್ತಾನೋ, ಹೇಳಿದ್ದನ್ನು ಕೇಳುತ್ತಾನೋ, ಅವನು [ಇದೆಲ್ಲವನ್ನೂ] ನನ್ನ ಶಕ್ತಿಯಿಂದಲೇ ಮಾಡುತ್ತಾನೆ. ಇಂತಹ ನನ್ನ ವಿಷಯದಲ್ಲಿ ಯಾರು ಜ್ಞಾನಹೀನರಾಗಿರುತ್ತಾರೋ ಅವರು ನಾಶವಾಗುತ್ತಾರೆ. ಎಲೈ ಜ್ಞಾನಿಯೇ ಕೇಳು: ಶ್ರದ್ಧೆಯ ಸತ್ಯವನ್ನು ನಿನಗೆ ಹೇಳುತ್ತೇನೆ].

ಅಹಮೇವ ಸ್ವಯಮಿದಂ ವದಾಮಿ
ಜುಷ್ಟಂ ದೇವೇಭಿರುತ ಮಾನುಷೇಭಿಃ।
ಯಂ ಕಾಮಯೇ ತಂತಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್॥

[ದೇವತೆಗಳಿಂದಲೂ, ಮನುಷ್ಯರಿಂದಲೂ ಸೇವಿಸಲ್ಪಡುವ ನಾನೇ ಸ್ವಯಂ ಉಪದೇಶಿಸುತ್ತೇನೆ: 'ನಾನು ಯಾರನ್ನು ಪ್ರೀತಿಸುತ್ತೇನೋ ಅವನನ್ನು ಬಲಿಷ್ಠನನ್ನಾಗಿ ಮಾಡುತ್ತೇನೆ, ಬ್ರಹ್ಮನನ್ನಾಗಿ ಮಾಡುತ್ತೇನೆ, ಋಷಿಯನ್ನಾಗಿ ಮಾಡುತ್ತೇನೆ, ಪ್ರಾಜ್ಞನನ್ನಾಗಿ ಮಾಡುತ್ತೇನೆ].

ವೆಂಕಟದಾಸಪ್ಪನವರ ಚಿಕ್ಕಂದಿನಲ್ಲಿ ನರಸಪ್ಪನವರು, ಅವರಿಗೆ ಬಾಯಿಪಾಠ ಮಾಡಿಸಿದ ದೇವೀಸೂಕ್ತದ ಎರಡು ಶ್ಲೋಕಗಳು ಅವು. ವೆಂಕಟದಾಸಪ್ಪನವರು ಚಿಕ್ಕವರಾಗಿದ್ದಾಗ ದಿನವೂ ಸಂಜೆ, ಅವರನ್ನು ಕೂಡಿಸಿಕೊಂಡು ನರಸಪ್ಪನವರು ತಮಗೆ ತಿಳಿದ ಶ್ಲೋಕಗಳು, ದೇವತಾ ಸ್ತುತಿಗಳನ್ನು ತಾವೇ ಸ್ವರೋಚ್ಚಾರಣಾಸಹಿತವಾಗಿ ಹೇಳಿಕೊಟ್ಟು ಬಾಯಿಪಾಠ ಮಾಡಿಸುತ್ತಿದ್ದರು' ಇಂದು ವೆಂಕಟದಾಸಪ್ಪನವರ ಕಿವಿಯಲ್ಲಿ, ಪಿಸುಧನಿಯಲ್ಲಿ ಉಸುರಿದ ಧ್ವನಿ, ಅಂದಿನ ನರಸಪ್ಪನವರ ಧ್ವನಿಯಂತೇ ಕೇಳಿಸಿತು ಅವರಿಗೆ.

ಆ ವಾಣಿ ಕೇಳಿ ಬಂದು ಅವರ ಗಂಟಲು ಗದ್ಗದಿತವಾಯಿತು. ಹಾಗೇ, ತಮಗೆ ತಾವೇ ಹೇಳಿಕೊಳ್ಳುವವರಂತೆ—

ಮತ್ಸಮಃ ಪಾತಕೀ ನಾಸ್ತಿ
ಪಾಪಘ್ನೀ ತ್ವತ್ಸಮಾ ನಹಿ।
ಏವಂ ಜ್ಞಾತ್ವಾ ಮಹಾದೇವಿ
ಯಥಾ ಯೋಗ್ಯಂ ತಥಾ ಕುರು॥

[ನನ್ನಂತಹ ಪಾತಕಿಯೂ ಇಲ್ಲ; ನಿನ್ನಂತಹ ಪಾಪನಾಶಕಳೂ ಇನ್ನಿಲ್ಲ. ಹೇ ಮಹಾದೇವಿ, ಇದನ್ನು ಅರಿತು, ಯಾವುದು ಯೋಗ್ಯವೋ ಅದನ್ನು ಮಾಡು]

—ಎಂಬ 'ದೇವ್ಯಾಪರಾಧಕ್ಷಮಾಪಣ ಸ್ತೋತ್ರ' ದ ಶ್ಲೋಕವನ್ನು ಹೇಳಿಕೊಳ್ಳುತ್ತಾ, ಊಟ ಮಾಡುತ್ತಿದ್ದುದನ್ನು ಮರೆತು, ಹಾಗೇ ಮೇಲಕ್ಕೆ ಎದ್ದು ಹೊರಟರು.

'ದಾಸಣ್ಣಾ...ಏ ದಾಸಣ್ಣಾ...ಇದೇನೋ... ಊಟ ಮಾಡ್ಲೇ ಇಲ್ವಲ್ಲೋ...'

—ಎಂದು ರಾಜೇಶ್ವರಿ ತಮ್ಮ ಬೆನ್ನ ಹಿಂದೆ ಕೂಗುತ್ತಿದ್ದಂದೂ ಅವರ ಕಿವಿಗೆ ಬೀಳಲಿಲ್ಲ...'

ಅವರು ಊಟ ಬಿಟ್ಟು ಹೋದ ರೀತಿಯನ್ನು ಕಂಡು ರಾಜೇಶ್ವರಿ ಬೆಕ್ಕಸ ಬೆರಗಾಗಿ ಬಿರುಗಣ್ಣುಗಳಿಂದ ಅವರನ್ನೇ ನೋಡುತ್ತಿದ್ದಳು.

ನೋಡನೋಡುತ್ತಾ, ಆಕೆಯ ಕಣ್ಣಲ್ಲಿ ನೀರು ತುಂಬಿತು.

೮

ಆ ದಿನ ರಾತ್ರಿ ತಮ್ಮ ಬುದ್ಧಿಯನ್ನು, ಚೇತನ ಸರ್ವಸ್ವವನ್ನೂ ದೇವಿಯ ಚರಣತಲದಲ್ಲಿ, 'ಯಥಾ ಯೋಗ್ಯಂ ತಥಾ ಕುರು' ಎಂದು ಅರ್ಪಿಸಿದ ಬಳಿಕ ವೆಂಕಟದಾಸಪ್ಪನವರು, ಮುಂದೆ ಏನಾಗುವುದೆಂದು ಯೋಚಿಸಲಿಲ್ಲ.

'ಯಾವುದು ಹೇಗಾದರಾಗಲಿ, ಯಾವುದು ಹೇಗೆ ಮುಕ್ತಾಯವಾಗಬೇಕೋ ಹಾಗಾಗಲಿ. ನಾನು ಮಾತ್ರ ಹಿಡಿದ ಜಾಡು ಬದಲಿಸಬಾರದು, ಇಟ್ಟ ಹೆಜ್ಜೆ ಹಿಂತೆಗೆಯಬಾರದು. ನಾನು ಮಾಡಿದ ಕೆಲಸ ದೇವರಿಗೆ ಪ್ರೀತಿಯಾಗಲಿ. ನಾನು ಮಾಡಿದ ಕೆಲಸ ದೈವೇಚ್ಛೆಗೆ ಅನುಸಾರವಾಗಿದ್ದರೆ, ಅದರಿಂದ ಕೇಡೇನೂ ಆಗದು. ಹಾಗಲ್ಲದೆ ಕೇಡಾಗುವುದಿದ್ದರೆ, ಅದು ನನಗಾಗಲಿ, ಬೇರೆಯವರಿಗೆ ಬೇಡ'.

—ಎಂದು ಅರ್ಪಣಾಭಾವವನ್ನು ಧರಿಸಿ ಸುಮ್ಮನಿದ್ದು ಬಿಟ್ಟರು.

ತಾವು ಮಾತ್ರ ಸುಮ್ಮನಿದ್ದು ಬಿಡಬೇಕೆಂದೇ ಇದ್ದರು ವೆಂಕಟದಾಸಪ್ಪ-ನವರೆ, ಅವರ ಬಾಳಿನಲ್ಲಿ ಏಕೋ ಹೆಜ್ಜೆಗೊಂದು ಬಗೆಯ ಪರೀಕ್ಷೆಯನ್ನು ತಂದೊಡ್ಡುತ್ತಿದ್ದ ವಿಧಿ ಅವರು ಸುಮ್ಮನಿರಲು ಬಿಡಲಿಲ್ಲ.

ವೆಂಕಟದಾಸಪ್ಪನವರ ಮಿತ್ರರು ಒಂದು ಬಗೆಯ ಅಸಮಾಧಾನದಿಂದ ಮುಸುಗುಟ್ಟುತ್ತಿದ್ದರೆ, ಮನೆಯಲ್ಲಿ ಅವರ ತಾಯಿ ಮತ್ತೊಂದು ಬಗೆಯ ಅಸಮಾಧಾನದಿಂದ ಚಡಪಡಿಸುತ್ತಿದ್ದಳು.

ಆ ಎರಡು ಗುಂಪುಗಳ ಅಸಮಾಧಾನ ಹೇಗೇ ಇರಲಿ, ಆ ಬಗ್ಗೆ ಅವರೆಲ್ಲರಲ್ಲಿದ್ದ ಭಾವನೆಯೊಂದೇ–

'ವೆಂಕಟದಾಸಪ್ಪ ದುಡುಕಿದರು. ಮುಂದೇನು ಮಾಡುವುದು?'

ವೆಂಕಟದಾಸಪ್ಪನವರ ಆಪ್ತರು ಹೀಗೆ, ಅವರ ದುಡುಕಿನಿಂದಾದ ತಪ್ಪನ್ನು, ಹೇಗೆ ಸರಿಪಡಿಸುವುದು ಎಂದು ಚಿಂತಿಸುತ್ತಿದ್ದರೆ, ಯಾವುದನ್ನೂ ಅಷ್ಟಾಗಿ ಹಚ್ಚಿಕೊಳ್ಳದ ಗ್ರಾಮ ಬೇರೊಂದು ಸುಳಿಗೆ ಸಿಕ್ಕಿತ್ತು.

ಅದುವರೆಗೂ ಗ್ರಾಮದ ಜೀವನ–ಸರಿಯೋ ತಪ್ಪೋ–ಒಂದು ವ್ಯವಸ್ಥಿತವಾದ ಕ್ರಮದಲ್ಲಿ ನಡೆಯುತ್ತಿತ್ತು. ಆಗ್ರಾಮ ಜೀವನದ ವ್ಯವಸ್ಥೆಗೆ

ಭದ್ರ ಬುನಾದಿಯಾಗಿದ್ದುದು—ಸಂಪ್ರದಾಯ. ಹಳ್ಳಿಗರಿಗೆ ಯಾವ ವಿಷಯ ದಲ್ಲೂ ಇದು ಸರಿಯೇ, ತಪ್ಪೇ ಎಂದು ಚಿಂತಿಸುವ ಅಭ್ಯಾಸವೇ ಇರಲಿಲ್ಲ. ಎಲ್ಲ ವಿಷಯಂದಲ್ಲೂ 'ಮಾಮೂಲು ಹೆಂಗೈತೋ ಹಂಗಾಗಲಿ' ಎಂಬ ಮನೋಭಾವ. ಯಾವುದರಲ್ಲಾದರೂ ಹೆಚ್ಚು ಕಡಿಮೆಯಾದರೂ 'ಏಕೆ? 'ಎಂದು ಹೇಳುವದಕ್ಕೆ ಜೋಯಿಸರು, ಏನು ಹೆಚ್ಚು ಕಡಮೆಯಾದರೂ ಸರಿಪಡಿಸಲು 'ಅಮ್ಮನವರು' ಇರುವಾಗ, ಅವರು ಯಾವುದಕ್ಕೆ ತಾನೇ ಏಕೆ ಚಿಂತಿಸಬೇಕು?

ಇಂಥ ತಳಹದಿಯ ಮೇಲೆ, ತಲೆ ತಲಾಂತರದಿಂದಲೂ ಬೆಳೆದು ಬಂದಿತ್ತು ಆ ಹಳ್ಳಿ. ಹಾಗೆ ಬೆಳೆದ ಹಳ್ಳಿಗೆ 'ಮಾಮೂಲೇ' ಜೀವನದ ಉಸಿರಾಗಿತ್ತು.

ಈಗ ವೆಂಕಟದಾಸಪ್ಪನವರ ಅ ನಿ ರೀ ಕ್ಷಿ ತ ತೀರ್ಮಾನದಿಂದ, ಸಂಪ್ರ ದಾಯದ ಸರಪಳಿಯ ಕೊಂಡಿ ಕಳಚಿದಂತಾಗಿ ಗ್ರಾಮಜೀವನವೇ ಅಸ್ತವ್ಯ ಸ್ತವಾಗಿತ್ತು.

ಅಂದಿನವರೆಗೆ ಬರಲಿರುವ ಜಾತ್ರೆಗಾಗಿ, 'ಎಂದಿನ' ಉತ್ಸಾಹದಿಂದ ಸಿದ್ಧ ವಾಗುತ್ತಿದ್ದ ಹಳ್ಳಿಯ ಉತ್ಸಾಹವೇ ಏಕೋ ಕುಂಟಿತವಾದಂತಾಯಿತು. ಎಲ್ಲರ ಮುಖದ ಮೇಲೂ ಇದ್ದ ರಂಗು ಒಂದು 'ಬಣ್ಣ' ಇಳಿದು ಹೋಯಿತು.

ವೆಂಕಟದಾಸಪ್ಪನವರಿಗಿಂತಲೂ ಹೆಚ್ಚಾಗಿ, ಅವರ ವಂಶದಲ್ಲಿ ಅಭಿಮಾನ ವಿಟ್ಟುಕೊಂಡ ಜನ—

'ಈ ವರ್ಷ ಯಾಕೋ ಲಕ್ಷಣಾನೇ ಚೆಂದಾಕಿಲ್ಲ, ಇನ್ನು ಜಾತ್ರೇನೇ ನಡೀತದೋ ಇಲ್ವೋ—ನಡದ್ರೂ ಏನಾಗ್ತದೋ, ಯಾರೋ ಮಾಡೋ ಪೂಜೇನ ಇನ್ಯಾರೋ ಮಾಡಿದ್ರೆ ಅವ್ನೋರು ಪೂಜೆ ಮಾಡಿಸಿಕೋತಾರ? ಅಂತೂ ಏನೋ ಕಾದೈತಿ. ಯಾರಿಗೇನು ವಕ್ರಿಸಿಕೊಳ್ತದೋ?'

—ಎಂದು ಅಳುಕಲಾರಂಭಿಸಿದರು.

ವೆಂಕಟದಾಸಪ್ಪನವರ ನಡತೆಯ ವಿಷಯವಾಗಿ ಹೃದಯದಲ್ಲಿ ಅಸಮಾಧಾನವನ್ನಿಟ್ಟುಕೊಂಡವರು ಕೂಡಾ—

'ಆ ಬುದ್ಧೋರು ಮಾಡಿದ್ದೇನೋ ತಪ್ಪು. ನಿಜಾನೇ—ಆದ್ರೆ ಹಂಗಂತ ಅವ್ನೋರ ಪೂಜೇನೇ ಬಿಟ್ಟುಬಿಡೋದಾ? ಏನೋ ಪ್ರಾಯಶ್ಚಿತ್ತ, ಗೀಯಶ್ಚಿತ್ತ ಮಾಡಿಕೊಂಡು ದೋಷ ಕಳಕೊಂಡು ಪೂಜೆ ಮಾಡೋದು

ಬಿಟ್ಟು, ಹಿಂಗ್ಯಾಕ್ಮಾಡಾದಾ? ಇದ್ಯಾಕೋ ಸಂದಾಗ್ಲಿಲ್ಲ, ಯಾರ ಗಾಸಾರಕ್ಕೆ ಅವರಿಗಿಂತ ಬುದ್ಧಿ ಬಂತೋ"

—ಎಂದು ತಾವೂ ಕಳವಳವನ್ನೇ ವ್ಯಕ್ತಪಡಿಸಿದರು.

ಹೀಗಾಗಿ ಎಲ್ಲರ ಹೃದಯದಲ್ಲೂ ಏನೋ ಆತಂಕ, ಏನೋ ಕಳವಳ, ಏನೋ ಅಸಮಧಾನ—

ಅಕಾರಣವಾಗಿ ಮುಗಿಲಲ್ಲಿ ಮೂಡಿದ ಧೂಮಕೇತುವನ್ನು ಕಂಡು 'ಏನಾಗುವುದೋ, ಏನು, ಯಾರಿಗೆ ವಿಪತ್ತು ಬರುವುದೋ' ಎಂದು ಎವೆ-ಯಲುಗಿಸದೆ ಆಕಾಶವನ್ನೇ ನೋಡುವ ಮುಗ್ಧ ಜನದಂತಿತ್ತು ಹಳ್ಳಿಯ ಸ್ಥಿತಿ.

ಈ ಭಯಮಿಶ್ರಿತ ಕಾತರದ ವಾತಾವರಣದಲ್ಲಿ, ಬರಲಿದ್ದ ಜಾತ್ರೆಗೆ ಸಿದ್ಧವಾಗುವುದಕ್ಕೆ ಇರಲಿ, ಅದರ ಬಗ್ಗೆ ಹೆಚ್ಚಾಗಿ ಮಾತಾಡುವುದಕ್ಕೂ ಜನಕ್ಕೆ ಉತ್ಸಾಹವಿರಲಿಲ್ಲ.

ಜಾತ್ರೆಗೆ ಕೇವಲ ಎರಡು ಮೂರು ದಿನಗಳು ಮಾತ್ರ ಉಳಿದುದರಿಂದ, ಆಗಲೇ ಹಳ್ಳಿಗೆ ಹೊರಗಿನಿಂದ ಜನ ಬರುವದಕ್ಕೆ ಆರಂಭವಾಗಿತ್ತು.

ದಿನಕ್ಕೆ ಒಂದು ಊರಿನ ಕಡೆಯ ಗಾಡಿಗಳು ಬಂದು, ಹಳ್ಳಿಯ ಬೀದಿಗಳಲ್ಲಿ ಹೊಸ ಜನ ಅಡ್ಡಾಡಲಾರಂಭಿಸಿದ್ದರು. ಹಳ್ಳಿಯ ಅಂಗಡಿಗಳಲ್ಲಿದ್ದ ಹಳೆಯ ತಿಂಡಿ ಪದಾರ್ಥಗಳ ಮೊತ್ತ ಕರಗಿ, ಹೊಸ ತಿಂಡಿಗಳನ್ನು ಕರಿಯುವ ಎಣ್ಣೆಯ ವಾಸನೆ ಹಳ್ಳಿಯಲ್ಲಿ ಹಬ್ಬತೊಡಗಿತು. ಅಲ್ಲಲ್ಲಿ ಒಳಮನೆಗಳಲ್ಲಿ ಇಸ್ಪೀಟು, ಲಕ್ಕಿಮುಷ್ಟಿ, ಮೊದಲಾದ ಜೂಜಾಟಗಳು ಪ್ರಾರಂಭವಾಗಿದ್ದವು. ಅಮ್ಮನವರ ಗುಡಿಯ ಬಳಿಯ ತೋಪಿನಲ್ಲಿ ಅಲ್ಲೊಂದು ಇಲ್ಲೊಂದು ಅಂಗಡಿಗಳ ಡೇರಾಗಳು ತಲೆಯೆತ್ತಲಾರಂಭಿಸಿದ್ದವು. ಹಳ್ಳಿಯ ಜನರ ಮನೆಯಲ್ಲಿ, ಪರಊರಿನ ನೆಂಟರು ಬಂದು 'ಠಾಣೆ' ಹಾಕಿ, ಮನೆಯ ಮುಂದಿನ ಜಗಲಿಗಳೂ ಮಲಗುವ ಮನೆಗಳಾಗ ತೊಡಗಿದ್ದವು. ಇವರೆಲ್ಲರಿಗಿಂತ ಹೆಚ್ಚಾಗಿ, ಹಳ್ಳಿಯಲ್ಲಿ, ಜಾತ್ರೆಯ ಸಮಯದಲ್ಲಿ ಹೆಚ್ಚು ಗಳಿಕೆ ದೊರೆಯುವುದೆಂಬಾಶೆಯಿಂದ ಎಲ್ಲೆಲ್ಲಿಂದಲೋ ಬಂದ ಭಿಕ್ಷುಕರು, ಹಳ್ಳಿಯ ಜನರನ್ನು ಕಾಡತೊಡಗಿದ್ದರು. ವೆಂಕಟದಾಸಪ್ಪನವರ ಮನೆಯ ಎದುರಿಗಿದ್ದ ಛತ್ರವಂತೂ ಆಗಲೇ ಫಕೀರರು, ಗೋಸಾಯಿಗಳು, ನಾನಾ ಪಂಗಡದ ಸಾಧು-ಸಂತರು, ಸ್ತ್ರೀ ದೇವತೆಯ ಜಾತ್ರೆಗೆ ಬರುವ ಕರಡಿಯ ಚರ್ಮದ ಅಂಗಿ, ಟೋಪಿಗಳ ಗೊರವಯ್ಯಗಳಿಂದ ಕಿಕ್ಕಿರಿದಿತ್ತು.

ಈ ಜನದೊಂದಿಗೇ, ಬೆಳಗಿನ ಝಾವದಲ್ಲಿ ನುಡಿಯುವ ಹಾಲು ಹಕ್ಕಿಯ ಶಕುನ ಹೇಳುವವರು, ಹಸ್ತಸಾಮುದ್ರಿಕರು, ಪಕ್ಷಿ-ಸಾಮುದ್ರಿಕರು ವೀರ ವಸಂತ ರಾಯನ ಆಗಮನದ ಭವಿಷ್ಯ ಸಾರುವ ತ್ರಿಕಾಲಜ್ಞಾನಿ ಜಂಗಮರು, 'ಜಯ ವಾಗುತೈತೆ, ಜಯವಾಗುತೈತೆ' ಎಂದು ಎಲ್ಲರಿಗೂ ಜಯ ಸಾರುವ ಬುಡಂ-ಬುಡುಕಿಯವರು, ಗಂಗೆ ಎತ್ತನ್ನು ಆಡಿಸುವವರು, ಹಳೆಯ ಸೀರೆ ಕುಪ್ಪಸ ಗಳಿಗೆ ಭವಿಷ್ಯ ಹೇಳುವ ಕೊರವಂಜಿಗಳು, ದಿನಕಳೆದಂತೆ ದೇವೀಕೆರೆಯಲ್ಲಿ ಬಂದು ನೆರೆದರು.

ಹಳ್ಳಿಯ ಹೊಸದಾಗಿ ಸುಣ್ಣ, ಕೆಮ್ಮಣ್ಣು ಬಳಿದು, ಕಾರಣೆ ಸಾರಣೆ ಮಾಡಿದ ಮನೆಗಳು ಹಳ್ಳಿಗೆ ಏನೋ ಒಂದು ಹೊಸತನವನ್ನು ತಂದು ಕೊಟ್ಟಿದ್ದವು.

ಆದರೆ ಈ ಸಡಗರ, ಹರ್ಷ—ಹಳ್ಳಿಯ ಮುಖವಾಡವಾಗಿತ್ತು.

ಆದರ ಅಡಿಯಲ್ಲಿ ಏನೋ ಆತಂಕ, ಭೀತಿಗಳು ಮಿಡಿಯುತ್ತಿದ್ದವು.

ಜಾತ್ರೆಗೆ ಇನ್ನು ಕೇವಲ ಎರಡೇ ದಿನ ಇದೆ ಎನ್ನುವಾಗ, ಇದ್ದಕ್ಕಿದ್ದ ಹಾಗೇ ಸಿಡಿಲು ಮೊಳಗಿತು.

೯

ಈ ಸಿಡಿಲು ಕೇಳಿ ಬಂದುದು ಹಳ್ಳಿಯ ನಾಯಕರಹಟ್ಟಿಯತ್ತಣಿಂದ.

ಈ ಸಿಡಿಲಿಗೆ ಕಾರಣ–ರಾಜಾ ಪಾರ್ಟಿನ ಬೋರಯ್ಯ.

ನಾಟಕದ ಗುಂಪಿನವನಾಗಿ, ತನ್ನ ಅಸಮಧಾನವನ್ನು ವ್ಯಕ್ತಪಡಿಸಲು ಅವಕಾಶವಿಲ್ಲದಿದ್ದ ಬೋರಯ್ಯ, ಬೇರೊಂದು ರೀತಿಯಲ್ಲಿ, ಆದರೆ ಮತ್ತಷ್ಟು ಉಗ್ರವಾದ ರೀತಿಯಲ್ಲಿ ತನ್ನ ಆಕ್ರೋಶವನ್ನು ತೀರಿಸಿಕೊಂಡಿದ್ದ.

ಗೌರಮ್ಮನ ಸಹವಾಸಮಾಡಿದ ಕಾರಣಕ್ಕಾಗಿ, ವೆಂಕಟದಾಸಪ್ಪನವರು ಅಮ್ಮನವರ ಪೂಜೆಗೆ ಎರವಾಗಬೇಕಾಗಿ ಬಂದುದು, ಉಳಿದೆಲ್ಲರಿಗಿಂತಲೂ ನಾಯಕವರ್ಗದವರಿಗೆ ವಿಶೇಷ ಅಸಮಾಧಾನಕ್ಕೆ ಕಾರಣವಾಗಿತ್ತು.

ಹಿಂದೆ, ವೆಂಕಟದಾಸಪ್ಪನವರು–ಗೌರಮ್ಮನ ಸ್ನೇಹ ಆರಂಭವಾದ ಕಾಲದಲ್ಲೇ ನಾಯಕರ ಹಳ್ಳಿಯಲ್ಲಿ ಕ್ರೋಧದ ಹೊಗೆ ಹಬ್ಬಿತ್ತು.

ವ್ಯವಸಾಯ ಪ್ರಧಾನವಾದ ಗ್ರಾಮ ಜೀವನದಲ್ಲಿ ಹೆಣ್ಣುಗಂಡುಗಳು ಒಬ್ಬರೊಂದಿಗೆ ಒಬ್ಬರು ಕಲೆಯಲು ಹೆಚ್ಚು ಆತಂಕ ಅಡ್ಡಿಗಳಿರುವುದಿಲ್ಲ. ವ್ಯವಸಾಯಕ್ಕೆ ಗಂಡು ಎಷ್ಟು ಆಗತ್ಯವೋ ಹೆಣ್ಣು ಅಷ್ಟೇ ಅಗತ್ಯ. ಸಸಿ ನಾಟುವುದು, ಕಳೆ ತೆಗೆಯುವುದು, ಪೈರು ಕಟಾವು ಮಾಡುವ ಕೆಲಸ–ಇವೆಲ್ಲಾ ಹೆಚ್ಚಾಗಿ ಹೆಂಗಸರದೇ ಗುತ್ತಿಗೆ. ಇಂಥ ಸಮಯದಲ್ಲಿ ಗಂಡು ಹೆಣ್ಣುಗಳು ಒಬ್ಬರೊಂದಿಗೊಬ್ಬರು ಬೆರೆಯುವುದು ತೀರಾ ಅನಿವಾರ್ಯ.

ಈ ಅನಿವಾರ್ಯ ಪರಿಸ್ಥಿತಿ ಆಗಾಗ, ಹೊಸ ಹರೆಯದವರಲ್ಲಿ ಪ್ರಣಯ ಪ್ರಸಂಗಕ್ಕೆ ಅವಕಾಶ ಕೊಡುವುದೂ ಉಂಟು.

ದೇವೀಕೆರೆಯಲ್ಲೂ ಈ ಬಗೆಯ ಹಲವು ಪ್ರಣಯ ಪ್ರಕರಣಗಳು ನಡೆದಿದ್ದವು. ಎರಡು ದಿನ, ಊರ ಮಾತಾಗಿ ಮತ್ತೆ ಮರೆತು ಹೋಗಿದ್ದವು.

ಆದರೆ ವೆಂಕಟದಾಸಪ್ಪನವರ ಪ್ರಣಯ ಪ್ರಸಂಗ ಇಂಥ ಮಾಮೂಲು 'ಪ್ರಕರಣ'ಗಳ ಗುಂಪಿಗೆ ಸೇರಿರಲಿಲ್ಲ.

ಬ್ರಾಹ್ಮಣವರ್ಗಕ್ಕೆ ಸೇರಿದ ಹುಡುಗನೊಬ್ಬ ಈ ಕೆಲಸ ಮಾಡಿದುದು ಹಳ್ಳಿಯ ಬ್ರಾಹ್ಮಣ ಸಂಸಾರಗಳಿಗೆ ಎಷ್ಟು ಅಸಮಾಧಾನಕ್ಕೆ ಕಾರಣವಾಗಿತ್ತೋ,

ತಮ್ಮ ಕುಲದ ಉತ್ತಮ ಹೆಣ್ಣೊಬ್ಬಳು, ಕಲಂಕಿತೆಯಾದುದು ನಾಯಕರ ಗುಂಪಿಗೂ ಅಷ್ಟೇ ತೀವ್ರವಾದ ಅಸಮಾಧಾನಕ್ಕೆ ಕಾರಣವಾಗಿತ್ತು.

ಆ ಪ್ರಸಂಗದಿಂದ ಉದ್ರಿಕ್ತರಾದ ನಾಯಕ ಯುವಕರು ಕೆಲವರು—

'ಅವಯ್ಯ, ನಮ್ಮ ಕುಲಕ್ಕೇ ಅವಮಾನ ಮಾಡ್ಬಿಟ್ಟ ಗೌರಮ್ಮನ್ನ ಕೆಡಿಸಿ. ಇನ್ನು ಅವನು ನಮ್ಮ ಹಟ್ಟಿಗೆ ಕಾಲಿಟ್ರೆ, ಕೈಕಾಲು ಮುರಿದು ಬಿಡಬೇಕು.'

—ಎಂದೂ ಮನಸ್ಸು ಮಾಡಿದ್ದರು.

ಆ ಕುಲದ ಹಿರಿಯರೂ ಕೆಲವರು, ವೀರಣ್ಣನ ಕಲಂಕಿತ ಕುಟುಂಬವನ್ನು ತಮ್ಮ ಕುಲದಿಂದಲೇ ಹೊರಗೆ ಹಾಕಬೇಕು ಎಂದು ಮಾಡಿದ್ದರು. ಆ ಹೊತ್ತಿನಲ್ಲಿ ಕುಲದಲ್ಲಿ ವೀರಣ್ಣನಿಗಿದ್ದ ಮರ್ಯಾದೆ ಹಿರಿಯರ ಬಾಯಿ ಕಟ್ಟಿತ್ತು.:

'ಏನೋ ಕೆಟ್ಟ ಹೊತ್ತಿನಲ್ಲಿ ಹೆಣ್ಣು ಹೆಂಗಸು ಮೈ ಮರತಳೂಂತ, ಹುಟ್ಟಾ ಗೌರವಸ್ಥನಿಗೆ ನಾವೂ ಅವಮಾನ ಮಾಡೋದ್ಯಾಕೆ? ತಪ್ಪಿಗೆಶಿಕ್ಷೆ ಮಾಡೋಕೆ ಭಗವಂತ ಅವ್ನೆ.'

—ಎಂದುಕೊಂಡು ಬಹು ಪ್ರಯಾಸದಿಂದ ಸುಮ್ಮನಿದ್ದರು.

ಆ ಸಂಕೋಚ ಹಿರಿಯರ ಬಾಯಿ ತಡೆದರೆ, ಬೋರಯ್ಯನಂಥ ಕೆಲವರಿಗೆ, ವೆಂಕಟದಾಸಪ್ಪನವರಲ್ಲಿದ್ದ ವಿಶೇಷ ವಿಶ್ವಾಸ, ಉದ್ರಿಕ್ತ ಯುವಕರ ಕೈತಡೆದಿತ್ತು.

ಒಮ್ಮೆ ಅಚ್ಚಣ್ಣಭಟ್ಟರು, ವೆಂಕಟದಾಸಪ್ಪನವರ ವಿಷಯದಲ್ಲಿ ಅಸಮಾಧಾನವನ್ನು ವ್ಯಕ್ತಪಡಿಸುವ ಅವಸರದಲ್ಲಿ ತಮ್ಮ ಕಿಡಿಗಣ್ಣನ್ನು ಗೌರಮ್ಮನ ಮೇಲೆ ತಿರುಗಿಸಿ—

'ಉತ್ತಮರನ್ನು ಕೆಡಿಸೋಕೇ ಹುಟ್ಟಿದೆ ಈ ಜಾತಿ'

—ಎಂದು ನಾಯಕರ ಗುಂಪನ್ನೇ ಹಿಯಾಳಿಸಿ ಮಾತಾಡಿದಾಗ, ಪರಿಸ್ಥಿತಿ ಬಹು ಪ್ರಕೋಪಕ್ಕೆ ಹೋಗಿತ್ತು.

ಕರ್ಣಾಕರ್ಣಿಕೆಯಾಗಿ ಈ ಮಾತನ್ನು ಕೇಳಿಸಿಕೊಂಡ, ಕೆಲವರು ಅಭಿಮಾನಿಗಳು—

'ಬೇಕಾದದ್ದಾಗಲಿ, ಆ ಹಾರುವಯ್ಯ ನಮ್ಮ ಜಾತೀನೇ ಹಿಯಾಳಿಸಿ ಮಾತಾಡಿದ್ದಕ್ಕೆ ಸರಿಯಾಗಿ ಬುದ್ಧಿ ಕಲಿಸಲೇ ಬೇಕು. ಇನ್ನು ಮೇಲೆ ನಾಯಕರು ಯಾರೂ ಬ್ರಾಂಬರ ಮನೆ ಆರಂಭಕ್ಕೆ ಹೋಗಬಾರದೂಂತ ಕುಲದ ಹಿರಿಯರು ಕಟ್ಟು ಮಾಡಬೇಕು.' . . . .

—ಎಂದು ಹಟ ಹಿಡಿದಿದ್ದರು.

ಆ ಹೊತ್ತಿನಲ್ಲಿ ಆ ಕುಲದ ವಿಚಾರಿಗಳು—

'ಯಾವನೋ ಒಬ್ಬ ನಾಲಗೆ ಹರಿಬಿಟ್ಟಾಂತ, ಊರ ಮೇಲೆಲ್ಲಾ ದ್ವೇಷ ತೀರಿಸೋದು ಎಲ್ಲಿ ನ್ಯಾಯ? ಬೇಕಾದ್ರೆ ನಮ್ಮ ಜನ ಅಚ್ಚಣ್ಣಭಟ್ಟರ ಮನೆ ಕೆಲಸಕ್ಕೆ ಹೋಗಬಾರದು ಅಂತ ಕಟ್ಟು ಮಾಡಬಹುದು.'

—ಎಂದಿದ್ದರು.

ಉಳಿದ ಕೆಲವರು—

'ಹಾಗೆಲ್ಲಾ ಮಾಡೋಕೆ ಹೋದರೆ–ಸುಮ್ನೆ ಹಳ್ಳೀಲಿ ಅಸಮಾಧಾನ ಬೆಳೆಯೋಕೆ ಕಾರಣ ಆಗುತ್ತೆ. ಅವಯ್ಯ ಬುದ್ಧಿ ಇಲ್ದೆ ಏನೋ ಆಡ್ದಾಂತ ನಾವೂ ಹಂಗೆ ಮಾಡೋದು ಚೆಂದಾಗಾಕಿಲ್ಲ, ಹೋಗ್ಲಿ ಬಿಡಿ–ನಾಯಿ ಬೊಗಳಿದ್ರೆ ದೇವಲೋಕ ಹಾಳಾ'.

—ಎಂದು ಎಲ್ಲರ ಕೈ ತಡೆದಿದ್ದರು.

ಕಾಲ ಕಳೆದ ಹಾಗೆ, ಈ ಅಸಮಾಧಾನದ ತೀವ್ರತೆ ಕಡಿಮೆಯಾಗಿ, ಸಂಪೂರ್ಣವಾಗಿ ಮರೆತುಹೋಗುವ ಮಟ್ಟಕ್ಕೆ ಮುಟ್ಟಿತ್ತು.

ಆದರೆ ಈಗ, ವೆಂಕಟದಾಸಪ್ಪನವರು ಅಮ್ಮನವರ ಪೂಜೆಯನ್ನು ಬಿಡಲು ಮಾಡಿದ ನಿರ್ಧಾರ, ಮತ್ತೆ ಆ ಹಳೆಯ ಉರಿಯನ್ನು ಕೆಣಕಿತ್ತು.

ಕೆಂಡವನ್ನು ಮುಚ್ಚಿದ್ದ ಬೂದಿಯನ್ನು ಹಾರಿಸಿ, ಆ ಮಲಗಿದ ಉರಿಯನ್ನು ಕೆಣಕಿದವನು ಬೋರಯ್ಯ.

ವೆಂಕಟದಾಸಪ್ಪನವರು ಏನೇ ಹೇಳಿದರೂ, ಅವರು ಅಮ್ಮನವರ ಪೂಜೆಯನ್ನು ಬಿಡುವುದಕ್ಕೆ, ಅಚ್ಚಣ್ಣಭಟ್ಟರ ಅಪಪ್ರಚಾರವೇ ಕಾರಣ ಎಂದು ಬೋರಯ್ಯನ ಮನಸ್ಸಿಗೆ ಖಚಿತವಾಗಿತ್ತು.

ಬೋರಯ್ಯನ ದೃಷ್ಟಿಯಲ್ಲಿ ವೆಂಕಟದಾಸಪ್ಪ ಒಂದು ರೀತಿಯ 'ದೇವತಾ ಪುರುಷ.'

'ನಮ್ಮಂಥೋರಿಗೆ, ಹುಟ್ಟಿದಾಗಿನಿಂದ ಬಣ್ಣ ಹಾಕಿಕೊಂಡು, ನೂರಾರು ಆಟ ಆಡಿದ್ರೂ, ಹೇಳಿಕೊಟ್ಟ ಮಾತು, ಕಲಿಸಿದ ಪದಾನೂಹೇಳೋಕೆ ಹೊರ ಡೋಲ್ಲ. ಹಂಗಿರೋವಾಗ ಯಾವತ್ತೂ ಆಟ ಬರದು ಅಭ್ಯಾಸ ಇಲ್ದೋರು, ಬರೀತೀನೀಂತ ಹಟ ಕಟ್ಟಿ, ನೋಡ್ದೋರೆಲ್ಲಾ ಮೂಗಿನ ಮೇಲೆ ಬೆರಳಿಟ್ಟು

ಕೊಳ್ಳೋ ಹಂಗೆ ನಾಟಕ ಬರದದ್ದೇನು ಪುಗಸೆಟ್ಟೆ ಪುನಗೇ? ಅಪಯ್ಯನಿಗೆ ಅವ್ನೋರು ಒಲ್ದಿದ್ದಾರೆ.

—ಎಂದೇ ಬೋರಯ್ಯ, ವೆಂಕಟದಾಸಪ್ಪನವರು ನಾಟಕ ಬರೆದುಕೊಟ್ಟ ದಿನವೇ ತೀರ್ಮಾನಿಸಿದ್ದ.

ಒಮ್ಮೆ ಮೂಡಿದ ಆ ಭಾವನೆ ಮತ್ತೆಂದೂ ಆತನಿಗೆ ಬದಲಾಗಲಿಲ್ಲ.

ಎಂತಲೇ ಅಚ್ಚಣ್ಣಭಟ್ಟರ ಅಪಪ್ರಚಾರದ ಪರಿಣಾಮ ಆತನನ್ನು ಬಹು ಪ್ರಕ್ಷುಬ್ಧಗೊಳಿಸಿತ್ತು.

'ನಮ್ಮೂರಿಗೆ ಕೀರ್ತಿ ತಂದೋರು, ಊರ ಮುಂದೆ ತಲೆ ತಗ್ಗೋ ಹಂಗೆ ಮಾಡಿಬಿಟ್ಟ ಈ ಬಡ್ಡಿ ಮಗ–ಗಂಟೆ ಬಾರ್ಸೋ ಹಾರುವಯ್ಯ. ಬಿಡಬಾರ್ದು ಈ ಹಾರುವಯ್ಯನ್ನ ಹಿಂಗೇ ಬಿಡಬಾರ್ದು. ಏನಾರಾ ಮಾಡಬೇಕು.'

—ಎಂದು ಅವನ ಹೃದಯ ಪ್ರತೀಕಾರಕಾತರವಾಗಿತ್ತು.

ಬೋರಯ್ಯನ ಹೃದಯದಲ್ಲಿ ಪ್ರತೀಕಾರ ತೃಷೆ ಮೂಡಿದಾಗ, ಅವನಿಗಿದ್ದ ಯೋಚನೆಯೆಲ್ಲಾ—

'ಹೆಂಗಾರ ಮಾಡಿ, ಆ ಹಾರುವಯ್ಯಗೆ ಹತ್ತು ಜನರ ಎದ್ರೀಗೆ; ಮೊಕ ಮುರ್ದು ಬಿಡಬೇಕು. ಚೆಂದಾಗಿ ಅಂದು ಮೊಕದ ಮ್ಯಾಲೆ ನೀರಿಳಿಸಿ, 'ನಾನು ಮಾಡಿದ್ದು ತಪ್ಪಾಯ್ತು' ಅನ್ನಿಸಿಬಿಡಬೇಕು. ಹ್ಯಂಗಾದ್ರೂ ಮತ್ತೆ ದಾಸಣ್ಣನೇ ಅವ್ನೋರ ಪೂಜೆ ಮಾಡೋಹಂಗಾಗಬೇಕು'.

—ಎಂಬುದಷ್ಟೆ.

ಅದಕ್ಕಿಂತ ಹೆಚ್ಚಾಗಿ ಬೋರಯ್ಯ ಬೇರೇನೂ ಯೋಚಿಸಿರಲಿಲ್ಲ.

ಆ ಉದ್ದೇಶದಿಂದಲೇ, 'ತಾವೆಲ್ಲಾ ಗುಂಪು ಕಟ್ಟಿಕೊಂಡು ಹೋಗಿ, ಗದ್ದಲ ಮಾಡಿ, ಅಚ್ಚಣ್ಣಭಟ್ಟರನ್ನು ಹೀಯಾಳಿಸಿ ಬಿಡಬೇಕು' ಎಂದೇ, ಆ ದಿನ ತನ್ನ ಗೆಳೆಯರ ಗುಂಪಿನೊಂದಿಗೆ ಹೊರಟಿದ್ದ.

ಆದರೆ ವೆಂಕಟದಾಸಪ್ಪನವರು, ತಮ್ಮ ಸ್ನೇಹದ ಆಣೆ ಹಾಕಿ, ಅಸಮಾಧಾನದ ಬಹಿರಂಗ ಪ್ರದರ್ಶನವನ್ನು ತಡೆದಿದ್ದರು.

ನಿಜ—ಅಸಮಾಧಾನದ ಪ್ರದರ್ಶನವನ್ನು ತಡೆದಿದ್ದರು. ಆದರೆ, ಅವರೊಳಗಿನ ಆ ಕಿಡಿ ಆರಿರಲಿಲ್ಲ. ಅದು ಒಳಗೇ ಹೊತ್ತಿ ಉರಿಯುತ್ತಿತ್ತು.

''ಈಗೆಂಗೆ ಮಾಡೋದು?' ಅವನಿಗೇನಾರ ಮಾಡಾನಾಂದ್ರೆ ದಾಸಣ್ಣ, ನನ್ನ ಮುಂದೆ, ಲಕ್ಷ್ಮಣ, ಸೀತಾಮ್ನೋರ ಮುಂದೆ ಬಾಣದ ಗೆರೆಎಳೆದಂಗೆ ಅಡ್ಡ ಹಾಕ್ಬುಟ್ಟ. ಈಗೆಂಗೆ ಮಾಡೋದು?'

—ಇದೊಂದೇ ಯೋಚನೆ ಬೋರಯ್ಯನ ತಲೆಯಲ್ಲಿ ಸುತ್ತಲಾರಂಭಿಸಿತು.

''ಏನಾರ ಮಾಡಬೇಕು?''

—ಎಂದು ಅವನ ಹೃದಯ ಪ್ರತೀಕಾರಕಾತರವಾಗಿತ್ತು. ಆದರೆ ಬೋರಯ್ಯ ಏನಾದರೂ ಮಾಡುವುದಕ್ಕೆ ವೆಂಕಟದಾಸಪ್ಪನವರ ಮಾತು ಅಡ್ಡಿಯಾಗಿ—

''ಈಗೆಂಗೆ ಮಾಡೋದು?''

—ಎಂಬ ಸಮಸ್ಯೆ, ಅಭೇದ್ಯವಾಗಿ ಅವನ ಕಣ್ಣೆದಿರು ನಿಂತಿತ್ತು.

ಸರಳವಾಗಿ, ಸಹಜವಾಗಿ ಹರಿಯಲು, ಅಣೆಕಟ್ಟೆಯಿಂದ ನಿರ್ಬಂಧಿತವಾದ ನೀರು, ಅವಕಾಶ ಸಿಕ್ಕ ಸಣ್ಣ ಸಣ್ಣ ಬಿರುಕುಗಳಲ್ಲಿ, ವಕ್ರವಕ್ರವಾಗಿ ಹರಿಯು ವಂತೆ, ಸಹಜ ಪ್ರದರ್ಶನದ ಅವಕಾಶ ತಪ್ಪಿದ ಬೋರಯ್ಯನ ಪ್ರತೀಕಾರ ಕಾತರವೂ ಅಡ್ಡದಾರಿಗಳನ್ನು ಯೋಚಿಸಲಾರಂಭಿಸಿತು.

ಎಷ್ಟು ಯೋಚಿಸಿದರೂ ಏನೊಂದೂ ದಾರಿ ಕಾಣದು.

ಒಮ್ಮೆಮ್ಮೆ ಬಗೆಹರಿಯದ ಸಮಸ್ಯೆಯಿಂದ ಪ್ರಕ್ಷುಬ್ಧವಾದ ಬೋರಯ್ಯನ ಚಿತ್ತ ಉನ್ಮತ್ತವಾಗಿ—

'ದಾಸಣ್ಣ ನಾಯಕರ ಹೆಂಗಸಿನ ಸವಾಸ ಮಾಡ್ದಾಂತ ತಾನೇ ಈ ಮಯ್ಯ ಅವ್ರಿಂದ ಅವ್ನೋರ ಪೂಜೆ ತಪ್ಸಿದ್ದು. ಏನಾದ್ದಾಗ್ಲೀಂತ, ನಾನು ಈ ಮಯ್ಯನ ಹೆಂಗಸ್ರನ್ನ ಕೆಡಿಸಿಬಿಟ್ರೆ, ಆಗೇನ್ಮಾಡ್ತಾನೆ?'

—ಎಂಬ ಹುಚ್ಚು ದಾರಿಯಲ್ಲಿ ಹರಿಯುತ್ತಿತ್ತು.

ತಾನು ಈ ಉನ್ಮತ್ತ ಯೋಚನೆಯನ್ನು ಕಾರ್ಯರೂಪಕ್ಕೆ ತರಲು ಯತ್ನಿಸಿದರೆ, ಊರು ಏನು ಮಾಡಬಹುದು ಎಂಬ ಭಯಕ್ಕಿಂತ ಹೆಚ್ಚಾಗಿ, ವೆಂಕಟದಾಸಪ್ಪನವರ ಸಿಟ್ಟಿನ ಭಯ, ಬೋರಯ್ಯ ಆ ಚಿಂತೆಯನ್ನು, ಅದು ತಲೆಯಲ್ಲಿ ಸುಳಿಯುತ್ತಿದ್ದ ಹಾಗೇ ಕೊಡವಿಬಿಡಲು ಕಾರಣವಾಗಿತ್ತು.

ಆ ಯೋಚನೆ ಬೇಡವೆಂದರೆ ಮತ್ತೊಂದು, ಅಂಥದೇ ಹುಚ್ಚು ಯೋಚನೆ—

'ಇಷ್ಟು ಹಟ ಸಾಧಿಸಿದ ಆ ಹಾರುವಯ್ಯನ್ನೇ ತೀರಿಸಿಬಿಟ್ರೆ ಹೆಂ ಗೆ—?'

ಆದರೆ ಹುಟ್ಟಾ ಸಜ್ಜನನೂ, ರಸಿಕನೂ ಆದ ಬೋರಯ್ಯನಿಗೆ, ಆ ಯೋಚನೆಯಿಂದಲೇ ಮೈಮೇಲೆ ಮುಳ್ಳು ಬಂದಂತಾಗಿ—

"ಛಿ! ನನಗೇನು ಹುಚ್ಚು ಹಿಡಿದೈತೇಂತ ಇಂಥ ಕೆಟ್ಟ ಯೋಚ್ನೆ ಬರ್‍ತವೆ? ಶಿವಾ ಶಿವಾ—'

—ಎಂದು ತನ್ನನ್ನೇ ತಾನು ನಿಂದಿಸಿಕೊಂಡ.

ಆದರೆ. 'ಏನಾರ ಮಾಡಬೇಕು' ಎಂಬ ಬಯಕೆ ಹೋಗಲಿಲ್ಲ.

'ಈಗೆಂಗೆ ಮಾಡೋದು?'

—ಎಂಬ ಪ್ರಶ್ನೆ ದೈತ್ಯಾಕಾರವಾಗಿ ಅವನ ಕಣ್ಣೆದಿರು ನಿಂತಿತ್ತು.

ಈ ಚಿಂತೆಯಲ್ಲಿ ಬೋರಯ್ಯನಿಗೆ ನಾಟಕಾಭ್ಯಾಸ, ಮನೆಗೆ ಬಂದ ನೆಂಟರಿಷ್ಟರನ್ನು ಮಾತನಾಡಿಸುವುದು, ಜಾತ್ರೆಗೆ ಸವರಣೆ ಮಾಡುವುದು—ಯಾವುದೂ ಬೇಡವಾಯಿತು..

"ಜಾತ್ರೆ ಬಂತು... ಮನೆಗದು ಬೇಕು, ಇದು ಬೇಕು..."

—ಎಂದ ಹೆಂಡತಿಗೆ—

"ಈ ಬೆಂಕಿ ಹಾಕಿದ ಜಾತ್ರೆ ಯಾರಿಗೆ ಬೇಕೈತಿ? ಜಾತ್ರೇನೂ ಬೇಡ, ಜಪಾತ್ರೇನೂ ಬೇಡ..."

—ಎಂದು ಆಕೆ ಮುಟ್ಟಿ ಬೀಳುವಂತೆ ಗದರಿಸಿಕೊಂಡಿದ್ದ.

ಜಾತ್ರೆಯ ವಿಷಯವಾಗಿ ತನಗಿದ್ದ ನಿರುತ್ಸಾಹವನ್ನು ಪ್ರಶ್ನಿಸಿದ, ತನ್ನ ನೆರಮನೆಯ ತಿಪ್ಪನಾಯಕನಿಗೂ ಹಾಗೇ ಹೇಳಿದ್ದ—

"ಈ ಜಾತ್ರೆ ಪಾತ್ರೆ ಕಟ್ಕೊಂಡು ನಮಗೇನಾಗಬೇಕು. ತೆವಲಿದ್ದೋರು ಹೆಂಗೆ ಬೇಕೋ ಹಂಗ್ಮಾಡಿಕೊಳ್ಳಲಿ."

"ನೀನೇ ಹಂಗಂದ್ರೆ ಹೆಂಗಾಗ್ತದೆ ಬೋರಣ್ಣ. ಆಟದಾಗೆ ಬಣ್ಣ ಹಾಕ್ಕೊಂಡು ದೊಡ್ಡ ಯಾಸ ಹಾಕೋನು—ನೀನೇ ನಂಗ್ಯಾಕೆ ಜಾತ್ರೆ ಅಂದ್ರೆ ನಡೀತದಾ?

"ನಡೀತದೋ ಬಿಡ್ತದೋ—ಬಣ್ಣ ಹಾಕ್ಕಳ್ದೆ ನಿರ್ವಾಹ ಇಲ್ಲ. ಹಾಕ್ಕೊಳ್ಳೋದು— ದಾಸಣ್ಣನಿಗೆ ಮಾತು ಕೊಟ್ಟಿದ್ದಾಗದೆ—ಅಷ್ಟು ಮಾಡಿ ಕೈ ತೊಳಕೊಂಡ್ರಾಯ್ತು."

"ಹಂಗಾದ್ರೆ ಈ ಸಲ ಜಾತ್ರೇಲಿ ತಿರುಗಾಡೋಕೂ ಬರಾಕಿಲ್ಲಾನ್ನು... ಐ... ಬಿಡಬಾರ್ದ್ದ ನಂಗೇಳ್ತೀಯಲ್ಲ... ಎಲ್ಲೆಲ್ಲೀದೋ ಎಂಥ ಹಕ್ಕಿ ಬಂದಿರ್ತ್ತವೆ. ಸಂಪ್ಕೆ ಹಂಗಡ್ನಾಡಿ ಬಂದ್ರೆ ಮೈ ಜುಮುಗುಟ್ಟುತ್ತಿರ್ತ್ತದೆ. ಅದ್ಕೂ ಬರಾಕಿಲ್ಲಾನ್ನು.''

—ನಗುತ್ತ ಕೇಳಿದ ತಿಪ್ಪನಾಯಕ.

"ಊಹೂ."

"ಯಾಕೆ?"

"ಯಾಕೇಂದ್ರೇನು—ಸೋಟೆ ತಿವಿಸಿಕೊಳ್ಳೇಕೆ ಹೋಗಬೇಕೆ?''

"ಯಾರು, ನಮ್ಮ ಸೋಟೆ ಯಾಕೆ ತಿವೀತಾರೆ?''

"ಮತ್ತೆ—ನಾಯಕರಾಕೇನ ಹುಟ್ಟಿದ್ದಕ್ಕೆ ದಾಸಣ್ಣ, ಅವ್ನೋರ ಪೂಜೆ ಮಾಡಬಾರದು ಅಂದೋರು, ನಾಯಕರು ಓಡಾಡಿದ್ರೆ ಜಾತ್ರೆ ಜಾತೀನೂ ಕೆಟ್ತು ಅನ್ನೋದು...''

—ಆಕ್ರೋಶದಿಂದ ಹೇಳಿದ ಬೋರಣ್ಣ.

"ಐ. ಹಂಗಂದ್ರೆ—ಅಂದೋರ್ನ ಸದೆ ಬಡಿಯಾಕಿಲ್ವಾ?''

—ಮುಖದ ಮೇಲಿನ ಚಿಗುರು ಮೀಸೆಯನ್ನು ಸವರಿ ಹೇಳಿದ. ತಿಪ್ಪನಾಯಕ.

"ಈ ಗಂಡದ್ದಕ್ಕೆ ನೀವು ಕಿಸಿದದ್ದೇನು?—ಬಾಯ್ಮುಚ್ಚಿಕೊಂಡು ಕೂತಂ ಕೊಂಡಿಲ್ವಾ... ? ಥ್ಥು... ಮಾತ್ನಾಗೆಲ್ಲಾ ಗಂಡಸ್ರು!...'

—ಮತ್ತಷ್ಟು ಬಿರುಸಾಗಿ ಹೇಳಿದ ಬೋರಯ್ಯ.

ಬೋರಯ್ಯ ಹೇಳಿದುದನ್ನು ಕೇಳಿ, ತಿಪ್ಪನಾಯಕನಲ್ಲಿದ್ದ ಪುರುಷತ್ವ ಕೆರಳಿತು.

"ಇಲ್ನೋಡು—ಬೋರಣ್ಣ, ನೀನು ಮನಸ್ನಾಗೆ ಎಂಥದೋ ಇಟ್ಕೊಂಡು ಮಾತಾಡ್ತಾ ಇದೀಯ. ಅದೇನು ಸ್ವಲ್ಪ ಬಿಡಿಸಿ ಹೇಳು—ಅವ್ರ್ಯಾಕೆ ನಾವು ಗಂಡಸ್ರೋ ಹೆಂಗಸ್ರೋ ನೋಡಿಕೋವಂತೆ. ಅದೇನು ಹೇಳು.'

—ಎಂದ ತಿಪ್ಪನಾಯಕ.

"ಊರಿಗೆಲ್ಲಾ ಗೊತ್ತಿರೋದು—ನಾನು ಬಂದು ಕಿವೀಲಿ ಹೇಳ್ಲೆ...'

"ಇರ್ಲಿ ಹೇಳು ಬೋರಣ್ಣ—ನಮಗೆ ಅಡ್ಡತಿಡ್ಡ ಮಾತು ಅರ್ಥ ಆಗಾಕಿಲ್ಲ. ಸಾಫ್‌ಸೀದಾ ಹೇಳಿದ್ರೇ.—ಅರ್ಥ ಆಗೋದು."

—ಸಿಟ್ಟಿನೊಂದಿಗೆ ಕುತೂಹಲವೂ ಕೆರಳಿ ಕೇಳಿದ ತಿಪ್ಪನಾಯಕ.

"ಈಗಾಗಿರೋದು ಇನ್ನೇನು ತಿಪ್ಪನಾಯಕ, ನಾಯಕರು, ಹೊಲೆ ಮಾದಿಗರಿಗಿಂತ ಕಡೆ ಅಂತ ಹೇಳ್ದಂಗೆ ಆಗಿಲ್ವಾ—ನಮ್ಮ ಜಾತಿಯೋರ್ನ ಮುಟ್ಟೋರು, ಅವ್ನೋರ ಪೂಜೆ ಮಾಡದೆ ಹಾಗೆ ಮಾಡಿದ ಮ್ಯಾಲೆ, ಇವತ್ತು ಇದು ಅಂದೋರು,—ನಾಳೆ ನಾಯಕರು ಜಾತ್ರೆಗೆ, ಅವ್ಮನೋರ ಗುಡಿಗೂ ಬರಬಾರ್ದು ಅಂತಾರೆ..."

"ಅದೆಂಗೆ ಅನ್ತಾರೆ..."

"ಈಗೆಂಗೆ ಅಂದ್ರು... ಈ ಮಾತು ಕೇಳಿಕೊಂಡು ತೆಪ್ಪಗಿದ್ರೆ—ನಾಳೆ ಅದೂ ಅಂತಾರೆ. ಮತ್ತೊಂದ್ನೂ ಅನ್ತಾರೆ."

—ಬೋರಯ್ಯ ಹೇಳಿದ.

ಬೋರಯ್ಯ ಹೇಳಿದುದನ್ನು ಕೇಳಿ, ತಿಪ್ಪನಾಯಕ ಸುಮ್ಮನೆ ಕುಳಿತು ಬಿಟ್ಟ. ಅವನ ಮಿದುಳೂ ಬೋರಯ್ಯ ಹೇಳಿದ ಮಾತನ್ನು ಮೆಲಕು ಹಾಕುತ್ತಿತ್ತು. ಯೋಚಿಸುತ್ತಾ ಯೋಚಿಸುತ್ತಾ, ಪರರು ತೋರಿದ ದಾರಿ ಯಲ್ಲೇ ನಡೆಯುವುದನ್ನು ಅಭ್ಯಾಸ ಮಾಡಿಕೊಂಡ ತಿಪ್ಪನಾಯಕನ ಮಿದುಳಿಗೆ, ಬೋರಯ್ಯನ ಮಾತು ನಿಜವೆಂದೇ ತೋರಿ, ಅವನ ಮುಖ ಕೆಂಪಾಯಿತು.

"ಹಂಗಂದ್ರೆ... ಈಗೇನ್ಮಾಡಬೇಕೂಂತೀಯ..."

"ನನ್ನ ಕೇಳಿದ್ರೆ—ನಾಯಕರು ಈ ಜಾತ್ರೆಗೇ ಹೋಗಬಾರದು..."

"ಆದ್ರೆ... ಮಾಮೂಲು...?"

"ಸೈ...ಸೈ... ಯಾರ್ದೂ ಇಲ್ಲದ ಮಾಮೂಲು ನಮಗೇ ಬಂದಿದೇನು? ದಾಸಣ್ಣೋರು ಪೂಜೆ ಬಿಟ್ಮಾಗ್ಲೇ ಮಾಮೂಲೆಲ್ಲಾ ಎಕ್ಕ ಹುಟ್ಟೋಯ್ತು. ಅವರಿಗೆ ಬ್ಯಾಡದ ಮಾಮೂಲು ನಮಗೆ ತಾನೆ ಯಾಕೆ? ಹಾಳಾಗೋಗ್ಲಿ ಬಿಡು."

—ಎಂದ ಬೋರಯ್ಯ.

ತಿಪ್ಪನಾಯಕನಿಗೂ ಏಕೋ ಬೋರಯ್ಯನ ಮಾತು ಸರಿ ಎಂದು ತೋರಿತು.

"ಹೌದು ಕಣಣ್ಣ—ನಾವು ಮರ್‍ಯಾದೆ ಇದ್ದೋರಾದ್ರೆ ನೀನೇಳ್ದಂಗೇ ಮಾಡಬೇಕು."

—ಎಂದ.

ಅದುವರೆಗೂ ಹೊಗೆಯಾಗಿದ್ದುದು ಆ ಗಳಿಗೆಯಲ್ಲಿ ಉರಿಯಾಯಿತು.

೧೦

ಬೋರಯ್ಯ ತಿಪ್ಪನಾಯಕನಿಗೆ ಆ ಮಾತು ಹೇಳಿದಾಗ, ಆತ ತನ್ನ ಮಾತನ್ನು ನಂಬುವನೆಂದೂ ತಿಳಿದುಕೊಂಡಿರಲಿಲ್ಲ; ಹೀಗೆ ಹೇಳಬೇಕೆಂದು ಯೋಚಿಸಿಯೂ ಮಾತಾಡಿರಲಿಲ್ಲ.

ಉದ್ವೇಗದಲ್ಲಿ ಏನು ತೋಚಿತೋ ಅದನ್ನು ಆಡಿದ್ದ.

ಆದರೆ ಎಷ್ಟೋ ಬಾರಿ, ಯಾವ ಉದ್ದೇಶವೂ ಇಲ್ಲದೆ, ಕುರುಡಾಗಿ ಬೀಸಿದ ಕಲ್ಲಿಗೇ ಕಾಯಿ ಉದುರುವಂತೆ, ಬೋರಯ್ಯನ ಉದ್ದೇಶರಹಿತ, ಉದ್ರೇಕದ ಮಾತು, ಕೇಳಿದವರ ಮೇಲೆ, ಅನಿರೀಕ್ಷಿತವಾಗಿ ಮಹಾ ಪರಿಣಾಮ ವನ್ನುಂಟುಮಾಡಿತು.

ಬೋರಯ್ಯ ತಿಪ್ಪನಾಯಕನಿಗೆ ಹೇಳಿದ ಮಾತು ಮಿಂಚಿನ ವೇಗದಲ್ಲಿ ನಾಯಕರ ಕೇರಿಯಲ್ಲೆಲ್ಲಾ ಹರಡಿತು. ಬೋರಯ್ಯನ ಮಾತಿನಲ್ಲಿ ಸತ್ಯಾಂಶವೆಷ್ಟಿದೆ, ಅಸಂಬದ್ಧತೆ ಎಷ್ಟಿದೆ ಎಂದು ಚಿಂತಿಸುವ ಗೋಜಿಗೆ ಯಾರೂ ಹೋಗಲಿಲ್ಲ.

"ಬೋರಣ್ಣ, ಯಾವತ್ತೂ, ಯಾರ್ನೂ ಅನ್ನದ ಸಜ್ಜನ. ಅಂಥೋನು ಹೊಟ್ಟೆ ಉರಿಗೆ ಇಂಥ ಮಾತು ಹೇಳ್ತನಾ? ಅವನು ಹೇಳೋದು ನಿಜ.'

—ಇಷ್ಟೆ, ಎಲ್ಲರಿಗೂ ಅನಿಸಿದ್ದು.

ಆ ಅನಿಸುವಿಕೆಯೊಂದಿಗೆ, ನಾಯಕರ ಕೇರಿಯ ಯುವಕರ ಮೀಸೆಗಳೆಲ್ಲಾ ಹುರಿಯಾದವು.

ಎಲ್ಲರೂ ಸಿಟ್ಟಿನಿಂದ ಬಿಗಿದ ಧ್ವನಿಯಲ್ಲಿ ಹೇಳಿದರು—

"ನಮ್ಮ ಜಾತಿಗೆ ಅವಮಾನ ಆದ ಜಾಗಕ್ಕೆ ನಾವು ಕಾಲಿಕ್ಕೋದು ಬ್ಯಾಡ. ನಾಯಕರ್‍ಯಾರೂ ಈ ಸಲ ಜಾತ್ರೆಗೆ ಹೋಗಕೂಡದು. ಅವ್ನೋರಿಗೆ ಹಣ್ಣು ಕಾಯಿ ಮಾಡಿಸಕೂಡದು. ನಿಮಿತ್ತ ಕೇಳೋಕೂ ಹೋಗಬಾರದು. ಹಂಗೆ ಹೋದೋರ್‍ನ ಕುಲದಿಂದ ಹೊರಗೆ ಹಾಕಬೇಕು."

ನಾಯಕರ ಕೇರಿಯ ಮನೆ ಮನೆಯಲ್ಲೂ ರಣ ಕಹಳೆ ಮೊರೆಯಿತು.

ಉತ್ಸಾಹದಿಂದ ಜಾತ್ರೆಗೆ ಸಿದ್ಧವಾಗುತ್ತಿದ್ದ ಕೇರಿ, ಇದ್ದಕ್ಕಿದ್ದಂತೆಯೇ ಮಂಕಾಗಿಹೋಯಿತು.

ಜಾತ್ರೆಗೆಂದು, ಹಳ್ಳಿಯಲ್ಲಿದ್ದ ತಮ್ಮ ನೆಂಟರ ಮನೆಗೆ ಬಂದ ಪರ ಊರಿನ ಜನಕ್ಕೆ, ಕಕಮಕವಾದಂತಾಯಿತು.

ಜಾತ್ರೆಗಾಗಿ ಕಾಯುತ್ತಿದ್ದ ಹೆಂಗಸರು, ಅಮ್ಮನವರಿಗೆ ಹರಕೆ ಹೊತ್ತವರು 'ಮುಂದೇನು ಗತಿ?' ಎಂದು ತಲೆಯ ಮೇಲೆ ಕೈಹೊತ್ತು ಕುಳಿತರು.

ನಾಯಕರಕೇರಿಯ ಯುವಕರು ಮಾಡಿದ ತೀರ್ಮಾನ ಉಳಿದೆಲ್ಲರಿಗಿಂತಲೂ ಹೆಚ್ಚಾಗಿ, ಕೇರಿಯ ಕುಲದ ಹಿರಿಯರಿಗೆ ಚಿಂತೆಗೆ ಕಾರಣವಾಯಿತು,

"ಇದ್ದಕ್ಕಿದ್ದಂಗೇ ಹುಡುಗ್ರು ಇದೇನು ಗಂಡಾಂತ್ರ ತಂದಿಟ್ರು? ಯಾರು ಅವರಿಗೆ ಈ ಮಾತೆಲ್ಲಾ ಹೇಳಿಕೊಟ್ರು?''

ಯುವಕರು ಕೇರಿಯಲ್ಲಿದ್ದ ಮನೆಮನೆಗೂ ಹೋಗಿ ತಮ್ಮ ಪ್ರತಿಭಟನೆಯ ಸಂದೇಶವನ್ನು ಸಾರುತ್ತಿದ್ದಾರೆ ಎಂದು ತಿಳಿಯುತ್ತಿದ್ದ ಹಾಗೇ, ಆ ದಿನ ನಡುರಾತ್ರಿಯಲ್ಲಿ, ಕುಲದ ಹಿರಿಯರಲ್ಲೊಬ್ಬನಾದ ಸೂರನಾಯಕನ ಮನೆಯಲ್ಲಿ, ಹಿರಿಯರು ಮತ್ತು ಯುವಕ ಮುಖಂಡರ ರಹಸ್ಯ ಸಭೆ ಸೇರಿತು. ಆ ಸಭೆಯಲ್ಲಿ ನಾಯಕಕೇರಿಯ ಹಿರಿಯರಾದ ಸೂರನಾಯಕ, ವೀರಣ್ಣ, ಪಾಪನಾಯಕ ನಾಯಕರಕೇರಿಯಲ್ಲಿದ್ದ ಮಾರಮ್ಮನ ಗುಡಿಯ ಪೂಜಾರಿ, ಓಬಯ್ಯ, ಗ್ರಾಮದ ತಳವಾರ ಬೊಮ್ಮಯ್ಯ ಮೊದಲಾದವರೊಂದಿಗೆ, ಯುವಕ ವರ್ಗದ ಮುಂದಾಳುಗಳಾದ ಬೋರಯ್ಯ, ತಿಪ್ಪನಾಯಕ, ಚಿನ್ನೋಬಯ್ಯ, ಭೀಮನಾಯಕ ಮೊದಲಾದವರೂ ನೆರೆದರು.

ಆ ಸಭೆಯಲ್ಲಿ ನೆರೆದ ಎಲ್ಲರ ಮುಖವೂ ಒಂದೊಂದು ಬಗೆಯ ಕಾತರ, ಆಕ್ರೋಶದಿಂದ ಬಿಗಿದಿತ್ತು.

ಹಿರಿಯರು, ಪರಂಪರೆಗೆ ವಿರುದ್ಧವಾದ ಕಿರಿಯರ ಪ್ರತಿಭಟನೆಯನ್ನು ಮುರಿಯುವ ಸಂಕಲ್ಪದಿಂದ ಕೂಡಿದ್ದರೆ, ಯುವಕರೂ, ಎಲ್ಲ ಪರಂಪರೆಗೂ ವಿರುದ್ಧವಾಗಿ ತಮ್ಮ ಕುಲದ ಅಭಿಮಾನವನ್ನು ಎತ್ತಿ ಮೆರೆಸಲು ಕೃತಸಂಕಲ್ಪರಾಗಿ ಬಂದಿದ್ದರು.

ಆ ಸಭೆಗೆ ಬರಬೇಕಾದವರೆಲ್ಲರೂ ಬಂದ ಬಳಿಕ, ವಯೋವೃದ್ಧನಾಗಿ,

ಆ ಕಾರಣದಿಂದ ಸಭೆಯ ಮುಖಂಡತ್ವವನ್ನು ವಹಿಸಿದ ಸೂರನಾಯಕ ಹಿರಿಯರ ಅಭಿಪ್ರಾಯವನ್ನು ಸಭೆಯ ಮುಂದೆ ಮಂಡಿಸಿದ—

"ಬೊಮ್ಮಯ್ಯ......ಯಾಕೋ ಕಾಲ ಭಾಳ ಕೆಟ್ಹೋಯ್ತು......... ತಲೆಗಲ್ಲ, ಕಾಲಿಗೆ ರುಮಾಲು ಕೇಳೋ ಕಾಲಬಂದೋಗಯ್ತೆ. ಕೇರೀಲಿ ಹಿರೇರು ಅಂತ ಅನ್ನಿಸ್ಕೊಂಡ, ನಾವು ತಲೆ ಎತ್ತಿಕೊಂಡು ತಿರುಗೋ ಹಂಗೇ ಇಲ್ಲ. ಇಂಥ ಹಿರಿತನ ನಮಗ್ಯಾಕಿರಬೇಕೂಂತ ಕೇಳ್ತೀನಿ. ಇಕಾ ನೋಡು— ನಾನು ನಿಘಂಟಾಗಿ ಹೇಳಿಬಿಡ್ತೀನಿ. ಎಲ್ಲಾ ನಮ್ಮ ಮಾತು ಕೇಳೋ ಹಂಗಿದ್ರೆ— ನಮಗೆ ಈ ಹಿರೀತನ ಇರ್ಲಿ—ಇಲ್ಲ, ಇದನ್ನು ಯಾರು ಹೀರೇರೋ ಅವರು ತಮ್ಮ ತಲೆಮ್ಯಾಕೆ ಮಡಗಿಕೊಳ್ಳಲಿ. ಮಾತಿಗೆ ಬೆಲೆ ಇಲ್ಲದ ಮ್ಯಾಲೆ—ಇದಿನ್ಯಾಕೆ ಬೇಕು."

—ಎಂದು, ಸೂರನಾಯಕ ತನ್ನ ತಲೆಯ ಮೇಲಿದ್ದ ಮೊಳಕಾಲ್ಮೂರು ರೇಶಿಮೆಯ 'ಗದ್ದೆಮಡಿ' ರುಮಾಲನ್ನು ತೆಗೆದು, ಅಲ್ಲಿದ್ದವರ ನಡುವೆ ಇಟ್ಟ.

"ಐ...ಇದ್ಯೊಳ್ಳೆ ಪಸಂದಾಯ್ತು ಬಿಡು. ತಲೆ ಮೇಲಿನ ಪೇಟಾನ ನೆಲದ ಮೇಲಿಕ್ಕೋದು ಲಕ್ಷಣ ಅಲ್ಲ. ಈಗ ನಿನ್ನ ಮಾತು ಕೇಳಾಕಿಲ್ಲಾಂತ ಯಾರು ಅಂದ್ರು...ಅದೇಳು...''

—ಅಲ್ಲಿ ನೆರೆದಿದ್ದ ಎಲ್ಲರ ಪರವಾಗಿಯೂ ಹೇಳಿದಂತೆ ಪೂಜಾರಿ ಓಬಯ್ಯ ಹೇಳಿದ, ಸಭೆಯ ಸುತ್ತಲೂ ತನ್ನ ದಪ್ಪ ಗುಡ್ಡೆಗಳ ಕಣ್ಣು ಹೊರಳಿಸಿ.

"ಬರೀ, ನಮ್ಮ ಜನದ ಕೇರೀಲೇನು—ಹಳ್ಳೀಲೇ ನಿನ್ನ ಮಾತು ತೆಗೆದು ಹಾಕೋರು ಯಾರವ್ರೆ—ಅದ್ಹೇಳು. ನೀನೇಳಿದ್ದಕ್ಕೆ ಇಲ್ಲಾನ್ನೋದೇನು ಸಸಾರಾ ಆಗೋಯ್ತಾ? ಹೇಳೋರು ಕೇಳೋರು —ನಾವಿನ್ನೂ ಬದುಕಿದೀವಿ, ಸತ್ಹೋಗಿಲ್ಲ."

—ಪಾಪನಾಯಕ, ಎಲ್ಲ ಹಿರಿಯರ ಪರವಾಗಿ ಸೂರನಾಯಕನ ಮುಖಂಡತ್ವವನ್ನು ಒಪ್ಪಿಕೊಂಡಂತೆ ಹೇಳಿದ.

"ನೀವೂ ಬದುಕಿದೀರಾ— ನಾನೂ ಬದುಕಿದೀನಿ... ಆದ್ರೆ—ನಮ್ಮನೇ ಹೈಕಳೇ ನಮ್ಮ ಮರ್ಯಾದೆ ಮುರಿದ ಮ್ಯಾಲೆ—ನಾವು ಇದ್ರೆಷ್ಟು ಸತ್ತರೆಷ್ಟು",

—ಸೂರನಾಯಕ ಮತ್ತೊಮ್ಮೆ ಸವಾಲು ಹಾಕಿದ ಹಾಗೆ ಹೇಳಿದ.

"ಛಿ. ಛಿ. ಹಂಗೆಲ್ಲಾ ಅನ್ನೇಯಾ ಆಡಬಾರದ್ದು, ಸೂರಜ್ಜ. ನಮ್ಮ ಹೈಕಳು ಹಂಗೆಲ್ಲಾ ಕಟ್ಟು—ಕಾನೂನು ಮುರಿಯೋರಲ್ಲ. ರಕ್ತ ಪಸಿ ಬಿಸಿ, ಅದ್ಕೆ ದುಡುಕಿ ಮಾತಾಡ್ತವೆ. 'ನಿಮ್ಕೇನು ತಿಳೀತತೆ–ಕುಂತಂಕೊಳ್ಳೋದ್ರೆ' ತಣ್ಣಗೆ ಕುಂತ್ಕೊಂತವೆ. ಅಷ್ಟೆ—ಏನು ವೀರಣ್ಣ—ನೀನೇನೇಳ್ತಿ?"

—ಎಂದು ತಳವಾರ ಬೊಮ್ಮಯ್ಯ ತನ್ನ ಸಾಕಷ್ಟು ನರೆತ 'ಗಿರಿಜಾ ಮಿಸೆ'ಯ ಮೇಲೆ ಕೈ ಆಡಿಸುತ್ತಾ ವೀರಣ್ಣನನ್ನು ಕೇಳಿದ.

ವೀರಣ್ಣ ಆ ಮಾತಿಗೆ ಏನೂ ಉತ್ತರ ಹೇಳಲಿಲ್ಲ. ತಗ್ಗಿಸಿದ ತನ್ನ ತಲೆಯನ್ನು ಮೇಲಕ್ಕೆ ಎತ್ತಲೂ ಇಲ್ಲ.

"ಸೈ—ಎಲ್ಲಾರೂ ಹಂಗಂದ್ರೆ ಮತ್ತೆ ನಾನು ರುಮಾಲಿಟ್ಕೋತೀನಿ."

—ಎಂದು ಸೂರನಾಯಕ ನೆಲದ ಮೇಲಿದ್ದ ತನ್ನ ರುಮಾಲನ್ನು ಕೈಗೆ ತೆಗೆದುಕೊಳ್ಳುತ್ತಾ.

ಹಿರಿಯರು ಹೀಗೆ, ಕಿರಿಯರ ಯಾವ ಮಾತಿಗೂ ಅವಕಾಶ ಕೊಡದೆ, ಎಲ್ಲ ಮಾತನ್ನು, ಮೊದಲೇ ಮಾತಾಡಿಕೊಂಡು ಬಂದಂತೆ, ಜಾಣತನದ ಮಾತಾಡಿ ಮುಗಿಸುತ್ತಿದ್ದುದನ್ನು ಕಂಡು, ಕಿರಿಯರ ಗುಂಪಿನ ಮುಖಂಡನಾದ ಬೋರಯ್ಯನಿಗೆ ರೇಗಿತು. ಸೂರನಾಯಕ ಆ ಮಾತು ಹೇಳಿ ರುಮಾಲು ತಲೆಯ ಮೇಲೆ ಇಟ್ಟುಕೊಂಡ ಬಳಿಕ, ಮತ್ತೆ ಯಾವ ಮಾತೂ ಆಡುವುದು ಸಾಧ್ಯವಾಗುವುದಿಲ್ಲವೆಂಬುದನ್ನು ಅರಿತ ಬೋರಯ್ಯ, ಹಾಗೆ ಕುರಿಯ ಹಾಗೆ ಕಟ್ಟಿಸಿಕೊಳ್ಳಲು ಇಷ್ಟವಿಲ್ಲದೆ—

"ನಾನು ಹೇಳೋದೂ ಒಂದು ಮಾತೈತೆ–ಹಿರೇರು ಕೇಳಬೇಕು"

—ಎಂದ.

ಬೋರಯ್ಯ ಆ ಮಾತು ಹೇಳಿದ ಮೇಲೆ ಅಲ್ಲಿದ್ದ ಉಳಿದ ಯುವಕರಿಗೂ, ಉಸಿರು ಬಂದ ಹಾಗಾಯಿತು.

"ನಮ್ಮನ್ನೇನೂ ಕೇಳಲಿಲ್ಲ, ಹೇಳಲಿಲ್ಲ, ಮತ್ತಿಲ್ಲಿಗೆ ಕರೆಸಿದ್ದ್ಯಾಕೆ? ಅವರಾಗಿ ಕೇಳದ ಮ್ಯಾಲೆ, ನಾವ್ಯಾಕೆ ಮ್ಯಾಲೆ ಬಿದ್ದು ಹೇಳಾಕೆ ಹೋಗಬೇಕು, ಕೇಳಿಲ್ವಾ–ಮ್ಯಾಲೆ ಬಿದ್ದು ಬಂದ ಸೂಳೆ ಮೂರು ಕಾಸ್ಗೂ ಬ್ಯಾಡಾಂತ. ಅವರಿಗೇಗೆ ಬೇಕೋ ಹಂಗೆ ಮಾಡ್ಕೊಳ್ಳಿ, ನಾವು ನಮಗೆ ಹೆಂಗೆ ಬೇಕೋ ಹಂಗೆ ಮಾಡೋಣ."

—ಎಂದು ತಿಪ್ಪನಾಯಕ, ಹೊರಡಲು ಸಿದ್ಧವಾಗಿ ಎದ್ದು ನಿಂತ.

"ಅಕಾ—ಈ ಹುಡುಗು ಪಟ್ಟೆ ಮಾತು ಕೇಳ್ದಾ ಬೊಮ್ಮಯ್ಯ— ಅದ್ಕೆ ನಾನು ನನಗೆ ಈ ಯಜಮಾನ್ಕೆ ಪಟ್ಟ ಬ್ಯಾಡಾಂದದ್ದು."

—ಅಸಮಾಧಾನ ದುಮುದುಮಿಸುವ ಧ್ವನಿಯಲ್ಲಿ ಹೇಳಿದ ಸೂರನಾಯಕ –

"ಈ ಹೈಕ್ಳು ಹಿಂಗೆ ಮಾತಾಡ್ತವೇಂತ ನಂಗೆ ಗೊತ್ತಿತ್ತು. ಅದ್ಕೆ ನಾನು ಯಾವ ಮಾತ್ಗೂ ಬರಾಕಿಲ್ಲಾಂದೆ. ಇವಕ್ಕೇನು ತಲೆ ಗೊತ್ತಿಲ್ಲ, ಬುಡ ಗೊತ್ತಿಲ್ಲ, ಮಾತಾಡ್ತವೆ. ಹಿಂಗೆ ಒಬ್ಬೊಬ್ಬರು ಒಂದೊಂದು ಮಾತಾಡಿದ್ರೆ ಕೇರೀಲಿ ಒಗ್ಗಟ್ಟು ಉಳದಾತಾ—ವೀರಣ್ಣ—ನೀನೇಳು— ನಿನ್ನಂಥೋರೆ ಈ ಹುಡುಗರ್ನ ಮುದ್ದುಮಾಡಿ ಮಾಡಿ ಕೆಡಸಿದೋರು. ಈಗೇನೇಳ್ತಿ."

"ಈ ವಿಷಯದಲ್ಲಿ ನನ್ನ ಏನೂ ಕೇಳ್ಬೇಡ ಸೂರಜ್ಜ. ನನ್ಗೆ ಯಾರ್ಗೂ ಏನೂ ಹೇಳಾಕೆ ಬಾಯಿಲ್ಲ; ಒಂದಂ ಮಾತು ಹೇಳ್ಬೇಕೊಂದ್ರೆ ಮುಖ್ಯ ನಾವಿಬ್ರೂ ಬದುಕಿರೋದೇ ತಪ್ಪು."

—ಎಂದ ವೀರಣ್ಣ ಭಾರವಾದ ಧ್ವನಿಯಲ್ಲಿ.

"ಯಾರು ಹೇಳೋದು ಏನ್ಮತೆ ಸೂರಜ್ಜ—ನಾವ್ಯಾರೂ ನಿಮಗೆ ಅವಮರ್ಯಾದೆ ಮಾಡಾಕೆ ಹೊಂಟಿಲ್ಲ; ಯಾರ್ಗೂ ಅವಮರ್ಯಾದೆ ಮಾಡಾಕೆ ಹೊಂಟಿಲ್ಲ. ನಮಗಿರೋ ಮರ್ಯಾದೆ ಉಳಿಸ್ಕೊಳ್ಳಾಕೆ ಹೊಂಟಿದೀವಿ—ಅಷ್ಟೆ. ನಮ್ಜಾತಿಯೋರ್ನ ಮುಟ್ಟಿದೋರು ಅವ್ರೋರ ಪೂಜೆ ಮಾಡಬಾರದೂಂದ್ರೆ, ಹೋಗ್ಲಿ, ಅವರ ದೇವರನ್ನ ಅವರು ಇಟ್ಕೊಕೊಳ್ಳಲಿ. ಅಂಥ ದೇವರು ನಮಗ್ಯಾಕೆ ಬೇಕು? ಯಾವ ದೇವರಿಗೆ ನಾವು ಮುಟ್ಟಿದ್ರೆ ಮೈಲಿಗೆ ಆಗಾಕಿಲ್ವೋ, ನಮ್ಮನ್ನ ಮುಟ್ಟಿದೋರು ಪೂಜೆ ಮಾಡಿದ್ರೆ ಮೈಲಿಗೆ ಆಗಾಕಿಲ್ವೋ, ಅಂತ ದೇವರನ್ನ ನಾವು ಪೂಜೆ ಮಾಡಿದ್ರೆ ಸರಿ—ನಾವು ಹೇಳಾದು ಅಷ್ಟೆ."

—ಎಂದ ಚಿನ್ನೋಬಯ್ಯ.

"ಅಷ್ಟೇ ಅಲ್ಲ—ಸೂರಜ್ಜ, ನಮ್ದೇನೂ ಅಂಥ ಕೀಳು ಕುಲ ಅಲ್ಲ; ಈ ಹಳ್ಳಿ, ಈ ಸೀಮೇನ ಆಳಿದ ಪಾಳೇಗಾರ್ರು ನಮ್ಮ ಜನ. ಅವರಿಗೆ ಅವರ ಜಾತಿ ದೊಡ್ಡದಾದ್ರೆ, ನಮಗೆ ನಮ್ಮ ಜಾತಿ ದೊಡ್ಡದು..."

—ಭೀಮನಾಯಕ ಸಿಟ್ಟಾಗುತ್ತಾ ಹೇಳಿದ.

"ಈಗ ಯಾರೂ ಈ ಮಾತು ಅಲ್ಲಾಂತ ಹೇಳಲಿಲ್ವಲ್ಲ."

—ತಳವಾರ ಬೊಮ್ಮಯ್ಯ ಹೇಳಿದ.

"ನಮ್ಮ ಜಾತಿ ಸಂಗ ಮಾಡ್ದೋರು, ಅಮ್ನೋರ ಪೂಜೆ ಮಾಡಬಾರದು ಅಂತ ಆದಮ್ಯಾಲೆ—ಮತ್ತಿನ್ನೇನು ಹೇಳ್ದಂಗಾಯ್ತು. ನಾನೂ ಈ ಅಮ್ನೋರ ಗುಡಿ ವಿಷ್ಯಾ ಎಲ್ಲಾ ಕೇಳಿದೀನಿ—ತಳವಾರಪ್ಪ—ಅದು ಕಟ್ಟಿಸ್ದೋರು, ನಮ್ಮ ನಿಮ್ಮ ಹಿರೇರು—ದೇವೀಕೆರೆ ಪಾಳೇಗಾರ್ರು. ಅದಕ್ಕೆ ಭೂಮಿ ಕಾಣೆ ಕೊಟ್ಟೋರೂ ಅವರೇ. ಹಂಗಿರೋವಾಗ, ಆ ಅಮ್ನೋರನ್ನ ಯಾರು ಪೂಜೆ ಮಾಡಬೇಕು, ಬಿಡಬೇಕು ಅಂತ ಹೇಳೋಕೆ— ಈ ಜನ ಯಾರು? ನಾವೇನು ನಾಯಕರು ಸತ್ತೋಗಿದೀವಾ ಹಳ್ಳೀಲಿ?"

—ಸಿಟ್ಟಿನಲ್ಲಿ ಗಳಿಗಳಿಗೆಗೂ ಕಾವೇರುತ್ತಾ ಕೇಳಿದ ಭೀಮನಾಯಕ.

"ಅದೆಲ್ಲಾ ಇರ್‍ಲೋದು—ನಮ್ನೋರು ಗುಡಿ ಕಟ್ಸಿದ್ದು, ಬಿಟ್ಟಿದ್ದು ಎಲ್ಲಾ—ಆಮ್ಯಾಕಿನ ಮಾತು. ಹುತ್ತವಾಗಿದ್ದ ಅಮ್ನೋರು— ದಾಸಣ್ಣನೋರ ಹಿರೇರಿಗಲ್ವಾ ದರ್ಶನ ಕೊಟ್ಟಿದ್ದು."

"ಸೈ—ಅದಕ್ಕೇ ಅವರೇ ಅಮ್ನೋರ ಪೂಜೆ ಮಾಡಬೇಕೂಂತ ನಾವು ಅಂದದ್ದು. ಅಮ್ನೋರು ದರ್ಶನ ಕೊಟ್ಟೋರು ಎಲ್ಲೋ ಹೋದ್ರು— ಅಮ್ನೋರಿಗೆ ಗುಡಿ ಕಟ್ಸಿಸ್ದೋರು ಎಲ್ಲೋ ಹೋದ್ರು—ಎಲ್ಲಾ ಬಿಟ್ಟು ಈ ನಡುವಿನೋರಿಗ್ಯಾಕೆ ಹಿರೇತನ?—ಅವರಿಗಿಷ್ಟ ಇದ್ರೆ ಗುಡಿಗೆ ಬರ್‍ಲಿ— ಇಲ್ದೇ ಹೋದ್ರೆ ಹೋಗ್ಲಿ. ಮಾಮೂಲು ಹೆಂಗೈತೋ ಹಂಗೇ ನಡೆದುಕೊಂಡು ಹೋಗ್ಲಿ—ಅದು ಬಿಟ್ಟು, ನಡುವಿನವರು ಹೇಳಿದ್ರೂಂತ ಮಾಮೂಲು ತಪ್ಪೋದಾದರೆ—ನಮಗೂ ಮಾಮೂಲು ಬ್ಯಾಡ. ಮಾಮೂಲಿನೋರೆ ಪೂಜೆ ಮಾಡ್ದೇ ಇರೋ ದೇವರು —ನಮಗ್ಯಾಕೆ ಬೇಕು? ಸೂರಪ್ಪ ಇದೇ ನಿಘಂಟು—"

—ಭೀಮನಾಯಕ ನೆಲ ತಟ್ಟಿ ಹೇಳಿದ—

"ಇಲ್ಲ ಹಿಂಗಾಗ್ಲಿ, ಇಲ್ಲ ಹಂಗಾಗ್ಲಿ."

ಆ ಗುಂಪಿನಲ್ಲಿದ್ದ ಹಿರಿಯರಾರಿಗೂ, ಭೀಮಪ್ಪನಾಯಕನ ವಾದದಲ್ಲಿದ್ದ ತರ್ಕದಲ್ಲಿ ತಪ್ಪು ಕಂಡುಹಿಡಿಯುವುದಾಗಲಿಲ್ಲ. ಆದರೆ ಹಾಗೆಂದು ಅವನ ತರ್ಕಕ್ಕೆ ಸೋಲುವುದಕ್ಕೂ ಮನಸ್ಸಿರಲಿಲ್ಲ.

"ಅದೆಲ್ಲಾ ಸರೀನೇ ಭೀಮ—ನಮಗೂ ಮಾಮೂಲು ತಪ್ಪೋದು

ಇಷ್ಟ ಇಲ್ಲ. ಯಾರೂ ದಾಸಣ್ಣನೋರು ಅಮ್ಮನೋರ ಪೂಜೆ ಬಿಡಬೇಕೂಂತ ಹೇಳಲಿಲ್ಲ. ಅವರೇ ಬ್ಯಾಡಾಂದ್ರೂ...''

—ತಳವಾರ ಬೊಮ್ಮಯ್ಯ ಹೇಳಿದ.

''ಯಾಕೆ ಬೇಡಾಂದ್ರು— ಈ ಅಚ್ಚಣ್ಣ ಭಟ್ರು ಹಳ್ಳೀಲಿ ಇಲ್ಲದ್ದೆಲ್ಲಾ ಹೇಳಿಕೊಂಡು ತಿರುಗಿದ್ದಕ್ಕೇ ತಾನೇ?''

ಬೋರಯ್ಯನ ಆ ಪ್ರಶ್ನೆಗೆ ಅಲ್ಲವೆಂದು ಹೇಳಲು ಯಾರಿಗೂ ಸಾಧ್ಯವಾಗಲಿಲ್ಲ. ಎಲ್ಲರೂ ಸುಮ್ಮನಿದ್ದರು.

''ನೀವು ಹಿರೇರು— ಅಚ್ಚಣ್ಣಭಟ್ಟರು ಹಂಗೆಲ್ಲಾ ಮಾತಾಡಿದ್ದಕ್ಕೆ ಹಿಡಿದು ತಪ್ಪು ದಂಡ ಕಟ್ಟಿಸೋದು ಬಿಟ್ಟು, ಇದಕ್ಯಾಕೆ ಒಪ್ಪಿಕೊಂಡು ಬಂದ್ರಿ... ದಾಸಣ್ಣೋರೇ ಬೇಡಾಂದ್ರೂ—ಇದು ಬೇಡಾನ್ನೋಕೆ ನಿಮ್ಮನೆ ವಿಷ್ಯ ಅಲ್ಲ ಅಂತ ಬಾಯ್ಮುಚ್ಚಿಸಬೇಕಾಗಿತ್ತು.''

—ಬೋರಯ್ಯ ಮತ್ತಷ್ಟು ಬಿಗಿದುಕೊಂಡು ಕೇಳಿದ.

''ಹೌದು—ಈಗಾಗೋಯ್ತಲ್ಲ. ನಾಳೆ ಅಲ್ಲ, ನಾಳಿದ್ದು ಜಾತ್ರೆ. ಅಂಥ ಹೊತ್ನಾಗೆ ಈ ಮಾತೆಲ್ಲಾ ತೆಗೆದು ಜಾತ್ರೆ ನಿಲ್ಸೋದೇ?''

—ಪೂಜಾರಿ ಓಬಯ್ಯ ಡೋಲಾಯಮಾನ ಚಿತ್ತನಾಗಿ ಕೇಳಿದ.

''ನಡದ್ರೆ ಹೆಂಗೆ ನಡೀಬೇಕೋ ಹಂಗೆ ನಡೀಲಿ—ಇಲ್ದೇ ಹೋದ್ರೆ ನಿಂತೋಗ್ಲಿ. ಹ್ಯಂಗಲ್ದೇ, ಯಾರಾರೂ ನಮಗೆ ಬೇಕಾದಂಗೆ ನಡಸ್ತೀನಿ ಅಂದ್ರೆ, ಅವರೇ ಜಾತ್ರೆ ಮಾಡಿಕೊಳ್ಳಲಿ, ನಮಗೆ ಅವರೂ ಬೇಡ, ಅವರ ಜಾತ್ರೇನೂ ಬೇಡ.''

—ಅದು ತಮ್ಮ ಅಂತಿಮ ನಿರ್ಧಾರವೆಂಬಂತೆ, ಯುವಕರೆಲ್ಲರ ಪರವಾಗಿ ಬೋರಯ್ಯ ಹೇಳಿದ.

''ಏನು ಓಬಯ್ಯ—ನೀನೇನೇಳ್ತಿ—ಈ ಹುಡುಗರ ಮಾತಿಗೆ......''

—ಸೂರನಾಯಕ, ಪೂಜಾರಿ ಓಬಯ್ಯನನ್ನು ಕೇಳಿದ.

''ಹುಡುಗರ ಮಾತ್ನಾಗೆ ಅರ್ಥಾ ಇಲ್ಲಾಂತ ಅನ್ನಾಕೆ ಆಗಾಕಿಲ್ಲ ಸೂರಜ್ಜ... ಆದ್ರೆ...... ನಾವೂ ಹುಡುಗ್ರುಂಗೆ ಮಾತಾಡೋಕೆ ಆಗ್ತದಾ? ದಾಸಣ್ಣನೋರು ಯಾರ ಮಾತೂ ಕೇಳೋ ಜನ ಅಲ್ಲ; ನಾವೂ ಹಿಂದ್ನಿಂದ ಬಂದ ಜಾತ್ರೆ ಬಿಡಾಕೆ ಆಗಾಕಿಲ್ಲ......''

—ಅಡ್ಡಗೋಡೆಯ ಮೇಲೆ ದೀಪ ಇಡುತ್ತಾ ಹೇಳಿದ ಓಬಯ್ಯ.

"ಅದೆಲ್ಲ ಶೆಟ್ಟಿ ಪಂಚಾಯ್ತಿ ಬ್ಯಾಡ. ಓಬಜ್ಜ—ನಾನೇಳ್ತೀನಿ ಕೇಳ್ತೀಯಾ?"

—ತಿಪ್ಪನಾಯಕ ಹೇಳಿದ.

"ಏನು?"

"ನಾವು, ನಾಯಕ ಜನ, ದಾಸಣ್ಣನೋರು ಅವ್ನೋರ ಪೂಜೆ ಮಾಡಿದ್ರೆ ಜಾತ್ರೆಗೆ ಹೋಗ್ತೀವಿ–ಇಲ್ದೆ ಹೋದ್ರೆ ಇಲ್ಲಾಂತಹೇಳ್ಬುಡಿ. ಆಗ ದಾಸಣ್ಣೋ ರಾದ್ರೂ ಒಪ್ಕೊಳ್ಳೇ ಬೇಕಾಗ್ತದೆ. ಆಗ ಮಾಮೂಲೂ ಉಳೀತದೆ, ನಮ್ಮ ಮರ್ಯಾದೇನೂ ಉಳೀತದೆ."

—ಎಂದ ತಿಪ್ಪನಾಯಕ.

ಅವನ ಸಲಹೆ ಯಾರಿಗೂ ತಪ್ಪೆಂದು ತೋರಲಿಲ್ಲ.

"ಅದಾಗ್ಬೋದೂಂತ ಕಾಣ್ತದೆ."

—ಎಂದ ಸೂರನಾಯಕ.

ಉಳಿದವರೂ ಆತನ ಮಾತಿಗೇ ತಲೆಹಾಕಿದರು.

"ಹಂಗಿದ್ರೆ, ತಳವಾರಜ್ಜ–ಬೆಳಿಗ್ಗೆ ನೀನೀ ಮಾತು ಶಾನುಭೋಗರಿಗೆ ಹೇಳ್ಬಿಡು. ಮುಂದೇನಾಗ್ತದೋ, ಅಮ್ಮನೋರ ಮನಸ್ನಾಗೆ ಇದ್ದಂಗಾಗ್ಲಿ."

—ಎಂದ ಸೂರನಾಯಕ.

ಆ ನಿರ್ಧಾರದೊಂದಿಗೆ ಆ ರಾತ್ರಿಯ ಸಭೆ ಬರಖಾಸ್ತಾಯಿತು.

## ೧೧

ಸಭೆಯ ಅಪ್ಪಣೆಯಂತೆ, ಮರುದಿನ ಬೆಳಕು ಹರಿಯುತ್ತಿದ್ದಂತೆಯೇ ತಳವಾರ ಬೊಮ್ಮಯ್ಯ, ಸಭೆಯ ತೀರ್ಮಾನವನ್ನು ಶಾನುಭೋಗ ಶ್ರೀನಿವಾಸ ರಾಯರಿಗೆ ತಿಳಿಸಿದ.

ಆ ಸುದ್ದಿ ಅವರಿಗೆ ತಿಳಿದ ಹತ್ತು ಗಳಿಗೆಯೊಳಗಾಗಿ ಹಳ್ಳಿಯಲ್ಲೆಲ್ಲಾ ಹರಡಿಹೋಯಿತು. ಎಲ್ಲರ ಬಾಯಲ್ಲೂ ಅದೇ ಮಾತು—

'ದಾಸಣ್ಣನೋರು ಅಮ್ಮನವರ ಪೂಜೆ ಮಾಡದಿದ್ದರೆ, ಹಳ್ಳಿಯ ನಾಯಕರ ಕೇರಿಯವರು ಯಾರೂ ಜಾತ್ರೆಗೆ ಬರುವುದಿಲ್ಲ.'

ಆ ಸುದ್ದಿ ಕೇಳಿದ ಊರಿಗೆ ಊರು ಗಡಗಡ ನಡುಗಿತು. ಎಲ್ಲರ ಮುಖದ ಮೇಲೂ ಚಿಂತೆ ಕವಿಯಿತು.

ದೇವೀಕೇರೆಯಲ್ಲಿ ಬಹು ಸಂಖ್ಯಾಕವಾಗಿದ್ದುದು, ನಾಯಕರ ಕೋಮು. ಎಂತಲೇ ಆ ವರ್ಗ ಅಸಹಕಾರ ಮಾಡಿದರೆ, ಜಾತ್ರೆ ನಡೆಯದೆ ನಿಂತು ಹೋಗುವುದೇ ನಿಜ ಎನಿಸಿತು, ಹಳ್ಳಿಯ ಜನಕ್ಕೆ.

ಏನಾದರೂ ಹಾಗಾಗಿ ಜಾತ್ರೆ ನಿಂತುಹೋದರೆ—?

ಆ ಪರಿಸ್ಥಿತಿಯನ್ನು ಊಹಿಸುವುದೂ ಸಾಧ್ಯವಿರಲಿಲ್ಲ— ಹಳ್ಳಿಯ ಜನಕ್ಕೆ.

ವರ್ಷಂಪ್ರತಿ ನಡೆಯುವ ಜಾತ್ರೆ, ಒಂದು ರೀತಿಯಲ್ಲಿ ಹಳ್ಳಿಯ ಜನದ ಜೀವದ ಉಸಿರಾಗಿತ್ತು. ಜಾತ್ರೆ ಸಂಸೂತ್ರವಾಗಿ ನಡೆದರೇ ಆ ವರ್ಷದ ತಮ್ಮ ಜೀವನ ಉಳಿಯುವುದು ಎಂಬಷ್ಟು ನಂಬಿಕೆ ಬೆಳೆದಿತ್ತು.

ದೇವೀಕೆರೆಗೇ ಏನು, ಆ ಸುತ್ತಮುತ್ತಲ ಪ್ರಾಂತಕ್ಕೆಲ್ಲಾ ಆ ಜಾತ್ರೆಯ ವಿಷಯದಲ್ಲಿ ಅದೇ ಭಾವನೆ ಇತ್ತು.

ಎಂತಲೇ ಯಾವ ವಿಷಯದಲ್ಲಿ ಏನಾದರೂ, ಜಾತ್ರೆಯ ವಿಷಯದಲ್ಲಿ ಮಾತ್ರ ಚಾ—ಚೂ ಹೆಚ್ಚು ಕಡಿಮೆಯಾಗದಂತೆ ಎಚ್ಚರ ವಹಿಸುತ್ತಿದ್ದರು. ಜಾತ್ರೆಯ ಮೊದಲ ದಿನ ನಿರ್ವಿಘ್ನವಾಗಿ ಕಳೆದು ಹೋಗುವವರೆಗೂ, ಒಬ್ಬರಿಗೂ ಜೀವದಲ್ಲಿ ಜೀವವಿರುತ್ತಿರಲಿಲ್ಲ.

ಹಾಗಿದ್ದಾಗ ಈ ವರ್ಷ ಜಾತ್ರೆಗೆ ಇನ್ನೂ ಒಂದು ತಿಂಗಳು ಇದೆ

ಎನ್ನುವಾಗಲೇ , ವಿಘ್ನ ಕಾಣಿಸಿಕೊಂಡಿತ್ತು—ನರಸಪ್ಪನವರ ಸಾವಿನ ರೂಪದಲ್ಲಿ.

ಸುಮಾರು ಘಾಂವತ್ತು—ಮೂವತ್ತೈದು ವರ್ಷಗಳ ಕಾಲ, ಅವಿಚ್ಛಿನ್ನ ವಾಗಿ, ಎಂದೂ, ಯಾವ ತೊಂದರೆಯೂ ಇಲ್ಲದೆ, ಅಮ್ಮನವರ ಪೂಜೆಯನ್ನು ಮಾಡಿದ ನರಸಪ್ಪನವರು, 'ಜಾತ್ರೆ, ಇನ್ನೇನು ಬಂತು' ಎನ್ನುವಾಗ, ಅಮ್ಮನವರ ದೇವಾಲಯದ ಇದುರಿಗೇ ತೀರಿಕೊಂಡದ್ದು, ಹಳ್ಳಿಯ ಜನಕ್ಕೆ ದುಃಖದ ಜೊತೆಗೆ ಭೀತಿಗೂ ಕಾರಣವಾಗಿತ್ತು.

ಅದಾದ ಬಳಿಕ ವೆಂಕಟದಾಸಪ್ಪನವರು 'ಮೊದಲ ದಿನ'ದ ಪೂಜೆ ಮಾಡುವುದಿಲ್ಲ ಎಂದು ಹೇಳಿ, ಎಷ್ಟೋ ತಲೆಮಾರುಗಳಿಂದ ನಡೆದು ಬಂದ ಸಂಪ್ರದಾಯವನ್ನು ಮುರಿದಾಗ ಜನ, ಮತ್ತಷ್ಟು ಭಯ ದಿಗ್ಭ್ರಾಂತರಾಗಿ—

'ಯಾಕೋ ಈ ವರ್ಷ, ಜಾತ್ರೆಗೆ ಲಕ್ಷಣವೇ ಚೆನ್ನಾಗಿಲ್ಲ.'

—ಎಂದುಕೊಂಡಿದ್ದರು.

'ಏನೇ ಆದರೂ, ಯಾರೇ ಪೂಜೆ ಮಾಡಿದರೂ, ಸಧ್ಯ ಜಾತ್ರೆ ನಡೆಯು ತ್ತದಲ್ಲ' ಎಂಬ ಸಮಾಧಾನದಲ್ಲಿ ಆ ತಹತಹವನ್ನು ಮರೆತಿದ್ದರು.

ಈಗ—

ನಾಯಕರ ಗುಂಪಿನ ನಿರ್ಧಾರದಿಂದ , ಆ ಜಾತ್ರೆಯೇ ನಿಂತು ಹೋಗು ವಂಥ ಪರಿಸ್ಥಿತಿ ಬಂದು ಎಲ್ಲರಿಗೂ ಉಸಿರು ಕಟ್ಟಿದಂತಾಗಿತ್ತು.

''ಹೀಗಾದರೆ ಮುಂದೇನು ಗತಿ?''

—ಎಂದು, ಅನಿವಾರ್ಯವಾದ ಮಹಾವಿಪತ್ತು ಸಮೀಪಿಸಿದವರಂತೆ ಮೂಗುಬ್ಬಸಪಡಲಾರಂಭಿಸಿತ್ತು ದೇವೀಕೆರೆ.

ಈ ಪರಿಸ್ಥಿತಿಯಲ್ಲಿ ಹಳ್ಳಿ ಗಳಿಗೆಗೊಂದು ಬಣ್ಣ ಬದಲಾಯಿಸ ಲಾರಂಭಿಸಿತು.

ಏನು ತೀರ್ಮಾನವಾದರೂ ಆ ದಿನವೇ ಆಗಿ ಮುಗಿಯಬೇಕು. ಮಾರುದಿನವೇ ಜಾತ್ರೆ. ಹತ್ತಿಪ್ಪತ್ತು ಹಳ್ಳಿಯ ಜನ ಬಂದು ನೆರೆದಿದೆ. ಆ ಜನವೂ ಹಳ್ಳಿಯ ಜನತೆಯೊಂದಿಗೆ ಕಾತರದಲ್ಲಿ ಬೆರೆದಿದೆ. ಎಲ್ಲರೂ ಏನಾಗುವುದೋ ಎಂದು ಉಸಿರು ಬಿಗಿಹಿಡಿದು ಕಾಯುತ್ತಿದ್ದಾರೆ. ಆ ಕಾತರದಲ್ಲಿ ಹಳ್ಳಿಗೆ ಹಳ್ಳಿಯೇ ಹೆಪ್ಪುಗಟ್ಟಿದಷ್ಟು ಜಡವಾಗಿತ್ತು.

ಈ ಪರಿಸ್ಥಿತಿಯಲ್ಲಿ ಗ್ರಾಮದ ಮುಖಂಡರ ಗುಂಪೊಂದು ವೆಂಕಟದಾಸಪ್ಪನವರನ್ನು ಭೇಟಿ ಮಾಡಿತು.

ನಿಯೋಗ ತಮ್ಮ ಬಳಿಗೆ ಬಂದಾಗ ವೆಂಕಟದಾಸಪ್ಪನವರು, ಬೆಳಗಿನ ದೇವತಾರ್ಚನೆಯನ್ನು ನೆರವೇರಿಸುತ್ತಿದ್ದರು. ಎಂತಲೇ ನಿಯೋಗ, ಅವರ ಪೂಜೆ ಮುಗಿಯುವವರೆಗೂ ಕಾಯಬೇಕಾಯಿತು.

ಪೂಜೆಯನ್ನು ಮುಗಿಸಿಕೊಂಡು ಬಂದ ವೆಂಕಟದಾಸಪ್ಪನವರು, ಆ ನಿಯೋಗದ ಜೊತೆಗೆ ಬಂದ ಶಾನುಭೋಗ ಶ್ರೀನಿವಾಸರಾಯರು, ಪಟೇಲ ಗೌರಣ್ಣ, ನಾಯಕರ ಸೂರನಾಯಕ, ಅಚ್ಚಣ್ಣಭಟ್ಟರು, ಪುಟ್ಟೇಗೌಡ ಮೊದಲಾದವರನ್ನು ಕಂಡು ಚಕಿತರಾದರು.

"ಇದೇನೆಲ್ಲಾ—ಇಷ್ಟು ಹೊತ್ತಿಗೆ ಮುಂಚೆ ಬಂದ್ರುಲ್ಲಾ? ನನ್ನಿಂದ ಏನಾಗಬೇಕಿತ್ತು? ಹೇಳಿ ಕಳಿಸಿದ್ದರೆ ನಾನೇ ಬರುತ್ತಿದ್ದೆನಲ್ಲ. ನನ್ನಿಂದ ಏನಾಗಬೇಕಿತ್ತು.?"

—ಎಂದು ಕೇಳಿದರು.

ಅವರ ಪ್ರಶ್ನೆಗೆ ಉಳಿದವರು ಯಾರೂ ಉತ್ತರ ಕೊಡುವ ಮುಂಚೆಯೇ ಅಚ್ಚಣ್ಣಭಟ್ಟರೇ—

"ಅಂತೂ—ನೀನು ನನಗೆ ಬಹಳ ದೊಡ್ಡ ಉಪಕಾರ ಮಾಡಿದೆ ದಾಸಣ್ಣ—ನಿನಗೆ ನನ್ನ ಮೇಲೆ ಇಂಥಾ ಹೊಟ್ಟೆ ಉರಿ ಇತ್ತು, ಅದನ್ನು ಹೀಗೆ ತೀರಿಸ್ಕೋತೀಯಾಂತ ನಾನು ತಿಳಿದುಕೊಂಡಿರಲಿಲ್ಲ."

—ಎಂದರು ಖಾರವಾಗಿ.

ಅನಿರೀಕ್ಷಿತವಾದ ಆ ಮಾತು ಕೇಳಿ ವೆಂಕಟದಾಸಪ್ಪನವರು ಪೆಟ್ಟು ಬಿದ್ದರು.

"ಯಾಕೆ—ಏನಾಯ್ತು ಅಚ್ಚಣ್ಣಭಟ್ಟರೇ—"

"ಆಗೋದೇನು—ಊರು ಮುಂದೆ ಮಂಗಳಾರತಿ ಆಯ್ತು. ಮೊದಲೇ ನಾನು ಬಡಕೊಂಡೆ—ನನಗೀ ಪೂಜೇನೂ ಬೇಡ, ಪುನಸ್ಕಾರಾನೂ ಬ್ಯಾಡಾಂತ. ನೀನಾಗಿ ನೀನು ಅದನ್ನು ನನ್ನ ಕೊರಳಿಗೆ ಹಾಕಿ, ಊರೋರ ನಿಷ್ಠೂರ ಕಟ್ಟಿಕೊಳ್ಳೋಹಾಗೆ ಮಾಡಿದೆ. ನನ್ನ ಗ್ರಹಚಾರಕ್ಕೆ ನೀನೇನು ಮಾಡ್ತಿ? ಇಕೋ—ನಿನ್ನ ಅಮ್ಮನೋರ ಪೂಜೆ, ನಿನಗೇ ಒಪ್ಪಿಸಿ ಹೋಗೋಕೆ ಬಂದಿದೀನಿ.

ಒಪ್ಪಿಸಿಕೊಂಡು ನನ್ನ ಉದ್ಧಾರ ಮಾಡು. ಆ ಪೂಜೇನೂ ಬೇಡ, ಈ ತಲೆ ಕುಕ್ಕಲೂ ಬೇಡ.''

—ಸಿಟ್ಟು, ಅಸಮಾಧಾನ, ವ್ಯಂಗ್ಯ, ನಿಂದೆಗಳು ತುಂಬಿ ತುಳುಕುವ ಧ್ವನಿಯಲ್ಲಿ ಹೇಳಿದರು ಅಚ್ಚಣ್ಣಭಟ್ಟರು.

ಅವರು ಆಡಿದ ಒಂದೊಂದು ಮಾತೂ ವೆಂಕಟದಾಸಪ್ಪನವರ ಪಾಲಿಗೆ ಕಾದ ಸೀಸದ ರಸದಂತಿದ್ದಿತು. ಆ ಮಾತು ಕೇಳಿ ಮೂಡಿದ ವ್ಯಥೆಯಲ್ಲೇ—

''ಅಚ್ಚಣ್ಣಭಟ್ಟರೇ, ನಿಮಗಿವತ್ತು ಯಾಕೋ ನನ್ನ ಮೇಲೆ ಭಾಳ ಸಿಟ್ಟು ಬಂದ ಹಾಗಾಗಿದೆ. ಅದಕ್ಕೆ ಏನು ಕಾರಣವೋ ಏನೋ– ಆದರೆ ಇಷ್ಟು ಮಾತ್ರ ನಂಬಿ. ನನ್ನ ವಿಷಯದಲ್ಲಿ ನೀವು ಏನೇ ಕೇಳಿರಬಹುದು. ಆದರೆ ನಾನು ಮಾತ್ರ–ನಿರಪರಾಧಿ. ವಿತ್ತಾಪಹಾರ ಮಾಡುವಂಥ ಚಂಡಾಲ ನಾನಲ್ಲ. ಆದ್ದರಿಂದ ನೀವು ವೃಥಾ ಆಕ್ರೋಶ ಪ್ರದರ್ಶನ ಮಾಡದೆ ಏನಾಯಿತೆಂದು ಹೇಳಿ.''

—ಎಂದರು.

''ಅದು ಹೇಳಲಿಕ್ಕೇ ನಾವು ಬಂದಿರೋದು ದಾಸಣ್ಣ—''

—ಶಾನುಭೋಗ ಶ್ರೀನಿವಾಸರಾಯ ಹೇಳಿದ—

''ನಿನ್ನೆ ರಾತ್ರಿ, ಈ ಹಳ್ಳಿಯ ನಾಯಕರ ಕೋಮಿನವರೆಲ್ಲಾ ಸೇರಿ ಕುಲದ ತೀರ್ಮಾನ ಮಾಡಿದ್ದಾರೆ. ನೀನು ಅಮ್ಮನವರ ಪೂಜೆ ಮಾಡದಿದ್ದರೆ, ಅವರು ಯಾರೂ ಜಾತ್ರೆಯಲ್ಲಿ ಭಾಗವಹಿಸುವುದಿಲ್ಲವಂತೆ. ಏನು ಸೂರಜ್ಜ– ನಾನು ಹೇಳಿದ್ದು ಸರೀನೇ?''

''ಹೌದು ಬುದ್ಧಿ, ಅದೇ ನಮ್ಮ ಕುಲದ ತೀರ್ಮಾನ.''

—ಸೂರನಾಯಕ ಶ್ರೀನಿವಾಸರಾಯರೊಂದಿಗೆ ಧ್ವನಿಕೂಡಿಸಿದ.

ಆ ಮಾತಿಗೆ ವೆಂಕಟದಾಸಪ್ಪನವರು.—

''ಹೂ''

—ಎಂದು ಅಷ್ಟೇ ಹೇಳಿ ಸುಮ್ಮನೆ ತಲೆತಗ್ಗಿಸಿ ಕುಳಿತರು.

ಅಚ್ಚಣ್ಣಭಟ್ಟರು, ಅವರನ್ನು ನುಂಗುವಂತೆ ನೋಡುತ್ತಿದ್ದರು.

'ಹೂ' ಎಂದು ಹೇಳಿದ ವೆಂಕಟದಾಸಪ್ಪನವರು ತಮ್ಮ ಮಾತನ್ನು ಮುಂದುವರಿಸುವರೇನೋ ಎಂದು ಕಾಯುತ್ತಿದ್ದ ಉಳಿದವರು, ಅವರು

ಮಾತನ್ನು ಮುಂದುವರಿಸದಿದ್ದುದನ್ನು ಕಂಡು ತಾವೇ ಮಾತನ್ನು ಮುಂದುವರಿಸಿದರು—

"ಈಗ ನಾವು ಬಂದದ್ದು ಯಾಕೆ ಅಂತ ಗೊತ್ತಾಯ್ತಲ್ಲ ದಾಸಣ್ಣ—ಈಗ ಇದಕ್ಕೆ ಏನು ಹೇಳ್ತಿ ಹೇಳು?''

—ಶ್ರೀನಿವಾಸರಾಯ ಕೇಳಿದ.

"ಅವರು ಹೇಳೋದಿನ್ನೇನೈತೆ—ಹತ್ತು ಜನರ ಮಾತಿಗೆ ಅವರು ಒಪ್ಪಿಕೋಬೇಕು. 'ಕಟ್ಟಲೆ ಪೂಜೆ' ಅವ್ರೇ ಮಾಡಬೇಕು.''

—ಸೂರನಾಯಕ ಹೇಳಿದ.

"ಹೂ—ಈಗ ದಾಸಣ್ಣನೋರಿಗೆ ಉಳಿದೋರೋದು ಅದೊಂದೇ ದಾರಿ—,''

—ಪಟೇಲ ಗೌರಣ್ಣ ಹೇಳಿದ—

"ಆವತ್ತಿನ ಪಂಚಾಯ್ತೀಲೇ ನಾನು ಹೇಳ್ದೆ—ನೀನು ಬ್ಯಾಡಾಂದ್ರೂ ಊರು ಒಪ್ಪಾಕಿಲ್ಲ ಅಂತ. ಅವತ್ತೇ ನನ್ನ ಮಾತು ಕೇಳಿದ್ರೆ—ಈ ಗದ್ಲ ಎಲ್ಲಾ ಆಗೋದು ತಪ್ತಾ ಇತ್ತು,''

"ನಾನೂ ಅದೇ ಹೊಡಕೊಂಡೆ—ಆವರೆ ನನ್ನ ಮಾತು ಕೇಳಲಿಲ್ಲ. 'ಇವನಿಗೆ ಅಪಮಾನ ಆಗಲಿ. ಆ ಮೇಲೆ ಒಪ್ಕೋಳ್ತಾನೆ ಅಂತಲೇ' ಇಚ್ಛೆ ಇತ್ತೇನೋ. ಈಗ ಅದೂ ಆಯ್ತಲ್ಲ. ಇನ್ನೇನು ಅಭ್ಯಂತರ?''

—ಅಚ್ಚಣ್ಣ ಭಟ್ಟರು ಕಹಿಯಾಗಿ ಹೇಳಿದರು.

ಆ ಮಾತು ಕೇಳಿ ವೆಂಕಟದಾಸಪ್ಪನವರ ಹೃದಯದಲ್ಲಿ ಉಗ್ರ ವ್ಯಥೆ ರಣತಾಂಡವ ನಡೆಸಿತು. ಆ ಯಾತನೆ ತುಂಬಿ ತುಳುಕುವ ಧ್ವನಿಯಲ್ಲಿ—

"ಭಟ್ಟರೇ, ನಾನು ಪೂಜೆ ಮಾಡೋ ಅಮ್ಮನವರ ಪಾದದಾಣೆಗೂ ಹೇಳುತ್ತೇನೆ—ನಾನಂಥ ವಿಷಕ್ರಿಮಿಯಲ್ಲ. ಆ ತಾಯಿಯ ಸಾಕ್ಷಿಯಾಗಿಯೂ ಹೇಳುತ್ತೇನೆ—ನನಗೆ, ನಿಮಗಾಗಲಿ, ಯಾರಿಗಾಗಲಿ ಅಪಮಾನ ಮಾಡಿಸುವ ಉದ್ದೇಶವಿರಲಿಲ್ಲ; ಈಗಲೂ ಇಲ್ಲ. ಬೇಕಾದರೆ ಕೈಯಲ್ಲಿ ಕೆಂಡ ಹಿಡಿದು ಆ ಮಾತು ಹೇಳುವುದಕ್ಕೆ ಸಿದ್ಧವಾಗಿದ್ದೇನೆ.''

—ಎಂದರು,

"ಈಗ ಅದ್ಯಾವುದಕ್ಕೂ ಹೊತ್ತಿಲ್ಲ-ದಾಸಣ್ಣ. ಈಗ ನೀನು ನಾವು ಹೇಳಿದ್ದಕ್ಕೆ ಒಪ್ಪಿಕೋ. ಮೊದಲು ಈ ಜಾತ್ರೆಯೊಂದು ಸುಸೂತ್ರವಾಗಿ ಕಳೆದುಹೋಗಲಿ. ಆಮೇಲೆ ಮುಂದಿನದನ್ನೆಲ್ಲಾ ನಿಧಾನವಾಗಿ ಕುಳಿತು ಆಡಿಕೊಳ್ಳೋಣ. ಆಯ್ತು?"

—ಎಂದ ಶ್ರೀನಿವಾಸರಾಯ.

ಆ ಪ್ರಶ್ನೆಗೆ ವೆಂಕಟದಾಸಪ್ಪನವರು ಕೂಡಲೇ ಉತ್ತರ ಕೊಡಲಿಲ್ಲ. ಏನೋ ಯೋಚಿಸುತ್ತಾ ಸುಮ್ಮನೆ ತಲೆತಗ್ಗಿಸಿ ಕುಳಿತಿದ್ದರು. ಉಳಿದವರೂ ತಮ್ಮ ಪ್ರಶ್ನೆಗೆ ಅವರು ಏನು ಉತ್ತರ ಹೇಳುವರೋ ಎಂದು ಕಾತರರಾಗಿ ನಿರೀಕ್ಷಿಸುತ್ತಿದ್ದರು.

ಅವರೆಲ್ಲರೂ ಹಾಗೆ ಕುಳಿತಿರುವಾಗಲೇ. ನಡುಮನೆಯ ಬಾಗಿಲ ಮರೆಯಲ್ಲಿ ನಿಂತು ರಾಜೇಶ್ವರಿ—

"ದಾಸಣ್ಣಾ..."

—ಎಂದು ಕೂಗಿದಳು.

"ಏನು ರಾಜೇಶ್ವರಿ?"

"ಅಪ್ಪಾ ಯಾಕೋ ಕರೀತಾಳೆ. ಒಂದು ಗಳಿಗೆ ಬಂದು ಹೋಗ ಬೇಕಂತೆ."

"ಹೂ.. ಬಂದೆ."

—ಎಂದು ರಾಜೇಶ್ವರಿಗೆ ಉತ್ತರಕೊಟ್ಟು—

"ಈಗ ಬರ್ತೀನಿ-ಶೀನಣ್ಣ"

—ಎಂದು ಹೇಳಿ ವೆಂಕಟದಾಸಪ್ಪನವರು ಎದ್ದು ಒಳಗೆ ಹೋದರು. ಹೋಗುವಾಗಲೂ ಒಮ್ಮೆ ಅಚ್ಚಣ್ಣಭಟ್ಟರತ್ತ ನೋಡಿದರು.

ಅಚ್ಚಣ್ಣಭಟ್ಟರ ಕ್ರೋಧೋದ್ದೀಪಿತ ನೇತ್ರಗಳೂ ಅವರತ್ತಲೇ ನೋಡುತ್ತಿದ್ದವು.

. . . . . . . . . .

# ೧೬

"ಏನಮ್ಮ ಕರೆದೆಯಂತೆ?"

—ಒಳಮನೆಗೆ ಬಂದು ಲಕ್ಷ್ಮೀದೇವಮ್ಮನನ್ನು ಕೇಳಿದರು ವೆಂಕಟ ದಾಸಪ್ಪ.

"ಸ್ವಲ್ಪ ಮೆತ್ತಗೆ ಮಾತಾಡು–ಹೊರಗಿರೋರು ಕೇಳಿಸಿಕೊಂಡಾರು."

—ಎಂದು ಮಗನಿಗೆ ಎಚ್ಚರಿಕೆ ಇತ್ತು ಲಕ್ಷ್ಮೀದೇವಮ್ಮ—

"ಈಗಲಾದರೂ ಬುದ್ಧಿ ನೆಟ್ಟಗಿಟ್ಟುಕೊಂಡಿರು. ನಿನ್ನೆ ನಾನು ಹೇಳಿದ್ದು ಮರೆತು, ತಿನ್ನೋ ಅನ್ನಕ್ಕೆ ಕಲ್ಲು ಹಾಕಿಕೋಬೇಡ. ಇಷ್ಟೇ– ಇದನ್ನೆ ಹೇಳಬೇಕೂಂತ ಕರೆದದ್ದು."

—ಪಿಸುಧ್ವನಿಯಲ್ಲಿ ಹೇಳಿದಳು.

ಏಕೋ, ತಮ್ಮ ತಾಯಿಯ ಬಾಯಲ್ಲಿ ಆ ಮಾತನ್ನು ಕೇಳಿ ವೆಂಕಟ ದಾಸಪ್ಪನವರ ಸಂಯಮ ತಟಕ್ಕನೆ ಕಡಿದುಹೋಗಿ ಬಿರಂಸಾಗಿ—

"ನಾನೇನು ಗಂಡಸು ಮಗ ಅಂತ ತಿಳುಕೊಂಡಿದೀಯೋ. ಅಥವಾ ಕೈಲಾಗದ ಷಂಡ ಅಂತ ತಿಳಿದುಕೊಂಡಿದೀಯೋ?"

—ಎಂದು ಕೇಳಿದರು.

ಆ ಬಿರುಸಾದ ಮಾತನ್ನು ಕೇಳಿ ಲಕ್ಷ್ಮೀದೇವಮ್ಮನಿಗೂ ಗಾಬರಿ ಯಾಯಿತು.

"ನಾನು......ನಾನು......ಹಾಗ್ಯಾಕೆ ಅನ್ಲಿ......"

"ಹಾಗಾದ್ರೆ ಸುಮ್ನಿರು. ಹಗಲೆಲ್ಲಾ ಹೊಟ್ಟೆ ಯೋಚನೆ ಮಾಡಬೇಡ. ಏನಿಲ್ಲದಿದ್ದರೂ ನಿನ್ನನ್ನು ಸಾಕೋ ಶಕ್ತಿ ನನಗಿದೆ. ನಿನ್ನ ಯಾವತ್ತೂ ಉಪ ವಾಸ ಕೆಡವೋಲ್ಲ. ಮಗಾಂತ ಹಡೆದದ್ದಕ್ಕೆ ನನ್ನಲ್ಲಿ ಅಷ್ಟು ನಂಬಿಕೆ ಇಟ್ಟುಕೋ.

—ಎಂದು ಹೇಳಿ, ಅಲ್ಲಿ ನಿಲ್ಲದೆ, ಬಿರುಗಾಳಿಯಂತೆ, ದೇವರಮನೆಯ ಕಡೆ ನಡೆದರು.

ಏಕೋ ಇದ್ದಕ್ಕಿದ್ದ ಹಾಗೇ ವೆಂಕಟದಾಸಪ್ಪನವರ ಹೃದಯದಲ್ಲಿ ಸಹನೆಯ ಭಂಡಾರ ಬರಿದಾಗಿ ಹೋಗಿ, ಹಿಂದೆಂದೂ ಇಲ್ಲದ ರೋಷ ಅವರಲ್ಲಿ ಹೆಡೆಯೆತ್ತಿತ್ತು.

ಜಗತ್ತೆ ಏಕೋ ಅವರ ಸತ್ವಪರೀಕ್ಷೆ ಮಾಡಲು ಸಿದ್ಧವಾಗಿ ನಿಂತಂತೆ ಭಾಸವಾಗಿ, ಅವರಲ್ಲಿದ್ದ ಪೌರುಷದ ಕಣಕಣವೂ ಕೆರಳಿ ನಿಂತಿದ್ದವು.

ಆ ಸಿಟ್ಟಿನಲ್ಲೇ ಹೋಗಿ, ದೇವರ ಮಂಟಪದ ಇದುರಿಗೆ ನಿಂತರು.

ಕೇವಲ ಸ್ವಲ್ಪ ಹೊತ್ತಿನ ಕೆಳಗೆ ಬೆಳಗಿನ ಪೂಜೆ ಮುಗಿದಿದ್ದುದರಿಂದ, ಮಂಟಪ ದಾಸವಾಳ, ಕಣಗಿಲೆ, ಜಾಜಿ, ಪಾರಿಜಾತ ಮೊದಲಾದ ಪುಷ್ಪ-ಗಳಿಂದ ಅಲಂಕೃತವಾಗಿ. ಏನೋ ದಿವ್ಯತೆಯನ್ನು ಪಡೆದು ಶೋಭಿಸುತ್ತಿತ್ತು. ಮಂಟಪದಲ್ಲಿದ್ದ ಹೂವುಗಳ ಪರಿಮಳ, ಊದುಬತ್ತಿಯ ಕಮ್ಮನೆಯ ಧೂಮ. ನಾಲ್ಕಾರು ಸೊಡರುಗಳ ಬೆಳಕು—ಈ ವಾತಾವರಣದಲ್ಲಿ, ಆ ಮಂಟಪ ದಲ್ಲೇ ಸಣ್ಣ ಸ್ವರ್ಗಖಂಡವೊಂದು ಸೃಷ್ಟಿಯಾದಂತಿತ್ತು.

ಅಂಥ ಮಂಟಪದಲ್ಲಿ ಕಮ್ಮಲರುಗಳು. ಕುಂಕುಮ ರಾಶಿಯ ಮಧ್ಯೆ ಕುಳಿತ ಶ್ರೀರಾಜರಾಜೇಶ್ವರಿಯ ವಿಗ್ರಹವನ್ನು ದಿಟ್ಟಿಸಿ ನೋಡಿದರು ವೆಂಕಟದಾಸಪ್ಪನವರು.

ಆ ದೇವಿಯ ವಕ್ಷ ಸ್ಥಲದ ಹಾರದಲ್ಲಿದ್ದ ವಜ್ರದ ಹಳುಕಿನ ಮಿನಗನ್ನು ಕಂಡು ಅವರಿಗೆ ಏಕೋ, ಮಂಡಾಸನದಲ್ಲಿ ಕುಳಿತ ದೇವಿಯೂ ತಮ್ಮನ್ನು ನೋಡಿ ನಕ್ಕಂತೆ ಭಾಸವಾಯಿತು.

ಅವರಿಗೆ ಏಕೆ ಹಾಗನಿಸಿತೋ ಏನೋ, ಅಂತೂ ಹಾಗನಿಸಿ, ತಟಕ್ಕನೆ ದೇವಿಯ ಮೇಲೂ ಸಿಟ್ಟು ಕೆರಳಿತು.

'ನಗುತ್ತೀಯಾ? ನನ್ನನ್ನು ನೋಡಿ ನೀನೂ ನಗುತ್ತೀಯಾ?

'ನೀನು ಕೃಪಾನಿಧಿ, ದಯಾಮಯಿ ಎಂದು ನಾನು ತಿಳಿದಿದ್ದೆ. ಹಾಗೆ ತಿಳಿದೇ ನಿನ್ನನ್ನು ದಿನದಿನವೂ—

"ನಿತ್ಯಾನಂದಕರೀ ವರಾಭಯಕರೀ ಸೌಂದರ್ಯರತ್ನಾಕರಿ
ನಿರ್ಧೂತಾಖಿಲ ಘೋರ ಪಾವನಕರೀ ಪ್ರತ್ಯಕ್ಷ ಮಹೇಶ್ವರಿ।
ಪ್ರಾಲೇಯಾಚಲವಂಶಪಾವನಕರೀ ಕಾಶೀಪುರಾಧೀಶ್ವರಿ
ಭಿಕ್ಷಾಂದೇಹಿ ಕೃಪಾವಲಂಬನಕರೀ, ಮಾತಾನ್ನಪೂರ್ಣೇಶ್ವರಿ"

—ಎಂದು, ಹಾಡಿ ಹಾಡಿ ಬೇಡಿದೆ. ಅದಕ್ಕೆ ಇದೇನೇ ನೀನು ನನಗೆ ನೀಡಿದ ಪ್ರತಿಫಲ?

'ನಿನ್ನನ್ನು ನಾನು ರಾಜ್ಯವನ್ನು ಬೇಡಲಿಲ್ಲ, ಕೋಶವನ್ನು ಬೇಡಲಿಲ್ಲ. ಅಕ್ಷಯ ಭಂಡಾರವನ್ನು ಬೇಡಲಿಲ್ಲ. ಆದರೂ ನನ್ನ ಒಂದು ಸಣ್ಣ ಸಂಕಲ್ಪವೂ ಸಫಲವಾಗಬಾರದೆಂಬಷ್ಟು ಛಲವೇ, ನಿನಗೆ?

'ಮಿತ್ರರೂಪವಾಗಿ, ಮಾತೃರೂಪವಾಗಿ, ಗ್ರಾಮಾರೂಪವಾಗಿ ನೀನೇ ನನ್ನ ಸತ್ವಪರೀಕ್ಷೆ ಮಾಡುತ್ತಿದ್ದೀಯಾ?'

'ನನ್ನ ತಲೆಯ ಮೇಲೆ ವಚನಭ್ರಷ್ಟತೆಯ ಕಲಂಕವನ್ನು ಹೇರಿ, ನನ್ನಿಂಥ ಒಬ್ಬ ಬ್ರಾಹ್ಮಣನ ಅಪಮಾನ ಮಾಡಿಸಬೇಕೆಂದು ಹಟ ತೊಟ್ಟಿದೀಯಾ— ನೀನು?

'ನೀನು ಇಂಥ ನಿಷ್ಕರುಣಿ, ದಯಾಹೀನೆ, ಛಲಗಾತಿ ಎಂದು ನಾನು ತಿಳಿದಿರಲಿಲ್ಲ.

'ನನ್ನಲ್ಲಿ ನಿನಗೆ ಬೇಡವಾದ ಸಂಕಲ್ಪವನ್ನು ಪ್ರಚೋದಿಸಿ, ನನ್ನ ಮಾತು, ನನ್ನ ಸಂಕಲ್ಪ ಎಲ್ಲವನ್ನೂ ಕೆಡಿಸಿ, ನನ್ನ ಕೈಲೇ ನಿನ್ನ ಪೂಜೆ ಮಾಡಿಸಿ ಕೊಳ್ಳ ಬೇಕೆಂಬ ಹೊಂಚು ಹಾಕಿದ್ದೀಯಾ?

'ಅದಕ್ಕಾಗಿ ನನಗೆ ಇಲ್ಲದ ಭಯ ಹುಟ್ಟಿಸಿ ಬೆದರಿಸುತ್ತಿದ್ದೀಯಾ? ನಾನೇ ನಿನ್ನ ಪೂಜೆ ಮಾಡದಿದ್ದರೆ ನನ್ನ ಅನ್ನ ಕಿತ್ತುಕೊಳ್ಳುತ್ತೀಯಾ? ನನ್ನ ತಾಯಿಯಿಂದ ನನ್ನನ್ನು ಅಗಲಿಸುತ್ತಿಯಾ? ಹೂ—ಇನ್ನೇನೇನು ಮಾಡಬೇಕೆಂದು ನಿನ್ನ ಇಷ್ಟ? ಹೇಳು; ಅದೇನೇನು ಬೆದರಿಸುತ್ತೀಯೋ ಬೆದರಿಸು. ನಾನು—ನಿನ್ನ ಮಗ; ಷಂಢನಲ್ಲ.

'ನೀನು ಎಷ್ಟು ಹಟ ಮಾಡುತ್ತಿಯೋ ಮಾಡು; ನನಗೂ ಆ ವಿದ್ಯೆ ಗೊತ್ತಿದೆ.

'ಆ ಬ್ರಾಹ್ಮಣ, ನೊಂದು ನನ್ನ ಮೇಲೆ ಹೊರಿಸಿದ ಆಪಾದನೆಗಳನ್ನೆಲ್ಲಾ ಕೇಳಿದೆ ತಾನೆ? ಅಷ್ಟು ಅನ್ನಿಸಿಕೊಂಡು, ನನ್ನನ್ನು ಅಂಥ ಅಪವಾದಕ್ಕೆ ಗುರಿ ಮಾಡಿದ ನಿನ್ನನ್ನು ಪೂಜಿಸುತ್ತೇನೆ ಎಂದುಕೊಂಡಿದ್ದೀಯಾ?

'ನನ್ನ ಕೈಲೇ ನೀನು ಪೂಜೆ ಮಾಡಿಸಿಕೊಳ್ಳಬೇಕಲ್ಲವೇ, ಆಹಾ ಛಲಗಾತಿ! ನಾನೂ ನೋಡಿಯೇ ಬಿಡುತ್ತೇನೆ—ನನ್ನಿಂದ ನೀನು ಅದು ಹೇಗೆ ಪೂಜೆ ಮಾಡಿಸಿ ಕೊಳ್ಳುತ್ತೀಯೋ?

'ಕೇಳಿಸಿತೇ ನಿನಗೆ? ನೀನು ಛಲಗಾತಿ; ನಾನು ನಿನ್ನ ಮಗ. ಅದೆಷ್ಟು ಸಾಧಿಸುತ್ತೀಯೋ ಸಾಧಿಸು. ನಾನೂ ನೋಡೇಬಿಡುತ್ತೇನೆ'.

—ಎಂದು ಹೇಳಿ, ಎದೆ ಸೆಟಿಸಿ ನಿಂತು, ಮಂಟಪದಲ್ಲಿದ್ದ ರಾಜರಾಜೇಶ್ವರಿಯ ವಿಗ್ರಹವನ್ನು ನೋಡಿದರು.

ಶ್ರೀಮಾತೆಯ ವಕ್ಷಹಾರದಲ್ಲಿದ್ದ ವಜ್ರ ಮಿಂಚಿ, ಅವರನ್ನು ನೋಡಿ ನಕ್ಕಂತೆ ಹೊಳೆದಿತು.

'ನಗು...ನಗು...'

—ಎಂದು ಹೇಳುತ್ತಲೇ, ವಿಗ್ರಹಕ್ಕೆ ದೀರ್ಘ ದಂಡಪ್ರಣಾಮ ಮಾಡಿ, ವೆಂಕಟದಾಸಪ್ಪನವರು ಪೂಜಾಗೃಹದಿಂದ ಹೊರಬಿದ್ದರು.

## ೧೩

ದೇವರ ಮನೆಯಿಂದ, ಪಡಸಾಲೆಗೆ ಬಂದು, ತಮ್ಮನ್ನು ದುರಗುಟ್ಟಿ ನೋಡುತ್ತಾ ನಿಂತ ವೆಂಕಟದಾಸಪ್ಪನವರನ್ನು ಕಂಡು, ಅಲ್ಲಿ ಕುಳಿತಿದ್ದವರೆಲ್ಲರ ಹೃದಯದಲ್ಲೂ ಏಕೋ ಭಯಮಿಶ್ರಿತ ಕಳವಳ ಮೂಡಿತು. ಏಕೋ ಅಲ್ಲಿ ಕುಳಿತ ಯಾರೊಬ್ಬರಿಗೂ, ಅವರ ಮುಖವನ್ನು ನೋಡುವಷ್ಟು ತ್ರಾಣ ಕೂಡಾ ಇರಲಿಲ್ಲ.

'ಏನು...ಏನು...ಏನು ದಾಸಣ್ಣ. ಈಗ...ಈಗ... ನಮ್ಮ ಮಾತಿಗೆ ಏನು ಹೇಳ್ತಾಗೆ ಆಯ್ತು?'

—ಶ್ರೀನಿವಾಸರಾಯ ತಲೆತಗ್ಗಿಸಿಯೇ ಕೇಳಿದ.

'ಏನು ಹೇಳಬೇಕು?'

—ಗದರಿಸಿದಂತೆ ಕೇಳಿದರು ವೆಂಕಟದಾಸಪ್ಪ, ಗುಡುಗಿನಂತೆ ಮೊಳಗುವ ಧ್ವನಿಯಲ್ಲಿ.

'ಅದೇ...ಅದೇ...ಪೂಜೆ ವಿಷಯ...'

'ಮೊನ್ನೆಯೇ ಹೇಳಿದೆನಲ್ಲ—ಅಮ್ಮನವರ ಪೂಜೆಯನ್ನು ಅಚ್ಚಣ್ಣ ಭಟ್ಟರು ಮಾಡುತ್ತಾರೆ. ಈಗಲೂ ಅದೇ ನನ್ನ ತೀರ್ಮಾನ. ಯಾರೇನು ಹೇಳಿದರೂ ನಾನದನ್ನು ಬದಲಾಯಿಸಲು ಸಿದ್ಧವಾಗಿಲ್ಲ.'

—ಕಲ್ಲಿನಲ್ಲಿ ಕಟಿದಷ್ಟು ಖಚಿತವಾಗಿ ಹೇಳಿದರು ವೆಂಕಟದಾಸಪ್ಪ—

'ಅಚ್ಚಣ್ಣಭಟ್ಟರೇ—ನನಗೆ ಜಾತ್ರೆ ನಿಲ್ಲಿಸಿದ ಪಾಪ ಬಂದರೂ ಚಿಂತೆಯಿಲ್ಲ—ಮಾಡಿದರೆ ನೀವೇ ಅಮ್ಮನವರ ಪೂಜೆ ಮಾಡಬೇಕು. ನಾನೆಂದೂ ವಚನಭ್ರಷ್ಟನಾಗುವುದಿಲ್ಲ, ದತ್ತಾಪಹಾರಿಯಾಗುವುದಿಲ್ಲ.'

ಅವರು ಹೇಳಿದುದನ್ನು ಕೇಳಿ ಉಳಿದವರಿಗೆ ಸಿಡಿಲು ಬಡಿದಂತಾದರೂ ಅಚ್ಚಣ ಭಟ್ಟರಿಗೆ ಏಕೋ ಕರಳು ಕಲಕಿದಂತೆ, ಕಣ್ಣು ಹೊಸಗಿದಂತಾಗಿ ಅಯಾಚಿತವಾಗಿ ಅವರ ಕಣ್ಣಲ್ಲಿ ನೀರು ತುಂಬಿತು. ಅವರ ಬಡಕಲು ಮೈ ದುಃಖ ವೇಗದಿಂದ ಕಂಪಿಸಲಾರಂಭಿಸಿತು. ಒಂದುಗಳಿಗೆ ತಮ್ಮ ಮುಖವನ್ನು ಉತ್ತರೀಯದಲ್ಲಿ ಮುಚ್ಚಿಕೊಂಡು ಕಂಬನಿಗರೆದು, ಬಳಿಕ, ಗದ್ಗದಿತ ಸ್ವರದಲ್ಲಿ ಹೇಳಿದರು.

'ದಾಸಣ್ಣಾ...ದಾಸಣ್ಣಾ...ನಾನು ಪಾಪಿ...ನಾನು ಚಂಡಾಲ...ನಿನ್ನನ್ನು ಅನ್ನಬಾರದ್ದನ್ನೆಲ್ಲಾ ಅಂದೆ...ನಿನ್ನನ್ನು ಅಂದದ್ದು ಆ ತಾಯಿಯನ್ನೇ ಅಂದ ಹಾಗಾಯಿತು...ನನ್ನನ್ನು ಕ್ಷಮಿಸು...ಆಕೆಯ ಪೂಜೆಗೆ ನಾನು ಅರ್ಹನಲ್ಲ ದಾಸಣ್ಣ...ಕರ್ಮ ಚಂಡಾಲನಾದ ನನಗೆ ಆಕೆಯನ್ನು ಮುಟ್ಟುವ ಯೋಗ್ಯತೆಯೂ ಇಲ್ಲ...ಇಗೋ...ನಾನೇ...ನಾನೇ...ನಿನಗೆ ಒಪ್ಪಿಸುತ್ತೇನೆ. ನೀನ್ನೇ ಪೂಜೆ ಮಾಡು.'

ಅಚ್ಚಣ್ಣಭಟ್ಟರು ಹೇಳಿದುದನ್ನು ಕೇಳಿ ವೆಂಕಟದಾಸಪ್ಪನವರಿಗೆ, ಎಲ್ಲೋ ಅಪರಿಚಿತವಾದ ಕಾನನದಲ್ಲಿ ಕಣ್ಣು ಕಟ್ಟಿ ಬಿಟ್ಟ ಹಾಗಾಯಿತು. ಒಂದು ಗಳಿಗೆ ಸುಮ್ಮನೆ ದಿಗ್ಭ್ರಾಂತರಾಗಿ ನಿಂತರು.

ಅವರು ಹಾಗೆ ಸುಮ್ಮನೆ ನಿಂತುದನ್ನು ಕಂಡು ಅಚ್ಚಣ್ಣಭಟ್ಟರ ವಿಹ್ವಲತೆ ಮತ್ತಷ್ಟು ಹೆಚ್ಚಿತು.

ನಾನು ತಪ್ಪು ಮಾಡಿದೆ ದಾಸಣ್ಣ...ಮಹಾಪರಾಧ ಮಾಡಿದೆ... ಬಯಸಬಾರದುದನ್ನು ಬಯಸಿದೆ....ಅದಕ್ಕಾಗಿ ನಿನ್ನ ಮೇಲೆ ಇಲ್ಲದ ನೀಚಾರೋಪ ಮಾಡಿದೆ...ನನ್ನನ್ನು ಮನ್ನಿಸು ದಾಸಣ್ಣ...ಈ ಪೂಜೆಯ ಕೆಲಸವನ್ನು ನೀನೇ ಒಪ್ಪಿಸಿಕೋ...'

—ಎಂದು ಅಂಗಲಾಚಿ ಬೇಡಿದರು.

ಅಚ್ಚಣ್ಣಭಟ್ಟರ ಮಾತುಗಳನ್ನು ಕೇಳಿ ಅಲ್ಲಿ ನೆರದಿದ್ದವರೆಲ್ಲರಿಗೂ, ತಮ್ಮ ಕಣ್ಣು ಕಿವಿಗಳನ್ನೇ ನಂಬುವುದು ಅಸಾಧ್ಯವಾದಂತೆ ತೋರಿತು. ಎಲ್ಲರೂ ಮೈ ಮರೆತವರಂತೆ ಹತ್ತುಗಳಿಗೆ ಸುಮ್ಮನೆ ಕುಳಿತಿದ್ದರು.

ಬಳಿಕ ಆ ಪಡಸಾಲೆಯಲ್ಲಿ—ಹಬ್ಬಿದ ಸ್ವಪ್ನಸಮಾನ, ಅಸಹಜ ವಾತಾವರಣವನ್ನು ಮುರಿದು ಸೂರನಾಯಕ ಹೇಳಿದ.

"ಇನ್ನೇನು ದಾಸಣ್ಣ...ಅವರು ಹೇಳಿದ ಮ್ಯಾಲೆ ನೀನು ಒಪ್ಕೋಬೋವಲ್ಲಾ..."

ಆತನ ಮಾತನ್ನು ಕೇಳಿ ವೆಂಕಟದಾಸಪ್ಪನವರ ಚಿತ್ತವೂ ಒಂದುಗಳಿಗೆ ಡೋಲಾಯಮಾನವಾಗಿ ಹೊಯ್ದಾಡಿತು.

ಅವರ ಮನಸ್ಸು ಹಾಗೆ ತೂಗಾಡುತ್ತಿರುವಾಗಲೇ, ಮಾರಂಗಳಿಗೆಯೋ ಮತ್ತೊಂದು ಯೋಚನೆ ಮೂಡಿ, ಸಡಿಲವಾದ ಅವರ ಮೈ ಮತ್ತೆ ಬಿರುಸಾಯಿತು.

ತಮಗೆ ತಾವೇ ಹೇಳಿಕೊಂಡರು–

'ಆಹಾ! ಹೀಗೂ ನನ್ನನ್ನು ಪರೀಕ್ಷೆ ಮಾಡಿ ನೋಡಬೇಕು ಎನ್ನುತ್ತೀಯಾ ಮಾಯಗಾತಿ! ಇದೂ ನಿನ್ನಾಟವೇ ನಾನು ಬಲ್ಲೆ. ನನ್ನ ಸಂಕಲ್ಪವನ್ನು ಸೋಲಿಸಲು ಅದೇನೇನು ಹೊಂಚು ಹಾಕುತ್ತೀಯೋ ಹಾಕು. ಅದೇನೇನು ಆಟ ಕಟ್ಟುತ್ತೀಯೋ ಕಟ್ಟು. ನೀನು ಏನೇ ಮಾಡು–ನಾನಂತೂ ಸಂಕಲ್ಪ ಭ್ರಷ್ಟನಾಗುವುದಿಲ್ಲ.'

ಹಾಗೆಂದುಕೊಂಡು, ಪ್ರಕಟವಾಗಿ ಹೇಳಿದರು–

'ಆದಾಗೆದು ಅಚ್ಚಣ್ಣಭಟ್ಟರೇ–ಈ ಬಾರಿ ನೀವೇ ಅಮ್ಮನವರ ಪೂಜೆ ಮಾಡಬೇಕು.'

'ಇನ್ನೂ...ಇನ್ನೂ...ನನ್ನ ಪರೀಕ್ಷೆ ಮಾಡ್ತೀಯಾ ದಾಸಣ್ಣಾ...'

ಆರ್ತರಾಗಿ ಕೇಳಿದರು ಅಚ್ಚಣ್ಣಭಟ್ಟರು.

ಆವರ ಮಾತಿನಲ್ಲಿದ್ದ ಆರ್ತತೆ ಅರಿವಾಗಿ ವೆಂಕಟದಾಸಪ್ಪನವರ ಕಣ್ಣು ತೇವವಾಯಿತು. ಆದರಿಂದ ಕೊಂಚ ಮೃದುವಾದ ಧ್ವನಿಯಲ್ಲಿ ಹೇಳಿದರು–

'ನನ್ನಾಣೆ–ನಾನು ನಿಮ್ಮ ಪರೀಕ್ಷೆ ಮಾಡುತ್ತಿಲ್ಲ ಅಚ್ಚಣ್ಣಭಟ್ಟರೆ–ನನ್ನ, ನಿಮ್ಮ ಇಬ್ಬರ ಪರೀಕ್ಷೆಯನ್ನೂ ಮೂರನೆಯವರೊಬ್ಬರು ಮಾಡುತ್ತಿದ್ದಾರೆ–ನನ್ನನ್ನು ಸೋಲಿಸಬೇಕೆಂದು. ನಾನೂ ನೋಡಿಯೇ ಬಿಡುತ್ತೇನೆ—ಯಾರು ಸೋಲುತ್ತಾರೋ'

–ಅಷ್ಟು ಹೇಳಿ ಉಳಿದವರ ಕಡೆ ತಿರುಗಿ–

'ಸೂರಜ್ಜಾ–ನಿಮ್ಮ ಕೋಮಿನವರಿಗೆಲ್ಲಾ ಹೇಳು–ನಾನು ಈ ಊರಲ್ಲಿಯೇ ಇರಬೇಕು ಎಂದು ಆಸೆ ಇದ್ದರೆ, ನೀವೆಲ್ಲಾ ಎಂದಿನ ಹಾಗೆ ಜಾತ್ರೆ ಕೆಲಸ ಮಾಡಬೇಕು. ಇಲ್ಲವೆಂದಿರೋ–ಇಗೋ–ಇವತ್ತೇ–ಈ ಊರಿಗೆ ಎಳ್ಳುನೀರು ಬಿಟ್ಟು ಹೊರಟು ಬಿಡುತ್ತೇನೆ. ಬೇಕಾದದ್ದಾಗಲಿ, ಈ ವರ್ಷ ಅಚ್ಚಣ್ಣಭಟ್ಟರೇ ಪೂಜೆ ಮಾಡಲಿ.'

—ಎಂದರು.

'ಆದ್ರೆ...ಆದ್ರೆ...'

—ಸೂರನಾಯಕ ಏನೋ ಹೇಳಲು ಯತ್ನಿಸಿದ.

'ಏನು ಆದ್ರೆ?'

—ಚುರುಕಾಗಿ ಕೇಳಿದರು ವೆಂಕಟದಾಸಪ್ಪನವರು.

'ಆದ್ರೆ...ಕುಲದೋರೆಲ್ಲಾ ಸೇರಿ...ತೀರ್ಮಾನ ಮಾಡವ್ರೆ...'

'ಅಂದರೆ ಅದನ್ನು ಬದಲಾಯಿಸುವುದು ಸಾಧ್ಯವಿಲ್ಲ ಎನ್ನು...'

—ವೆಂಕಟದಾಸಪ್ಪ ಹರಿತವಾಗಿ ಕೇಳಿದರು.

'ಅದ್ಯಾಕೆ ಅಷ್ಟು ಹಟ ದಾಸಣ್ಣ. ಎಲ್ಲರೂ ಹೇಳ್ತಿದಾರೆ...' ನೀನೇ ಈ ಹಟ ಬಿಟ್ಬಿಡು...'

—ಶ್ರೀನಿವಾಸರಾಯ ಹೇಳಿದ.

'ಆದಾಗುವುದಿಲ್ಲ ಅಂತ ಒಂದು ಸಲ ಹೇಳಿದೀನಿ ಶೀನಣ್ಣ. ಇನ್ನು, ಯಾರು, ಎಷ್ಟು ಸಲ ಹೇಳಿದರೂ ಅಷ್ಟೆ—ನಾಳೆ ನಾನು ಪೂಜೆ ಮಾಡೊಲ್ಲ.

'ಹಾಗಾದರೆ...ಜಾತ್ರೆ...'

'ಅದು ನಿಮ್ಮ ಇಷ್ಟ. ಹೇಗೆ ಬೇಕೋ ಹಾಗೆ ಮಾಡಿಕೊಳ್ಳಿ.'

—ಎಲ್ಲ ಸಂಧಾನದ ಮಾತನ್ನು ಕತ್ತರಿಸಿ ಹೇಳಿ ವೆಂಕಟದಾಸಪ್ಪನವರು—

'ನನ್ನ ಪೂಜೆ ಕೆಲಸ ಸ್ವಲ್ಪ ಬಾಕಿ ಉಳಿದಿದೆ. ನಾನಿನ್ನು ಬರ್‍ತೀನಿ. ಅಚ್ಚಣ್ಣಭಟ್ಟರೆ—ನೀವು ಯಾವ ಯೋಚನೇನೂ ಮಾಡಬೇಡಿ.'

—ಎಂದು ಹೇಳಿ, 'ಮಾತು ಮುಗಿಯಿತು' ಎಂಬಂತೆ ವೆಂಕಟದಾಸಪ್ಪ ನವರು ಎದ್ದು ಒಳಗೆ ಹೋದರು.

'ಈ ವಂಶವೇ ಇಷ್ಟು. ಮಹಾ ಹಟಗಾರ ವಂಶ.'

—ಎಂದು ಶ್ರೀನಿವಾಸರಾಯರು ನಿಟ್ಟುಸಿರಿಟ್ಟು—

'ಈಗ ನೀವೇನ್ಮಾಡ್ತೀರ ಸೂರಪ್ಪ—ಜಾತ್ರೆ ನಡೀಬೇಕೋ ಬೇಡವೋ ಹೇಳಿಬಿಡಿ. ಬ್ಯಾಡೋನ್ನೋದಿದ್ರೆ 'ಈಗ್ಲೆ ಜಾತ್ರೆ ನಡೆಯೋಲ್ಲ' ಅಂತ ಡಂಗೂರ ಸಾರಿಸಿಬಿಡ್ತೀನಿ.'

—ಎಂದು ಸೂರನಾಯಕನಿಗೆ ಹೇಳಿದ.

'ಏನಾಗ್ತದೋ—ಆ ಮಹಾತಾಯಿಗೆ ಗೊತ್ತು. ನಾವಂದಕೊಂಡು ಬಂದದ್ದೇ ಒಂದು, ಆದಾದದ್ದೆ ಒಂದು. ಆಯ್ತು—ನಾನೂ ಈಗ್ಲೇ ನಮ್ಮೋರತವ ಮಾತಾಡಿ ಹೇಳಿ ಕಳಿಸ್ತೀನಿ.'

—ಎಂದ ಸೂರನಾಯಕ

ಹಾಗೆ ಮಾತನಾಡಿಕೊಳ್ಳುತ್ತಾ ಎಲ್ಲರೂ ಅಲ್ಲಿಂದ ಎದ್ದು ಹೋದರು

ಎಲ್ಲರೂ ಹೋದಮೇಲೂ, ಬರಿದಾದ ಪಡಸಾಲೆಯಲ್ಲಿ ಅಚ್ಚಣ್ಣಭಟ್ಟರು ಒಬ್ಬರೇ ಕುಳಿತಿದ್ದರು.

ಅವರ ಹೃದಯ ಒಂದೇ ಸಮನೆ ಹಾರೈಸುತ್ತಿತ್ತು.

'ತಾಯಿ, ಹೇಗಾದರೂ ದಾಸಣ್ಣನ ಬುದ್ಧಿ ಬದಲಿಸು. ಜಾತ್ರೆ ನಡೆಯಲಿ. ನನ್ನ ನಾಲಗೆಯ ದೋಷಕ್ಕಾಗಿ ಹಳ್ಳಿಗೇ ಕೇಡಾಗದಿರಲಿ.'

ಆ ಹೃದಯದ ಮಾತಿನೊಂದಿಗೆ ಕಣ್ಣಲ್ಲಿ ನೀರೂ ಒಂದೇ ಸಮನೆ ಹರಿಯುತ್ತಿತ್ತು.

ಹತ್ತುಗಳಿಗೆ ಹಾಗೆ ಕುಳಿತಿದ್ದು, ಬಳಿಕ ಅಚ್ಚಣ್ಣಭಟ್ಟರೂ ಅಲ್ಲಿಂದ ಎದ್ದು ಹೋದರು.

* * *

ಒಳಮನೆಯಲ್ಲಿ ಕುಳಿತ ಲಕ್ಷ್ಮೀದೇವಮ್ಮನ ಕಣ್ಣುಗಳಿಂದ ಕಿಡಿ ಕಾರುತ್ತಿತ್ತು. ರಾಜೇಶ್ವರಿ ಗರಬಡಿದವಳಂತೆ, ಗೋಡೆಗೆ ಒರಗಿ ಕುಳಿತಿದ್ದಳು.

ಅವರಿಬ್ಬರಿಗೆ ಇದಿರಾಗಿ ವೆಂಕಟದಾಸಪ್ಪನವರು ಕುಳಿತಿದ್ದರು.

'ಎಲ್ಲಾರೂ ಎದ್ಹೋದ್ರೇನೇ ನೋಡೇ ರಾಜೇಶ್ವರಿ?'

—ಲಕ್ಷ್ಮೀದೇವಮ್ಮ ಮಗಳಿಗೆ ಹೇಳಿದಳು.

ತನಗೆ ಆಕೆ ಆ ಕೆಲಸವನ್ನು ಏಕೆ ಹೇಳಿದಳೆಂದು ರಾಜೇಶ್ವರಿಗೆ ಅರ್ಥವಾಗಿ, ಕೈಮೀರಿ ಹೋದುದಕ್ಕಾಗಿ ಮನೆಯಲ್ಲಿನ್ನು ಹಗರಣವಾಗಬಾರದು ಎಂದುಕೊಂಡು—

'ಯಾರಾದ್ರೂ ಇರಲಿ, ಹೋಗಲಿ—ನೀನೂ ಆ ಮಾತು ಅಲ್ಲಿಗೆ ಬಿಟ್ಟು ಬಿಡು. ಯಾವುದು ಹೇಗಾಗಬೇಕೋ ಹಾಗಾಗಲಿ.'

—ಎಂದಳು ನೀರಸವಾದ ಧ್ವನಿಯಲ್ಲಿ.

'ಇನ್ನೇನು ಆಗೋದಿದೆ—ಈ ಮನೆ ಸುಟ್ಟು, ಬೂದಿಯಾಗಿ ಸ್ಮಶಾನ ಆಗೋದೊಂದೇ ಅಂತೂ ಬೆಂಕಿ ಹಚ್ಚೇ ಬಿಟ್ಟ. ಈ ಮನೆಗೆ. ರಾಮ...ರಾಮ ...ಇನ್ನೇಳೇಳು ಜನ್ಮಕ್ಕೂ ಇಂಥ ಮಕ್ಕಳು ಹುಟ್ಟಬಾರದು. ನನ್ನ ವೈರಿಗೂ ಇಂಥ ಮಕ್ಕಳಾಗೋದು ಬ್ಯಾಡ.'

—ಮಿತಿಮೀರಿದ ಆಕ್ರೋಶದಿಂದ ಹೇಳಿದಳು ಲಕ್ಷ್ಮೀದೇವಮ್ಮ.

ಆ ಮಾತನ್ನು ಕೇಳಿದ ವೆಂಕಟದಾಸಪ್ಪನವರು, ಶಾಂತವಾಗಿ–

'ಆಯಿತೇಳು–ನಿನಗೆ ನಾನಷ್ಟು ಕೆಟ್ಟ ಮಗ ಅನ್ನಿಸಿದ್ದರೆ, ತಾಯಿ ನಿನ್ನ ಇಚ್ಛೆಯನ್ನು ನಡೆಸುತ್ತಾಳೆ.'

—ಎಂದು, ಎಲ್ಲೋ ಹೊರಡಲು ಸಿದ್ಧವಾಗಿ ಎದ್ದುನಿಂತು; ರಾಜೇಶ್ವರಿಗೆ–

'ರಾಜೇಶ್ವರೀ–ಸ್ವಲ್ಪ ಹೀಗೇ ಬರ್‍ತೀಯಾ?'

—ಎಂದು ಕೇಳಿದರು.

ರಾಜೇಶ್ವರಿ ತಲೆಯಾಡಿಸಿ ಸಮ್ಮತಿ ಸೂಚಿಸಿ, ಅವರೊಂದಿಗೆ ಪಡಸಾಲೆಗೆ ಬಂದಳು.

'ರಾಜೇಶ್ವರೀ...'

'ಏನಣ್ಣ?'

'ಎಲ್ಲರ ಹಾಗೇ ನೀನೂ ನನ್ನ ವಿಷಯದಲ್ಲಿ ಮುನಿಸಿಕೊಳ್ಳಬೇಡ, ರಾಜಕ್ಕಾ–ಇವತ್ತು ನಾನೇನು ಮಾಡ್ತಾಯಿದೀನಿ, ಹೀಗ್ಯಾಕೆ ಮಾಡ್ತಾಇದೀನಿ ಅನ್ನೋದೇ ನನಗೆ ಅರ್ಥವಾಗ್ತಾ ಇಲ್ಲ. ಒಳ್ಳೆಯದಕ್ಕೋ, ಕೆಟ್ಟದಕ್ಕೋ– ಅಂತೂ ನನಗೆ ಈ ರೀತಿ ಪ್ರೇರೇಪಣೆ ಆಗಿದೆ. ಆಯಿತು–ಅದು ಹಾಗೇ ನಡೆದು ಹೋಗಲಿ...'

'ಹೂ'

'ನಾನಿಲ್ಲಿ ಇದ್ರೆ ಈ ಜನ ನನ್ನ ಕೈಲಿ ಪೂಜೆ ಮಾಡಿಸದೆ ಬಿಡೋದಿಲ್ಲ ರಾಜಕ್ಕಾ...ಅದಕ್ಕೇ...'

'ಅದಕ್ಕೇ...ಏನು?'

'ನಾನು ನಾಳೆ ಸಂಜೆಯವರೆಗೂ ಎಲ್ಲಾದ್ರೂ ಕಣ್ಣುಮರೆಯಾಗಿದ್ದು ಬಿಡ್ತೀನಿ.'

'ಆ್ಞ—'

ಅವರ ಮಾತು ಕೇಳಿ ರಾಜೇಶ್ವರಿ ತಟಕ್ಕನೆ ಗಾಬರಿಯಾಗಿ ಹೇಳಿದಳು.

'ಊಹೂ–ಹೆದರಬೇಡ ರಾಜಕ್ಕ.'

—ಎಂದು ಮೃದುವಾಗಿ ನಗುತ್ತಾ ರಾಜೇಶ್ವರಿಯು ತಲೆಯನ್ನು ನೇವರಿಸಿ ಭರವಸೆ ನೀಡಿ—

'ಹಾಗಂದು ನಾನು ಮನೆ ಬಿಟ್ಟು ಓಡಿಹೋಗೊಲ್ಲ. ನಾಳೆ ಒಂದು ದಿನ— ಒಂದೇ ಒಂದು ದಿನ—ಕಣ್ಣುಮರೆಯಾಗಿರ್ತೀನಿ ಅಷ್ಟೆ...'

—ಎಂದರು.

'ಏನಾದ್ರೂ ಮಾಡಿಕೋ—ನಿನಗೆ ಯಾರು ಏನು ಹೇಳೋಕೆ ಸಾಧ್ಯ?'

—ವೆಂಕಟದಾಸಪ್ಪನವರು ಮಾತು ಮುಗಿಸುವ ಮೊದಲೇ ಹೇಳಿದಳು ರಾಜೇಶ್ವರಿ.

'ಅಂದರೆ...ನಿನಗೂ ನನ್ನ ಮೇಲೆ ಸಿಟ್ಟೇ ರಾಜಕ್ಕಾ?'

'ಊಹೂ'

'ನನ್ನಾಣೆಗೂ'

'ದೇವರಾಣೆಗೂ ಸಿಟ್ಟಿಲ್ಲ'

'ಹಾಗಿದ್ದರೆ—ಏನೂ ತಿಳಿದುಕೊಳ್ಳದಿದ್ದರೆ ಒಂದು ಕೆಲಸ ಮಾಡ್ತೀಯಾ?'

'ಏನು ಹೇಳು—ಆಗೋದಾದ್ರೆ ಮಾಡ್ತೀನಿ'

'ನಾಳೆ ಅಷ್ಟು ಹೊತ್ತಿಗೇ ಎದ್ದು, ದೇವರಿಗೆ ನೀನೇ ನಾಲ್ಕು ಹೂವು ಹಾಕಿ, ಅಪ್ಪಣ್ಣಭಟ್ಟರು ಬಂದರೆ, ಮಾಮೂಲಿನ ಹಾಗೆ ಅಮ್ಮನವರ ವಿಗ್ರಹಾನ ದೇವಸ್ಥಾನಕ್ಕೆ ಕಳಿಸಿಕೊಡು. ಅದು ಮಾತ್ರ ತಪ್ಪಿಸಬೇಡ'.

—ಎಂದರು ವೆಂಕಟದಾಸಪ್ಪ.

'ಅಮ್ಮ...ಸುಮ್ನಿರ್ತಾಳೆಯೇ...'

'ಸುಮ್ಮನಿರದಿದ್ದರೆ, ಅವಳನ್ನು ಒಪ್ಪಿಸೋದು ನಿನ್ನ ಜವಾಬ್ದಾರಿ. ಅದಕ್ಕೇ ಈ ಕೆಲಸಾನ ನಾನು ನಿನಗೆ ಒಪ್ಪಿಸಿದ್ದು. ಗೊತ್ತಾಯ್ತೆ?'

—ಎಂದು ಒಂದು ಗಳಿಗೆ ಸುಮ್ಮನಿದ್ದು, ಬಳಿಕ—

'ಇವತ್ತೊಂದು ದಿನ ನನ್ನ ಮಾತು ನಡಿಸಿಕೊಡು ರಾಜಕ್ಕ—ಇನ್ನು ಜನ್ಮಜನ್ಮಕ್ಕೆ ನಿನ್ನ ಮಗನಾಗಿ ಈ ಋಣ ತೀರಿಸ್ತೀನಿ. ಇಲ್ಲಾನ್ನಬೇಡ.'

—ಎಂದು ತಮ್ಮ ಜೀವನವೇ ಆಕೆಯ ಒಪ್ಪಿಗೆಯನ್ನು ಅವಲಂಬಿಸಿದೆ ಎಂಬಷ್ಟು ಕಕ್ಕುಲತೆಯಿಂದ ಹೇಳಿದರು.

ಆ ಮಾತಿಗೆ ರಾಜೇಶ್ವರಿ ಏನೂ ಉತ್ತರ ಹೇಳಲಿಲ್ಲ.

'ದೇವರು ನಿನಗೆ ಒಳ್ಳೇದು ಮಾಡ್ತಾನೆ ರಾಜಕ್ಕ. ಬೇಗ ಗಂಡು ಮಗುವಿನ ತಾಯಿ ಆಗ್ತೀಯ.'

—ಎಂದು ಅವಳ ತಲೆಯನ್ನು ನೇವರಿಸಿ, ಮುಂದಾವ ಮಾತಿಗೂ ಕಾಯದೆ, ಹೊರಗೆ ಹೊರಟು ಹೋದರು ವೆಂಕಟದಾಸಪ್ಪ.

ವೆಂಕಟದಾಸಪ್ಪನವರು ದಾಟಿ, ಬರಿದಾದ ತಲೆಬಾಗಿಲನ್ನೇ ಹನಿಗಣ್ಣು ಗಳಿಂದ ದಿಟ್ಟಿಸುತ್ತಾ ನಿಂತಿದ್ದಳು ರಾಜೇಶ್ವರಿ.

## ೧೪

ತಮ್ಮ ಸಂಧಾನ ವಿಫಲವಾದ ಬಳಿಕ, ಮುಂದೇನು ಮಾಡಬೇಕು ಎಂದು ಚರ್ಚಿಸುವುದಕ್ಕಾಗಿ, ಗ್ರಾಮದ ಮುಖಂಡರೆಲ್ಲರೂ, ನಾಯಕರ ಕೇರಿಯ ಸಮೀಪದಲ್ಲಿದ್ದ ಮಾರಮ್ಮನ ಗುಡಿಯಲ್ಲಿ ಸೇರಿದರು.

ವೆಂಕಟದಾಸಪ್ಪನವರ ಬಳಿಗೆ ಹೋದ ಹಿರಿಯರು ಅವರಿಂದ ಏನು ಉತ್ತರ ತರುತ್ತಾರೋ ಎಂದು ಕಾದಿದ್ದ ಬೋರಯ್ಯ, ತಿಪ್ಪನಾಯಕ ಮೊದಲಾದವರಿಗೆ, ಅವರೆಲ್ಲರ ಬಾಡಿದ ಮುಖವನ್ನು ನೋಡುತ್ತಿದ್ದ ಹಾಗೇ ಹೋದ ಕೆಲಸ ಆಗಲಿಲ್ಲವೆಂಬುದು ಅರ್ಥವಾಗಿ, ಅವರ ಮುಖಗಳೂ ಮ್ಲಾನವಾದವು.

'ಹೋದ ಕೆಲ್ಸ ಏನಾಯ್ತು ಸೂರಜ್ಜ?'

—ಎಂದು ಬೋರಯ್ಯನೇ ಕೇಳಿದ. ಏನಾಯಿತೆಂಬ ಅವನ ಪ್ರಶ್ನೆಗೆ ಅವನ ಹೃದಯವೇ ಉತ್ತರ ಹೇಳುತ್ತಿದ್ದರೂ—.

'ಹೋದ ಪುಟ್ಟ, ಬಂದ ಪುಟ್ಟ ಅಂದಂಗಾಯ್ತು.'

—ನೀರಸವಾದ ಧ್ವನಿಯಲ್ಲಿ ಹೇಳಿದ ಸೂರನಾಯಕ.

'ಅಂದ್ರೆ—'

'ನವರಾತ್ರಿಗೆ ದಾಸಣ್ಣ ಒಪ್ಪಿಕೊಳ್ಳಲಿಲ್ಲ.'

'ನಾವು ಮಾಡಿಕೊಂಡ ತೀರ್ಮಾನ ಹೇಳಿದ್ರೋ ಇಲ್ವೋ?'

'ಎಲ್ಲಾ ಹೇಳಿದ್ವಿ.'

'ಅದಕ್ಕೇನ್ಹೇಳಿದ್ರು...?'

'ಅಚ್ಚಣ್ಣಭಟ್ರೆ ಪೂಜೆ ಮಾಡಬೇಕು. ಜಾತ್ರೆನೂ ನಡೀಬೇಕು ಹಂಗಿಲ್ಲಾಂದ್ರೆ ನಾನೇ ಊರಿಗೆ ಎಳ್ಳುನೀರು ಬಿಟ್ಟು ಹೊಂಟೋಗ್ತೀನಿ—ಯಾರೇನಾದ್ರೂ ಮಾಡಿಕೊಳ್ಳಿ—'ಅಂದ್ರು.'

'ಅಷ್ಟೇನಾ?'

—ಬಹು ಶುಷ್ಕವಾದ ಧ್ವನಿಯಲ್ಲಿ ಕೇಳಿದ ಬೋರಯ್ಯ.

'ಹೂ, ಅಷ್ಟೆ. ಯಾರೇನು ಹೇಳಿದ್ರೂ ಆವಯ್ಯ ಕೇಳಲಿಲ್ಲ. ನಾವೆಲ್ಲಾ ಇಲ್ಲಿ—ಪಾಪ! ಅಚ್ಚಣ್ಣಭಟ್ಟರು, ದಾಸಣ್ಣನ ಕಾಲು ಹಿಡಿದುಕೊಳ್ಳೋದು

ಒಂದು ಉಳಿದಿತ್ತು. ಅಷ್ಟು ವಿಧವಾಗಿ ಕೇಳಿಕೊಂಡ, ಆ ಬ್ರಾಹ್ಮಣ ಗೋಳೋಂತ ಅತ್ತು ಕಣ್ಣಾಗೆ ನೀರು ಹಾಕಿದ—ಏನಾದ್ರೇನು—ದಾಸಣ್ಣ ಹಿಡಿದ ಪಟ್ಟು ಬಿಡಲೇ ಇಲ್ಲ. ನಾವಿನ್ನೇನು ಮಾಡೋಕಾಗ್ತದೆ? ಬಂದ ದಾರಿಗೆ ಸುಂಕ ಇಲ್ಲಾಂತ ಹೋದಂಗೆ ಹಿಂದಕ್ಕೆ ಬಂದ್ವಿ.'

— ಸೂರನಾಯಕ ನಿರಾಶೆಯಲ್ಲಿ ತಲೆಯಾಡಿಸುತ್ತಾ ಹೇಳಿದ.

'ಅದೇನೋ ಹಾಗಾಯ್ತಲ್ಲ ಬೋರಯ್ಯ—ನೀವೇನು ಮಾಡ್ತೀರ ಹೇಳಿ? ದಾಸಣ್ಣನ ಹಾಗೇ ನೀವೂ ಪಟ್ಟು ಹಿಡಿದು, ಸೀಮೆ ಮುಂದೆಲ್ಲಾ ದೇವಿಕೆರೆ-ಯೋರು ನಾಚಿಕೊಳ್ಳೋ ಹಾಗೆ ಮಾಡ್ತೀರೋ. ಅಥವಾ ದೊಡ್ಡ ಮನಸ್ಸು ಮಾಡಿ, ಹಳ್ಳಿ ಮರ್ಯಾದೆ ಉಳಿಸ್ತೀರೋ.'

—ಶ್ರೀನಿವಾಸರಾಯ ಯುವಕರನ್ನು ಉದ್ದೇಶಿಸಿ, ಬೋರಯ್ಯನನ್ನು ಕೇಳಿದ.

ಆ ಮಾತಿಗೆ ಯಾರೂ ಕೂಡಲೇ ಉತ್ತರ ಕೊಡಲಿಲ್ಲ. ಎಲ್ಲರೂ ಮಂಕಾಗಿ ತಲೆತಗ್ಗಿಸಿ ಕುಳಿತಿದ್ದರು. ಕೊನೆಗೆ ಬೋರಯ್ಯನೇ ನಿಟ್ಟುಸಿರಿಟ್ಟು ಹೇಳಿದ—

'ಇನ್ನೇನು ಹಟಮಾಡಿ ಏನಾಗೊದೈತೆ? ಅಂದುಕೊಂಡದ್ದಂತೂ ಆಗೋಲ್ಲ—ನಮಗೆ ಬರೀ ಕೆಟ್ಟ ಹೆಸರು. ದಾಸಣ್ಣ ಅಷ್ಟು ಹೇಳಿದ್ಮೇಲೆ, ಇನ್ನು ಬ್ರಹ್ಮಬಂದ್ರೂ ಬುದ್ಧಿ ಬದಲಾಯಿಸೋಕಿಲ್ಲ. ಅವರನ್ನು ಬಿಟ್ಟು ಜಾತ್ರೆ ಮಾಡೋಕೆ ನಿಮ್ಗೆಲ್ಲಾ ಒಪ್ಪಿಗೆ ಇದ್ರೆ ಮಾಡ್ಕೊಂಡೋಗಿ—ಹೆಂಗೋ ಆಗೋದು ನಿಲ್ಲೋಕಿಲ್ಲ-ನಮಗ್ಯಾಕೆ ಕೆಟ್ಟಸರು. ಅಷ್ಟೇ ಅಲ್ವಾ-ತಿಪ್ಪನಾಯಕಾ?

'ಹೂ—ಅಷ್ಟೇ—ಮತ್ತಿನ್ನೇನು ಹೇಳೋದೈತೆ. ಅಂತೂ ಒಟ್ಟಿನ ಮೇಲೆ ನಮ್ಮ ಮರ್ಯಾದೆ, ಮಾತು ಯಾವ್ದೂ ಉಳಿಯೋ ಹಂಗಿಲ್ಲ.'

—ಎಂದ ಇನ್ನೂ ಸಿಟ್ಟು ತಗ್ಗದ ಭೀಮನಾಯಕ.

ಆ ಮಾತು ಕೇಳಿ ನೆರೆದಿದ್ದವರೆಲ್ಲರಿಗೂ ಉರಿಯ ಝಳ ಸೋಕಿದಂತಾಯಿತು. ಭೀಮನಾಯಕನ ಮಾತಿಗೆ ಏನು ಹೇಳಬೇಕೆಂದು ಎಲ್ಲರೂ ಚಿಂತಿಸುತ್ತಿರುವಾಗಲೇ ಎಲ್ಲರಿಗಿಂತ ಮುಂದಾಗಿ ಅಚ್ಚಣ್ಣಭಟ್ಟರು ಹೇಳಿದರು—

'ಭೀಮಣ್ಣ—ಆಗಿದ್ದೆಲ್ಲಾ ಪಾಪ, ತಪ್ಪಿನ ಫಲ, ನನ್ನ ಅತಿ ಆಸೆಯು

ಫಲ. ಏನೋ ತಿಳಿದೇ ಆಡಿಬಿಟ್ಟೆ. ಆಡಿದಾಗ–ಹೀಗಾಗುತ್ತೇನ್ನೋ ಪರಿಜ್ಞಾನ ನನಗಿರಲಿಲ್ಲ ಆಯಿತು–ದಾಸಣ್ಣ ನನ್ನ ಬೇಡಿಕೇನ ನಡಿಸಿ ಕೊಡಲಿಲ್ಲ. ನೀವಾದರೂ ನಡೆಸಿಕೊಡಿ–ಆಡಿದ ಮಾತಿಗೆ ಏನು ತಪ್ಪು ದಂಡ ಬೇಕಾದರೂ ಕಟ್ಟಿಕೊಡುತ್ತೇನೆ. ನನ್ನ ದುಡುಕು ಮಾತಿಗಾಗಿ ಅಮ್ಮನವರ ಜಾತ್ರೆ ತಪ್ಪಿಸಿ ನನ್ನ ವಂಶದ ಏಳೇಳು ತಲೆಯನ್ನು ರೌರವ ನರಕಕ್ಕೆ ತಳ್ಳಬೇಡಿ'.

ಅವರ ಪಶ್ಚಾತ್ತಾಪದಗ್ಧಸ್ವರವನ್ನು ಕೇಳಿದ ಎಲ್ಲರಿಗೂ, ಕೇಳಿದರೆ, ಅಚ್ಚಣ್ಣಭಟ್ಟರು ತಪ್ಪು ದಂಡವನ್ನೇ ಅಲ್ಲ, ತಲೆಯನ್ನೇ ಒಪ್ಪಿಸುವರೆಂದೇ ತೋರಿತು..

ಅವರು ಆಡಿದ ಮಾತನ್ನು ಕೇಳಿ ವೃದ್ಧ ಸೂರನಾಯಕನಿಗೆ ಏನೋ ವಿಚಿತ್ರ ಸಂಕಟವಾಯಿತು.–

'ಭೀಮಾ...ಭೀಮಾ...ಬ್ರಾಂಬರ ಬಾಯಲ್ಲಿ ಇಂಥ ಮಾತಾಡಿಸಿದರೆ, ನಿನಗೆ ಒಳ್ಳೇದಾಗಾಕಿಲ್ಲ ಕಣೋ. ಇಂಥ ಹಟ ಒಳ್ಳೇದಲ್ಲ–ಮಗಾ...'

ಎಂದ ತಾನೂ ಕಣ್ಣಲ್ಲಿ ನೀರು ಹಾಕಿಕೊಂಡು.

ಭೀಮನಾಯಕನಿಗೂ ಅಚ್ಚಣ್ಣಭಟ್ಟರು ಹೇಳಿದುದನ್ನು ಕೇಳಿ ಪಶ್ಚಾತ್ತಾಪವಾಗಿತ್ತು. ಅದರ ಮೇಲೆ ತಮ್ಮ ಕುಲದ ಹಿರಿಯನಾದ ಸೂರನಾಯಕನ ಕಣ್ಣಲ್ಲಿ ನೀರು ಕಂಡು, ಅವನ ಹೃದಯ ಸಂಪೂರ್ಣವಾಗಿ ಕರಗಿ ಹೋಯಿತು.

'ಸೂರಜ್ಜ–ನನಗೆ ಯಾರ ಕೈಲೂ ತಪ್ಪು ದಂಡ ಕಟ್ಸಾದು ಬೇಕಾಗಿಲ್ಲ. ಇಂಗಾದ್ರೂ ಮಾಡಿದ್ರೆ, ಮಾಮೂಲು ಉಳಿದೀತೇನೋಂತ ಆಸೆ ಇತ್ತು. ಆದಿಲ್ಲಾಂದ–ಮೇಲೆ ಎಂಗಾದ್ರೇನು? ಏನಾರ ಮಾಡ್ಕೊಳ್ಳಿ–ನಂದೇನೂ ಅಡ್ಡಿಯಿಲ್ಲ'.

—ಎಂದು ಅಲ್ಲಿಂದ ಎದ್ದು ಹೋದ.

ಉಳಿದವರಿಗಿದ್ದುದೂ ಅಷ್ಟೆ–ಎಂತಲೇ ಅವರೂ ಹಿರಿಯರ ಮಾತಿಗೆ ತಲೆ ಹಾಕಿದರು. ಗುಡ್ಡದಂತೆ ಕವಿದು ಬಂದ ಭಯ ಇಬ್ಬನಿಯಂತೆ ಕರಗಿ ಹೋದ ಹಾಗಾಯಿತು. ಆಗ ಶ್ರೀನಿವಾಸರಾಯರೇ–

ಅಚ್ಚಣ್ಣಭಟ್ಟರೇ–ಇನ್ನೇನು ಚರ್ಚೇನೂ ಬೇಡ. ನಾಳೆ ನೀವು ಪೂಜೆ ಮಾಡಿಬಿಡಿ. ಅಪ್ಪೋರ ಮನಸ್ಸಿನಲ್ಲಿದ್ದ ಹಾಗಾಗಲಿ.'

—ಎಂದರು.

'ಆಯಿತು—ದೈವೇಚ್ಛೆ ಇದ್ದಂತಾಗಲಿ.'

—ಎಂದು ಅಣ್ಣಣ್ಣಭಟ್ಟರೂ ತಲೆಬಾಗಿದರು.

ಅವರು ಹಾಗೆ ಹೇಳಿದ ಬಳಿಕ, ಅಲ್ಲಿ ನೆರೆದಿದ್ದವರೆಲ್ಲರೂ ಅಷ್ಟಿಷ್ಟು ಹಗುರಾದ ಹೃದಯದಿಂದ ತಮ್ಮ ಮನೆಗಳಿಗೆ ಹೊರಟರು.

* * *

ಉಳಿದವರ ಹೃದಯ ಅಷ್ಟಿಷ್ಟು ಹಗುರಾಗಿದ್ದರೂ, ಅಣ್ಣಣ್ಣಭಟ್ಟರ ಹೃದಯ ಮಾತ್ರ, ಹಿಮಾಲಯದ ಹೊರೆಯನ್ನು ಹೊತ್ತಷ್ಟು ಭಾರವಾಗಿತ್ತು.

'ದೇವಿಯ ಪೂಜೆ ತಮ್ಮದಾಗಬೇಕು. ಅದರ ಆದಾಯ ತಮ್ಮ ಮನೆಯ ಪೆಟ್ಟಿಗೆಯನ್ನು ತುಂಬಬೇಕು' ಎಂದು ಬಹು ದಿನಗಳಿಂದಲೂ ಅಣ್ಣಣ್ಣಭಟ್ಟರು ಹಾರೈಸುತ್ತಿದ್ದರು.

'ಇಂದು, ಈ ಗಳಿಗೆಯವರೆಗೂ 'ಅಡ್ಡಗೋಡೆಯ ಮೇಲಿನ ದೀಪ ದಂತಿದ್ದ ಮಾತು, ಖಚಿತವಾಗಿ ಅವರ ಬಹು ದಿನದ ಬಯಕೆ ಈಡೇರಿತ್ತು.

ಆದರೆ ಅವರ ಹೃದಯದಲ್ಲಿ ಮಾತ್ರ—

ವರವನ್ನು ಪಡೆದ ಹರ್ಷವಿರಲಿಲ್ಲ, ಶಾಪವನ್ನೇ ಗಳಿಸಿದಂಥ ಕೊರಗಿತ್ತು.

ಆದಿನ ಪ್ರಾತಃಕಾಲದಿಂದ, ವೆಂಕಟದಾಸಪ್ಪನವರ ವಿಷಯದಲ್ಲಿ ಅವರಿ ಗಿದ್ದ ಭಾವನೆ ಅಮೂಲಾಗ್ರವಾಗಿ ಬದಲಾಗಿ, ಅವರು ತಮ್ಮ ಅಳತೆಗೋಲಿನ ಮಾಪನಕ್ಕೆ ಮೀರಿದ ಶಕ್ತಿಶಾಲಿ ಎನಿಸಿತ್ತು.

ಅದರೊಂದಿಗೆ—'ಆತನ ವಿಷಯ ನಾನು ಎಷ್ಟು ಲಘುವಾಗಿ ಮಾತಾ ಡಿದೆ. ಯಾವ ಕೇಡಿಗೆ ನನಗಿಂಥ ಅತಿಯಾಸೆಯು ಭೂತ ಬಡಿದುಕೊಂಡಿತ್ತು. ನನಗೇಕೆ—ಈ ವಯಸ್ಸಿನಲ್ಲಿ ಅಂಥ ದುರ್ಬುದ್ಧಿ ಬಂತು?'

—ಎಂಬ ನೋವು ಮೂಡಿತ್ತು.

ಆ ನೋವು ಪಶ್ಚಾತ್ತಾಪ ಬೆಳೆದ ಹಾಗೆ, ಅವರ ಮನಸ್ಸೇ ಅವರಿಗೆ— 'ಮೂಢ—ಧನದಾಶೆಯಿಂದ ನೀನು ಎಂಥ ಅಕೃತ್ಯ ಮಾಡಿದೆ? ಧನ

ವ್ಯಾಮೋಹ ಬ್ರಾಹ್ಮಣನಲ್ಲಿ ಮಹಾಪರಾಧವೆಂದು ನಿನಗೆ ತಿಳಿಯದೆ? ದಿನವೂ ಶ್ರೀಮದಾಚಾರ್ಯ ಶಂಕರರ 'ದ್ವಾದಶ ಪಂಜರಿಕಾ ಸ್ತೋತ್ರ' ವನ್ನು ಹೇಳಿ ಕೊಳ್ಳುತ್ತೀಯಲ್ಲ, ಅದರಲ್ಲಿ ಆಚಾರ್ಯರು ಹೇಳಿದ ಎಚ್ಚರಿಕೆ, ಅಗತ್ಯವಾದ ಸಮಯದಲ್ಲೇಕೆ ಮರೆತುಹೋಯಿತು? ಆಚಾರ್ಯರು ಹೇಳಿಲ್ಲವೇ—

ಮೂಢ ಜಹೀಹಿ ಧನಾಗಮ ತೃಷ್ಣಾಂ
ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಂ।
ಯಲ್ಲಭಸೇ ನಿಜ ಕರ್ಮೋಪಾತ್ತಂ
ವಿತ್ತಂ ತೇನ ವಿನೋದಯ ಚಿತ್ತಮ್॥

[ಮೂಢ ಧನಸಂಚಯದ ತೃಷೆಯನ್ನು ತೊರೆ; ಮನಸ್ಸಿನಲ್ಲಿ ಸದ್ಬುದ್ಧಿ ಯನ್ನೂ, ವೈರಾಗ್ಯವನ್ನೂ ಬೆಳೆಸು; ನಿನ್ನ ನಿಜಕರ್ಮದಿಂದ ಬರುವ ದ್ರವ್ಯ ದಿಂದ ಮನಸ್ಸನ್ನು ತೃಪ್ತಿಗೊಳಿಸು].

ಅರ್ಥಮನರ್ಥಂ ಭಾವಯ ನಿತ್ಯಂ
ನಾಸ್ತಿ ತತಃ ಸುಖಲೇಶಃ ಸತ್ಯಮ್।
ಪುತ್ರಾದಪಿ ಧನಭಾಜಾಂ ಭೀತಿಃ
ಸರ್ವತ್ರೈಷಾ ವಿಹಿತಾ ನೀತಿಃ॥

[ಯಾವಾಗಲೂ ಅರ್ಥವು ಅನರ್ಥವೆಂದು ಭಾವಿಸಿಕೋ; ಸತ್ಯ ವಾಗಿಯೂ ಅದರಲ್ಲಿ ಸ್ವಲ್ಪವೂ ಸುಖವಿಲ್ಲ. ಐಶ್ವರ್ಯವಂತರಿಗೆ ತಮ್ಮ ಮಕ್ಕಳಿಂದಲೇ ಭೀತಿ ತಪ್ಪಿದ್ದಲ್ಲ ಸರ್ವತ್ರ ಕಾಣುವ ಸ್ಥಿತಿಯೇ ಇದು.]

......................

ಕಾಮ ಕ್ರೋಧಂ ಮೋಹಂ ಲೋಭಂ
ತ್ಯಕ್ತ್ವಾತ್ಮಾನಂ ಭಾವಯ ಕೋಽಹಮ್।
ಆತ್ಮಜ್ಞಾನ ವಿಹೀನಾ ಮೂಢಾ—
ಸ್ತೇ ಪಚ್ಯಂತೇ ನರಕ ನಿಗೂಢಾಃ॥

[ಕಾಮ ಕ್ರೋಧ ಲೋಭ ಮೋಹಗಳನ್ನು ತ್ಯಜಿಸಿ 'ನಾನು ಯಾರು' ಎಂದು ಆತ್ಮವನ್ನು ಕುರಿತು ವಿಚಾರಮಾಡು; ಆತ್ಮಜ್ಞಾನವಿಹೀನರಾದ ಮೂಢರು ನರಕಕ್ಕೆ ಹೋಗುವರು.]

ದ್ವಾದಶ ಪಂಜರಿಕಾಮಯ್ಯಷ
ಶಿಷ್ಯಾಣಾಂ ಕಥಿತೋಹ್ಯುಪದೇಶಃ।
ಯೇಷಾಂ ಚಿತ್ತೇ ನೈವ ವಿವೇಕಸ್ತೇ
ಪಚ್ಯಂತೇ ನರಕಮನೇಕಮ್॥

[ಈ ದ್ವಾದಶ ಶ್ಲೋಕಾತ್ಮಕವಾದ ಉಪದೇಶವು ನನ್ನ ಶಿಷ್ಯರಿಗಾಗಿ ಹೇಳಲ್ಪಟ್ಟಿದೆ: ಯಾರ ಚಿತ್ತದಲ್ಲಿ ವಿವೇಕವಿಲ್ಲವೋ ಅವರು ನರಕದಲ್ಲಿ ಅನೇಕ ವಿಧವಾದ ಕ್ಲೇಶಗಳನ್ನು ಅನುಭವಿಸಬೇಕಾಗುವುದು.]

ನಿನ್ನಂಥ ಮೂಢರು, ಧನತೃಷೆಯಿಂದ ಹೀಗೆ ಮಾಡಿ, ಬಳಿಕ ಪಶ್ಚಾತ್ತಾಪ ಪಡುವರು ಎಂದು ಅರಿತೇ ಅಲ್ಲವೇ ಆಚಾರ್ಯರು ಮೊದಲೇ ಎಚ್ಚರಿಸಿದ್ದು?

ಅದನ್ನು ತಿಳಿದೂ ತಿಳಿದೂ ಮತ್ತೆ ಎಡವಿದೆಯಲ್ಲಾ–ನಿನಗಿನ್ನು ಉದ್ಧಾರವುಂಟೇ, ಮುಕ್ತಿಯುಂಟೆ? ಮೂರ್ಖ...ಮೂರ್ಖ...ಒಂದು ದೇವರ ಪೂಜೆ ಸಾಲದು ಎಂದು ದಿನವೂ ಹತ್ತಾರು ದೇವರುಗಳನ್ನು ಪೂಜಿಸುತ್ತಿದ್ದೆಯಲ್ಲಾ –ಅಷ್ಟು ಪೂಜೆ ಮಾಡಿ ನಿನಗೆ ಬಂದ ಬುದ್ಧಿ ಇಷ್ಟೇನೇ?

ಇಷ್ಟು ದಿನ ಮಾಡಿದ ಪೂಜೆ, ಹತ್ತಾರು ಶಾಸ್ತ್ರಾಭ್ಯಾಸದಿಂದ ಬಂದ ಜ್ಞಾನ–ಎಲ್ಲವನ್ನೂ ಕೇವಲ ಧನವ್ಯಾಮೋಹಕ್ಕಾಗಿ ಬಲಿ ಕೊಟ್ಟೆಯಲ್ಲಾ?

ಆ ಧನದಿಂದ ನೀನೀಗ ಏನು ಗಳಿಸಿದೆ?

ನೀನು ಬ್ರಾಹ್ಮಣ; ದೇವತಾಪೂಜಕನಾದ ಬ್ರಾಹ್ಮಣ. ದಿನವೂ ಪೂಜಾ ಕಾಲದಲ್ಲಿ ನೀನೇ ಪಠಿಸುತ್ತಿದ್ದ 'ಶಾಂತಿಮಂತ್ರ' ನಿನಗೆ ನೆನಪಿದೆಯೇ–ನೀನು ಹೇಳುತ್ತಿದ್ದುದು ಇದೇ ಅಲ್ಲವೇ?

ಮಧುವಾತಾ ಋತಾಯತೇ।
ಮಧುಕ್ಷರನ್ತಿ ಸಿಂಧವಃ।
ಮಾಧ್ವೀರ್ನಃ ಸನ್ತ್ವೋಷಧೀಃ।
ಮಧು ನಕ್ತಮುತೋಷಸೀ।
ಮಧುಮತ್ ಪಾರ್ಥಿವಂ ರಜಃ।
ಮಧು ದ್ಯೌರಸ್ತು ನಃ ಪಿತಾ।

ಮಧುಮಾನ್ನೋ ವನಸ್ಪತಿಃ।
ಮಧುಮಾನಸ್ತು ಸೂರ್ಯಃ।
ಮಾಧ್ವೀರ್ಗಾವೋ ಭವನ್ತು ನಃ॥

[ಗಾಳಿ ಶುಭವಾದುದನ್ನು ತರಲಿ, ನದಿಗಳು ಶುಭವಾದುದನ್ನು ತರಲಿ ಔಷಧಿಗಳು ಶುಭವಾದುದನ್ನು ತರಲಿ. ದಿನಾ ರಾತ್ರಿಗಳು ಶುಭವನ್ನು ನೀಡಲಿ. ಪೃಥ್ವಿಯ ಕಣಕಣವೂ ಶುಭವನ್ನು ಕೊಡಲಿ. ಅಂತರಿಕ್ಷ ಶುಭವನ್ನು ನೀಡಲಿ. ಗಿಡಮರಗಳು ಶುಭವನ್ನು ಕೊಡಲಿ. ಸೂರ್ಯ ಶುಭವನ್ನು ನೀಡಲಿ. ಗೋವುಗಳು ಶುಭವಾದುದನ್ನೇ ಕೊಡಲಿ].

ಇದನ್ನೇ ಅಲ್ಲವೇ ನೀನು ಪೂಜೆ ಮಾಡಿ ಕೋರುತ್ತಿದ್ದುದು? ಅಂಥ ನೀನು ಮಾಡಿದುದೇನು? ನಿನಗೆ ಅನ್ನ, ಮನೆ, ವಸ್ತ್ರವಿತ್ತ ಹಳ್ಳಿಗೇ ನಿನ್ನ ಅತ್ಯಾಶೆಯಿಂದ ಅಶುಭವನ್ನು ಕೋರಿದೆಯಲ್ಲ—ನಿನಗಿನ್ನು ಶುಭವುಂಟೆ?

ದಿನದಿನವೂ, ನೀನು ಪೂಜಿಸುತ್ತಿದ್ದ ಭಗವಂತನನ್ನು ಏನಾಗಬೇಕೆಂದು ಬೇಡುತ್ತಿದ್ದೆ ಬ್ರಾಹ್ಮಣ?—

ಆತ್ಮಾಮೇ ಶುದ್ಧ್ಯನ್ತಾಂ ಜ್ಯೋತಿರಹಂ ವಿರಜಾ ವಿಪಾತ್ಮಾ ಭೂಯಾಸವ್
ಅಂತರಾತ್ಮಾಮೇ ಶುದ್ಧ್ಯನ್ತಾಂ ಜ್ಯೋತಿರಹಂ ವಿರಜಾ ವಿಪಾತ್ಮಾ ಭೂಯಾಸವ್
ಪರಮಾತ್ಮಾಮೇ ಶುದ್ಧ್ಯನ್ತಾಂ ಜ್ಯೋತಿರಹಂ ವಿರಜಾ ವಿಪಾತ್ಮಾ ಭೂಯಾಸವ್॥

[ನಾನು ರಜಸ್ಸಿಲ್ಲದ, ಪಾಪವಿಲ್ಲದ ಜ್ಯೋತಿಯಾಗಲು ನನ್ನ ದೇಹ ಶುದ್ಧವಾಗಲಿ; ನಾನು ರಜಸ್ಸಿಲ್ಲದ, ಪಾಪವಿಲ್ಲದ ಜ್ಯೋತಿಯಾಗಲು ನನ್ನ ಮನಸ್ಸು ಶುದ್ಧಿಯಾಗಲಿ; ನಾನು ರಜಸ್ಸಿಲ್ಲದ, ಪಾಪವಿಲ್ಲದ ಜ್ಯೋತಿಯಾಗಲು ನನ್ನ ಆತ್ಮ ಶುದ್ಧವಾಗಲಿ]

ನೀನು ಆಗಲು ಬಯುಸಿದುದು ಅದು—ಶುದ್ಧ ಜ್ಯೋತಿ.
ಆದರೆ ಆದುದು—ಕಾರ್ಗತ್ತಲ ಕುಂಭ!

ನಿಜ—ನೀನಾದುದು ಕಾರ್ಗತ್ತಲ ಕುಂಭ, ನರಕದ ಹಂಳು. ಬಿಡು—ಇಂಥ ಅಳಿಯಾಸೆಯನ್ನು ಬಿಡು. ಇನ್ನಾದರೂ ಮುಕ್ತಿಪಥಗಾಮಿಯಾಗು—ಧನಕಾಮಿಯಾಗಬೇಡ"

ತಲೆತಗ್ಗಿಸಿಕೊಂಡು ಮನೆಯ ಕಡೆ ನಡೆಯುತ್ತಿದ್ದ ಅಚ್ಚಣ್ಣಭಟ್ಟರನ್ನು ಅವರ ಹೃದಯವೇ ಹೀಗೆಂದು ಹಿಯಾಳಿಸಿ ಜರಿಯುತ್ತಿತ್ತು.

ಆ ಯಾತನೆಯನ್ನು ತಡೆಯಲಾರದೆ–

'ಭಗವಂತ–ನನಗೇನಾದರೂ ಕೊಡು. ಬಿಡು. ಆದರೆ ಮಾತ್ರೆಂದೂ ಇಂಥ ದುರ್ಬುದ್ಧಿಯನ್ನು ಕೊಡಬೇಡ.'

—ಎಂದು ಬೇಡಿಕೊಳ್ಳುತ್ತಾ, ಅಚ್ಚಣ್ಣಭಟ್ಟರು ಮನೆಯ ಕಡೆ ನಡೆಯುತ್ತಿದ್ದರು.

ಅಚ್ಚಣ್ಣಭಟ್ಟರ ಮನೆಗೆ ಹೋಗುವ ದಾರಿಯಲ್ಲೇ ವೆಂಕಟಗಿರಿ ಜೋಯಿಸರ ಮನೆಯಿತ್ತು. ಅಚ್ಚಣ್ಣಭಟ್ಟರು ಆ ಕಡೆ ಬಂದಾಗ, ವೆಂಕಟಗಿರಿ ಜೋಯಿಸರು ಬೆಳಗಿನ ಎಳೆ ಬಿಸಿಲಿನಲ್ಲಿ ಮನೆಯ ಕಟ್ಟೆಯ ಮೇಲೆ ಏನೋ ಗ್ರಂಥಾವಲೋಕನ ಮಾಡುತ್ತಾ ಕುಳಿತುಕೊಂಡಿದ್ದರು.

ಅವರನ್ನು ನೋಡುತ್ತಿದ್ದ ಹಾಗೇ, ಅಚ್ಚಣ್ಣಭಟ್ಟರ ತಲೆಯಲ್ಲಿ ತಟಕ್ಕನೆ ಏನೋ ಒಂದು ವಿಚಾರ ಹೊಳೆಯಿತು. ಹಾಗೇ ವೆಂಕಟಗಿರಿ ಜೋಯಿಸರ ಮನೆಯ ಬಳಿ ಹೋಗಿ–

'ವೆಂಕಟಗಿರೀ...'

—ಎಂದು ಕೂಗಿದರು.

ಅವರ ಕೂಗು ಕೇಳಿ ವೆಂಕಟಗಿರಿ ಜೋಯಿಸರು, ಓದುತ್ತಿದ್ದ ಪುಸ್ತಕದಿಂದ ತಲೆ ಎತ್ತಿನೋಡಿ ಅಚ್ಚಣ್ಣಭಟ್ಟರನ್ನು ಕಂಡು, ತಟಕ್ಕನೆ ಎದ್ದು ನಿಂತು–

'ಭಟ್ಟರಿಗೆ ನಮಸ್ಕಾರ ಬನ್ನಿ'.

—ಎಂದರು.

'ಏನೋ ಓದ್ತಾ ಇದ್ದಿ...'

'ನಿನ್ನೆ ದಿನ ಯಾವುದೋ ವಿಷಯ ಯೋಚನೆ ಮಾಡ್ತಾ ಇರೋವಾಗ ಏನೋ ಅನುಮಾನ ಬಂತು. ಅದಕ್ಕೆ ಪರಿಹಾರ ಮಾಡಿಕೊಳ್ಳೋಣಾಂತ, ಕಾಳಿದಾಸನ 'ಉತ್ತರ ಕಾಲಾಮೃತ' ನೋಡ್ತಾ ಇದ್ದೆ.'

'ಹಾಗಾದ್ರೆ...ನನ್ನಿಂದ ನಿನ್ನ ಓದಿಗೆ ವಿಘ್ನವಾಯ್ತೋ, ಏನೋ...'

'ನನ್ನದೇನು ವಿಠ್ಠಲಭಟ್ಟರ ಪುರಾಣ ಇದ್ದ ಹಾಗೆ-ಎಲ್ಲಿಗೆ ಬಿಟ್ಟರೆ ಅಲ್ಲಿಗೆ ಸೈ. ಬನ್ನಿ. ನೀವು ಬರೋದೇ ಬಹಳ ಅಪರೂಪ. ಕೂತುಕೊಳ್ಳಿ.'

—ಎಂದು ಹೇಳಿ ವೆಂಕಟಗಿರಿಜೋಯಿಸರು—

'ಲಲಿತಾ...ಲಲಿತಾ...ಭಟ್ಟರಿಗೆ ಒಂದು ಮಣೆ ತಂದುಕೊಡು'

—ಎಂದು ಒಳಗಿದ್ದ ತಮ್ಮ ಗೃಹಿಣಿಯನ್ನು ಕರೆದು ಹೇಳಿದರು.

'ಮಣೇನೂ ಬೇಡ, ಏನೂ ಬೇಡ, ಇಲ್ಲೇ ಕೂತುಕೋತೀನಿ'

—ಎಂದು, ಹಾಗೇ ನೆಲದ ಮೇಲೆ ಕುಳಿತು-'

'ವೆಂಕಟಗಿರಿ...'

—ಎಂದರು ಅಚ್ಚಣ್ಣಭಟ್ಟರು.

'ಏನು ಭಟ್ಟರೆ?'

'ನನ್ನ ಮನಸ್ಸಿನಲ್ಲಿ ಏನೋ ಒಂದು ಅಂದ್ಕೊಂಡಿದೀನಿ ಅದೇನಾಗುತ್ತೆ ಹೇಳು?'

''ಜ್ಯೋತಿಷ್ಯದಪ್ರಶ್ನೆ ತಾನೇ? ''

''ಹೂ.''

ಅಚ್ಚಣ್ಣಭಟ್ಟರು ಹಾಗನ್ನುತ್ತಿದ್ದ ಹಾಗೇ ವೆಂಕಟಗಿರಿ ಜೋಯಿಸರ ಮುಖ ಗಂಭೀರವಾಯಿತು.

ಅಚ್ಚಣ್ಣಭಟ್ಟರು 'ಹೂ' ಎನ್ನುತ್ತಿದ್ದ ಹಾಗೇ, ವೆಂಕಟಗಿರಿ ಜೋಯಿಸರು, ಆಕಾಶವನ್ನು ನೋಡಿ ಹೊತ್ತು ಊಹಿಸಿ, ವಾರ, ಹೋರೆ, ಮುಹೂರ್ತ, ಪ್ರಶ್ನೆ ಕೇಳಿದಾತ ಮುಖ ಮಾಡಿ ಕುಳಿತ ದಿಕ್ಕು ಎಲ್ಲವನ್ನು ಲೆಕ್ಕಹಾಕಿ —

''ನೀವು ಕೇಳಿದುದು ದೇವತಾ ಸಂಬಂಧವಾದ ಪ್ರಶ್ನೆ.'

—ಎಂದರು.

''ಹೂ,''

''ಆ ಕಾರ್ಯಸುಗಮವಾಗಿ ನೆರವೇರುತ್ತದೋ ಇಲ್ಲವೋ ಎಂಬ ಸಂದೇಹ ಇದೆ ಅಲ್ಲವೆ?''

"ಹೂ".

—ಆತುರಾತುರವಾಗಿ ಹೇಳಿದರು ಅಚ್ಚಣ್ಣಭಟ್ಟರು.

"ಆ ಕೆಲಸಕ್ಕೆ ಮೊದಲು ಸಾಕಷ್ಟು ವಿಘ್ನ ಸೂಚನೆಗಳು ಕಂಡರೂ, ಬಳಿಕ ಎಲ್ಲವೂ ಸುಗಮವಾಗಿ, ಸಕಲರಿಗೂ ತೃಪ್ತಿಕರವಾಗಿ ನಡೆಯುತ್ತದೆ."

ವೆಂಕಟಗಿರಿ ಜೋಯಿಸರು ಆ ಮಾತನ್ನು ಹೇಳುತ್ತಿದ್ದ ಹಾಗೇ, ಅಚ್ಚಣ್ಣ ಭಟ್ಟರಿಗೆ ಸ್ವರ್ಗವೇ ತಮ್ಮ ಹಸ್ತಗತವಾದಷ್ಟು ಸಂತೋಷವಾಯಿತು.

ಆ ಸಂತೋಷದಲ್ಲಿ, ತಾವು ಕುಳಿತಿರುವುದು ಬೀದಿಯ ಬದಿಯ ಕಟ್ಟೆಯ ಮೇಲೆ ಎಂಬುದನ್ನೂ ಮರೆತು ಹರ್ಷ ನಿರ್ಭರರಾಗಿ—

"ವೆಂಕಟಗಿರೀ... ವೆಂಕಟಗಿರೀ... ನೀನು ಹೇಳಿದ್ದು ನಿಜವಾದ್ರೆ ನೀನು ಕೇಳಿದ್ದು ಕೊಡ್ತೀನಿ ಕಣೋ".

—ಎಂದರು ವೆಂಕಟಗಿರಿ ಜೋಯಿಸರನ್ನು ಬಿಗಿಯಾಗಿ ಅಪ್ಪಿ.

ಆ ಮಾತು ಹೇಳುವಾಗ ಅಚ್ಚಣ್ಣಭಟ್ಟರ ಹೃದಯ ಹೂವಿಗಿಂತ ಹಗುರಾಗಿ ಅವರ ಕಣ್ಣುಗಳಿಂದ ಆನಂದಾಶ್ರುಗಳು ಧಾರಾಕಾರವಾಗಿ ಪ್ರವಹಿಸುತ್ತಿದ್ದವು.

೧೫

ಮರುದಿನ ಜಾತ್ರೆಯ ಪೂಜೆಗೆ ದೇವಿಯ ವಿಗ್ರಹವನ್ನು ಅಚ್ಚಣ್ಣಭಟ್ಟರಿಗೆ ಕೊಡುವ ಜವಾಬ್ದಾರಿಯನ್ನು ರಾಜೇಶ್ವರಿಗೆ ಒಪ್ಪಿಸಿ, ಮನೆಯಿಂದ ಹೊರಟ ವೆಂಕಟದಾಸಪ್ಪನವರಿಗೆ, ಎಲ್ಲಿಗೆ ಹೋಗಬೇಕು, ಏನು ಮಾಡಬೇಕು ಎಂಬ ಖಚಿತವಾದ ಯೋಜನೆಯೇನೂ ಇರಲಿಲ್ಲ.

ಅವರ ಮನಸ್ಸಿನಲ್ಲಿದ್ದುದಿಷ್ಟೆ:

ತಾವು ದೇವೀಕೆರೆಯಲ್ಲಿ ಇರಬಾರದು. ಇದ್ದರೆ ಅಲ್ಲಿಯ ಜನ ಮತ್ತೇನಾದರೂ ಹೊಂಚು ಹಾಡಿ, ಬಲವಂತವಾಗಿ ಪೂಜೆ ಮಾಡುವ ಪ್ರಸಂಗ ತರಬಹುದು. ಆದುದರಿಂದ ತಾವು ಅದೊಂದು ದಿನ ದೇವೀಕೆರೆಯಿಂದ ಆದಷ್ಟು ದೂರ ಇರಬಹುದು.

ಇದಕ್ಕಿಂತ ಹೆಚ್ಚಿನ ಬೇರಾವ ಯೋಜನೆಯೂ ಇರಲಿಲ್ಲ.

ಅದಕ್ಕಿಂತ ಬಲವಾಗಿ ಅವರ ಮನದಲ್ಲಿ ಮಿಡಿಯುತ್ತಿದ್ದ ಭಾವನೆ—

"ನನ್ನ ಬಾಳಿನಲ್ಲಂತು ನನ್ನ ಶಕ್ತಿಪರೀಕ್ಷೆ ನಡೆಯುತ್ತಿದೆ. ಈ ಪರೀಕ್ಷೆಯಲ್ಲಿ ನಾನು ಸೋತರೆ, ಅಲ್ಲಿಗೆ ನನ್ನ ಸಕಲ ಸಂಕಲ್ಪಗಳೂ ಸೋತು, ದುರ್ಬಲ ಚಿತ್ತಕ್ಕೆ ತನ್ನ ಆತ್ಮದ ಅಧಿಕಾರ ಒಪ್ಪಿಸಿದಂತಾಗುವುದು. ಜೀವನದಲ್ಲಿ ಮತ್ತೆಂದೂ ನಾನು ತಲೆ ಎತ್ತಿ ನಿಲ್ಲದಂತಾಗುವುದು. ಆದುದರಿಂದ ಬೇಕಾದ ದ್ದಾಗಲಿ–ಈ ಪರೀಕ್ಷೆಯಲ್ಲಿ ನಾನು ಸೋಲಬಾರದು.''

ತಮ್ಮ ಬಾಳಿನಲ್ಲಿ ಸತ್ವಪರೀಕ್ಷೆ ನಡೆಯುತ್ತಿದೆ ಎಂಬ ಭಾವನೆಯೊಂದಿಗೆ, ದೇವಿಯೇ ತಮ್ಮನ್ನು ಪರೀಕ್ಷಿಸುತ್ತಿದ್ದಾರೆ ಎಂಬ ಭಾವನೆ ಹೇಗೋ ಬೆಳೆದು, ಗೆಲ್ಲಲೇಬೇಕೆಂಬ . ಅವರ ಹುರುಪು ಮತ್ತಷ್ಟು ಹುರಿಯಾಗಿತ್ತು.

ಹಿಂದೊಂದು ದಿನ ಸಂಜೆ, ದೇವಿಯ ಕೊಳದ ಬಳಿ ಗಾಯತ್ರೀ ಮಂತ್ರ ಜಪ ಮಾಡುತ್ತಾ ಕುಳಿತಾಗ, ಅವರಿಗೆ ದೇವಿಯೇ ಅಭಯ ನೀಡಿದಂತೆ ಭಾಸವಾಗಿತ್ತು.

ಹಿಂದೆ, ಬಹು ಹಿಂದೆ, ನಾಟಕ ಬರೆಯುವ ಛಲ ಕೊಟ್ಟಂತಾ ಆಕೆಯೇ ಇವರ ಬೆನ್ನು ಕಾಯ್ದಿದ್ದಳು.

ಹೀಗಾಗಿ ವೆಂಕಟದಾಸಪ್ಪನವರಿಗೆ, ದೇವಿ ಸಂಪೂರ್ಣವಾಗಿ ತಮ್ಮ ಪರವಾಗಿದ್ದು, ಹೆಜ್ಜೆಹೆಜ್ಜೆಗೂ ತಮ್ಮ ಬಾಳನ್ನು ಕಾಪಾಡುತ್ತಿದ್ದಾಳೆ ಎಂಬ ಭಾವನೆ ಬೆಳೆದಿತ್ತು.

ಈಗ —

ಅವರನ್ನು ಇಷ್ಟು ದಿನ ರಕ್ಷಿಸುತ್ತಿದ್ದ ಮಹಾಶಕ್ತಿಯೇ ಅವರನ್ನು ಪರೀಕ್ಷಿಸಲು ಹೊರಟಿದ್ದಾಳೆ.

ಈಗ—

ಅವರ ದುರ್ಬಲ ಚಿತ್ತದ ಮೇಲೆ, ಸುತ್ತಮುತ್ತಲಿಂದ ಸಾಹುಕಾರು ಬಗೆಯ ದಾಳಿ ನಡೆಯುತ್ತಿರುವ ಹೊತ್ತಿನಲ್ಲಿ, ವೆಂಕಟದಾಸಪ್ಪನವರಿಗೆ, ದೇವಿಯ ನೆರವು ಅತ್ಯಗತ್ಯವಾಗಿ ಬೇಕಾದ ಹೊತ್ತಿನಲ್ಲೇ—

ಆಕೆಯೂ ಅವರನ್ನು ಕೈಬಿಟ್ಟು, ವಿರುದ್ಧಪಕ್ಷ ಸೇರಿ, ತಮ್ಮ ಚಿತ್ತ ಸ್ಥೈರ್ಯದ ಮೇಲೆ ಲಗ್ಗೆ ಹಾಕುವುದೇ?

ಮುಟ್ಟಿದರೇ ಪುಡಿಪುಡಿಯಾಗುವ ಗಾಜಿನ ಮೇಲೆ, ಕಗ್ಗಲ್ಲು ಕೆರಳಿ ನಿಂತರೆ—

ಹೂವಿನ ವಿರುದ್ಧ ಸಿಡಿಲು ಸೆಣಸಿದರೆ— ?

ಉಂಟೆ? ಈ ಹೊತ್ತಿನಲ್ಲಿ, ತಮ್ಮ ತಾಯಿ, ಗೆಳೆಯರು, ಹಳ್ಳಿ–ಎಲ್ಲರೂ ತಮ್ಮನ್ನು ಕೈಬಿಟ್ಟ ಹೊತ್ತಿನಲ್ಲಿ, ದೇವಿಯೂ ಕೈಬಿಟ್ಟು, ದೂರ ನಿಂತು ಆಟ ನೋಡುವುದೇ?

ಗೆಲ್ಲ ಬಯಸಿದ ತಮ್ಮನ್ನು, ತಾನೇ ನಿಂತು ಸೋಲಿಸಿ, ಪೂಜೆ ಪಡೆಯ ಬೇಕೆಂಬ ಅಪೇಕ್ಷೆಯೇ?

"ಇಷ್ಟೇ ತಾನೇ ನಿನ್ನ ಪ್ರೇಮ, ಇಷ್ಟೇ ತಾನೇ ನಿನ್ನ ಕರುಣೆ! ಆಗಲಿ ನಾನೂ ನೋಡಿಯೇ ಬಿಡುತ್ತೇನೆ. ನನ್ನನ್ನು ಸೋಲಿಸಬೇಕೆಂತಲೇ ನೀನು ಹೊರಟಿದ್ದೀಯ–ಸೋಲಿಸು. ಕೊನೆಯ ಉಸಿರು ಇರುವವರೆಗೂ, ನಾನೂ ಹೋರಾಡುತ್ತೇನೆ."

—ಎಂಬ ಛಲ ಅವರ ಹೃದಯ, ಮನಸ್ಸು, ಬುದ್ಧಿಗಳನ್ನು ಹಬ್ಬಿ ಬೆಳೆದಿತ್ತು.

ಆ ಭಾವನೆಯಲ್ಲೇ ಮನೆಯಿಂದ ಹೊರಟರು. ಹೊರಟಾಗ ಎಲ್ಲಿಗೆ ಹೋಗಬೇಕು ಎಂಬ ನಿಶ್ಚಯವಿಲ್ಲದ್ದರಿಂದ, ಕಾಲು ನಡೆಸಿದತ್ತ ಹೊರಟರು. ವೆಂಕಟದಾಸಪ್ಪ.

ತಮ್ಮ ಕಾಲು 'ನಡೆಸಿದತ್ತ ನಡೆಸಲಿ' ಎಂಬ ನಿಶ್ಚಿಂತೆಯಿಂದ ಹೊರಟ ವೆಂಕಟದಾಸಪ್ಪನವರು, ಅಷ್ಟು ದೂರ ಪಶ್ಚಿಮಾಭಿಮುಖವಾಗಿ, ರಾಜ ಮಾರ್ಗದತ್ತ ಹೋಗುವ ದಾರಿಯಲ್ಲಿ ನಡೆದು, ಬಳಿಕ ಏನೋ ತೋಚಿ, ಅಡ್ಡದಾರಿಯಲ್ಲಿ ತಿರುಗಿ ಉತ್ತರಾಭಿಮುಖವಾಗಿ ನಡೆದರು.

ಅವರ ನೆತ್ತಿಯ ಮೇಲೆ ವೈಶಾಖ ಮಾಸದ ಬಿಸಿಲು ನಿರ್ದಾಕ್ಷಿಣ್ಯವಾಗಿ ಉರಿಯುತ್ತಿತ್ತು.

ಹಗಲು ಹರಿಯುತ್ತಿದ್ದ ಹಾಗೇ, ಉರಿಯಾಗಿ, ಮೈಯಿಂದ ಬೆವರಿನ ಕಪ್ಪವನು ವಸೂಲು ಮಾಡುತ್ತಿದ್ದ, ವೈಶಾಖದ ಬಿಸಿಲು, ಒಂಭತ್ತು ಗಂಟೆಯ ವೇಳೆಗೆ, ಮತ್ತಷ್ಟು ಉಗ್ರವಾಗಿ, ಮೈಗೆ ಬೆಂಕಿಯ ಸ್ನಾನ ಮಾಡಿಸ ಲಾರಂಭಿಸಿತ್ತು.

ಆ ವೇಳೆಗಾಗಲೇ ಗದ್ದೆಗಳಲ್ಲಿ ಕೊಯಿಲು ಮುಗಿದಿದ್ದುದರಿಂದ; ಹದಿನೈದು —ಇಪ್ಪತ್ತು ದಿನದ ಕೆಳಗೆ ಹಸಿರು ಬಂಗಾರವಾಗಿ ಹೊಳೆಯುತ್ತಿದ್ದ ಗದ್ದೆಗಳು ಬರಿದಾಗಿ, ಬರೀ ಕೂಳೆಗಳು ಉಳಿದ ಭೂಮಿ, ಬಿಸಿಲಿನಲ್ಲಿ ಬಿರಿದು, ಕರ್‍ರಗೆ, ವಿಕಾರವಾಗಿತ್ತು. ಅಲ್ಲಲ್ಲಿ, ಬರಿದಾದ ಗದ್ದೆಗಳ ಬದುವಿನಲ್ಲಿ ಬೆಳೆದ ಹೊಂಗೆಯ ಮರಗಳಲ್ಲಿ ಮಾತ್ರ ದಟ್ಟ ಹಸಿರು ಕಂಡು, ಅದರ ನೆರಳು, ಬಿಸಿಲಿನಲ್ಲಿ ನಡೆಯುವ ದೇಹವನ್ನು ಸೂಜಿಗಲ್ಲಿನಂತೆ ಆಕರ್ಷಿಸುತ್ತಿತ್ತು.

ಅಲ್ಲೊಂದು ಇಲ್ಲೊಂದು ಬೇವಿನಮರ, ಹುಣಸೆಯ ಮರಗಳನ್ನು ಬಿಟ್ಟರೆ, ಕಣ್ಣು ಹೋಗುವಷ್ಟು ದೂರವೂ ಹರಡಿದ ಬಯಲಿನಲ್ಲಿ ಮತ್ತೆಲ್ಲೂ ಹಸಿರಾಗಲಿ, ನೆರಳಾಗಲಿ ಇರಲಿಲ್ಲ.

ಆ ಮರಗಳ ನೆರಳಿನಲ್ಲಿ ಕುಳಿತರೂ, ಬೇಸಿಗೆಯ ಬಿಸಿಗಾಳಿ, 'ನಿನಗೆ ಇಲ್ಲೂ ಎಡೆಯಿಲ್ಲ' ಎಂಬಂತೆ ಕಾಡುತ್ತಿತ್ತು.

ಅಂಥ ಬಿಸಿಲಿನಲ್ಲಿ, ಅಡ್ಡದಾರಿಯಲ್ಲಿ, ಹೊಲದ ಬದುಗಳ ಮೇಲೆ ನಡೆದು ಕೊಂಡು ಹೊರಟ ವೆಂಕಟದಾಸಪ್ಪನವರಿಗೆ, ಸ್ವಲ್ಪದೂರ ನಡೆಯುವುದರೊಳಗಾಗಿ

ಕೆಂಡದ ಮೇಲೆ ನಡೆದಷ್ಟು ತಾಪವಾಗಿ ಮೈ ಮುಂದೆ ನಡೆಯಲಾರೆ ಎಂದು ಮುಷ್ಕರ ಹಿಡಿಯಿತು. ಮೈಯಿಂದ, ದೇಹದೊಳಗಿನ ರಕ್ತವೆಲ್ಲವೂ ನೀರಾಗಿ ಹರಿದು ಹೋದಂತೆ ಬೆವರುಬಸಿಯುತ್ತಿತ್ತು.

ಆ ಬಿಸಿಲು ಧಗೆಯನ್ನು ಸಹಿಸಲಾರದೆ, 'ಭಗವಂತಾ, ಎಲ್ಲಿಯಾದರೂ ಅಷ್ಟು ತಣ್ಣನೆಯ ನೀರು ಸಿಕ್ಕಿದರೆ ಸಾಕು. ಒಂದು ಬೊಗಸೆ ನೀರು ಕುಡಿದು, ಮೈಗೂ ಅಷ್ಟು ನೀರು ಎರಚಿಕೊಂಡು, ಜೀವ ಉಳಿಸಿಕೊಳ್ಳಬಹುದು' ಎನಿಸಿತು ವೆಂಕಟದಾಸಪ್ಪನವರಿಗೆ.

ಆದರೆ, ಹೊಲಗೆಲಸಗಳೆಲ್ಲಾ ಮುಗಿದಿದ್ದುದರಿಂದ ಕಾಲುವೆಗಳಲ್ಲೂ ನೀರಿರಲಿಲ್ಲ. ಅಲ್ಲಲ್ಲಿ, ಒಣಗಿದ ಕಾಲುವೆಗಳಲ್ಲಿ ನಿಂತ ಬೊಗಸೆ ನೀರೂ, ಕೆಸರು ರಾಡಿಯಾಗಿ, ಪಾಚಿ ಕಟ್ಟಿ ನಾರುತ್ತಿತ್ತು.

ಆಗಾಗ, ಅಂಥ ಉಪಯೋಗಿಸಲು ಅಸಾಧ್ಯವಾದ ನೀರನ್ನು ಕಂಡು, ಅವರ ಮೈಯ ತಾಪ, ಬಾಯಾರಿಕೆ ಮತ್ತಷ್ಟು ಹೆಚ್ಚುತ್ತಿತ್ತು. ಅಂಥ ಸಮಯ ದಲ್ಲಿ ಅವರಿಗಿದ್ದ ಆಶ್ರಯ–ಮರದ ನೆರಳು ಒಂದೇ.

ಆದರೆ ಹಳ್ಳಿಯನ್ನು ಬಿಟ್ಟು ಸಾಕಷ್ಟು ದೂರ ಬಂದ ಮೇಲೆ ನೆರಳು ಕೊಡುವ ಮರಗಳೂ ಇಲ್ಲವಾದವು. ಮರ ಎನಿಸಿಕೊಂಡು ಇದ್ದದ್ದೆಲ್ಲಾ ಗೇಣುದ್ದದ ಮುಳ್ಳು ಹರಡಿಕೊಂಡ ಹೆಜ್ಜಾಲಿಯ ಮರಗಳು, ಅಂಗೈ ಅಗಲದ ನೆರಳೂ ಇಲ್ಲದೆ, ಬುಡದಲ್ಲಿ, ಉತ್ತರಾಣಿ ಮೊದಲಾದ ಮುಳ್ಳುಕಂಟಿಗಳು ಬೆಳೆದ ಈಚಲು ಮರಗಳು.

ನೆತ್ತಿಯ ಮೇಲೆ ಸುಡುಬಿಸಿಲು, ನೆಲದ ಮೇಲೆ ಬರಿಗಾಲನ್ನು, ಮುಳ್ಳಿನಂತೆ ತಿವಿಯುವ, ಒಣಗಿ, ವಿವರ್ಣವಾದ ಹುಲ್ಲು, ಹತ್ತಿರದಲ್ಲೆಲ್ಲೂ ನೆರಳು ಕಾಣದ, ಬಿಸಿಲಕೋಲಿನಂತೆ ಕಾಣುವ ಈಚಲು ಗರಿಗಳನ್ನು, ಬಿಸಿಲ ಮೃಗದ ಕೋರೆಹಾಡೆ ಗಳಂತೆ ಹೊಳೆಯುವ ಜಾಲಿಯ ಮುಳ್ಳುಗಳನ್ನು ಬೆಳೆಸಿಕೊಂಡ ಬಯಲು, ಇದೆಲ್ಲವನ್ನೂ ವ್ಯಾಪಿಸಿದಂತೆ, ಆಗಾಗ ಸಣ್ಣ ಧೂಳು ಕೆದರುತ್ತಾ ಬೀಸುವ ಬೇಸಿಗೆಯ ಬಿಸಿಗಾಳಿ—

ಈ ವಾತಾವರಣದಲ್ಲಿ, ಬಿಸಿಲು ಕರಗಿ ನೀರಾಗಿ ಥಳಥಳಿಸುತ್ತಿತ್ತು–ಅಷ್ಟು ದೂರಕ್ಕೆ.

ದೂರದಲ್ಲಿ ತೆಳುನೀಲಿಯಾಗಿ ಕಾಣುತ್ತಿದ್ದ ಗುಡ್ಡಗಳೂ ಬಿಸಿಲು ಸರ್ಪದ ಹೆಡೆಗಳಂತಿದ್ದವು.

ಇಂಥ ಸಮಯದಲ್ಲಿ, ಯಾವಾಗಲಾದರೊಮ್ಮೆ, ಸಣ್ಣ ಮೋಡದ ತುಂಡೊಂದು, ಉರಿಯುವ, ಸೂರ್ಯನಿಗೆ ಅಡ್ಡವಾದರೆ, ಆ ತುಂಡು ಮೋಡವೇ ದೈವೀಕರುಣೆಯ ಅವತಾರವಾದಂತೆ ಕಂಡು, ಅದಕ್ಕೆ ಕೈಮುಗಿಯಬೇಕೆಂ ಎನಿಸುತ್ತಿತ್ತು, ವೆಂಕಟದಾಸಪ್ಪನವರಿಗೆ.

ಆಕಾಶದ ವಿಶಾಲ ಬೋಗುಣಿಯಲ್ಲಿ, ಉರಿಗೆಂಡವನ್ನೇ ಕರಗಿಸಿ, ದ್ರಾವಕ ಮಾಡಿ ಮೈಮೇಲೆ ಸುರಿದಂಥ ಬಿಸಿಲು, ಮೈಗೆ ಒಣ ಮೆಣಸಿನ ಪುಡಿ ಯನ್ನು ಉಜ್ಜಿದಂಥ ದಗೆ—ಇದಕ್ಕೆ ಕೊನೆಯೇ ಇಲ್ಲವೇನೋ ಎಂದು, ಬಳಲಿ ನಿಟ್ಟುಸಿರಿಡುವ ವೇಳೆಗೆ, ಅಷ್ಟು ದೂರದಲ್ಲಿ, ಹಳ್ಳದ ನೀರಿನ ಹರಿಯುವ ಸದ್ದು ಕೇಳಿ, ವೆಂಕಟದಾಸಪ್ಪನವರಿಗೆ, ಸ್ವರ್ಗದ ಗಂಗೆಯೇ ಪ್ರತ್ಯಕ್ಷವಾದಷ್ಟು ಸಂತೋಷವಾಯಿತು.

ಆ ನೀರಿನ ಸದ್ದಿನತ್ತ ಓಡಿದರು.

ಆ ಹಳ್ಳ ನಾಯಕನಹಟ್ಟಿಯ ಬಳಿ ಹುಟ್ಟಿ, ದೇವೀಕೆರೆಗೆ ನಾಲ್ಕೈದು ಮೈಲಿ ದೂರದಲ್ಲಿ ಹರಿದು, ಮುಂದೆ ಸಾಗುವ ದೊಡ್ಡ ಹಳ್ಳ. ಮಳೆಗಾಲದಲ್ಲಿ ಆ ಹಳ್ಳ, ನೀರಿನಿಂದ ತುಂಬಿ, ನದಿಯಷ್ಟು ವಿಶಾಲವಾಗಿ ಹರಿಯುತ್ತಿದ್ದುದ ರಿಂದ, ಆ ಸೀಮೆಯ ಜನ ಅದನ್ನು ಹಳ್ಳವೆಂದು ಕರೆಯದೆ, 'ತೊರೆ' ಎಂದೇ ಕರೆಯುತ್ತಿದ್ದರು.

ಮಳೆಗಾಲದಲ್ಲಿ ಜನವಾಗಲಿ, ಗಾಡಿಗಳಾಗಲಿ, ದಾಟಲು ಅಸಾಧ್ಯ ವಾದಷ್ಟು ನೀರಿನಿಂದ, ಸೆಳೆತದಿಂದ ಹರಿಯುತ್ತಿದ್ದ ಹಳ್ಳ, ಬೇಸಿಗೆಯಲ್ಲಿ, ಬಹು ಕೃಶವಾಗಿ, ಅಲ್ಲಲ್ಲಿ, ನಾಲ್ಕಾರು ಸೀಳುಗಳಲ್ಲಿ ಮಾತ್ರ ತೆಳ್ಳಗೆ ನೀರು ಹರಿಯುತ್ತಿದ್ದು, ಇಬ್ಬದಿಯ ನೀರು ಕೊರೆದ ದಂಡೆಗಳ ಸಾಕ್ಷಿ ಇರದಿದ್ದರೆ, ಅದು ಅಷ್ಟು ದೊಡ್ಡ ಹಳ್ಳವೆಂದು ಯಾರೂ ಹೇಳುವುದಕ್ಕೆ ಸಾಧ್ಯವಿರಲಿಲ್ಲ.

ಬಹು ವಿಶಾಲವಾದ ಹಳ್ಳದ ಪಾತ್ರದಲ್ಲಿ ನೂರಾರು ಈಚಲ ಮರಗಳು, ದಟ್ಟವಾಗಿ ಬೆಳೆದಿದ್ದು, ನೀರು ಆ ಮರದ ಬುಡಗಳನ್ನು ಕೊರೆದುಕೊಂಡು ಹರಿಯುತ್ತಿತ್ತು. ಎಂತಲೇ ಹಳ್ಳದಲ್ಲಿ ಸಾಕಷ್ಟು ನೀರು ಇಲ್ಲದಿದ್ದರೂ, ನೀರಿನ

ಸದ್ದು ಮಾತ್ರ ಅಷ್ಟು ದೂರಕ್ಕೂ ಕೇಳುತ್ತಿತ್ತು.

ನೀರಿನ ಸದ್ದು ಕೇಳಿ, ವೇಗವಾಗಿ ಹಳ್ಳದ ದಂಡೆಗೆ ಬಂದ ವೆಂಕಟದಾಸಪ್ಪನವರಿಗೆ, ಹಳ್ಳದ ಕೊರಕಲನ್ನು ಇಳಿದಾಗ, ಹಳ್ಳದ ಇಳಿಜಾರಾದ ದಂಡೆಯ ಮೇಲೆ, ಹೊಂಗೆಯ ಮರವೊಂದು ನೀರಿನತ್ತ ರೆಂಬೆಗಳನ್ನು ಹಾಯಿಸಿ ಬೆಳೆದಿರುವುದನ್ನು ಕಂಡು, ಸ್ವರ್ಗವನ್ನೇ ಕಂಡಷ್ಟು ಸಂತೋಷವಾಯಿತು. ಬಹುಕಾಲ ಅಗಲಿದ ತಾಯಿಯ ಬಳಿಗೆ ಧಾವಿಸುವ ಹಸುವಿನ ಕರುವಿನಂತೆ ನೀರ ಬಳಿಗೆ ಓಡಿದರು.

ದಂಡೆಯ ಪಕ್ಕದಲ್ಲಿ ಹರಿಯುತ್ತಿದ್ದ ನೀರಿನ ಸೀಳು, ಮೊಳಕಾಲು ಮುಳುಗುವಷ್ಟು ಆಳವಾಗಿತ್ತು. ಅದರ ಬಳಿಯಲ್ಲೇ ನಾಲ್ಕಾರು ಬಂಡೆಗಳಿದ್ದುದರಿಂದ, ಆ ಬಂಡೆಗಳನ್ನು ತಾಗಿಕೊಂಡು ಹೋಗುವ ನೀರು, ಬೆಳ್ಳಗೆ ನೊರೆಯಾಗಿ, ಸಳಸಳ ಸದ್ದು ಮಾಡುತ್ತಿತ್ತು.

ಆ ನೀರ ಬಳಿ ಹೋಗಿ, ಹೊಂಗೆಯ ಮರದ ನೆರಳಿನಲ್ಲಿ ಕುಳಿತು, ಬಿಸಿಲಿನಲ್ಲಿ ನಡೆನಡೆದು ಬೆಂದುಹೋದ ಕಾಲನ್ನು, ತಳದ ಮರಳು ಕಾಣುವಷ್ಟು ಶುಭ್ರವಾಗಿ, ತಣ್ಣಗಿದ್ದ ನೀರಿನಲ್ಲಿ ಇಳಿಬಿಟ್ಟರು.

ಬೇಸಿಗೆಯ ಬಿಸಿಲಿನಲ್ಲಿ ಆ ಅಲ್ಪ ಸುಖವೂ ರಾಜಭೋಗದಷ್ಟು ಹಿತವಾಗಿತ್ತು. ಪಾದಗಳು ಪಡೆದ ಆ ಸುಖವನ್ನು ಕಂಡು ಕರುಬಿದ ಮೈ ತನಗೂ ಆ ಸುಖ ಬೇಕು ಎಂದಿತು.

ವೆಂಕಟದಾಸಪ್ಪನವರು ಸುತ್ತ ಮುತ್ತ ಕಣ್ಣಾಡಿಸಿದರು. ಜನರಾರೂ ಕಾಣಲಿಲ್ಲ.

ಎಂತಲೇ ನಿರ್ಭಯವಾಗಿ, ಹೆಗಲ ಮೇಲಿನ ಉತ್ತರೀಯ, ಉಟ್ಟ ಪಂಚೆಗಳನ್ನು ತೆಗೆದಿಟ್ಟು, ಕೌಪೀನಧಾರಿಗಳಾಗಿ, ನೀರಿಗಿಳಿದು, ಹಾಗೆಯೇ ನೀರಿನಲ್ಲಿ ಮಲಗಿಕೊಂಡರು.

ತಾಯ ತೋಳಪ್ಪುಗೆಯಷ್ಟು ಹಿತವಾಗಿತ್ತು ಹಳ್ಳದ ತಣ್ಣನೆಯ ನೀರು. ತೆಳ್ಳಗೆ ಹರಿವ ನೀರಿನ ಸಣ್ಣ ಅಲೆಗಳು ಮೈಯನ್ನು ಮೃದುವಾಗಿ ತಾಡಿಸಿದಾಗ ಅವರ ಮೈಗೆ ಏನೋ ಒಂದು ಅನಿರ್ವಚನೀಯವಾದ ಆನಂದವಾಗಿ, ಯಾವುದೋ ಪ್ರತ್ಯೇಕ ಪ್ರಪಂಚದಲ್ಲಿದ್ದಂತೆ ತೋರಿತು. ಎಷ್ಟೋ ಹೊತ್ತು

ಹಾಗೇ ಮಲಗಿದ್ದು, ಮೈ ಸಾಕಷ್ಟು ತಂಪಾದ ಬಳಿಕ ದಡಕ್ಕೆ ಬಂದು, ಉತ್ತರೀಯದಿಂದ ಮೈ ಒರೆಸಿಕೊಂಡು, ಪಂಚೆಯನ್ನುಟ್ಟು, ಹೊಂಗೆಯಮರದ ಬೊಡ್ಡೆಗೆ ಮೈಯನ್ನು ಆನಿಸಿ, ಕಾಲು ಚಾಚಿದರು.

ಮರದ ತಣ್ಣೆಳಲು, ನೀರ ಮೇಲೆ ಬೀಸಿ ತಂಪಾಗಿ ಬಂದ ಗಾಳಿ, ಮರದ ಎಲೆಗಳ ಮರೆಯಲ್ಲಿ, ಎಲ್ಲೋ ಕಣ್ಣಿಗೆ ಕಾಣದಂತೆ ಕುಳಿತು ಕುಕಿಲುತ್ತಿದ್ದ ಹೆಸರರಿಯದ ಹಕ್ಕಿ, ಬಳಿಯ ಬಿಸಲಿನಲ್ಲಿ, ಉದ್ದವಾದ, ಗಳಿಗೆಗೊಂದು ಬಣ್ಣ ವಾಗಿ ಹೊಳೆಯುವ ಗಾಜಿನ ರೆಕ್ಕೆಗಳನ್ನು ಅಗಲಿಸಿ ಹಾರುತ್ತಿದ್ದ ಈಚಲು ಹುಳು (Dragon fly), ಹಳ್ಳದ ತಿಳಿನೀರಿನಾಳದ ಮರಳ ಶಯ್ಯೆಯ ಮೇಲೆ, ತಮ್ಮ ಮೇಲೆ ಬಿದ್ದ ಬಿಸಿಲನ್ನು ಪ್ರತಿಫಲಿಸಿ ಹೊಳೆಯುತ್ತಾ ಆಡುತ್ತಿದ್ದ ಸಣ್ಣ ಬೆಳ್ಳಿ ಮೀನುಗಳು, ಗರಿಯಲುಗಿಸದೆ, ಅಚಲವಾಗಿ ನಿಂತ ಈಚಲು ಮರಗಳು—

ಅದೆಲ್ಲವನ್ನೂ ಕಂಡು ವೆಂಕಟದಾಸಪ್ಪನವರಿಗೆ ತಾವು ಯಾವುದೋ ಸ್ವಪ್ನಲೋಕದಲ್ಲಿದ್ದಂತೆ ತೋರಿತು.

ಮೈ ತಂಪಾಗಿತ್ತು, ಮನಸ್ಸು ಹಗುರಾಗಿತ್ತು. ಹಾಗೇ ಕಣ್ಣರೆಪ್ಪೆಗಳು ಭಾರವಾಗಿ ಮುಚ್ಚಿಕೊಂಡವು.

ಹಾಗೇ ಇಹಲೋಕದ ಪ್ರಜ್ಞೆ ಮರೆತುಹೋಯಿತು.

* * * *

"ಅದಾವುದೋ ಗಹನವಾದ ಅರಣ್ಯ. ಆ ಅಪರಿಚಿತ ವನಪ್ರಾಂತದಲ್ಲಿ ವೆಂಕಟದಾಸಪ್ಪನವರು ಎತ್ತಲೋ ಅವಸರವಾಗಿ ಪಯಣ ಬೆಳಸಿದಾರೆ. ಆದಷ್ಟು ಬೇಗ ಆ ಕಾಡನ್ನು ದಾಟಿ, ದೂರ, ಬಹುದೂರ ಹೋಗಬೇಕು ಎಂಬ ಬಯಕೆ ಅವರ ಮನದಲ್ಲಿ ಮಿಡಿಯುತ್ತಿದೆ. ಆದರೆ ಏಕೋ ಅವರ ಕಾಲುಗಳು, ಅವರು ಬಯಸಿದಷ್ಟು ವೇಗವಾಗಿ ನಡೆಯಲಾಗದೆ, ಸೋಲುತ್ತಿವೆ.

"ಅವರ ಕಾಲುಗಳು ಸೋಲುವುದೇನು, ಅವರ ಇಬ್ಬದಿಯಲ್ಲೂ, ನಡೆಯುವ ಅವರ ಮೈಗೆ ಹತ್ತಿಕೊಂಡಷ್ಟು ಒತ್ತಾಗಿ ಬೆಳೆದ ಮರ, ಬಳ್ಳಿಗಳೂ ಹೆಜ್ಜೆಹೆಜ್ಜೆಗೂ ಅವರನ್ನು 'ನಿಲ್ಲಿ,' ಎಂದು ಹೇಳುವಂತೆ ತಡೆಯುತ್ತಿವೆ.

"ಆದರೂ ವೆಂಕಟದಾಸಪ್ಪನವರು ಆದಷ್ಟು ಬೇಗ ನಡೆಯುತ್ತಿದಾರೆ. ಆ ಉದ್ದೇಶದಿಂದಲೇ ತಮ್ಮ ದಾರಿಗೆ ಇದಿರಾದ ಬಳ್ಳಿಗಳ ಸುಳಿಗೊಂಬೆಗಳನ್ನು, ಮರದ ಶಾಖೆಗಳನ್ನು, ಎರಡೂ ಕೈಯಲ್ಲಿ ಕಿತ್ತು ಪಕ್ಕಕ್ಕೆ ತಳ್ಳುತ್ತಾ ಹೋಗು

ತ್ತಿದ್ದಾರೆ. ತಮ್ಮ ಮಾರ್ಗಕ್ರಮಣಕ್ಕೆ ಇಂಥ ಅಡ್ಡಿಗಳು ಹೆಚ್ಚಿದಷ್ಟೂ, ಅವರಲ್ಲಿ ಅಸಹನೆ ಹೆಚ್ಚುತ್ತಿದೆ.

"ಗಳಿಗೆ ಗಳಿಗೆಗೆ ಆ ಅಸಹನೆ ಬೆಳೆದು, ಆ ಅಸಹನೆ ಸಿಟ್ಟಾಗಿ ಮಾರ್ಪಟ್ಟು 'ಇನ್ನೇನಾದರೂ ಅಡ್ಡಿ ಬಂದರೆ, ಪಕ್ಕಕ್ಕೆ ಸರಿಸುವುದಿರಲಿ, ಮುರಿದು ಬಿಟ್ಟೇ ಮುಂದೆ ಹೋಗುತ್ತೇನೆ ಗಿಡ, ಬಳ್ಳಿಗಳನ್ನು ಸೋಯಿಸು ವುದೇಕೆ ಎಂದಿದ್ದರೆ—ಇದು ಹೀಗೇ?' ಎಂದು ತಮಗೆ ತಾವೇ ಹೇಳಿ ಕೊಳ್ಳುತ್ತಾ, ಆದಷ್ಟು ವೇಗವಾಗಿ ನಡೆಯುತ್ತಿದ್ದಾರೆ.

"ಇನ್ನೇನು ಅಷ್ಟು ದೂರ ನಡೆದರೆ ಸಾಕು—ಕಾಡು ಕಳೆಯಿತು. ಅಗೋ— ಅದೇ ಕಾಡಿನ ಗಡಿ ಎನಿಸಿ, ಆರಂಭ ಮಾಡಿದ ಕೆಲಸ ಮುಗಿಯು ಬಂದಾಗಿನ ಉತ್ಸಾಹದಲ್ಲಿ, ವೆಂಕಟದಾಸಪ್ಪನವರು ತಮ್ಮ ನಡಿಗೆಯನ್ನು ಚುರುಕು ಮಾಡಿದರು.

"ಆದರೆ ಆ ಹೊತ್ತಿನಲ್ಲಿ, ಆ ಕಾಡಿನ ನಡುವೆ ಅವರು ನಡೆಯುತ್ತಿದ್ದ ಕಾಲು ಜಾಡು ಮುಗಿದುಹೋಯಿತು. ಮುಂದೆ ಜಾಡು ಕಾಣಿಸುತ್ತಿಲ್ಲ. ಹೇಗೋ ಕಾಡು ಕಳೆಯಿತು ಎಂದು ನುಗ್ಗಬೇಕು—

"—ಆದರೆ ಅವರಿಗೆ ಅಡ್ಡವಾಗಿ, ಕಣ್ಣು ಕಾಣುವಷ್ಟು ದೂರಕ್ಕೂ ನೆಲದ ಮೇಲೆ ಎಂಥದೋ ಗಿಡದಲ್ಲಿ ಬಹು ಸುಂದರವಾದ ಹೂವುಗಳು ಅರಳಿವೆ.

"ಆ ಹೂವುಗಳು—

"ನಿಜ—ತಮ್ಮ ಜೀವನದಲ್ಲಿ ವೆಂಕಟದಾಸಪ್ಪನವರು ಎಂದೂ ಅಷ್ಟು ಸುಂದರವಾದ ಹೂವುಗಳನ್ನು ನೋಡಿರಲಿಲ್ಲ.

"ಆ ಹೂವುಗಳು ಬೆಳೆದ ನೆಲ— ಆ ನೆಲದ ಮೇಲೆ ಹೂವಲ್ಲ, ನಕ್ಷತ್ರ ಗಳನ್ನು ಚೆಲ್ಲಿದಂತಿದೆ. ಆ ಹೂವುಗಳೋ—ಒಂದೊಂದೂ ಒಂದೊಂದು ಬಣ್ಣ, ಮುಟ್ಟಿದರೂ ಮಾಸುವಷ್ಟು ಕೋಮಲ. ಆ ಸುತ್ತಲ ಗಾಳಿ ಆ ಸುಮಗಂಧ ದಿಂದ ಭಾರವಾಗಿದೆ.

"ಆ ಹೂವುಗಳನ್ನು ನೋಡಿ ಏಕೋ ಮುಂದೆ ನಡೆಯಲು ಆಗದೆ, ವೆಂಕಟದಾಸಪ್ಪನವರು ಅಲ್ಲೇ ಕುಳಿತು, ಆ ಹೂವುಗಳನ್ನು ನೇವರಿಸಿ—

"'ದಿನವೂ ಪೂಜೆಗೆ ಇಂಥ ಹೂವುಗಳು ಸಿಕ್ಕರೆ ಎಷ್ಟು ಸೊಗಸು.'

"—ಎಂದು ತಮಗೆ ತಾವೇ ಹೇಳಿಕೊಂಡರು."

"ಅವಕ್ಕೇನಂತೆ–ಇದಕ್ಕಿಂತಲೂ ಸುಂದರವಾದ ಹೂವುಗಳಿವೆ."

—ಯಾವುದೋ ಹೆಣ್ಣು ಧ್ವನಿ, ಅವರ ಕಿವಿಯಲ್ಲಿ ಉಸುರುವಷ್ಟು ಮೃದುವಾಗಿ ಹೇಳಿತು.

"ಆ ಧ್ವನಿಯನ್ನು ಕೇಳಿ ವೆಂಕಟದಾಸಪ್ಪನವರು ಬಹು ಚಕಿತರಾಗಿ, 'ಈ ನಿರ್ಜನಾರಣ್ಯದಲ್ಲಿ ಮನುಷ್ಯನ ಧ್ವನಿ ಎಲ್ಲಿಯದು? ಎಂದುಕೊಂಡು ಸುತ್ತಲೂ ನೋಡಿದರು.

"ಅವರ ಕಣ್ಣುಗಳಿಗೆ ಯಾರೂ ಕಾಣಿಸಲಿಲ್ಲ. ಆದರೆ 'ಆ ಧ್ವನಿ ಯಾರದು' ಎಂದು ತಿರುಗಿದಾಗ, ಅವರ ಕಣ್ಣಿಗೆ, ಪುನಃ ತಾವು ಬಿಟ್ಟುಬಂದ ಕಾಡು ಕಾಣಿಸಿತು.

ನೋಡಿವರು —ನೋಡಿದವರು ಹಾಗೆಯೇ ನೋಡುತ್ತಾ ನಿಂತು ಬಿಟ್ಟರು—

"ಅದು ಕಾಡೇ–ಅಲ್ಲ, ಕಿನ್ನರಲೋಕ!

ಆ ಕಾಡಿನಲ್ಲಿ ಬೆಳೆದ ಮರಗಳ ಕಾಂಡ, ಶಾಖೆಗಳೆಲ್ಲಾ ಬೆಳ್ಳಿ, ಬಂಗಾರ ಎಲೆಗಳು ಹೊಳೆಯುವ ಪಚ್ಚೆ; ಆ ಮರ, ಬಳ್ಳಿಗಳಲ್ಲಿ ಅರಳಿದ ಹೂವುಗಳು—

"ಕೆಂಪಾಗಿ, ಹಳದಿಯಾಗಿ, ನೀಲವಾಗಿ, ಬಿಳಿದಾಗಿ– ಜೊಂಪೆಜೊಂಪೆ ಯಾಗಿ ತೂಗಿವೆ–ಅನರ್ಘ್ಯ ರತ್ನ ರಾಶಿಯೇ ಹೂವಾಗಿ ಅರಳಿದಂತೆ.

"ಒಂದೊಂದು ಹೂವೂ ಸೂರ್ಯನ ಮರಿಗಳಂತೆ ಹೊಳೆಯುತ್ತಿವೆ. ಆ ಹೂವುಗಳ ಹೊಳಪು ಕಾನನದಲ್ಲಿ ವಿಚಿತ್ರ ಕಾಂತಿಯನ್ನು ಹಬ್ಬಿಸಿದ್ದರೆ, ಅವುಗಳ; ಅಲೌಕಿಕ ಪರಿಮಳ, ಕಾಡಿನಲ್ಲೆಲ್ಲಾ ಇಬ್ಬನಿಯಂತೆ ದಟ್ಟವಾಗಿ ಕವಿದಿದೆ.

"ಕಾಡಿನಲ್ಲಿ, ಬಣ್ಣ ಬಣ್ಣದ ಹೊಳಪು ಮೈಯ ಹಕ್ಕಿಗಳು, ಮಧುರವಾಗಿ ಉಲಿಯುತ್ತಾ, ರೆಂಬೆಯಿಂದ ರೆಂಬೆಗೆ, ಬಣ್ಣದ ಹನಿ ತುಳುಕುವಂತೆ ಚಿಮ್ಮುತ್ತಿವೆ.

"ಹಾಗೆ, ಹಕ್ಕಿ ತಾನು ಕುಳಿತ ರೆಂಬೆಯಿಂದ ಹಾರಿ ಮತ್ತೊಂದು ರೆಂಬೆಯ ಮೇಲೆ ಕುಳಿತಾಗ, ಅದರ ಅಲುಗಾಟಕ್ಕೆ ಆ ಕೊಂಬೆಗಳಿಂದ ಹೂವು ಗಳು ಉದುರುತ್ತವೆ—ರಾಸಿ ರಾಸಿ ನಕ್ಷತ್ರಗಳು ನೆಲಕ್ಕೆ ಸುರಿದ ಹಾಗೆ.

"ಓ ಎಂಥ ಕಾಡು! ಎಂಥ ಮರ! ಎಂಥ ಹೂವು! ಎಂಥ ಹಕ್ಕಿ! ಎಂಥ ಪರಿಮಳ!

"ಅದನ್ನು ನೋಡಿ ವಿಸ್ಮಯಮೂಕರಾಗಿ ನಿಂತು ಬಿಟ್ಟರು ವೆಂಕಟ ದಾಸಪ್ಪ.

" 'ಈಗ ಹೇಳು—ಆ ಹೂವುಗಳಿಗಿಂತ ಈ ಹೂವುಗಳು ಚೆನ್ನಾಗಿಲ್ಲವೇ ಪೂಜೆಗೆ?'

—ಮತ್ತೆ ಅದೇ ಮೃದು ಸ್ತ್ರೀ ಧ್ವನಿ ಕೇಳಿತು, ಮೊದಲಿನಂತೆಯೇ ಅಗೋಚರವಾಗಿ.

"ಹೂ".

"—ವೆಂಕಟದಾಸಪ್ಪನವರು ಉತ್ತರವಿತ್ತರು."

"ಅದಕ್ಕೇ ಮತ್ತೆ– ನಾನು ನಿನಗೆ ಈ ಕಾಡು ಬಿಟ್ಟು ಹೋಗಬೇಡ— ಇಲ್ಲೇ ಇದ್ದು ಪೂಜೆ ಮಾಡು ಎಂದದ್ದು. ಆದರೆ ನೀನೆಲ್ಲಿ ನನ್ನ ಮಾತು ಕೇಳುತ್ತೀಯ? ನಿನ್ನ ಹಟವೇ ನಿನಗೆ."

"—ಆ ಮೃದು ಮಂಜುಲವಾಗಿ ನಕ್ಕು ಹೇಳಿತು ಅಗೋಚರ ಸ್ತ್ರೀ ಧ್ವನಿ."

" ಆ ಮಾತನ್ನು ಕೇಳುತ್ತಿದ್ದ ಹಾಗೇ ವೆಂಕಟದಾಸಪ್ಪನವರ ಮೈ ತಟಕ್ಕನೆ ನಿಮಿರಿತು.

" 'ಆಹಾ! ಅಂತೂ ಇದೆಲ್ಲಾ ನನ್ನನ್ನು ಇಲ್ಲಿ ನಿಲ್ಲಿಸಿಕೊಳ್ಳಲಿಕ್ಕೆ ಮಾಡಿದ ಮಾಯೆ ಅಲ್ಲವೇ? ಆದರೆ ನನ್ನೆದಿರು ನಿನ್ನ ಈ ಆಟವೆಲ್ಲಾ ನಡೆಯುವುದಿಲ್ಲ. ಹೀಗೆ ಮಾಡಿ ತಡೆಯುತ್ತೀಯಾ ಇಗೋ ಹೊರಟೆ'.

—ಎಂದು ವೆಂಕಟದಾಸಪ್ಪನವರು, ತಟಕ್ಕನೆ ತಿರುಗಿ ಹೊರಡಲು ಸಿದ್ಧವಾದರು.

"ಆದರೆ ಅವರ ಕಣ್ಣೆದಿರು, ಮೈಲಿಮೈಲಿಉದ್ದ. ಮುಟ್ಟಿದರೂ ಮಾಸು ವಷ್ಟು ಕೋಮಲವಾದ ಹೂವುಗಳು ಬೆಳೆದಿದ್ದವು. ಅದನ್ನು ಕಂಡು ಆ ಹೂವು ಗಳನ್ನು ತುಳಿಯದೆ, ಆ ಕಾಡನ್ನು ದಾಟಲು ಎಲ್ಲಿಯಾದರೂ ದಾರಿ ಇದೆ ಯೇನೋ ಎಂದು ವೆಂಕಟದಾಸಪ್ಪನವರು ಸುತ್ತಲೂ ಕಣ್ಣಾಡಿಸಿ ನೋಡಿದರು.

"ಆದರೆ ಎಲ್ಲೂ ದಾರಿ ಕಾಣಲಿಲ್ಲ. ಸೂಜಿ ಊರಲೂ ಎಡೆಯಿಲ್ಲದಷ್ಟು ಒತ್ತಾಗಿ ಬೆಳೆದಿದ್ದವು ಹೂವುಗಳು. ಹೂವುಗಳ ಕಡಲೇ ಹಬ್ಬಿತ್ತು ಅವರ ಇದಿರು,

"ಹಾಗಾಗಿ ಹೋಗಬೇಕು ಎಂದರೆ– ಆ ಹೂವುಗಳನ್ನು ತುಳಿದೇ ಹೋಗಬೇಕು. ಇಲ್ಲವೆಂದರೆ ಇದ್ದಲ್ಲೇ ನಿಲ್ಲಬೇಕು.

"ಏನು ಮಾಡುವುದು. ಹಸುಗೂಸುಗಳಂತಿರುವ, ಈ ಕೋಮಲ ಕುಸುಮಗಳನ್ನು ಕಾಲಲ್ಲಿ ತುಳಿಯುವುದು ಹೇಗೆ.?

—ಎಂದು ಯೋಚಿಸುತ್ತಾ ನಿಂತರು ವೆಂಕಟದಾಸಪ್ಪ.

ಅವರು ಹಾಗೆ ನಿಂತುದನ್ನು ಕಂಡು, ಅವರ ಬೆನ್ನ ಹಿಂದೆ ಯಾರೋ ಕಿಲಕಿಲ ನಕ್ಕರು.

ಹಾಗೆ ನಕ್ಕದ್ದು–ಅದೂ ಆ ಹೆಂಗಸೇ!

"ಹಾಗೋ–ಆ ಕಾಡಿನ ಹಾಗೇ, ಈ ಹೂವೂ ನಿನ್ನ ಮೋಸದ ಸೃಷ್ಟಿಯೇ ಎನ್ನು. ಯಾರನ್ನೂ ನೋಯಿಸಬಾರದು ಎನ್ನುವ ಬ್ರಾಹ್ಮಣ ನಾನು. ಅಂಥ ನಾನು ಈ ಹೂವು ತುಳಿದು ಹೋಗಲಾರೆ ಎಂದು ಭಾವಿಸಿ, ಈ ಪುಷ್ಪ ಶೃಂಖಲೆಯನ್ನು ಬಿಗಿದು, ನನ್ನನ್ನು ನಿನ್ನ ಬಂದಿಯಾಗಿ ಮಾಡಿಕೊಳ್ಳಬಯಸು ತ್ತೀಯಾ? ಹಾಗೋ–ಹೀಗೋ– ಅಂತೂ ನನ್ನ ವ್ರತವನ್ನು ಕೆಡಿಸಬೇಕೆಂದೇ ತಾನೇ ನಿನ್ನ ಸಂಕಲ್ಪ? ಆಗಲಿ–ನನ್ನ ವ್ರತ ಕೆಟ್ಟರೂ ಚಿಂತೆಯಿಲ್ಲ. ನಿನ್ನ ಈ ಹಟವನ್ನು ಮಾತ್ರ ನಡೆಸುವುದಿಲ್ಲ. ಏನಾಗುತ್ತದೋ ಆಗೇ ಹೋಗಲಿ.

—ಎಂದು ಬಿರುಸಾಗಿ ಹೇಳಿದರು, ವೆಂಕಟದಾಸಪ್ಪ.

ಅವರು ಹಾಗೇ ಹೇಳುತ್ತಿದ್ದ ಹಾಗೇ ಆ ಅಗೋಚರ ಸ್ತ್ರೀ ನಿಟ್ಟುಸಿರಿಟ್ಟು—

"ಸರಿ–ನಿನ್ನಿಷ್ಟ." —ಎಂದಳು.

'ಅಷ್ಟಲ್ಲದೆ ಏನು?'

—ಎಂದು ಚಂಡಿತನದ ಧ್ವನಿಯಲ್ಲಿ ಹೇಳಿ, ವೆಂಕಟದಾಸಪ್ಪನವರು ಮುಂದೆ ನಡೆಯಲು ಯತ್ನಿಸಿ, ಆ ಹೂವುಗಳ ಮೇಲೆಯೇ ಕಾಲಿಟ್ಟರು.

"ಕಾಲಿಟ್ಟರು–ಆದರೆ ಇನ್ನೂ ಕಾಲನ್ನು ಒಮ್ಮೆಯೂ ಊರಿರಲಿಲ್ಲ—

"ಇದ್ದಕ್ಕಿದ್ದಂತೆಯೇ ಹೃದಯವಿದ್ರಾವಕ ಆರ್ತಧ್ವನಿ ಅವರ ಸುತ್ತ ಮುತ್ತಲೂ ಹಬ್ಬಿತು. ಅವರ ಕಾಲು ಸೋಕಿದ ಹೂವುಗಳು ಉರಿಸೋಕಿದಂತೆ ಬಾಡಿ ಮುದುಡಿಕೊಂಡವು".

"ತಟಕ್ಕನೆ ಮುಂದಿಡಲು ಎತ್ತಿದ ಕಾಲನ್ನು ಹಿಂದಕ್ಕೆ ಇಟ್ಟು, ತಿರುಗಿ ಬೆನ್ನಬದಿಯ ಕಾಡಿನತ್ತ ನೋಡಿದರು.

"ಹತ್ತಾರು ಚಂದ್ರರು ಮೂಡಿ ಹೊಳೆಯುತ್ತಿದ್ದಂತಿದ್ದ ಕಾಡಿನಲ್ಲಿ, ದುಃಖವೇ ಕತ್ತಲಾಗಿ ಆವರಿಸಿದಂಥ ಮಬ್ಬು ಕವಿದಿತ್ತು. ಥಳಥಳಿಸಿ ಹೊಳೆಯುತ್ತಿದ್ದ ಹೂವುಗಳೆಲ್ಲಾ, ಬಣ್ಣ ಕಾಂತಿಯನ್ನು, ಕಳೆದುಕೊಂಡು, ದುಃಖ ಭಾರವಾದ ನೇತ್ರಗಳಿಂದ ಜಗುಳುವ ಅಶ್ರುಬಿಂದುಗಳಂತೆ, ಗಾಯಗೊಂಡ ಹೃದಯದಿಂದ ಬೀಳುವ ರಕ್ತ ಬಿಂದುಗಳಂತೆ, ಭಾರವಾಗಿ ನೆಲಕ್ಕೆ ಬೀಳುತ್ತಿದ್ದವು.

ಆ ಬಣ್ಣ ಬಣ್ಣದ, ಕಾಮನಬಿಲ್ಲಿನ ಮರಿಗಳಂತಿದ್ದ ಹಕ್ಕಿಗಳು—

—ಅವೂ ಹಾರುತ್ತಿರಲಿಲ್ಲ—

ಶತಸಹಸ್ರ ಸಂಖ್ಯೆಯಲ್ಲಿ ನೆಲದ ಮೇಲೆ ಬಿದ್ದು, ಚಡಪಡಿಸುತ್ತಾ ಹೊಯ್ದಾಡುತ್ತಿದ್ದವು. ಆ ಪಕ್ಷಿಗಳ ಯಾತನೆಯ ಧ್ವನಿಗೆ ಕಾಡಿಗೆ ಕಾಡೇ ಗದಗದಿಸಿ ನಡುಗುತ್ತಿದ್ದಂತಿತ್ತು.

'ಗಾಳಿಯೂ ಶೋಕಭಾರವಾಗಿ, ಕಂಬನಿಯ ಹನಿಯಂತೆ ಕಂಪಿಸುತ್ತಿತ್ತು.

'ಅದನ್ನು ಕಂಡು ವೆಂಕಟದಾಸಪ್ಪನವರಿಗೂ ಉಸಿರು ಕಟ್ಟಿದಂತಾಗಿ ಹಾಗೇ ನಿಂತುಬಿಟ್ಟರು. ಹಿಂದೆ–ಮುಂದೆ, ಎತ್ತಲೂ ಹೆಜ್ಜೆ ಇಡಲು ಅವರಿಗೆ ತೋಚಲಿಲ್ಲ.

"ಹೂಂ, ಹೋಗು—ಹೋಗುತ್ತೇನೆ ಎಂದೆಯಲ್ಲ, ನನ್ನನ್ನೂ, ಈ ಕಾಡನ್ನೂ ಬಿಟ್ಟು ಹೋಗಿಯೇ ಬಿಡುತ್ತೇನೆ ಎಂದೆಯಲ್ಲ–ಹೋಗು ಮತ್ತೆ'.

—ಅದೇ ಅವ್ಯಕ್ತ ಸ್ತ್ರೀ ಧ್ವನಿ ನುಡಿಯಿತು.

"ಅದೇ ಧ್ವನಿ. ಆದರೆ ಈಗ ಅದು ವೀಣಾನಾದದಂತೆ ಮಂಜುಲವಾಗಿರಲಿಲ್ಲ; ಗರಗಸ ಉಜ್ಜಿದಷ್ಟು ಕರ್ಕಶವಾಗಿತ್ತು. ಆ ಕರ್ಕಶತೆ–ಅದು ಕ್ರೋಧದ ಕರ್ಕಶತೆಯಲ್ಲ, ತೀವ್ರ ದುಃಖದ ಬಿರುಸು.

"ಆ ಧ್ವನಿ ವೆಂಕಟದಾಸಪ್ಪನವರ ಹೃದಯವನ್ನು ಉರಿನಾಲಿಗೆಯಂತೆ ಸೋಕಿ, ಆ ಯಾತನೆಯನ್ನು ತಡೆಯಲಾರದೆ ಅವರ ಕಣ್ಣುಗಳಿಂದಲೂ ಹನಿಗಳು ಜಾರಿದವು.

ನೋವಿನಲ್ಲಿ ಬಳಲುತ್ತಲೇ—

'ನೋಡು...... ನೋಡು...... ನೀನು ಬಹಳ ಕೆಟ್ಟವಳು. ನನಗೆ ಇಲ್ಲಿಂದ 'ಹೋಗು' ಎಂದು ಹೇಳಿದವಳೂ ನೀನೇ. 'ಹೋಗುತ್ತೇನೆ' ಎಂದಾಗ, ಹೀಗೆಲ್ಲಾ ಏನೋ ಮಾಡಿ ತಡೆಯುತ್ತಿರುವವಳೂ ನೀನೇ. ನನ್ನ ಹೃದಯದಲ್ಲಿ ಸಂಕಲ್ಪರೂಪವಾಗಿ ಇರುವವಳೂ ನೀನೇ; ಹೊರಗಿಲ್ಲಿ ನನ್ನ ಸಂಕಲ್ಪ ಭಗ್ನಕಾರಿಯಾಗಿರುವವಳೂ ನೀನೇ...ನಾನು ಯಾರ... ಮಾತು ಮುರಿಯಲಿ... ಹೀಗೇಕೆ ಮಾಡುತ್ತೀಯ ಹೇಳು...'

—ಬಿಕ್ಕಿ ಬಿಕ್ಕಿ ಅಳುತ್ತಾ ಕೇಳಿದರು ವೆಂಕಟದಾಸಪ್ಪ.

'ಅದು ನನ್ನಿಷ್ಟ.'

—ಅದುವರೆಗೂ ಮೃದುವಾಗಿದ್ದ ಧ್ವನಿ ಈಗ ನಿಷ್ಠುರವಾಗಿ ಹೇಳಿತು.

'ಹಾಗೂ ಆಗಲಿ—ಆಯಿತು: ನನಗೆ ಏನೇನು ಮಾಡುತ್ತೀಯೋ ಮಾಡು. ನಾನಂತೂ ನಿನ್ನನ್ನು ನಂಬಿ ಕೆಟ್ಟೆ. ಆಗಲಿ—ನನಗಾಗಿ ಈ ಹೂವು, ಹಕ್ಕಿಗಳಿಗೆಲ್ಲಾ ಏಕೆ ಕಷ್ಟ ಕೊಡುತ್ತೀಯ? ಅದರ ಬದಲು— ಒಂದೇ ಬಾರಿಗೆ ನನ್ನನ್ನು ತಿಂದು ಮುಗಿಸು, 'ಬೇರೆಯವರ ಕಷ್ಟ ನಾನು ನೋಡಲಾರೆ.'

—ವೆಂಕಟದಾಸಪ್ಪನವರು ಆರ್ತರಾಗಿ ಬೇಡಿದರು.

'ಅದೂ ನನ್ನ ಇಷ್ಟ.'

—ನಗುತ್ತಾ ಹೇಳಿತು ಆ ವಾಣಿ.

ಆ ಮಾತು ಕೇಳಿ ವೆಂಕಟದಾಸಪ್ಪನವರಿಗೆ ಇದ್ದಕ್ಕಿದ್ದ ಹಾಗೇ ಏಕೋ ಸಿಟ್ಟು ಬಂತು.

'ಇಷ್ಟ... ಇಷ್ಟ...... ಎಲ್ಲವೂ ನಿನ್ನ ಇಷ್ಟ...... ಕಣ್ಣಿಗೆ ಕಾಣದೆ, ಕೈಗೆ ಸಿಗದೆ ಎಷ್ಟು ಜಂಭ ಕೊಚ್ಚುತ್ತೀಯ? ಧೈರ್ಯವಿದ್ದರೆ ಒಮ್ಮೆ ಇದುರಿಗೆ ಬಂದು ಆ ಮಾತು ಹೇಳು.'

—ಗದ್ದರಿಸಿ ಹೇಳಿದರು ವೆಂಕಟದಾಸಪ್ಪ.

''ಅದೂ ನನ್ನ ಇಷ್ಟ.''

—ಗಹಗಹಿಸಿ ನಗುತ್ತಾ ಹೇಳಿತು ಹೆಣ್ಣು ಧ್ವನಿ.

''ಸಹಸ್ರ ಗುಡುಗುಗಳ ಗಂಭೀರ ಘೋಷದಂತೆ, ಆ ನಗು, ಮಾಲೆ ಮಾಲೆಯಾಗಿ, ನೆಲಮುಗಿಲೆಲ್ಲವನ್ನೂ ಆವರಿಸಿ ಹೇಳಿತು. ಆ ಮೊಳಗನ್ನು ಕೇಳಿ ದಶದಿಕ್ಕುಗಳೂ ಪ್ರತಿಧ್ವನಿಸಿದವು:

'ಅದೂ ನನ್ನ ಇಷ್ಟ.'

"ಆ ಮಾತು, ಆ ನಗುವಿನ ಇದಿರು, ವೆಂಕಟದಾಸಪ್ಪನವರ ಉಸಿರು ಉಡುಗಿ ಹೋಗಿ, ಮೈ ಏಕೋ ಉರಿಸೋಕಿದ ಮೇಣದಂತಾಗಿ ಕಂಪಿಸ ಲಾರಂಭಿಸಿತು.

'ಹಾಗಾದರೆ......ಹಾಗಾದರೆ......ಎಲ್ಲವೂ ನಿನ್ನ ಇಷ್ಟವೇ ಆದರೆ... ನಾನು...... ನನ್ನ ಇಷ್ಟ...... ಏನೂ ಇಲ್ಲವೇ?'

—ಭೀತ ಮಗುವಿನಂತೆ ಪ್ರಶ್ನೆಮಾಡಿದರು ವೆಂಕಟದಾಸಪ್ಪ.

ಅವರ ಮಾತನ್ನು ಕೇಳಿ ಆ ಧ್ವನಿ ಗಹಗಹಿಸಿತು. ಹಾಗೆ ನಗುತ್ತಲೇ ಹೇಳಿತು—

'ನಿನ್ನ ಇಷ್ಟವೂ ಇಲ್ಲ......ನೀನೂ ಇಲ್ಲ......ಇಲ್ಲ...... ಯಾವುದೂ ಇಲ್ಲ...... ಇರುವುದೆಲ್ಲ ನಾನೊಬ್ಬಳೇ......'

"ಆ ನಗುವನ್ನು ಕೇಳಿ ದಿಕ್ಕುದಿಕ್ಕುಗಳೂ ಕಂಪಿಸಿದವು. ನೆಲ ಹೊಯ್ದಾಡಿತು. ಮುಗಿಲು ಕಡಲಲೆಯಂತೆ ತೂಗಾಡಿ, ಸೂರ್ಯಚಂದ್ರರೂ ಎಳೆಯ ಮಕ್ಕಳ ಕೈಯ ಚೆಂಡಿನಂತೆ ಅತ್ತಿಂದಿತ್ತ ಪುಟಿದರು. ಗ್ರಹ, ತಾರಕೆಗಳು ಕವಣೆಗಲ್ಲಿನಂತೆ ತೂರಾಡಿದವು. ಮುಗಿಲು ನೆಲಕ್ಕೆ ಒತ್ತಿತು. ನೆಲವೆದ್ದು ಮುಗಿಲನ್ನು ತಬ್ಬಿತು.

"ಆ ಭೂ—ವ್ಯೋಮಗಳ ಸಂಗಮದಲ್ಲಿ ಯಾವುದೂ ಇಲ್ಲದಂತಾಗಿ ಎಲ್ಲೆಲ್ಲಿಯೂ ಮಬ್ಬುಗತ್ತಲು ಹಬ್ಬಿ, ಆ ಕತ್ತಲಿನಲ್ಲಿ ಮಹೋಗ್ರ ಜಂಝಾ ವಾತದ ಭೀಮಭೀಷಣವಾಣಿ ಗಹಗಹಿಸಿ ಮೊರೆಯಿತು—

'ಎಲ್ಲವೂ ನನ್ನ ಇಷ್ಟ.'

ಆ ದೃಶ್ಯವನ್ನು ನೋಡಲಾಗದೆ ವೆಂಕಟದಾಸಪ್ಪನವರು—

'ತಾಯೀ... ತಾಯೀ... ತಾಯಿ...'

—ಎಂದು ಚೀರುತ್ತಾ ಕೆಳಗುರುಳಿದರು.

* * * *

ಮಲಗಿದ್ದ ವೆಂಕಟದಾಸಪ್ಪನವರಿಗೆ ತಟಕ್ಕನೆ ಎಚ್ಚರವಾಯಿತು. ಅವರ ಮೈಯಿಂದ ಬೆವರು ಧಾರೆಧಾರೆಯಾಗಿ ಬಸಿಯುತ್ತಿತ್ತು.

ಎದೆಯನ್ನು ಯಾರೋ ಅಷ್ಟು ಹೊತ್ತು ಒತ್ತಿ ಹಿಡಿದಂತೆ, ಉಸಿರಂ ವೇಗವಾಗಿ ತುಯ್ಯುತ್ತಿತ್ತು.

ಎಚ್ಚರವಾಗಿ, ಕಣ್ಣು ಉಜ್ಜಿಕೊಂಡು ನೋಡಿದರು—

ಸಂಜೆಯು ಹೊಂಬಿಸಿಲು, ಹಳ್ಳದ ಪಾತ್ರದಲ್ಲಿ ಹೊರವಾಗಿ ಬೆಳೆದ ಈಚಲವುರಗಳ ಮೇಲೆ ಬಂಗಾರ ಎರಚಿತ್ತು. ಹಳ್ಳದ ನೀರು ಸಳಸಳ ಸದ್ದು ಮಾಡುತ್ತಾ ಹರಿಯುತ್ತಿತ್ತು.

ತಟಕ್ಕನೆ ನಿದ್ರಾಭಂಗವಾದ ಅವರಿಗೆ, ತಾವು ಎಲ್ಲಿದ್ದೇವೆ. ಏಕೆ, ಏನು ಎಂಬುದು ಯಾವುದೂ ಅರ್ಥವಾಗಲಿಲ್ಲ. 'ಇದು ಕನಸೇನೋ' ಎಂದುಕೊಂಡು ಮತ್ತೊಮ್ಮೆ ಕಣ್ಣು ಹೊಸಗಿಕೊಂಡು ನೋಡಿದರು.

ನಿಧಾನವಾಗಿ ಮತ್ತೆ ಅವರಿಗೆ ತಾವು ಅಲ್ಲಿಗೆ ಏಕೆ ಬಂದದ್ದು ಎಂಬುದು ನೆನಪಾಯಿತು.

ಆ ನೆನಪಿನೊಂದಿಗೆ ಮತ್ತೆ, ಕೇವಲ ಕೆಲ ಗಳಿಗೆಗಳ ಹಿಂದೆ ಕಂಡ ಕನಸೂ ನೆನಪಾಯಿತು. ಕನಸು ನೆನಪಾಗಿ ಒಂದು ಗಳಿಗೆ ಕಿಂಕರ್ತವ್ಯ ಮೂಢರಾಗಿ ಕುಳಿತುಬಿಟ್ಟರು.

'ಈ ಕನಸು ಏಕೆ ಬಿತ್ತು? ಅದರ ಸಂದೇಶವೇನು? ತಾವು ಪೂಜೆ ಮಾಡುವುದಿಲ್ಲ ಎಂದು ಹಟ ತೊಟ್ಟು ಬಂದದ್ದು ತಪ್ಪಾಯಿತೇ? ಹಿಂದಕ್ಕೆ ಹೋಗಿ, ತಾವೇ ಪೂಜೆ ಮಾಡುವುದಾಗಿ ಎಲ್ಲರಿಗೂ ಹೇಳುವುದೇ ಲೇಸೇ?

—ಎನಿಸಿತು ಒಮ್ಮೆ.

ಆದರೆ ಮರುಗಳಿಗೆಯೇ ಹಟ ಮರುಕಳಿಸಿ ಹೇಳಿತು—

'ಏನೋ ಕನಸು ಕಂಡದ್ದಕ್ಕಾಗಿ ನಿನ್ನ ಸಂಕಲ್ಪ, ನಿನ್ನ ಹಟ— ಎಲ್ಲವನ್ನೂ ಬಲಿಗೊಡುತ್ತೀಯಾ? ಕೂಡದು—ನೀನು ಹಾಗೆ ಮಾಡಬಾರದು.'

ಹಟದ ಆ ಮಾತು ಕೇಳಿದರೂ ಅವರಿಗೆ ಸ್ವಪ್ನವನ್ನು ಅಷ್ಟು ಸುಲಭವಾಗಿ ತಳ್ಳಿ ಹಾಕಲು ಏಕೋ ಮನಸ್ಸು ಬರಲಿಲ್ಲ. ಹಾಗೇ ಸ್ವಪ್ನಕ್ಕಾಗಿ ತಮ್ಮ ಸಂಕಲ್ಪವನ್ನು ಬಲಿಕೊಡಲೂ ಮನಸ್ಸು ಬರಲಿಲ್ಲ.

ಅಷ್ಟು ಹೊತ್ತು ಹಾಗೇ ಕುಳಿತು ಯೋಚಿಸಿದ ಬಳಿಕ 'ಇದೆಲ್ಲವೂ ನಿನ್ನ ಸಂಕಲ್ಪವನ್ನು ಭಂಗಗೊಳಿಸಲು ಹೂಡಿದ ಸಂಚು. ಈಗ ನಿನ್ನ ಮನಸ್ಸೇ ನಿನಗೆ ವಿರೋಧಿಯಾಗಿದೆ. ಎಚ್ಚರವಾಗಿರು' ಎನಿಸಿತು.

'ಊರಿಗೇ ಹೆದರದಿದ್ದವರು ಈ ಸ್ವಪ್ನಕ್ಕೆ ಹೆದರುವುದೇಕೆ? ಪ್ರಾಯಶಃ

ದೇವೀ ಪೂಜೆಯನ್ನು ಬಿಡಬಾರದೆಂಬ ನನ್ನ ಹೃದಂತರ್ಗತವಾದ ಬಯಕೆಯೇ ಹೀಗೆ ಸ್ವಪ್ನವಾಗಿ ಕಾಣಿಸಿಕೊಂಡಿರಬೇಕು. ಅಷ್ಟೇ. ಈ ಭಾವನೆಗೆ ಸೋಲ ಬಾರದು.'

—ಎಂದು ನಿರ್ಧರಿಸಿದರು ವೆಂಕಟದಾಸಪ್ಪ.

ವೆಂಕಟದಾಸಪ್ಪನವರು ಹಾಗೇ ಯೋಚಿಸುತ್ತಿರುವಾಗಲೇ ಇಪ್ಪತ್ತು— ಮೂವತ್ತು ಮೇಕೆಗಳು, ನೀರು ಕುಡಿಯಲು ಹಳ್ಳಕ್ಕೆ ಇಳಿದವು. ಅವನ್ನು ಹಿಂಬಾಲಿಸಿ, ತನ್ನ ನಾಯಿಯೊಂದಿಗೆ ಬಂದ, ದೇವೀಕೆರೆಯ ಕಾಟಯ್ಯ, ಹೊಂಗೆಯಮರದ ಕೆಳಗೆ ಕುಳಿತ ವೆಂಕಟದಾಸಪ್ಪನವರನ್ನು ನೋಡಿ ಗುರುತಿಸಿ—

"ಇದೇನ್ಸ್ವಾಮಿ ಇಷ್ಟು ದೂರ ಬಂದು ಹಿಂಗೆ ಕೂತಿದೀರಾ?'

—ಎಂದು ಕೇಳಿದ.

ತಾವು ತಮ್ಮ ಹಳ್ಳಿಯವರಿಗೆ, ಯಾರ ಕಣ್ಣಿಗೂ ಬೀಳಬಾರದೆಂದು ಇಲ್ಲಿ ಬಂದು ಕುಳಿತಿದ್ದರೆ, ಇಲ್ಲಿಯೂ ಯಾರೋ ಒಬ್ಬರು ಪರಿಚಿತರು ಬಂದರಲ್ಲಾ ಎನಿಸಿ ವೆಂಕಟದಾಸಪ್ಪನವರಿಗೆ ಚಿಂತೆಗೆ ಕಾರಣವಾಯಿತು.

"ಏನೂ ಇಲ್ಲ, ಹಾಗೇ ಕಾಲಾಡಿಸಿಕೊಂಡು ಬಂದೆ. ಈ ಸ್ಥಳ ಸಂಧ್ಯಾ ವಂದನೆಗೆ ಪ್ರಶಸ್ತವಾಗಿತ್ತೂಂತ ಕುಳಿತುಕೊಂಡೆ.''

—ಎಂದರು.

"ಸೈ......ಸೈ......ಒಳ್ಳೆ ಜಾಗಾನೆ ಹುಡುಕಿದ್ರಿ! ಚಂಜೆ ಮಬ್ಬಾದ ಮೇಲೆ ಇತ್ಲಾಗ್ಯಾರೂ ಸುಳಿಯಾಕಿಲ್ಲ, ಅಂಥ ರಾಪು ಜಾಗ. ಹೊತ್ತು ಮುಳುಗಿದ ಮ್ಯಾಕೆ ಇಲ್ಲಿರಬಾರ್ದು. ಅದೇನು ಮಾಡ್ತೀರೋ ಬ್ಯಾಗ ಮುಗಿಸಿ. ನಾನೂ ಇಲ್ಲೇ ಇರ್ತೀನಿ. ಹೊಂಟೋಗೋಣ.''

—ಎಂದ ಕಾಟಯ್ಯ.

"ಇದ್ದರೆ ಏನಾಗುತ್ತೆ?''

"ಏನಾಗ್ತದೋ ನನಗೇನು ಗೊತ್ತು. ನಾನೇನು ಇದ್ದು ಪರೀಕ್ಷೆ ಮಾಡಿ ನೋಡಿದ್ನಾ? ಎಲ್ಲಾ ಹೇಳಿದ್ದು ಕೇಳಿದ್ದು. ಇಂಥ ಹೊತ್ನಾಗಿದ್ರೆ ಇಲ್ಲಿ ಏನೇನೋ ಕಾಣಿಸ್ಕೋತದಂತೆ. ಅದು ಆ ಹೊತ್ನಾಗಿಲ್ಲಿದ್ದೋರ ಕತ್ತು ಮುರಿದಂ ಆಕ್ತದಂತೆ...''

"ಸರಿ...ಸರಿ... ಅದೆಲ್ಲಾ ಬರೀ ಕಟ್ಟುಕಥೆ.''

—ಕಾಟಯ್ಯನ ಮಾತನ್ನು ಸಂಬದವರಂತೆ ಹೇಳಿದರು ವೆಂಕಟದಾಸಪ್ಪ.

"ಕಥೇನೋ ಪಥೇನೋ ಏಳಿ ಬುದ್ಧಿ–ಅದೆಲ್ಲಾ ಪರೀಕ್ಷೆ ಮಾಡೋಕೆ ಹೋಗಬಾರ್ದು. ನಮ್ಮುಸಾರೀಲಿ ನಾವಿರಬೇಕು. ಈಗದ್ಯಾಕೆ ಮಾತು? ಅದೇನೈತೋ ಜಟಪಟ್ನೆ ಮುಗಿಸಿ.''

—ಎಂದ ಕಾಟಯ್ಯ.

"ಆಯಿತು–ನೀನು ನಿನ್ನ ಕೆಲಸ ಮುಗಿಸಿಕೊಂಡು ಹೋಗು– ನಾನೂ ಜಾಗ್ರತೆ ಸಂಧ್ಯಾವಂದನೆ ಮುಗಿಸಿಕೊಂಡು ಬರ್ತೀನಿ.''

—ಎಂದರು ವೆಂಕಟದಾಸಪ್ಪ.

ತನ್ನ ಇದುರಿನಲ್ಲಿ ಅವರು ಸಂಧ್ಯಾವಂದನೆ ಮಾಡಬಾರದೋ ಏನೋ ಎಂದು ಯೋಚಿಸಿ ಕಾಟಯ್ಯ, ನೀರು ಕುಡಿಯುತ್ತಿದ್ದ ತನ್ನ ಕುರಿಗಳನ್ನು ಅವಸರ ಪಡಿಸಿ 'ಟರ್–ಬ್ಯಾ, ಎಂದು ಕೂಗುತ್ತಾ ಅವನ್ನೆಲ್ಲಾ ಗುಂಪು ಕೂಡಿಸಿ—

"ಬ್ಯಾಗ ಬಂದ್ಬುಡಿ. ನಾನು ನಿಧಾನವಾಗಿ ಹೋಗ್ತಾ ಇರ್ತೀನಿ.'

—ಎಂದು ಹೇಳಿ ಕಾಟಯ್ಯ ತನ್ನ ಕುರಿಗಳ ಮಂದೆಯೊಡನೆ ದೇವೀಕೆರೆಯ ಕಡೆ ನಡೆದ.

೧೬

ಕಾಟಯ್ಯ ತನ್ನ ಕುರಿಗಳ ಮಂದೆಯೊಡನೆ ಕಣ್ಣುಮರೆಯಾಗುವವರೆಗೂ ವೆಂಕಟದಾಸಪ್ಪನವರು ಕುಳಿತ ಕಡೆಯಿಂದ ಅಲ್ಲಾಡಲಿಲ್ಲ.

ಅಷ್ಟು ಹೊತ್ತಾಗಿ, ಅವನ ಕುರಿಗಳ ಮಂದೆಯೂ ಆಗಾಗ ಬೊಗಳುವ ನಾಯಿಯ ಸದ್ದೂ, ಕಿವಿಗೆ ಕೇಳದಂತಾಗುವವರೆಗೂ ಹಾಗೇ ಕುಳಿತಿದ್ದರು.

ಆ ಬಳಿಕಲೂ ಅವರು ಮೇಲೇಳಲಿಲ್ಲ.

ತಾವು ಕೇವಲ ನಿರ್ಜನ ಎಂದುಕೊಂಡ ಪ್ರದೇಶದಲ್ಲಿ ಕಾಟಯ್ಯನನ್ನು ಕಂಡುದು ವೆಂಕಟದಾಸಪ್ಪನವರ ಪಾಲಿಗೆ ಹೊಸದೊಂದು ಸಮಸ್ಯೆಯನ್ನು ತಂದೊಡ್ಡಿತ್ತು.

'ತಾವು ಹಳ್ಳಿಯಲ್ಲಿದ್ದರೆ, ಹಳ್ಳಿಯ ಜನ ಏನಾದರೊಂದು ಯುಕ್ತಿ ತೆಗೆದು ತಾವೇ ಪೂಜೆ ಮಾಡುವಂತೆ ಮಾಡಬಹುದು. ಅದಕ್ಕೆ ಅವಕಾಶ ಕೊಡಬಾರದು' ಎಂಬ ಉದ್ದೇಶದಿಂದ, 'ಎರಡು ದಿನ ತಾವು ಹಳ್ಳಿಯಲ್ಲಿ ಯಾರ ಕಣ್ಣಿಗೂ ಬೀಳಬಾರದು' ಎಂದು ವೆಂಕಟದಾಸಪ್ಪನವರು, ತಾವು ಮಾಡಬೇಕಾಗಿದ್ದ ಕೆಲಸವನ್ನು ರಾಜೇಶ್ವರಿಗೆ ಒಪ್ಪಿಸಿ ಬಂದಿದ್ದರು.

ಹಳ್ಳದ ಕೊರಕಲಿನ ನಿರ್ಜನ ದಂಡೆಯನ್ನು ಕಂಡಾಗ ಅವರಿಗೆ, 'ಎಲ್ಲಿಯಾದರೂ ಹೋಗುವುದೇಕೆ? ಇಲ್ಲೇ ಕಾಲ ಹಾಕಬಹುದು ಎನಿಸಿತ್ತು.

ಆದರೆ ಇಲ್ಲಿ ಕಾಟಯ್ಯನ ದರ್ಶನವಾದುದು ಅವರ ಆಸೆಯನ್ನು ಭಂಗ ಗೊಳಿಸಿತ್ತು.

'ಊರಲ್ಲಿ ತಮ್ಮ ಮಾತು ಬಂದಾಗ, ಕಾಟಯ್ಯ 'ನಾನು ಅವರನ್ನು ಇಂಥ ಕಡೆ ನೋಡಿದ್ದೆ' ಎಂದು ಹೇಳುವುದು ನಿಜ. ಅದನ್ನು ಕೇಳಿ ಯಾರಾದರೂ ಇಲ್ಲಿಗೆ ಬಂದು ತಮ್ಮನ್ನು ಕಾಡುವುದೂ ಸತ್ಯ'

—ಎನಿಸಿತು ಅವರಿಗೆ.

ಹಾಗನಿಸಿ, ಕಾಟಯ್ಯ ಹೇಳಿದ, ಅಲ್ಲಿ, ಸಂಜೆಯಾದ ಮೇಲೆ ಕಾಣಿಸಿ ಕೊಳ್ಳುವ 'ಯಾವುಯಾವುದ'ಕ್ಕಿಂತಲೂ, ಹೆಚ್ಚಾಗಿ, ಅಲ್ಲಿಗೆ ತಮ್ಮನ್ನು ಹುಡುಕಿಕೊಂಡು ಬರಬಹುದಾದ ಹಳ್ಳಿಯವರಿಗೆ ಹೆದರಿ, ಆದಷ್ಟು ಬೇಗ ಅಲ್ಲಿಂದ ಹೊರಡುವ ಮನಸ್ಸು ಮಾಡಿದರು.

"ಸರಿ...ಸರಿ... ಅದೆಲ್ಲಾ ಬರೀ ಕಟ್ಟು ಕಥೆ."

—ಕಾಟಯ್ಯನ ಮಾತನ್ನು ನಂಬದವರಂತೆ ಹೇಳಿದರು ವೆಂಕಟದಾಸಪ್ಪ.

"ಕಥೇನೋ ಪಥೇನೋ ಏಳಿ ಬುದ್ಧಿ—ಅದೆಲ್ಲಾ ಪರೀಕ್ಷೆ ಮಾಡೋಕೆ ಹೋಗಬಾರ್ದು. ನಮ್ಮ್‌ಸಾರೀಲಿ ಸಾವಿರಬೇಕು. ಈಗದ್ಯಾಕೆ ಮಾತು? ಅದೇನೈತೋ ಜಟಪಟ್ನೆ ಮುಗಿಸಿ."

—ಎಂದ ಕಾಟಯ್ಯ.

"ಆಯಿತು—ನೀನು ನಿನ್ನ ಕೆಲಸ ಮುಗಿಸಿಕೊಂಡು ಹೋಗು— ನಾನೂ ಜಾಗ್ರುತೆ ಸಂಧ್ಯಾವಂದನೆ ಮುಗಿಸಿಕೊಂಡು ಬರ್‍ತೀನಿ."

—ಎಂದರು ವೆಂಕಟದಾಸಪ್ಪ.

ತನ್ನ ಇದುರಿನಲ್ಲಿ ಅವರು ಸಂಧ್ಯಾವಂದನೆ ಮಾಡಬಾರದೋ ಏನೋ ಎಂದು ಯೋಚಿಸಿ ಕಾಟಯ್ಯ, ನೀರು ಕುಡಿಯುತ್ತಿದ್ದ ತನ್ನ ಕುರಿಗಳನ್ನು ಅವಸರ ಪಡಿಸಿ 'ಟರ್—ಬ್ಯಾ, ಎಂದು ಕೂಗುತ್ತಾ ಅವನ್ನೆಲ್ಲಾ ಗುಂಪು ಕೂಡಿಸಿ—

"ಬ್ಯಾಗ ಬಂದ್ಬುಡಿ. ನಾನು ನಿಧಾನವಾಗಿ ಹೋಗ್ತಾ ಇರ್‍ತೀನಿ.'

—ಎಂದು ಹೇಳಿ ಕಾಟಯ್ಯ ತನ್ನ ಕುರಿಗಳ ಮಂದೆಯೊಡನೆ ದೇವೀಕೆರೆಯ ಕಡೆ ನಡೆದ.

# ೧೬

ಕಾಟಯ್ಯ ತನ್ನ ಕುರಿಗಳ ಮಂದೆಯೊಡನೆ ಕಣ್ಣುಮರೆಯಾಗುವವರೆಗೂ ವೆಂಕಟದಾಸಪ್ಪನವರು ಕುಳಿತ ಕಡೆಯಿಂದ ಅಲ್ಲಾಡಲಿಲ್ಲ.

ಅಷ್ಟು ಹೊತ್ತಾಗಿ, ಅವನ ಕುರಿಗಳ ಮಂದೆಯು ಆಗಾಗ ಬೊಗಳುವ ನಾಯಿಯ ಸದ್ದೂ, ಕಿವಿಗೆ ಕೇಳದಂತಾಗುವವರೆಗೂ ಹಾಗೇ ಕುಳಿತಿದ್ದರು.

ಆ ಬಳಿಕಲೂ ಅವರು ಮೇಲೇಳಲಿಲ್ಲ.

ತಾವು ಕೇವಲ ನಿರ್ಜನ ಎಂದುಕೊಂಡ ಪ್ರದೇಶದಲ್ಲಿ ಕಾಟಯ್ಯನನ್ನು ಕಂಡುದು ವೆಂಕಟದಾಸಪ್ಪನವರ ಪಾಲಿಗೆ ಹೊಸದೊಂದು ಸಮಸ್ಯೆಯನ್ನು ತಂದೊಡ್ಡಿತ್ತು.

'ತಾವು ಹಳ್ಳಿಯಲ್ಲಿದ್ದರೆ, ಹಳ್ಳಿಯ ಜನ ಏನಾದರೊಂದು ಯುಕ್ತಿ ತೆಗೆದು ತಾವೇ ಪೂಜೆ ಮಾಡುವಂತೆ ಮಾಡಬಹುದು. ಅದಕ್ಕೆ ಅವಕಾಶ ಕೊಡಬಾರದು' ಎಂಬ ಉದ್ದೇಶದಿಂದ, 'ಅದೆರಡು ದಿನ ತಾವು ಹಳ್ಳಿಯಲ್ಲಿ ಯಾರ ಕಣ್ಣಿಗೂ ಬೀಳಬಾರದು' ಎಂದು ವೆಂಕಟದಾಸಪ್ಪನವರು, ತಾವು ಮಾಡಬೇಕಾಗಿದ್ದ ಕೆಲಸವನ್ನು ರಾಜೇಶ್ವರಿಗೆ ಒಪ್ಪಿಸಿ ಬಂದಿದ್ದರು.

ಹಳ್ಳದ ಕೊರಕಲಿನ ನಿರ್ಜನ ದಂಡೆಯನ್ನು ಕಂಡಾಗ ಅವರಿಗೆ, 'ಎಲ್ಲಿಯಾದರೂ ಹೋಗುವುದೇಕೆ? ಇಲ್ಲೇ ಕಾಲ ಹಾಕಬಹುದು ಎನಿಸಿತ್ತು.

ಆದರೆ ಇಲ್ಲಿ ಕಾಟಯ್ಯನ ದರ್ಶನವಾದುದು ಅವರ ಆಸೆಯನ್ನು ಭಂಗಗೊಳಿಸಿತ್ತು.

'ಊರಲ್ಲಿ ತಮ್ಮ ಮಾತು ಬಂದಾಗ, ಕಾಟಯ್ಯ 'ನಾನು ಅವರನ್ನು ಇಂಥ ಕಡೆ ನೋಡಿದ್ದೆ' ಎಂದು ಹೇಳುವುದು ನಿಜ. ಅದನ್ನು ಕೇಳಿ ಯಾರಾದರೂ ಇಲ್ಲಿಗೆ ಬಂದು ತಮ್ಮನ್ನು ಕಾಡುವುದೂ ಸತ್ಯ'

—ಎನಿಸಿತು ಅವರಿಗೆ.

ಹಾಗನಿಸಿ, ಕಾಟಯ್ಯ ಹೇಳಿದ, ಅಲ್ಲಿ, ಸಂಜೆಯಾದ ಮೇಲೆ ಕಾಣಿಸಿಕೊಳ್ಳುವ 'ಯಾವುಯಾವುದ'ಕ್ಕಿಂತಲೂ, ಹೆಚ್ಚಾಗಿ, ಅಲ್ಲಿಗೆ ತಮ್ಮನ್ನು ಹುಡುಕಿಕೊಂಡು ಬರಬಹುದಾದ ಹಳ್ಳಿಯವರಿಗೆ ಹೆದರಿ, ಆದಷ್ಟು ಬೇಗ ಅಲ್ಲಿಂದ ಹೊರಡುವ ಮನಸ್ಸು ಮಾಡಿದರು.

ಸಂಜೆಯು ಹೊತ್ತಾಗುತ್ತಿದ್ದ ಹಾಗೇ, ಅವರ ದಿನದ ಅಭ್ಯಾಸ 'ಇದು ಸಂಧ್ಯಾವಂದನೆಯ ವೇಳೆ' ಎಂದು ಸೂಚಿಸಿತು. ಅವರ ದೇಹವೂ ಯಾಂತ್ರಿಕ ವಾಗಿ, ಅಭ್ಯಾಸದ ಆದೇಶವನ್ನು ಪಾಲಿಸಲು ಸಿದ್ಧವಾಯಿತು. 'ಸರಿ. ಅದನ್ನು ಮುಗಿಸಿಬಿಡೋಣ' ಎಂದುಕೊಂಡೇ. ಮೇಲೆದ್ದು ನೀರಿನ ಬಳಿ ಹೋದರು.

ಆದರೆ, ಸಿದ್ಧವಾದ ಬಳಿಕ ಏಕೋ ಅವರಿಗೆ ಆ ದಿನ ಸಂಧ್ಯಾವಂದನೆ ಮಾಡಲು ಮನಸ್ಸಾಗಲಿಲ್ಲ.

'ಹೋಗಲಿ. ಈ ದಿನ ಆ ಯೋಗವೂ ಇದ್ದಂತಿಲ್ಲ'.

—ಎಂದುಕೊಂಡು ಹಾಗೇ ಕೈಕಾಲು ಮುಖ ತೊಳೆದು, ಹಳ್ಳದ ದಂಡೆಗೆ ಬಂದು ಮುಂದೇನು ಮಾಡುವುದು ಎಂದು ವಿಚಾರ ಮಾಡಿದರು.

ಕೊನೆಗೆ 'ಎಲ್ಲಿಗೋ—ಅಂತೂ ಇಲ್ಲಿಂದ ಆದಷ್ಟು ದೂರ ಹೋಗುವುದು ಲೇಸು, ಎಂದುಕೊಂಡು, ಹಳ್ಳವನ್ನು ದಾಟಿ, ಆಚೆಯ ದಂಡೆ ಸೇರಿ ಬಳಿಕ ಕಾಲು ಎತ್ತ ನಡೆಸಿದರೆ ಅತ್ತ ಹೋಗುವುದು ಎಂದುಕೊಂಡು, ಹಳ್ಳವನ್ನು ದಾಟುವ ಸಲುವಾಗಿ, ಆಳವಿಲ್ಲದ ಹಳ್ಳದ ನೀರಿಗೆ ಇಳಿದರು.

ಆ ವೇಳೆಗೆ ಸಂಜೆಯ ಹೊಂಬೆಳಕೂ ಕರಗಿ, ಮಬ್ಬುಗತ್ತಲೆ ಎಲ್ಲೆಡೆ ಯಲ್ಲೂ ನಿಧಾನವಾಗಿ ಹಬ್ಬುತ್ತಿತ್ತು.

ತಲೆಯ ಮೇಲೆ ಬೆಳ್ಳನೆಯ ಹಕ್ಕಿಗಳ ಸಾಲೊಂದು, ಮುಗಿಲಗಂಗೆಯಲ್ಲಿ ತೇಲಿಬಿಟ್ಟ ಮಾಲೆಯಂತೆ ಹಾರಿಹೋಗಿ, ಎಲ್ಲೆಲ್ಲಿಯೂ ನೀರವತೆ ವ್ಯಾಪಿಸಿತು.

ಹಳ್ಳದ ನೀರಿನ ಬಳಿ ಒಟಗುಟ್ಟಲಾರಂಭಿಸಿದ ಕಪ್ಪೆಗಳ ಸದ್ದು, ಜೀರುಂಡೆಗಳ 'ಜಿರ್‍ರ್' ಎಂಬ ಶಬ್ದ, ತಡವಾಗಿ ಮನೆಗೆ ಹೋಗುವ ಒಂಟಿ ಹಕ್ಕಿಯ ಕೂಗನ್ನುಳಿದು ಬೇರಾವ ಶಬ್ದವೂ ಕಿವಿಗೆ ಕೇಳಿಸುತ್ತಿರಲಿಲ್ಲ.

ಮಧ್ಯಾಹ್ನದ ಬೆಳಕಿನಲ್ಲಿ, ಅಷ್ಟಷ್ಟು ದೂರಕ್ಕೆ ಬೆಳೆದಂತೆ ಕಾಣುತ್ತಿದ್ದ ಈಚಲಮರಗಳೂ, ಕುರುಚಲ ಗಿಡದ ಪೊದೆಗಳೂ, ಸಂಜೆಯ ಮಬ್ಬುಗತ್ತಲಿನಲ್ಲಿ ಬರಲಿರುವ ಇರುಳಿಗೆ ಹೆದರಿ, ಒಂದು ಮತ್ತೊಂದರ ಸಮೀಪಕ್ಕೆ ಬಂದಂತೆ ಮತ್ತಷ್ಟು ದಟ್ಟವಾದಂತೆ ಕಾಣುತ್ತಿದ್ದವು.

ಈ ನೀರವತೆಯ ಮಧ್ಯದಲ್ಲಿ ಎಲ್ಲೋ ಹರಿಯುವ ನೀರಿನ ಜುಳುಜುಳು ಸದ್ದು ಮಾತ್ರ ಬಹು ಸ್ಪಷ್ಟವಾಗಿ ಕೇಳುತ್ತಿತ್ತು.

ಗಳಿಗೆ ಗಳಿಗೆಗೆ ಕತ್ತಲು ಬಲಿಯುತ್ತಿತ್ತು.

ಆ ದಿನ ಷಷ್ಠಿಯಾದುದರಿಂದ ಇನ್ನೂ ಚಂದ್ರೋದಯವಾಗಿರಲಿಲ್ಲ. ಚಂದ್ರವಿಹೀನವಾದ ಮುಗಿಲಿನಲ್ಲಿ, ಅಲ್ಲೊಂದು ಇಲ್ಲೊಂದು ಒಂಟಿನಕ್ಷತ್ರಗಳು ಮಿನಗಲಾರಂಭಿಸಿದ್ದವು.

ಸಮೀಪಸ್ಥನಿಶೆಯ ನೀರವತೆಯಲ್ಲಿ ವೆಂಕಟದಾಸಪ್ಪನವರು ನಡೆಯ ಲಾರಂಭಿಸಿದ ಕೂಡಲೇ, ಮತ್ತೆ ಅವರ ತಲೆಯಲ್ಲಿ ಆ ಮಧ್ಯಾಹ್ನ ಕಂಡ ಕನಸಿನ ವಿಚಾರ ಸುತ್ತಲಾರಂಭಿಸಿತು.

'ಅಂಥ ಕನಸೇಕೆ ಬಿತ್ತು? ಏನು ಆ ಕನಸಿನ ಸಂದೇಶ?'

ಕನಸು ಕಂಡು ಎಷ್ಟೋ ಹೊತ್ತಾಗಿದ್ದರೂ, ಇನ್ನು ಆ ಕನಸು ಅವರ ಕಣ್ಣಿಗೆ ಕಟ್ಟಿದಂತಿತ್ತು. ಅದರ ಒಂದೊಂದು ವಿವರವೂ ಸಜೀವವಾಗಿ ಅವರ ಕಣ್ಣೆದಿರು ಸುಳಿಯುತ್ತಿತ್ತು.

ಆ ಕನಸನ್ನು ಎಷ್ಟೆಷ್ಟು ಮರೆಯಬೇಕೆಂದರೂ ಏಕೋ ಅದು ಸಾಧ್ಯ ವಾಗಲಿಲ್ಲ.

ಸುತ್ತಲ ನಿರ್ಜನ ವನ, ಇರುಳ ನಿಶ್ಶಬ್ದತೆ, ಒಂಟಿತನ- ಎಲ್ಲವೂ ಅವರು ಮತ್ತೆ ಮತ್ತೆ ಕನಸನ್ನೇ ಕುರಿತು ಚಿಂತಿಸಲು ಪ್ರಚೋದಕವಾಗಿದ್ದವು.

ಕೊನೆಗೆ, ತಮ್ಮ ಮಿದುಳನ್ನು ಎಡಬಿಡದೆ ಕಾಡುತ್ತಿರುವ ಕನಸನ್ನು ಮರೆಯಲು, ತಮಗೆ ತಾವೇ, ನೆನಪಿದ್ದ ಸ್ತೋತ್ರವೊಂದನ್ನು ಹೇಳಿಕೊಳ್ಳ ಲಾರಂಭಿಸಿದರು. ತನಗೆ ತಾನೇ ಅವರಿಗೆ ಮುಖೋದ್ಗತವಾಗಿದ್ದ, ಶಂಕರಾ ಚಾರ್ಯಕೃತ 'ತ್ರಿಪುರಸುಂದರೀ ಅಷ್ಟಕ' ಅವರ ಮುಖದಿಂದ ಹೊರ ಹೊಮ್ಮಿತು:

ಕದಂಬವನ ಚಾರಿಣೀಂ ಮುನಿ ಕದಂಬಿ ಕಾದಂಬಿನೀಂ
ನಿತಂಬಜಿತ ಭೂಧರಾಂ ಸುರ ನಿತಂಬಿನೀಸೇವಿತಾಂ।
ನವಾಂಬುರಹಲೋಚನಾಮಭಿನವಾಂಬುದ ಶ್ಯಾಮಲಾಂ
ತ್ರಿಲೋಚನ ಕುಟುಂಬಿನೀಂ ತ್ರಿಪುರಸುಂದರಿ ಮಾಶ್ರಯೇ॥
ಕದಂಬ ವನವಾಸಿನೀಂ ಕನಕವಲ್ಲರೀ ಧಾರಿಣೀಂ
ಮಹಾರ್ಹಮಣಿಹಾರಿಣೀಂ ಮುಖಸಮುಲ್ಲಸದ್ವಾರುಣೀಂ।

ದಯಾವಿಭವ ಕಾರಿಣೀಂ ವಿಶದ ಲೋಚನೀಂ ತಾರಿಣೀಂ
ತ್ರಿಲೋಚನ ಕುಟುಂಬಿನೀಂ ತ್ರಿಪುರಸುಂದರಿ ಮಾಶ್ರಯೇ॥
ಕದಂಬವನಶಾಲಯಾ ಕುಚಭರೊಲ್ಲಸನ್ಮಾಲಯಾ
ಕುಚೋಪಮಿತ ಶೈಲಯಾ ಗುರುಕೃಪಾಲಸದ್ವೇಲಯಾ।
ಮದಾರುಣ ಕಪೋಲಯಾ ಮಧುರಗೀತ ವಾಚಾಲಯಾ
ಕಯಾಪಿ ಘನನೀಲಯಾ ಕವಚಿತಾ ವಯಂ ಲೀಲಯಾ॥

ಲಯ, ತಾಳ, ರಾಗ, ಪ್ರಾಸಬದ್ಧವಾದ ಆಚಾರ್ಯರ ಕೃತಿಯನ್ನು, ಅದೇ ರೀತಿಯಲ್ಲಿ ಮೃದುವಾಗಿ ನಿಧಾನವಾಗಿ ತಮಗೆ ತಾವೇ ಹೇಳಿಕೊಳ್ಳುತ್ತಾ ನಡೆಯುತ್ತಿದ್ದರು ವೆಂಕಟದಾಸಪ್ಪನವರು.

ಮೂರು ಶ್ಲೋಕಗಳನ್ನು ಮುಗಿಸಿ, ನಾಲ್ಕನೆಯ ಶ್ಲೋಕದಲ್ಲಿ—

ಕದಂಬ ವನಮಧ್ಯಗಾಂ ಕನಕ ಮಂಡಲೋಪಸ್ಥಿತಾಂ
ಷಡಂಬುರುಹವಾಸಿನೀಂ ಸತತ ಸಿದ್ಧ ಸೌದಾಮಿನೀಂ॥

—ಎಂದು ಎರಡು ಚರಣಗಳನ್ನು ಮುಗಿಸಿ, ಮೂರನೆಯ ಚರಣವನ್ನು ಆರಂಭಿಸಬೇಕು ಎನ್ನುವ ಹೊತ್ತಿಗೆ, ಅವರ ಬೆನ್ನ ಹಿಂದೆ ಏನೋ ಸದ್ದು ಕೇಳಿ ಬಂದು, ಹೇಳಿಕೊಳ್ಳುತ್ತಿದ್ದ ಶ್ಲೋಕವನ್ನು ತಟಕ್ಕನೆ ನಿಲ್ಲಿಸಿ, ಬೆನ್ನ ಹಿಂದೆ ಕೇಳಿ ಬಂದ ಸದ್ದನ್ನು ಆಲಿಸುತ್ತ ಮುಂದೆ ನಡೆದರು.

ಅವರ ಬೆನ್ನ ಹಿಂದೆ ಸದ್ದು ಕೇಳಿಬರುತ್ತಿತ್ತು.-

ಮೃದುವಾಗಿ ನಡೆವ ಪಾದಗಳಿಗೆ ಕಟ್ಟಿದ ಚಿನ್ನದ ಗೆಜ್ಜೆಯ ಮಂಜುಳ ವಾದ ಸದ್ದು.

ಆ ಸದ್ದು ಕೇಳಿ ಬಂದು ವೆಂಕಟದಾಸಪ್ಪನವರು ತಟಕ್ಕನೆ ನಿಂತು ಹಿಂತಿರುಗಿ ನೋಡಿದರು—ಯಾರೂ ಕಾಣಲಿಲ್ಲ.

ಅವರು ನಿಲ್ಲುತ್ತಿದ್ದ ಹಾಗೇ ಗೆಜ್ಜೆಯ ಸದ್ದೂ ನಿಂತಿತು.

'ಛೀ ಇದೇನೋ ಮನಸ್ಸಿನ ಭ್ರಾಂತಿ.'

—ಎಂದುಕೊಂಡು ಮತ್ತೆ ಸ್ತೋತ್ರವನ್ನು ಹೇಳಿಕೊಳ್ಳುತ್ತಾ ಮುಂದೆ ಮುಂದೆ ನಡೆದರು—

ವಿಡಂಬಿತಜಪಾರುಚೀಂ ವಿಕಚ ಚಂದ್ರ ಚೂಡಾಮಣಿಂ
ತ್ರಿಲೋಚನ ಕುಟುಂಬಿನೀಂ ತ್ರಿಪುರಸುಂದರೀ ಮಾಶ್ರಯೇ॥
ಕುಚಾಂಚಿತ ವಿಪಂಚಿಕಾಂ ಕುಟಿಲ ಕುಂತಲಾಲಂಕೃತಾಂ
ಕುಶೇಶಯನಿವಾಸಿನೀಂ ಕುಟಿಲ ಚಿತ್ತ ವಿದ್ವೇಷಿಣೀಂ॥
ಮದಾರುಣ ವಿಲೋಚನಾಂ ಮನಸಿಜಾರಿ ಸಂಮೋಹಿನೀಂ
ಮತಂಗ ಮುನಿ ಕನ್ಯಕಾಂ ಮಧುರಭಾಷಿಣೀ ಮಾಶ್ರಯೆ॥

ಮೃದುವಾಗಿ ಮಧುರವಾಗಿ, ವೆಂಕಟದಾಸಪ್ಪನವರು ತಮಗೆ ತಾವೇ ಹೇಳಿಕೊಂಡು ನಡೆದರು.

ಮತ್ತೆ–ಅವರ ಸ್ತೋತ್ರ ಪಠನಕ್ಕೆ ತಾಳ ಹಾಕಿದಂತೆ, ಇನಿದಾದ ಕಾಲ ಗೆಜ್ಜೆಯ ಸದ್ದು ಅವರನ್ನು ಹಿಂಬಾಲಿಸಿತು.

ಅದನ್ನು ಕೇಳಿ ವೆಂಕಟದಾಸಪ್ಪನವರು ತಟಕ್ಕನೆ ನಿಂತು, ಸುತ್ತಲೂ ನೋಡಿದರು—

ಯಾರೂ ಕಾಣಲಿಲ್ಲ.

ದೂರದಲ್ಲೆಲ್ಲೋ 'ಜುಳು ಜುಳು' ನೀರು ಹರಿಯುತ್ತಿತ್ತು. ನೀರ ತಡಿಯಲ್ಲಿ ಕಪ್ಪೆಗಳು ಒಟಗುಟ್ಟುತ್ತಿದ್ದವು. ಜೀರುಂಡೆಗಳ 'ಜಿರ್– ಜಿಲ್' ಎಂಬ ಸದ್ದು ಎಡೆಬಿಡದೆ ನಡೆದಿತ್ತು.

ಆದರೆ ಗೆಜ್ಜೆಯ ಸದ್ದು ಮಾತ್ರ ಕೇಳಲಿಲ್ಲ.

'ನನಗೆ ನಾನೇ ಶ್ಲೋಕವನ್ನು ಹೇಳಿಕೊಂಡಾಗ. ಅದೇ ಗಜ್ಜೆಯ ಧ್ವನಿಯಂತೆ ಕೇಳುತ್ತದೆಯೋ . ಏನೋ.'

—ಎಂದು ಕೊಂಡು ವೆಂಕಟದಾಸಪ್ಪನವರು ಸ್ತೋತ್ರಪಠಣವನ್ನು ನಿಲ್ಲಿಸಿ ಹಾಗೇ ಮುಂದಕ್ಕೆ ನಡೆದರು.

'ಗಲ್–ಜಲ್'

—ಎಂಬ ಗೆಜ್ಜೆಗಾಲಿನ ಸದ್ದು ಮತ್ತೆ ಅವರನ್ನು ಹಿಂಬಾಲಿಸಿತು.

ಅದನ್ನು ಕೇಳಿ ಅವರು ನಿಂತರು—

ಗೆಜ್ಜೆಯ ಸದ್ದೂ ನಿಂತಿತು.

ಮತ್ತೆ ನಡೆದರು—

ಮತ್ತೆ ಗೆಜ್ಜೆಯ ಸದ್ದು ಅವರನ್ನು ಹಿಂಬಾಲಿಸಿತು—'ಗಲ್ ಜಿಲ್' 'ಗಲ್–ಜಿಲ್.'

ತಟಕ್ಕನೆ ನಿಂತು ಬಿಟ್ಟರು ವೆಂಕಟದಾಸಪ್ಪನವರು. ಏಕೋ ಇದ್ದಕ್ಕಿದ್ದ ಹಾಗೇ ಅವರ ಮೈಯಿಂದ ಬೆವರು ಬಸಿಯಲಾರಂಭಿಸಿತ್ತು.

"ಯಾರದು?"

—ಎಂದು ಭೀತಿವಿಕಂಪಿತ ಸ್ವರದಲ್ಲಿ ಕೇಳಿದರು.

ಅವರ ಪ್ರಶ್ನೆಗೆ ಯಾರೂ ಉತ್ತರ ಕೊಡಲಿಲ್ಲ; ಗೆಜ್ಜೆಯ ಸದ್ದೂ ಇಲ್ಲ. ಸುತ್ತಲೂ ನೋಡಿದರು. ಆಗತಾನೇ ಚಂದ್ರೋದಯವಾಗಿ, ಈಚಲುಗರಿಗಳ ಮೇಲೆ ಬೆಳ್ಳಿಯ ಗೆರೆ ಬಿದ್ದಿತ್ತು. ಅದುವರೆಗೆ ದಟ್ಟವಾಗಿದ್ದ ಕತ್ತಲು ಕರಗಿ ಮಬ್ಬಾಗಿ, ಪೊದೆಗಳು, ಹಳ್ಳದಲ್ಲಿ ಬೆಳೆದ ಆಪು ಹುಲ್ಲು, ಕಪ್ಪಗೆ ಮೊತ್ತವಾಗಿ ಕಾಣುತ್ತಿದ್ದುವು. ಹಗಲೆಲ್ಲಾ ತಲೆಮರೆಸಿಕೊಂಡ ಗಾಳಿ, ಆಗತಾನೇ ಗಿಡ ಮರಗಳ ಒಡಲಿಂದ ಮೇಲೆದ್ದು ಸಣ್ಣಗೆ, ತಣ್ಣಗೆ ಸುಳಿಯಲಾರಂಭಿಸಿತ್ತು.

ಇದ್ದಕ್ಕಿದ್ದ ಹಾಗೇ ಅವರಿಗೆ ಕಾಟಯ್ಯ ಹೇಳಿದ ಮಾತು ನೆನಪಾಯಿತು—

'ಸಂಜೆ ಹೊತ್ನಾಗೆ ಇಲ್ಲಿದ್ರೆ ಏನೇನೋ ಕಾಣಿಸ್ಕೋತವಂತೆ'

ಆ ಮಾತು ನೆನಪಾಗಿ, ಅವರ ಮೈಮೇಲೆ ತಟಕ್ಕನೆ, ಹಿಮಶೀತಲವಾದ ನೀರನ್ನು ಸುರಿದಂತಾಯಿತು. ಮೈಯ ಮೇಲಿದ್ದ ಸಣ್ಣ ಸಣ್ಣ ರೋಮಗಳೂ ಮುಳ್ಳಾಗಿ ನಿಮಿರಿದುವು.

ಒಂದು ಗಳಿಗೆ ಹಾಗೇ ನಿಂತಂತೆಯೇ ನಿಂತುಬಿಟ್ಟರು—

ಯಾರೂ ಇಲ್ಲ, ಯಾವ ಸದ್ದೂ ಇಲ್ಲ—

ನಿರೀನ 'ಸಳಸಳ' ಸದ್ದು. ಕಪ್ಪೆಗಳ ಒಟಗುಟ್ಟುವಿಕೆ, ಜೀರುಂಡೆಗಳ ಏಕನಾದ, ಆಪಿನಲ್ಲಿ ಸುಳಿಯುವ ಗಾಳಿಯ ಸುಯ್ಯೆಂಬ ಶಬ್ದದ ವಿನಾ–ಬೇರಾವ ಶಬ್ದವೂ ಇಲ್ಲ.

ಒಂದು ಗಳಿಗೆ ಅವರ ಮೈ ಭೀತಿಯಿಂದ ಕಂಪಿಸಿತು— "ಏನಿರ ಬಹುದು?'

ಮರುಗಳಿಗೆಯೇ ಬ್ರಹ್ಮಯಜ್ಞೋಪವಿತ ರಕ್ಷಿತನಾದ ತನಗೆ ಯಾವ ಬಗೆಯ ಭೂತ–ಪ್ರೇತ ಭೀತಿಯೂ ಇಲ್ಲ ಎನ್ನುವುದು ನೆನಪಾಗಿ, ಧೈರ್ಯ ತಂದುಕೊಂಡು ಮುಂದೆ ನಡೆದರು.

'ಗಲ್–ಜಲ್'

—ಎಂದು ಗೆಜ್ಜೆಗಾಲಿನ ಸದ್ದು ಮತ್ತೆ ಅವರನ್ನು ಹಿಂಬಾಲಿಸಿತು.

ಅತ್ತ–ಇತ್ತ, ಪೊದೆಗಳಲ್ಲಿ, ಮರಗಳಲ್ಲಿ, ಆಪಿಸಲ್ಲಿ–ಎಲ್ಲೂ ಏನೂ ಇಲ್ಲ.

ಗೆಜ್ಜೆಗಾಲಿನ ಸದ್ದು–ನಿಜ–ಅದು ಸಣ್ಣ ಚಿನ್ನದ ಗೆಜ್ಜೆಯು ಉಲಿಹೇ–ಅವರನ್ನು ಹಿಂಬಾಲಿಸುತ್ತಿದೆ.

ತಮ್ಮನ್ನು ಎಡೆಬಿಡದೆ ಅನುಸರಿಸುತ್ತಿರುವ, ಆ ಮೃದುಮಧುರವಾದ ಗೆಜ್ಜೆಗಳ ಮಂಜುಲ ರವವನ್ನು ಆಲಿಸಿ. ಅವರ ಮೈ ಕಂಪಿಸಲಾರಂಭಿಸಿತು.

'ಈಗೇನು ಮಾಡಲಿ, ಇದಕ್ಕೇನು ಮಾಡಲಿ'

—ಎಂದು ಚಿಂತಿಸಿ, ಕೊನೆಗೆ ಭಯವಿಮೋಚಕವೆಂದು ಹೆಸರಾದ 'ಲಕ್ಷ್ಮೀನೃಸಿಂಹಸ್ತೋತ್ರ' ವನ್ನು ಪಠಿಸಲಾರಂಭಿಸಿದರು.—

ಶ್ರೀಮತ್ಪಯೋನಿಧಿ ನಿಕೇತನ ಚಕ್ರಪಾಣೇ
ಭೋಗೀಂದ್ರ ಭೋಗ ಮಣಿರಂಜಿತ ಪುಣ್ಯಮೂರ್ತೇ।
ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ
ಲಕ್ಷ್ಮೀನೃಸಿಂಹ ಮಮದೇಹಿ ಕರಾವಲಂಬಮ್॥
ಬ್ರಹ್ಮೇಂದ್ರ ರುದ್ರ ಮರುದರ್ಕ ಕಿರೀಟ ಕೋಟಿ–
ಸಂಘಟ್ಟಿತಾಂಘ್ರಿ ಕಮಲಾಮಲ ಕಾಂತಿಕಾಂತ।
ಲಕ್ಷ್ಮೀಲಸತ್ಕುಚ ಸರೋರುಹ ರಾಜಹಂಸ
ಲಕ್ಷ್ಮೀನೃಸಿಂಹ ಮಮದೇಹಿ ಕರಾವಲಂಬಮ್॥

ಗಟ್ಟಿಯಾಗಿ, ಉಳಿದಾವ ಸದ್ದೂ ತಮ್ಮ ಕಿವಿಗ ಬೀಳದಷ್ಟು ಗಟ್ಟಿಯಾಗಿ ಆ ಸ್ತೋತ್ರವನ್ನು ಪಠಿಸಿದರು ವೆಂಕಟದಾಸಪ್ಪನವರು.

ಆದರೆ ಅವರ ಧ್ವನಿಗಿಂತಲೂ ಗಟ್ಟಿಯಾದ ಸದ್ದಿನಿಂದ, ಗೆಜ್ಜೆಗಾಲಿನ ಸದ್ದು ಅವರನ್ನು ಹಿಂಬಾಲಿಸಿತು.

ಅದನ್ನು ಕೇಳಿದ ಬಳಿಕ ವೆಂಕಟದಾಸಪ್ಪನವರು ಹೇಳಿಕೊಳ್ಳುತ್ತಿದ್ದ ಸ್ತೋತ್ರ ಹಾಗೇ ನಿಂತುಹೋಗಿ, ಅವರ ಎದೆ ಢವಢವಿಸಲಾರಂಭಿಸಿತು.

ಭೀತಿನಿವಾರಕ ಸ್ತೋತ್ರ ಪಠನೆಯಿಂದಅವರ ಭೀತಿ ನಿವಾರಣೆಯಾಗದೇ,

ಅದು ಮತ್ತಷ್ಟು ಹೆಚ್ಚಿ, ಸುತ್ತಮುತ್ತ ನಿಂತ ಈಚಲಮರಗಳುತಲೆಗೆದರಿ ನಿಂತ ಘೋರ ಪಿಶಾಚಿಗಳಂತೆ ಕಾಣಿಸಿದವು.

ಬೆಳದಿಂಗಳು ಬಿದ್ದ ಅವುಗಳ ಗರಿಗಳು, ಹೊಳೆಯುವ ಕೊರೆದಾಡೆಗಳಂತೆ ಕಂಡವು.

ನೀರಿನ ಸೆಳಸಳ ಸದ್ದು ಅವರನ್ನು ಯಾರೋ ಅಣಕಿಸಿ ಪಕಪಕನಕ್ಕಂತೆ ಕೇಳಿಸಿತು.

ಸುತ್ತ ಮುತ್ತ ಕತ್ತಲ ಮರಿಗಳಂತಿದ್ದ ಪೊದೆಗಳು, ಹಿಂಡುಹಿಂಡಾಗಿ ಅವರ ಮೇಲೆ ದಾಳಿ ಮಾಡ ಬಂದ ದೈತ್ಯಸಮೂಹದಂತೆ ಕಂಡು, ಅವರ ಕೈಕಾಲು ಗಡಗಡ ನಡುಗಲಾರಂಭಿಸಿ, ಮುಂದೆ ಹೆಜ್ಜೆ ಇಡಲಾರದೆ ಹಾಗೇ ಕುಸಿದು ಕುಳಿತು ಬಿಟ್ಟರು. ಭಯವಿಕಂಪಿತ ವಾಣಿಯಲ್ಲಿ, ಅವರ ಮುಖದಿಂದ ದೇವೀ ಸ್ತುತಿ ಹೊರಹೊಮ್ಮಿತು—

ಸರ್ವ ಸ್ವರೂಪೆ ಸರ್ವೇಶೇ ಸರ್ವಶಕ್ತಿ ಸಮನ್ವಿತೆ।
ಭಯೇಭ್ಯಸ್ತ್ರಾಹಿ ನೋ ದೇವಿ ದುರ್ಗೇದೇವಿ ನಮೋಸ್ತುತೆ॥
ಏತತ್ತೇ ವದನಂ ಸೌಮ್ಯಂ ಲೋಚನತ್ರಯ ಭೂಷಿತಮ್।
ಪಾತು ನಃ ಸರ್ವ ಭೂತೇಭ್ಯಃ ಕಾತ್ಯಾಯಿನಿ ನಮೋsಸ್ತುತೇ॥
ಜ್ವಾಲಾ ಕರಾಲ ಮೃತ್ಯುಗ್ರಮಶೇಷಾಸುರಸೂದನಮ್।
ತ್ರಿಶೂಲಂ ಪಾತು ನೋ ಭೀತೇರ್ಭದ್ರ ಕಾಲೀ ನಮೋಸ್ತುತೇ॥
ಹಿನಸ್ತಿ ದೈತ್ಯತೇಜಾಂಸಿ ಸ್ವನೇನಾಪೂರ್ಯಯಾ ಜಗತ್।
ಸಾಘಂಟಾ ಪಾತುನೋ ದೇವಿ ಪಾಪೇಭ್ಯೋನಃ ಸುತಾನಿವ॥
ಅಸುರಾಸೃಗ್ವಸಾಂಪಂಕಚರ್ಚಿತಸ್ತೇ ಕರೋಜ್ವಲಃ।
ಶುಭಾಯ ಖಡ್ಗೋ ಭವತು ಚಂಡಿಕೇ ನತ್ವಾಂ ತಾವಯಮ್॥

(ಸರ್ವ ಸ್ವರೂಪಳೂ, ಸರ್ವೇಶ್ವರಿಯೂ, ಸರ್ವ ಶಕ್ತಿಗಳಿಂದ ಕೂಡಿದವಳೂ ಆದ ಹೇ ದುರ್ಗಾದೇವಿಯೆ ನಿನಗೆ ನಮಸ್ಕಾರ; ಸಕಲ ಭಯಗಳಿಂದಲೂ ನಮ್ಮನ್ನು ಪಾರು ಮಾಡು.

ಹೇ ಕಾತ್ಯಾಯಿನಿ, ಮೂರು ಕಣ್ಣುಗಳಿಂದ ಶೋಭಿತವಾದ ನಿನ್ನ ಸೌಮ್ಯ ವದನವು ನಮ್ಮನ್ನು ಸರ್ವ ಭೂತಗಳ ಉಪದ್ರುವದಿಂದ ಕಾಪಾಡಲಿ; ನಿನಗೆ ನಮಸ್ಕಾರ.

ಹೇ, ಭದ್ರಕಾಳಿ, ಜ್ವಾಲೆಗಳಿಂದ ಭಯಂಕರವೂ, ಅತ್ಯುಗ್ರವೂ, ಅಸಂಖ್ಯ ಅಸುರನಾಶಕವೂ ಆದ ನಿನ್ನ ತ್ರಿಶೂಲ ನಮ್ಮನ್ನು ಭಯದಿಂದ ಪಾರುಮಾಡಲಿ; ನಿನಗೆ ನಮಸ್ಕಾರ.

ಹೇ, ದೇವಿ, ಜಗತ್ತಿನಲ್ಲೆಲ್ಲಾ ತನ್ನ ಧ್ವನಿಯನ್ನು ತುಂಬಿ, ದೈತ್ಯರ ತೇಜಸ್ಸನ್ನು ನಾಶಮಾಡುವ ನಿನ್ನ ಘಂಟೆಯು, ತಾಯಿಯು ಮಕ್ಕಳನ್ನು ರಕ್ಷಿಸುವಂತೆ ನಮ್ಮನ್ನು ರಕ್ಷಿಸಲಿ; ನಿಮಗೆ ನಮಸ್ಕಾರ.

ಹೇ, ಚಂಡಿಕೇ, ಅಸುರರ ರಕ್ತ, ಮಾಂಸಗಳಿಂದ ಲೇಪಿತವಾಗಿ, ತೇಜೋಮಯವಾಗಿರುವ ನಿನ್ನ ಖಡ್ಗವು ನಮಗೆ ಶುಭವನ್ನುಂಟುಮಾಡಲಿ; ನಿನಗೆ ನಮಸ್ಕಾರ.

ನೆಲದ ಮೇಲೆ ಕುಸಿದು ಕುಳಿತು, ಬಿಕ್ಕಿ ಬಿಕ್ಕಿ ಅಳುತ್ತಾ, ದೇವೀ ಸ್ತುತಿಯನ್ನು ಹೇಳಿ, ಭಯವನ್ನು ನಿವಾರಿಸೆಂದು ಬೇಡಿಕೊಂಡರು.

ಇದ್ದಕ್ಕಿದ್ದ ಹಾಗೇ ಅವರ ಸುತ್ತಲಿದ್ದ ಎಲ್ಲ ಸದ್ದೂ ಸತ್ತುಹೋಗಿ, ಅವರು ಬಿಕ್ಕಿ ಬಿಕ್ಕಿ ಅಳುವ ಸದ್ದೊಂದು ಮಾತ್ರ, ಹತ್ತರಷ್ಟು ಹೆಚ್ಚು ಸದ್ದಾಗಿ ಕೇಳಿಸಿತು.

ಆ ಬಿಕ್ಕಿ ಬಿಕ್ಕಿ ಅಳುವ ಸದ್ದಿನಲ್ಲೇ, ಎಲ್ಲೋ ಯಾರೋ ಮೃದುವಾಗಿ ನಗುವ ಸದ್ದು ಕೇಳಿಬಂದಿತು.

ಆ ನಗುವನ್ನು ಕೇಳಿ ವೆಂಕಟದಾಸಪ್ಪನವರ ಅಳು ತನ್ನಷ್ಟಕ್ಕೆ ತಾನೇ ಬತ್ತಿ ಹೋಯಿತು.

"ಯಾರದು? "

—ಎಂದು ಕೇಳಿದರು. ಅವರು ಗಟ್ಟಿಯಾಗಿ ಕೇಳಬೇಕು ಎಂದುಕೊಂಡ ಆ ಮಾತು ಪಿಸುಧ್ವನಿಯಾಗಿ ಹೊರಬಂದಿತು.

ಆ ಮಾತಿಗೆ, ಅವರ ಪ್ರಶ್ನೆಗೆ ಯಾರೂ ಉತ್ತರ ಕೊಡಲಿಲ್ಲ. ಮಾತ್ರೊಮ್ಮೆ ಮೃದುವಾಗಿ ನಕ್ಕದ್ದು ಕೇಳಿಸಿತು.

ಆ ನಗುವನ್ನೇ, ಮೈಯೆಲ್ಲ ಕಿವಿಯಾಗಿ ಆಲಿಸಿದರು ವೆಂಕಟದಾಸಪ್ಪನವರು—

ನಗು—ಅದು ನಗುವೇ. ಅದೂ ಬಹು ಕೋಮಲವಾದ ಹೆಣ್ಣು ಕಂಠದ ನಗು !

"ಯಾರದು?"

—ಮತ್ತೊಮ್ಮೆ ಪ್ರಶ್ನಿಸಿದರು ವೆಂಕಟದಾಸಪ್ಪನವರು. ಪ್ರಶ್ನಿಸಿದರೂ ಅವರಿಗೆ ತಮ್ಮ ಪ್ರಶ್ನೆಗೆ ಉತ್ತರ ದೊರೆಯುವುದೆಂಬ ನಂಬಿಕೆ ಇರಲಿಲ್ಲ.

"ನಾನೇ"

—ಇದ್ದಕ್ಕಿದ್ದ ಹಾಗೇ ಉತ್ತರ ಬಂತು.

ಆ ಉತ್ತರ ಕೇಳಿ ಬರುತ್ತಿದ್ದ ಹಾಗೇ, ವೆಂಕಟದಾಸಪ್ಪನವರಿಗೆ ಎಲ್ಲೋ, ಯಾರೋ, ನೂರಾರು ಶ್ರುತಿಬದ್ಧವಾದ ವೀಣೆಗಳನ್ನು ಒಮ್ಮೆಲೆ, ಒಂದೇ ಸ್ಥಾನದಲ್ಲಿ ಮಿಡಿದಂತೆ ಕೇಳಿಸಿ, ರೋಮಾಂಚನವಾಯಿತು. ಆ ಮಾತು ಕೇಳಿ, ಇದ್ದಕ್ಕಿದ್ದ ಹಾಗೇ ಅವರನ್ನು ಕವಿದ ಭಯದ ವಾತಾವರಣ ಕರಗಿಹೋಗಿ ಏನೋ ಧೈರ್ಯ ಬಂದಿತು.

"ನೀನು......ನೀನು...... ಅಂದರೆ...... ಯಾರು ನೀನು?..."

"ನಾನು—ನೀನೇ!"

—ತಂಗಾಳಿಯಷ್ಟು ಮೃದುವಾದ ಧ್ವನಿಯಲ್ಲಿ ಹೇಳಿತು ಆ ಕೋಮಲ ಕಂಠ. ಏಕೋ ಆ ಮಾತಿನಾಳದಲ್ಲಿ ಎಲ್ಲೋ ನಗುವಿನ ಸೆಳಕಿತ್ತು.

"ನಿನ್ನ ಮಾತು ನನಗೆ ಅರ್ಥವಾಗಲಿಲ್ಲ."

—ಆಕೆಯಾಡಿದ ಮಾತು ಅರ್ಥವಾಗದೆ ಕೇಳಿದರು ವೆಂಕಟದಾಸಪ್ಪ.

"ಅರ್ಥವಾಗುವುದಿಲ್ಲ."

—ಅವರ ಮಾತೇ ಮಾರ್ನುಡಿದಂತೆ ಉತ್ತರ ಬಂದಿತು.

"ಏಕೆ?"

"ಆಗುವಾಗ ಆಗುತ್ತದೆ."

"ಈಗೇಕೆ ಆಗಬಾರದು?"

"ಆಗುವುದಿಲ್ಲ."

"ಏಕೆ?"

"ನನ್ನಿಷ್ಟ."

ಆ ಉತ್ತರವನ್ನು ಕೇಳುತ್ತಿದ್ದ ಹಾಗೇ ವೆಂಕಟದಾಸಪ್ಪನವರಿಗೆ, ಏಕೋ ಕಪಾಳಕ್ಕೆ ಹೊಡೆದ ಹಾಗಾಗಿ ತಲೆ ಸುತ್ತಿ ಬಂದು, ಆ ಶಿರೋಭ್ರಮಣೆ ನಿಲ್ಲುವಾಗ ಇದ್ದಕ್ಕಿದ್ದ ಹಾಗೇ ಕನಸಿನಲ್ಲಿ ಯಾರೋ ಹೇಳಿದ—

"ನನ್ನ ಇಷ್ಟ"

—ಎಂಬ ಮಾತು ನೆನಪಾಯಿತು.

ಕೇಳಿದ ಮಾತನ್ನು ಹಾಗೇ ಮೆಲುಕು ಹಾಕುತ್ತಾ, ಎರಡು ಧ್ವನಿಗಳನ್ನು ಮಾನಸ್ಸಿನಲ್ಲೇ ಹೋಲಿಸಿ ಕೇಳಿದರು. ಸಂದೇಹವಿಲ್ಲ—ಎರಡೂ ಒಂದೇ ಧ್ವನಿ!

"ಹಾಗಾದರೆ......ಹಾಗಾದರೆ......"

—ಎಂದು ಏನೋ ಕೇಳಹೊರಟರು.

ಅವರು ಮಾತು ಮುಗಿಸುವ ಮೊದಲೇ ಮತ್ತೊಮ್ಮೆ ಆಕೆ ಮೃದುವಾಗಿ ನಕ್ಕಳು. ಆ ನಗುವನ್ನು ಕೇಳಿ, ವೆಂಕಟದಾಸಪ್ಪನವರಿಗೆ ಏನೋ ಬೋಧೆ ಮಾಡಿದಂತಾಯಿತು. ಸುಮ್ಮನೆ ಕುಳಿತುಬಿಟ್ಟರು.

"ಸುಮ್ಮನೆ ಕುಳಿತುಬಿಟ್ಟೆಯಲ್ಲ—ಈಗೇನು ಮಾಡುತ್ತೀ?"

"ಏನು ಮಾಡಬೇಕು?"

—ದಿಕ್ಕು ತಿಳಿಯದವರಂತೆ ಕೇಳಿದರು ವೆಂಕಟದಾಸಪ್ಪ.

"ಪೂಜೆ ಮಾಡುವುದಿಲ್ಲವೇ?"

—ಬಹು ಮೃದುವಾಗಿ ಕೇಳಿದಳು ಆಕೆ.

ಆ ಮಾತನ್ನು ಕೇಳುತ್ತಿದ್ದ ಹಾಗೇ ವೆಂಕಟದಾಸಪ್ಪನವರನ್ನು ಆವರಿಸಿದ್ದ ಕನಸು ಸಿಡಿದೊಡೆದಂತಾಯಿತು. ಮತ್ತೆ ಅಷ್ಟುಹೊತ್ತು ಮರೆತುಹೋದ ತಮ್ಮ ಸಂಕಲ್ಪ, ಪರೀಕ್ಷೆಯ ಮಾತು ನೆನಪಾಗಿ—

"ಅದಕ್ಕಾಗಿ ನನಗೆ ಹೀಗೆ ಬೆನ್ನು ಬಿದ್ದಿದ್ದೀಯಾ? ನಾನು ಪೂಜೆ ಮಾಡುವುದಿಲ್ಲ."

—ಎಂದರು ಕೊಂಚ ಕಹಿಯಾಗಿ.

"ಇನ್ನೂ ಹಟವೇ?—"

"ಹೂ"

"ಹಾಗಾದರೆ ಬಿಡು."

—ನಿಟ್ಟುಸಿರಿನಂತೆ ಕೇಳಿಸಿತು ಆ ಮಾತು.

"ಬಿಟ್ಟರೆ ಏನು ಮಾಡುತ್ತೀಯಾ?"

"ಮತ್ತೇನು ಮಾಡಲಿ?—ನೀನು ಎಲ್ಲಿಗೆ ಹೋಗುತ್ತೀಯೋ, ನಾನೂ ಅಲ್ಲಿಗೇ ಬರುತ್ತೇನೆ."

"ನಿನಗೂ ಅಷ್ಟು ಹಟವೇ ?"

"ಹೂ"

"ಅದನ್ನು ಬಿಡು."

"ನೀನೇ ಹಟ ಬಿಡು".

"ಅದಾಗುವದಿಲ್ಲ."

"ಏಕೆ?"

"ನಾನು ಬ್ರಾಹ್ಮಣನಿಗೆ ಮಾತು ಕೊಟ್ಟಿದ್ದೇನೆ. ವಚನಾಪಹಾರ ಮಾಡುವುದಿಲ್ಲ."

"ಸರಿ."

"ಹಾಗಾದರೆ ನೀನು ಹೋಗು."

"ಊಹೂ—"

"ಮತ್ತೆ?"

"ನಾನು ನಿನ್ನ ಹಿಂದೆಯೇ ಬರುತ್ತೇನೆ."

"ಏಕೆ?"

"ನನ್ನ ಇಷ್ಟ."

"ತಮ್ಮ ಪ್ರಶ್ನೆಗೆ ಬಂದ ಉತ್ತರವನ್ನು ಕೇಳಿ ಏಕೋ ವೆಂಕಟದಾಸಪ್ಪ ನವರ ಮೈ ಬಿರುಸಾಯಿತು."

"ಹಾಗೇ—ಆಗಲಿ—ಇಗೋ—ನಾನಿನ್ನು ಹೊರಟೆ"

—ಎಂದು ತಟಕ್ಕನೆ ಮೇಲೆದ್ದು ಪುನಃ ಕಾಲು ನಡೆಸಿದತ್ತ ನಡೆಯ ಲಾರಂಭಿಸಿದರು.

ಪುನಃ ಗೆಜ್ಜೆಯ ಸದ್ದು ಅವರನ್ನು ಹಿಂಬಾಲಿಸಿತು. ಈ ಬಾರಿ ಆ ಗೆಜ್ಜೆಯ ಸದ್ದಿನೊಂದಿಗೆ ನವಿರಾದ ಪುಷ್ಪಗಂಧವೂ ಬೆರೆತಿತ್ತು.

ತೆರೆದ ಗವಾಕ್ಷದಿಂದ ನುಳಿದ. ಬೆಳಗಿನಜಾವದ ತಂಗಾಳಿ ಮಲಗಿದ ರಾಜೇಶ್ವರಿಯನ್ನು ಎಚ್ಚರಿಸಿತು.

ಮೈ, ಕವಿದ ನಿದ್ರೆಯಿಂದ ಎಚ್ಚರವಾಗುತ್ತಿದ್ದ ಹಾಗೇ. ರಾಜೇಶ್ವರಿಗೆ, ಆ ದಿನ ತಾನು ಮಾಡಬೇಕಾದ ಕರ್ತವ್ಯದ ನೆನಪಾಯಿತು. ಹಾಗೇ ತನಗೆ ಅಷ್ಟು ದೂರದಲ್ಲಿ ಮಲಗಿದ್ದ ತನ್ನ ತಾಯಿಯನ್ನು ನೋಡಿದಳು.

ರಾತ್ರಿ ಮಲಗುವಾಗ. ಹೇಗೆ ಮುಖ ಅಡಿಯಾಗಿ ಮಲಗಿದ್ದಳೋ., ಈಗಲೂ. ಲಕ್ಷ್ಮೀದೇವಮ್ಮ ಹಾಗೇ ಮಲಗಿದ್ದಳು.

ಹಿಂದಿನ ಇಡೀ ರಾತ್ರಿಯನ್ನು ಆ ತಾಯಿ ಮಕ್ಕಳಿಬ್ಬರೂ ಅಳುತ್ತಾ ಕಳೆದಿದ್ದರು.

ವೆಂಕಟದಾಸಪ್ಪನವರು ಮನೆಬಿಟ್ಟು ಹೊರಟ ಬಳಿಕ ರಾಜೇಶ್ವರಿ. ತನ್ನ ತಾಯಿಗೆ. ಅವರು ಹೇಳಿದ ಮಾತು. ತನಗೆ ಒಪ್ಪಿಸಿದ ಕರ್ತವ್ಯ– ಎಲ್ಲವನ್ನೂ ವರದಿ ಮಾಡಿದ್ದಳು.

ರಾಜೇಶ್ವರಿ ಆ ಮಾತನ್ನು ಹೇಳುತ್ತಿದ್ದ ಹಾಗೇ ಲಕ್ಷ್ಮೀದೇವಮ್ಮ ಸಿಟ್ಟಾಗಿ ಕೂಗಾಡಿದ್ದಳು.

'ಆ ಮನೆಹಾಳ ನನ್ನ ಕೈಗೆ ಸಿಗಲಿ. ಸಿಗಿದು ತೋರಣ ಕಟ್ಟಿ. ಅವನ ಹಡೆದ ಪಾಪ ನಿವೃತ್ತಿ ಮಾಡಿಕೊಳ್ಳುತ್ತೀನಿ."

—ಎಂದು ಹಟ ತೊಟ್ಟಿದ್ದಳು.

ಆದರೆ ಅದಾವುದರಿಂದಲೂ ಉಪಯೋಗವಿಲ್ಲವೆಂದು ರಾಜೇಶ್ವರಿ ತಿಳಿಹೇಳಿದ ಬಳಿಕ, ಬೇರೇನೂ ಮಾಡಲಾಗದೆ—

"ಆ ಮಹಾತಾಯಿ ತಾನಾಗಿ ಈ ಮನೆಗೆ ಬಂದಿದ್ದಳು. ಈ ಭ್ರಷ್ಟ ಹುಟ್ಟಿ, ಈಗ, ಆಕೆ ತಲೆತಲಾಂತರದಿಂದಿದ್ದ ಮನೇನ ಬಿಟ್ಟು ಹೋಗೋ ಹಾಗಾಯಿತು.'

—ಎಂದು ದಿನವಿಡೀ, ದೇವರಮನೆಯಲ್ಲಿ ಊಟ ತಿಂಡಿ ಬಿಟ್ಟು ಅಳುತ್ತಾ ಮಲಗಿಬಿಟ್ಟಳು.

ರಾಜೇಶ್ವರಿ ಏನೇನೋ ಸಮಾಧಾನ ಹೇಳಿದರೂ ಆಕೆಯ ದುಃಖ ಶಮನವಾಗಲಿಲ್ಲ. ರಾತ್ರಿ ಮಲಗುವಾಗಲೂ ಹಾಗೇ ಅಳುತ್ತಾ ಮಲಗಿದಳು.

ಆ ದುಃಖದಲ್ಲಿ ಯಾವಾಗ ನಿದ್ರೆ ಬಂದಿತ್ತೋ ಏನೋ– ಆದರೆ ಹಾಗೆಯೇ ಮಲಗಿದ್ದಳು.

ಅದೆಲ್ಲವೂ ನೆನಪಾಗಿ, ರಾಜೇಶ್ವರಿಗೂ ದುಃಖ ಮರುಕಳಿಸಿತು.

'ತಾಯಿ, ಅವನಿಗೆ ಹಾಗೇಕೆ ಬುದ್ಧಿ ಕೊಟ್ಟೆಯೋ ಏನೋ. ನಿನ್ನ ಮನಸ್ಸಿನಲ್ಲಿ ಹೇಗಾಗಬೇಕೆಂದು ಇದೆಯೋ— ಹಾಗಾಗಲಿ"

—ಎಂದು ಹೇಳಿ, ನಿಟ್ಟುಸಿರಿಟ್ಟು, ಹೊದಿಕೆ ಹೊದೆಯದೆ ಮಲಗಿದ್ದ ತಾಯಿಯ ಬಟ್ಟೆಗಳನ್ನು ಸರಿಪಡಿಸಿ, ಆಕೆಗೆ ಎಚ್ಚರವಾಗದ ಹಾಗೆ ಹಚ್ಚಡವನ್ನು ಹೊದಿಸಿ, ಎದ್ದು ಹೋಗಿ, ಒಲೆಗೆ ಉರಿ ಹಾಕಿ, ತಣ್ಣೀರಿನಲ್ಲೇ ತನ್ನ ಮುಖ ತೊಳೆದು, ಹಣೆಗೆ ಕುಂಕುಮ ಇಟ್ಟುಕೊಂಡು, ಸಣ್ಣ ಧ್ವನಿಯಲ್ಲಿ ಉದಯ ರಾಗದ ಹಾಡನ್ನು ಹಾಡುತ್ತಾ, ಮನೆಯ ಮುಂದಿನ ಅಂಗಳಕ್ಕೆ ನೀರು ಹಾಕಿ ಹೊಸ್ತಿಲು ತೊಳೆದು, ರಂಗವಲ್ಲಿ ಇಟ್ಟು ಬಂದಳು.

ಆ ಕೆಲಸ ಮುಗಿಯುತ್ತಿದ್ದ ಹಾಗೇ ಹಿತ್ತಲಿಗೆ ಹೋಗಿ, ದೇವರ ಪೂಜೆಗೆ ಅಗತ್ಯವಾದ ಹೂವುಗಳನ್ನು ಬಿಡಿಸಿಕೊಂಡು, ಪೂಜೋಪಕರಣಗಳನ್ನೆಲ್ಲಾ ತೊಳೆದುಕೊಂಡು ಬಂದಳು.

ಆಕೆ ಅಷ್ಟು ಕೆಲಸ ಮಾಡಿ ಮುಗಿಸಿದರೂ, ಮಲಗಿದ್ದ ಲಕ್ಷ್ಮೀದೇವಮ್ಮ ಇನ್ನೂ ಎದ್ದಿರಲಿಲ್ಲ.

"ರಾತ್ರಿಯೆಲ್ಲಾ ನಿದ್ದೆ ಮಾಡಿಲ್ಲ, ಯಾವಾಗ ಏಳುತ್ತಾಳೋ ಏಳಲಿ. ಎದ್ದ ಮೇಲೂ ಮನಸ್ಸಿಗೆ ಕಿರಿ ಕಿರಿ ಇದ್ದೇ ಇದೆ. "

—ಎಂದುಕೊಂಡು, ಮಲಗಿದ ಲಕ್ಷ್ಮೀದೇವಮ್ಮನನ್ನು ಎಬ್ಬಿಸದೆ, ತನ್ನ ಪಾಡಿಗೆ ತಾನು ಹೋಗಿ, ಸ್ನಾನ ಮುಗಿಸಿ, ವೆಂಕಟದಾಸಪ್ಪನವರು ಹೇಳಿದಂತೆ ತಾನೇ ಆ ದಿನದ ದೇವರ ಪೂಜೆ ಮುಗಿಸಲು ಬಂದಳು.

ಆಗ, ಆಕೆಗೆ, ಒಂದು ಗಳಿಗೆ, ರಾತ್ರಿ ಮನೆಗೆ ಬರದ ಅಣ್ಣನ ನೆನಪಾಯಿತ್ತು,

'ಎಲ್ಲಿ ಹೋದನೋ, ಏನೋ? ರಾತ್ರಿ ಎಲ್ಲಿ ಮಲಗಿದನೋ, ಊಟಕ್ಕೆ ಏನು ಮಾಡಿದನೋ?'

—ಎಂಬ ಯೋಚನೆ ಬಂದು ಕಣ್ಣಲ್ಲಿ ನೀರು ತುಂಬಿತು.

ಆ ಯೋಚನೆಯಲ್ಲಿ ಏಕೋ ಆಕೆಗೆ ಮೈ—ಕೈಯೆಲ್ಲಾ ಜಡವಾಗಿ ಏನು ಕೆಲಸ ಮಾಡಲೂ ಆಗಲಿಲ್ಲ.

ಆದರೆ ಆ ವೇಳೆಗೆ ಎಷ್ಟೋ ಗ್ರಾಮದಲ್ಲಿ ಕೇಳಿಬಂದ ಜಾತ್ರೆಯ ಆರಂಭದ ಉರುಮೆ, ಕಹಳೆಗಳ ಸದ್ದು ಕೇಳಿ ಬಂದು. ಕರ್ತವ್ಯ ಬುದ್ಧಿಯನ್ನು ಎಚ್ಚರಿಸಿತು. ಕಣ್ಣಿನಲ್ಲಿ ನೀರು ಹಾಕುತ್ತಲೇ, ದೇವರ ಕಟ್ಟೆಯ ಕೆಳಗಿದ್ದ ಪೆಟ್ಟಿಗೆಯಿಂದ, ಅದರಲ್ಲಿದ್ದ. ಜಾತ್ರೆಯ ಕಾಲದಲ್ಲಿ ಮಾತ್ರ ದೇವಿಯ ವಿಗ್ರಹಕೆ ಅಲಂಕಾರ ಮಾಡಲು ಉಪಯೋಗಿಸುತ್ತಿದ್ದ ವಸ್ತ್ರಾಭರಣಗಳನ್ನು ತೆಗೆದುಕೊಂಡು, ಮಂಟಪದಲ್ಲಿದ್ದ ರಾಜರಾಜೇಶ್ವರಿಯ ವಿಗ್ರಹವನ್ನು ಕೆಳಗಿಳಿಸಿ, ತನ್ನ ತೊಡೆಯ ಮೇಲಿಟ್ಟುಕೊಂಡು. ವಿಗ್ರಹವನ್ನು ಅಲಂಕರಿಸಿ, ಮಂಟಪದ ಮುಂದೆ ಇದ್ದ ಮಣೆಯ ಮೇಲೆ ಪೂಜೆಗೆ ಇಟ್ಟುಕೊಂಡಳು.

ಸಾಲಂಕೃತವಾದ ದೇವಿಯ ವಿಗ್ರಹವನ್ನು ನೋಡಿದ ಬಳಿಕ ರಾಜೇಶ್ವರಿಗೆ ಏಕೋ ದುಃಖ ತಡೆಯಲಾಗಲಿಲ್ಲ.

'ತಾಯಿ...... ತಾಯೀ...... ನಮ್ಮ ಮನೆ ಬಿಟ್ಟು ಹೋಗು ತ್ತೀಯಾ...... ಅಮ್ಮಾ......'

—ಎಂದು ಎಳೆಯ ಮಗುವಿನ ಹಾಗೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಆದರೆ ಹಳ್ಳಿಯತ್ತಣಿಂದ ಮತ್ತಷ್ಟು ಜೋರಾಗಿ ಕೇಳಿ ಬರುತ್ತಿದ್ದ ತಮಟೆ, ಕಹಳೆ, ಉರುಮೆಗಳ ಸದ್ದು ಮತ್ತೊಮ್ಮೆ ರಾಜೇಶ್ವರಿಯನ್ನು ಎಚ್ಚರಿಸಿತು.

ಎಚ್ಚೆತ್ತು—

'ಇವತ್ತಾದರೂ ಒಂದು ದಿನ ಮನಃಪೂರ್ತಿಯಾಗಿ ನಿನ್ನ ಪೂಜೆ ಮಾಡಿ ಬಿಡ್ತೇನೆ.'

—ಎಂದುಕೊಂಡು, ಸೆರಗಿನ ತುದಿಯಿಂದ, ಕಣ್ಣು ಒರೆಸಿಕೊಂಡು, ನೀಲಾಂಜನವನ್ನು ಹೊತ್ತಿಸಿ, ಅಲಂಕಾರವಾಗಿ ಎರಡು ಹೂವಿಟ್ಟು,ಅಷ್ಟೋತ್ತರ ಹೇಳಿಕೊಂಡು, ಪೂಜೆ ಮಾಡಬೇಕೆಂದು ಕುಂಕುಮದ ಬಟ್ಟಲು ಕೈಗೆ ತೆಗೆದುಕೊಂಡಳು. ಆದರೆ ಅಷ್ಟೋತ್ತರದ ಮಂತ್ರಕ್ಕಿಂತ ಮೊದಾಗಿ, ಅಳು ಹೊರಹೊಮ್ಮಿ, ಕಣ್ಣಿನಲ್ಲಿ ನೀರು ಧಾರೆಧಾರೆಯಾಗಿ ಉಕ್ಕಿ,…

'ಊಹೂ……ಊಹೂ……ನನ್ನ ಕೈಲಿ ನಿನ್ನ ಪೂಜೆ ಮಾಡೋದಾಗೋಲ್ಲ…… ನೀನಗಿವತ್ತು ಕುಂಕುಮಾರ್ಚನೆ ಮಾಡೋಕಾಗೋಲ್ಲ… ಕಣ್ಣೀರಿನ ಅಭಿಷೇಕಾನೇ ಆಯ್ತು……' .

—ಎಂದು ಕುಂಕುಮದ ಬಟ್ಟಲನ್ನೇ, ವಿಗ್ರಹದ ಮೇಲೆ ಬಗ್ಗಿಸಿ, ಅಷ್ಟು ಅರಿಸಿನ, ಹೂವು, ಮಂತ್ರಾಕ್ಷತೆಯನ್ನು ಹಾಕಿ, ಅಳುತ್ತಲೇ ಆರತಿ ಮಾಡಿ ಮುಗಿಸಿ, ಪೂಜಾ ಮಂದಿರದಲ್ಲಿ ಇರಲೂ ಆಗದೆ, ಹೊರಗೆ ಬಂದಳು.

ರಾಜೇಶ್ವರಿ ದೇವರ ಮನೆಯಿಂದ ಹೊರಗೆ ಬರುವ ವೇಳೆಗೆ ಎಚ್ಚೆತ್ತ ಲಕ್ಷ್ಮೀದೇವಮ್ಮ ರಾಜೇಶ್ವರಿಯನ್ನು ನೋಡಿ—

"ಆಗ್ಲೇ ಸ್ನಾನ, ಪೂಜೆ ಎಲ್ಲಾ ಆಯ್ತ ರಾಜೇಶ್ವರಿ"

—ಎಂದು ಕೇಳಿದಳು.

"ಹೂ."

"ಸರಿ".

—ಎಂದು ಭಾರವಾಗಿ ನಿಟ್ಟುಸಿರಿಟ್ಟು ಲಕ್ಷ್ಮೀದೇವಮ್ಮ—

"ಇನ್ನೇನು ಅಪ್ಪೋರನ್ನ ಕರೆದುಕೊಂಡು ಹೋಗೋಕೆ ದೇವಸ್ಥಾನದಿಂದ ಪಾಲಕಿ ಬರೋ ಹೊತ್ತಾಯ್ತು. ನಾನೂ ಹೋಗಿ, ಸ್ನಾನ ಮುಗಿಸಿ ಎರಡು ಹೂವು ಹಾಕ್ತೀನಿ. ಈ ಜನ್ಮಕ್ಕೆ ಇದೇ ಕಡೇ ಪೂಜೇನೋ ಏನೋ?"

—ಎಂದುಕೊಳ್ಳುತ್ತಲೇ ಸ್ನಾನ ಮಾಡಲು ಹೋದಳು.

ರಾಜೇಶ್ವರಿ ಏನೊಂದೂ ಮಾತಾಡದೆ ಪಡಸಾಲೆಯಲ್ಲೇ ಕುಳಿತಿದ್ದಳು.

ಲಕ್ಷ್ಮೀದೇವಮ್ಮನೂ ಅವಸರವಸರವಾಗಿ ಸ್ನಾನ, ಪೂಜೆ ಮುಗಿಸಿ, ತಾನೂ ಪಡಸಾಲೆಗೆ ಬಂದು ಮಗಳ ಜೊತೆಯಲ್ಲಿ ಕುಳಿತಳು.

ಆದರೆ ಆ ಇಬ್ಬರೂ ಒಬ್ಬರೊಂದಿಗೆ ಒಬ್ಬರು ಮಾತಾಡಲಿಲ್ಲ. ಒಬ್ಬರ ಮುಖವನ್ನೊಬ್ಬರು ನೋಡಲಿಲ್ಲ. ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಮುಖ ತಿರುಗಿಸಿ ಕುಳಿತಿದ್ದರು.

ಗಳಿಗೆ ಗಳಿಗೆಗೆ ಹಳ್ಳಿಯಲ್ಲಿ ಉರುಮೆ. ತಮಟೆ, ಕಹಳೆಗಳ ಸದ್ದು ಹೆಚ್ಚಾಗಿ, ಕಿವಿ ಗಡಚಿಕ್ಕಿಸುವಂತೆ ಮೊರೆಯುತ್ತಾ, ಇವರ ಮನೆಯ ಬಳಿಗೇ ಬರುತ್ತಿತ್ತು.

## ೧೮

ಸ್ವಲ್ಪ ಹೊತ್ತಿನಲ್ಲೇಯೇ ದೂರದಲ್ಲಿದ್ದ ತಮಟೆ, ಕಹಳೆಗಳ ಸದ್ದು ಹತ್ತಿರಾಗಿ, ಅದರೊಂದಿಗೆ ಜನರ ಕೇಕೆಯ ರವವೂ ಕೇಳಿಬಂತು. ಅಮ್ಮ ನವರನ್ನು ದೇವಾಲಯಕ್ಕೆ ಕರೆದೊಯ್ಯುವ ಸಣ್ಣ, ಬೆಳ್ಳಿಯ ಪಾಲಕಿ, ವೆಂಕಟ ದಾಸಪ್ಪನವರ ಮನೆಯ ಮುಂದೆ ಬಂದು ನಿಂತಿತು.

ಉರುಮೆಗಳು ಗರ್ಗರಿಸಿ, ಕಹಳೆಗಳು ಮೊರೆದು ಶಾಂತವಾದವು.

ಮಿಂದು ಮಡಿಯುಟ್ಟು, ಮೈಗೆ ವಿಭೂತಿಯನ್ನು ಹಚ್ಚಿಕೊಂಡ ಅಚ್ಚಣ್ಣಭಟ್ಟರು, 'ದಾಸಣ್ಣಾ' ಎಂದು ಕೂಗುತ್ತಾ ವೆಂಕಟಗಿರಿಜೋಯಿಸ ರೊಂದಿಗೆ ಒಳಗೆ ಬಂದರು.

ದೇವಿಯನ್ನು ಕರೆದೊಯ್ಯಲು ಒಳಗೆ ಬಂದ ಅವರನ್ನು ನೋಡಿ ಮತ್ತೆ ರಾಜೇಶ್ವರಿಯ ಕಣ್ಣಲ್ಲಿ ನೀರು ಹರಿಯಲಾರಂಭಿಸಿತು.

"ದಾಸಣ್ಣ ಮನೇಲಿಲ್ವೇ ರಾಜಕ್ಕ?"

—ವೆಂಕಟಗಿರಿಜೋಯಿಸರು ಕೇಳಿದರು.

ಕಣ್ಣಿನಲ್ಲಿ ಹರಿಯುತ್ತಿದ್ದ ನೀರನ್ನು ಒರಸಿಕೊಳ್ಳುತ್ತಲೇ, ರಾಜೇಶ್ವರಿ ತಲೆಯಾಡಿಸಿ, ವೆಂಕಟದಾಸಪ್ಪನವರು ಮನೆಯಲ್ಲಿಲ್ಲವೆಂದು ಸೂಚಿಸಿದಳು. ಲಕ್ಷ್ಮೀದೇವಮ್ಮನಂತೂ ಯಾವುದನ್ನೂ ನೋಡಲಾಗದಂತೆ ಗೋಡೆಯ ಕಡೆ ಮುಖ ತಿರುಗಿಸಿ ಕುಳಿತುಬಿಟ್ಟಿದ್ದಳು.

"ದಾಸಣ್ಣ......ಮನೇಲಿ......ಇಲ್ವೇ?"

—ಅಚ್ಚಣ್ಣಭಟ್ಟರು ಕೇಳಿದರು.

"ಊಹೂ......"

"ಮತ್ತೆ...... ಮತ್ತೆ...... ಅಮ್ಮನೋರ ವಿಗ್ರಹ......"

"ನನಗೇ ಹೇಳಿದಾನೆ...... ಕೊಡ್ತೀನಿ...... ಬನ್ನಿ."

—ಎಂದು ಉಕ್ಕಿ ಬರುವ ಅಳುವನ್ನು ಪ್ರಯತ್ನಪಟ್ಟು ತಡೆಹಿಡಿದು ರಾಜೇಶ್ವರಿ ದೇವರ ಮನೆಯ ಕಡೆ ನಡೆದಳು.

ಅಚ್ಚಣ್ಣಭಟ್ಟರೂ, ದೇವಿಯನ್ನು ಪಾಲಕಿಯಲ್ಲಿ ಕೂಡಿಸುವ ರಜತ ಪೀಠವನ್ನು ಹಿಡಿದ ವೆಂಕಟಗಿರಿಯಪ್ಪನವರೂ ಮೂಕರಾಗಿ ಆಕೆಯನ್ನು ಹಿಂಬಾಲಿಸಿದರು..

ಯಾವುದೋ ಕನಸಿನಲ್ಲಿದ್ದವಳಂತೆ ರಾಜೇಶ್ವರಿ ದೇವರ ಮನೆಯ ಬಳಿ ಹೋದಳು. ಆ ಬಾಗಿಲ ಬಳಿ ಬರುತ್ತಿದ್ದ ಹಾಗೇ, ಯಾವುದೋ ಅವ್ಯಕ್ತ ಶಕ್ತಿ ತನ್ನನ್ನು ತಡೆದಂತಾಗಿ ತಟಕ್ಕನೆ ಬಾಗಿಲಲ್ಲೇ ನಿಂತು ನೋಡಿದಳು.

ದೇವರಮನೆಯಲ್ಲಿ ಹತ್ತಾರು ಸೊಡರುಗಳನ್ನು ಹೊತ್ತಿಸಿದಷ್ಟು ಬೆಳಕಾಗಿತ್ತು. ನೂರಾರು ಕೇದಗೆಯ ಹೂವುಗಳನ್ನು ಹರಡಿದಷ್ಟು ಸುವಾಸನೆ ಹರಡಿತ್ತು.

''ಇದೆಲ್ಲಿಯ ಸುವಾಸನೆ, ಇದೆಲ್ಲಿಯ ಬೆಳಕು''

—ಎಂದುಕೊಳ್ಳುತ್ತಾ, ಚಕಿತಳಾಗಿ, ರಾಜೇಶ್ವರಿ ಮಂಟಪದ ಮುಂದೆ ಇರಿಸಿದ ಮಣೆಯ ಮೇಲಿದ್ದ ಅಮ್ಮನವರ ವಿಗ್ರಹದತ್ತ ನೋಡಿದಳು.

ನೋಡುತ್ತಿದ್ದ ಹಾಗೇ, ಅವಳಿಗೆ ಪ್ರಜ್ಞೆ ತಪ್ಪಿದಂತಾಗಿ—

''ಅಮ್ಮಾ''

—ಎಂದು ಚೀರಿ ಕೆಳಗುರುಳಿದಳು.

''ಏನು ಏನಾಯಿತು?''

—ಎಂದು ಕೇಳುತ್ತಾ, ಅಚ್ಚಣ್ಣಭಟ್ಟರು ವೆಂಕಟಗಿರಿಜೋಯಿಸರೂ ದೇವರಮನೆಯೊಳಗೆ ನುಗ್ಗಿದರು.

ಯಾವುದೋ ಶಕ್ತಿ ಅವರ ಎದೆಯನ್ನು ಒತ್ತಿ ಹಿಂದೆ ದಬ್ಬಿದಂತಾಯಿತು.

''ಅರೆ—ಇದೇನು?''

—ಎಂದುಕೊಳ್ಳುತ್ತಾ, ಅವರು ವಿಗ್ರಹದತ್ತ ನೋಡಿದರು—

 

ದೈತ್ಯಾಕಾರದ ಕೃಷ್ಣಸರ್ಪವೊಂದು, ಭಯಂಕರವಾಗಿ ಬುಸುಗರೆಯುತ್ತಾ ಅಮ್ಮನವರ ವಿಗ್ರಹವನ್ನು ಸುತ್ತುಹಾಕಿ, ಆಕೆಯ ತಲೆಯ ಮೇಲೆ ತನ್ನ ಹೆಡೆಯರಳಿಸಿತ್ತು.

ಮೂಗು ಒಡೆಯುವಷ್ಟು ದಟ್ಟವಾದ ಕೇದಗೆಯ ಹೂವಿನ ವಾಸನೆ ದೇವರ ಮನೆಯ ತುಂಬಾ ಇಡುಗಿತ್ತು.

ಹಾವು ಹೆಡೆಯರಳಿಸಿ, ಅತ್ತಿಂದಿತ್ತ ಹೆಡೆ ತೂಗುತ್ತಾ ಬುಸುಗುಟ್ಟುತ್ತಿತ್ತು

ಅದನ್ನು ಕಂಡು ವೆಂಕಟಗಿರಿ ಜೋಯಿಸರೂ, ಅಚ್ಚಣ್ಣಭಟ್ಟರೂ, ಇಬ್ಬರೂ ಹಾಗೇ ಕಡೆದ ವಿಗ್ರಹದಂತೆ ನಿಂತು ಬಿಟ್ಟರು.

---

## ೧

'ಗಲ್ – ಜಲ್'

—ಮೃದುವಾದ, ಇನಿದಾದ ಗೆಜ್ಜೆಯ ಸದ್ದು, ಎಡಬಿಡದೆ ವೆಂಕಟದಾಸಪ್ಪನವರನ್ನು ಹಿಂಬಾಲಿಸಿತ್ತು.

ಎಲ್ಲಿಗೆ ಹೋಗಬೇಕೆಂಬ ಗುರಿಯಿಲ್ಲದೆ, ಎಲ್ಲಿಯೂ ನಿಲ್ಲುವ ಮನಸ್ಸಿಲ್ಲದೆ, ಕಾಲು ನಡೆಸಿದತ್ತ ಇರುಳೆಲ್ಲಾ ಅಲೆದಲೆದು, ಕೈಕಾಲುಗಳು ಬಳಲಿ ಬೆಂಡಾಗಿದ್ದರೂ, ಕರಗವನ್ನು ಹೊತ್ತವರಂತೆ, ವೆಂಕಟದಾಸಪ್ಪನವರು ನಡೆಯುತ್ತಲೇ ಇದ್ದರು.

ರಾತ್ರಿ ತಡವಾಗಿ ಮೂಡಿದ ಚಂದ್ರ ಮುಳುಗಿ ಮತ್ತೆ ಕತ್ತಲಾವರಿಸಿ, ಆ ಕತ್ತಲೂ ಕರಗಿ, ಮುಗಿಲಿನಲ್ಲಿ ಮುಂಜಾವಿನ ಕೆಂಪು ಮೂಡಿದರೂ, ವೆಂಕಟದಾಸಪ್ಪನವರ ನಡೆತ ನಿಂತಿರಲಿಲ್ಲ.

'ಗಲ್–ಜಲ್'

—ಎಂದು ಗೆಜ್ಜೆಯ ಸದ್ದೂ ಅವರನ್ನು ಎಡೆಬಿಡದೆ ಹಿಂಬಾಲಿಸಿತ್ತು.

ಕಾಲು, ಕತ್ತಲಿನಲ್ಲಿ ಎಡವುತ್ತಾ ಮುಗ್ಗರಿಸುತ್ತಾ ನಡೆದಿರುವಾಗಲೂ, ಅವರ ಕಿವಿ, ತಮ್ಮನ್ನು ಹಿಂಬಾಲಿಸಿದ ಗೆಜ್ಜೆಯ ನಾದದಲ್ಲಿ ಕೇಂದ್ರೀಕೃತವಾಗಿತ್ತು.

ಅವರ ಕಣ್ಣಿಗೆ, ಕಾಣದ ಜಾಡನ್ನು ಕಾಣಬೇಕೆಂಬ ಪ್ರಯತ್ನವನ್ನು ಮಾಡುವ ಶಕ್ತಿಯೂ ಇದ್ದಂತಿರಲಿಲ್ಲ. ದೇಹಕ್ಕೆ ಚಳಿ–ಗಾಳಿಯ ಪರಿವೆಯೂ ಇರಲಿಲ್ಲ.

ಅವರ ಪಾಲಿಗೆ ಸಕಲ ಜಗತ್ತು, ಬೆನ್ನುಹತ್ತಿ ಬರುವ ಗೆಜ್ಜೆಯ ಸದ್ದಿನಲ್ಲಿ ಕರಗಿಹೋದಂತ್ತಿತ್ತು.

ಹಾಗೆ ನಡೆಯುವಾಗ ಒಮ್ಮೊಮ್ಮೆ, ಅವರಿಗೆ, ಆ ಸದ್ದಿಗೆ ತಮ್ಮನ್ನು ಹಿಂಬಾಲಿಸಿ ಬರಬೇಡ ಎಂದು ಹೇಳಬೇಕು ಎನಿಸುತ್ತಿತ್ತು. ಆದರೆ ಮರುಗಳಿಗೆಯೇ ಅಂಥ ಮಾತಿನಿಂದ ಏನೂ ಉಪಯೋಗವಾಗದು ಎಂಬುದು ಅರಿವಾಗಿ, ಸುಮ್ಮನೆ ಮುಂದೆ ನಡೆಯುತ್ತಿದ್ದರು.

ಯಾವಾಗಲಾದರೊಮ್ಮೆ, ಕತ್ತಲಿನಲ್ಲಿ ಕಾಣದೆ ನಡೆಯುವಾಗ, ಕಲ್ಲು ತುಳಿದೋ, ಮುಳ್ಳು ಇರಿದೋ ತಮ್ಮ ಕಾಲಿಗೆ ನೋವಾದಾಗ ಅವರಿಗೆ ತಮ್ಮನ್ನು ಹಿಂಬಾಲಿಸಿ ಬರುತ್ತಿರುವ ಕೋಮಲ ಪಾದಗಳ ನೆನಪಾಗಿ 'ಅಯ್ಯೋ, ನನ್ನ ಒರಟು ಕಾಲುಗಳಿಗೆ ಇಷ್ಟು ನೋವಾಗುತ್ತಿರುವಾಗ, ತಾಯಿಯ ಎಳೆ ಚಿಗುರಿನಂಥ ಮೃದು ಪಾದಗಳಿಗೆ ಮತ್ತೆಷ್ಟು ನೋವಾಗು ತ್ತಿರಬಹುದು. ಹೀಗೆ ಕಲ್ಲು, ಮುಳ್ಳುಗಳ ಮೇಲೆ ಆಕೆಯನ್ನು ನಡೆಸಿ, ನಡೆಸಿ ನೋಯಿಸುತ್ತಿದ್ದೇನಲ್ಲಾ, ನಾನೆಂಥ ಕಟುಕ, ನಾನೆಂಥ ಪಾಪಿ' ಎನಿಸಿ ಅವರ ಹೃದಯ ಮೃದುವಾಗಿ, ಕಣ್ಣಿನಲ್ಲಿ ನೀರಾಡಿ, 'ಛೆ. ಇನ್ನಾಕೆಯನ್ನು ನೋಯಿಸ ಬಾರದು. ಇಷ್ಟು ದಣಿಸಿದುದು ಸಾಕು' ಎನಿಸುವುದು. ಹಾಗೆನಿಸಿದಾಗ—

'ತಾಯೀ—ಈ ಅಲೆತ ಸಾಕು. ಇನ್ನೆಷ್ಟು ದೂರ ಈ ಚಂಡಾಲನನ್ನು ಹಿಂಬಾಲಿಸುತ್ತಾ ಬರುತ್ತೀಯ?'

—ಎಂದು ಕೂಗಿ ಹೇಳಬೇಕು ಎಂದು ತೋರುವುದು.

ಅವರೇನೊ ಹೇಳಬಹುದು—

ಆದರೆ 'ಆಕೆ' ಕೇಳುತ್ತಾಳೆಯೇ?

ಆಕೆ ತಮ್ಮ ಮಾತನ್ನು ಕೇಳುವುದಿರಲಿ, ತಮ್ಮ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳುವ ನಂಬಿಕೆಯೂ ಅವರಿಗಿರಲಿಲ್ಲ. ತಾವು ಹಟಗಾರ ರಾದರೆ 'ಆಕೆ' ತಮಗಿಂತಲೂ ಹೆಚ್ಚಿನ ಹಟಗಾತಿ! 'ಆದದ್ದಾಗಲಿ, ನನ್ನ ಇಷ್ಟ ವನ್ನೇ ನಡೆಸಿಕೊಳ್ಳುತ್ತೇನೆ' ಎಂಬ ಛಲದಿಂದ ಅವರ ಬೆನ್ನು ಹತ್ತಿದ್ದಾಳೆ. ಹಾಗಿರುವಾಗ ಬೇರೆ ಮಾತು ಆಕೆಗೆ ಪಥ್ಯವಾಗುವುದೇ? 'ಆಗಲಿ—ಅಷ್ಟು ಹಟವಿದ್ದರೆ, ಅದರ ಫಲವನ್ನು ಅನುಭವಿಸಲಿ. ನನಗೇನು?' ಎನಿಸಿ ಕ್ಷಣಕಾಲ ಮೃದುವಾದ ಅವರ ಹೃದಯ ಮತ್ತೆ ಕರ್ಕಶವಾಗುವುದು.

ಹೃದಯ ಮೃದುವಾದಾಗ ಒಂದು ಕ್ಷಣಕಾಲ ನಿಂತ ಪಂಚಟದಾಸಪ್ಪ ನವರು, ಮತ್ತೆ ಆ ಕರ್ಕಶತೆಯಲ್ಲಿ ದಾಪುಗಾಲು ಹಾಕುತ್ತಾ ನಡೆಯ ಲಾರಂಭಿಸುವರು.

ಅವರು ನಿಂತಾಗ ಒಂದುಕ್ಷಣ ಕೇಳದಾದ ಗೆಜ್ಜೆಯ ಸದ್ದು, ಅವರು, ನಡೆಯಲಾರಂಭಿಸಿದ ಬಳಿಕ, ಮತ್ತೆ ಅವರನ್ನು ಹಿಂಬಾಲಿಸುವುದು.

ಮುಂದೆ ವೆಂಕಟದಾಸಪ್ಪ, ಅವರ ಹಿಂದೆ ಗೆಜ್ಜೆಗಾಲು.

ಅವರ ನಡೆತ, ಗೆಜ್ಜೆಗಾಲಿನ ಹಿಂಬಾಲಿಸುವಿಕೆ ಎರಡಕ್ಕೂ ಕೊನೆ ಇದ್ದಂತಿರಲಿಲ್ಲ.

ಹಾಗೆ ನಡೆಯುತ್ತಾ ಒಮ್ಮೊಮ್ಮೆ ಅವರಿಗೆ 'ಎಷ್ಟು ದೂರ, ಎಷ್ಟು ಕಾಲ ಹೀಗೆ ನಡೆಯುವುದು?' ಎನಿಸಿ, ಹಟದಿಂದ ಬಿರುಸಾದ ಅವರ ನರನಾಡಿಗಳಲ್ಲಿ ಭೀತಿ ಸುಳಿಯುವುದು.

ಒಂದುಗಳಿಗೆ ಆ ಭೀತಿ–ಮರುಗಳಿಗೆಯೇ ಹಟ, ಕೆರಳಿದ ಹಟ, ಹಾವಿನಂತೆ ಹೆಡೆಯೆತ್ತಿ–

'ಆಗಲಿ, ಹೀಗೇ ನಡೆನಡೆಯುತ್ತಾ ಈ ಘಟ ಉರುಳಿ ಹೋದರೂ ಸರಿಯೇ. ಎಷ್ಟು ನಡೆಸುತ್ತೀಯೋ, ಎಷ್ಟು ದಿವಸ ಅಲೆಸುತ್ತೀಯೋ ಅಲೆಸು. ನಾಲಗೆ ಕೆಡುವುದಕ್ಕಿಂತ, ಈ ದೇಹ ಉರುಳುವುದೇ ಮೇಲು.'

–ಎಂದು ಮತ್ತೆ ಶಪಥ ಮಾಡುತ್ತಾ ಮುಂದೆ ನಡೆಯುವರು.

ಮುಂದೆ ನಡೆಯುವ ವೆಂಕಟದಾಸಪ್ಪನವರಲ್ಲಿ ಭಾವ ಪರಿವರ್ತನೆಯಾದಂತೆಯೇ, ಗೆಜ್ಜೆಯ ಸದ್ದಿನ ಧ್ವನಿಯೂ ಆಗಾಗ ಬದಲಾವಣೆಯಾದಂತೆ ಅವರಿಗೆ ತೋರುವುದು.

ಒಮ್ಮೆ ಅದು ಕಿಲಕಿಲ ನಕ್ಕಹಾಗೆ ಕೇಳಿಸಿದರೆ, ಮತ್ತೊಮ್ಮೆ ಆಯಾಸದಿಂದ ಸುಯ್ದಂತೆ ಕೇಳಿಸುವುದು; ಒಮ್ಮೆ ತೃಪ್ತಿಯ ಭಾರವಾದ ಉಸಿರೆಳೆದಂತೆ ತೋರಿದರೆ, ಮತ್ತೊಮ್ಮೆ ದುಃಖದ ನಿಟ್ಟುಸಿರಿಟ್ಟಂತೆ ಕೇಳಿಸುವುದು.

ಹಾಗೆ, ಗೆಜ್ಜೆಯ ಧ್ವನಿಯಲ್ಲಿ ಒಮ್ಮೊಮ್ಮೆ ಭಾವಪರಿವರ್ತನೆಯಾದಂತೆ ತೋರಿದಾಗಲೂ, ಹಟದಿಂದ ಮುಂದೆ ನಡೆಯುತ್ತಿದ್ದ ಅವರ ಕಾಲುಗಳನ್ನು ತಡೆದಂತಾಗುವುದು. ಹಾಗೇ ನಿಂತು, ತಮ್ಮನ್ನು ತಾವೇ ಪ್ರಶ್ನಿಸಿಕೊಳ್ಳುವರು–

'ತಾಯಿ ನಗುತ್ತಿದ್ದಾಳೇಕೆ? ನನ್ನ ಹಟವನ್ನು ಕಂಡು ಆಕೆಗೆ ನಗು ಬರುತ್ತಿದೆಯೇ?'

'ನಿಟ್ಟುಸಿರಿಟ್ಟಳೇಕೆ? ತನ್ನ ಇಚ್ಛೆ ನೆರವೇರಲಿಲ್ಲವೆಂದು ಆಕೆಗೆ ದುಃಖವೇ?'

'ಅದೇಕೆ ಉಸಿರು ಭಾರವಾಯಿತು? ಇವನು ನನ್ನ ಮಾತು ಕೇಳಲಿಲ್ಲ ವೆಂದು ಬೇಸರವೇ?

'ತಮ್ಮನ್ನು, ಬೆಂಬಿಡದೆ ಹಿಂಬಾಲಿಸಿ ಬರುತ್ತಿರುವ ಆಕೆ, ತಮ್ಮ ವಿಷಯ ದಲ್ಲಿ ಏನು ಅಭಿಪ್ರಾಯವಿಟ್ಟುಕೊಂಡು ಹಿಂಬಾಲಿಸುತ್ತಿದ್ದಾಳೆ?

'ದುಃಖವೇ, ಸಿಟ್ಟೇ? ಬೇಸರವೇ, ತಿರಸ್ಕಾರವೇ?

'ಬೇಡ ಬೇಡವೆಂದರೂ ಹೀಗೇಕೆ ಹಿಂಬಾಲಿಸುತ್ತಿದ್ದಾಳೆ?

'ತಮ್ಮ ವಿಷಯದಲ್ಲಿ ಆಕೆಗೆ ಇಷ್ಟೇಕೆ ಆಗ್ರಹ?'

ಹೀಗೆ ನೂರಾರು ಪ್ರಶ್ನೆಗಳು ಅವರ ಮನದಲ್ಲಿ ಮೂಡುವುದು. ಹಾಗೇ ಆ ಪ್ರಶ್ನೆಗಳು ಮೂಡಿದಾಗ ದೇವಿಯ ಅನುಗ್ರಹಕ್ಕಾಗಿ, ಆಕೆಯ ದರ್ಶನಕ್ಕಾಗಿ ಬಗೆಬಗೆಯ ತಪಸ್ಸುಗಳನ್ನು ಮಾಡಿದವರ ವಿಚಾರ ಅವರಿಗೆ ನೆನಪಾಗುವುದು.

ಈಕೆ—

ಹಸುಮಗುವಿನಂತೆ ತಮ್ಮನ್ನು ಹಿಂಬಾಲಿಸಿ ಬರುತ್ತಿರುವ ಈ ತಾಯಿ ಸಾಮಾನ್ಯಳೇ? ಶಂಕರಭಗವತ್ಪಾದರು 'ಸೌಂದರ್ಯ ಲಹರಿ'ಯಲ್ಲಿ ದೇವಿ ಯನ್ನು ವರ್ಣಿಸುತ್ತಾ—

ತನೀಯಾಂಸಂ ಪಾಂಸುಂ ತವ ಚರಣ ಪಂಕೇರುಹಭವಂ
ವಿರಿಂಚಿ ಸಂಚಿನ್ವನ್ ವಿರಚಯತಿ ಲೋಕಾನವಿಕಲ್ಪಮ್
ವಹತ್ಯೇನಂ ಶೌರಿಃ ಕಥಮಪಿ ಸಹಸ್ರೇಣ ಶಿರಸಾಂ
ಹರಸ್ಸಂಕ್ಷುಧ್ಯೈನಂ ಭಜತಿ ಭಸಿತೋದ್ಧೂಳನವಿಧಿಂ।

[ತಾಯಿ – ಬ್ರಹ್ಮನು ನಿನ್ನ ಪಾದಧೂಳಿಯನ್ನು ಸಂಗ್ರಹಿಸಿ ಈ ಜಗತ್ತುಗಳನ್ನು ಸೃಷ್ಟಿಸುತ್ತಿದ್ದಾನೆ. ವಿಷ್ಣುವು ಸಹಸ್ರಶಿರನಾಗಿಯೂ, ಆಯಾಸದಿಂದ ನಿನ್ನ ಪಾದರೇಣುವನ್ನು ಹೊರುತ್ತಿದ್ದಾನೆ. ಈ ಪಾದಧೂಳಿ ಯನ್ನೇ ಶಿವನು ಅಂಗರಾಗವಾಗಿ ಧರಿಸಿದ್ದಾನೆ].

—ಎಂದಿದ್ದರು. ಅಷ್ಟೇ ಅಲ್ಲ—

ಶಿವಶ್ಶಕ್ತ್ಯಾಯುಕ್ತೋಯದಿಭವತಿ ಶಕ್ತಃ ಪ್ರಭವಿತುಂ
ನಚೇ ದೇವಂ ದೇವೋ ನಖಲು ಕುಶಲಃ ಸ್ಪಂದಿತಮಪಿ. . .

[ಶಿವನು ಶಕ್ತಿಯೊಡಗೂಡಿದ್ದುದರಿಂದಲೇ ಜಗತ್ತನ್ನು ಸೃಷ್ಟಿಸಲು ಶಕ್ತನಾದನು. ಶಕ್ತಿರಹಿತನಾದಲ್ಲಿ ಅಲುಗಾಡಲೂ ಸಹ ಶಕ್ತನಾಗನು.]

—ಎಂದು, ದೇವಿಯ ಅಪಾರ ಶಕ್ತಿ ಪ್ರಭಾವವನ್ನು ಸಾರಿ ಸಾರಿ ಹೇಳಿದ್ದರು ಅಂಥ ದೇವಿ—

ಯಾರ ದರ್ಶನ ಮಾತ್ರಕ್ಕಾಗಿ ದೇವಾಧಿದೇವತೆಗಳೂ, ಹಗಲಿರುಳೂ ತಪಿಸುತ್ತಿದ್ದಾರೋ, ಅಂಥ ತಾಯಿಗೆ, ಪೂಜಿಸುವವರ ಬಡತನವೇ? ತನ್ನಂಥ ಅಲ್ಪನಿಂದ ಪೂಜೆಯನ್ನು ಪಡೆಯಲು ತಾಯಿ, ಕಲ್ಲು ಮುಳ್ಳು ತುಳಿದು, ಕತ್ತಲೆ ಯಲ್ಲಿ ಹಿಂಬಾಲಿಸಿ ಬಂದು ಇಷ್ಟು ಪಡಿಪಾಟಲು ಪಡಬೇಕೇ?

ಸೂರ್ಯ ಚಂದ್ರರು ಯಾರ ಕಣ್ಣುಗಳೋ, ಗ್ರಹ ತಾರಕೆಗಳು ಯಾರ ನೀಲಕಬರಿಯಲ್ಲಿ ಹೊಳೆವ ಕಿರುಮಣಿಗಳೋ, ಯಾರ ಕುಡಿ ಹುಬ್ಬಿನ ನಸುಚಲನೆ ಯಲ್ಲಿ ಮೂರು ಲೋಕಗಳೂ ಮೂಡಿ ಮುಳುಗುತ್ತಿವೆಯೋ ಅಂಥ ಲೋಕ ಮಾತೆ, 'ನನ್ನನ್ನು ಪೂಜಿಸು' ಎಂದು ಯಾರನ್ನಾದರೂ ಕಾಡಿಬೇಡಬೇಕೇ?

ಇದೆಲ್ಲ ಮಾತುಗಳೂ ನೆನಪಾದಾಗ ವೆಂಕಟದಾಸಪ್ಪನವರ ಹೃದಯವನ್ನು ಹಿಂಡಿದಂತಾಗಿ, ದೇಹ ಪುಲಕಿತದಂತಾಗುವುದಲ್ಲದೆ, ಏನೋ ಭೀತಿ, ಎಂಥದೋ ಕಂಪನ ಅವರ ದೇಹದಲ್ಲಿ ಮೂಡುವುದು.

ಆ ಭೀತಿಯಲ್ಲಿ, ಹಟದ ಅಡಿಯಲ್ಲಿ ಎಲ್ಲೋ ಹುದುಗಿದ ವಿಚಾರ ಜಾಗ್ರತ ವಾಗಿ ಯೋಚಿಸುವರು—

'ಈ ಜನ್ಮದಲ್ಲಿ ನಾನು ಈಕೆಯ ಪೂಜೆ ಮಾಡಿಲ್ಲ. ಜಪ—ತಪಗಳಿಂದ ಆಕೆಯ ಅನುಗ್ರಹದ ಅರ್ಹತೆಯನ್ನೂ ಪಡೆದಿಲ್ಲ. ಆದರೂ ಈಕೆ ನನ್ನ ಕೈಯಿಂದ ಪೂಜೆಯನ್ನು ಬಯಸುವುದೇಕೆ? ತಾವಾಗಿಯೇ ಈಕೆಯನ್ನು ಬಿಟ್ಟಾಗಲೂ, ಮಗನನ್ನು ಬಿಡಲಾಗದ ತಾಯಿಯಂತೆ ಹಿಂಬಾಲಿಸಿ ಬರುತ್ತಿರುವುದೇಕೆ? ಈ ತಾಯಿ, ತನ್ನಲ್ಲಿ ಇಷ್ಟು ವಿಶ್ವಾಸ ತೋರುತ್ತಿರುವಾಗ, ತಾವು ಮಾತ್ರ ಎಲ್ಲ ಪ್ರೇಮ, ವಿಶ್ವಾಸ, ಗೌರವ ಭಾವನೆಗಳನ್ನೂ ತೊರೆದು, ಹಟವೊಂದೇ ಹಿರಿದು ಎಂಬಂತೆ ನಡೆದುಕೊಳ್ಳುತ್ತಿರುವುದು ಉಚಿತವೇ?"

—ಎಂಬ ಭಾವನೆ ಪ್ರಬಲವಾಗಿ, ಆ ಕೂಡಲೇ ತಾಯಿಯ ಕ್ಷಮಾಪಣೆ ಯನ್ನು ಬೇಡಿ, ದೇವೀಕೆರೆಗೆ ಹಿಂದಿರುಗಬೇಕು ಎನಿಸುವುದು. ಆದರೆ ಮಾರು ಗಳಿಗೆಯೇ ಮತ್ತೊಂದು ಬಗೆಯ ಆಲೋಚನೆ—

'ನಾನು ಮಾಡಿದುದು ಸರಿಯಲ್ಲವಾದರೆ, ದೇವಿ, ತನ್ನಲ್ಲಿ ಆ ಬಗೆಯ ಬುದ್ಧಿಯನ್ನು ಪ್ರೇರೇಪಿಸುದುದೇಕೆ? ಒಮ್ಮೆ ಹೀಗೆ ಮಾಡು ಎಂಬ ವಿಚಾರವನ್ನು ಪ್ರಚೋದಿಸಿ, ಮರುಗಳಿಗೆಯೇ ಪೂರ್ವ ವಿಚಾರಕ್ಕೆ ತದ್ವಿರುದ್ಧವಾದ ರೀತಿ ಕೆಲಸ ಮಾಡುವಂತೆ ಆಗ್ರಹ ಮಾಡಿದರೆ, ಮನುಷ್ಯ ವಿಚಾರಹೀನ ಯಂತ್ರದಂತೆ, ಗಾಣಕ್ಕೆ ಕಟ್ಟಿದ ಕೋಣದಂತೆ, ಯಾವ ಗಳಿಗೆಗೆ ಏನು ಅಪ್ಪಣೆ ಬಂದರೆ, ಹಾಗೆ ಮಾಡುವುದೇ? ಹಾಗಾದರೆ ಮನುಷ್ಯ ಸಂಕಲ್ಪಕ್ಕೆ ಏನು ಬೆಲೆ? ತನ್ನ ಇಚ್ಛೆ, ಸಂಕಲ್ಪ ವಿಚಾರ ಯಾವುದಕ್ಕೂ ಬೆಲೆಯೇ ಇಲ್ಲವೆ? ಮನುಷ್ಯ ಯಾವ ಸ್ವಯಂಪ್ರೇರಿತ ಚಲನೆಯೂ ಇಲ್ಲದೆ, ಎತ್ತ ತೂರಿದರೆ, ಅತ್ತ ಬೀಳುವ ಹುಚ್ಚನ ಕೈಯ ಕವಡೆಯ ಹಾಗೆ, ದೈವೀಹಸ್ತ ಎತ್ತ ತೂರಿದರೆ ಅತ್ತ ಹಾರುತ್ತಿರಬೇಕೇ? ಇಷ್ಟೇನೇ, ಇಷ್ಟೇನೆಯೇ, ಈ ಮನುಷ್ಯ ಎನ್ನುವ ವಸ್ತುವಿನ ಬೆಲೆ?

'ಸಾವು—ಬದುಕುಗಳಂತೂ ಮನುಷ್ಯನ ವಶಕ್ಕೆ ಸೇರದ ಮಾತುಗಳು. ಮನುಷ್ಯ ಜೀವನದ ಈ ಎರಡು ಕೊನೆಗಳ ಕಾಲವನ್ನು ನಿರ್ಧರಿಸುವುದೂ ಮನುಷ್ಯನ ಅಧೀನದಲ್ಲಿಲ್ಲ; ಅದು ಸರಿಯೆ. ಆ ನಿರ್ಧಾರ ಮನುಷ್ಯೇಚ್ಛೆಯ ನಿರ್ಧಾರಕ್ಕೆ ಒಳಪಡದಿರುವುದೇ ಒಳಿತು. ಜೀವನದ ಭೋಗಗಳಿಗೆ, ವ್ಯಾಮೋಹಗಳಿಗೆ ವಶರಾದವರು ಯಾರೂ, ಎಂದೂ ತಾವಾಗಿಯೇ ಸಾಯ ಬಯಸುವುದಿಲ್ಲ. ಹಾಗೆಯೇ ಒಮ್ಮೆ ಈ ಬಾಳ ಬಂಧನದಿಂದ ಬಿಡುಗಡೆಯಾದವರು ಯಾರೂ ಪುನಃ ಈ ದೇಹ ಪಂಜರಕ್ಕೆ ಹಿಂದಿರುಗಲು ಬಯಸುವುದಿಲ್ಲ. ಆದುದರಿಂದ ಈ ವಿಷಯದಲ್ಲಿ ಇತಿ—ಮಿತಿಯನ್ನು ನಿರ್ಧರಿಸುವ, ಸ್ವಾತಂತ್ರ್ಯ, ಇಂದ್ರಿಯಗಳ ಸೆಳೆತದ ದಾಸನಾದ ಮಾನವನದಾಗುವುದಕ್ಕಿಂತ, ಎಲ್ಲಕ್ಕೂ ಅತೀತಳಾದ ಶಕ್ತಿಯದಾಗಿರುವುದೇ ಲೇಸು. ಆದರೆ ಕೊನೆ—ಮೊದಲುಗಳು ನಿರ್ಧರಿತವಾದ, ಜೀವನದ ಅವಧಿಯಲ್ಲಾದರೂ ಹೇಗೆ ವರ್ತಿಸಬೇಕು, ಏನು ಮಾಡಬೇಕು, ಏನು ಬಿಡಬೇಕು ಎಂಬಷ್ಟು ಸ್ವಾತಂತ್ರ್ಯವಾದರೂ, ಈ ಮನುಷ್ಯ ಜೀವಕ್ಕೆ ಇಲ್ಲ ಎಂದಾದರೆ, ಈ ಹುಟ್ಟಿಗೆ ಏನು ಬೆಲೆ? ಇಂಥ ಪರಾಧೀನ ಜೀವನದಿಂದ ಏನು ಪ್ರಯೋಜನ?

'ಮಾನವ ಜೀವನವೆನ್ನುವುದು, ಗಾಳಿಯಿಂದ ಹುಟ್ಟಿ, ಬಿಸಲಿನಿಂದ—ಹೊಳೆದು, ಗಾಳಿಯಿಂದಲೇ ಸಿಡಿದು ಹೋಗುವ ಬುದ್ಬುದವಷ್ಟೇನೆಯೇ?

ಹಾಗಿದ್ದರೆ, ಇಂಥ ಬಾಳು ಬಾಳಬೇಕೇಕೆ? ಹಾಗೆ ಬದುಕಿದರೆ, ಇದರಲ್ಲಿ ನಮ್ಮದು ಎನ್ನುವುದು ಏನು ಉಳಿಯಿತು?"

ಈ ಭಾವನೆ ಬಲಿತಾಗ–

ಅವರಿಗೆ ಮನುಷ್ಯ ಜೀವನ ಎನ್ನುವುದು ದೈವೀಶಕ್ತಿಯ ಗೂಟಕ್ಕೆ, ದೈವೀ ಇಚ್ಛೆಯ ಹಗ್ಗದಿಂದ ಬಂಧಿತನಾದ ಪಶುಮಾತ್ರ ಎನಿಸಿತು. ಆ ಹಗ್ಗ ಎಷ್ಟು ದೂರ ಚಲಿಸಲು ಅವಕಾಶ ಕೊಟ್ಟರೆ, ಅಷ್ಟು ದೂರ ಮಾತ್ರವೇ ಚಲಿಸಬೇಕು. ಆ ಹಗ್ಗ ದಾಟೆಗೆ ಒಂದು ಹೆಜ್ಜೆ ಇಡುವುದೂ ಸಾಧ್ಯವಿಲ್ಲ. ಹೆಜ್ಜೆ ಇಡುವುದಿರಲಿ–ಆ ಪ್ರಯತ್ನ ಮಾಡಿದರೂ, ಕತ್ತಿನ ಹಗ್ಗ ಕತ್ತನ್ನೇ ಮುರಿಯುವಂತೆ ಬಿಗಿಯುತ್ತದೆ.

ಅಂಥ ಪಶು, ಕತ್ತು ಮುರಿಯಬಹುದಾದ ಭಯವಿಲ್ಲದೆ, ಚಲಿಸಬಹುದಾದ ಒಂದೇ ದಿಕ್ಕು–ಬಂಧಿಸಿದ ಗೂಟದತ್ತ. ಅತ್ತ ಕಡೆ ಚಲಿಸಲು, ಕತ್ತನ್ನು ಬಿಗಿದ ರಜ್ಜುವೂ ಅಡ್ಡಿಯಾಗುವುದಿಲ್ಲ. ಹಗ್ಗವೂ ಅತ್ತ ಕಡೆಯ ಚಲನೆಗೆ ಅನುಕೂಲವಾಗುತ್ತದೆ. ಗೂಟದತ್ತ ಸರಿದಷ್ಟೂ, ಗೂಟಕ್ಕೆ ಸಮೀಪವಾದಷ್ಟೂ ಹಗ್ಗದ ಬಿಗಿತವೂ ಹಗುರಾಗಿ, ಹೆಚ್ಚು ಹಾಯಿ ಎನಿಸುತ್ತದೆ. ಆದ್ದರಿಂದ ಬಂಧಿತ ಪಶುಗಳು, ಕಟ್ಟಿದ ಗೂಟಕ್ಕೆ ಸಮೀಪವಾಗಿರುತ್ತವೆ. ಇದು ಕಣ್ಣಾರೆ ಕಂಡ ಮಾತು.

ನಿಜ– ಇದು ಕಣ್ಣಾರೆ ಕಂಡ ಮಾತು. ಆದರೆ ಪಶುಗಳ ವಿಷಯದಲ್ಲಿ ಮಾತ್ರವೇ ಕಂಡದ್ದು.

ಆದರೆ ಮನುಷ್ಯನೂ ಹಾಗೇ ಮಾಡಬೇಕೇ?

ಹಾಗೆ ಮಾಡಿದಲ್ಲಿ ಮನುಷ್ಯನಿಗೂ ಪಶುವಿಗೂ ಏನು ವ್ಯತ್ಯಾಸ ಉಳಿಯಿತು?

ಇಲ್ಲ–ಯಾವ ವ್ಯತ್ಯಾಸವೂ ಇಲ್ಲ. ಇದ್ದರೆ ತೋರಿಕೆಯ ಆಚಾರ–ವಿಚಾರ–ವ್ಯವಹಾರಗಳಲ್ಲಿ ಮಾತ್ರ. ಮೂಲಭೂತ ವಿಷಯಗಳಲ್ಲಿ ಮನುಷ್ಯನಿಗೂ ಪಶುವಿಗೂ ಏನೊಂದೂ ವ್ಯತ್ಯಾಸವಿಲ್ಲ.

ಇಲ್ಲ–ವ್ಯತ್ಯಾಸವಿಲ್ಲ.

ಎತ್ತಲೋ ಯೋಚಿಸುತ್ತಾ, ಯೋಚಿಸುತ್ತಾ, ಈ ನಿಲುಗಡೆಗೆ ಬಂದ ಅವರ ಮನಸ್ಸು ತಟಕ್ಕನೆ ಮತ್ತೊಂದು ದಾರಿಯಲ್ಲಿ ಧಾವಿಸಲಾರಂಭಿಸುವುದು.

'ಮನುಷ್ಯನಿಗೂ ಪಶುವಿಗೂ ವ್ಯತ್ಯಾಸವಿಲ್ಲ–ಇಲ್ಲ.

'ಮನುಷ್ಯಪಶು.

'ಇದರಿಂದಲೇ ಅಲ್ಲವೆ ಹಿರಿಯರು ದೇವಾಧಿದೇವನನ್ನು ಪಶುಪತಿ ಎಂದು ಕರೆದುದು. ಮಾನವ ಜೀವನದ ಈ ಪರಮ ಅಸ್ವಾತಂತ್ರ್ಯತೆ, ಬದ್ಧಪಶು ಸ್ಥಿತಿ–ಮಾನವರಿಕೆಯಾದುದರಿಂದಲೇ ಅಲ್ಲವೆ, ವಿಚಾರಿಗಳು, ಈ ಇಹ ಜೀವನದ ಸುಖ–ಸೌಲಭ್ಯಗಳೊಂದನ್ನೂ, ಬಯಸದೆ, ಜನನ–ಮರಣಗಳ ಪಂಜರದಿಂದ ಮುಕ್ತಿಯನ್ನು ಬಯಸುವುದು. ಆಚಾರ್ಯರು ಹೇಳಿಲ್ಲವೇ?–

'ಕಿಂ ದಾನೇನ ಧನೇನ ವಾಜಿ ಕರಭಿಃ ಪ್ರಾಪ್ತೇನ ರಾಜ್ಯೇನ ಕಿಂ
ಕಿಂ ವಾ ದ್ರವ್ಯ ಕಳತ್ರ ಮಿತ್ರ ಪಶುಭಿರ್ದೇಹೇನ ಗೇಹೇನ ಕಿಂ।
ಜ್ಞಾತ್ವೈತತ್ ಕ್ಷಣಭಂಗುರಂ ಸಪದಿ ರೇ ತ್ಯಾಜಂ ಮನೋದೂರತಃ
ಸ್ವಾತ್ಮಾರ್ಥಂ ಗುರುವಾಕ್ಯತೋ ಭಜ ಭಜ ಶ್ರೀಪಾರ್ವತೀವಲ್ಲಭಂ॥

(ಈ ಧನದಿಂದಾಗಲಿ, ಆನೆ ಕುದುರೆಗಳಿಂದಾಗಲಿ, ಅಥವಾ ರಾಜ್ಯ ಪ್ರಾಪ್ತಿಯಿಂದಾಗಲಿ ಏನು ಪ್ರಯೋಜನ? ಮಗ ಮಡದಿ ಮಿತ್ರರಿಂದಾಗಲಿ, ಪಶು ದೇಹ ಮನೆ ಮಠದಿಂದಾಗಲಿ ಏನು ಪ್ರಯೋಜನ? ಹೇ ಮನಸ್ಸೇ, ಇವೆಲ್ಲವೂ ಕ್ಷಣ ಭಂಗುರಗಳೆಂದು ತಿಳಿದುಕೊಂಡು ಶೀಘ್ರವಾಗಿ ತ್ಯಜಿಸುವುದು ಜಾಣತನ. ಆತ್ಮ ಸಾಕ್ಷಾತ್ಕಾರಕ್ಕಾಗಿ, ಗುರುವಾಕ್ಯವನ್ನು ಅನುಸರಿಸಿ ಶ್ರೀಪಾರ್ವತೀವಲ್ಲಭನನ್ನು ಮತ್ತೆ ಮತ್ತೆ ಭಜಿಸು)

ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ ಯಾತಿ ಕ್ಷಯಂ ಯೌವ್ವನಂ
ಪ್ರತ್ಯಾಯಾಂತಿ ಗತಾಃ ಪುನರ್ನದಿವಸಾಃ ಕಾಲೋ ಜಗದ್ಭಕ್ಷಕಃ॥
ಲಕ್ಷ್ಮೀಸ್ತೋಯ ತರಂಗ ಭಂಗ ಚಪಲಾ ವಿದ್ಯುಚ್ಚಲಂ ಜೀವಿತಂ
ತಸ್ಮಾನ್ಮಾಂ ಶರಣಾಗತಂ ಶರಣದತ್ವಂ ರಕ್ಷ ರಕ್ಷಾಧುನಾ॥

(ನೋಡು ನೋಡುತ್ತಿರುವಂತೆಯೇ ದಿನದಿನಕ್ಕೂ ಆಯುಸ್ಸು ನಶಿಸುತ್ತಿದೆ, ಯೌವನ ಕ್ಷಯಿಸುತ್ತಿದೆ; ಕಳೆದುಹೋದ ದಿನ ಮತ್ತೆ ಹಿಂದಿರುಗದು ಕಾಲವು ಜಗತ್ತನ್ನೇ ಭಕ್ಷಿಸುತ್ತಿದೆ; ಲಕ್ಷ್ಮಿಯು ಜಲತರಂಗದಂತೆ ಚಂಚಲೆ; ಜೀವನವು ಮಿಂಚಿನ ಸಂಚಲನದಂತೆ ಕ್ಷಣಿಕವಾದದ್ದು; ಆದುದರಿಂದ ಹೇ ಶರಣದ, ಶರಣಾಗತನಾದ ನನ್ನನ್ನು ಈಗಲೇ ರಕ್ಷಿಸು, ಉದ್ಧರಿಸು.)

'ಇದೆಲ್ಲವೂ ಮಾನವರಿಕೆಯಾಗಿಯೇ ಅಲ್ಲವೇ ಆಚಾರ್ಯರು–

'ದೇಹಂ ಪ್ರಾಣ ಮತೀಂದ್ರಿಯಾಣ್ಯಪಿ ಚಲಾಂ ಬುದ್ಧಿಂ ಚ ಶೂನ್ಯಂ ವಿದುಃ
ಸ್ತ್ರೀಬಾಲಾಂಧ ಜಡೋಪಮಾಸ್ತ್ವಹಮಿತಿ ಭ್ರಾಂತಾ ಭೃಶಂ ವಾದಿನಃ।
ಮಾಯಾ ಶಕ್ತಿ ವಿಲಾಸ ಕಲ್ಪಿತ ಮಹಾ ವ್ಯಾಮೋಹ ಸಂಹಾರಿಣೇ
ತಸ್ಮೈಶ್ರೀ ಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ॥

("ನಾನೇ ದೇಹ, ನಾನೇ ಪ್ರಾಣ, ನಾನೇ ಇಂದ್ರಿಯಗಳು, ನಾನೇ ಚಂಚಲವಾದ ಮನಸ್ಸು ಅಥವಾ ನಾನೇ ಶೂನ್ಯ" ಎಂದು ಯಾರುತಿಳಿದುಕೊಂಡಿರುವರೋ ಅಂಥವರು ಸ್ತ್ರೀಯರಿಗೆ, ಮಕ್ಕಳಿಗೆ ಕುರುಡರಿಗೆ, ಜಡರಿಗೆ ಸಮಾನರಾಗಿರುವರು. ಅವರು ಭ್ರಾಂತರೇ ಸರಿ. ಮಾಯಾಶಕ್ತಿಯ ವಿಲಾಸದಿಂದ ಕಲ್ಪಿತವಾದ ಮಹಾ ವ್ಯಾಮೋಹವನ್ನು ನಾಶಮಾಡುವ ಶ್ರೀ ಗುರು ರೂಪಧಾರಿಯಾದ ಶ್ರೀ ದಕ್ಷಿಣಾ ಮೂರ್ತಿಗೆ ನಮಸ್ಕಾರ.)

–ಎಂದು ಪ್ರಾರ್ಥಿಸಿ ಆ ಮಹಾಶಕ್ತಿಗೆ ಮಣಿದಿದ್ದು.

'ಈ 'ನಾನು–ನನ್ನದು' ಎಂಬ ಸಂಕೋಲೆಗಳು ಕಡಿಯದೆ, ಶಕ್ತಿ ಸಾಕ್ಷಾತ್ಕಾರವಾಗದು, ಮುಕ್ತಿ ದೊರಕದು ಎಂದೇ ಅಲ್ಲವೇ ವೇದೋಪನಿಷತ್ತುಗಳು ಸಾರಿ ಸಾರಿ ಹೇಳಿರುವುದು.

'ಇದೆಲ್ಲ ಮಾತೂ ನನಗೆ ನೆನಪಿತ್ತಲ್ಲ. ನೆನಪಿದ್ದೂ ನಾನು ಮಾಡಿದುದು ಏನು? ಯಾವುದು ನಾಶವಾಗುವುದರಿಂದಲೇ ಮಾನವನಿಗೆ ಮುಕ್ತಿ ಸಾಧ್ಯವೋ ಅದಕ್ಕೆ ನಾನು ಹೀಗೇಕೆ ಜೋತು ಬಿದ್ದಿದ್ದೇನೆ? ಅದೇ ಸಾರ ಸರ್ವಸ್ವ ಎಂದು ಭ್ರಮಿಸುತ್ತಿದ್ದೇನೇಕೆ?

'ಈಗ ನಾನು ಮಾಡುತ್ತಿರುವುದು ಸರಿಯೋ, ತಪ್ಪೋ?"

ಈ ಚಿಂತೆಯಲ್ಲೇ ತೊಳಲುತ್ತ, ವೆಂಕಟದಾಸಪ್ಪನವರು, ಈ ಚಿಂತೆಯ ಭಾರವನ್ನು ಹೊತ್ತು ಮುಂದೆ ನಡೆಯಲು ಆಗದವರಂತೆ, ನಿಂತ ಕಡೆಯೇ ಕುಸಿದು ಕುಳಿತರು.

ಅವರು ಕುಳಿತುಕೊಳ್ಳುತ್ತಿದ್ದ ಹಾಗೇ ಅವರನ್ನು ಹಿಂಬಾಲಿಸಿದ ಗೆಜ್ಜೆಯ ಸದ್ದೂ ಗಲಗಲ ಸದ್ದು ಮಾಡಿ ನಿಂತಂತೆ, ಅವರಿಗೆ ಭಾಸವಾಯಿತು. ಆ ಗೆಜ್ಜೆಯ ಸದ್ದನ್ನು ಕೇಳಿ, ಅವರ ಮನಸ್ಸು, ಬಿರುಗಾಳಿ ಕೆಣಕಿದ ಕಡಲಲೆಗಳಂತೆ ಹೊಯ್ದಾಡತೊಡಗಿತು. ಆ ಹೊಯ್ದಾಟವಲ್ಲಿ, ಅವರಿಗೆ, ಅದುವರೆಗೂ ನೇರವಾಗಿ ನಿಂತ ಅವರ ಬೆನ್ನೆಲುಬು ಮುರಿಯುತ್ತಿರುವಂತೆ ತೋರಿ; ವಿಹ್ವಲರಾದರು.

ಆ ವಿಹ್ವಲತೆಯಲ್ಲೇ ಅತ್ತಿತ್ತ ಕಣ್ಣು ಹೊರಳಿಸಿ ನೋಡಿದರು.

ಸುತ್ತ ಮುತ್ತಲೂ–

ಕರಗುತ್ತಿರುವ ಕತ್ತಲಿನಲ್ಲಿ ಗಿಡಮರಗಳೂ, ಸುಳಿಗಾಳಿಗೆ ಕಂಡೂ ಕಾಣಿಸದಂತೆ ಎಲೆಯಲುಗಿಸುತ್ತಾ, ನಿಂತ ಕಡೆಯಿಂದ ಕದಲದೆ, ಯಾವುದೋ ಘಟನೆಯ ಪ್ರೇಕ್ಷಕರಂತೆ ನಿಂತಿದ್ದವು.

ಚಂದ್ರಾಸ್ತಮಾನವಾದ ಮುಗಿಲಿನ ಕಪ್ಪಿನಲ್ಲಿ ಕೋಟ್ಯಾಂತರ ತಾರೆಗಳು, ನೆಲದ ಮೇಲೆ ನಡೆವ ಯಾವುದನ್ನೋ ಕಾಣಲು ನಿರೀಕ್ಷಿಸಿದಂತೆ ಕಣ್ಣರಳಿಸಿ, ಕ್ಷೀಣಕಾಂತಿಯಿಂದ ಹೊಳೆಯುತ್ತಿದ್ದವು.

ಇರುಳ ಕೀಟಗಳ ಸದ್ದಡಗಿ, ಮುಂಜಾವಿನ ಹಕ್ಕಿಗಳ ಕಲಕಲವಿನ್ನೂ ಮೌನವನ್ನು ಮುರಿಯದ ಸಂಧ್ಯಾನಿಸರ್ಗವೂ, ಮೌನವಾಗಿ, ಇನಿತೂ ಸದ್ದು ಮಾಡದೆ, ತುಟಿ ಬಿಗಿದು ನೋಡುತ್ತಾ ನಿಂತಂತಿತ್ತು. ಚಲನಶೀಲವಾದ ಗಾಳಿಯೂ, ಚಲಿಸಲು ಇಚ್ಛೆ ಇಲ್ಲದೆ, ಆದರೂ ತನ್ನ ಸ್ವಭಾವವನ್ನು ಗೆಲ್ಲಲಾಗದೆ, ಒಮ್ಮೆ ಸುಳಿದು, ಮರುಗಳಿಗೆಯೇ ತಾನು ಮಾಡಿದ ತಪ್ಪು ಮನವರಿಕೆಯಾದಂತೆ, ಎಲ್ಲೋ ಅಡಗಿ ಹೋಗುತ್ತಿತ್ತು.

ನಿಸರ್ಗದ ನಿತಾಂತ ಮೌನ, ನಸುಚಲನೆ, ಅಸ್ಪಷ್ಟತೆ– ಒಂದೊಂದೂ ವೆಂಕಟದಾಸಪ್ಪನವರ ಹೃದಯದಲ್ಲಿ ಮೂಡಿದ ವಿಹ್ವಲತೆಯನ್ನು ಗಳಿಗೆಗಳಿಗೆಗೂ ಬಲಿಯಿಸಿ, ಅವರಿಗೆ ಏಕೋ ತಮ್ಮ ದೇಹದ ನರನರವೂ ಕೀಲು ಕಳಚಿಕೊಂಡು ಬೀಳುತ್ತಿರುವಂತೆ ಭಾಸವಾಯಿತು.

'ಸರಿಯೇ ತಪ್ಪೇ?

'ಪೂಜಿಸಬೇಕೋ, ಬೇಡವೋ?

'ನಾನು ಎನ್ನುವುದು ಉಂಟೆ? ಇಲ್ಲವೇ ಎಲ್ಲವೂ ದೈವೀ ಇಚ್ಛೆಯೇ?

'ಗಳಿಗೆಗೊಂದು ರೂಪದಲ್ಲಿ ಕಾಣಿಸಿಕೊಳ್ಳುವ ಈ ದೈವೀ ಇಚ್ಛೆಗೆ, ವಾತಹತವಾದ ಲತೆಯಂತೆ, ಗಾಳಿ ಬೀಸಿದತ್ತ ಬಳುಕುವುದು ಸರಿಯೇ? ಅದೊಂದೇ ದಾರಿಯೇ?'

ಪ್ರಶ್ನೆಗಳು, ಪ್ರಶ್ನೆಗಳು, ಪ್ರಶ್ನೆಗಳು,– ಹೆಡೆ ಎತ್ತಿದ ಹಾವಿನಂತೆ ನಿಂತ ಪ್ರಶ್ನೆಗಳು.

ಪ್ರಶ್ನೆಗಳು–ಬರೀ ಪ್ರಶ್ನೆಗಳು–

ಅವರ 'ಇರವಿನ' ಬುಡವನ್ನೇ ಹೊಯ್ದಾಡಿಸುವ ಪ್ರಶ್ನೆಗಳು.

ಉತ್ತರ—ಈ ಸಾಲು ಪ್ರಶ್ನೆಗಳಿಗೆ ಏನು ಉತ್ತರ? ಪ್ರಶ್ನೆಗಳ ಬಿರುಗಾಳಿಯಲ್ಲಿ ತರಗೆಲೆಯಂತೆ ಸಿಲುಕಿದ ಚಿತ್ತಕ್ಕೆ ಯಾವ ದಾರಿ. ಏನು ಗತಿ?

ಹಾಗೆ ಮಾಡು ಎನ್ನುವುದೂ ಅದೇ. ಈಗ ಅದಕ್ಕೆ ವಿರುದ್ಧವಾಗಿ ಹೀಗೆ ಮಾಡು ಎನ್ನುವುದೂ ಅದೇ.

ಯಾವುದನ್ನು ನಂಬಬೇಕು? ಯಾವುದನ್ನು ಅನುಸರಿಸಬೇಕು?

'ಏಕೆ, ಏಕೆ? ಹೀಗೇಕೆ ಈ ವಿರುದ್ಧ ದಿಕ್ಕುಗಳಲ್ಲಿ ನನ್ನನ್ನು ಸೆಳೆಯುತ್ತಿದ್ದೀಯ?'

—ವೆಂಕಟದಾಸಪ್ಪನವರ ಹೃದಯ ಆರ್ತವಾಗಿ ಕೇಳಿತು.

ಅವರು ಆ ಮಾತನ್ನು ಗಟ್ಟಿಯಾಗಿ ಆಡಿರಲಿಲ್ಲ. ಅವರೂ ಅವರ ಮಾತನ್ನು ಕೇಳಿಸಿಕೊಂಡಂತೆ. ಎಲ್ಲಿಂದಲೋ ಮೃದುವಾದ ನಗುವಿನ ಧ್ವನಿ ಕೇಳಿ ಬಂದು, ವೆಂಕಟದಾಸಪ್ಪನವರ ಮೈಯ ನರಗಳನ್ನು ಹಿಡಿದು ಕುಲುಕಿಸಿದಂತಾಯಿತು. ಆ ಇನಿದಾದ ನಗುವಿನ ಆಘಾತಕ್ಕೆ ಸಿಲುಕಿ, ಸುತ್ತ ನಿಂತ ನಿಶ್ಚಲ ಪ್ರಕೃತಿಯೂ, ಹೊಯ್ದಾಡಿದಂತಾಯಿತು. ಶಿಲಾಘಾತದಿಂದ ಕಂಪಿಸುತ್ತಿರುವ ಜಲದಂತೆ. ಚಂಚಲವಾದ ನಿಸರ್ಗದಲ್ಲಿ, ಎಲ್ಲೋ, ಯಾರೋ, ಆ ಜಲದಂತೆಯೇ ಕಂಪಿಸುತ್ತಿರುವ ಧ್ವನಿಯಲ್ಲಿ ಯಾರನ್ನೋ ಕೇಳುತ್ತಿದ್ದಾರೆ—

ಕಾರ್ಪಣ್ಯ ದೋಷೋಪಹತಸ್ವಭಾವಃ ಪೃಚ್ಛಾಮಿತ್ವಾಂ
ಧರ್ಮಸಂಮೂಢಚೇತಾಃ॥
ಯಚ್ಛ್ರೇಯಃ ಸ್ಯಾನ್ನಿಶ್ಚಿತಂಬ್ರೂಹಿತನ್ಮೇ। ಶಿಷ್ಯಸ್ತೇಽಹಂ
ಶಾಧಿಮಾಂ ತ್ವಾಂ ಪ್ರಪನ್ನಂ॥

(ದೈನ್ಯವೆಂಬ ದೋಷದಿಂದ ಕುಂದಿದ ಸ್ವಭಾವವುಳ್ಳವನಾಗಿ, ಧರ್ಮವಿಷಯದಲ್ಲಿ ಸಮ್ಮೂಢಚಿತ್ತನಾಗಿ ನಿನ್ನನ್ನು ಪ್ರಶ್ನೆಮಾಡುತ್ತೇನೆ. ಯಾವುದು ನನಗೆ ಶ್ರೇಯಸ್ಕರವೋ ಅದನ್ನು ನಿಶ್ಚಯಪೂರ್ವಕವಾಗಿ ಹೇಳು. ನಾನು ನಿನ್ನ ಶಿಷ್ಯನು. ನಿನ್ನನ್ನೇ ಶರಣುಹೊಂದಿದ ನನಗೆ ಬೋಧಿಸು.)

ಜ್ಯಾಯಸೀಚೇತ್ ಕರ್ಮಣಸ್ತೇ, ಮತಾ ಬುದ್ಧಿರ್ಜನಾರ್ಧನ
ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ॥

(ಎಲೈ ಜನಾರ್ಧನನೇ ಕರ್ಮಕ್ಕಿಂತ ಜ್ಞಾನವು ಉತ್ತಮವೆಂದು ನಿನ್ನ ಅಭಿಪ್ರಾಯವಾದರೆ, ಎಲೈ ಕೇಶವ, ನನನ್ನೇಕೆ ಈ ಘೋರವಾದ ಕೆಲಸಕ್ಕೆ ನಿಯೋಜಿಸುತ್ತಿದ್ದೀಯ ?)

ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವಮೇ ॥
ತದೇಕಂ ವದ ನಿಶ್ಚಿತ್ಯಯೇನ ಶ್ರೇಯೋಽಹ ಮಾಪ್ನುಯಾಮ್ ॥

( ಮಿಶ್ರವಾಗಿರುವ ಮಾತಿನಿಂದ ನನ್ನ ಬುದ್ಧಿಯನ್ನೇಕೆ ಭ್ರಾಂತಿಗೊಳಿಸು ತ್ತಿದ್ದೀಯ ? ಯಾವುದರಿಂದ ನಾನು ನಿಶ್ಚಿತವಾದ ಶ್ರೇಯಸ್ಸನ್ನು ಪಡೆಯ ಬಹುದೋ ಅದೊಂದನ್ನು ಹೇಳು.)

ಯಾರೋ ಹಂಬಲಿಸುತ್ತ, ಕಂಬನಿಗರೆಯುತ್ತ ಈ ಪ್ರಶ್ನೆಯನ್ನು ಕೇಳುತ್ತಿದ್ದಾರೆ. ಆ ಪ್ರಶ್ನೆಗೆ ಎಲ್ಲಿಂದಲೋ ಭೇರೀನಿನಾದ ಗಂಭೀರವಾದ ಧ್ವನಿಯಲ್ಲಿ ಉತ್ತರವೊಳಗುತ್ತಿದೆ :

ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ ।
ಮಾಕರ್ಮ ಫಲಹೇತುರ್ಭೂರ್ಮಾತೇ ಸಂಗೋಽಸ್ತ್ವ ಕರ್ಮಣಿ ॥

( ಕರ್ಮದಲ್ಲಿಯೇ ನಿನಗೆ ಅಧಿಕಾರವು. ಕರ್ಮಫಲದಲ್ಲಿ ನಿನಗೆ ಎಂದೆಂದೂ ಆಸಕ್ತಿಯಾಗದಿರಲಿ. ಕರ್ಮಫಲವಲ್ಲಿ ಕಾರಣನಾಗದೆ ಇರು ; ಕರ್ಮವನ್ನು ಬಿಡುವುದರಲ್ಲಿ ನಿನಗೆ ಪ್ರೀತಿಯಾಗದಿರಲಿ. )

ಅಹಂಕಾರ ವಿಮೂಢಾತ್ಮಾ ಕರ್ತಾಽಹ ಮಿತಿ ಮನ್ಯತೇ॥

(ಅಹಂಕಾರದಿಂದ ಮೂಢವಾದ ಮನಸ್ಸುಳ್ಳವನು ನಾನು ಕರ್ತೃ ಎಂದು ತಿಳಿದುಕೊಳ್ಳುತ್ತಾನೆ. )

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।
ನಾಯಂ ಲೊಕೊಸ್ತಿ ನಪರೋ ನಸುಖಂ ಸಂಶಯಾತ್ಮನಃ ॥

( ಜ್ಞಾನವಿಲ್ಲದವನೂ, ಶ್ರದ್ಧೆಯಿಲ್ಲದವನೂ, ಸಂಶಯಾತ್ಮನೂ ನಾಶ ಹೊಂದುವರು. ಸಂಶಯಾತ್ಮನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ, ಸುಖವೂ ಇಲ್ಲ. )

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇ ವೈಷ್ಯತಿ ಯುಕ್ತ್ವೈವ ಮಾತ್ಮಾನಾಂ ಮತ್ಪರಾಯಣಃ ॥

(ನನ್ನಲ್ಲಿಯೇ ಮನಸ್ಸುಳ್ಳವನಾಗು, ನನ್ನ ಭಕ್ತನಾಗು, ನನ್ನನ್ನು ಪೂಜಿಸುವವನಾಗು, ನಾನೇ ಪರಮಗತಿ ಎಂದು ತಿಳಿದುಕೊಂಡು, ನನ್ನಲ್ಲಿಯೇ ಮನಸ್ಸು ನಿಲ್ಲಿಸಿ, ನನ್ನನ್ನೇ ಹೊಂದುವೆ.)

ಸರ್ವ ಗುಹ್ಯತಮಂ ಭೂಯಃ ಶೃಣುಮೇ ಪರಮಂ ವಚಃ।
ಇಷ್ಟೋऽಸಿಮೇ ಧೃಡಮತಿ ತತೊ ವಕ್ಷ್ಯಾಮಿ ತೇ ಹಿತಮ್॥

(ಸರ್ವ ಗುಹ್ಯತಮವಾದ ನನ್ನ ಪರಮವಚನವನ್ನು ಪುನಃ ಕೇಳು: ನೀನು ನನಗೆ ಅತ್ಯಂತ ಪ್ರಿಯನಾಗಿರುವುದರಿಂದ ನಿನಗೆ ಹಿತವನ್ನು ಹೇಳುತ್ತೇನೆ.)

ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು।
ಮಾಮೇ ವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿಮೇ॥

ನನ್ನಲ್ಲಿಯೇ ಮನಸ್ಸುಳ್ಳವನಾಗು, ನನ್ನ ಭಕ್ತನಾಗು, ನನ್ನನ್ನೇ ಆರಾಧಿಸುವವನಾಗು, ನನ್ನನ್ನು ನಮಸ್ಕರಿಸು, ನನ್ನನ್ನೇ ಸೇರುವೆ. ಸತ್ಯವಾಗಿ ಪ್ರತಿಜ್ಞೆಮಾಡಿ ಹೇಳುತ್ತೇನೆ; ನೀನು ನನಗೆ ಪ್ರಿಯನಾಗುವೆ]

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜಂ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ॥

[ಸರ್ವ ಧರ್ಮಗಳನ್ನು ಪರಿತ್ಯಾಗಮಾಡಿ ನನ್ನೊಬ್ಬನನ್ನೇ ಶರಣು ಹೊಂದು. ನಾನು ನಿನ್ನನ್ನು ಸರ್ವಪಾಪಗಳಿಂದಲೂ ಬಿಡಿಸುವೆನು. ಶೋಕಿಸಬೇಡ.]

ಮಿದುಳಿನ ಗೋಪುರದಲ್ಲಿ ಮುಂಗಾರ ಮುಗಿಲಿನಲ್ಲಿ ಮೊಳಗುವ ಗುಡುಗಿನ ಗಂಭೀರ ಘೋಷವಂತೆ ಕೇಳಿಬಂದ ಆ ಉತ್ತರದೊಂದಿಗೆ ಅವರ ಕಿವಿಗಳಲ್ಲಿ ಮಾತ್ರಾವುದೋ ಒಂದು ಭೀಮ ಭೀಷಣವಾಣಿ ಗಹಗಹಿಸಿ ಕೂಗಿತು.—

**'ಎಲ್ಲವೂ ನನ್ನ ಇಷ್ಟ.'**

'ಇಲ್ಲ...ನಿನ್ನ ಇಷ್ಟವೂ ಇಲ್ಲ...ನೀನೂ ಇಲ್ಲ....ಇಲ್ಲ...ಯಾವುದೂ ಇಲ್ಲ...ಇರುವುದೆಲ್ಲವೂ ನಾನೊಬ್ಬನೇ.'

ಆ ಧ್ವನಿಯನ್ನು ಕೇಳಿ, ಹಿಂದೊಮ್ಮೆ ಅದೇ ಮಾತುಗಳನ್ನು ಕೇಳಿದುದು ನೆನಪಾಗಿ, ವೆಂಕಟದಾಸಪ್ಪನವರ ಮೈ ರೋಮಾಂಚವಾಯಿತು. ಆದರೆ ಆ ವಾಣಿ, ಈ ಬಾರಿ—

'ನನ್ನ ಇಷ್ಟ'

—ಎಂದಾಗ ವೆಂಕಟದಾಸಪ್ಪನವರ ಮೈ ಹಟದ ನೆನಪಿನಿಂದ ಬಿರು ಸಾಗಲಿಲ್ಲ. ಉರಿಸೋಕಿದ ಕರ್ಪೂರದಂತೆ, ಉರಿಯುತ್ತಾ ಕರಗಲಾರಂಭಿಸಿತು.

ಹಾಗೇ ಕರಗುತ್ತಿರುವಾಗಲೇ ಎಂದೆಂದಿನ ನೆನಪುಗಳೋ ಮನ ದಲ್ಲಿ ಮರುಕಳಿಸಿ—

'ಅಯ್ಯೋ, ನಾನಿದೇನು ತಪ್ಪು ಮಾಡಿದೆ.'

—ಎಂದು ಮರುಗಲಾರಂಭಿಸಿದರು.

'ದೇವಿ ಸ್ವಪ್ನರೂಪದಲ್ಲಿ ಎಲ್ಲವೂ ನನ್ನ ಇಷ್ಟ ಎಂದು ಅಪ್ಪಣೆ ಕೊಡಿಸುವ ಮೊದಲೇ ಗೀತೆಯೇ ನನಗೆ ಹೇಳಿರಲಿಲ್ಲವೇ? 'ಫಲದ ಚಿಂತೆ ಮಾಡಬೇಡ. ಮಾಡುವವನೂ ನೀನಲ್ಲ, ಅದರ ಫಲವೂ ನಿನ್ನದಲ್ಲ. ನನ್ನ ಆದೇಶ ಬಂದಂತೆ ಕೆಲಸ ಮಾಡು. ಆದರ ಫಲಾಫಲಗಳನ್ನು ನನಗೆ ಬಿಡು'. 'ಪ್ರಯತ್ನ ಶೀಲನೂ, ಜ್ಞಾನಿಯೂ ಆದ ಪುರುಷನ ಮನಸ್ಸನ್ನು ಕೂಡ ಇಂದ್ರಿಯಗಳು, ನೀರಿನಲ್ಲಿರುವ ದೋಣಿಯನ್ನು ಗಾಳಿ ಹೊಡೆದುಕೊಂಡು ಹೋಗುವಂತೆ, ಅಪಹರಿಸುತ್ತವೆ' ಎಂದು ಹೆಜ್ಜೆಹೆಜ್ಜೆಗೂ ಎಚ್ಚರಿಸಿರಲಿ ಲ್ಲವೇ? ಅಷ್ಟಲ್ಲ ಎಚ್ಚರಿಕೆಯನ್ನು ಕೇಳಿಯೂ ಹಾಗಾಗಬಾರದು, ಹಾಗಾ ಗಬಾರದು ಎಂದು ಸಾವಿರ ಬಾರಿ ನನಗೆ ನಾನೇ ಹೇಳಿಕೊಂಡೂ ಸಹ, ನಾನೇಕೆ ಹೀಗೆ ಮಾಡಿದೆ?

'ಕರ್ತೃವೂ ನಾನಲ್ಲ, ಭೋಕ್ತೃವೂ ನಾನಲ್ಲ ಎಂಬುದನ್ನು ಅರಿತು ಅರಿತೂ, ನನ್ನ ಮಾತು, ನನ್ನ ಮಾನ, ನನ್ನ ಗೌರವ ಅನ್ನುವ ಭ್ರಮೆಗೆ ನಾನೇಕೆ ಬಿದ್ದೆ?

'ಆ ಭ್ರಮೆಗೆ ಬಲಿಯಾಗಿ ನಾನು ಸಾಧಿಸಿದುದೇನು?'

'ನನ್ನಲ್ಲಾದ ಸಂಕಲ್ಪ ದೈವೀ ಪ್ರೇರೇಪಣೆ ಎಂದುಕೊಂಡ ನಾನು ಉಳಿ ದವರು ಆಡಿದ ಮಾತೂ ದೈವೀ ಪ್ರೇರೇಪಣೆ ಎಂದೇಕೆ ಚಿಂತಿಸಲಿಲ್ಲ?'

'ನನ್ನ ಸಂಕಲ್ಪ ದೈವೀ ಪ್ರೇರೇಪಣೆ ಎಂದುಕೊಂಡು 'ನಾನು' ನಂಬಿದ್ದೆ. ಆದರೆ ಅದು ದೈವೀ ಪ್ರೇರೇಪಣೆಯೇ? ನನ್ನ ಸಂಕಲ್ಪವೆನ್ನುವುದರ ಮೂಲ, ಎಲ್ಲಿ ನನಗೆ ಅಪಮಾನವಾದೀತೋ ಎಂಬ ಭ್ರಮೆಯೇ ಅಲ್ಲವೇ? ನಂತರ ನಡೆದುದೆಲ್ಲವೂ ಆ ಭ್ರಮಾಮೂಲವಾದ ಅಪಮಾನ ಕಲ್ಪನೆಯ ಫಲ.

'ಭ್ರಮೆ—ಭ್ರಮೆಯೊಂದೇ ಅಲ್ಲ, ಅಹಂಭಾವಸಮನ್ವಿತವಾದ ಭ್ರಮೆ

'ನನ್ನದು ಅಹಂಕಾರವಲ್ಲದೆ ಮತ್ತೇನು? ಸತ್ಯವನ್ನು, ನ್ಯಾಯವನ್ನು ಧರ್ಮವನ್ನು–ಎಲ್ಲವನ್ನು ನಿರ್ಧರಿಸುವ ಶಕ್ತಿ ನನಗಿದೆ. ಎಲ್ಲವನ್ನೂ ನಾನು ಕಾಣಬಲ್ಲೆ ಎಂದುಕೊಂಡುದು ಅಹಂಕಾರವೇ ಅಲ್ಲವೇ? ನಿಜ–ಅದು ಅಹಂಕಾರವಲ್ಲವಾದರೆ ಮತ್ತಾವುದು ತಾನೇ ಅಹಂಕಾರವೆನಿಸಿಕೊಂಡೀತು?

'ನನ್ನ ನಿರ್ಧಾರ ಅಹಂಕಾರಜನ್ಯವಾದುದು, ಭ್ರಮಾಮೂಲವಾದುದು ಎಂಬುದನ್ನು ನನಗೆ ತೋರಿಸಿಕೊಡಲೆಂದೇ ತಾಯಿ, ನನ್ನ ಸಂಕಲ್ಪ ಈಡೇರಲು ಇಷ್ಟು ವಿಘ್ನಗಳನ್ನು ತಂದೊಡ್ಡಿರಬೇಕು. ಅದಕ್ಕಾಗಿಯೇ, ಅಷ್ಟು ಜನಗಳ ಬಾಯ ಮೂಲಕ ನನಗೆ ಎಚ್ಚರಿಕೆ ಕೊಟ್ಟಿರಬೇಕು. ಅಲ್ಲಿಗೂ ನನಗೆ ಬುದ್ಧಿ ಬರದೆ ಹೋಗಲು ಸ್ವಪ್ನರೂಪದಲ್ಲಿ ನನ್ನ ಮೂರ್ಖ ನಿರ್ಧಾರದ ಪರಿಣಾಮವೇನಾದೀತೆಂದು ಸೂಚನೆ ಕೊಟ್ಟಳು. ಈಗಲೂ, ಈಗಲೂ, ನನ್ನಿಂದ ತಪ್ಪು ನಡೆಯಬಾರದೆಂದೇ ಬೆನ್ನ ಹಿಂದೆ ಬಂದಿದ್ದಾಳೆ.

'ಈ ತಾಯಿಗೆ ನನ್ನಲ್ಲಿ ಎಷ್ಟು ಪ್ರೇಮ, ಎಷ್ಟು ಕರುಣೆ, ಎಷ್ಟು ದಯೆ!

'ಇಂಥ ಕರುಣಾಮಯಿಯನ್ನು ಹಟಗಾತಿ ಎಂದು ಜರಿದೆನಲ್ಲಾ? ಬಗೆಬಗೆಯಾಗಿ ದೂರಿದೆನಲ್ಲಾ? ಪೂಜೆಮಾಡುವದಿಲ್ಲವೆಂದೆನಲ್ಲಾ? ಕಲ್ಲು ಮುಳ್ಳು ತುಳಿಸಿ ಅಲೆಸಿದೆನಲ್ಲಾ......

'ಪಾಪಿ, ಪಾಪಿ, ನಾನು ಮಹಾಪಾಪಿ...'

ಈ ಮಾತು ಮನವರಿಕೆಯಾಗುತ್ತಿದ್ದ ಹಾಗೇ, ಮೊದಲೇ ವಿಚಾರದ ಬೇಗೆಯಲ್ಲಿ ಬೆಂದ ಅವರ ಹೃದಯ, ಅಪರಾಧಪ್ರಜ್ಞೆಯಿಂದ ಮತ್ತಷ್ಟು ಕರಗಿ ಕಂಬನಿಗರೆಯಲಾರಂಭಿಸಿದರು.

'ತಾಯಿ, ತಾಯಿ, ನನ್ನನ್ನು ಮನ್ನಿಸು... ಮುಂದೆ ಎಂದೂ ಹೀಗೆ ಮಾಡುವುದಿಲ್ಲ. ಮುಂದೆ ಎಂದೂ ನನ್ನ ಹಟದ ಕೋಡು ಮೆರೆಸುವುದಿಲ್ಲ. ಇದೊಂದು ಬಾರಿ ಈ ಮೂಢನನ್ನು ಕ್ಷಮಿಸು ತಾಯಿ.'

–ಎಂದು ನೆಲದ ಮೇಲೆ ಹೊರಳಿ ಆರ್ತರಾಗಿ ಬೇಡಿದರು.

ಅವರು ಹಾಗೆ ಕಂಬನಿಗರೆದು ಅಳುತ್ತಿರುವಾಗಲೇ, ಆ ಧ್ವನಿ ಮೃದುವಾಗಿ ನಕ್ಕದ್ದು ಕೇಳಿಸಿತು. ಆ ನಗುವಿನೊಂದಿಗೆ–

'ಇನ್ನು ಮುಂದೆ ನಾನು ಹೇಳಿದ ಹಾಗೆ ಕೇಳುತ್ತೀಯಾ?'

—ಎಂಬ ಪ್ರಶ್ನೆ ಕೇಳಿಸಿತು.

'ಹೂಂ.'

'ನನ್ನ ಪೂಜೆ ಮಾಡುತ್ತೀಯಾ?'

'ಅದು ಬಿಟ್ಟು ಬೇರೇನು ಕೆಲಸವಿದೆ ನನಗೆ?'

'ಮುಂದೆಂದೂ ಹಟ ಮಾಡುವುದಿಲ್ಲವೇ?'

'ಇಲ್ಲ. ಈ ಬಾರಿ ಹಟ ಮಾಡಿದ ಪಾಪಕ್ಕೇ ನೀನು ವಿಧಿಸಿದ ಶಿಕ್ಷೆ ಅನುಭವಿಸಲು ಸಿದ್ಧವಾಗಿದ್ದೇನೆ.'

'ಶಿಕ್ಷೆ ಕೊಡಲೇ?'

'ಕೊಡು'

'ಏನು ಶಿಕ್ಷೆಕೊಡಲಿ?'

'ನಿನ್ನ ಇಚ್ಛೆಗೆ ಬಂದ ಶಿಕ್ಷೆ ವಿಧಿಸು'

'ಹಾಗಾದರೆ ಶಿಕ್ಷೆ ಕೊಡಲೇ?'

'ಈ ಘಟ ನಿನ್ನದು. ಇದಕ್ಕೆ ಬೇಕಾದದ್ದು ಮಾಡು. ಬೇಕಾದರೆ ಹೇಳು-ಈಗಲೇ ಈ ತಪ್ಪು ಮಾಡಿದ ತಲೆಯನ್ನು ತಗೆದು, ನಿನ್ನ ಪಾದಕ್ಕೆ ಒಪ್ಪಿಸಿ ಬಿಡುತ್ತೇನೆ'

'ನಿಜ—ನಿನ್ನ ಘಟ ನನಗೆ ಬೇಕು.'

'ಒಪ್ಪಿಸಿಕೋ'

'ಆದರೆ ಈಗ ಬೇಡ. ಇನ್ನೊಮ್ಮೆ ಹಟ ಮಾಡಿದಾಗ ಒಪ್ಪಿಸಿಕೊಳ್ಳುತ್ತೇನೆ.'

'ಅಂಥ ತಪ್ಪು ನನ್ನಿಂದ ಮತ್ತೆಂದೂ ಆಗುವುದಿಲ್ಲ ತಾಯಿ'

'ಆಗುತ್ತದೆಯೋ ಬಿಡುತ್ತದೆಯೋ ನಾನು ಬಲ್ಲೆ. ಅದು ನಿನಗೇಕೆ?'

'ನಿಜ. ನಾನೇನೂ ಅರಿಯದ ಮೂಢ'

'ಹಾಗಾದರೆ ಈಗ ಪೂಜೆ ಮಾಡು—ನಡೆ.'

'ನನಗೆ ಆ ಅರ್ಹತೆ ಇದೆಯೇ ತಾಯಿ?'

'ಇದೆಯೋ ಬಿಟ್ಟಿದೆಯೋ, ಅದು ನನಗೆ ಸೇರಿದ್ದು. ಈಗ ನೀನು ನಾನು ಹೇಳಿದಷ್ಟು ಕೇಳು.'

'ಆಯಿತು ತಾಯಿ—ನಿನ್ನಪ್ಪಣೆ.'

'ಸರಿ—ಹಾಗಾದರೆ ಊರಿನ ಕಡೆ ಹೆಜ್ಜೆ ಹಾಕು.

'ಅಪ್ಪಣೆ.'

—ಎಂದವರೇ, ವೇಂಕಟದಾಸಪ್ಪನವರು ತಟಕ್ಕನೆ ನೆಲದಿಂದ ಮೇಲೆದ್ದು ನಿಂತು, ಕತ್ತಲಿನಲ್ಲಿ ದೇವೀಕೆರೆಯ ದಾರಿ ಯಾವುದೆಂದು ತಿಳಿಯದೆ ಅತ್ತಿತ್ತ ನೋಡಲಾರಂಭಿಸಿದರು.

'ತೆಳುಗತ್ತಲಿನಲ್ಲಿ ಊರ ದಾರಿಯನ್ನು ಹುಡುಕುವುದೂ ನಿನಗೆ ತಿಳಿಯದು. ಅಂಥವನು ಎಲ್ಲವನ್ನು ಕಾಣಬಲ್ಲೆ ಎಂದುಕೊಂಡಿದ್ದೆಯಲ್ಲಾ.'

—ಬಹು ಸೂಕ್ಷ್ಮವಾದ ವ್ಯಂಗ್ಯ ಬೆರೆತ ಧ್ವನಿಯಲ್ಲಿ ನಕ್ಕಿತು, ವಾಣಿ.

'ನಾನು ಏನೂ ಅರಿಯದ ಅಜ್ಞ. ನೀನೇ ದಾರಿ ತೋರಿಸು'.

—ಹಸುಮಗುವಿನಂತೆ ಕೇಳಿದರು ವೆಂಕಟದಾಸಪ್ಪನವರು.

'ನಾನು ತೋರಿಸಿದ ದಾರಿಯಲ್ಲಿ ನಡೆಯುತ್ತೀಯಾ?'

'ಹೂ, ಅದಲ್ಲದೆ ನನಗೀಗ ಬೇರೆ ದಾರಿಯೇ ಇಲ್ಲ'.

'ಹಾಗಾದರೆ ನನ್ನನ್ನು ಹಿಂಬಾಲಿಸಿ ಬಾ'.

ತಟಕ್ಕನೆ ಗೆಜ್ಜೆಗಳ ಗಲಗಲ ಸದ್ದಾಗಿ, ಗೆಜ್ಜೆಗಾಲು ಒಂದು ಪಕ್ಕದಲ್ಲಿ ಮುಂದೆ ನಡೆದಂತೆ ಭಾಸವಾಯಿತು. ಗೆಜ್ಜೆಗಾಲಿನ ಸದ್ದಿಗೇ ಕೈ ಮುಗಿದು, ಅದು ನಡೆದ ದಿಕ್ಕಿನಲ್ಲೇ ವೆಂಕಟದಾಸಪ್ಪನವರೂ ಹೆಜ್ಜೆ ಹಾಕಿದರು.

ಮೊದಮೊದಲು ನಿಧಾನವಾಗಿ ಹೆಜ್ಜೆ ಹಾಕಲಾರಂಭಿಸಿದ ಗೆಜ್ಜೆಗಾಲು ಬಳಿಕ ವೇಗವಾಗಿ ಚಲಿಸಲಾರಂಭಿಸಿತು.

ಅದು ಚಲಿಸಿದಷ್ಟೇ ವೇಗವಾಗಿ ವೆಂಕಟದಾಸಪ್ಪನವರೂ ಅದನ್ನು ಹಿಂಬಾಲಿಸಿದರು.

ಮುಂದೆ ಗೆಜ್ಜೆಗಾಲ ಸದ್ದು—

ಹಿಂದೆ ವೆಂಕಟದಾಸಪ್ಪನವರು.

೨

ಅತ್ತ ದೇವೀಕೆರೆಯಲ್ಲಿ–

ದೇವೀಕೆರೆಯಲ್ಲಿ ನೆರೆದ ಜಾತ್ರೆಗೆ ಜಾತ್ರೆಯೇ ವೆಂಕಟದಾಸಪ್ಪನವರ ಮನೆಯ ಮುಂದೆ ಮುಗಿಬಿತ್ತು.

ವೆಂಕಟದಾಸಪ್ಪನವರ ಮನೆಯಿಂದ, ದೇವಾಲಯದಲ್ಲಿ ಅರ್ಚನೆಗೆಂದು ಅಚ್ಚಣ್ಣಭಟ್ಟರು ಅಮ್ಮನವರ ವಿಗ್ರಹವನ್ನು ತರಲು ಹೋದಾಗ, ಕರಾಳ ಸರ್ಪವೊಂದು, ಅವರು ವಿಗ್ರಹವನ್ನು ಮುಟ್ಟುವುದಕ್ಕೂ ಅವಕಾಶ ಕೊಡದೆ ಹೆದರಿಸುತ್ತಿದೆಯೆಂಬ ಸುದ್ದಿ ಕಾಳ್ಗಿಚ್ಚಿನಂತೆ ಹಳ್ಳಿಯಲ್ಲೆಲ್ಲಾ ಹರಡಿ, ಆ ಸುದ್ದಿಯ ಸತ್ಯವನ್ನರಿಯಲು, ಸಾಧ್ಯವಾದರೆ ಆ ಪವಾಡವನ್ನು ಕಣ್ಣಾರೆ ಕಾಣಲು, ಜಾತ್ರೆಗೆ ನೆರೆದ ಜನರೆಲ್ಲಾ ಮಾಡುತ್ತಿದ್ದ ಕೆಲಸಗಳನ್ನು ಬಿಟ್ಟು ವೆಂಕಟದಾಸಪ್ಪನವರ ಮನೆಯತ್ತ ಓಡಿದರು.

ಆ ಸುದ್ದಿ ಗ್ರಾಮದಲ್ಲಿ ಎಷ್ಟು ಬೇಗ ಹಬ್ಬಿತೋ, ಅಷ್ಟೇ ಬೇಗ ಬಗೆ ಬಗೆಯ ರೂಪಗಳನ್ನು ತಳೆಯಿತು. ಸುದ್ದಿಯನ್ನು ಕೇಳಿದವರು ಅದನ್ನು ಮತ್ತೊಬ್ಬರಿಗೆ ತಿಳಿಸುವಾಗ, ಆ ಸುದ್ದಿಗೆ ತಮ್ಮ ಊಹೆಯನ್ನು ಧಾರಾಳ ವಾಗಿ ಬೆರೆಸಿ, ಕೊನೆಕೊನೆಗೆ ಎಷ್ಟೋ ಮಂದಿ, ವೆಂಕಟದಾಸಪ್ಪನವರ ದೇವರ ಮನೆಯಲ್ಲಿ ಕಾಣಿಸಿಕೊಂಡುದು, ಹಾವಲ್ಲ, ಹುಲಿ ಎಂದು ಅಲ್ಲಲ್ಲಿ ಒಬ್ಬೊಬ್ಬರು ಆಡಿಕೊಳ್ಳುವುದಕ್ಕೂ ಕಾರಣರಾದರು. ಸರ್ಪದ ಉದ್ದ, ಗಾತ್ರ, ಹೆಡೆಗಳ ಸಂಖ್ಯೆಗಂತೂ ಅತಿಮಿತಿಯೇ ಇರದೆ, ಭೂಭಾರವನ್ನು ಹೊತ್ತ ಆದಿಶೇಷನೇ ಆ ದಿನ ಪ್ರತ್ಯಕ್ಷವಾಗಿದ್ದಾನೇನೋ ಎಂಬಂತೆ ಜನ ಆಡಿಕೊಂಡರು. ಎಷ್ಟೋ ಜನರ ವರ್ಣನೆ ವಿವರಣೆಗಳನ್ನು ಕೇಳಿದಾಗ ನಗು ಬರುವಂತಿದ್ದರೂ ಅಂದು ಯಾರೂ ನಗುವ ಸ್ಥಿತಿಯಲ್ಲಿರಲಿಲ್ಲ.

ವೆಂಕಟದಾಸಪ್ಪನವರ ಮನೆಯ ದೇವರಮನೆಯಲ್ಲಿ ಕಾಣಿಸಿಕೊಂಡ ಸರ್ಪಕ್ಕಿಂತ ಘೋರಾಕಾರವಾದ ಭೀತಿಸರ್ಪ ಎಲ್ಲರ ಹೃದಯಗಳಲ್ಲೂ ಹೆಡೆ, ತೂಗುತ್ತಾ, ಆ ಜನ ನಗುವುದಿರಲಿ, ಉಸಿರಾಡಲೂ ಬೆಚ್ಚುವಂತೆ ಮಾಡಿತ್ತು.

ಅಚ್ಚಣ್ಣ ಭಟ್ಟರು ದೇವಿಯ ವಿಗ್ರಹವನ್ನು ಮುಟ್ಟುವುದಕ್ಕೂ ಅಡ್ಡಿಯಾಗಿ

ಸರ್ಪ ಕಾಣಿಸಿಕೊಂಡುದರಿಂದ, ಎಲ್ಲರಿಗೂ ಒಂದು ಮಾತಂ ಮನವರಿಕೆ ಯಾಗಿತ್ತು–.

ಇನ್ನು ಜಾತ್ರೆ ನಿಂತುಹೋದ ಹಾಗೆಯೇ.

ಪೂಜಾವಿಗ್ರಹವೇ ಇಲ್ಲದೆ ಇನ್ನು ಜಾತ್ರೆ ನಡೆಯುವುದು ಹೇಗೆ?

ಜಾತ್ರೆ ನಡೆಯುವುದಿಲ್ಲ. ಹಾಗಾದರೆ ಮುಂದೇನು?

ಈ ಅನಿಸಿಕೆ ಜಾತ್ರೆಗೆ ನೆರೆದ ಒಬ್ಬೊಬ್ಬರಲ್ಲೂ ಒಂದೊಂದು ಬಗೆಯ ಚಿಂತೆಯನ್ನು ಮೂಡಿಸಿತು.

ಸಾವಿರಾರು ಜನ ನೆರೆದ ಜಾತ್ರೆಯಲ್ಲಿ, ಅಗ್ಗದ ಮುಗ್ಗಿದ ಸರಕನ್ನು ಸಾಕಷ್ಟು ಲಾಭಕ್ಕೆ ಮಾರಿ ದುಡ್ಡು ಮಾಡಬಹುದು ಎಂದುಕೊಂಡು ಬಂದ ವ್ಯಾಪಾರಿ–ವ್ಯವಹಾರಿಗಳಿಗೆ, ಆ ಲಾಭ ತಪ್ಪಿಹೋಯಿತಲ್ಲಾ ಎಂದು ಚಿಂತೆ ಯಾದರೆ, ಜಾತ್ರೆಯಲ್ಲಿ ಖಂಡಿತ ಮಾರಾಟವಾಗುತ್ತದೆ ಎಂಬ ನಂಬಿಕೆಯಿಂದ ಗುಡ್ಡದೆತ್ತರದ ಬಗೆಬಗೆಯ ತಿಂಡಿ ಪದಾರ್ಥಗಳನ್ನು ಮಾಡಿಕೊಂಡಿದ್ದವರಿಗೆ, ಬಹು ಬೇಗ ಕೆಟ್ಟುಹೋಗುವ ಈ ರಾಶಿ, ರಾಶಿ ತಿಂಡಿಗಳನ್ನೆಲ್ಲಾ ಏನು ಮಾಡುವುದು, ಹಾಗೇ ಸೀಮೆಗೆಲ್ಲಾ ಹಂಚಿಕೊಂಡು ಹೋಗುವುದೇ ಎಂಬ ಚಿಂತೆ ಆವರಿಸಿತು. ದುಡ್ಡಿದ್ದವರಿಗೆ, ಲಾಭದಾಸೆಯಿಂದ ದುಡ್ಡು ಸುರಿದವರಿಗೆ ಚಿಂತೆಯಾಗುವುದಿರಲಿ – ಜಾತ್ರೆಯಲ್ಲಿ ಸಾಕಷ್ಟು ಭಿಕ್ಷೆ ದೊರಕಬಹುದೆಂಬ ಆಸೆಯಿಂದ ದೇವೀಕೆರೆಗೆ ಬಂದು ನೆರೆದ ಭಿಕ್ಷುಕರಿಗೂ, ಮುಂದೆ ಯಾವ ಊರಿಗೆ ಹೋಗುವುದು ಎಂಬ ಚಿಂತೆಯಾಯಿತು. ಇದೆಲ್ಲಕ್ಕಿಂತ ಬಹು ದೊಡ್ಡ ಚಿಂತೆ–

'ಜಾತ್ರೆ ನಿಂತುಹೋಯಿತು. ಇದು ಯಾವ ಕೇಡಿಗೆ ಸೂಚನೆ? ರೋಗವೇ, ಬರಗಾಲವೆ? ಇದಕ್ಕೆ ಏನು ಪರಿಹಾರೋಪಾಯ ?'

ಜಾತ್ರಾ ಸಮಯದಲ್ಲಿ ದೇವಿಗೆ ಹರಕೆಯೊಪ್ಪಿಸಬೇಕು, ವರದಾನ ಕೇಳ ಬೇಕು ಎಂದುಕೊಂಡು, ತಮ್ಮ ಕಷ್ಟನಿವಾರಣೆಗಾಗಿ ಆಕಾಶದಷ್ಟು ಅಗಲ ಆಶೆಯನ್ನು ಕಟ್ಟಿಕೊಂಡು ಬಂದಿದ್ದವರಂತೂ, ಜಾತ್ರೆ ನಡೆಯುವುದಿಲ್ಲ ಎನ್ನುವ ಮಾತನ್ನು ಕೇಳಿ, ನೆತ್ತಿಯ ಮೇಲೆ ಕೈಹೊತ್ತು ಕುಳಿತು ಬಿಟ್ಟಿದ್ದರು.

ದೇವಾಲಯದಲ್ಲಿ, ಪೂಜಾ ಸಮಯದಲ್ಲಿ ಅಮ್ಮನವರಿಗೆ ಹರಕೆ

ಕಾಣಿಕೆಯನ್ನು ಒಪ್ಪಿಸಲೆಂದು ತಂದಿದ್ದ ಎಷ್ಟೋ ಜನ ಆ ಸುದ್ದಿಯನ್ನು ಕೇಳಿ-

'ಜಾತ್ರೆಯದಂತು ಹೀಗಾಯಿತು. ನಾವೂ ಹಾಗೆಂದುಕೊಂಡು, ಅಮ್ಮನವರಿಗೆ ಒಪ್ಪಿಸಬೇಕೆಂದು ತಂದದ್ದನ್ನು, ಹಾಗೇ ಹಿಂದಕ್ಕೆ ತೆಗೆದುಕೊಂಡು ಹೋಗವುದು ಸಾಧ್ಯವೇ? ಪಾಪ-ಪುಣ್ಯ ಎಲ್ಲಾ ಇದಕ್ಕೆ ಕಾರಣರಾದವರಿಗೆ ಇರಲಿ. ನಮ್ಮ ಪಾಟ್ಟಿಗೆ ಅಮ್ಮನವರು ಎಲ್ಲಿದ್ದರೆ ಅಲ್ಲಿಗೆ ಹೋಗಿ, ಹಣ್ಣು ಕಾಯಿ ಮಾಡಿಸಿ, ಕಾಣಿಕೆಯೊಪ್ಪಿಸಿ ಹೋಗುವುದು.'

-ಎಂದುಕೊಂಡು, ತಾವು ತಂದ ಕಾಣಿಕೆಗಳೊಂದಿಗೆ ವೆಂಕಟದಾಸಪ್ಪ ನವರ ಮನೆಯ ಮುಂದೆ ಬಂದು ನೆರೆದಿದ್ದರು.

ಇದು ಸಮಾಧಾನವಿದ್ದವರ ಮಾತಾಯಿತು.

ಆದರೆ ಅಂಥ ಸಮಾಧಾನ, ತಾಳ್ಮೆಗಳಿಲ್ಲದ ಎಷ್ಟೋ ಮಂದಿ, ವೆಂಕಟ ದಾಸಪ್ಪನವರ ಪೂಜಾಧಿಕಾರದ ಬಗ್ಗೆ ಇಲ್ಲದ ಪಂಚಾಯತಿಮಾಡಿ, ಜಾತ್ರೆಯು ನಿಂತು ಹೋಗುವಂಥ ಪರಿಸ್ಥಿತಿಗೆ ಕಾರಣರಾದವರ ಬಗ್ಗೆ ಪ್ರಕ್ಷುಬ್ಧರಾಗಿ-

'ನನ್ನ ಮಕ್ಕಳು, ಇಲ್ಲದ ಠೇಂಕಾರಮಾಡಿ, ಸೀಮೆಗೆ ಸೀಮೆಗೇ ಕೇಡು ತಂದುಬಿಟ್ಟರು. ಅವರ್ನೆಲ್ಲಾ ಹಿಡಿದು ಸೀಳಿ, ಊರು ಬಾಗಿಲಿಗೆ ತೋರಣ ಕಟ್ಟಬೇಕು.'

-ಎನ್ನುವವರೆಗೂ ಸಿಟ್ಟಿನ ಮಾತು ಮುಂದುವರಿಯಿತು.

'ಹೀಗೆಲ್ಲಾ ಮಾಡಿದ್ರೆ ಈ ಊರು, ಕೇರಿ ಉಳಿತದಾ. ಅಮ್ನೋರ ಪೂಜೇಲಿ ತೊಂಚವಂಚಾ ಮಾಡಿದ್ರೆ, ಊರಿಗೆ ಊರೇ ನೆಗೆದು ಬಿದ್ದು ನಿರ್ನಾಮ ಆಗಿ ಹೋಗ್ತದೆ. ಇಷ್ಟು ಜನರ ಹೊಟ್ಟೆ ಉರಿಸಿದೋರು, ತಾವು ಸುಖ ಪಡ್ತಾರಾ?.'

-ಎಂದು ದೇವೀಕೆರೆಯ ಜನವೆಲ್ಲವನ್ನೂ ಒಟ್ಟು ಸೇರಿಸಿ ಶಪಿಸುವವರೂ ಆ ಗುಂಪಿನಲ್ಲಿ ಇರದೆ ಹೋಗಲಿಲ್ಲ.

ಇಂಥ ಮಾತುಗಳನ್ನು ಜಾತ್ರೆಯಲ್ಲಿ ನೆರೆದ ಜನಜಂಗುಳಿಯ ಬಾಯಿಂದ ಕೇಳಿಸಿಕೊಂಡ ಬಳಿಕ, ದೇವೀಕೆರಿಯ ಸ್ಥಳೀಕರಿಗೆ, ಜಾತ್ರೆಯಲ್ಲಿ ಮುಖ ಎತ್ತಿ ಕೊಂಡು ತಿರುಗುವುದೂ ಸಾಧ್ಯವಾಗದೆ-

'ತಾಯಿ, ನಮ್ಮನ್ನು ಈ ಪರಿಸ್ಥಿತಿಯಿಂದ ಹೇಗೆ ಪಾರುಮಾಡುತ್ತೀಯೋ ಮಾಡು.'

–ಎಂದು ದೇವಿಯ ಮೇಲೆ ಭಾರಹಾಕಿ, ತಮ್ಮ ತಮ್ಮ ಮನೆಗಳಲ್ಲೇ ಅವಿತುಕೊಂಡಿದ್ದರು.

ದೇವೀಕೆರೆಯ ಜನ ಜಾತ್ರೆಗೆ ಬಂದ ಜನರಿಂದ ಮಾತ್ರ ಅನ್ನಿಸಿಕೊಂಡರೆ, ಅಚ್ಚಣ್ಣಭಟ್ಟರು ಅಮ್ಮನವರ ಪೂಜೆ ಮಾಡಲು ಒಪ್ಪಿದ ದೇವೀಕೆರೆಯ ಹಿರಿಯರು, ಮುಖ್ಯಸ್ಥರು, ಅತ್ತ ಜಾತ್ರೆಯ ಜನ. ಇತ್ತ ಊರಿನ ಜನ–ಎರಡು ತಂಡದಿಂದಲೂ ನಿಂದೆಗೆ ಗುರಿಯಾಗಿ, 'ಇಂಥ ಬದುಕಿಗಿಂತ ಸಾವು ಮೇಲು' ಎನ್ನುವ ಸ್ಥಿತಿಗೆ ಬಂದಿದ್ದರು.

ವೆಂಕಟದಾಸಪ್ಪನವರ ಮನೆಯಿಂದ ದೇವಾಲಯಕ್ಕೆ ಅಮ್ಮನವರ ವಿಗ್ರಹವನ್ನು ತೆಗೆಸಿಕೊಂಡು ಹೋಗುವುದಕ್ಕೆಂದು ಪಾಲಕಿಯೊಂದಿಗೆ, ವೆಂಕಟದಾಸಪ್ಪನವರ ಮನೆಗೆ ಬಂದವರಂತೂ, ಹಜಾರದಲ್ಲಿ ಗರಬಡಿದವರಂತೆ ಕುಳಿತಿದ್ದರು.

ಮನೆಯ ಹೊರಗೆ ನೆರದ ಜನ ನಾನಾಬಗೆಯ ಮಾತುಗಳನ್ನಾಡುವುದು ಕೇಳಿಸಿಯೂ, ಅವರಾರೂ ಹೊರಗೆ ಬಂದು ಜನಕ್ಕೆ ಸಮಾಧಾನ ಹೇಳುವುದು ಇರಲಿ, ಹಜಾರದಲ್ಲಿ ಕುಳಿತ ನಮ್ಮ ಜೊತೆಯವರ ಮುಖವನ್ನೂ ನೋಡುವ ಸ್ಥಿತಿಯಲ್ಲಿರಲಿಲ್ಲ. ಎಲ್ಲರ ಮುಖಗಳಿಂದಲೂ ರಕ್ತ ಬಸಿದುಹೋಗಿ, ಪ್ರೇತಕಳೆ ತುಂಬಿತ್ತು.

ತಮ್ಮ ತೀರ್ಮಾನದಿಂದ ಊರಿಗೆ ಕ್ಷೇಮವಾಗುವುದಿರಲಿ, ಇದ್ದ ಕೀರ್ತಿಯೂ ಹೋಗಿ ಅವರೊಂದಿಗೆ ಮತ್ತಾವುದೋ ವಿಪತ್ತು ಬರಲು ಕಾರಣವಾಯಿತೆಂಬ ಭಾವನೆ ಅವರಲ್ಲಿ ಬಲಿದು, ಅವರು ಕುಳಿತ ನೆಲವನ್ನು ಕಾದ ಹೆಂಚಾಗಿ ಮಾಡಿತ್ತು?.

'ಮುಂದೇನು?'

ಈ ಪ್ರಶ್ನೆ ಎಲ್ಲರ ಮುಂದೂ ದೈತ್ಯಾಕಾರವಾಗಿ ನಿಂತಿದ್ದರೂ, ಅದಕ್ಕೆ ಉತ್ತರ ಹೇಳುವ ಶಕ್ತಿ ಮಾತ್ರ ಅವರಲ್ಲಿ ಯಾರೊಬ್ಬರಿಗೂ ಇರಲಿಲ್ಲ.

ಯಾರೂ ಪರಿಹಾರೋಪಾಯ ಸೂಚಿಸಲಾಗದ ಈ ಅಸಹಾಯಕ ಪರಿ

ಸ್ಥಿತಿಯಲ್ಲಿ; ಕ್ರಮೇಣ ಆ ಅಸಹಾಯಕತೆಯ ಭಾವನೆಯೇ, ಅಸಮಾಧಾನವಾಗಿ ಮಾರ್ಪಟ್ಟು ಒಬ್ಬರು ಮತ್ತೊಬ್ಬರ ಮೇಲೆ ಸಿಡಿಮಿಡಿಗುಟ್ಟಲಾರಂಭಿಸಿದ್ದರು.

ಒಬ್ಬಿಬ್ಬರು–

'ಅಂತೂ ವೆಂಕಟದಾಸಪ್ಪ ತನ್ನ ಹಟಾನೆ ನಡೆಸಿಕೊಂಡು ನಮ್ಮೆಲ್ಲರಿಗೂ ಮುಳುಗು ನೀರು ತಂದುಬಿಟ್ಟ'.

–ಎಂದು ವೆಂಕಟದಾಸಪ್ಪನವರ ವಿಷಯದಲ್ಲಿ ಅಸಮಾಧಾನ ವ್ಯಕ್ತಪಡಿಸಿದರೆ, ಮತ್ತೆ ಕೆಲವರು–

'ನಾನು ಮೊದಲೇ ಬಡುಕೊಂಡೇ–ಹೀಗೆಲ್ಲಾ ಮಾಮೂಲು ತಪ್ಪಿಸಿದರೆ ಯಾರಿಗೂ ಒಳ್ಳೇದಾಗೋಲ್ಲಾಂತ. ಆಗ ನನ್ನ ಮಾತು ಕೇಳಿದ್ರಾ? ನನ್ನ ದೊಡ್ಡಸ್ಥಿಕೆ ಎಲ್ಲಿಡಲಿ ಅಂತ, ಚೋಟುದ್ದ ಮೂಗು ಮೊಳದುದ್ದ ಮಾಡಿಕೊಂಡು ಬಂದು ಪಂಚಾಯಿತಿ ಮಾಡಿದ್ರಲ್ಲಾ. ಈಗ ಹೋಗಿ ಊರ್‍ನಲ್ಲಿ, ಜಾತ್ರೆ ಜನರಲ್ಲಿ ಅದು ಹೇಗೆ ಮುಖ ತೋರಿಸ್ತೀರೋ, ತೋರಿಸಿ.'

–ಎಂದು ತಮ್ಮವರನ್ನೇ ಅಂದು ಆಡಿದರು..

ಅವರ ಸ್ಥಿತಿ ಹಾಗಿದ್ದರೆ, ಎಲ್ಲಕ್ಕೂ ತಾನೇ ಮೂಲಕಾರಣ ಎಂದುಕೊಂಡ ಅಚ್ಚಣ್ಣಭಟ್ಟರ ಪರಿಸ್ಥಿತಿಯಂತೂ ಇದ್ದದ್ದೂ ಶೋಚನೀಯವಾಗಿತ್ತು.

ದೇವೀವಿಗ್ರಹದ ಬಳಿ ಸರ್ಪ ದರ್ಶನವಾದ ಬಳಿಕ, ದೇವರ ಮನೆಯ ಬಾಗಿಲಲ್ಲಿ ಕುಸಿದು ಕುಳಿದ ಅಚ್ಚಣ್ಣಭಟ್ಟರು, ಅಲ್ಲಿಂದ ಕದಲಿರಲಿಲ್ಲ.

ಸರ್ಪವನ್ನು ಕಂಡಾಗ, ಆ ದಿಗ್ಭ್ರಾಂತಿಯಲ್ಲಿ ಅವರು–

'ವೆಂಕಟಗಿರೀ, ಇದೇನು ಹೀಗಾಯಿತು? ಮುಂದೇನು ಗತಿ?'

–ಎಂದು ಕೇಳಿ, ಮತ್ತೇನೂ ಆಡಲು ತೋಚದೆ ಸುಮ್ಮನೆ ಕಂಬನಿಗರೆಯುತ್ತಾ ಕುಳಿತುಬಿಟ್ಟಿದ್ದರು.

ಮೊದಮೊದಲು ಅಚ್ಚಣ್ಣಭಟ್ಟರಷ್ಟೇ ಕಿಂಕರ್ತವ್ಯಮೂಢರಾಗಿ ನೆತ್ತಿಯ ಮೇಲೆ ಕೈಹೊತ್ತು ಕುಳಿತ ವೆಂಕಟಗಿರಿ ಜೋಯಿಸರು, ಆಷ್ಟು ಹೊತ್ತಾದ ಬಳಿಕ–

'ಸುಮ್ಮನೆ ನೆತ್ತಿ ಮೇಲೆ ಕೈ ಹೊತ್ತುಕೊಂಡು ಕುಳಿತರೆ, ಏನಾದ

ಹಾಗಾಯಿತು ಅಚ್ಚಣ್ಣಭಟ್ಟರೆ ?'

—ಎಂದು ಕೇಳಿದರು.

'ಸುಮ್ಮನಿರದೆ ಮತ್ತೇನು ಮಾಡಲೋ ವೆಂಕಟಗಿರಿ. ನನ್ನ ಚಂಡಾಲ ಆಸೆ ನನ್ನಿಂದ ಮಾಡಬಾರದ್ದು ಮಾಡಿಸಿತು. ನನಗಂತೂ ಏನೂ ದಿಕ್ಕೇ ತೋಚದಹಾಗಾಗಿದೆ. ಏನು ಮಾಡಲಿ ನೀನೇ ಹೇಳು? ನನ್ನ ನೀಚ ಬಯಕೆ ಯಿಂದ ಅಮ್ಮನೋರ ಜಾತ್ರೇನೇ ನಿಂತು ಹೋಗೋ ಸ್ಥಿತಿ ಬಂತಲ್ಲಾ. ಎಲ್ಲಾ ಮತ್ತೆ ಸರಿಹೋಗುತ್ತೆ ಅನ್ನೋದಾದ್ರೆ, ನನ್ನ ತಲೆ ಬೇಕಾದ್ರೂ ಅಮ್ಮನೋರ ಪಾದಕ್ಕೆ ಒಪ್ಪಿಸಿಬಿಡ್ತೀನಿ. ನಾನಂ ಪಾಪಿ, ಪಾಪಿ...ಪರಮ ಚಂಡಾಲ ಹೇಳು... ಈಗೇನು ಮಾಡಲಿ?'

—ಎಂದು ಹಸುಮಗುವಿನಂತೆ ಅಳುತ್ತಾ ಕೇಳಿದರು ಅಚ್ಚಣ್ಣಭಟ್ಟರು.

'ಏನು ಮಾಡುವುದು ಎಂದು ನಾನೇನು ತಾನೇ ಹೇಳಲಿ ಭಟ್ಟರೆ. ನನಗೂ ನಿಮ್ಮಷ್ಟೇ ತಲೆ ಕೆಟ್ಟುಹೋಗಿದೆ. ಇದೆಲ್ಲಾ ನೋಡಿ ಬುದ್ಧಿ ಓಡಂ ವುದಿರಲಿ, ಕೈಕಾಲು ಕೂಡಾ ಆಡದ ಹಾಗಾಗಿದೆ.'

—ಎಂದು ವೆಂಕಟಗಿರಿ ಜೋಯಿಸರು ತಮ್ಮ ಅಸಹಾಯಕತೆಯನ್ನು ಸೂಚಿಸಿದರು.

'ಮತ್ತೆ...ಮತ್ತೆ...ಮೊನ್ನೆ...ಮೊದಲು ವಿಘ್ನಸೂಚನೆ ಕಂಡಂ ಬಂದರೂ ಜಾತ್ರೆ ನಡೆಯುತ್ತೆ ಅಂತ ಪ್ರಶ್ನೆ ಹೇಳಿದೆಯಲ್ಲಾ...'

'ಹೂ—ಹೇಳಿದೆ'

'ಮತ್ತೆ ಈಗ...?'

'ಈಗಲೂ ನನಗೆ ಜಾತ್ರೆ ನಿಲ್ಲುತ್ತೆಂತ ತೋರೋಲ್ಲ ಭಟ್ಟರೆ...'

'ಈಗಲೂ ಹಾಗೇ ಹೇಳ್ತೀಯಾ?'

—ದಟ್ಟವಾದ ಕಾರ್ಗತ್ತಲಿನಲ್ಲೂ ಆಸೆಯ ಮಿಣುಕು ಕಾಣುತ್ತಾ ಕೇಳಿದರು ಅಚ್ಚಣ್ಣಭಟ್ಟರು.

'ಹೇಳ್ತೀನಿ. ಆದರೆ ನನ್ನ ಮಾತಿನದೇನು ಲೆಕ್ಕ. ಮೂರು ಲೋಕಾನೂ ಆಳೋ ಮಹಾತಾಯಿ ಜಾತ್ರೆ ನಿಲ್ಲಿಸಬೇಕೂಂತ ಇದ್ದರೆ, ಅದಕ್ಕೆ ಗ್ರಹ, ನಕ್ಷತ್ರ, ಪಂಚಾಂಗ, ಜ್ಯೋತಿಷ್ಯ ಅಡ್ಡಿ ಬರೋಕೆ ಆಗುತ್ಯೆ? ಇವೆಲ್ಲಾ ಹೇಗಾಗ-

ಬೇಕೂಂತ ಇದೆಯೋ ಹಾಗಾಗುತ್ತೆ.'

—ಎಂದರು ವೆಂಕಟಗಿರಿ ಜೋಯಿಸರು ಇದ್ದ ನಿರಾಶೆಯನ್ನು ಇನ್ನಷ್ಟು ಹೆಚ್ಚಿಸುತ್ತಾ.

'ಹಾಗಾದರೆ—ಈಗೇನು ಮಾಡೋದು?'

—ನಿರಾಶೆಯಲ್ಲಿ ದಿಕ್ಕುಗಾಣದೆ ಕೇಳಿದರು ಅಚ್ಚಣ್ಣಭಟ್ಟರು.

'ಏನು ಮಾಡೋದು...ಏನು ಮಾಡೋದು...'

—ಎಂದು ಅಷ್ಟು ಹೊತ್ತು ಯೋಚಿಸಿ, ಬಳಿಕ ಏನೋ ಹೊಳೆದು, ವೆಂಕಟಗಿರಿ ಜೋಯಿಸರು ಗೊಂಬೆಯಂತೆ ಕಂಬನಿಗರೆಯುತ್ತಾ ಕುಳಿತಿದ್ದ ರಾಜೇಶ್ವರಿಯನ್ನು ನೋಡಿ—

'ರಾಜಕ್ಕಾ—ಈವತ್ತು ಅಮ್ಮನೋರಿಗೆ ಮನೇಲಿ ಮಾಡೋ ಪೂಜೇನ ಸಾಂಗವಾಗಿ ಮಾಡಿದ್ಯಾ ಅಮ್ಮಾ?'

—ಎಂದು ಕೇಳಿದರು.

'ಏನೋ ಪೂಜೆ ಅಂತ ಆಯ್ತು—ಅಷ್ಟೆ. ಒಂದು ಅಷ್ಟೋತ್ತರ ಕೂಡಾ ಮಾಡೋಕೆ ಆಗಲಿಲ್ಲ. ಎಲ್ಲಾ—ಅಮ್ನೋರ ಮುಂದೆ ಕೂತುಕೊಂಡು ಅತ್ತಿದ್ದೇ ಆಯ್ತು.'

'ಅತ್ತೆಯಾ?'

'ಹೂ'

'ಏಕೆ?'

'ಇಷ್ಟು ವರ್ಷ ಮನೇಲಿದ್ದ ದೇವಿ ಇವತ್ತು ಮನೆ ಬಿಟ್ಟು ಹೊರಟು ಹೋಗ್ತಾಳಲ್ಲಾಂತ ದುಃಖವಾಯ್ತು. ಆ ದುಃಖಾನ ಹಿಡಿಯೋದು ನನ್ನಿಂದ ಆಗಲಿಲ್ಲ...'

ರಾಜೇಶ್ವರಿ ಹಸುಮಗುವಿನಂತೆ ಮುಗ್ಧಳಾಗಿ ಹೇಳಿದ ಆ ಮಾತನ್ನು ಕೇಳಿ, ವೆಂಕಟಗಿರಿ ಜೋಯಿಸರಿಗೂ ಹೆಣ್ಣು ಹೃದಯದ ಯಾತನೆ ಅರಿವಾಗಿ ಕರುಳು ಚುರುಕ್ ಎಂದಿತು. ಆ ನೋವಿನಲ್ಲೇ ಒಂದು ಗಳಿಗೆ ಯೋಚಿಸುತ್ತಾ ಸುಮ್ಮನಿದ್ದು, ಬಳಿಕ, ಏನೋ ಯೋಚನೆ ಮಾಡಿ—

'ಹೋಗಲಿ ಬಿಡು. ಈಗ ನೀನು ಕಳುಹಿಸುವುದಕ್ಕೆ ಸಿದ್ಧವಾದರೂ,

ತಾಯಿ ತಾನೇ ಈ ಮನೆ ಬಿಟ್ಟು ಹೋಗುವುದಿಲ್ಲ ಅಂತ ನಿರ್ಧಾರ ಮಾಡಿರೋ ಹಾಗಿದೆ. ನೀನು ಕಣ್ಣೀರು ಹಾಕಿದ್ದು ಕಂಡೇ ಆಕೆಗೆ ಸಿಟ್ಟು ಬಂದು, ಹೀಗೆ ಸರ್ಪಾಕಾರವಾಗಿ ಕಾಣಿಸಿಕೊಂಡಿದಾಳೆಯೋ, ಅಥವಾ ಪುತ್ತಾಪ ಉದ್ದೇಶದಿಂದ ಹೀಗೆ ಕಾಣಿಸಿಕೊಂಡಿದಾಳೋ–ಹೇಗಾದರಾಗಲಿ. ನಾನು ಲಲಿತಾ ಸಹಸ್ರನಾಮ ಹೇಳುತ್ತೇನೆ. ನೀನೇ ಕೈಯಿಂದ ಪೂಜೆ ಮಾಡಿ, ಹಾವಿಗೆ ಒಂದು ತಟ್ಟೆಯಲ್ಲಿ ಹಾಲಿಟ್ಟು ಬಿಡು. ಮುಂದೆ ಹೇಗಾದರಾಗಲಿ– ಮೊದಲು ದೇವಿಯ ಕೋಪ ಶಾಂತವಾಗಲಿ'

—ಎಂದು ಹೇಳಿದರು.

ವೆಂಕಟಗಿರಿ ಜೋಯಿಸರು ಹೇಳಿದುದನ್ನು ಕೇಳಿಯೂ ರಾಜೇಶ್ವರಿ ಪೂಜೆ ಮಾಡಲು ಹಿಂದೆ ಮುಂದೆ ನೋಡತೊಡಗಿದಳು. ಆಕೆಯ ಅಳುಕು ಏನೆಂಬುದು ಜೋಯಿಸರಿಗೂ ಅರ್ಥವಾಗಿ —

'ಧೈರ್ಯವಾಗಿ ಪೂಜೆ ಮಾಡು ರಾಜಕ್ಕಾ. ಇದು ಕಡಿಯೋಕೆ ಬಂದಿರೋ ಹಾವಲ್ಲ, ಕಾರಣ ಸರ್ಪ. ಕಡಿಯೋ ಸಾಮಾನ್ಯ ಹಾವಾಗಿದ್ದಿದ್ದರೆ ಇಷ್ಟು ಹೊತ್ತಿಗೆ, ನಮ್ಮದೋ ಅವರದೋ, ಅಂತೂ ಯಾರೋ ಒಬ್ಬರ ಕಥೆ ಮುಗಿದು ಹೋಗುತ್ತಿತ್ತು. ಆದ್ದರಿಂದ ಆ ಯೋಚನೆ ಮಾಡಬೇಡ'

—ಎಂದುಹೇಳಿ, ತಾವೇ ಮೊದಲು ಧೈರ್ಯವಾಗಿ ಮಂದಾಸನದ ಬಳಿ ಸಾರಿ, ತಟ್ಟೆಯಲ್ಲಿದ್ದ ಕುಂಕುಮದ ಬಟ್ಟಲನ್ನು ತೆಗೆದು ರಾಜೇಶ್ವರಿಯ ಕೈಗೆ ಕೊಟ್ಟರು.

ಈ ಬಾರಿ ಜೋಯಿಸರು ಮಂದಾಸನದ ಬಳಿ ಸಾರಿದಾಗ, ದೇವಿಯ ವಿಗ್ರಹದ ಬಳಿಯಿದ್ದ ಸರ್ಪ, ಮೊದಲಿನಂತೆ ಹೆಡೆ ಬಿಚ್ಚಿ ಬುಸುಗರೆಯದೆ, ಜೋಯಿಸರತ್ತ ತಲೆ ಹೊರಳಿಸಿ, ಜೋಡು ನಾಲಗೆಯನ್ನು ನಾಲ್ಕಾರು ಬಾರಿ ಮಿಂಚಿಸಿ, ಮತ್ತೆ ಹಾಗೇ ಮಲಗಿತು.

ಅದನ್ನು ಕಂಡು ರಾಜೇಶ್ವರಿಗೂ ಅಷ್ಟು ಧೈರ್ಯ ಬಂದು, ಜೋಯಿಸರು ಕೊಟ್ಟ ಕುಂಕುಮದ ಬಟ್ಟಲನ್ನು ತೆಗೆದುಕೊಂಡು—

'ತಾಯಿ, ನಿನ್ನ ಇಚ್ಛೆ ಹೇಗಿದ್ದರೆ ಹಾಗಾಗಲಿ'

—ಎಂದು ಪೂಜೆ ಮಾಡಲು ಸಿದ್ಧಳಾದಳು.

ಜೋಯಿಸರು ಪೂಜಾರಂಭದ ಸಂಕಲ್ಪ ಮಂತ್ರವನ್ನು ಹೇಳಿ, ಬಳಿಕ ಲಲಿತಾ ಸಹಸ್ರನಾಮವನ್ನು ಹೇಳಲು ಆರಂಭಿಸಿದರು.

ದೇವಿಯ ವಿಗ್ರಹದ ಮೇಲೆ ಕುಂಕುಮ ಹಾಕಿದಾಗ, ಹಾವು ಏನು ಮಾಡೀತೋ ಎಂದು ಹೆದಹೆದರುತ್ತಲೇ ರಾಜೇಶ್ವರಿ ಕುಂಕುಮಾರ್ಚನೆಯನ್ನು ಆರಂಭಿಸಿದಳು,

ಜೋಯಿಸರು ಕಣ್ಣು ಮುಚ್ಚಿಕೊಂಡು, ಬಾಯಿಪಾಠವಾದ ಸಹಸ್ರನಾಮವನ್ನು ಹೇಳುತ್ತಿದ್ದರು.

ರಾಜೇಶ್ವರಿ ಕುಂಕುಮಾರ್ಚನೆ ಮಾಡುತ್ತಿದ್ದಳು—

ಬರಬರುತ್ತಾ, ಮಂತ್ರ ಹೇಳುವವರಿಗೆ, ಪೂಜೆ ಮಾಡುವವರಿಗೆ ಇಬ್ಬರಿಗೂ ಸುತ್ತಲ ಜಗತ್ತಿನ ಅರಿವು ಮರೆಯಾಗಿ, ಮಂತ್ರವಾಚನದ ಗಂಭೀರ ಧ್ವನಿ ಸೃಜಿಸಿದ ಬೇರಾವುದೋ ಭಾವಲೋಕದಲ್ಲಿ ತನ್ಮಯರಾದರು.

ದೇವರ ಮನೆಯ ಬಾಗಿಲಲ್ಲಿ ಕುಳಿತ ಅಚ್ಚಣ್ಣಭಟ್ಟರೂ, ಲಕ್ಷ್ಮೀ ದೇವಮ್ಮನೂ ನಿಬ್ಬೆರಗಾಗಿ, ಸರ್ಪಸಾಕ್ಷಿಯಾಗಿ ನಡೆವ ಆ ವಿಚಿತ್ರ ಪೂಜೆಯನ್ನೇ ನೋಡುತ್ತಾ, ತಾವೂ ಮೈಮರೆತಿದ್ದರು.

ಅವರೆಲ್ಲರೂ ಇಹಲೋಕವನ್ನು ಮರೆತು, ಆ ಪೂಜೆಯಲ್ಲಿ ತನ್ಮಯರಾಗಿರುವಾಗಲೇ, ಹೊರಗಿನಿಂದ—

'ದಾಸಣ್ಣನೋರು ಬಂದರು...ದಾಸಣ್ಣನೋರು ಬಂದರು...'

—ಎಂಬ ಜನಗಳ ಗುಂಪಿನ ಕೂಗು ಕೇಳಿ ಬಂದು ಎಲ್ಲರಿಗೂ ಕನಸು ಮುರಿದಂತಾಯಿತು. ತಟಕ್ಕನೆಎಲ್ಲರ ಕಣ್ಣೂ ತಲೆಬಾಗಿಲತ್ತ ತಿರುಗಿತು.

ಆ ಜನಗಳ ಕೂಗಿನೊಂದಿಗೇ ತಾವೂ—

'ತಾಯೀ...ತಾಯೀ...ಅಮ್ಮಾ...ಅಮ್ಮಾ...'

—ಎಂದು ಕೂಗುತ್ತಾ, ವೆಂಕಟದಾಸಪ್ಪನವರು ಬಿರುಗಾಳಿಯ ವೇಗದಿಂದ, ಅಲ್ಲಿ ಕುಳಿತಿದ್ದವರಾರೂ ಕಣ್ಣಿಗೆ ಕಾಣಿಸದವರಂತೆ, ದೇವರ ಮನೆಯೊಳಗೆ ನುಗ್ಗಿ, ಮಂದಾಸನದ ಮುಂದೆ ಹಾಗೇ ಉರುಳಿದರು.

೩

ವೆಂಕಟದಾಸಪ್ಪನವರ—

'ತಾಯೀ ... ತಾಯೀ ...'

—ಎಂಬ ಕೂಗಿನೊಂದಿಗೇ, ಎಲ್ಲಿಯೋ ಗೆಜ್ಜೆಗಳ ಸದ್ದಾಗಿ ಕರಗಿ ಹೋದಂತೆ ಎಲ್ಲರಿಗೂ ಕೇಳಿಸಿದರೂ, ವೆಂಕಟದಾಪ್ಪನವರು ಬಂದರು ಎಂಬ ಸಂಭ್ರಮದಲ್ಲಿ, ಅವರನ್ನು ಕಂಡು ಮೂಡಿದ ಗಲಿಬಿಲಿಯಲ್ಲಿ ಅದು ಯಾರಿಗೂ ನೆನಪುಳಿಯಲಿಲ್ಲ. ಎಲ್ಲರ ಕಣ್ಣೂ ವೆಂಕಟದಾಸಪ್ಪನವರನ್ನೇ ನೋಡುತ್ತಿದ್ದವು.

ಆದರೆ ವೆಂಕಟದಾಸಪ್ಪನವರಿಗೆ ಮೈಮೇಲೆ ಪ್ರಜ್ಞೆಯೇ ಇದ್ದಂತಿರಲಿಲ್ಲ. ಅವರು ಹೆಗಲ ಮೇಲೆ ಹೊದ್ದ ಉತ್ತರೀಯ ಓಡಿಬರುವಾಗ ಎಲ್ಲಿಯೋ ಜಾರಿಬಿದ್ದು ಬರಿಮೈಯಿಂದ ಬೆವರು ಧಾರಾಕಾರವಾಗಿ ಸುರಿಯುತ್ತಿತ್ತು. ಉಟ್ಟಪಂಚೆಯ ಕಚ್ಚೆ ಕಿತ್ತುಹೋಗಿ, ಅದು ಓಡುವ ಕಾಲಿಗೆ ಅಡ್ಡಿಯಾಗಿ ಜೋಲಾಡುತ್ತಿತ್ತು. ತಲೆಯ ಮೇಲಿನ ಕೂದಲಗಂಟು ಸಡಿಲವಾಗಿ ಜಾರಿ, ಕೂದಲು ಬೆನ್ನ ಮೇಲೆ, ಮುಖದ ಮೇಲೆ, ಗಾಳಿಯಲ್ಲಿ ಆಡುತ್ತಿತ್ತು. ಅರೆ ಮುಚ್ಚಿದ ಕಣ್ಣುಗಳಿಂದ ಸುರಿದ ಕಂಬನಿ, ಮುಖದಿಂದ ಬಸಿಯುತ್ತಿದ್ದ ಬೆವರಿನೊಂದಿಗೆ ಬೆರೆತು, ಮುಖದ ಮೇಲೆ ಬೆವರು–ಕಂಬನಿಗಳ ಕೋಡಿ ಹರಿಯುತ್ತಿತ್ತು. ಓಡಿದ ಆಯಾಸಕ್ಕೆ ಎದೆ ಬಿರಿಯುವಂತೆ ತುಯ್ಯುತ್ತಿದ್ದುದೇ ಅಲ್ಲದೆ, ತುಟಿಯಂಚಿನಲ್ಲಿ ಆಯಾಸದ ಬುರುಗು ತುಂಬಿ ಮಾತುಗಳೂ ಸ್ಪಷ್ಟವಾಗಿ ಹೊರಡುತ್ತಿರಲಿಲ್ಲ.

ಆ ಸ್ಥಿತಿಯಲ್ಲಿ ಅವರನ್ನು ಕಂಡವರಿಗೆ, ಅವರ ಮೈಮೇಲೆ ದೇವಿಯ ಆವೇಶ ಬಂದಿದೆಯೇನೋ ಎನಿಸಿ, ಅವರ ದಾರಿಯಲ್ಲಿ ನಿಲ್ಲಲೂ ಗಾಬರಿಯಾಗಿ ಹೇಗಿದ್ದವರು ಹಾಗೆ ದೂರ ಸರಿದು ದಾರಿ ಮಾಡಿದರು.

'ತಾಯೀ ... ತಾಯೀ ....'

—ಎಂದು ಬುಸುಗರೆಯುತ್ತ, ಪೂಜಾಮಂದಿರದೊಳಗೆ ನುಗ್ಗಿದ ವೆಂಕಟ

ದಾಸಪ್ಪನವರನ್ನು ಕಂಡು, ರಾಜೇಶ್ವರಿ ಮೆಟ್ಟಿಬಿದ್ದು – ಆ ದಿಗ್ಭ್ರಾಂತಿಯಲ್ಲಿ ಕೈಯಲ್ಲಿ ಹಿಡಿದ ಕುಂಕುಮದ ಬಟ್ಟಲನ್ನು ಜಾರಿಬಿಟ್ಟು—

'ದಾಸಣ್ಣಾ....ದಾಸಣ್ಣಾ....ಏನಾಯಿತು ದಾಸಣ್ಣಾ....'

—ಎಂದು ಅವರತ್ತ ನುಗ್ಗಿದಳು.

ಆದರೆ ವೆಂಕಟದಾಸಪ್ಪನವರ ಕಿವಿಗೆ ರಾಜೇಶ್ವರಿಯ ಕೂಗೂ ಬೀಳಲಿಲ್ಲ. ಹಾಗೇ ನುಗ್ಗಿ ಬಂದು ದೇವರ ಮಂದಾಸನದ ಮುಂದೆ, ನೆಲದ ಮೇಲೆ ಕುಸಿದು ಬಿದ್ದುಬಿಟ್ಟರು.

ನೆಲದ ಮೇಲೆ ಕುಸಿಯುತ್ತಿದ್ದ ಹಾಗೇ ಅವರ ಬಾಯಿಂದ ಬರುತ್ತಿದ್ದ ಸದ್ದೂ ನಿಂತುಹೋಗಿ, ಅಂಗಾಂಗಗಳೂ ಚಲಿಸದೆ. ಸ್ತಬ್ಧವಾದವು.

ವೆಂಕಟದಾಸಪ್ಪನವರ ಬೆನ್ನಹಿಂದೆಯೇ ದೇವರಮನೆಯವರೆಗೂ ಬರ ಬಹುದಾದವರೆಲ್ಲರೂ ನುಗ್ಗಿ ಬಂದರು. ಹಾಗೆ ಒಳಗೆ ಬರಲಾಗದ ಜನ, ಹೊರಗೆ 'ಹೋ' ಎಂದು ಹುಯ್ಯಲಿಡುತ್ತಿತ್ತು.

ಆ ಹೊರಗಿನ ಗದ್ದಲ, ವೆಂಕಟದಾಸಪ್ಪನವರ ಆಕಸ್ಮಿಕವಾದ, ಅನಿರೀಕ್ಷಿತ ಪರಿಸ್ಥಿತಿಯಲ್ಲಿ ಆಗಮನ—

ಇವುಗಳಲ್ಲಿ, ಅಷ್ಟು ಹೊತ್ತು, ಯಾರಿಗೂ ಏನುಮಾಡಬೇಕೆಂಬುದೇ ತೋಚಲಿಲ್ಲ. ಎಲ್ಲರೂ ಬಿಟ್ಟ ಕಣ್ಣು, ಬಿಟ್ಟ ಬಾಯಾಗಿ ಹೇಗಿದ್ದವರು ಹಾಗೇ ಇದ್ದರು.

ಅವರು ಯಾರಿಗೂ ಪ್ರಜ್ಞೆತಪ್ಪಿ ಬಿದ್ದ ವೆಂಕಟದಾಸಪ್ಪನವರಿಗೆ ಶೈತ್ಯೋಪಚಾರ ಮಾಡಬೇಕೆಂಬುದಾಗಲಿ, ಅವರ ಪರಿಸ್ಥಿತಿಯನ್ನು ಕಂಡು, ಅವರ ಬಳಿ ಸಾರಿ ಕಂಬನಿಗರೆಯುತ್ತ ಕುಳಿತ ರಾಜೇಶ್ವರಿ, ಲಕ್ಷ್ಮೀದೇವಮ್ಮನನ್ನು ಸಂತೈಸಬೇಕೆಂಬುದಾಗಲಿ ತೋಚಲಿಲ್ಲ. ಎಲ್ಲರೂ ಕಡೆದ ಗೊಂಬೆಗಳಂತೆ ನಿಂತಿದ್ದರು.

ಹೊರಗೆ ಜನಘೋಷ ಕಡೆವ ಕಡಲಿನಂತೆ ಮೊರೆಯುತ್ತಿತ್ತು.

ಮನೆಯೊಳಗೆ ಎಳ್ಳು ಸಿಡಿದರೂ ಸದ್ದು ಕೇಳುವಷ್ಟು ಗಾಢವಾದ ಮೌನ ವ್ಯಾಪಿಸಿತ್ತು.

ದೇವರ ಮನೆಯ ಬಾಗಿಲ ಮುಂದೆ, ಗಾಳಿಯೂ ಆಡಲಾಗದಷ್ಟು

ದಟ್ಟವಾಗಿ ಜನ ಕವಿದಿತ್ತು.

ಎಲ್ಲರೂ ಹಾಗೆ ನಿಂತಿರುವಾಗ, ಗುಂಪಿನೊಂದಿಗೆ ಒಳಗೆ ಬಂದ ಕಾವೇರಜ್ಜಿಯೇ ಮೌನವನ್ನು ಮುರಿದು–

'ಎಲ್ಲರೂ ಹಾಗೆ ಗೊಂಬೆಗಳ ಹಾಗೆ ನಿಂತುಬಿಟ್ಟರೆ ಏನಾವಹಾಗಾಯ್ತು. ದಾಸಣ್ಣನಿಗೆ ಪ್ರಜ್ಞೆತಪ್ಪಿದೆಯೋ ಏನೋ ನೋಡಿ, ಅಷ್ಟು ನೀರಾದ್ರೂ ತಟ್ಟಿರಿ.'

–ಎಂದು ಮಾಡಬೇಕಾದ ಕರ್ತವ್ಯವನ್ನು ನೆನಪಿಸಿದಳು.

ಆ ಮಾತು, ಅದುವರೆಗೂ ಸ್ತಬ್ಧವಾದ ಎಲ್ಲರ ಬುದ್ಧಿ, ಅಂಗಾಂಗ ಗಳಿಗೂ ಚಲನೆಯನ್ನೊದಗಿಸಿತು. ನೆಲದ ಮೇಲೆ ಪ್ರಜ್ಞಾಶೂನ್ಯರಾಗಿ ಮಲ ಗಿದ ವೆಂಕಟದಾಸಪ್ಪನವರಿಗೆ ಶೈತ್ಯೋಪಚಾರ ಮಾಡಲು, ಎಲ್ಲರೂ 'ನಾನು ಮುಂದು, ತಾನು ಮುಂದು' ಎಂದು ನುಗ್ಗಿದರು.

ಒಂದೇ ಕೆಲಸಕ್ಕೆ ಹತ್ತು ಜನ ನಾನು–ತಾನು ಎಂದು ನುಗ್ಗುತ್ತಿರುವಾ- ಗಲೇ, ಯಾರ ನೆರವು, ಯಾರ ಉಪಚಾರವೂ ಇಲ್ಲದೆ ವೆಂಕಟದಾಸಪ್ಪ ನವರು ತಾವಾಗಿಯೇ ಕಣ್ಣು ತೆರೆದು ಮುಂದಾಸನದ ಕಡೆ ಕಣ್ಣಾಡಿಸಿ, ತಮ್ಮ ಬಳಿಯಲ್ಲಿ ಕುಳಿತ ರಾಜೇಶ್ವರಿಯನ್ನು ನೋಡಿ.

'ರಾಜಕ್ಕ.'

–ಎಂದು, ಕ್ಷೀಣವಾದ ಧ್ವನಿಯಲ್ಲಿ ಕರೆದರು.

'ಏನು ದಾಸಣ್ಣ?'

–ಅವರಿಗೆ ಎಚ್ಚರವಾದ ಸಂತೋಷದಲ್ಲಿ ಬೀಗುತ್ತಾ ಕೇಳಿದಳು ರಾಜೇಶ್ವರಿ.

'ಅಚ್ಚಣ್ಣಭಟ್ಟರಿಗೆ ಅಮ್ಮನೋರ ವಿಗ್ರಹ ಕೊಡಲಿಲ್ವೆ?'

ವೆಂಕಟದಾಸಪ್ಪನವರ ಆ ಪ್ರಶ್ನೆಯನ್ನು ಕೇಳಿ ರಾಜೇಶ್ವರಿಯ ಕರಳು ಇರಿದಂತಾಯಿತು.

'ಇಲ್ಲ... ಇಲ್ಲ...'

–ಎಂದು ನೆಲದತ್ತ ನೋಡುತ್ತಾ ಉತ್ತರ ಕೊಟ್ಟಳು, ರಾಜೇಶ್ವರಿ

'ಏಕೆ?'

'ಆ ಮಹಾತಾಯಿ ಪೂಜೆ ಮಾಡೋದಿರಲಿ...ಮುಟ್ಟೋ

ಯೋಗ್ಯತೇನೂ ನಮಗಿಲ್ಲ ದಾಸಣ್ಣ'....

—ವೆಂಕಟದಾಸಪ್ಪನವರ ಪ್ರಶ್ನೆಗೆ ರಾಜೇಶ್ವರಿಗಿಂತ ಮುಂದಾಗಿ, ವೆಂಕಟದಾಸಪ್ಪನವರ ಬಳಿ ಬಂದ ಅಚ್ಚಣಭಟ್ಟರೇ ಉತ್ತರ ಕೊಟ್ಟರು—

'ಆಕೆಯನ್ನು ಮುಟ್ಟಿ ನನ್ನಿಂದಾಗುತ್ತಿದ್ದ ಪಾಪವನ್ನು ತಾಯಿಯೇ ಹಾವಾಗಿ ಬಂದು ತಡೆದು ತಪ್ಪಿಸಿದಳು.

'ಏನು...ಏನು...ತಾಯಿ ಹಾವಾಗಿ ಕಾಣಿಸಿಕೊಂಡಳೇ?'

—ಆ ಪ್ರಶ್ನೆಯನ್ನು ಕೇಳುತ್ತಲೇ ವೆಂಕಟದಾಸಪ್ಪನವರು ಥಟಕ್ಕನೆ ಎದ್ದು ಕುಳಿತು, ಸುತ್ತಲೂ ನೋಡುತ್ತಾ ಆತುರವಾಗಿ ಕೇಳಿದರು.

'ಹೂ—ಈಗ್ಲೂ ಅಮ್ಮನೋರ ವಿಗ್ರಹದ ಮೇಲೇ ಸಿಂಬೆ ಹಾಕಿ ಕೊಂಡು ಕೂತಿದೆ.'

—ಎಂದು ರಾಜೇಶ್ವರಿ ಮುಂದಾಸನದತ್ತ ಕೈಮಾಡಿ ತೋರಿಸಿ ಹೇಳಿದಳು.

ಆಕೆಯ ಕೈಯೊಂದಿಗೇ ವೆಂಕಟದಾಸಪ್ಪನವರ ದೃಷ್ಟಿಯೂ ಅತ್ತ ಚಲಿಸಿತು. ಹಾಗೇ ಎಲ್ಲರ ಕಣ್ಣುಗಳೂ.

ಆದರೆ ಮುಂದಾಸನವಲ್ಲಿ ಹಾವಿರಲಿಲ್ಲ. ನಂದಾದೀವಿಗೆಗಳ ಬೆಳಕಿನಲ್ಲಿ ಅಮ್ಮನವರ ಚಿನ್ನದ ವಿಗ್ರಹವೊಂದು ಮಾತ್ರ ತಣ್ಣಗೆ ಹೊಳೆಯುತ್ತಿತ್ತು.

ಸರ್ಪಶೂನ್ಯವಾದ ಮುಂದಾಸನವನ್ನು ಕಂಡು, ಸ್ವಲ್ಪಹೊತ್ತಿನ ಮೊದಲು ಅಲ್ಲಿ ಬುಸುಗರೆಯುತ್ತಾ ಕುಳಿತಿದ್ದ ಕೃಷ್ಣಸರ್ಪವನ್ನು ಕಂಡವರೆಲ್ಲರಿಗೂ ಮೆಟ್ಟಿ ಬೀಳುವಂತಾಯಿತು.

'ಅರೆ—ಇಷ್ಟು ಹೊತ್ತಿನವರೆಗೂ ಅಲ್ಲೇ ಇತ್ತು. ಇಷ್ಟು ಬೇಗ ಎಲ್ಲೋ ಮಾಯವಾಗಿ ಬಿಡ್ತಲ್ಲಾ.'

—ರಾಜೇಶ್ವರಿ ತನ್ನ ಕಣ್ಣನ್ನೇ ನಂಬದವಳಂತೆ, ಕಣ್ಣು ಹೊಸಗಿಕೊಂಡು ನೋಡುತ್ತಾ, ಅಚ್ಚರಿ ತುಂಬಿದ ಧ್ವನಿಯಲ್ಲಿ ಹೇಳಿದಳು.

'ಹೌದೇ...ಹೌದೇ...ಸರ್ಪಾಕಾರವಾಗಿ ತಾಯಿ ಕಾಣಿಸಿಕೊಂಡಿದ್ದಳೇ?'

—ಎಂದು ಕೇಳುತ್ತಲೇ, ಮುಂದಾಸನದತ್ತ ಧಾವಿಸಿ, ಅತ್ತಿತ್ತ ನೋಡುತ್ತ ಕಾತರರಾಗಿ ಕೇಳಿದರು ವೆಂಕಟದಾಸಪ್ಪ. ಅವರ ಕಣ್ಣಿಗೆ ಸರ್ಪವೂ ಕಾಣಲಿಲ್ಲ. ಅದು ಇದ್ದು ಹೋಗಿರಬಹುದಾದ ಕುರುಹೂ ಕಾಣಲಿಲ್ಲ.

'ನಿಜವೇ, ನಿಜವೇ ರಾಜಕ್ಕ...ಹಾವು ಕಾಣಿಸಿಕೊಂಡದ್ದು ನಿಜವೇ?

'ಹೂ, ದಾಸಣ್ಣ ನಾನೇ ಕಣ್ಣಾರ ನೋಡಿದೆ...'

—ರಾಜೇಶ್ವರಿ ಹೇಳಿದಳು.

'ಆಕೆ ಒಬ್ಬಳೇನು ದಾಸಣ್ಣ, ನಾವೆಲ್ಲಾ ನೋಡಿದೆವು.'

—ಎಂದು ವೆಂಕಟಗಿರಿ ಜೋಯಿಸರು ರಾಜೇಶ್ವರಿಯ ಮಾತಿಗೆ ಸಾಕ್ಷಿ ಹೇಳಿದರು.

ಅಚ್ಚಣ್ಣಭಟ್ಟರೂ ತಲೆಯಾಡಿಸಿ, ಆ ಮಾತಿಗೆ ತಮ್ಮ ಸಮ್ಮತಿಯನ್ನು ಸೂಚಿಸಿ—

'ಇಷ್ಟು ಹೊತ್ತು...ನೀನು ದೇವರಮನೆ ಒಳಗೆ ಬರೋವರೆಗೂ, ಅಲ್ಲೇ ಅಮ್ಮನೋರ ವಿಗ್ರಹಾನ ಕಾವಲು ಕಾಯ್ತಾ ಕೂತಿತ್ತು. ಈಗ ಎಲ್ಲೋ ಮಾಯವಾಗಿ ಹೋಗಿದೆ.'

—ಎಂದರು.

ಅವರ ಮಾತು ಕೇಳಿ, ದೇವರ ಮನೆಯೊಳಗಿದ್ದ ಜನರೂ, ಹಾವು, ಜನಗದ್ದಲಕ್ಕೆ ಬೆದರಿ ಎಲ್ಲಾದರೂ ಸಂದು ಗೊಂದಿಯಲ್ಲಿ ಅವಿತು ಕುಳಿತಿದೆ ಯೇನೋ ಎಂದು ದೇವರ ಮನೆಯಲ್ಲೆಲ್ಲಾ ಹುಡುಕಿದರು. ಹಾವಿರಲಿ ಒಂದು ಸಣ್ಣ ಹುಳು ಅವಿತುಕೊಳ್ಳುವಷ್ಟು ಸಣ್ಣ ಸಂದನ್ನೂ ಹುಡುಕದೆ ಬಿಡಲಿಲ್ಲ.

—ಎಲ್ಲರೊಂದಿಗೆ ವೆಂಕಟದಾಸಪ್ಪನವರೂ ಹುಡುಕಿದರು.

ಆದರೆ ಸರ್ಪ ಎಲ್ಲಿಯೂ ಇರಲಿಲ್ಲ; ಯಾರ ಕಣ್ಣಿಗೂ ಕಾಣಲಿಲ್ಲ.

ಅದನ್ನು ಹುಡುಕಿದ ಎಲ್ಲರೂ 'ಅಲ್ಲಿಯೂ ಇಲ್ಲ, ಇಲ್ಲಿಯೂ ಇಲ್ಲ.' ಎಂದು ಕೈಯಾಡಿಸಿದರು.

—ಅದನ್ನು ಕೇಳಿ ವೆಂಕಟದಾಸಪ್ಪನವರು ಒಂದು ಗಳಿಗೆ ಗರ ಬಡಿದಂತೆ, ಅಮ್ಮನವರ ವಿಗ್ರಹದ ಮುಂದೆ ಕುಳಿತುಬಿಟ್ಟರು. ದೇವಿಯ ವಿಗ್ರಹದ ಸುತ್ತಲೂ ಹರಡಿದ ಕುಂಕುಮದಲ್ಲಿ ಹಾವು ಇದ್ದಿತು ಎನ್ನುವುದಕ್ಕೆ ಸಾಕ್ಷಿಯಾಗಿ, ಅದರ ಮೈಯ ಗುರುತಿತ್ತು.

—ಆದರೆ ಹಾವು ಮಾತ್ರ ಇಲ್ಲ.

ತಾವು ಅಲ್ಲಿಗೆ ಬರುವವರೆಗೂ ಹಾವು ಅಲ್ಲಿಯೇ ಅಮ್ಮನವರ ವಿಗ್ರಹಕ್ಕೆ ಸಿಂಬೆ ಹಾಕಿ ಸುತ್ತಿಕೊಂಡು ಕುಳಿತಿತ್ತು; ಎಲ್ಲರೂ ಅದನ್ನು ನೋಡಿದರು.

–ಆದರೆ ತಾವು ಬಂದು, ನೋಡಬೇಕೆಂದಾಗ ಮಾತ್ರ ಹಾವು ಇಲ್ಲ.

'ಏಕೆ, ಹೀಗೇಕೆ ಮಾಯವಾಯಿತು? ನನಗೊಬ್ಬನಿಗೆ ಮಾತ್ರ ಹಾವು ಏಕೆ ಕಾಣಿಸಲಿಲ್ಲ? '

ಏಕೆ? ಹೀಗೇಕೆ ?

ಅವರ ಕಣ್ಣು ವಿಗ್ರಹವನ್ನು ನೋಡುತ್ತಿರುವಾಗ, ಅವರ ಮಿದುಳು ಈ ಮಾತನ್ನೇ ಚಿಂತಿಸುತ್ತಿತ್ತು. ಹಾಗೆ ಚಿಂತಿಸುತ್ತಿರುವಾಗಲೇ, ಎಂದೋ ಎಲ್ಲೋ ಕೇಳಿದಂಥ ಮಾತು, ಗಾಳಿಯಲ್ಲಿ ತೇಲಿ ಬರುವ ಹೆಸರರಿಯದ ಹೂವಿನ ಅಸ್ಪಷ್ಟ ಪರಿಮಳದಂತೆ ಮತ್ತೆ ಕೇಳಿ ಬಂದಿತು:

"'ಇಷ್ಟ...ಇಷ್ಟ...ಎಲ್ಲವೂ ನಿನ್ನ ಇಷ್ಟವೇ?'...ಕೈಗೆ ಸಿಗದೆ...ಕಣ್ಣಿಗೆ ಕಾಣದೆ ಎಷ್ಟು ಜಂಬ ಕೊಚ್ಚುತ್ತೀಯ? ಧೈರ್ಯವಿದ್ದರೆ, ಒಮ್ಮೆ ಇದುರಿಗೆ ಬಂದು ಆ ಮಾತು ಹೇಳು.'

'ಅದೂ ನನ್ನ ಇಷ್ಟ.'

* * *

'ನಿನ್ನ ಮಾತು ನನಗೆ ಅರ್ಥವಾಗಲಿಲ್ಲ.'

'ಅರ್ಥವಾಗುವುದಿಲ್ಲ'

'ಏಕೆ?

'ಆಗುವಾಗ ಆಗುತ್ತದೆ.'

'ಈಗೇಕೆ ಆಗಬಾರದು?'

'ಆಗುವುದಿಲ್ಲ.'

'ಏಕೆ ?'

'ನನ್ನ ಇಷ್ಟ'"

ಆ ಮಾತುಗಳು ನೆನಪಾಗಿ ವೆಂಕಟದಾಸಪ್ಪನವರನ್ನು ಸುತ್ತಿಸಿ, ಸುತ್ತಿಸಿ ಚಾವಟಿಯಿಂದ ಹೊಡದಂತಾಯಿತು.

ಆ ಮಾತುಗಳು ನೆನಪಾಗಿ ವೆಂಕಟದಾಸಪ್ಪರವರನ್ನು ಸುತ್ತಿಸಿ, ಸುತ್ತಿಸಿ ಚಾವಟಿಯಿಂದ ಹೊಡೆದಂತಾಯಿತು.

'ಆಕೆ ತಮಗೆ ಮಾತ್ರ ದರ್ಶನ ಕೊಡಲಿಲ್ಲ.'

ಕನಸಿನಲ್ಲಿ ಧ್ವನಿಯಾಗಿ ಕೇಳಿ ಬಂದಾಗ, ಎಚ್ಚರಸ್ಥಿತಿಯಲ್ಲಿ ಗೆಜ್ಜೆಗಾಲಿನ ಇನಿದನಿಯಾಗಿ ಹಿಂಬಾಲಿಸಿದಾಗ–

ಆಕೆ ಮುಖ ತೋರಿಸಲಿಲ್ಲ.

ಇಲ್ಲ, ಸರ್ಪರೂಪವಾಗಿ ಎಲ್ಲರಿಗೂ ಕಾಣಿಸಿಕೊಂಡಾಗಲೂ–

ತಮಗೊಬ್ಬರಿಗೆ ಮಾತ್ರ ಕಾಣಿಸದೆ ಮಾಯವಾಗಿ ಹೋದಳು.

ಅದೆಲ್ಲವೂ ಅರಿವಾಗಿ ವೆಂಕಟದಾಸಪ್ಪನವರು–

'ತಾಯಿ, ತಾಯಿ, ಇನ್ನೂ ನನ್ನನ್ನು ಮನ್ನಿಸುವುದಿಲ್ಲವೇ?'

–ಎಂದು ಬಾರಿ ಬಾರಿಗೂ ವಿಗ್ರಹಕ್ಕೆ ಕೈ ಮುಗಿದು ಬೇಡಂತ್ತ, ಕಣ್ಣೀರಿಡುತ್ತಾ, ಬಿಕ್ಕಿ ಬಿಕ್ಕಿ ಅಳುತ್ತಾ ಕುಳಿತು ಬಿಟ್ಟರು.

ಅವರ ಆ ದುಃಖಸ್ಥಿತಿಯನ್ನು ಕಂಡವರೆಲ್ಲರಿಗೂ, ತಮ್ಮ ಮೈಗೇ ಕಿಚ್ಚು ಹೊತ್ತಿಸಿದಷ್ಟು ಯಾತನೆಯಾಯಿತು. ಆದರೆ ಅವರನ್ನು ಸಂತೈಸುವಷ್ಟು ಧೈರ್ಯ ಮಾತ್ರ ಯಾರಿಗೂ ಇರಲಿಲ್ಲ. ಎಲ್ಲರಿಗೂ ಅವರ ದುಃಖವನ್ನು ಕಂಡು ಯಾತನೆಯಾದರೂ, ಯಾರಿಗೂ ಅವರ ದುಃಖವಾಗಲಿ, ಅವರ ಮಾತಾಗಲಿ ಅರ್ಥವಾಗಲಿಲ್ಲ.

ಕೊನೆಗೆ ವೆಂಕಟಗಿರಿ ಜೋಯಿಸರೇ ಕೊಂಚ ಧೈರ್ಯ ತಂದುಕೊಂಡು–

'ದಾಸಣ್ಣಾ...ಇದೇನು ಹುಚ್ಚು? ಹೀಗೇಕೆ ಅಳುತ್ತಿದ್ದೀಯ ಬಿಡು'.

–ಎಂದರು.

'ನಾನು ಎಂಥ ಪಾಪಿ ಎಂಬುದು ಅರಿವಾದ ಮೇಲೂ ಅಳದೆ, ನಗಲೆ ಜೋಯಿಸರೇ? ನಾನು ಭ್ರಷ್ಟನಾದೆ, ಪತಿತನಾದೆ, ತಾಯಿಯ ಪಾಲಿಗೆ ಬೇಡ ವಾದ ಪಾಪಿಯಾದೆ.'

–ಎಂದರು ವೆಂಕಟದಾಸಪ್ಪ, ಬಿಕ್ಕುತ್ತಲೇ.

'ಛೀ, ಹಾಗಾಡಬಾರದು, ಅಮ್ಮನವರಿಗೆ ನೀನು ಖಂಡಿತ ಬೇಡವಾಗಿಲ್ಲ.'

'ಬೇಕಾದವನಾಗಿದ್ದರೆ, ನಿಮ್ಮೆಲ್ಲರಿಗೂ ಸರ್ಪರೂಪವಾಗಿ ದರ್ಶನ ಕೊಟ್ಟ ತಾಯಿ ನನಗೊಬ್ಬನಿಗೆ ಮಾತ್ರ ಕಾಣಿಸದ ಹಾಗೇಕೆ ಮಾಯವಾಗುತ್ತಿದ್ದಳು? ನಿಮಗೆ ತಿಳಿಯದು ಜೋಯಿಸರೇ, ಆ ತಾಯಿಗೆ ನಾನು ಮಾಡಬಾರದ ಅಪರಾಧ ಮಾಡಿದೇನೆ. ಅದಕ್ಕೇ ಆಕೆ ನನಗೆ ದರ್ಶನ ಕೊಡಲಿಲ್ಲ',

'ಇದೆಲ್ಲಾ ಬರಿ ಭ್ರಮೆ. ಆಕೆಗೆ ನಿನ್ನಲ್ಲಿ ಎಷ್ಟು ಪ್ರೀತಿಯಿದೆ ಎನ್ನುವುದಂ ನಿನಗೆ ತಿಳಿಯದು ದಾಸಣ್ಣ. ಹಾವಾಗಿ ಆಕೆ ಕಾಣಿಸಿಕೊಂಡದ್ದು–ನಮಗೆ ದರ್ಶನ

ಕೊಡಲೆಂದಲ್ಲ, ಅದೂ ನಿನ್ನ ಮೇಲಿನ ಪ್ರೀತಿಯಿಂದಲೇ…'

'ಅಂದರೆ' –

'ನಮ್ಮ ಯಾರ ಕೈಲೂ ಪೂಜೆಮಾಡಿಸಿಕೊಳ್ಳುವುದು ಆಕೆಗೆ ಇಷ್ಟವಿರಲಿಲ್ಲ. ನಾವು ಪೂಜೆಮಾಡುವುದನ್ನು ತಡೆಯುವುದಕ್ಕೆಂದೇ, ಆಕೆ ಸರ್ಪರೂಪವಾಗಿ ಬಂದು ಕಾವಲು ಕುಳಿತಳು. ನೀನು ಬಂದ ಬಳಿಕ, ನೀನೇ ಪೂಜೆ ಮಾಡುತ್ತೀಯ ಎಂಬುದು ನಂಬಿಕೆಯಾಗಿ ಮಾಯವಾಗಿ ಹೋದಳು'.

'ನನ್ನ ಈ ಪಾಪಿ ಕಣ್ಣುಗಳಿಗೂ ಒಮ್ಮೆ ಕಾಣಿಸಿಕೊಂಡು, ನನ್ನ ಕೈಯಲ್ಲೂ ಎರಡು ಹೂವು ಹಾಕಿಸಿಕೊಂಡು ಹೋಗಬಾರದಾಗಿತ್ತೇ–ನನ್ನಲ್ಲಿ ಅಷ್ಟು ಪ್ರೀತಿ ಇದ್ದಿದ್ದರೆ'.

–ವೆಂಕಟಗಿರಿ ಜೋಯಿಸರ ಮಾತನ್ನು ನಂಬದೆ ಕೇಳಿದರು, ವೆಂಕಟದಾಸಪ್ಪನವರು.

ಅವರ ಆ ಪ್ರಶ್ನೆಗೆ ಕೂಡಲೇ ಉತ್ತರ ಹೇಳುವುದು ವೆಂಕಟಗಿರಿ ಜೋಯಿಸರಿಗೂ ಬಹು ಕಠಿಣವಾಯಿತು. ಅವರು ಆ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂದು ಯೋಚಿಸುತ್ತಿರುವಾಗಲೇ, ಆ ಎಲ್ಲ ಮಾತನ್ನು ಕೇಳಿಸಿಕೊಂಡ ಆಚ್ಚಣ್ಣಭಟ್ಟರು ತಾವೇ ಹೇಳಿದರು–

'ದಾಸಣ್ಣ, ಎಲ್ಲರಿಗೂ ಸರ್ಪರೂಪವಾಗಿ ಕಾಣಿಸಿಕೊಂಡ ತಾಯಿ, ನಿನಗೊಬ್ಬನಿಗೆ ಕಾಣಿಸದೆ ಏಕೆ ಮಾಯವಾದಳೊ, ಆಕೆಯ ಇಚ್ಛೆ ಏನಿದೆಯೋ–ಯಾರು ಬಲ್ಲರು? ಆದರೆ ನನಗಂತೂ ಇಷ್ಟು ತೋರುತ್ತದೆ ದಾಸಣ್ಣ, ಅದಕ್ಕಾಗಿ ನೀನು ದುಃಖಿಸಬೇಕಾಗಿಲ್ಲ.'

'ಏಕೆ?'

'ಆಕೆ ಕಾಣಿಸಿಕೊಂಡದ್ದು ಸರ್ಪರೂಪವಾಗಿ. ಆಕೆಯ ಇಚ್ಛೆಗೆ ವಿರುದ್ಧವಾಗಿ ನಡೆಯಲೆತ್ನಿಸಿದ ನಾವು, ಆಕೆಯ ವಿಗ್ರಹವನ್ನು ಮುಟ್ಟದಂತೆ ಮಾಡುವುದಕ್ಕಾಗಿ. ಆದ್ದರಿಂದ ಅದು ಆಕೆಯ ಆಗ್ರಹರೂಪವೇ ಇರಬೇಕೆಂದೇ ನನಗೆ ತೋರುತ್ತದೆ. ನಾವು ಆ ಆಗ್ರಹ ರೂಪವನ್ನು ಮಾತ್ರವೇ ಕಾಣಲು ಅರ್ಹರು. ಆಕೆಗೆ ಅತ್ಯಂತ ಪ್ರಿಯನಾದ ನಿನಗೆ, ಅಂಥ ಸ್ವರೂಪವನ್ನು ತೋರಿಸಲು ಇಚ್ಛೆ ಇಲ್ಲದಿರಬಹುದು. ಎಂದು, ಹೇಗೆ, ನಿನಗೆ ದರ್ಶನಕೊಡ

ಬೇಕೆಂದು ಆಕೆಯು ಚಿತ್ತದಲ್ಲಿದೆಯೋ ಏನೋ, ಆದ್ದರಿಂದ ಅದಕ್ಕಾಗಿ ದುಃಖ ಪಡಬೇಡ. ನಿನಗಿಂತ ನಾವುಯಾರೂ ಆಕೆಗೆ ಪ್ರಿಯರಲ್ಲ; ಆಕೆಗೆ ನಿನ್ನಲ್ಲಿ ರುವಷ್ಟು ಪ್ರೀತಿ ಬೇರೆಯಾರಲ್ಲೂ ಇಲ್ಲ, ಆದ್ದರಿಂದ ಈ ದುಃಖವನ್ನು ಬಿಡು.'

—ಎಂದರು ಅಚ್ಚಣ್ಣಭಟ್ಟರು.

ಅವರು ಹೇಳಿದ ಮಾತು ವೆಂಕಟಗಿರಿ ಜೋಯಿಸರಿಗೂ ಸರಿಯೆಂದೇ ತೋರಿತು.

'ನಿಜ, ದಾಸಪ್ಪ, ಅಚ್ಚಣ್ಣಭಟ್ಟರು ಹೇಳಿದುದು ನಿಜ. ಈ ದುಃಖ ವನ್ನು ಮರೆತು ಏಳು. ಇಂದೋ—ಅಂದೋ, ಖಂಡಿತವಾಗಿಯೂ ತಾಯಿ, ನಿನಗೆ ದರ್ಶನ ಕೊಟ್ಟೇ ಕೊಡುತ್ತಾಳೆ. ಈಗ ಮೊದಲು ಮೇಲೆದ್ದು, ಅಮ್ಮ ನವರಿಗೆ ಪೂಜೆ ಮಾಡಿ, ವಿಗ್ರಹದೊಂದಿಗೆ ದೇವಸ್ಥಾನಕ್ಕೆ ಹೊರಡು. ಹೊರಗೆ ಜನ ಸುಮ್ಮನೆ ಹುಯ್ಯಿಲಿಡುತ್ತಿದ್ದಾರೆ. ಇನ್ನೇಕೆ ಆಕೆಯ ಉತ್ಸವಕ್ಕೆ ತಡ ವಾಗಬೇಕು?'

—ಎಂದರು.

ಒಂದು ಗಳಿಗೆ ದುಃಖದಲ್ಲಿ ಕುರುಡಾಗಿದ್ದ ವೆಂಕಟದಾಸಪ್ಪನವರಿಗೆ, ಅವರಿಬ್ಬರೂ ಹೇಳಿದ ಮಾತುಗಳನ್ನು ಕೇಳಿ, ಸ್ವಪ್ನದಲ್ಲಿ ದೇವಿ ಹೇಳಿದ ಮಾತು ನೆನಪಾಯಿತು—

'ನೀನೂ ಇಲ್ಲ, ನಿನ್ನ ಇಷ್ಟವೂ ಇಲ್ಲ; ಎಲ್ಲವೂ ನಾನೇ. ಎಲ್ಲವೂ ನನ್ನ ಇಷ್ಟವೇ.'

ಆ ಮಾತುಗಳನ್ನು ಜ್ಞಾಪಿಸಿಕೊಂಡು, ದುಃಖವನ್ನು ದಮನ ಮಾಡಿ ಕೊಂಡು—

'ತಾಯಿ, ನಾನು ಮಹಾ ಅಜ್ಞ, ಏನೊಂದೂ ಅರಿಯದ ಮೂಢ; ನಿನ್ನ ಕೈಯ ಹುಲ್ಲುಕಡ್ಡಿ. ನಿನ್ನ ಇಷ್ಟವಿದ್ದಂತೆ ಮಾಡು.'

—ಎಂದು ಹೇಳಿ ವಿಗ್ರಹಕ್ಕೆ ಕೈಮುಗಿದು, ಮೇಲೆದ್ದು,—

'ನಾನು ತಾಯಿಯೊಬ್ಬಳಿಗೇ ಅಲ್ಲ, ಎಲ್ಲರಿಗೂ ಅಪರಾಧಿ. ಎಲ್ಲರನ್ನೂ ನನ್ನ ಮೂರ್ಖತೆಯಿಂದ ಕಾಯಿಸಿ ಬಿಟ್ಟೆ; ಮನ್ನಿಸಿ. ಬೇಗ ಸ್ನಾನ ಮುಗಿಸಿಕೊಂಡು ಬಂದು ಬಿಡುತ್ತೇನೆ.'

—ಎಂದು ಹೇಳಿ, ಎಲ್ಲರಿಗೂ ತಲೆಬಾಗಿಸಿ ಕೈ ಮುಗಿದು, ಸ್ನಾನ ಮಾಡಲು ಹೋದರು.

## ೪

ಆ ವರ್ಷದ ಜಾತ್ರೆ, ಜಾತ್ರೆಗೆಂದು ಸೀಮೆಯ ನಾನಾಭಾಗಗಳಿಂದ ಬಂದ ಜನ, ದೇವೀಕೆರೆಯ ನಿವಾಸಿಗಳು ಇವರೆಲ್ಲರ ಪಾಲಿಗೂ ಚಿರಸ್ಮರಣೀಯ ಘಟನೆಯಾಯಿತು. ಆ ವರ್ಷದ ಜಾತ್ರೆಯ ವಿಷಯ ಬಗೆ ಬಗೆಯ ಕಥಾರೂಪ ತಳೆದು ಲಕ್ಷಾಂತರ ನಾಲಗೆಗಳ ಚಪ್ಪರದ ಮೇಲೆ ಹಬ್ಬಿ ದಾಂಗಡಿಯಿಟ್ಟಿತು. ಆ ಘಟನೆಗಳ ವಿಷಯ ಕೇಳಿದವರು 'ಈ ಕಲಿಕಾಲದಲ್ಲೂ ಹೀಗೆಲ್ಲಾ ನಡೆಯುವು ದುಂಟೆ?' ಎಂದು ವಿಸ್ಮಯಮೂಕರಾದರೆ, ಜಾತ್ರೆಗೆ ಹೋಗಿ ಬಂದ ಜನ ದೇವಿಯ ಸಾಕ್ಷಾದ್ದರ್ಶನ ಪಡೆದು ಬಂದವರಂತೆ ಬೀಗಿದರು. ಆ ಜಾತ್ರೆಯಿಂದ ದೇವೀಕೆರೆಯ ಜಾತ್ರೆಯ ಕೀರ್ತಿ ಜಗಜ್ಜನಿತವಾದಂತೆಯೇ, ವೆಂಕಟದಾಸಪ್ಪನ ವರ ಹಿರಿಮೆಯೂ ಸುತ್ತಲ ಸೀಮೆಯ ಹಳ್ಳಿಗಳಿಗೆಲ್ಲಾ ಹಬ್ಬಿತು. ಜಾತ್ರೆ ನಡೆದ ಮೊದಮೊದಲ ದಿನಗಳಲ್ಲಿ, ದೇವೀಪೂಜೆಗೆ ಮೀಸಲಾದ ಶುಕ್ರವಾರ, ಮಂಗಳ ವಾರದ ದಿನಗಳಿರಲಿ, ಬಿಡಿದಿನಗಳಲ್ಲೂ ಅಮ್ಮನವರ ಪೂಜೆ ಮಾಡಿಸಿಕೊಂಡು ಹೋಗಲೆಂದು ಹೊರ ಊರುಗಳ ಬಂಡಿಗಳು ಬರಲಾರಂಭಿಸಿದವು. ಯಾವ ದುಃಖನಿವಾರಣೆಗೋ, ಯಾವ ಸುಖಪ್ರಾಪ್ತಿಗೋ, ಅಮ್ಮನವರ ಪೂಜೆ ಮಾಡಿಸಿಕೊಂಡು ಹೋಗಬೇಕೆಂದು ಬಂದ ಜನರ ಪಾಲಿಗೆ, ವೆಂಕಟದಾಸಪ್ಪನವರ ಮನೆ ಪ್ರಥಮ ದೇವಾಲಯವಾಯಿತು. ಮೊದಲು ಅವರ ಮನೆಯಲ್ಲಿ ಹಣ್ಣು ಕಾಯಿ ಮಾಡಿಸಿಕೊಂಡು, ಬಳಿಕ ತೋಪಿನಲ್ಲಿದ್ದ ದೇವಸ್ಥಾನಕ್ಕೆ ಹೋಗತೊಡಗಿ ದರು. ದೇವೀಕೇರಿಯಲ್ಲಿ, ವೆಂಕಟದಾಸಪ್ಪನವರ ಮನೆಯಲ್ಲಿ ದಿನವೂ, ಒಬ್ಬಿಬ್ಬ ರಾದರೂ ಅಂಥ ಭಕ್ತ ಜನ ಇದ್ದೇ ಇರುತ್ತಿದ್ದರು. ಈ ಬಂದು ಹೋಗುವವರ ಗಡಿಬಿಡಿಯಲ್ಲಿ, ವೆಂಕಟದಾಸಪ್ಪನವರಿಗಾಗಲಿ, ಅವರ ಮನೆಯವರಿಗಾಗಲಿ, ತಮ್ಮ ಯೋಗಕ್ಷೇಮದ ವಿಚಾರ ಚಿಂತಿಸುವುದಕ್ಕೂ ಬಿಡುವು ಇರಲಿಲ್ಲ. ದೇವೀಕೆರೆಯಂ ಹಳ್ಳಿಯ ಜನರಿಗಂತೂ ವೆಂಕಟದಾಸಪ್ಪನವರೆಂದರೆ ಸಾಕ್ಷಾತ ದೇವಿಯ ಅಪರಾವ ತಾರ. ಎಲ್ಲ ಕೆಲಸಕ್ಕೂ ಅವರು ಇರಬೇಕು; ಅವರು ಒಪ್ಪಬೇಕು, ಅವರು ಹರಸ ಬೇಕು.

ಹಾಗೆಂದು, ಬರೀ ಕೀರ್ತಿಯಷ್ಟೇ ಅವರ ಪಾಲಿಗೆ ಬಂದಿದ್ದರೆ, ಆ ಕೀರ್ತಿಯ

ಬೆನ್ನು ಹತ್ತಿ ಬಂದ ಅತಿಥಿಸತ್ಕಾರದ ಭಾರಕ್ಕೆ, ವೆಂಕಟದಾಸಪ್ಪನವರ ಬೆನ್ನೆಲಬು ಮುರಿದು ಹೋಗುತ್ತಿತ್ತು.

ಆದರೆ ಆ ಕೀರ್ತಿಯೊಂದಿಗೆ ಲಕ್ಷ್ಮಿಯೂ ಅವರಿಗೆ ಒಲಿದಂತಿತ್ತು. ಅಮ್ಮನವರಿಗೆ ಕಾಣಿಕೆಯೊಪ್ಪಿಸುವ ನೆಪದಲ್ಲಿ ಜನ ಅವರ ಮನೆಯಲ್ಲಿ ಬಂಡಿಗಟ್ಟಲೆ ಕಾಳು ತಂದು ತುಂಬುತ್ತಿದ್ದರು. ಬಟ್ಟೆಬರೆಯ ಉಡುಗೊರೆ ಕೊಡುತ್ತಿದ್ದರು. ನಗದಾಗಿ ಹಣವೂ ಬರುತ್ತಿತ್ತು. ಹೀಗಾಗಿ ಅವರ ಮನೆಯಲ್ಲಿ ಎಂದೂ, ಯಾವುದಕ್ಕೂ ಕೊರತೆಯಾಗದಂಥ ಪರಿಸ್ಥಿತಿ ಪ್ರಾಪ್ತವಾಗಿತ್ತು.

ಮಗನ ಈ ಕೀರ್ತಿ, ವೈಭವವನ್ನು ಕಂಡು ಲಕ್ಷ್ಮೀದೇವಮ್ಮನ ಪಾಲಿಗಂತೂ ಸ್ವರ್ಗವೇ ಹಸ್ತಗತವಾದಂತಾಗಿತ್ತು. ಆ ಕಾಲಕ್ಕೆ ಆಕೆಗಿದ್ದ ಕೊರತೆಯೆಲ್ಲಾ 'ಮಗನಿಗೆ ಇಂಥ ಮಹಾ ದೆಸೆ ನಡೆಯುತ್ತಿರುವಾಗಲೇ, ಸೊಸೆ ಮನೆಗೆ ಬರಲಿಲ್ಲವಲ್ಲ' ಎನ್ನುವುದೊಂದು. ಮತ್ತೊಂದು ಇದಕ್ಕೂ ಹೆಚ್ಚಿನದು–

'ದಾಸಣ್ಣ ಹೀಗೆ ಅದ್ಧೂರಿಯಾಗಿರೋದನ್ನ ನೋಡೋಕೆ ಅವರು ಬದುಕಿಲ್ಲವಲ್ಲಾ. ಇದ್ದರೆ ಎಷ್ಟು ಸಂತೋಷ ಪಡುತ್ತಿದ್ದರೋ ಏನೋ. ಇರುವಷ್ಟು ದಿನ ಮಗ ಕೆಟ್ಟನೆಂಬ ಕೊರಗಿನಲ್ಲೇ ನವೆದರು. ಈ ಸುಖ ಅನುಭವಿಸಲಿಕ್ಕೆ ಮಾತ್ರ ಪಡೆದುಕೊಂಡು ಬಂದಿರಲಿಲ್ಲ.'

–ಎನ್ನುವುದು.

ಲಕ್ಷ್ಮೀದೇವಮ್ಮನ ಮೊದಲ ಬಯಕೆಯೇನೋ ಬಹು ಬೇಗ ಈಡೇರಿತು. ಮದುವೆಯಾದ ಎರಡನೆಯ ವರ್ಷದಲ್ಲೇ ರಂಗಮ್ಮ ದೊಡ್ಡವಳಾಗಿ, ನಿಷೇಕ ಪ್ರಸ್ತವಾಗಿ ಮನೆಗೆ ಬಂದಳು.

ಕೂತ ಕಡೆ ಭಂಡಿಗಟ್ಟಲೆ ದವಸ ತರಿಸಿಕೊಂಡು, ಸೀಮೆಯ ಜನದ ಕೈಲೆಲ್ಲಾ ಹೊಗಳಿಸಿಕೊಳ್ಳುವ ಮಗ, ಆ ಕಡೆಯಿದ್ದ ಕಡ್ಡಿಯನ್ನು ಈ ಕಡೆ ಇಡಲೂ ತಮಗೆ ಅವಕಾಶ ಕೊಡದಂಥ ಸೊಸೆ–

ಈ ಪರಿಸ್ಥಿತಿಯಲ್ಲಿ ಲಕ್ಷ್ಮೀದೇವಮ್ಮನ ಪಾಲಿಗೆ ಸ್ವರ್ಗಕ್ಕೆ ಎರಡೇ ಬೆರಳು ದೂರ ಉಳಿದಿತ್ತು.

ಆದರೆ ವೆಂಕಟದಾಸಪ್ಪನವರ ಪಾಲಿಗೆ ಮಾತ್ರ ಮನೆಯಲ್ಲಿ ತಾಂಡವವಾಡುವ ಲಕ್ಷ್ಮಿ, ನಲಿದಾಡುವ ಹೊಸ ಮಡದಿ, ಜನರ ಭಕ್ತಿ–ಗೌರವ ಯಾವುದೂ,

ಉಳಿದವರಿಗೆ ನೀಡಿದ ಸುಖ, ಸಂತೃಪ್ತಿಗಳನ್ನು ನೀಡಿರಲಿಲ್ಲ.

ಅವರ ಸಂಸಾರವನ್ನು ನೋಡಿದವರೆಲ್ಲಾ–

'ಇಂಥ ಸಂಸಾರವನ್ನು ನೋಡಿಯೇ ಇರಬೇಕು, ಸರ್ವಜ್ಞ 'ಸ್ವರ್ಗಕ್ಕೆ ಕಿಚ್ಚು ಹಚ್ಚು ಎಂದು ಹೇಳಿದ್ದು,

–ಎಂದು ಕೊಂಡರು.

ಜನ ಹಾಗೆ ಆಡಿದಾಗ, ವೆಂಕಟದಾಸಪ್ಪನವರೂ 'ನಿಜ, ನಿಜ' ಎಂದು ಆಡಿದರೂ, ಅವರ ಹೃದಯದಲ್ಲಿ ಮಾತ್ರ, ಯಾರಿಗೂ ಅರ್ಥವಾಗದ ಕೊರಗೊಂದು ಸಣ್ಣಗೆ, ಒಳಗೇ ಕೊರೆಯುತ್ತಿತ್ತು.

ಆ ಕೊರಗು–

ಸ್ವಪ್ನದಲ್ಲಾಗಲಿ, ಜಾಗ್ರತ ಸ್ಥಿತಿಯಲ್ಲಾಗಲಿ– ದೇವಿ ತಮಗೆ ಕಾಣಸಿಕೊಳ್ಳಲಿಲ್ಲವೆಂಬುದು.

"ಆಗ್ರಹರೂಪವಾಗಿಯೋ, ಅನುಗ್ರಹರೂಪವಾಗಿಯೋ– ಉಳಿದವರಿಗೆ ಕಾಣಿಸಿಕೊಂಡ ಆಕೆ ತಮ್ಮೊಬ್ಬರಿಗೆ ಮಾತ್ರ ಕಾಣಿಸಿಕೊಂಡಿರಲಿಲ್ಲ.

ದೇವಿ ಅವರೊಂದಿಗೆ ಮಾತಾಡಿದ್ದಳು, ಆಕೆಯ ಪಾದ ಪಂಕಜಗಳು ಅವರನ್ನು ಹಿಂಬಾಲಿಸಿ ನಡೆದಿದ್ದವು. ಆಕೆಯ ಮುಡಿಯ ಮಂದಾರ ಕುಸುಮದ ದಿವ್ಯ ಪರಿಮಳವೂ ಅವರಿಗೆ ಅನುಭವವಾಗಿತ್ತು.

'ಆದದ್ದಾಗಲಿ, ನಿನ ಕೈಲೇ ಪೂಜೆ ಮಾಡಿಸಿಕೊಳ್ಳುತ್ತೇನೆ' ಎಂದು ಹಟ ಹಿಡಿದು ಆ ಹಟವನ್ನು ನಡೆಸಿಕೊಂಡಿದ್ದಳು.

ಇಷ್ಟಾದರೂ ಅವರಿಗೆ ಆಕೆಯ ದರ್ಶನವಾಗಿರಲಿಲ್ಲ.

ಮಾತನಾಡಿದ ಮುಖವೋ, ನಡೆದ ಕಾಲೋ, ಪುಷ್ಪ ಪರಿಮಳವನ್ನು ಬೀರಿದ ಮುಡಿಯೋ– ಯಾವುದೊಂದೂ ಅವರಿಗೆ ಕಾಣಿಸಿರಲಿಲ್ಲ.

ಹೀಗೇಕೆ ಮಾಡಿದಳು?

ಆಕೆಯ ದರ್ಶನಕ್ಕೆ ನಾನು ಅಷ್ಟು ಅನರ್ಹನೇ? ಅಥವಾ ಆಕೆಯ ಇಚ್ಛೆಗೆ ವಿರುದ್ಧವಾಗಿ ನನ್ನ ಇಚ್ಛೆಯನ್ನು ಹೂಡಿ ಸೆಣಸಿದೆನೆಂದು ನನ್ನಲ್ಲಿ ಆಕೆಗೆ ಆಗ್ರಹವೋ?

ಅನರ್ಹನಾದರೆ ಅರ್ಹತೆಯನ್ನು ಪಡೆಯಬೇಕು; ಆಕೆಗೆ ನನ್ನಲ್ಲಿ ಆಗ್ರಹವಾದರೆ ಅದನ್ನು ನಿವಾರಿಸಬೇಕು.

ಹೇಗಾದರಾಗಲಿ, ಒಮ್ಮೆ ಯಾದರೂ, ಈ ಭೌತಿಕ ಚಕ್ಷುಸ್ಸುಗಳಿಂದ ಒಂದುಂ ಗಳಿಗೆಯಾದರೂ ಆಕೆಯು ದಿವ್ಯ ವದನಾರವಿಂದದ ದರ್ಶನ ಮಾಡ ಬೇಕುಂ,"

ದರ್ಶನವಾಗಲಿಲ್ಲ ಎಂಬ ಕೊರಗುಂ, ಹೇಗಾದರೂ ದರ್ಶನ ಭಾಗ್ಯವನ್ನು ಪಡೆಯಬೇಕೆಂಬ ಬಯಕೆ–

ಈ ಎರಡು ಭಾವನೆಗಳು ಎಡಬಿಡದೆ ಅವರನ್ನು ಬೆಂಬತ್ತಿದ್ದವು.

ಕುಳಿತಿರಲಿ, ನಿಂತಿರಲಿ, ಪೂಜೆ ಮಾಡುತ್ತಿರಲಿ, ನಿದ್ರೆ ಮಾಡುತ್ತಿರಲಿ, ಮನೆಯಲ್ಲಿರಲಿ, ಹೊರಗೆ ಅಡ್ಡಾಡುತ್ತಿರಲಿ–ಸದಾ, ಸರ್ವದಾ ಆ ಭಾವನಾ ದ್ವಯ ಅವರ ಬಾಳಿನ ಸಂಗಡಿಗರಾಗಿದ್ದವು. ಹೋದತ್ತ, ಬಂದತ್ತ, ನೆರಳಿ ನಂತೆ ಅವರನ್ನು ಹಿಂಬಾಲಿಸುತ್ತಿದ್ದವು.

ಈ ಕೊರಗುಂ ಹೇಗೆ ತೀರೀತು, ಈ ಬಯಕೆ ಹೇಗೆ ಸಫಲವಾದೀತು?

ಆ ವಿಚಿತ್ರ ಕೊರಗು, ಬಯಕೆಗಳನ್ನು ತೀರಿಸಿಕೊಳ್ಳುವ ಮಾರ್ಗ ಏನೆಂದು ಅವರಿಗೆ ತಿಳಿದಿರಲಿಲ್ಲ. ಅವರಿಗೆ ತಿಳಿದಿದ್ದುದಿಷ್ಟೆ–

ಪೂಜೆ ಮಾಡುವುದು, ಜಪ ಮಾಡುವುದು. ಅದಕ್ಕಿಂತ ಹೆಚ್ಚಿನ ದಾವುದೂ ಅವರಿಗೆ ತಿಳಿದಿರಲಿಲ್ಲ.

ಎಂತಲೇ ಪೂಜೆ ಮಾಡುತ್ತಾ ಕುಳಿತರೆ, ಪೂಜೆ ಮಾಡುತ್ತಿರುವಾಗ ದೇವಿಯ ದರ್ಶನವಾದೀತೋ ಏನೋ ಎಂದು ಗಂಟೆಗಟ್ಟಲೆ ಪೂಜೆ ಮಾಡು ತ್ತಲೇ ಕುಳಿತುಬಿಡುವರು. ಹಾಗೆ ಪೂಜೆ ಮಾಡುತ್ತಾ, ಹೂವಿನ ಬುಟ್ಟಿ, ಕುಂಕುಮದ ಬಟ್ಟಲು ಎಲ್ಲವೂ ಬರಿದಾದುದೂ ಅವರಿಗೆ ಎಚ್ಚರವಿರುತ್ತಿ ರಲಿಲ್ಲ.

ಯಾವುದಾದರೂ ದೇವಿಯ ಸ್ತೋತ್ರವನ್ನು ಹೇಳಿಕೊಳ್ಳಲಾರಂಭಿಸಿದರೆ, ತಾವು ಅದನ್ನು ಒಮ್ಮೆ ಹೇಳಿ ಮುಗಿಸಿದುದುಂ, ಹೇಳಿದುದನ್ನೇ ಮತ್ತೆ ಮತ್ತೆ ಹೇಳಿಕೊಳ್ಳುತ್ತಿರುವುದೂ ಅರಿವಿಲ್ಲದೆ, ಸುಮ್ಮನೇ ಹೇಳಿದುದನ್ನೇ ಹೇಳುತ್ತಾ ಕುಳಿತು ಬಿಡುವರು.

ಆದರೆ ಅದಾವುದರಿಂದಲೂ ಅವರ ಕೊರಗು ತೀರಲಿಲ್ಲ.

ಅವರ ಬಯಕೆ ಫಲಿಸಲಿಲ್ಲ.

ಆ ಕೊರಗು – ಬಯಕೆಗಳಲ್ಲಿ ತಲ್ಲಣಿಸುತ್ತಿರುವಾಗ ಒಮ್ಮೊಮ್ಮೆ

ಅವರಿಗೆ, ಸ್ವಪ್ನದಲ್ಲಿ ತಾವು ದೇವಿಯೊಂದಿಗೆ ನಡೆಸಿದ ಸಂಭಾಷಣೆ ನೆನಪಾಗುವುದು–

"'ಹಾಗಾದರೆ... ಹಾಗಾದರೆ... ಎಲ್ಲವೂ ನಿನ್ನ ಇಷ್ಟವೇ ಆದರೆ, ನಾನು... ನನ್ನ ಇಷ್ಟ... ಯಾವುದೂ ಇಲ್ಲವೇ ?'

'ಊಹೂ, ನಿನ್ನ ಇಷ್ಟವೂ ಇಲ್ಲ...ನೀನೂ ಇಲ್ಲ... ಇಲ್ಲ...ಯಾವುದೂ ಇಲ್ಲ... ಇರುವುದೆಲ್ಲ ನಾನೊಬ್ಬಳೇ... **ಎಲ್ಲವೂ ನನ್ನ ಇಷ್ಟ.**'

ದೇವಿ, ನೆಲ ಮುಗಿಲು ಕಂಪಿಸುವಂಥ ಭೀಷಣ–ಸಮ್ಮೋಹಕ ಧ್ವನಿಯಲ್ಲಿ, ಗಹಗಹಿಸುತ್ತ ಹೇಳಿದ ಆ ಮಾತುಗಳು ನೆನಪಾದಾಗಲೂ, ಆಗಲೇ ಆ ಮಾತುಗಳು ಅವರ ಕಿವಿಗಳಲ್ಲಿ ಮೊಳಗಿದಂತಾಗಿ, ಅವರ ಮೈ ಗಡಗಡ ನಡಗುವುದು.

'ಎಲ್ಲವೂ ಆಕೆಯ ಇಷ್ಟವೇ ಆಗಿರುವಾಗ, ನಾನು ಆಕೆಯ ದರ್ಶನಕ್ಕಾಗಿ ಬಯಸುವುದೇಕೆ ?'

'ನಾನು ಹೀಗೆ ಈ ಕೊರಗಿನಲ್ಲಿ ದಿನದಿನವೂ ಬೇಯಬೇಕೆಂಬುದೇ ಆಕೆಯ ಬಯಕೆಯೋ ಏನೋ?'

'ಅದಕ್ಕೆ ತದ್ವಿರುದ್ಧವಾಗಿ ನಾನು ದರ್ಶನ ಕೊಡು ಎಂದು ಕೇಳುವುದೇಕೆ? '

'ಕೇಳುವುದಕ್ಕೆ, ನಾನು ಯಾರು?'

'ಆಕೆಗೆ ಮನ ಬಂದಾಗ ದರ್ಶನ ಕೊಡುತ್ತಾಳೆ. ಎಷ್ಟು ಕೊರಗಿದರೂ ಎಷ್ಟು ಬಯಸಿದರೂ, ಆ ಹೊತ್ತಿನಲ್ಲಿ ಕ್ಷಣಕಾಲವೂ ಹಿಂಚು–ಮುಂಚು ವ್ಯತ್ಯಾಸವಾಗುವುದಿಲ್ಲ.'

'ಇದನ್ನು ತಿಳಿದೂ ತಿಳಿದೂ ನಾನು ವೃಥಾ ಕೊರಗಿ ಬಳಲುವುದೇಕೆ?'

ಎಂದು ತಮ್ಮ ಹೃದಯದೊಳಗೆ ಕಿಡಿಗಾರುತ್ತಿರುವ ಕೊರಗನ್ನು ಮರೆತು ಶಾಂತರಾಗಲೆತ್ನಿಸುವರು.

'ಅಮ್ಮನವರಿಗೆ ನೀನು ನಮ್ಮೆಲ್ಲರಿಗಿಂತಲೂ ಹೆಚ್ಚು ಪ್ರೀತಿಪಾತ್ರನೆಂಬುದರಲ್ಲಿ ಸಂಶಯವಿಲ್ಲ. ನಮಗೆ ಆಕೆಯ ಆಗ್ರಹರೂಪದ ದರ್ಶನ ಮಾತ್ರ ಆಯಿತು. ನಿನಗೆ ಎಂದು, ಯಾವ ರೂಪದಲ್ಲಿ ದರ್ಶನಕೊಡಬೇಕೆಂದು ಆಕೆಗೆ ಇಚ್ಛೆ ಇದೆಯೋ, ಅಂದು ದರ್ಶನ ಕೊಟ್ಟೇ ಕೊಡುತ್ತಾಳೆ'.

—ಎಂದ ಅಚ್ಚಣ್ಣಭಟ್ಟರ ಮಾತನ್ನು ಜ್ಞಾಪಿಸಿಕೊಂಡು ಚಿತ್ತಕ್ಕೆ ಸಮಾಧಾನ ತಂದುಕೊಳ್ಳಲೆತ್ನಿಸುವರು.

ಆ ಮಾತುಗಳನ್ನು ಚಿಂತಿಸಿದಾಗ, ಅವರಿಗೆ ದೈವೇಚ್ಛೆಯ ಇದಿರು ಮಾನವನ ಬಯಕೆ ಏನೂ ಫಲಕಾರಿಯಲ್ಲವೆನಿಸಿ, ತಾಯಿ ತಮ್ಮಿಂದಲೇ ಪೂಜೆ ಕೊಳ್ಳಬಯಸಿದಳೆಂಬುದು ಅರಿವಾಗಿ, ಒಂದು ಗಳಿಗೆ ಅವರ ಮನಸ್ಸಿಗೆ ಏನೋ ಒಂದು ಬಗೆಯ ಸಮಾಧಾನವಾದಂತಾಗುವುದು. ಆ ಹೊತ್ತಿನಲ್ಲಿ—

'ನಿಜ. ನಿಜ. ನಿನ್ನ ಇದಿರು ನನ್ನ ಇಷ್ಟಾನಿಷ್ಟದ ಮಾತೆತ್ತುವುದಿಲ್ಲ ವೆಂದು ಆ ಹೊತ್ತೇ ಮಾತು ಕೊಟ್ಟಿದ್ದೇನಲ್ಲಾ, ಅದನ್ನು ಮರೆತು ಬಯಸಿದೆ. ನನ್ನನ್ನು ಮನ್ನಿಸು. ನಿನ್ನ ಚಿತ್ತವಿದ್ದಂತಾಗಲಿ'.

—ಎಂದು ಬೇರೆ ಎಲ್ಲವನ್ನು ಮರೆತು ತಮ್ಮ ಕೆಲಸದಲ್ಲಿ ತೊಡಗಲು ಯತ್ನಿಸುವರು.

ಆದರೆ ಆ ಸಮಾಧಾನವೂ ಬಹಳ ಹೊತ್ತು ಉಳಿಯುತ್ತಿರಲಿಲ್ಲ.

ಮಲಗಿರುವಾಗ ಯಾರೋ ಕನಸಿನಲ್ಲಿ ತಮ್ಮೊಂದಿಗೆ ಮಾತನಾಡುತ್ತಿರು ವಂತಾಗಿ, ಎಲ್ಲಿಯೋ ಹೋಗುತ್ತಿರುವಾಗ ಗೆಜ್ಜೆಗಾಲಿನ ಧ್ವನಿ ಕೇಳಿದಂತಾಗಿ, ಗೌರಮ್ಮನೊಂದಿಗೆ ಪಗಡೆಯಾಡುತ್ತಿರುವಾಗ, ಮತ್ತೆ ಯಾರದೋ ಕೈ ಪಗಡೆಯ ಕಾಲು ನಡೆಸಿದಂತಾಗಿ, ತಮ್ಮ ಮಡದಿಯೊಂದಿಗೆ ಪ್ರೇಮದಿಂದ ಸಂಭಾಷಿಸುತ್ತಿರುವಾಗ ಮೂರನೆಯವರೊಬ್ಬರು ಯಾರೋ ನಕ್ಕಂತೆ ಕೇಳಿಸಿ, ತಮ್ಮ ತಾಯಿ ಯೊಂದಿಗೆ ಮಾತನಾಡುತ್ತಿರುವಾಗ ಮತ್ತಾರೋ ತಮ್ಮೊಂದಿಗೆ ಮಾತಾಡಿ ದಂತೆ ತೋರಿ, ಪೂಜೆ ಮಾಡುತ್ತಿರುವಾಗ, ಮದಾಸನದ ಬದಿಯಲ್ಲಿ ಹೊತ್ತಿ ಸಿದ ದೀಪದ ಕುಡಿಯಲ್ಲಿ, ಯಾರದೋ ಹೊಳಪುಗಣ್ಣುಗಳು ಹೊಳೆದಂತೆ ಭಾಸವಾಗಿ, ಹೂವನ್ನು ಏರಿಸುತ್ತಿರುವಾಗ ಮತ್ತಾವುದೋ ಮೃದುತೆಯ ಸ್ಪರ್ಶಾನುಭವವಾಗಿ—,

ಅವರು ಹತ್ತಾರು ದಿನ ಪ್ರಯತ್ನಪಟ್ಟು ಸಾಧಿಸಿದ ಚಿತ್ತ ಶಾಂತಿ, ಬಿರುಗಾಳಿಯ ಇದಿರು ಕಟ್ಟಿದ ಗರಿಯ ತಡಿಕೆಯಂತೆ ಮುರಿದು ಹಾರಿ ಹೋಗಿ, ಅಶಾಂತಿ ತಾನೇ ತಾನಾಗಿ ಹಬ್ಬುವುದು.

ಹಾಗಾದಾಗ, ಮಾಡುತ್ತಿದ್ದ ಕೆಲಸವನ್ನು ಮರೆತು, ಏನೋ ನೋಡುತ್ತಾ, ಏನೋ ಆಲಿಸುತ್ತಾ, ನೋಡುವವರು ಗಾಬರಿಯಾಗುವಂತೆ

ರಾ—೬

ಬಿರಿಗಣ್ಣಾಗಿ, ಹೇಗಿದ್ದವರು ಹಾಗೇ ಇದ್ದುಬಿಡುವರು. ಒಮ್ಮೊಮ್ಮೆ, ಹಾಗೆ ಮರುಕಳಿಸಿದ ವ್ಯಥೆಯನ್ನು ತಡೆಯಲಾಗದೆ, ಕಣ್ಣಿನಲ್ಲಿ ನೀರು ಮಿಡಿಯುವರು. ಮತ್ತೊಮ್ಮೆ ತಮಗೆ ತಾವೇ ಏನೋ ಹೇಳಿಕೊಳ್ಳುವರು. ನಿದ್ರೆ ಮಾಡುತ್ತಿದ್ದವರು ಧಿಗ್ಗನೆ ಎದ್ದು ಕುಳಿತು, ಏನೋ ಹುಡುಕಲಾರಂಭಿಸುವರು. ಏನೋ ಕೆಲಸ ಮಾಡುತ್ತಿದ್ದವರು, ತಟ್ಟಕ್ಕನೆ ಬೇರೇನೋ ನೆನಪಾದವರಂತೆ, ಮಾಡುತ್ತಿದ್ದ ಕೆಲಸವನ್ನು ಬಿಟ್ಟು, ಬಚ್ಚಲು ಮನೆಗೆ ಹೋಗಿ, ಇದ್ದಂಥ ನೀರು ಮೈಮೇಲೆ ಸುರಿದುಕೊಂಡು, ದೇವರ ಮನೆಗೆ ಬಂದು, ಹಿಂದೊಮ್ಮೆ ಪೂಜೆ ಮಾಡಿ ಮುಗಿಸಿದುದೂ ನೆನಪಿಲ್ಲದವರಂತೆ, ಪುನಃ ಪೂಜೆ ಮಾಡ ಲಾರಂಭಿಸುವರು.

ವೆಂಕಟದಾಸಪ್ಪನವರ ನಡತೆಯಲ್ಲಾದ ಈ ಪರಿವರ್ತನೆ, ಮೊದ ಮೊದಲು ಅಷ್ಟಾಗಿ ಯಾರ ಗಮನಕ್ಕೂ ಬಂದಿರಲಿಲ್ಲ. ಅವರಿಗೆ ಬಹು ಸಮೀಪಸ್ಥರಾದ ರಂಗಮ್ಮ, ಗೌರಮ್ಮ– ಇಬ್ಬರೂ ಇದನ್ನು ಗಮನಿಸಿದರೂ, ಅವರಿಬ್ಬರಿಗೂ ವೆಂಕಟದಾಸಪ್ಪನವರನ್ನು ಈ ವಿಷಯದಲ್ಲಿ ಪ್ರಶ್ನಿಸಲು ಧೈರ್ಯವಾಗಲಿಲ್ಲ. ಆ ನಡತೆಯ ವಿಚಿತ್ರತೆಗೆ ತಾವೇ ಏನೇನೋ ಸಮಾಧಾನ ಹೇಳಿಕೊಂಡು ಸುಮ್ಮನಾದರು.

ಆದರೆ ದಿನ ದಿನಕ್ಕೂ ಮಗನಲ್ಲಾಗುತ್ತಿದ್ದ ಈ ವಿಚಿತ್ರ ಪರಿವರ್ತನೆ ಲಕ್ಷ್ಮೀದೇವಮ್ಮನನ್ನು ಎದೆಗೆಡಿಸಿತು. ಮೊದಲಿನ ಹಾಗೇ ಎಲ್ಲ ಪರಿಸ್ಥಿತಿಯೂ ಇದ್ದಿದ್ದರೆ, ಆಕೆ, ಮಗನ ಮೇಲೆ ಎಗರಿ ಬಿದ್ದು ತರಾಟೆಗೆ ತೆಗೆದುಕೊಳ್ಳುತ್ತಿದ್ದುದು ಖಂಡಿತ. ಆದರೆ ಜಾತ್ರೆಯ ಸಮಯದಲ್ಲಾದ ಘಟನಾವಳಿ, ಆಕೆಗೂ ಮಗನ ಎದುರಿಗೆ ಹೇಗೆಂದರೆ ಹಾಗೆ ಮಾತನಾಡಲು ಹಿಂಜರಿಯುವಂತೆ ಮಾಡಿತ್ತು. ವೆಂಕಟದಾಸಪ್ಪನವರು ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ಆದರೂ, ಅವರ ವಿಷಯದಲ್ಲಿ ನಾಲಿಗೆ ಸಡಿಲ ಬಿಡಲು, ಹತ್ತು ಬಾರಿ ಆಲೋಚಿಸುತ್ತಿದ್ದಳು. ಅಲ್ಲದೆ, ಈ ವಿಷಯದಲ್ಲಿ ಆಕೆ ಮಗನ ವಿಷಯದಲ್ಲಿ ಅಸಮಾಧಾನಪಟ್ಟುಕೊಳ್ಳಲೂ ಕಾರಣವಿರಲಿಲ್ಲ. ಯಾರಿಗೂ ಅಸಮಾಧಾನ ವಾಗುವಂಥ ಕೆಲಸವನ್ನೇನೂ ಅವರು ಮಾಡುತ್ತಿರಲಿಲ್ಲ. ಎಲ್ಲರೊಂದಿಗೂ ಬಹು ವಿಶ್ವಾಸವಾಗಿ, ಹಿತವಾಗಿ ನಡೆದುಕೊಳ್ಳುತ್ತಿದ್ದರು. ತಮ್ಮ ಗುಂಗಿನಲ್ಲಿ, ತಾಯಿಯನ್ನಾಗಲಿ, ಹೆಂಡತಿಯನ್ನಾಗಲಿ ಅನಾದರಣೆಯಿಂದ ಕಾಣುತ್ತಿರಲಿಲ್ಲ.

ಅಲ್ಲದೆ, ಅವರಲ್ಲಾಗುತ್ತಿದ್ದ ಭಾವ ಪರಿವರ್ತನೆಯಿಂದ ಯಾರಿಗೂ, ಯಾವ ಬಗೆಯ ತೊಂದರೆಯೂ ಆಗುತ್ತಿರಲಿಲ್ಲ.

ಹೀಗಿರುವಾಗ ಅವರನ್ನೇನು ಅಂದು ಆಡುವುದು?

ಇದಕ್ಕಿಂತಲೂ ಹೆಚ್ಚಾಗಿ, ಆಕೆಗೆ ತನ್ನ ಹೃದಯದಲ್ಲಿ ಮೂಡಿದ ಹೊಸ ಭಯವನ್ನು ಮನೆಯಲ್ಲಿ ಬಾಯಿಬಿಟ್ಟು ಆಡಲೂ ಮನಸ್ಸಿರಲಿಲ್ಲ.

ಮನೆಯಲ್ಲಿ ಈ ವಿಷಯ ಮಾತನಾಡಬೇಕು ಎಂದರೆ, ಮನೆಯಲ್ಲಿದ್ದವಳು ರಂಗಮ್ಮ ಒಬ್ಬಳೇ. ಆಕೆಯೂ ಚಿಕ್ಕವಯಸ್ಸಿನ ಹುಡುಗಿ. ಹೊಸದಾಗಿ ಸಂಸಾರಕ್ಕೆ ಬಂದವಳು. ಆ ಹುಡುಗಿಯ ಮುಂದೆ–

'ಏನೇ ರಂಗೂ, ನಿನ್ನ ಗಂಡ ಯಾಕೋ ಒಂದು ತರಹ ಆಡ್ತಾ ಇದಾನಲ್ಲೆ ?'

–ಎಂದು ತಾವೇ ಹೇಳಿದರೆ, ಆ ಹುಡುಗಿಯ ಎದೆ ಒಡೆದುಹೋಗುವು ದಿಲ್ಲವೇ? ತಾನಾಗಿಯೇ ಆ ಎಳೆ ಜೀವದ ಹೃದಯಕ್ಕೆ ಕೊರಗಿನ ಬರೆ ಹಾಕಿದ ಹಾಗಾಗುವುದಿಲ್ಲವೇ ?

ಆ ಹುಡುಗಿಗೆ ತನ್ನ ಗಂಡನ ವಿಚಿತ್ರ ವರ್ತನೆ ಅರ್ಥವಾಗಿದೆಯೋ ಇಲ್ಲವೋ? ಏನಿದ್ದರೂ ಒಂದು ಮಾತೂ ಆಡದೆ, ಏನೂ ಆಗದವಳ ಹಾಗೆ ನಗುನಗುತ್ತ ಮನೆ ಕೆಲಸ ಮಾಡಿಕೊಂಡು ಓಡಾಡುತ್ತಿರುವಾಗ ತಾನಾಗಿಯೆ ಈ ವಿಷಯವನ್ನು ಎತ್ತಿ ಆಡಿ, ಆ ಹುಡುಗಿಗೆ ದಿಗಿಲು ಹಿಡಿಸುವುದು ಸೂಕ್ತವಲ್ಲ ಎಂಬ ಭಾವನೆಯೂ ಲಕ್ಷ್ಮೀದೇವಮ್ಮ, ರಂಗಮ್ಮನ ಮುಂದೆ ಈ ವಿಷಯವನ್ನು ಪ್ರಸ್ತಾಪಮಾಡದಂತೆ ಆಕೆಯ ಬಾಯನ್ನು ಬಿಗಿದಿತ್ತು.

ಅದಕ್ಕೂ ಮಿಗಿಲಾಗಿ–

ಜಾತ್ರೆಯ ದಿನ, ಅಮ್ಮನವರ ಪೂಜೆ ಮಾಡುವುದಿಲ್ಲ ಎಂದು ಮನೆಬಿಟ್ಟು ಹೋದ ವೆಂಕಟದಾಸಪ್ಪನವರು ಎಲ್ಲಿ ಹೋಗಿದ್ದರೋ ಏನೋ? ಆ ವಿಷಯ ವನ್ನು ಯಾರೊಂದಿಗೂ ಅವರು ಹೇಳಿರಲಿಲ್ಲ.

ಲಕ್ಷ್ಮೀದೇವಮ್ಮನೇ ಒಮ್ಮೆ ಬಾಯಿಬಿಟ್ಟು ಕೇಳಿದಾಗಲೂ–

'ಎಲ್ಲೋ ಹೋಗಿದ್ದೆ. ನಾನು ಮಾಡುತ್ತಿರುವುದು ತಪ್ಪು ಎಂದು ತಾಯಿಯ ಆದೇಶವಾಯಿತು. ವಾಪಸ್ಸು ಬಂದೆ.'

–ಎಂದು ಅಷ್ಟು ಮಾತ್ರ ಹೇಳಿ ಹೋಗಿದ್ದರು.

'ಹಾಗೆ ಹೋದಾಗ ಅವನು ಏನು ನೋಡಿದನೋ, ಏನು ಕೇಳಿದನೋ– ಅದು ಈಗಲೂ ಅವನ ಬುದ್ಧಿಯ ಮೇಲೆ ಕೆಲಸ ಮಾಡುತ್ತಿರಬಹುದು. ಎಂಥದೊ ದಿನಗಟ್ಟಲೆ ನೋಡೋದನ್ನು ನೋಡಿದರೇ ನಮಗೆ ದಿನಗಟ್ಟಲೆ ಬುದ್ಧಿ ಕೆಟ್ಟು ಹೋಗಿರುತ್ತೆ. ಹಾಗಿರೋವಾಗ, ಅಂಥ ಅಸಂಭವ ಆದೋರ ಬುದ್ಧಿ ಬೇಗ ಬಾ ಅಂದರೆ ಹೇಗೆ ಸಾಧ್ಯ?'

–ಎಂದುಕೊಂಡು ಲಕ್ಷ್ಮೀದೇವಮ್ಮ ಆಗಲೂ ತಮಗೆ ತಾವೇ ಸಮಾಧಾನ ಹೇಳಿಕೊಂಡಿದ್ದರು.

ರಂಗಮ್ಮ ದೊಡ್ಡವಳಾದಳು ಎಂದು ಸುದ್ದಿ ಬರುತ್ತಿದ್ದಹಾಗೇ, ತರಾ ತುರಿಯಲ್ಲಿ ನಿಷೇಕಪ್ರಸ್ತ ಏರ್ಪಡಿಸಿ, ಸೊಸೆಯನ್ನು ಮನೆಗೆ ಕರೆತಂದುದೂ, ಮಗ ಇದೆಲ್ಲವನ್ನು ಮರೆತು, ಉಳಿದ ಸಂಸಾರವಂದಿಗರ ಹಾಗಿರಲಿ ಎಂಬ ಅಪೇಕ್ಷೆಯಿಂದಲೇ.

ಲಕ್ಷ್ಮೀದೇವಮ್ಮ ತಮ್ಮ ನಿಷೇಕದ ಮಾತೆತ್ತಿದಾಗ ವೆಂಕಟದಾಸಪ್ಪ ನವರು ಅದನ್ನು ನಿಷೇಧಿಸಿರಲೂ ಇಲ್ಲ, ಅದರ ಬಗ್ಗೆ ಹೆಚ್ಚು ಉತ್ಸಾಹವನ್ನೂ ತೋರಿಸಲಿಲ್ಲ.

'ನಿಜ, ನಿಜ.' ಅವಳು ಆದಷ್ಟು ಬೇಗ ಮನೆಗೆ ಬರೋದು ಒಳ್ಳೇದೇ, ನೀನು ಒಬ್ಬಳೇ ಎಷ್ಟು ದಿನಾಂತ ಹೀಗೆ ದುಡಿಯೋದು ಸಾಧ್ಯ?'

–ಎಂದು ಹೇಳಿ ತಮ್ಮ ಸಮ್ಮತಿಯನ್ನು ಸೂಚಿಸಿದರು.

ಹೆಂಡತಿ ಮನೆಗೆ ಬರುತ್ತಾಳೆಂಬ ಉತ್ಸಾಹವೂ ಅವರಿಗಿರಲಿಲ್ಲ. ಹೆಂಡತಿ ಮನೆಗೆ ಬಂದ ಮೇಲೂ ಅವರ ರೀತಿ ನೀತಿಯಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಎಂದಿನಂತೆಯೇ ಇದ್ದರು.

ವೆಂಕಟದಾಸಪ್ಪನವರು ಪ್ರಸ್ತ ಮುಗಿದು, ರಂಗಮ್ಮ ಮನೆಗೆ ಬಂದ ಬಳಿಕ, ಎಷ್ಟೋ ಜನ, ಇನ್ನು ವೆಂಕಟದಾಸಪ್ಪನವರು, ಗೌರಮ್ಮನ ಮನೆಗೆ ಓಡಾಡುವುದನ್ನು ಕಡಿಮೆಮಾಡಬಹುದು ಎಂದು ನಿರೀಕ್ಷಿಸಿದ್ದರು. ಆದರೆ ವೆಂಕಟದಾಸಪ್ಪನವರು ಹಾಗೂ ಮಾಡಲಿಲ್ಲ.

ಅವರ ಬಾಳಿನಲ್ಲಿ ರಂಗಮ್ಮ ಬಂದುದು, ತುಂಬಿದ ಹೊಳೆಯಲ್ಲಿ ಸದ್ದಿಲ್ಲದೆ, ಯಾವ ಪರಿವರ್ತನೆಯನ್ನೂ ಮಾಡದೆ, ಮತ್ತೊಂದು ಸಣ್ಣ ಹಳ್ಳ ಬಂದು ಸೇರಿಕೊಂಡಂತಿತ್ತು. ಆ ಹಳ್ಳಕ್ಕೆ ಸ್ವಾಗತವಿತ್ತು. ಆದರೆ ಅದರ

ಆಗಮನದಿಂದ ಯಾವ ಉಬ್ಬರವೂ ಇರಲಿಲ್ಲ; ಹಿಂದಿಲ್ಲದ ಹೊಸ ಅಬ್ಬರವೂ ಇರಲಿಲ್ಲ.

ಲಕ್ಷ್ಮೀದೇವಮ್ಮನಿಗೆ ಗೌರಮ್ಮನಿಂದ ತನ್ನ ಮಗನ ಗೃಹಜೀವನದಲ್ಲಿ ಏನಾದರೊಂದು ಬಿರುಗಾಳಿ ಏಳಬಹುದೆಂಬ ಭೀತಿ ಎಂದೋ ತಪ್ಪಿಹೋಗಿತ್ತು. ಅಷ್ಟೇಕೆ ರಾಜೇಶ್ವರಿ ತನ್ನ ಗಂಡನ ಮನೆಗೆ ಹೋದ ಬಳಿಕ, ಗೌರಮ್ಮನೇ ಲಕ್ಷ್ಮೀದೇವಮ್ಮನ ಪಾಲಿಗೆ ಮತ್ತೊಬ್ಬ ಮಗಳಾಗಿದ್ದಳು. ಆದರೂ ಸೊಸೆ ಬಂದು ಸಾಕಷ್ಟು ದಿನವಾದ ಬಳಿಕಲೂ ಮಗನ ವಿಚಿತ್ರಚರ್ಯೆಯಲ್ಲಿ ಏನೊಂದೂ ಬದಲಾವಣೆಯಾಗದುದನ್ನು ಕಂಡ, ಲಕ್ಷ್ಮೀದೇವಮ್ಮನವರಿಗೆ ನಿಜವಾಗಿಯೂ ಗಾಬರಿಯಾಯಿತು.

'ಹೊಸ ಹೆಂಡತಿ ಮನೆಗೆ ಬಂದಾಗಲೂ, ಆ ಹೊಸತಿನಲ್ಲೂ, ಮಲಗುವ ಮನೆಗಿಂತ ಹೆಚ್ಚಾಗಿ ದೇವರ ಮನೆಗೇ ಗಂಟು ಬಿದ್ದಿರಬೇಕಾದರೆ ಖಂಡಿತ ಇವನ ಬುದ್ಧಿಗೆ ಏನೋ ಆಗಿರಬೇಕು. ಅದೇನಾಗಿದೆಯೋ ಈಗಲೆ ತಿಳಿದು ಕೊಂಡು, ಅದಕ್ಕೆ ಬೇಕಾದ ಚಿಕಿತ್ಸೆನೋ, ಶಾಂತಿನೋ ಮಾಡಿಸದೆ ಹೋದರೆ, ನಾಳೆ, ನಾನೇ ಕಂಡೋರ ಮನೆ ಹುಡುಗಿ ತಲೆಮೇಲೆ ಕಲ್ಲು ಎತ್ತಿ ಹಾಕಿದ ಹಾಗಾಗುತ್ತೆ. ಆದ್ದರಿಂದ ಇದು ತೀರಾ ಕೈಮೀರುವವರೆಗೂ ಬಿಡಬಾರದು.'

—ಎಂಬ ತೀರ್ಮಾನಕ್ಕೆ ಬಂದಳು ಲಕ್ಷ್ಮೀದೇವಮ್ಮ.

ಮಗನಿಗೆ ಏನಾಗಿದೆ? ಏನಾದರೂ ಆಗಿದ್ದರೆ ಅದಕ್ಕೆ ಏನು ಪರಿಹಾರ ಎಂದು ತಿಳಿದುಕೊಳ್ಳಲು ಆಕೆಗಿದ್ದ ದಾರಿ ಒಂದೇ– ವೆಂಕಟಗಿರಿ ಜೋಯಿಸರ ಹತ್ತಿರ ಹೋಗಿ ಪ್ರಶ್ನೆ ಕೇಳುವುದು. ಅದೊಂದಲ್ಲದೆ ಬೇರೆ ದಾರಿಯೇ ಆಕೆಗೆ ತಿಳಿದಿರಲಿಲ್ಲ. ಎಂತಲೇ ಒಂದು ದಿನ, ಯಾರಿಗೂ ತಿಳಿಯದ ಹಾಗೆ, ಮಗನ ಜಾತಕವನ್ನು ಉಡಿಯಲ್ಲಿ ಮುಚ್ಚಿಟ್ಟುಕೊಂಡು, ಸೊಸೆಗೆ–

'ರಂಗೂ, ನಾನು ಸ್ವಲ್ಪ ಲಲಿತನ ಮನೆ ಕಡೆ ಹೋಗಿ ಬರ್ತೀನಿ.'

—ಎಂದು ಹೇಳಿ ವೆಂಕಟಗಿರಿ ಜೋಯಿಸರ ಮನೆಯ ದಾರಿ ಹಿಡಿದಳು.

೫

ಮಧ್ಯಾಹ್ನದ ಉರಿಬಿಸಿಲಿನಲ್ಲಿ ಮನೆ ಬಾಗಿಲಿಗೆ ಬಂದ ಲಕ್ಷ್ಮೀದೇವಮ್ಮ ನನ್ನು ಕಂಡು, ವೆಂಕಟಗಿರಿ ಜೋಯಿಸರ ಮಡದಿ ಲಲಿತಮ್ಮನಿಗೆ ಆಶ್ಚರ್ಯ ವಾಯಿತು.-

'ಇದೇನು ಒಳ್ಳೆ ಮಟ ಮಟ ಮಧ್ಯಾಹ್ನದಲ್ಲಿ ಬಂದೆಯಲ್ಲಾ ಲಕ್ಷ್ಮೀದೇವಮ್ಮ'

—ಎಂದು ಕೇಳಿದಳು.

'ನಿನ್ನ ಗಂಡ ಮನೇಲಿದಾನೇನು?'

'ಹೂ.'

'ಏನ್ಮಾಡ್ತಾ ಇದಾನೆ?'

'ಸ್ವಲ್ಪ ಹೊತ್ತಿನ ಕೆಳಗೆ ತೋಟದಿಂದ ಬಂದು, ಊಟ ಮುಗಿಸಿ, ಒಂದು ಗಳಿಗೆ ಮಲಗ್ತೀನಿ ಅಂದ್ರು. ಎಬ್ಬಿಸಲೇ?'

'ನಿದ್ರೆ ಮಾಡ್ತಾ ಇದಾನೋ ಏನೋ?'

'ಇನ್ನೂ ಕಣ್ಣಾದ್ರೂ ಹತ್ತಿದೆಯೋ ಇಲ್ವೋ...'

'ನೋಡು—ಎಚ್ಚರವಾಗಿದ್ದರೆ ಎಬ್ಬಿಸು. ನಿದ್ರೆ ಮಾಡ್ತಾ ಇದ್ದರೆ ಎಬ್ಬಿಸ ಬೇಡ.'

—ಎಂದಳು ಲಕ್ಷ್ಮೀದೇವಮ್ಮ.

ಸ್ವಲ್ಪ ಹೊತ್ತಿನ ಕೆಳಗೆ ತಾನೇ ಊಟ ಮುಗಿಸಿ, ಅಟ್ಟದ ಮೇಲೆ ಹಾಸಿದ ಚಾಪೆಯ ಮೇಲೆ, ಇನ್ನೂ ನಿದ್ರೆ ಬರದೆ ಹೊರಳಾಡುತ್ತಿದ್ದ ವೆಂಕಟ ಗಿರಿ ಜೋಯಿಸರನ್ನು, ಯಾರೂ ಎಬ್ಬಿಸಬೇಕಾದ ಅಗತ್ಯವೇ ಬೀಳಲಿಲ್ಲ. ಮಧ್ಯಾಹ್ನದ ಹೊತ್ತಿನಲ್ಲಿ ಮನೆಬಾಗಿಲಿಗೆ ಬಂದ ಲಕ್ಷ್ಮೀದೇವಮ್ಮನ ಧ್ವನಿ ಕೇಳಿಯೇ ಅವರ ಕಣ್ಣನ್ನು ಕವಿದಿದ್ದ ಅಲ್ಪ ಸ್ವಲ್ಪ ಮಂಪರೂ ಹಾರಿ ಹೋಗಿತ್ತು. ಎಂತಲೇ, ತಮಗೆ ನಿದ್ರೆ ಹತ್ತಿದೆಯೋ ಇಲ್ಲವೋ ನೋಡಿ ಹೋಗಬೇಕೆಂದು ಬಂದ ಹೆಂಡತಿಗೆ, ಆಕೆ ಮಾತನಾಡುವ ಮೊದಲೇ—

'ಅವರಿಗೆ ಕೊಡುಕೋಂತ ಹೇಳಿ, ನನಗೆ ಒಂದು ಲೋಟ ಕುಡಿಯೋಕೆ ನೀರು ತಂದುಕೊಡು.'

—ಎಂದು ಹೇಳಿ, ಹೆಂಡತಿ ನೀರು ತಂದು ಕೊಟ್ಟ ಕೂಡಲೇ ಕುಡಿದು, ತವಂಗಾಗಿ ಕಾಯುತ್ತಿದ್ದ ಲಕ್ಷ್ಮೀದೇವಮ್ಮನನ್ನು ನೋಡಲು ಬಂದರು.

ಗಂಡ ಸತ್ತ ಬಳಿಕ, ಕೇಶ ಮುಂಡನ ಮಾಡಿಸಿಕೊಂಡು ಮಡಿ ಹಿಡಿದ ಲಕ್ಷ್ಮೀದೇವಮ್ಮ ಸಾಮಾನ್ಯವಾಗಿ ಯಾರ ಮನೆಗೂ ಹೋಗುತ್ತಿರಲಿಲ್ಲ ವಾದುದರಿಂದ, ಆಕೆ, ಈ ಮಧ್ಯಾಹ್ನದ ಅವೇಳೆಯಲ್ಲಿ ಏಕೆ ಬಂದಿರಬಹುದೆಂದು ಯೋಚಿಸುತ್ತಲೇ—

'ಏನು ವಿಷಯ? ಒಳ್ಳೆ ಉರಿ ಬಿಸಿಲಿನಲ್ಲೇ ಬಂದೆಯಲ್ಲ. ಅಂಥ ತುರುತಿನ ಕೆಲಸ ಇದ್ದಿದ್ದರೆ, ದಾಸಣ್ಣನ ಕೈಲಿ ಹೇಳಿ ಕಳಿಸಿದ್ದರೆ ಆಗ್ತಾ ಇರಲಿಲ್ಲವೆ? ಸಂಜೆ ಆ ಕಡೆ ನಾನೇ ಬರ್‍ತಿದ್ದೆ.'

—ಎಂದರು.

'ಇದು ದಾಸಣ್ಣನ ಕೈಲಿ ಹೇಳಿ ಕಳಿಸೋ ವಿಷಯವೂ ಅಲ್ಲ; ಮನೇಲಿ ಮಾತಾಡೋ ವಿಷಯವೂ ಅಲ್ಲ. ಅದಕ್ಕೇ ನಾನೇ ನಿನ್ನ ನೋಡಿ ಮಾತಾಡಿ ಕೊಂಡು ಹೋಗೋಣಾಂತ ಬಂದೆ'.

—ಎಂದಳು ಲಕ್ಷ್ಮೀದೇವಮ್ಮ

'ಹಾಗೋ—ಏನು ಸಮಾಚಾರ?'

'ನಮ್ಮ ದಾಸಣ್ಣನ ನೋಡಿದ್ದೀಯಲ್ಲ ವೆಂಕಟಗಿರಿ. ಅವನು ಈಚೀಚೆಗೆ ಯಾಕೋ ಬರ್‍ತಾಬರ್‍ತಾ ಶುದ್ಧ ಶಂಭಣ್ಣ ಆಗ್ತಾಯಿದಾನೆ. ಅವನ ಬುದ್ಧೀನೇ ಅವನ ಹತೋಟಿ ಇಲ್ಲ. ಕೈಯಲ್ಲಿದ್ದ ತುತ್ತು ಬಾಯಿಗೆ ಹೋಗುತ್ತೋ ಕಣ್ಣಿಗೆ ಹೋಗುತ್ತೋ ಅನ್ನೋದು ಕೂಡಾ ತಿಳಿಯುತ್ತೋ ಇಲ್ಲವೋ ಅನ್ನೋದೇ ನನಗೆ ಅನುಮಾನವಾಗಿದೆ. ಅದ್ಯಾಕೆ ಹೀಗಿದಾನೋ, ಅದ್ಯಾಕೆ ಹೀಗೆ ಮಾಡ್ತಾನೋ— ನನಗಂತೂ ಒಂದೂ ಅರ್ಥ ಆಗ್ದೆ, ಹಗಲೂ ರಾತ್ರಿ ಅದೇ ಯೋಚನೆಯಾಗಿ ಹೋಗಿದೆ...'

—ಕಳಿಕಳಿಯಿಂದ ಹೇಳಿದಳು ಲಕ್ಷ್ಮೀದೇವಮ್ಮ.

'ಅದು ನಿಜ. ಮನೇಲೇನು, ಹೊರಗೆ ನಮ್ಮ ಜೊತೇಲೂ ಹಾಗೇ

ಇರ್‍ತಾನೆ. ಮೊನ್ನೆ ಸಂಜೆ, ಅಮ್ಮನೋರ ಗುಡೀಗೆ ಹೋದೋನು ಅಲ್ಲೇ ಯಾಕೋ ಅಳ್ತಾ ಕೂತಿದ್ನಂತೆ.'

–ಲಕ್ಷ್ಮೀದೇವಮ್ಮ ತನ್ನ ಮಾತು ಮುಗಿಸುವ ಮೊದಲೇ ವೆಂಕಟಗಿರಿ ಜೋಯಿಸರು, ನಡುವೆ ಮಾತಾಡಿ ಹೇಳಿದರು.

'ಹೌದೇ? ಹೊರಗಿನ ವಿಷಯ ನನಗೆ ತಿಳೀದು ಮನೇಲಂತೂ ಮೂರು ಹೊತ್ತೂ ಹೀಗೆ. ಹೊರಗಿನ ವಿಷಯ ನನಗೇನು ಗೊತ್ತು ಹೇಳು. ಈಗ ನೀನು ಹೇಳಿದ್ರಿಂದ ತಿಳೀತು. ನಾನು ಈಗ ನಿನ್ನ ಹತ್ತಿರ ಬಂದದ್ದೂ ಅದಕ್ಕೇನೇ?'

'ಅಂದರೆ?'

'ಹೀಗ್ಯಾಕೆ ಮಾಡ್ತಾನೇಂತ ತಿಳುಕೊಂಡು ಹೋಗೋಣಾಂತ...... ನಿನ್ನ ಹತ್ತಿರ ಬಂದೆ...'

ಆಕೆ ಹೇಳಿದ ಮಾತನ್ನು ಕೇಳಿ ವೆಂಕಟಗಿರಿ ಜೋಯಿಸರು ಗಟ್ಟಿಯಾಗಿ ನಕ್ಕುಬಿಟ್ಟರು. ತಾವು ಬಹು ದುಃಖದಿಂದ ಹೇಳಿದ ಮಾತಿಗೆ ವೆಂಕಟಗಿರಿ ಜೋಯಿಸರು ಸಹಾನುಭೂತಿಯನ್ನು ತೋರಿಸದೆ, ಅದಕ್ಕೆ ಉತ್ತರ ಹೇಳದೆ ನಕ್ಕದ್ದನ್ನು ಕಂಡು ಲಕ್ಷ್ಮೀದೇವಮ್ಮನ ಮುಖ ಪೆಚ್ಚಾಯಿತು.

'ಅದ್ಯಾಕೆ ಹಾಗೆ ನಕ್ತ್ರಾ ವೆಂಕಟಗಿರಿ, ನಾನು ಹೇಳಿದ್ದು ನಗೋ ಮಾತೇ? ನನ್ನ ದುಃಖ ನಿನಗೆ ಹ್ಯಾಗೆ ಗೊತ್ತಾಗಬೇಕು, ಹೇಳು? ಯಾರ ಕೈ ಸುಟ್ಟರೆ ಅವರ ಕೈ ತಾನೇ ಉರೀಬೇಕಾದ್ದು.'

'ನಿನ್ನ ದುಃಖ ಕಂಡು ನಗೋಕೆ ನಾನೇನು ಹುಲಿ ಹೊಟ್ಟೆಯಲ್ಲಿ ಹುಟ್ಟಿದೇನೆಯೋ ಲಕ್ಷ್ಮೀದೇವಮ್ಮ. ಅದಕ್ಕಲ್ಲ ನಾನು ನಕ್ಕದ್ದು...'

'ಮತ್ತೆ ?'

'ದಾಸಣ್ಣ ಯಾಕೆ ಹಾಗಿದಾನೇಂದ್ರೆ, ಅದಕ್ಕೆ ಅವನು ಉತ್ತರ ಹೇಳಬೇಕಲ್ಲದೆ. ನಾನು ಹೇಳೋದು ಸಾಧ್ಯವೇ?'

'ನಾನು ನಿನ್ನ ಪ್ರಶ್ನೆ ಕೇಳಿದ ಅರ್ಥವೇ ಬೇರೆ'–

'ಹಾಗಂದ್ರೆ...'

'ದಾಸಣ್ಣ ಹೀಗಿರೋದು ಇವೊತ್ತು– ನಿನ್ನೆಯಿಂದಲ್ಲ. ಅವತ್ತು ಜಾತ್ರೆ ವಿಷಯದಲ್ಲಿ ಮುನಿಸಿಕೊಂಡು ಮನೆ ಬಿಟ್ಟು ಎಲ್ಲಿಗೋ ಹೋಗಿ ಬಂದೆ

ನೋಡು, ಅವತ್ತಿನಿಂದಾನೂ ಅಷ್ಟೆ- ಅವನ ಬುದ್ಧಿ ಸ್ಥಿಮಿತವಾಗಿಲ್ಲ. ಆವೊತ್ತು ಆದದ್ದು ಯಾವದೂ ಮನುಷ್ಯಮಾತ್ರದೋನು ಹೀಗಾಗುತ್ತೆ ಅಂತ ಹೇಳಿದರೂ ನಂಬೋ ಅಂಥೋದಲ್ಲ. ಅದಕ್ಕೇ ನಾನು ಏನೋ ಎರಡು ದಿನ ಹೀಗಿದ್ದು ಸರಿಹೋಗ್ತಾನೆ ಅಂತ ಅಂದುಕೊಂಡಿದ್ದೆ. ಮನೆಗೆ ಹೆಂಡತಿ ಬಂದ ಮೇಲಾದ್ರೂ ಎಲ್ಲಾರ ಹಾಗಿರಬಹುದು ಅಂತ ನಂಬಿದ್ದೆ. ಆದರೆ- ಇವನ ವಿಚಿತ್ರ ದಿನದಿನಕ್ಕೆ ಹೆಚ್ತಾ ಇದೆಯೋ ಹೊರತು, ಎಲ್ಲಾರ ಹಾಗೆ ಆಗೋ ಲಕ್ಷಣಾನೇ ಇಲ್ಲ. ಆದಕ್ಕೇ ನನ್ನ ಮನಸ್ಸಿಗೆ ಇನ್ನಿಲ್ಲದ ಯೋಚನೆ ಆಗಿದೆ. ಅವತ್ತು ಮನೆ ಬಿಟ್ಟು ರಾತ್ರಿ ಎಲ್ಲಾ ಎಲ್ಲೋ ಹೋಗಿ, ಅವ್ನೋರು ಮೈಮೇಲೆ ಬಂದೋರು ಬರೋ ಹಾಗೆ ಥಡಗುಟ್ಟಿಕೊಂಡು ಬಂದನಲ್ಲಾ- ಅವತ್ತು ಏನಾದ್ರೂ ಕಾಣಿಸಿಕೊಂಡು, ಅವನ ಬುದ್ಧಿಗೆ ಹೀಗೆ ಮಂಕು ಹಿಡಿಸಿತೇನೋ ಅಂತ ಭಯ ಆಗ್ತಾ ಇದೆ. ಅದಕ್ಕೇ ಅವನ ಜಾತಕ ತಗೊಂಡು ಬಂದೆ. ನೋಡಿ, ಏನಾದ್ರೂ ಗ್ರಹದ ಕಾಟಗೀಟ ಇದ್ರೆ ಹೇಳು'

—ಎಂದು ಲಕ್ಷ್ಮೀದೇವಮ್ಮ ತಾನು ಅಲ್ಲಿಗೆ ಬಂದ ಕಾರಣ, ತನ್ನ ಮನಸಿನ ಚಿಂತೆಯ ಕಾರಣ ಎಲ್ಲವನ್ನೂ ವಿವರಿಸಿದಳು.

ಆಕೆ ಹೇಳಿದುದನ್ನು ಕೇಳಿ ವೆಂಕಟಗಿರಿ ಜೋಯಿಸರ ಮುಖವೂ ಗಂಭೀರವಾಯಿತು. ಸ್ವಲ್ಪಹೊತ್ತು ಲಕ್ಷ್ಮೀದೇವಮ್ಮನ ಪ್ರಶ್ನೆಗೆ ಏನೂ ಉತ್ತರ ಕೊಡದೆ ಕುಳಿತಿದ್ದರು. ಅದನ್ನು ಕಂಡು ಲಕ್ಷ್ಮೀದೇವಮ್ಮನೇ—

'ಅವನ ಜಾತಕ ಸ್ವಲ್ಪ ನೋಡಿ ಹೇಳು ವೆಂಕಟಗಿರಿ.'

—ಎಂದು, ತಾನು ಮಡಲಿನಲ್ಲಿ ಮುಚ್ಚಿಟ್ಟುಕೊಂಡು ಬಂದಿದ್ದ ವೆಂಕಟ ದಾಸಪ್ಪನವರ ಜಾತಕವನ್ನು ಹೊರತೆಗೆದು, ವೆಂಕಟಗಿರಿ ಜೋಯಿಸರ ಎದುರಿಗಿಟ್ಟಳು.

ಅದನ್ನು ಕಂಡು ವೆಂಕಟಗಿರಿ ಜೋಯಿಸರು, ಜಾತಕವನ್ನು ಕೈಯಿಂದಲೂ ಮುಟ್ಟದೆ—

'ಲಕ್ಷ್ಮೀದೇವಮ್ಮ, ನೀನೇನು ಅಂದುಕೊಳ್ಳದೆ ಹೋದರೆ, ನಾನೊಂದು ಮಾತು ಹೇಳ್ತಿನಿ-ಕೇಳ್ತೀಯಾ ?'

—ಎಂದರು.

'ಏನು ಹೇಳು?

'ಬಟ್ಟೆ ಅಳೆಯೋ ಗಜಕಡ್ಡೀಲಿ, ಆಕಾಶಾನ ಯಾರು ಅಳೆಯೋಕೆ ಸಾಧ್ಯ ಹೇಳು ?'

ವೆಂಕಟಗಿರಿ ಜೋಯಿಸರ ಆ ಮಾತು ಲಕ್ಷ್ಮೀದೇವಮ್ಮನಿಗೆ ಅರ್ಥವಾಗದೆ, ಏನೋ ಒಗಟಿನಂತೆ ತೋರಿತು. ಆ ಸಂದಿಗ್ಧತೆ ತುಂಬಿದ ಧ್ವನಿಯಲ್ಲೇ—

'ಹಾಗೆಂದರೇನು? ನಿನ್ನ ಮಾತೇ ಅರ್ಥವಾಗಲಿಲ್ಲ.'

—ಎಂದರು.

'ಇಷ್ಟೆ– ದಾಸಣ್ಣನ ವರ್ತನೇನ, ಸಾಮಾನ್ಯರ ನಡತೆಯ ಅಳತೆಗೋಲಿನಲ್ಲಿ ಅಳೆಯಲೆತ್ನಿಸಿದರೆ, ಅದು ನಮ್ಮ ಹುಚ್ಚುತನವಾಗುತ್ತದೆ ಎಂದೇ ನನಗೆ ತೋರುತ್ತದೆ...'

'ಏಕೆ—ಅವನಿಗೇನು ನಾಲ್ಕು ಕಿವಿ, ಆರು ಕಣ್ಣು ಇದೆಯೇ?'

'ಊಹೂ, ಹಾಗಲ್ಲ,—ನೋಡೋಕೆ ದಾಸಣ್ಣನೂ ನಮ್ಮ ಹಾಗೇ ಇದಾನೆ. ಆದರೆ ಅವನೊಳಗಿರುವ ಶಕ್ತಿವಿಶೇಷ ಮಾತ್ರ ಅಲೌಕಿಕವಾದದ್ದು. ಅವೊತ್ತೇ, ನೀನೇ ನೋಡಿದೆಯಲ್ಲ– ದಾಸಣ್ಣ ಬರೋವರೆಗೂ, ಒಬ್ಬರೂ ಅಮ್ಮನೋರ ವಿಗ್ರಹಾನೂ ಮುಟ್ಟೋಕೂ ಸಾಧ್ಯವಾಗಲಿಲ್ಲ.'

'ಹೌದು ಮಡಿ ಹುಡಿ ಮಾಡೋರ ಮನೇಲಿ, ಸ್ವಲ್ಪ ಮುಟ್ಟುಚಟ್ಟಿನ ಸೋಂಕಾದರೂ ಹಾವು ಚೇಳು ಕಾಣಿಸಿಕೊಳ್ಳುತ್ತೆ. ಹಾಗಿರೋವಾಗ ದೊಡ್ಡ ದೊಡ್ಡೋರು ಪೂಜೆ ಮಾಡಿದ ವಿಗ್ರಹಾನ, ಯಾರು ಯಾರೋ ಮುಟ್ಟೇವೀಂದ್ರೆ ಆಗುತ್ಯೆ? ಆದರಲ್ಲಿ ದಾಸಣ್ಣನ ದೊಡ್ಡಸ್ತಿಕೆ ಏನು?'

'ಹಾಗಲ್ಲ ಲಕ್ಷ್ಮೀದೇವಮ್ಮ, ದಾಸಣ್ಣನಿಗೆ ಅಮ್ಮನೋರ ಒಲುಮೆ ಇದೆ'.

'ಸರಿ, ಸರಿ– ಒಂದು ದಿನ ಅವನು ನೆಟ್ಟಗೆ ಕೂತು ನೂರೆಂಟು ಗಾಯಂತ್ರಿ ಮಾಡಿದ್ದು ನಾನು ನೋಡಲಿಲ್ಲ. ಹಾಗಿರೋವಾಗ ಅವನಿಗೆ ಅಮ್ಮನೋರು ಒಲಿದಿದಾರೇಂದ್ರೆ ಯಾರು ನಂಬ್ತಾರೆ ಹೇಳು ?'

'ನೋಡು– ಎಲ್ಲಾ ತಾಯಿಯರ ಹಾಗೆ ನೀನೂ ಮಾತಾಡ್ತಾ ಇದೀಯ...'

'ಅಂದ್ರೆ?'

'ದಾಸಣ್ಣ ನಿನ್ನ ಹೊಟ್ಟೇಲಿ ಹುಟ್ಟಿದ ಮಗ; ನಿನ್ನ ಕೈಲಿ ಆಡಿ ಬೆಳೆದೋನು. ಆದಕ್ಕೇ ಅವನಲ್ಲಿರೋ ವಿಶೇಷ ನಿನಗೆ ಕಾಣ್ತಾ ಇಲ್ಲ. ದಾಸಣ್ಣ ಎಲ್ಲರ ಹಾಗೆ ಪೂಜೆ ಪುನಸ್ಕಾರ, ಜಪ–ತಪ ಮಾಡೊಲ್ಲ, ಅವನಿಗ್ಯಾಕೆ ಅಮ್ನೋರು ಒಲೀತಾರೆ ಅಂತ ಕೇಳಿದರೆ ಅದಕ್ಕೆ ನಾನೇನು ಹೇಳಲಿ ಹೇಳು? ಅವನದು ಹಿಂದಿನ ಜನ್ಮದಲ್ಲಿ ಮಾಡಿದ ಪೂಜಾಫಲ. ಕಬ್ಬಿಣ ಹೊಳೀಬೇಕು ಅಂದರೆ ಅದನ್ನು ಕಾಸಬೇಕು, ಕುಟ್ಟಬೇಕು, ಮೆರಗು ಕೊಡಬೇಕು. ವಜ್ರ ಏನೂ ಇಲ್ಲದೆ ಹೊಳೆಯುತ್ತಲ್ಲ–ಅದು ಯಾಕೆ ಹೇಳು? ಅದೂ ಕಬ್ಬಿಣದ ಹಾಗೇ ಭೂಮಿ ಹೊಟ್ಟೇಲಿ ಹುಟ್ಟಿದ್ದು ತಾನೆ? ಆದ್ದರಿಂದ ಈ ಭ್ರಾಂತೆಲ್ಲಾ ಬಿಡು. ಭೂತ, ಗೀತ ಏನಿದ್ರೂ ಅದು ನನ್ನ ನಿನ್ನಂಥೋರಿಗೆ. ದಾಸಣ್ಣನಂಥೋರನ್ನು ಅವು ಹಿಡಿಯೋದಿರಲಿ, ಹತ್ತಿರ ಸುಳಿಯೋಕೂ ಆಗೋದಿಲ್ಲ. ಇವತ್ತು ಹೊಸದಾಗಿ ಅವನ ಜಾತಕ ನಾನು ನೋಡಬೇಕಾಗಿಲ್ಲ. ಯಾವತ್ತೋ ನೋಡಿದ್ದೀನಿ. ಅಂಥಾ ಭಯ ಯಾವುದೂ ಇಲ್ಲ.'

—ವೆಂಕಟಗಿರಿಜೋಯಿಸರು ವಿವರಿಸಿ ಹೇಳಿದರು.

'ಹಾಗಂದ್ರೆ... ಹಾಗಂದ್ರೆ... ಇವನು ಸಾಯೋವರೆಗೂ ಇಷ್ಟೇ ಅನ್ನು...'

—ಏನೋ ಭೀತಿಯಲ್ಲಿ ಬಳಲುತ್ತಾ ಕೇಳಿದಳು ಲಕ್ಷ್ಮೀದೇವಮ್ಮ.

'ಹೀಗಾಗುತ್ತೇ, ಹಾಗಾಗುತ್ತೇ ಯಾರು ಹೇಳೋಕೆ ಸಾಧ್ಯ? ನಾವೂ ಹಿಂದಿನ ಜನ್ಮದಲ್ಲಿ ಒಂದೆರಡು ಒಳ್ಳೇ ಹೂವು ಪೂಜೆ ಮಾಡಿದ್ದೆವು. ಇವನ ನೆಪವಾಗಿ, ನಮ್ಮ ಕಣ್ಣುಗಳಿಗೂ ಅಮ್ಮನವರ ಮಹಾತ್ಮ್ಯ ಕಾಣಿಸಿತು. ನೀನು ಆ ಸಂತೋಷ ಪಟ್ಟುಕೋಬೇಕೇ ಹೊರತು ಇಲ್ಲದ್ದೆಲ್ಲಾ ಹಚ್ಚಿಕೊಂಡು ಕೊರಗಬೇಡ.'

'ನನಗೋಸ್ಕರ ನಾನು ಕೊರಗ್ತಾ ಇಲ್ಲ ವೆಂಕಟಗಿರಿ– ಮಕ್ಕಳಿಂದ ಸುಖಪಡೋಪುಣ್ಯ ನಾನು ಕೇಳಿಕೊಂಡು ಬಂದಿಲ್ಲ. ಅದು ಯಾವತ್ತೋ ಅರ್ಥಮಾಡಿಕೊಂಡು ಎದೆ ಕಲ್ಲು ಮಾಡಿಕೊಂಡಿದೀನಿ.'

'ನಿನ್ನದೇನು–ಇಂಥ ಮಕ್ಕಳನ್ನು ಹಡೆದೋರ ಹಣೆಬರಹ ಎಲ್ಲಾ ಅಷ್ಟೆ.'

'ಅಂದರೆ—?'

'ರಾಮನಂಥ ಮಗನನ್ನು ಪಡೆದು, ದಶರಥ, ಕೌಸಲ್ಯೆ ಏನು ಸುಖ ಸುರಿದುಕೊಂಡರು ಹೇಳು? ಹೆಂಡತಿ ಮಕ್ಕಳಿಗೆ ಸುಖಕೊಡೋಕೆ ಹುಟ್ಟಿದೋರೇ ಬೇರೆ...'

'ಹಾಗಲ್ಲಾಂದ್ರೆ—ಇಂಥ ಮಕ್ಕಳಿದ್ದೇನು ಸಾರ್ಥಕ?'

'ನೋಡು ಲಕ್ಷ್ಮೀದೇವಮ್ಮ. ನಮ್ಮ ಮನೇಲಿ ಹಸು ಕಟ್ಕೊಂಡಿ ದೀನಿ. ನನಗೆ ಅದನ್ನು ಕಟ್ಕೋಕೆ ಕಬ್ಬಿಣದ ಸರಪಳಿ ಬೇಕು. ಆದ್ರೆ ನನ್ನ ಮನೇಲಿ, ಆ ಸರಪಳಿ ಮಾಡೋದಕ್ಕೆ ಉಪಯೋಗವಾಗೋ ಕಬ್ಬಿಣ ಇಲ್ಲ; ಚಿನ್ನದ ಗಟ್ಟಿ ಇದೆ. ಆದರಿಂದ ನನ್ನ ಕೆಲಸಕ್ಕೆ ಉಪಯೋಗವಿಲ್ಲಾಂತ ಬೀದಿಗೆ ಎಸೆದು ಬಿಡಲೆ? ಅಕಸಾಲೆಗೆ ಕೂಲಿ ಕೊಡೋ ಅಷ್ಟು ಚೈತನ್ಯ ನನಗಿದ್ದರೆ, ಆ ಚಿನ್ನದಿಂದ ಒಡವೆ ಮಾಡಿಸಿಕೊಂಡು, ತೊಟ್ಟು ಮೆರೆಯ ಬಹುದು. ಇಲ್ಲಾಂದ್ರೆ ಗಟ್ಟಿ, ಗಟ್ಟಿಯಾಗಿ ನಮ್ಮ ಮನೇಲಿರುತ್ತೆ. ಇಂಥ ಮಕ್ಕಳ ವಿಷಯವೂ ಅಷ್ಟೇ—ನಮಗೆ ಅವರನ್ನು ಕಂಡು ಸುಖಾ ಪಡೋ ರೀತಿ ಗೊತ್ತಿದ್ರೆ ಸುಖಪಡ್ತೀವಿ. ಇಲ್ಲಾಂದ್ರೆ—ನನ್ನ ಮಗ ಅಂದುಕೊಂಡು, ಅಷ್ಟೇ ಸಂತೋಷ ಪಡಬೇಕು.'

—ವೆಂಕಟಗಿರಿ ಜೋಯಿಸರು ತಮ್ಮ ದೃಷ್ಟಿಯನ್ನು ವಿವರಿಸಿ ಹೇಳಿದರು.

'ಇದೆಲ್ಲಾ ವೇದಾಂತ ನನಗೂ, ನಿನಗೂ ಸರಿ ವೆಂಕಟಗಿರಿ. ನಮಗೆ ಇನ್ನೇನಿದೆ ಹೇಳು—ಊರು ಹೋಗು ಅನ್ನುತ್ತೆ, ಕಾಡು ಬಾ ಅನ್ನುತ್ತೆ. ನಮ್ಮ ಆಗಾಭೋಗ ಎಲ್ಲಾ ಮುಗೀಲಿಕ್ಕೆ ಬಂತು. ಇನ್ನೂ ಅವನನ್ನು ಕಟ್ಟಿಕೊಂಡು ಹೆಣಗಬೇಕಾಗಿರೋ ಆ ಎಳೆ ಜೀವದ ಗತಿ ಏನು ಹೇಳು? ಅದಕ್ಕೀಗ ಒಳ್ಳೇ ಸುಖ ಪಡೋ ಪ್ರಾಯ...'

'ದಾಸಣ್ಣ ಏನು ಮುದುಕನೇ?'

'ಅವನಿಗೇನು? ಪಡೋ ಸುಖ ಎಲ್ಲ ಪಟ್ಟಿದ್ದಾಯ್ತಲ್ಲ, ಎಲ್ಲದಕ್ಕೂ ಇವನನ್ನೇ ನೆಚ್ಚಿಕೊಂಡು ಬಂದಿರೋಳು ರಂಗೂ ಒಬ್ಬಳೇ ತಾನೇ? ನನಗೆ ಆ ಹುಡುಗೀದೇ ಯೋಚನೆಯಾಗಿದೆ. ಈಗಲೆ ಅದರ ಅವಸ್ಥೆ ಹೀಗಾದ್ರೆ, ಅದು ಸುಖಪಡೋದು ಯಾವಾಗ?'

'ಈ ಭ್ರಾಂತೆಲ್ಲಾ ಬಿಡು ಲಕ್ಷ್ಮೀದೇವಿ. ದಾಸಣ್ಣನೇನೂ ದೊಡ್ಡೋರ

ಹಾಗೆ ಸನ್ಯಾಸಿ ಆಗೊಲ್ಲ. ರಂಗಮ್ಮನ ಜಾತಕಾನೂ ನಾನು ನೋಡಿದೀನಿ. ಇಬ್ಬರಿಗೂ ಸಂತಾನ ಯೋಗ ಚೆನ್ನಾಗಿದೆ. ಸುಮ್ನೆ ಇಲ್ಲದ್ದೆಲ್ಲಾ ಹಚ್ಚಿಕೊಂಡು ನೀನು ಕೊರಗಬೇಡ.'

'ನೀನು ಅಷ್ಟು ಹೇಳಿದರೆ ನನಗೆ ಧೈರ್ಯವಾಗುತ್ತೆ.'

'ನೀನು ಧೈರ್ಯವಾಗಿರು. ಎಲ್ಲಾ ಭಾರಾನೂ ಅಮ್ಮನೋರ ಮೇಲೆ ಹಾಕಿಬಿಡು. ನನಗೆ–ನಿನಗೆ ಇರೋ ಅಷ್ಟು ಯೋಚನೆ ಆಕೆಗೆ ಇಲ್ಲವೇ ?'

'ಅದೆಲ್ಲಾ ಸರಿ–ವೆಂಕಟಗಿರಿ. ಇವನಿಗೆ ಈಗ ಆಗಿರೋದೇನು? ಯಾಕೆ ಹೀಗಾಗಿದಾನೆ ?'

—ಎಂದು ಕೇಳಿದಳು ಲಕ್ಷ್ಮೀದೇವಮ್ಮ.

''ಏನಂದ್ರೂ ಮಗ ಹರಿ ಅನ್ನೋದು ಬಿಡಲಿಲ್ಲ,' ಅಂದ ಹಾಗೆ ಮತ್ತೆ ಮೊದಲಿಗೇ ಬಂದೆಯಲ್ಲ...'

—ನಗುತ್ತಾ ಕೇಳಿದರು ವೆಂಕಟಗಿರಿ ಜೋಯಿಸರು.

'ಅವನು ನಿನ್ನ ಮಗ ಆಗಿದ್ರೆ ನೀನೇನು ಮಾಡ್ತಿದ್ದೆ ಹೇಳು?'

—ನಿನ್ನ ಹಾಗೇ ನಾನೂ ಇದ್ದದ್ದಕ್ಕೆ ಸುಖ ಪಡದೆ, ಇಲ್ಲದ್ದಕ್ಕೆ ಒದ್ದಾಡ್ತಾ ಇದ್ದೆ. ಸಂಸಾರಿಗಳೆಲ್ಲಾ ಮಾಡೋದು ಅಷ್ಟೇ ತಾನೇ? ನೀನು ಯಾವುದಕ್ಕೂ ಯೋಚನೆ ಮಾಡಬೇಡ ಲಕ್ಷ್ಮೀದೇವಿ. ಎಲ್ಲಾ ಸರಿ ಹೋಗುತ್ತೆ.'

'ಹಾಗಂತ ನೀನು ಬರೀ ಮಾತಿನ ಬಾರುಡೆ ಉರುಳಿಸಬೇಡ. ಜಾತಕ ನೋಡಿ ಹೇಳು. ನನ್ನ ಮನಸ್ಸಿಗೆ ಸಮಾಧಾನ ಆಗುತ್ತೆ.'

'ಜಾತಕ ನಾನು ನೋಡೀದೀನಿ ಅಂದ್ನಲ್ಲಾ...'

'ಹಾಗಾದರೆ ನನ್ನ ಸೊಸೆ ಯಾವತ್ತು ತಾಯಿ ಆಗ್ತಾಳೆ ಹೇಳು?'

'ಅಂತು–ನಿನಗೆ, ಇಷ್ಟು ದೂರ ಬಂದದಕ್ಕೆ ಏನಾದ್ರೂ ಒಂದು ಪ್ರಶ್ನೆ ಕೇಳ್ದೆ ಹೋದ್ರೆ ಸಮಾಧಾನ ಇಲ್ಲಾಂತ ಹೇಳು...'

'ಹಾಗೆ ಅಂದಕೊ?'

'ದಕ್ಷಿಣೆ ಕಾಸು ತಂದಿದೀಯಾ?'

'ಕೇಳಿದ್ದಕ್ಕೆ ಹೇಳೋದೂ ನಿನ್ನ ಕರ್ಮ, ಕೊಡೋದು ಬಿಡೋದು ನನ್ನ ಧರ್ಮ...'

ತಮ್ಮ ಪ್ರಶ್ನೆಗೆ ಲಕ್ಷ್ಮೀದೇವಮ್ಮ ಕೊಟ್ಟ ಉತ್ತರ ಕೇಳಿ ವೆಂಕಟಗಿರಿ ಜೋಯಿಸರು ನಗುತ್ತಲೇ, ಹಾಗೇ ಲೆಕ್ಕಾಚಾರ ಹಾಕಿ ಹೇಳಿದರು—

'ನೀನು ಪ್ರಶ್ನೆ ಕೇಳಿದ ಗಳಿಗೆ ಒಳ್ಳೇದು. ಬಹಳ ಬೇಗ ನಿನ್ನ ಸೊಸೆ ಗಂಡು ಮಗುವಿನ ತಾಯಿಯಾಗ್ತಾಳೆ. ಈ ವರ್ಷ ಅವರಿಬ್ಬರಿಗೂ ಗುರುಬಲ ಚೆನ್ನಾಗಿದೆ.'

'ಇದೂ ಏನು ಉಡಾಫೇನೋ ಅಥವಾ ಲೆಕ್ಕಾಚಾರ ನೋಡಿ ಹೇಳ್ತಾ ಇದೀಯೋ?'

'ಜೋತಿಷ್ಯದ ಪ್ರಶ್ನೆಗೆ ಹಾಗೆಲ್ಲಾ ಉಡಾಫೆ ಉತ್ತರ ಕೊಟ್ರೆ ಆಗುತ್ಯೇ?'

'ಸರಿ ಹಾಗಾದ್ರೆ—ನಿನ್ನ ಉತ್ತರ ಎಷ್ಟು ನಿಜಾನೋ ನಾನೂ ನೋಡೇ ಬಿಡ್ತೀನಿ.'

'ನಿಜ ಆದ್ರೆ ಏನು ಕೊಡ್ತೀಯ?'

'ನನ್ನ ಮೊಮ್ಮಗನ ಕೈಲೇ ದಕ್ಷಿಣೆ ಕೊಡಸ್ತೀನಿ'

—ಎಂದು ನಗುತ್ತಾ ಮಾತು ಮುಗಿಸಿದಳು ಲಕ್ಷ್ಮೀದೇವಮ್ಮ.

'ನಿನ್ನ ಮೊಮ್ಮಗನೂ ನಿನ್ನ ಹಾಗೇ ಆದ್ರೆ—ನಾನು ದಕ್ಷಿಣೆ ಕಾಸು ಕಂಡ ಹಾಗೇ ಆಯ್ತು—ಬಿಡು.'

—ಎಂದು ವೆಂಕಟಗಿರಿ ಜೋಯಿಸರು ನಕ್ಕು ಮಾತು ಮುಗಿಸಿದರು.

ಜೋಯಿಸರೊಂದಿಗೆ ಮಾತನಾಡಿದುದರಿಂದ ತನ್ನ ಸಮಸ್ಯೆ ಬಗೆಹರಿಯು ಲಿಲ್ಲವಾದರೂ, ತನ್ನ ಸೊಸೆ ಬಹುಬೇಗ ಗಂಡುಮಗುವಿನ ತಾಯಿಯಾಗುವಳೆಂಬ ಸಂತೋಷವಾರ್ತೆಯನ್ನು ಕೇಳಿ, ಲಕ್ಷ್ಮೀದೇವಮ್ಮ ಹಗುರಾದ ಹೃದಯದಿಂದ ಮನೆಗೆ ಹಿಂದಿರುಗಿದಳು.

# ೬

ಆ ದಿನ ವೆಂಕಟಗಿರಿ ಜೋಯಿಸರು ಲಕ್ಷ್ಮೀದೇವಮ್ಮನಿಗೆ ಹೇಳಿದ ಭವಿಷ್ಯ ಸುಳ್ಳಾಗಲಿಲ್ಲ.

ಅವರು ಭವಿಷ್ಯ ಹೇಳಿದ ಮೂರು ತಿಂಗಳಲ್ಲಿ ರಂಗಮ್ಮನಿಗೆ ಮುಟ್ಟು ನಿಂತು, ಈ ಹರ್ಷ ವಾರ್ತೆ ಪರಶುರಾಮಪುರವನ್ನು ತಲುಪಿ, ಚೊಚ್ಚಲು ಬಸುರಿಯಾದ ಮಗಳನ್ನು ತೌರಿಗೆ ಕರೆದುಕೊಂಡು ಹೋಗಲು, ಶಾಮಣ್ಣ ಐದನೇ ತಿಂಗಳಲ್ಲಿ ದೇವೀಕೆರೆಗೆ ಬಂದು ಇಳಿದ.

ಶಾಮಣ್ಣ, ಮಗಳನ್ನು ಕರೆದುಕೊಂಡು ಹೋಗುವ ಕಾರಣಕ್ಕಾಗಿ, ಬಿಡುವಾಗಿ ದೇವೀಕೆರೆಗೆ ಬಂದುದನ್ನು ಕಂಡು, ವೆಂಕಟದಾಸಪ್ಪನವರಿಗೆ, ಹೆಂಡತಿ ಗರ್ಭಿಣಿ ಆದುದಕ್ಕಿಂತಲೂ ಹೆಚ್ಚಿನ ಸಂತೋಷವಾಯಿತು. ನರಸಪ್ಪನವರ ದಿವಸ ಕಾಲದ ಸಂದರ್ಭದಲ್ಲಿ ಅಳಿಯನೊಂದಿಗೆ ನಾಲ್ಕು ದಿನ ಕಳೆದ ಬಳಿಕ, ಶಾಮಣ್ಣ ನಿಗೂ ಅಳಿಯನೊಂದಿಗೆ ನಿಧಾನವಾಗಿ ಕುಳಿತು ಮಾತನಾಡಲು ಅವಕಾಶವಾಗಿರ ಲಿಲ್ಲ. ರಂಗಮ್ಮನ ಪ್ರಸ್ತದ ಸಮಯದಲ್ಲಿ, ನಂತರ ಮಗಳನ್ನು ಅತ್ತೆಯ ಮನೆಗೆ ಬಿಟ್ಟು ಹೋಗುವ ಸಂಧರ್ಭದಲ್ಲಿ ಒಬ್ಬರೊನ್ನೊಬ್ಬರು ಕಲೆತಿದ್ದರೂ, ಆ ಎರಡು ಸಂದರ್ಭಗಳೂ ಗಡಿಬಿಡಿಯದಾದುದರಿಂದ, ಒಬ್ಬರೊನ್ನೊಬ್ಬರು, ಏಕಾಂತವಾಗಿ, ಕಲೆತು, ಯಾವ ಮಾತನ್ನೂ ಚರ್ಚಿಸಲು ಅವಕಾಶ ಒದಗಿರಲಿಲ್ಲ. ಎಂತಲೇ ಈಗ ಆ ಸಂದರ್ಭ ಒದಗಿಬಂದುದು ಇಬ್ಬರಿಗೂ ಸಂತೋಷಕ್ಕೆ ಕಾರಣವಾಗಿತ್ತು.

ದೇವೀಕೆರೆಯಲ್ಲಿ, ಜಾತ್ರೆಯ ಸಮಯದಲ್ಲಿ ಆದುದೆಲ್ಲವೂ ಶಾಮಣ್ಣನಿಗೆ, ಜಾತ್ರೆಯ ಕಾಲಕ್ಕೆ ಅಲ್ಲಿದ್ದು ಹೋದ ರಾಜೇಶ್ವರಿಯಿಂದ ಸವಿವರವಾಗಿ ತಿಳಿದಿತ್ತು. ತಮ್ಮ ಅಳಿಯ ದೇವಿಯ ಅನುಗ್ರಹಕ್ಕೆ ಪಾತ್ರನಾದವನು ಎಂಬು ದನ್ನು ಕೇಳಿ, ವೆಂಕಟದಾಸಪ್ಪನವರಿಗೆ ದಿವಾನಪದವಿ ದೊರಕಿತು ಎಂದು ಕೇಳಿದ್ದರೆ ಎಷ್ಟು ಸಂತೋಷವಾಗುತ್ತಿತ್ತೋ ಅದಕ್ಕೆ ಹತ್ತರಷ್ಟು ಸಂತೋಷ ವಾಗಿತ್ತು.

ಎಂದಾದರೊಂದು ದಿನ ತನ್ನ ಅಳಿಯನೊಂದಿಗೆ ಬಿಡುವಾಗಿ ಕುಳಿತು

ಕೊಂಡು ಆ ದಿನ ಏನೇನು ನಡೆಯಿತೋ ಎಲ್ಲವನ್ನೂ ಕೇಳಬೇಕು ಎಂಬ ಕುತೂಹಲವೂ ಆತನನ್ನು ಬಾಧಿಸುತ್ತಿತ್ತು.

ಎಂತಲೇ ಗರ್ಭಿಣಿಯಾದ ತನ್ನ ಮಗಳನ್ನು ತೌರಿಗೆ ಕರೆದೊಯ್ಯುವ ಉದ್ದೇಶದಿಂದ ದೇವೀಕೆರೆಗೆ ಬಂದಾಗ, ಶಾಮಣ್ಣ ಏನೇನೋ ಲೆಕ್ಕ ಹಾಕಿಕೊಂಡು ಬಂದಿದ್ದ. ಆದರೆ ದೇವೀಕೆರೆಗೆ ಬಂದ ಬಳಿಕ, ತಾನು ಬಂದುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರೂ, ಯಾವುದರ ಬಗ್ಗೆಯೂ, ಹೆಚ್ಚು ಉತ್ಸಾಹವನ್ನಾಗಲಿ, ಸಂತೋಷವನ್ನಾಗಲಿ ವ್ಯಕ್ತಪಡಿಸದ ವೆಂಕಟದಾಸಪ್ಪನವರನ್ನುಕಂಡು, ಶಾಮಣ್ಣನ ಉತ್ಸಾಹವೂ ಇಳಿದು ಹೋಯಿತು.

'ಇದೇನು ಈ ಹುಡುಗನ ಹಣೆಬರಹ! ಯಾವಾಗಲೂ ಏನೋ ಕೊರಗು ಹಚ್ಚಿಕೊಂಡು ವ್ಯಥೆ ಪಡುತ್ತಾನಲ್ಲಾ, ಹೀಗೇಕೆ ? ಮೊದಲ ಮಗುವಿನ ತಂದೆಯಾಗಲಿರುವವನು ಎಷ್ಟು ಗೆಲುವಾಗಿರಬೇಕು. ಅದೊಂದೂ ಇಲ್ಲವಲ್ಲ– ಏನಿರಬಹುದು? ಸಂಸಾರ ತಾಪತ್ರಯವೇನಾದರೂ ಬಾಧಿಸುತ್ತಿರಬಹುದೆ ?'

—ಎಂದು ಏನೇನೋ ಯೋಚಿಸಿ, ಯೋಚಿಸಿ ಯಾವುದೊಂದು ಬಗೆ ಹರಿಯದೆ, ಕೊನೆಗೆ ಅವಕಾಶ ದೊರೆತಾಗ ತನ್ನ ಮಗಳನ್ನೇ—

'ರಂಗೂ ನಿನ್ನ ಗಂಡ ಯಾಕೆ, ಒಂದು ಥರಾ ಇದಾನಲ್ಲಾ? ಏನು ವಿಷಯ? ಎಂದಿನಿಂದ ಹೀಗೆ ?'

—ಎಂದು ಪ್ರಶ್ನೆ ಮಾಡಿದ.

'ಇದು ಇವತ್ತಿನದೇನೂ ಅಲ್ಲ ಅಣ್ಣ, ನಾನು ಸಂಸಾರಕ್ಕೆ ಕಾಲಿಟ್ಟ ದಿನದಿಂದಲೂ ಹೀಗೇ ಇದೆ.'

—ಎಂದು ಉತ್ತರ ಕೊಟ್ಟಳು ರಂಗಮ್ಮ.

'ಅಂದರೆ ?'

'ಹೀಗೆ—ಇದು ಬೇಕು, ಅದುಬೇಡ ಅನ್ನುವುದೇ ಇಲ್ಲ. ಇಪ್ಪತ್ತನಾಲ್ಕು ಗಂಟೆಯೂ ಅವರ ಯೋಚನೆಯೇ ಅವರಿಗೆ.

ಮಗಳ ಮಾತುಕೇಳಿ ಶಾಮಣ್ಣನಿಗೆ ಹೃದಯ ಕುಸಿದಂತಾಯಿತು. ಗೌರಮ್ಮನಿಗೂ, ವೆಂಕಟದಾಸಪ್ಪನವರಿಗೂ ಇರುವ ಸಂಬಂಧ ನೆನಪಾಗಿ, ಅದು ದಂಪತಿಗಳಲ್ಲಿ ವಿರಸಕ್ಕೇನಾದರೂ ಕಾರಣವಾಯಿತೋ ಏನೋ ಎನಿಸಿ ಭಯವಾಯಿತು. ಆ ಭಯದಲ್ಲೇ—

'ನೀವಿಬ್ಬರೂ ವಿಶ್ವಾಸವಾಗಿದೀರಿ ತಾನೇ...'

—ಎಂದು ಕೇಳಿದ.

'ಹಾಗಂದ್ರೇನಣ್ಣ?'

'ಹಾಗಲ್ಲ—ಮೂರನೆಯೋರ ವಿಷಯ ಹಚ್ಚಿಕೊಂಡು ನೀವಿಬ್ಬರೂ ಪೂರ್ವ—ಪಶ್ಚಿಮ ಆಗಿದ್ದೀರೇನೋಂತ... ಅದೇನೂ ಇಲ್ಲ ತಾನೇ?'

'ಛಿ; ಎಂಥ ಮಾತಾಡ್ತಿ ಅಣ್ಣ—ಬಿಡ್ತು ಅನ್ನು. ಅವರ ವಿಷಯದಲ್ಲಿ ಹಾಗೆ ಮಾತಾಡಿದೋರ ಬಾಯಲ್ಲಿ ಹುಳು ಬೀಳುತ್ತೆ...'

—ತಂದೆಯ ಮಾತಿಗೆ ರಂಗಮ್ಮ ಕೊಂಚ ಖಾರವಾಗಿಯೇ ಉತ್ತರ ಕೊಟ್ಟಳು.

'ನಾನು ಹೇಳಿದ್ದು ಏನಂತ ನಿನಗೆ ಅರ್ಥವಾಯಿತೆ ರಂಗೂ...'

'ಎಲ್ಲ ಅರ್ಥವಾಯಿತಣ್ಣ... ಅಷ್ಟೂ ತಿಳಿಯೊಲ್ಲೆ? ಗೌರಕ್ಕನ ವಿಷಯದಲ್ಲಿ ನಮಾನಮಗೆ ಅಸಮಾಧಾನ ಆಗಿದೆನೋಂತ ಅಲ್ವೆ ನಿನಗೆ ಅನುಮಾನ?'

'ಹಾಗಾದ್ರೂ...ಅಸ್ವಾಭಾವಿಕ ಏನೂ ಅಲ್ಲ...'

'ಅದೇನೋ ನಾನು ಕಾಣೆ. ಆದರೆ ಅವರ ವಿಷಯ ಹಾಗಿಲ್ಲ. ಈ ಮನೆಗೆ ಬಂದು ವರ್ಷಕ್ಕೆ ಬಂತು. ಒಂದುದಿನನಾದ್ರೂ ಸಿಟ್ಟು— ಸೆಡವು ಇರಲಿ, ಗಟ್ಟಿಯಾಗಿ ಮಾತೂ ಕೂಡಾ ಆಡಿಸಿಲ್ಲ. ದೇವರಂಥ ಮನುಷ್ಯರು.'

'ಮತ್ತೆ ಹೀಗ್ಯಾಕೆ...'

'ಅದು ಯಾಕೋ ಅವರಿಗೇ ಗೊತ್ತು.'

'ಅಂದ್ರೆ... ಅಂದ್ರೆ... ಹೀಗೇಕೇಂತ ನೀನು ಕೇಳಲಿಲ್ವೋ...'

'ಒಂದು ದಿನ ಕೇಳಿದೆ.'

'ಅದಕ್ಕೇನು ಹೇಳಿದ.'

'ನನ್ನ ಪ್ರಶ್ನೆ ಕೇಳಿ ನಕ್ಕು ಬಿಟ್ರು— 'ನಾನು ಹೀಗ್ಯಾಕಿದೀನಿಂತ ನನಗೇ ಅರ್ಥವಾಗಿಲ್ಲ ಕಾಣೆ. ನನಗೆ ಅರ್ಥವಾದ ದಿನ ನಿನಗೂ ಹೇಳ್ತೀನಿ' ಅಂದ್ರು. ನಾನೂ ಸುಮ್ಮನಾಗಿ ಬಿಟ್ಟೆ.'

'ಮತ್ಯಾವತ್ತೂ ಏನೂ ಹೇಳಲಿಲ್ವೆ?'

'ಅವರೂ ಹೇಳಲೂ ಇಲ್ಲ, ನಾನು ಕೇಳಲೂ ಇಲ್ಲ.'

ರಾ—೮

'ಅದೆಲ್ಲಾ ತಿಳಿದುಕೊಳ್ಳದೆ ಹೋದಮೇಲೆ ನೀನು ಹೆಂಡತಿಯಾಗಿದ್ದು ಏನು ಸಾರ್ಥಕ ಆದ ಹಾಗಾಯಿತು?'

'ಅವರ ವಿಷಯ ನಿನಗೆ ಗೊತ್ತಿಲ್ಲ ಅಣ್ಣ, ಅವರ ಹೆಂಡತಿಯಾಗಿ ನಾನು ಅವರಿಗೆ ಉಪಕಾರ ಮಾಡಿಲ್ಲ; ಅಂಥವರ ಕೈಹಿಡಿದದ್ದು ನನ್ನ ಏಳೇಳು ಜನ್ಮದ ಭಾಗ್ಯ. ನೀನು ಕಂಡಿಲ್ಲ– ಒಂದೊಂದು ಸಲ ಅವರು ಪೂಜೆ ಮಾಡ್ತಾ ಕೂತಿದ್ರೆ, ಮಂಟಪದಲ್ಲಿರೋ ಅಮ್ಮನೋರೇ ಹೊರಗೆ ಬಂದು ಮಣೇ ಮೇಲೆ ಕೂತಿರೋ ಹಾಗಿರುತ್ತೆ. ಅಂಥವರ ಪಾದಸೇವೆ ಮಾಡೋ ಭಾಗ್ಯ ದೊರೆತದ್ದು ನನ್ನ ಪುಣ್ಯ. ನನ್ನ ಸೇವೆ ಅವರಿಗೆ ಒಪ್ಪಿಗೆಯಾದರೆ ಸಾಕು–ದೇವರೇ ಒಪ್ಪಿಕೊಂಡ ಹಾಗೆ. ಹಾಗಿರೋವಾಗ ನನಗ್ಯಾಕೆ ಇಲ್ಲದ ಉಸಾಬರಿ ಹೇಳು? ಅಲ್ಲದೆ, ಆ ಅತ್ತೆ, ಈ ಗಂಡ ನನಗೆ ಯಾವುದಕ್ಕೆ ಕಡಮೆ ಮಾಡಿದಾರೇಂತ ನಾನು ಇಲ್ಲದ್ದು ಹಚ್ಚಿಕೊಂಡು ಕೊರಗಲಿ.'

–ತನ್ನ ಗಂಡನ ಬಗ್ಗೆ ಪ್ರೇಮ– ವಿಶ್ವಾಸಗಳು ತುಂಬಿ ತುಳುಕುವ ಧ್ವನಿಯಲ್ಲಿ ಹೇಳಿದಳು ರಂಗಮ್ಮ.

ಆಕೆಯ ಮಾತನ್ನು ಕೇಳಿ ಶಾಮಣ್ಣನ ಹೃದಯಕ್ಕೆ ಹಾಲು ಹಾಕಿದಷ್ಟು ಸಮಾಧಾನವಾದರೂ, ನನ್ನ ಅಳಿಯ ಹೀಗೇಕಿದಾನೆ ಎಂಬ ಅಳುಕು ತೀರಲಿಲ್ಲ.

ಆ ಅಳುಕು–

ಹೇಗಾದರೂ ವೆಂಕಟದಾಸಪ್ಪನವರ ವಿಚಿತ್ರ ವರ್ತನೆಗೆ ಕಾರಣವನ್ನು ಅರಿಯಬೇಕೆಂಬ ಕುತೂಹಲ–

–ಎರಡೂ ಶಾಮಣ್ಣನನ್ನು ಕಾಡುತ್ತಿದ್ದವು. ಆದರೆ ತಾನಾಗಿ ವೆಂಕಟದಾಸಪ್ಪನವರನ್ನು ಪ್ರಶ್ನೆ ಮಾಡಿ, ತನ್ನನ್ನು ಕಾಡುತ್ತಿದ್ದ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲಾಗದೆ, ವೆಂಕಟದಾಸಪ್ಪನವರೇ ತಮ್ಮ ಮಾತಿನಲ್ಲಿ ತನ್ನ ಪ್ರಶ್ನೆಗೆ ಅವಕಾಶ ಒದಗಿಸಿಕೊಡಲಿ ಎಂದು ಕಾಯುತ್ತಿದ್ದ.

ಆದರೆ ಶಾಮಣ್ಣ ಅದಕ್ಕಾಗಿ ನಾಲ್ಕಾರು ದಿನ ಕಾದರೂ ಅದಕ್ಕೆ ಸರಿಯಾದ ಅವಕಾಶ ಒದಗಲಿಲ್ಲ.

ಕೊನೆಗೆ ಆತ ತನ್ನ ಊರಿಗೆ ಹೊರಡುವ ದಿನವೂ ಹತ್ತಿರವಾಯಿತು.

## ೭

ಶಾಮಣ್ಣ ದೇವೀಕೆರೆಗೆ ಬಂದು ನಾಲ್ಕಾರು ದಿವಸವಾಯಿತು.

ಆತ ದೇವೀಕೇರಿಯಲ್ಲಿ ಎಷ್ಟು ದಿವಸ ಇರಬಹುದು ಎಂದು ಸಿದ್ಧವಾಗಿ ಬಂದಿದ್ದನೋ ಅಷ್ಟು ದಿನವೂ ಕಳೆಯಿತು. ಅದರ ಮೇಲೂ ಎರಡು ದಿನ ಆಯಿತು.

ಆತ ದಿನದಿನವೂ ಊರಿಗೆ ಹೋಗುವ ಪ್ರಶ್ನೆ ಎತ್ತುತ್ತಿದ್ದ. ಆದರೆ ಆತನೊಂದಿಗೆ ರಂಗಮ್ಮನನ್ನು ಪರಶುರಾಮಪುರಕ್ಕೆ ಕಳಿಸುವ ವಿಷಯದಲ್ಲಿ ಲಕ್ಷ್ಮೀದೇವಮ್ಮನಿಗಾಗಲಿ, ವೆಂಕಟದಾಸಪ್ಪನವರಿಗಾಗಲಿ, ಏನೂ ಆತುರ ವಿದ್ದಂತಿರಲಿಲ್ಲ. ಲಕ್ಷ್ಮೀದೇವಮ್ಮನನ್ನು ಕೇಳಿದರೆ–

'ಆಯ್ತು– ಇವತ್ತು, ನಾಳೆ ಹೋಗುವಿರಂತೆ' ಎಂದು ಹಾರಿಕೆಯ ಉತ್ತರವನ್ನು ಕೊಡುತ್ತಿದ್ದಳೇ ಹೊರತು, ಇಂಥ ದಿನ ಹೊರಡಿ ಎಂದು ಖಚಿತವಾಗಿ ಹೇಳುತ್ತಿರಲಿಲ್ಲ. ಶಾಮಣ್ಣ ಆ ಹಾರಿಕೆಯ ಮಾತಿಗೆ ಒಪ್ಪದೆ–

'ಹಾಗೆಂದರೆ ಹ್ಯಾಗೆ? ಇಂಥ ದಿನ ಹೊರಡಿ ಅಂತ ಹೇಳಿ.'

–ಎಂದು ಬಲವಂತ ಮಾಡಿದರೆ–

'ನನ್ನದೇನಿದೆ ಶಾಮಣ್ಣ. ದಾಸಣ್ಣನನ್ನು ಕೇಳು. ಅವನು ಯಾವೊತ್ತು ಹೇಳಿದರೆ ಅವೊತ್ತು ಹೊರಡಿ.'

–ಎಂದು ಎಲ್ಲ ಭಾರವನ್ನೂ ಮಗನ ಮೇಲೆ ಹಾಕುತ್ತಿದ್ದಳು.

'ಆದು ಸರಿಯೇ' ಎಂದು ಕೊಂಡು ಶಾಮಣ್ಣ ವೆಂಕಟದಾಸಪ್ಪನವರನ್ನು ಪ್ರಶ್ನೆ ಮಾಡಿದರೆ, ಅದಕ್ಕೆ ಅವರು–

'ನನ್ನದೇನಿದೆ ಮಾವಯ್ಯ? ಮನೆಗೆ ಯಜಮಾನಿ ಅಮ್ಮ, ನನಗೆ ಯಜಮಾನಿ ನಿನ್ನ ಮಗಳು? ಅವರಿಬ್ಬರೂ ಒಪ್ಪಿದರೆ, ಈ ಗಳಿಗೇಲೆ ಕರೆದುಕೊಂಡು ಹೋಗು'.

–ಎಂದು ತಮಗೆ ಯಾವುದೂ ಸಂಬಂಧವಿಲ್ಲದವರಂತೆ ನಕ್ಕೂ ಹೇಳು ತ್ತಿದ್ದರು.

ಅವರಿಬ್ಬರೂ ಹಾಗೆ ಹೇಳಿದರೆ, ರಂಗಮ್ಮನಿಗೂ ಅಲ್ಲಿಂದ ಹೊರಡುವ ಆತುರವಿದ್ದಂತಿರಲಿಲ್ಲ.

'ಮನೇಕಡೆ ಅವಳು ಏನು ಮಾಡಿಕೊಂಡಿದ್ದಾಳೋ ಏನೋ. ನೀನಾದ್ರೂ ನಿನ್ನ ಗಂಡನಿಗೆ ಹೇಳಬಾರದೆ ರಂಗೂ.'

—ಎಂದರೆ—

'ಇರಲಿ ಬಿಡು ಅಣ್ಣ, ಅಷ್ಟ್ಯಾಕೆ ಆತುರ ಮಾಡ್ತೀಯ. ಕಳಿಸೋದಕ್ಕಂತೂ ಅವರು ಒಪ್ಪಿದಾರಲ್ಲ. ಎರಡು ದಿನ ಹಿಂಚು— ಮುಂಚು ಆದರೆ ಏನಾಯ್ತು. ಅವರು ಯಾವತ್ತು ಸಂತೋಷವಾಗಿ ಕಳಿಸಿಕೊಡ್ತಾರೋ ಅವತ್ತು ಹೋದರೇ ಎಲ್ಲರಿಗೂ ಹಿತವಾಗಿರುತ್ತೆ.'

—ಎಂದು ಆಕೆಯೂ ಅಡ್ಡಗೋಡೆ ಮೇಲೆ ದೀಪವಿಟ್ಟಂತೆಯೇ ಮಾತಾಡುತ್ತಿದ್ದಳು.

ಹೀಗೆ ಒಬ್ಬರ ಮೇಲೆ ಒಬ್ಬರು ಹಾಕಿ, ಒಬ್ಬೊಬ್ಬರೂ ಜಾರಿಕೊಳ್ಳುತ್ತಿದ್ದ ಆ ಮೂವರನ್ನು, ಹಿಡಿದು, ಇಂಥ ದಿನ ಹೊರಡುವುದೆಂದು ನಿಶ್ಚಯ ಮಾಡುವ ವೇಳೆಗೆ ಶಾಮಣ್ಣನಿಗೆ ಅಶ್ವಮೇಧಯಾಗ ಮಾಡಿದಂತಾಯಿತು.

ಕೊನೆಗೆ, ಜೋಯಿಸರೂ ಒಪ್ಪಿ, ಆ ದಿನ, ವಾರ, ತಿಥಿ, ನಕ್ಷತ್ರ ಎಲ್ಲಾ ಚೆನ್ನಾಗಿದೆಯೆಂದು ಒಪ್ಪಿದ ಮೇಲೆ ಆ ಶನಿವಾರ ಶಾಮಣ್ಣ, ರಂಗಮ್ಮನೊಂದಿಗೆ ಪ್ರಯಾಣ ಮಾಡುವುದೆಂದು ನಿಶ್ಚಯವಾಯಿತು.

ಶನಿವಾರದ ದಿನ ರಂಗಮ್ಮ ಶಾಮಣ್ಣನೊಂದಿಗೆ ಪರಶುರಾಮಪುರಕ್ಕೆ ಹೊರಡುವುದೆಂದು ನಿಶ್ಚಯವಾದುದರಿಂದ, ಆ ಹಿಂದಿನ ಶುಕ್ರವಾರ ಎಲ್ಲರೂ ಅಮ್ಮನವರಿಗೆ ಹಣ್ಣು ಕಾಯಿ ಮಾಡಿಸಿಕೊಂಡು ಬರಲೆಂದು ದೇವಸ್ಥಾನಕ್ಕೆ ಹೋಗಿ ಬರಬೇಕೆಂದು ಗೊತ್ತಾಯಿತು.

ಆ ನಿಶ್ಚಯದಂತೆಯೇ ಲಕ್ಷ್ಮೀದೇವಮ್ಮ ಶುಕ್ರವಾರದ ದಿನ ಬೆಳಿಗ್ಗೆ ಸೊಸೆಗೆ ಹೊಸ ಸೀರೆಯುಡಿಸಿ, ಬಳೆ ತೊಡಿಸಿ, ಆಕೆಯ ಕೈಲಿ ಐದು ಜನ ಮುತ್ತೈದೆಯರಿಗೆ ಕುಂಕುಮ, ವೀಳ್ಯ ಕೊಡಿಸಿದಳು. ಹಗಲು ಆ ಕಾರ್ಯಕ್ರಮ ಎಲ್ಲಾ ಮುಗಿಸಿಕೊಂಡು, ಸಂಜೆಗೆ ಅಮ್ಮನವರಿಗೆ ಹಣ್ಣು ಕಾಯಿ ಮಾಡಿಸಿಕೊಂಡು ಬರಲೆಂದು ಎಲ್ಲರೂ ದೇವಸ್ಥಾನಕ್ಕೆ ಹೊರಟರು.

ಜೊತೆಗೆ ಬಂದ ಸುವಾಸಿನಿಯರೊಂದಿಗೆ ಎಲ್ಲರೂ ದೇವಸ್ಥಾನವನ್ನು ತಲುಪಿದ ಬಳಿಕ, ಲಕ್ಷ್ಮೀದೇವಮ್ಮ, ವೆಂಕಟದಾಸಪ್ಪನವರಿಗೆ,–

'ದಾಸಣ್ಣಾ–ಇವತ್ತು ನೀನೇ ಶಾಸ್ತ್ರೋಕ್ತವಾಗಿ ಪೂಜೆಮಾಡಿ, ಅಮ್ಮ ನವರಿಗೆ ಹಣ್ಣು ಕಾಯಿ ಮಾಡಿಬಿಡು. ನಾಲ್ಕು ಹೂವು ಹೆಚ್ಚಾಗೇ, ಪೂಜೆ ಮಾಡು–ನನ್ನ ಸೊಸೆ. ಹಾಯಾಗಿ ಈ ಕಷ್ಟ ಕಳೆದುಕೊಂಡು, ಗಂಡು ಮಗುವಿನ ತಾಯಾಗಿ ಮನೆಗೆ ಬರಲಿ'.

–ಎಂದು ಹೇಳಿದಳು.

'ನಾನು ಮಾಡೋದು ಇದ್ದೇ ಇದೆ. ಈಗ ನಮ್ಮ ಪೈಕಿ ಎಲ್ಲಾರಿಗಿಂತ ದೊಡ್ಡೋರು ಶಾಮಣ್ಣ ಮಾವ. ಇವತ್ತು ಅವರೇ ಪೂಜೆ ಮಾಡಿ ನಮ್ಮೆಲ್ಲರಿಗೂ ಪ್ರಸಾದ ಕೊಡಲಿ.'

–ಎಂದರು ವೆಂಕಟದಾಸಪ್ಪ.

ಅವರ ಮಾತು ಲಕ್ಷ್ಮೀದೇವಮ್ಮ, ಶಾಮಣ್ಣ ಇಬ್ಬರಿಗೂ ಒಪ್ಪಿಗೆ ಯಾಗಲಿಲ್ಲ, ಶಾಮಣ್ಣ–

'ನನಗಿದೆಲ್ಲಾ ಅಭ್ಯಾಸವಿಲ್ಲ. ಸಂಧ್ಯಾವಂದನೆ ಮಂತ್ರಾನೇ ನನಗೆ ಮರೆತು ಹೋಗಿದೆ. ಇನ್ನು ಪೂಜೆ ಮಂತ್ರ ಎಲ್ಲಿ ನೆನಪಿರಬೇಕು.'

–ಎಂದು ಹೇಳಿ ಜಾರಿಕೊಳ್ಳಲು ಯತ್ನಿಸುತ್ತಿರುವಾಗಲೇ, ರಂಗಮ್ಮ ಪಿಸುಮಾತಿನಲ್ಲಿ, ಲಕ್ಷ್ಮೀದೇವಮ್ಮನಿಗೆ–

'ಅತ್ತೆ– ಇವತ್ತು ಅವರೇ ಪೂಜೆ ಮಾಡಿ ಕುಂಕುಮ ಪ್ರಸಾದ ಕೊಡಲಿ.'

—ಎಂದು ಹೇಳಿದಳು.

ರಂಗಮ್ಮ ಆ ಮಾತು ಬೇರೆ ಯಾರಿಗೂ ಕೇಳಿಸಬಾರದೆಂದು ಪಿಸುಧ್ವನಿ ಯಲ್ಲಿ ಹೇಳಿದರೂ, ಎಲ್ಲರಿಗೂ ಆಕೆಯ ಮಾತು ಕೇಳಿಸಿತು; ವೆಂಕಟದಾಸಪ್ಪನ ವರಿಗೂ. ಹೆಂಡತಿಯ ಆ ಮಾತನ್ನು ಕೇಳಿ ವೆಂಕಟದಾಸಪ್ಪನವರು, ರಂಗಮ್ಮನ ಕಡೆ ನೋಡಿದರು. ಆ ಹೊತ್ತಿಗೆ ಸರಿಯಾಗಿ ಆಕೆಯೂ ಅವರ ಕಡೆ ನೋಡಿದಳು. ಹಾಗೆ ನೋಡಿದಾಗ ರಂಗಮ್ಮನ ಕಣ್ಣಂಚಿನಲ್ಲಿ ಹೊಳೆಯುತ್ತಿದ್ದ ಕಣ್ಣೀರ ಹನಿ ವೆಂಕಟದಾಸಪ್ಪನವರಿಗೂ ಕಾಣಿಸಿತು.

ರಂಗಮ್ಮನ ಕಣ್ಣಂಚಿನಲ್ಲಿ ಹೊಳೆಯುವ ಕಣ್ಣೀರ ಹನಿಯನ್ನು ಕಂಡು

ವೆಂಕಟದಾಸಪ್ಪನವರಿಗೆ, ಥಟಕ್ಕನೆ, ಹಿಂದಿನ ರಾತ್ರಿ ತಮ್ಮಿಬ್ಬರಿಗೂ ನಡೆದ ಮಾತುಕಥೆ ನೆನಪಾಯಿತು.

* * *

ಹಿಂದಿನ ರಾತ್ರಿ—

ಎಲ್ಲರದೂ ಊಟವಾದ ಬಳಿಕ, ಮನೆಗೆಲಸಗಳನ್ನೆಲ್ಲವನ್ನೂ ತೀರಿಸಿ ಕೊಂಡು, ಮಲಗಲು ಬಂದಾಗ, ರಂಗಮ್ಮನ ಮುಖದಲ್ಲಿ ಎಂದಿನ ಗೆಲುವಿರದೆ, ಮುಖದಲ್ಲಿ ಏನೋ ದುಗುಡ, ಕಣ್ಣಲ್ಲಿ ಖಿನ್ನತೆಗಳಿದ್ದವು. ಗಂಡನೊಂದಿಗೆ ಏನೋ ಮಾತನಾಡಬೇಕೆಂಬ ಭಾವ ಆಕೆಯ ತುಟಿಯಂಚಿನವರೆಗೂ ಬಂದು ತಡೆದು ನಿಂತಿತ್ತು.

ಆದರೆ ಗಂಡ ಮಾತನಾಡಿಸದೆ, ತಾನಾಗಿಯೇ ಎಂದೂ ಗಂಡನನ್ನು ಮಾತನಾಡಿಸಿ ಅಭ್ಯಾಸವಿರದ ರಂಗಮ್ಮ, ಆ ದಿನವೂ ಯಾವ ವಿಷಯವನ್ನೂ ಪ್ರಸ್ತಾಪ ಮಾಡದೆ, ವೆಂಕಟದಾಸಪ್ಪನವರಿಗೆ ಕುಡಿಯಲು ಹಾಲು ಕೊಟ್ಟು, ಅವರು ಹಾಲು ಕುಡಿದ ಬಳಿಕ ಅಡಿಕೆಯನ್ನು ಕೊಟ್ಟು ವೀಳ್ಯಕ್ಕೆ ಸುಣ್ಣ ಹಚ್ಚ ಲಾರಂಭಿಸಿದಳು.

ರಂಗಮ್ಮ ಮಲಗುವ ಮನೆಯೊಳಕ್ಕೆ ಕಾಲಿಟ್ಟಾಗ, ಆಕೆಯ ಮುಖವನ್ನು ನೋಡಿದ ಗಳಿಗೆಯಿಂದಲೂ, ವೆಂಕಟದಾಸಪ್ಪನವರಿಗೆ ಆಕೆಯ ಮನಸ್ಸು ಎಂದಿ ನಂತೆ ತಿಳಿಯಾಗಿರದೆ, ಏಕೋ ಕಲಕಿದಂತಾಗಿದೆ ಎನಿಸಿ, ಎಲ್ಲಕಡೆಯಲ್ಲೂ ಸಂತೋಷಕ್ಕೇ ಅನುಕೂಲವಾದ ವಾತಾವರಣವಿರುವಾಗ, ಈಕೆ ದುಗುಡ ಗೊಳ್ಳಲು ಏನು ಕಾರಣ ಎಂದು ಯೋಚಿಸಲಾರಂಭಿಸಿದ್ದರು. ಆ ಮಾತು ಮನಸ್ಸಿಗೆ ಅನಿಸಿಯೂ, ಅವರೂ ರಂಗಮ್ಮನನ್ನು ಹೀಗೇಕಿದೀಯ ಎಂದು ಕೇಳಲಿಲ್ಲ. ಅವರೂ ತಮ್ಮ ಯೋಚನೆಯನ್ನು ಒಳಗೇ ನುಂಗಿಕೊಂಡು, ಸುಮ್ಮನಿದ್ದರು.

ಆದರೆ ವೀಳ್ಯಕ್ಕೆ ಸುಣ್ಣವನ್ನು ಹತ್ತಿಸಿ, ಗಂಡನಿಗೆ ಎಲೆಯನ್ನು ಮಡಚಿ ಕೊಡುತ್ತಿದ್ದ ರಂಗಮ್ಮನ ಕಣ್ಣಿನಲ್ಲಿದ್ದ ಖಿನ್ನತೆಯು ಮೋಡ ಗಳಿಗೆಗಳಿಗೆಗೆ ದಟ್ಟ ವಾಗಿ, ಕೊನೆಗೆ ಹನಿಯೊಡೆದಾಗ ಏಕೆಂದು ಕೇಳದೆ ಇರುವುದು ಅಸಾಧ್ಯವಾಗಿ, ತಮ್ಮ ಹತ್ತಿರದಲ್ಲಿದ್ದ ಆಕೆಯ ಕೈಯನ್ನು ಮೃದುವಾಗಿ ನೇವರಿಸಿ—

'ಏಕೆ ರಂಗೂ ಹೀಗಿದೀಯಾ?'

—ಎಂದು ಕೇಳಿದರು.

ಅವರ ಮಾತನ್ನು ಕೇಳಿ ರಂಗಮ್ಮನ ದುಃಖ ಸಹನೆಯ ಆಣೆಕಟ್ಟು ಕಿತ್ತು ಹೋಗಿ, ಸುಣ್ಣ ಹಚ್ಚುತ್ತಿದ್ದ ಎಲೆಯನ್ನು ಹಾಗೇ ಕೈಲಿ ಹಿಡಿದೇ ಅವರ ಎದೆಯ ಮೇಲೆ ಮುಖವಿಟ್ಟು ಬಿಕ್ಕಿ ಬಿಕ್ಕಿ, ಸದ್ದಾಗದಂತೆ ಅಳಲಾರಂಭಿಸಿದಳು. ವೆಂಕಟದಾಸಪ್ಪನವರ ಎದೆಯ ಮೇಲೆ, ರಂಗಮ್ಮನ ಕಣ್ಣೀರು ಕಾಲುವೆಯಾಗಿ ಹರಿಯಿತು.

ರಂಗಮ್ಮನ, ಕಾರಣವರಿಯದ ಕಣ್ಣೀರಿನಿಂದ ತೊಯ್ದು ವೆಂಕಟದಾಸಪ್ಪ ನವರ ಎದೆಗೆ ಉರಿ ಹೊತ್ತಿಸಿದಂತಾಗಿ, ಆ ತಾಪವನ್ನು ತಾಳಲಾಗದೆ, ತಮ್ಮ ಎದೆಯ ಮೇಲಿದ್ದ ರಂಗಮ್ಮನ ಮುಖವನ್ನು ಹಿಡಿದೆತ್ತಿ, ಆಕೆಯ ಕಣ್ಣುಗಳಿಂದ ಹರಿಯುತ್ತಿದ್ದ ಅಶ್ರುಧಾರೆಯನ್ನು, ಕೆನ್ನೆಯ ಮೇಲಿದ್ದ ಕಣ್ಣೀರಿನ ತೇವವನ್ನು ಮೃದುವಾಗಿ ಒರೆಸಿ, ತಲೆಗೂದಲನ್ನು ನೇವರಿಸುತ್ತಾ—

'ಏನಾಯ್ತು ರಂಗೂ? ಇದ್ಯಾಕಿವತ್ತು ಹೀಗೆ ಅಳ್ತಾ ಇದೀಯಾ? ಅಮ್ಮ ಏನಾದ್ರೂ ಅಂದಳೆ?'

—ಎಂದು ಕೇಳಿದರು.

ದುಃಖದಿಂದ ಗಂಟಲು ಬಿಗಿದ ರಂಗಮ್ಮ ಆ ಪ್ರಶ್ನೆಗೆ ಮಾತಿನ ಉತ್ತರ ಕೊಡಲಾಗದೆ, ತಲೆಯಾಡಿಸಿ, 'ಅದು ತನ್ನ ದುಃಖಕ್ಕೆ ಕಾರಣವಲ್ಲ' ಎಂದು ಸೂಚಿಸಿದಳು.

'ಹಾಗಾದರೆ—ಮತ್ತೇಕೆ? ಸಂತೋಷವಾಗಿ, ನಗನಗ್ತಾ ಇರಬೇಕಾದ ಹೊತ್ತಿನಲ್ಲಿ, ಹೀಗೆ ಕಣ್ಣೀರು ಹಾಕಿ ಮೈ ಬಾಡಿಸೋದೇ? ಚೆನ್ನಾಯ್ತು. ಈಗ ಕಣ್ಣೀರು ಹಾಕೋ ಅಂಥೋದು ಏನಾಯ್ತು?'

'ಏ...ಏ...ನೂ...ಇ...ಲ್ಲ...'

'ಮತ್ತೆ? ಏನೂ ಇಲ್ಲದೆ ಹೋದರೆ ಸುಮ್ಮಸುಮ್ಮನೆ ಅಳ್ತಿದೀಯಾ?'

'ಊ...ಹೂ...'

'ಹಾಗಾದ್ರೆ—ನಿನ್ನ ಮನಸ್ಸಿನಲ್ಲಿರೋದನ್ನ ನನಗೆ ಹೇಳೋದು ಇಷ್ಟ ಇಲ್ಲವೇ?...'

'ನಿಮಗಲ್ಲದೆ ಇನ್ಯಾರ ಮುಂದೆ ಹೇಳಿಕೊಳ್ಳಲಿ? ನೀವಲ್ಲದೆ ನನಗಿನ್ನು ಯಾರಿದಾರೆ?'

'ಹಾಗಿದ್ರೆ—ಅದೇನು ಬೇಕೋ ಹೇಳು? ನಗುನಗುತ್ತಾ ಕೇಳಿದರೆ, ನೀನು ಕೇಳಿದ್ದನ್ನು ಮಾಡಿಕೊಡೊಲ್ಲಾಂತ ನಾನು ಯಾವತ್ತಾದರೂ ಹೇಳಿದೇನೆಯೋ? ಅದಲ್ಲದೆ ಇದು ನೀನು ಕಣ್ಣೀರು ಹಾಕೋ ಕಾಲವೇ? ನೀನು ಎಷ್ಟೆಷ್ಟು ನಗತಾ ನಲೀತಾ ಇದ್ದರೆ, ಅಷ್ಟಷ್ಟೂ ಒಳ್ಳೇದು. ಅದು ಬಿಟ್ಟು ಇಲ್ಲದ ಕೊರಗು ಹಚ್ಚಿಕೊಂಡು, ನಿನ್ನ ಮೈ ಬಳಲಿಸಿದರೆ, ನಿನ್ನ ಮೈಯೇ ಅಲ್ಲ, ನಿನ್ನ ಗರ್ಭದಲ್ಲಿರೋದೂ ಬಳಲುತ್ತೆ. ಅದು ಒಳ್ಳೇದಲ್ಲ.'

'ನನಗೆ...ನನಗೆ...ಅದರದೇ ಭಯ...'

—ರಂಗಮ್ಮ ತೊದಲುತ್ತಾ, ತಡವರಿಸುತ್ತಾ ಹೇಳಿದಳು.

'ಭಯ?— ಯಾವದರದು?'

'ನಾಳೆ... ಊರಿಗೆ ಹೋಗ್ತೀನಲ್ಲಾ...'

'ನಿಜ—ತೌರು ಮನೆಗೆ ಹೋಗುವುದಕ್ಕೆ ಸಂತೋಷಪಡದೆ. ಭಯಪಡ ಬೇಕೆ? ಹುಚ್ಚಿ! ತೌರು ಮನೆಯಿಂದ ಅತ್ತೆ ಮನೆಗೆ ಹೋಗುವಾಗ ಹೇಗೋ ಏನೋ ಅಂತ ಭಯಪಡೋರನ್ನ ನಾನು ನೋಡಿದೇನೆಯೇ ಹೊರತು, ನಿನ್ನ ಹಾಗೆ ತೌರುಮನೆಗೆ ಹೋಗೋಕೆ ಅತ್ತು ಕಣ್ಣೀರು ಹಾಕೋರು ಯಾರನ್ನೂ ನಾನು ನೋಡಲಿಲ್ಲ...'

'ನಿಮ್ಮನ್ನು...ಬಿಟ್ಟು ಹೋಗಬೇಕಲ್ಲಾ...'

ರಂಗಮ್ಮ ಹೇಳಿದುದನ್ನು ಕೇಳಿ ವೆಂಕಟದಾಸಪ್ಪನವರಿಗೆ ನಗು ಬಂತು.

'ಅಯ್ಯೋ ಹುಚ್ಚಿ? ನನ್ನ ಬಿಟ್ಟು ಹೋಗಬೇಕಲ್ಲಾಂತ ಅಳ್ತಾ ಇದೀಯಾ? ಬಿಟ್ಟು ಎಲ್ಲಿಗೆ ಹೋಗ್ತೀ, ಎಷ್ಟು ದಿನ ಹೋಗ್ತಿ? ಅಥವಾ ನಾನೇನಾದ್ರೂ ಜಗಳ ಆಡಿ ನೀನು ಬೇಡಾಂತ ಮನೆ ಬಿಟ್ಟು ಕಳಿಸ್ತಾ ಇದೇನೆಯೋ? ಇಂಥ ಹೊತ್ತಿನಲ್ಲಿ ನಿನ್ನ ಕಳಿಸಬೇಕಲ್ಲಾಂತ ನನಗೂ ವ್ಯಥೆಯೇ. ಆದರೆ ಈ ಹೊತ್ತಿನಲ್ಲಿ ನೀನು ತೌರಿಗೆ ಹೋಗೋದೂ ಚೆನ್ನ: ನಾವು ನಗ ನಗ್ತಾ ಕಳಿಸಿಕೊಡೋದೂ ಲಕ್ಷಣ. ಅದಕ್ಕೋಸ್ಕರಾನೇ ಅಮ್ಮನೂ ತನ್ನ ಆಸೆ—ಪ್ರೀತಿ ಎಲ್ಲಾ ಬಿಟ್ಟು, ನಿನ್ನ ಕಳಿಸಲಿಕ್ಕೆ ಒಪ್ಪಿದಾಳೆ. ಹಾಗಿರೋವಾಗ ಸಂತೋಷವಾಗಿ ಹೋಗಿ ಬರದೆ, ಪ್ರಪಂಚ ಮುಳುಗಿ ಹೋದೋಳ ಹಾಗೇ ಅಳ್ತಿದೀಯಲ್ಲಾ? ನಾಳೆ ಹೋದರೆ— ಇನ್ನೇನು, ನಾಲ್ಕೈದು ತಿಂಗಳು— ಅಬ್ಬಬ್ಬಾ ಅಂದರೆ— ಆರು ತಿಂಗಳು— ಮತ್ತೆ ಇಲ್ಲಿಗೇ ಬಂದೇ ಬರುತ್ತೀ

ಯಲ್ಲಾ. ಅಷ್ಟು ದಿನ ಬಿಟ್ಟಿರಬೇಕು ಅಂತ ಯೋಚನೆಯಾದರೆ, ಮಧ್ಯೆ ಮಧ್ಯೆ ನಾನೂ ಬಂದು ನೋಡಿಕೊಂಡು ಬರ್‍ತೀನಿ. ನಿನ್ನ ಅಲ್ಲಿಗೆ ಕಳಿಸಿಬಿಟ್ಟು, ನಾನಿಲ್ಲಿ ಥಣ್ಣಗೆ ಇರ್‍ತೀನೆಯೇ? ಇಂಥ ಯೋಚನೆ ಎಲ್ಲಾ ಇವತ್ತಿಗೆ ಬಿಟ್ಟು ಬಿಡು. ಇನ್ನು ಮೇಲೆ ಯಾವತ್ತೂ ಹೀಗೆ ಕಣ್ಣೀರು ಹಾಕಬಾರದು.'

—ಎಂದು ವೆಂಕಟದಾಸಪ್ಪ ಮಡದಿಯನ್ನು ಸಂತೈಸಿದರು.

ವೆಂಕಟದಾಸಪ್ಪನವರ ಮಾತಿನಿಂದ ರಂಗಮ್ಮನ ದುಃಖ ಶಮನವಾದರೂ, ಆಕೆಯ ಮೊಗವನ್ನು ಕವಿದ ಚಿಂತೆಯು ಮೋಡ ಮಾತ್ರ ತೊಲಗಲಿಲ್ಲ. ಆ ಚಿಂತೆಯಲ್ಲಿ, ಸೆರಗಿನ ತುದಿಯನ್ನು ಬೆರಳಿಗೆ ಸುತ್ತುತ್ತಾ ತಲೆ ತಗ್ಗಿಸಿ ಕುಳಿತಿದ್ದಳು. ಅದನ್ನು ಕಂಡು ವೆಂಕಟದಾಸಪ್ಪನವರೇ—

'ಮತ್ತೇನ್ನೇನು ಯೋಚನೆ ರಂಗೂ?'

—ಎಂದು ಕೇಳಿದರು.

'ಈಗ ಹೋದ್ರೆ...ಹೋದ್ರೆ...'

'ಹೂ. ಹೋದ್ರೆ?—'

'ಮತ್ತೆ ನಿಮ್ಮನ್ನು ನೋಡ್ತೀನೋ ಇಲ್ವೋ...ಹೆಣ್ಣುಜೀವದ್ದು ಯಾವ ನಂಬಿಕೆ? ...'

ಆ ಮಾತು ಆಡುತ್ತಾ ಆಡುತ್ತಾ ಮತ್ತೆ ರಂಗಮ್ಮನ ಕಣ್ಣಲ್ಲಿ ಹನಿ ಒಡೆಯಿತು.

ಈ ಬಾರಿ ರಂಗಮ್ಮನ ಹೃದಯವನ್ನು ಯಾವ ಭೀತಿ ಬಾಧಿಸುತ್ತಿದೆ ಯೆಂಬುದು ವೆಂಕಟದಾಸಪ್ಪನವರಿಗೆ ಅರ್ಥವಾಯಿತು.

ಹೆಣ್ಣುಜೀವ ಒಮ್ಮೊಮ್ಮೆ ಗರ್ಭ ಧರಿಸಿದಾಗಲೂ, ತಾಯಾಗುವ ಸುಖವನ್ನು ಅನುಭವಿಸುವುದೇ ಅಲ್ಲದೆ, ಸಾವಿನೊಂದಿಗೆ ಸರಸವಾಡುತ್ತಾಳೆ. ಒಮ್ಮೊಮ್ಮೆ ಗರ್ಭವತಿಯಾದಾಗಲೂ ಆಕೆಯ ಬದುಕಿನ ಉಯ್ಯಾಲೆ ತೂಗಲಾರಂಭಿಸುತ್ತದೆ. ಆ ತೂಗಾಟದಲ್ಲಿ ಆಕೆ ಉಳಿದರೂ ಉಳಿಯಬಹುದು; ಇಲ್ಲವೇ ಸಾವಿನ ಬಾಯಿಗೆ ಉರುಳಿದರೂ ಉರುಳಬಹುದು. ಈ ಭಯ ಹೆಣ್ಣಾಗಿ ಹುಟ್ಟಿದ ಯಾರನ್ನೂ ಬಿಟ್ಟಿದ್ದಲ್ಲ.

ತನ್ನ ಜೀವಮಾನ ಕಾಲದಲ್ಲಿ ಪ್ರತಿಯೊಬ್ಬ ಹೆಣ್ಣೂ ಅನುಭವಿಸಬೇಕಾದ ಆ ಭಯ ಇಂದು ರಂಗಮ್ಮನದಾಗಿದ್ದಿತು.

ಆಕೆಯ ಭಯ ಅರಿವಾಗಿ, ವೆಂಕಟದಾಸಪ್ಪನವರ ಹೃದಯಕ್ಕೂ ಆ ಚಳಿಯ ಅನುಭವವಾಗಿ, ಒಂದುಗಳಿಗೆ ಏನೂ ಉತ್ತರ ಕೊಡಲೂ ತೋಚಲಿಲ್ಲ. ಎಂತಲೇ ಸುಮ್ಮನೆ ಕುಳಿತರು.

ಅವರು ಸುಮ್ಮನಿದ್ದುದನ್ನು ಕಂಡು ರಂಗಮ್ಮನ ಭಯ ಮತ್ತಷ್ಟು ಹೆಚ್ಚಿ, ಹೆದರಿದ ಹಕ್ಕಿಯಂತೆ ಗಂಡನನ್ನು ತಬ್ಬಿ ಕುಳಿತಳು. ಕೊನೆಗೆ ವೆಂಕಟದಾಸಪ್ಪನವರೇ ತಮ್ಮ ಹೃದಯದಿಂದ ಆ ಭೀತಿಯನ್ನು ಬಲವಂತವಾಗಿ ಹೊರದೂಡಿ, ಇಲ್ಲದ ನಗುವನ್ನು ಮುಖದ ಮೇಲೆ ತಂದುಕೊಂಡು—

'ಇದೆಂಥ ವಿಚಿತ್ರಭಯ ರಂಗೂ, ನಿನಗೆ. ಹತ್ತು ಹತ್ತು ಮಕ್ಕಳನ್ನು ಹಡೆದವರೆಲ್ಲಾ ಇನ್ನೂ ಗಟ್ಟಿಮುಟ್ಟಾಗಿಲ್ಲವೇ? ಹಾಗೆ ಮಕ್ಕಳನ್ನು ಹಡೆದವರೆಲ್ಲಾ ಹೋಗೋ ಹಾಗಿದ್ರೆ, ಜಗತ್ತಿನಲ್ಲಿ ತಾಯಿ ಅನ್ನಿಸಿಕೊಳ್ಳುವ ವಸ್ತುವೇ ಇರುತ್ತಿರಲಿಲ್ಲ. ಬಿಡು– ಇಂಥ ಅಲ್ಲಸಲ್ಲದ ಭಯ ಹಚ್ಚಿಕೊಳ್ಳಬಾರದು.'

—ಎಂದರು.

'ಆದರೂ...ಆದರೂ...ಎಷ್ಟೋ ಜನ...'

'ನಿಜ –ಅದೃಷ್ಟ ಕಡಮೆಯಾದೋರು, ಆಯುಸ್ಸು ತುಂಬಿದೋರು ಹೋಗ್ತಾರೆ–ಒಂದು ಕಥೆ ಕೇಳಿದೀಯಾ ರಂಗೂ...'

'ಯಾವುದು?'

'ಒಂದು ಸಲ ಇಬ್ಬರು ಸ್ನೇಹಿತರು ಬಹಳ ದಿನದ ಮೇಲೆ ಕಲೆತರಂತೆ, ಆ ಇಬ್ಬರ ಪೈಕಿ ಒಬ್ಬಾತ ಸಮುದ್ರ ವರ್ತಕ; ಇನ್ನೊಬ್ಬ ಊರಿನ ವ್ಯಾಪಾರಿ. ಬಹಳ ದಿನದ ಮೇಲೆ ಒಬ್ಬರನ್ನೊಬ್ಬರು ಕಂಡ ಸ್ನೇಹಿತರಿಬ್ಬರು, ಆ ಮಾತು, ಈ ಮಾತು ಆಡುತ್ತಾ, ಹೀಗೇ ಸಾವಿನ ವಿಷಯ ಮಾತನಾಡಲಿಕ್ಕೆ ಆರಂಭಿಸಿದರು. ಊರಿನ ವ್ಯಾಪಾರಿ ಸಮುದ್ರ ವರ್ತಕನನ್ನು ಕೇಳಿದ–' ನಿಮ್ಮ ಮುತ್ತಾತ ಎಲ್ಲಿ ಸತ್ತ?' 'ಸಮುದ್ರದಲ್ಲಿ' ಎಂದು ಸಮುದ್ರಶೆಟ್ಟಿ ಉತ್ತರ ಕೊಟ್ಟ. 'ತಾತ', 'ಅವನೂ ಸಮುದ್ರದಲ್ಲೇ?'. 'ನಿಮ್ಮ ಅಪ್ಪ?', 'ಅವನೂ ಸಮುದ್ರದಲ್ಲೇ?'. 'ಸಮುದ್ರಶೆಟ್ಟಿ ಹೇಳಿದುದನ್ನು ಕೇಳಿ ಪಟ್ಟಣ ಶೆಟ್ಟಿ 'ಅಲ್ಲಯ್ಯಾ, ನಿನ್ನ ಮುತ್ತಾತ, ತಾತ, ಅಪ್ಪ ಎಲ್ಲರೂ ಸಮುದ್ರದಲ್ಲೇ ಸತ್ತರೂ, ನಿನಗಿನ್ನೂ ಆ ಸಮುದ್ರದಲ್ಲಿ ಹೋಗೋ ಆಸೆ ಬಿಟ್ಟಿಲ್ಲವಲ್ಲ. ಹೀಗೆ ಸಾವಿನೊಂದಿಗೆ ಸರಸವಾಡಬಹುದೇ?' ಎಂದು ಕೇಳಿದನಂತೆ. ಅದಕ್ಕೆ ಸಮುದ್ರ

ಶೆಟ್ಟಿ, ಪಟ್ಟಣಶೆಟ್ಟಿಯನ 'ನಿಮ್ಮ ಅಪ್ಪ ಎಲ್ಲಿ ಸತ್ತ?' ಎಂದು ಕೇಳಿದ. 'ಹಾಯಾಗಿ ಹಾಸಿಗೆ ಮೇಲೆ ಮಲಗಿಕೊಂಡು' ಎಂದ ಪಟ್ಟಣಶೆಟ್ಟಿ. 'ನಿಮ್ಮ ತಾತ?,' 'ಅವನೂ ಅಷ್ಟೆ.' 'ಮುತ್ತಾತ?'' 'ಅವನೂ ಅಷ್ಟೆ.' 'ಅಲ್ಲಯ್ಯ ಹಾಸಿಗೆ ಮೇಲೆ ಮಲಗಿ ಮಲಗಿ ನಿನ್ನ ಪೂರ್ವಿಕರೆಲ್ಲಾ ಸತ್ತು ಹೋದರೂ, ನೀನಿನ್ನೂ ನಿರ್ಭಯವಾಗಿ ಹಾಸಿಗೆ ಮೇಲೆ ಮಲಗಿಕೋತೀ ಯಲ್ಲಾ, ಅದು ಹೇಗೆ ಸಾಧ್ಯವಾಗುತ್ತೆ?' ಅಂತ ಸಮುದ್ರಶೆಟ್ಟಿ, ಪಟ್ಟಣ ಶೆಟ್ಟಿಯನ ಪ್ರಶ್ನೆ ಮಾಡಿದ. ಅದಕ್ಕೆ ಪಟ್ಟಣಶೆಟ್ಟಿ ಪೆಚ್ಚಾಗಿ ಏನೂ ಉತ್ತರ ಕೊಡಲಾಗದೆ ಹೋದ. ಈ ಕಥೆ ಅರ್ಥ ಗೊತ್ತಾಯ್ತೆ ರಂಗೂ...'

'ಏನು?'

'ಹುಟ್ಟಿದ ಮನುಷ್ಯ ಎಂದಿದ್ದರೂ ಸಾಯಲೇ ಬೇಕು: ಅದು ಕಟ್ಟಿಟ್ಟ ಬುತ್ತಿ. ಯಾರಿಗೆ ಯಾವಾಗ, ಯಾವ ರೂಪದಲ್ಲಿ ಮೃತ್ಯು ಬರಬೇಕೆಂದು ಬ್ರಹ್ಮ ನಿಶ್ಚಯ ಮಾಡಿದಾನೋ, ಆ ದಿನ, ಹಾಗೆ, ಆ ಮನುಷ್ಯ ಸಾಯಲೇ ಬೇಕು. ಅದನ್ನು ಯಾರಿಂದಲೂ ತಪ್ಪಿಸುವುದು ಸಾಧ್ಯವಿಲ್ಲ. ಇದು ನಿಜ ತಾನೇ?'

'ಹೂ'

'ಹಾಗಿರೋವಾಗ—ಯಾರೋ ತಾಯಿ ಹಡೆದು ಸತ್ತಳು ಅಂತ, ಗರ್ಭವತಿಯಾದವರೆಲ್ಲಾ, 'ನಾವೂ ಹಾಗೇ ಸಾಯುತ್ತೇವೆ' ಅಂತ ಹೆದರಿ ಕೊಂಡರೆ, ಅದು ನಮ್ಮ ಹುಚ್ಚುತನವಾಗೋದಿಲ್ಲವೇ? ಸಾವಿಗೆ ಹೆದರಿ ಕೊಂಡವರು ಬದುಕುವುದೇ ಸಾಧ್ಯವಿಲ್ಲ ರಂಗೂ. ಅದು ಎಂದಾದರೂ ಬರಲಿ ಅಂತ ನಿರ್ಭಯವಾಗಿರಬೇಕು...'

'ಅದೇನೋ ನಿಜಾನೇ...ಆದರೂ...'

'ಹೂ...ಏನು ಆದರೂ...'

'ನನಗೆ...ನನಗೆ...ಇಷ್ಟು ಬೇಗ ಸಾಯೋಕೆ ಮನಸ್ಸಿಲ್ಲ...'

'ನಿಜ ನಿನ್ನ ಕಳಕೊಳ್ಳೋಕೆ ನಾನೂ ಸಿದ್ಧನಾಗಿಲ್ಲ. ನಿನಗೆ ನಾನು ಎಷ್ಟು ಬೇಕೊ, ನನಗೆ ನೀನೂ ಅಷ್ಟೇ ಬೇಕು ರಂಗೂ. ಆದರೆ ಸಾವು-ಬದುಕು, ಎರಡೂ ನಮ್ಮ ಅಧೀನದಲ್ಲಿಲ್ಲ; ಎರಡೂ ಆ ಮಹಾತ್ಮಾಯಿಯ

ವಶದಲ್ಲಿದೆ. ದಿನವೂ ಆಕೆಯನ್ನು ಪ್ರಾರ್ಥನೆ ಮಾಡು. ಆಕೆ, ನಿನ್ನ ಪೂಜೆಯಿಂದ ಪ್ರೀತಳಾದರೆ ಏನೂ ಕೆಡಕಾಗುವುದಿಲ್ಲ.'

'ಆದರೆ...ಆದರೆ...'

'ಏನು ಆದರೆ?'

'ಅಮ್ಮನವರು ನನ್ನ ಮಾತು ಕೇಳ್ತಾರೆ ಅನ್ನೋದು ನನಗಷ್ಟು ನಂಬಿಕೆ ಇಲ್ಲ. ಅದಕ್ಕೇ...ಅದಕ್ಕೇ...'

'ಹೂ—'

'ನನ್ನ ದೇವರನ್ನೇ ನಾನು ಬೇಡಿಕೋತೀನಿ'

'ಬೇಡಿಕೋ—ಅದಕ್ಕೇನು? ದೇವರುಗಳಲ್ಲಿ ನನ್ನ ದೇವರು, ನಿನ್ನ ದೇವರು ಎಂದಿದೆಯೇ? ಎಲ್ಲಾ ನಾಮಭೇದ—ರೂಪಭೇದ ಮಾತ್ರ; ಆದರೆ ಆದಿಶಕ್ತಿ ಒಬ್ಬಳೇ. ನಾವು ಯಾರಿಗೆ ನಮಸ್ಕರಿಸಿದರೂ, ಆ ನಮಸ್ಕಾರವನ್ನು ಸ್ವೀಕರಿಸುವವಳು ಆಕೆಯೇ. ಆಯಿತು—ನಿನ್ನ ದೇವರನ್ನೇ ಬೇಡಿಕೊ.'

—ರಂಗಮ್ಮನ ಮಾತು ಕೇಲಿ ವೆಂಕಟದಾಸಪ್ಪನವರು ನಗುತ್ತಾ ಹೇಳಿದರು.

ಆದರೆ ಅವರ ನಗುವನ್ನು ಕಂಡು, ರಂಗಮ್ಮ ನಗಲಿಲ್ಲ. ಅದಕ್ಕೆ ಪ್ರತಿಯಾಗಿ ಆಕೆಯ ಮುಖ ಇದ್ದದ್ದೂ ಗಂಭೀರವಾಯಿತು.

'ಹಾಗಾದರೆ....ಹಾಗಾದರೆ.... ನನ್ನ ದೇವರನ್ನೇ ಬೇಡಿಕೊಳ್ಳಲೇ?'

'ಬೇಡಿಕೋ.'

ನೀವೇನೂ ಅಂದುಕೊಳ್ಳುವುದಿಲ್ಲತಾನೇ?'

'ಖಂಡಿತವಾಗಿಯೂ ಇಲ್ಲ'

'ಹಾಗಾದರೆ— 'ಈ ಹೊತ್ತಿನಲ್ಲಿ ನನಗೇನೂ ಅಪಾಯವಾಗದಿರಲಿ' ಅಂತ. ನೀವೇ ಅಮ್ಮನವರನ್ನು ಪೂಜೆಮಾಡಿ. ನನ್ನ ಹಣೆಗೆ ಕುಂಕುಮ ಪ್ರಸಾದ ಇಟ್ಟುಬಿಡಿ. ಅಷ್ಟಾದರೆ, ನನಗೆ ನಂಬಿಕೆಯಾಗುತ್ತೆ.'

—ಎಂದಳು ರಂಗಮ್ಮ.

ಆಕೆಯ ಮಾತನ್ನು ಕೇಳಿ ವೆಂಕಟದಾಸಪ್ಪನವರು ಗಟ್ಟಿಯಾಗಿ ನಗುತ್ತಾ ಕುಳಿತುಬಿಟ್ಟರು. ತಾನು ಕಳಕಳಿಯಿಂದ ಹೇಳಿದ ಮಾತಿಗೆ ಗಂಡ ಏನೂ

ಬೆಳಕೊಡದೆ. ಸಕ್ಕದ್ದನ್ನು ಕಂಡು, ರಂಗಮ್ಮ ಖಿನ್ನಳಾದಳು.

'ಏಕೆ ಹಾಗೆ ನಗ್ತೀರಾ?'

—ವ್ಯಥಿತಳಾಗಿ ಕೇಳಿದಳು ರಂಗಮ್ಮ.

'ನಗದೆ ಮತ್ತೇನು ಮಾಡಲಿ ಹೇಳು?'

—ತಮ್ಮ ನಗುವನ್ನು ತಡೆದುಕೊಂಡು ಕೇಳಿದರು ವೆಂಕಟದಾಸಪ್ಪ

'ಯಾಕೆ—ನಾನು ಕೇಳಿದ್ದು ನಗೋ ಅಂಥ ಮಾತೇ?'

'ಅಲ್ಲವೇ ಮತ್ತೆ? ನಾನು. ನಿನ್ನ ದೇವರನ್ನು ನೀನು ಬೇಡಿಕೋ ಅಂದರೆ. ನನ್ನ ಬೇಡಿಕೊತೀಯಲ್ಲಾ...'

'ಅದು ತಪ್ಪೇ?'

'ತಪ್ಪಲ್ಲದೆ—ನಾನೇನು ದೇವರೇ?'

'ಹೂ. ನನ್ನ ಪಾಲಿಗೆ ನೀವೇ ದೇವರು. ಗಂಡನಿಗಿಂತ ಇನ್ನು ದೊಡ್ಡ ದೇವರು ಯಾರಿದಾರೆ— ಹೆಂಗಸರಿಗೆ? ಅದಕ್ಕೆ ನಾನು ನಿಮ್ಮನ್ನು ಬೇಡಿಕೊಂಡದ್ದು. ನೀವು ಅದೊಂದು ನಡಸಿಕೊಡಿ.'

—ಎಂದು ಬೇಡಿದಳು ರಂಗಮ್ಮ.

ರಂಗಮ್ಮನ ಮಾತನ್ನು ಕೇಳಿ ವೆಂಕಟದಾಸಪ್ಪನವರ ಮುಖದಲ್ಲಿ ಮೂಡಿದ್ದ ನಗು ಹಾಗೇ ಮಾಯವಾಗಿ. ಅವರ ಮುಖ ಗಂಭೀರವಾಯಿತು.

'ಅಂತೂ ನಿನಗೆ. ನನ್ನಲ್ಲಿ ಅಷ್ಟು ನಂಬಿಕೆ ಅನ್ನು...'

'ನಿಮ್ಮನ್ನು ನಂಬದೆ ಇನ್ನು ಯಾರನ್ನು ನಂಬಲಿ? ಅಮ್ಮನವರೂ ನಿಮಗೆ ಒಲಿದಿರುವ ಹಾಗೆ. ಇನ್ಯಾರಿಗೆ ತಾನೆ ಒಲಿದಿದ್ದಾರೆ? ಅದಕ್ಕೇ ನೀವೇ ಪೂಜೆಮಾಡಿ. ನನಗೆ ಪ್ರಸಾದ ಕೊಡಿ; ನನ್ನ ಎಲ್ಲಾ ಭಯಾನೂ ಬಿಟ್ಟು ಬಿಡ್ತೇನೆ.'

—ಎಂದಳು ರಂಗಮ್ಮ.

'ಆಯ್ತು. ಹಾಗೇ ಆಗಲಿ. ಅದೇನು ದೊಡ್ಡದ್ದು? ಬೆಳಕು ಹರಿಯಲಿ. ನಾಳೆ ಹೇಗೂ ಅಮ್ಮನವರ ದೇವಸ್ಥಾನಕ್ಕೆ ಹೋಗಬೇಕಾದ ಕೆಲಸ ಇದ್ದೇ ಇದೆಯಲ್ಲ.'

—ಎಂದರು ವೆಂಕಟದಾಸಪ್ಪ.

'ನೀವು ಅಷ್ಟು ಹೇಳಿದರೆ ಎಲ್ಲಾ ಕೆಲಸಾನೂ ಆದಹಾಗೆ ಆಯ್ತು.'

'ಸರಿ, ಹೇಳಿದೆನಲ್ಲ. ಹಾಯಾಗಿ ಮಲಗಿಕೊಂಡು ನಿದ್ದೆಮಾಡು. ಇನ್ನಾವ ಚಿಂತೇನೂ ಇಟ್ಟುಕೊಬೇಡ.'

'ಚಿಂತೆಯೂ ಇಲ್ಲ, ಭಯವೂ ಇಲ್ಲ. ನೀವು ಮಾತುಕೊಟ್ಟ ಮೇಲೆ ಅಮ್ಮನೋರೇ ಮಾತುಕೊಟ್ಟ ಹಾಗಾಯ್ತು. ಸಾವೇ ಬಂದರೂ 'ಅಮ್ಮ ನೋರನ್ನ ಕೇಳಿಕೊಂಡು ಬಾ ಹೋಗು ಅಂತ ಕಳಿಸಿಬಿಡ್ತೀನಿ.'

—ಎಂದು ನಗುನಗುತ್ತಾ ಹೇಳಿ ರಂಗಮ್ಮ ಗಂಡನ ಪಕ್ಕದಲ್ಲಿ ಮಲಗಿ ಕೊಂಡಳು.

ಹೃದಯದಲ್ಲಿ ಕಟೆಯುತ್ತಿದ್ದ ಚಿಂತೆ ದೂರವಾದ ಬಳಿಕ, ಹಗಲೆಲ್ಲಾ ಮನೆಗೆಲಸಮಾಡಿ ದಣಿದ ರಂಗಮ್ಮನಿಗೆ, ನಿದ್ದೆ ಹತ್ತುವುದು ತಡವಾಗಲಿಲ್ಲ. ಹೃದಯದ ಚಿಂತೆ ಕಳೆದಾಗ, ಆಕೆಯ ತುಟಿಗಳ ಮೇಲೆ ಅರಳಿದ ಮಂದಹಾಸ, ಆಕೆ ನಿದ್ರೆ ಮಾಡಿದ ಮೇಲೂ ಆಕೆಯ ತುಟಿಗಳನ್ನು ಬಿಟ್ಟು ಆಗಲಲಿಲ್ಲ.

ವೆಂಕಟದಾಸಪ್ಪನವರ ಮಾತನ್ನು ನಂಬಿ ರಂಗಮ್ಮ ನಿದ್ದೆ ಹೋದಳು.

ಆದರೆ ಆಕೆಗೆ ಮಾತುಕೊಟ್ಟ ವೆಂಕಟದಾಸಪ್ಪನವರಿಗೆ ಮಾತ್ರ ಏಕೋ ನಿದ್ದೆ ಬರಲಿಲ್ಲ. ಅಷ್ಟೇ ಅಲ್ಲ—

ಊಟಮಾಡಿ ಬಂದು, ಹಾಸಿಗೆಯ ಮೇಲೆ ಉರುಳಿಕೊಂಡಿದ್ದಾಗ ಅವರ ಕಣ್ಣಿನ ಸಮೀಪದಲ್ಲಿ ಸುಳಿಯುತ್ತಿದ್ದ ನಿದ್ದೆಯು ಮಂಪರೂ ಈಗ ಎತ್ತಲೋ ಹಾರಿಹೋದಂತಿತ್ತು.

ನಿದ್ರೆ ಬಾರದೆ ಹೆಚ್ಚು ಹೊರಳಾಡಿದರೆ ಪಕ್ಕದಲ್ಲಿ ದಣಿದು ಮಲಗಿದ ಹೆಂಡತಿಗೆ ಎಲ್ಲಿ ಎಚ್ಚರವಾಗುವುದೋ ಎಂದು ಅಲುಗಾಡದೆ ಮಲಗಿದಲ್ಲೇ ಒಂದು ಪಕ್ಕವಾಗಿ, ಸಮೀಪದ ಕಾಲುಮಣೆಯ ಮೇಲೆ ಉರಿಯುತ್ತಿದ್ದ ಹಣತೆಯ ದೀಪದ ಕುಡಿಯನ್ನೇ ದಿಟ್ಟಿಸುತ್ತ ಮಲಗಿಕೊಂಡರು.

ಇದ್ದಕ್ಕಿದ್ದ ಹಾಗೇ ಅವರ ಚಿತ್ತ ಉದ್ವಿಗ್ನಗೊಂಡಿತ್ತು.

ಮತ್ತೆ ಮತ್ತೆ ಅವರಿಗೆ ರಂಗಮ್ಮ ಆಡಿದ ಮಾತು ನೆನಪಾಗುತ್ತಿತ್ತು-

'ನಿಮ್ಮನ್ನು ನಂಬದೆ ನಾನು ಇನ್ನಾರನ್ನು ನಂಬಲಿ? ಅಮ್ಮನವರೂ ನಿಮಗೆ ಒಲಿದಿರುವ ಹಾಗೆ ಇನ್ನಾರಿಗೆ ಒಲಿದಿದ್ದಾರೆ?'

'ಇನ್ನು ಚಿಂತೆಯೂ ಇಲ್ಲ ಭಯವೂ ಇಲ್ಲ; ನೀವು ಮಾತುಕೊಟ್ಟ

ಮೇಲೆ ಅಮ್ಮನವರೇ ಮಾತುಕೊಟ್ಟ ಹಾಗಾಯಿತು. ಸಾವೇ ಬಂದರೂ 'ಅಮ್ಮನವರನ್ನು ಕೇಳಿಕೊಂಡು ಬಾ ಹೋಗು' ಅಂತ ಕಳಿಸಿಬಿಡ್ತೀನಿ.'

'ನನ್ನ ಮಾತಿನಲ್ಲಿ, ನನ್ನಲ್ಲಿ ಈ ಹುಡುಗಿಗೆ ಎಷ್ಟು ನಂಬಿಕೆ, ಎಷ್ಟು ಭರವಸೆ. ನನ್ನ ಮಾತು ಎಂದರೆ, ಅಮ್ಮನವರ ಮಾತೇ ಅಂತೆ! ಸಾವು ಬಂದರೂ 'ಅಮ್ಮನವರನ್ನು ಕೇಳಿಕೊಂಡು ಬಾ ಹೋಗು' ಎಂದು ಕಳುಹಿಸುತ್ತಾಳಂತೆ. ನನ್ನ ಪೂಜೆಗೆ ಅಷ್ಟು ಶಕ್ತಿ ಇದೆಯೇ? ನನ್ನ ಮಾತಿಗೆ ಸಾವನ್ನು ಹಿಮ್ಮೆಟ್ಟಿಸಬಲ್ಲ ಬಲ ಇದೆಯೇ? ಹುಲುಮಾನವನಾದ ನಾನೆತ್ತ-ಮಹಾಮಹಿಮಳಾದ ತಾಯಿಯೆತ್ತ? ಅಜವನ್ನು ಗಜಕ್ಕೆ ಹೋಲಿಸಬಹುದೇ? ಇದೆಂಥ ಹುಚ್ಚು ಭಾವನೆ ಈ ಹೆಣ್ಣು ಜೀವದ್ದು?'

—ಎಂದು, ರಂಗಮ್ಮನ ಮುಗ್ಧತೆಯ ಬಗ್ಗೆ ಮರುಕದಿಂದ ಆರಂಭವಾಗಿತ್ತು ವೆಂಕಟದಾಸಪ್ಪನವರ ಚಿಂತೆ.

ಆದರೆ ಆಕೆಯ ಮಾತುಗಳನ್ನು ಮೆಲಕು ಹಾಕುತ್ತಾ, ಹಾಕುತ್ತಾ, ಏಕೋ ವೆಂಕಟದಾಸಪ್ಪನವರಿಗೆ, ತಾವು ನಂಬಿ ನಡೆದ ನೆಲವೇ, ಬಲೆಯಾಗಿ ತಮ್ಮನ್ನು ಸೆರೆಹಿಡಿದಂತೆ ಭಾಸವಾಗಿ, ಅವರ ಮನಸ್ಸಿಗೆ ಏಕೋ ಚಡಪಡಿಕೆ ಆರಂಭವಾಗಿತ್ತು.

'ಆ ಹೆಣ್ಣು ತಮ್ಮನ್ನು ದೇವರೇ ಎಂದು ಭಾವಿಸಿದುದು, ತಮ್ಮ ಮಾತು ದೇವರವಾಣಿಯೆಂದೇ ನಂಬಿದುದು ಸರಿಯೆ? ಆಕೆಯ ಮಟ್ಟಿಗೆ ಆ ಮಾತು ಸರಿ. ಆದರೆ ನಾನೂ, ಆಕೆಯ ಮಾತು ನಿಜವೆಂದೇ ನಂಬಿ, ಆಕೆಯ ತಾಳಕ್ಕೆ ಕುಣಿದುದು, ಆಕೆ ಕೇಳಿದಂತೆ ಹೇಳಿದುದು ಸರಿಯೆ?'

'ನಾನು ದೇವತೆಯೇ? ನನ್ನ ಮಾತಿಗೆ ದೇವತಾವಾಕ್ಯದ ಬೆಲೆ ಇದೆಯೆ? ಹೇಳುವವರು ಹೆಡ್ಡರಾದರೆ, ಕೇಳುವವರು ಹೆಡ್ಡರಾಗಬಹುದೇ? ನಾನಿದೇನು ಮೂರ್ಖತನ ಮಾಡಿದೆ? ಸರಸದ ಮಾತಿನಲ್ಲಿ, ನನ್ನನ್ನೇ ನಾನು ದೇವತೆ ಎಂದು ಭಾವಿಸಿಕೊಂಡೆನಲ್ಲಾ, ನನಗೆ ಈ ಅಹಂಕಾರ ಬರಬಹುದೇ? ಹಿಂದೆ ಮುಂದೆ ಯೋಚಿಸದೆ, ನಾನೇಕೆ ಅಂಥ ಮಾತಾಡಿದೆ?'

—ಎಂದು ತಮ್ಮನ್ನು ತಾವೇ ಹಳಿದುಕೊಂಡು, ತಮ್ಮ ಮಾತನ್ನು ತಾವೇ ಒರೆಗಿಟ್ಟು ನೋಡಿದರು ವೆಂಕಟದಾಸಪ್ಪ.

ಹಾಗೆ ಯೋಚಿಸುತ್ತಿದ್ದಾಗ ಅವರಿಗೇ ಒಮ್ಮೆ—

'ನಾನು ಇಷ್ಟು ದೂರ ಇಲ್ಲದುದನ್ನೆಲ್ಲಾ ಯೋಚಿಸುವುದೇಕೆ? ನಾನು ಮಾತು ಕೊಟ್ಟುದಾದರೂ ಏನು? ಅಮ್ಮನವರಿಗೆ ಪೂಜೆ ಮಾಡಿ ನಿನಗೆ ಪ್ರಸಾದ ಕೊಡುತ್ತೇನೆ ಎಂದೆ; ಅಷ್ಟೆ ತಾನೇ? ರಂಗು ಅಷ್ಟಕ್ಕಿಂತ ಹೆಚ್ಚಾಗಿ ಏನೂ ಕೇಳಲಿಲ್ಲ. ಅದಕ್ಕಿಂತ ಹೆಚ್ಚಿನ ಮಾತೇನೂ ನಾನು ಕೊಡಲಿಲ್ಲ. ಅದರಲ್ಲೇನು ಮಹತ್ವ ಬಂತು? ಅದಕ್ಕಿಷ್ಟು ಚಿಂತೆ ಮಾಡುವುದೆ? ದಿನವೂ ಪೂಜೆಮಾಡಿದ ಹಾಗೆ ಮಾಡುವುದು. ಹೆಚ್ಚೆಂದರೆ– ಇನ್ನೂ ಎರಡು ಹೂವು ಹೆಚ್ಚಾಗಿ ಪೂಜೆ ಮಾಡಿ ಪ್ರಸಾದ ಕೊಡುವುದು; ಅಷ್ಟೆ. ಅದಕ್ಕೇಕೆ ಇಲ್ಲದ ಯೋಚನೆ ಮಾಡುವುದು? ರಂಗೂ ಕೇಳಬಾರದುದನ್ನೇನೂ ಕೇಳಲಿಲ್ಲ. ನಾನೂ ಮಾಡ ಬಾರದುದನ್ನು ಮಾಡಹೊರಟಿಲ್ಲ.'-

—ಎನಿಸಿ, ಆ ಸಮಾಧಾನ ಮಾಡಿಕೊಂಡು, ಉಳಿದದ್ದೆಲ್ಲವನ್ನೂ ಮರೆತು ಮಲಗಲು ಯತ್ನಿಸಿದರು.

ಆದರೆ ಆ ಸಮಾಧಾನ ಹೆಚ್ಚು ಹೊತ್ತು ಉಳಿಯಲಿಲ್ಲ.

ಏಕೆಂದು ಕಾರಣ ಅರಿವಾಗದೆಯೇ ಅವರಿಗೆ ತಾವು ಏಕೋ ಆಡಬಾರದ ಮಾತು ಆಡಿದಂತಾಗಿ, ಮನಸ್ಸು ಕಟ್ಟೆಯುತ್ತಿತ್ತು.

'ದಿನದ ಹಾಗೆ ಪೂಜೆ ಎಂದೆನಲ್ಲಾ– ಇದು ದಿನದ ಹಾಗಿನ ಪೂಜೆ ಯೇನೇ?'

'ನಾಳೆ ಪೂಜಿಸುವಾಗ ತಾಯಿಗೆ 'ನನ್ನ ರಂಗೂ ಜೀವಕ್ಕೆ ಏನೂ ಅಪಾಯ ಬರದ ಹಾಗೆ ನೋಡಿಕೋ' ಎಂದು ಬೇಡಬೇಕು. ಹಾಗೆ ಪ್ರಾರ್ಥಿಸಿ, 'ಈ ಪ್ರಸಾದ ತೆಗೆದುಕೊ–ನಿನಗೇನೂ ಭಯವಿಲ್ಲ' ಎಂದು ಹೇಳಿ ಅಮ್ಮ ನವರ ಪ್ರಸಾದವನ್ನು ಅವಳಿಗೆ ಕೊಡಬೇಕು.

'ಇದರ ಅರ್ಥವೇನು?'

'ಹೀಗೆ ಆಗೋಲ್ಲ, ಹೀಗೆ ಮಾಡು ಎಂದು ತಾಯಿಗೆ ಹೇಳಿದಂತೆಯೇ ಅಲ್ಲವೇ?'

'ರಂಗೂ ಜೀವಕ್ಕೆ ಏನೂ ಅಪಾಯ ಬರಬಾರದು ಎನ್ನುವುದು ನನ್ನ ಇಚ್ಛೆ. ಅದನ್ನು ವ್ಯಕ್ತಪಡಿಸಿದರೆ ತಾಯಿಗೆ, 'ಇಗೋ, ಇದು ನನ್ನ ಇಚ್ಛೆ; ಇದರಂತಾಗಲಿ' ಎಂದು ಹೇಳಿದ ಹಾಗಾಯಿತು.

'ಅದು ಸರಿಯೇ?'

'ಆ ದಿನ ತಾಯಿಗೆ ನಾನು 'ಇನ್ನು ನಾನಿಲ್ಲ; ನನ್ನ ಇಷ್ಟವೆನ್ನುವುದಿಲ್ಲ; ಎಲ್ಲವೂ ನಿನ್ನ ಇಚ್ಛೆಯಿದ್ದಂತಾಗಲಿ' ಎಂದು ಮಾತು ಕೊಟ್ಟಿದ್ದೆನಲ್ಲಾ. –ಹಾಗೆ ಮಾತುಕೊಟ್ಟು, ಈಗ ಹೀಗೆ ಬೇಡುವುದು ಉಚಿತವಾದೀತೇ?

'ಆ ದಿನ ನನ್ನ ಇಚ್ಛೆಯನ್ನು ಮೆರೆಸಲು ಹೋಗಿ ಆದ ಅನಾಹುತವೆಲ್ಲ ವನ್ನೂ ಕಂಡ ಬಳಿಕಲೂ, ನನ್ನ ಬುದ್ಧಿಯಲ್ಲಿ ಈ ದೋಷ ಉಳಿಯಬಹುದೇ? ಮತ್ತೆ ಮತ್ತೆ ನನ್ನ ಬುದ್ಧಿ ಹೀಗೆ, ಗಳಿಗೆ ಗಳಿಗೆಗೊಂದು ವ್ಯಾಮೋಹಕ್ಕೆ ವಶ ವಾಗಿ, ತಪ್ಪು ಜಾಡಿನಲ್ಲಿ ನಡೆಯುತ್ತಿದ್ದರೆ, ನನ್ನ ಬದುಕು ನೇರವಾದ ದಾರಿ ಯಲ್ಲಿ ನಡೆಯುವುದೆಂದು?'

'ಅಂದು ಮಾಡಿದ ತಪ್ಪಿಗಾಗಿ, ಆಕೆಯ ದರ್ಶನಕ್ಕೆ ಎರವಾದ ನಾನು, ದಿನದಿನವೂ ಹೀಗೆ ಮಾಡುತ್ತಿದ್ದರೆ, ಎಂದಾದರೂ ಆಕೆಯನ್ನು ಕಾಣುವುದು ಲಭ್ಯವಾದೀತೇ?'

'ನಾನು ಹೀಗೇಕೆ ಮಾಡಿದೆ? ತಿಳಿದೂ ತಿಳಿದೂ 'ಹಾಗಾಗಲಿ, ಹೀಗಾಗುವುದು ಬೇಡ' ಎಂದು ಬಯಸುವುದು ತರವಲ್ಲ ಎಂದು ರಂಗೂಗೆ ಬುದ್ಧಿ ಹೇಳುವುದು ಬಿಟ್ಟು, ಅವಳ ಮೇಲಿನ ಪ್ರೇಮದಿಂದ ಇಂಥ ಕುರುಡು ಕೆಲಸ ಮಾಡಬಹುದೇ? ನನ್ನ ಬುದ್ಧಿಗೆ ಏನು ಮಂಕು ಬಡಿದುಕೊಂಡಿತ್ತು? ಈಗ ಹೇಗೆ ಈ ತಪ್ಪನ್ನು ತಿದ್ದಿಕೊಳ್ಳುವುದು?'

—ಎಂಬ ಪಶ್ಚಾತ್ತಾಪ ಅವರ ಹೃದಯವನ್ನು ದಹಿಸತೊಡಗಿತು.

ಅದಕ್ಕೆ ಏನೇನು ಬಗೆಯ ಸಮಾಧಾನ ಹೇಳಿಕೊಳ್ಳಲೆತ್ನಿಸಿದರೂ, ಅವರ ಹೃದಯಕ್ಕೆ ಸಮಾಧಾನವಾಗದೆ, ಆ ಮನಸ್ಸಿನ ಕುದಿಯಲ್ಲಿ ನಿದ್ರೆಯೂ ಬರದೆ, ಕಣ್ಣಿಗೆ ಕಣ್ಣು ಹತ್ತದ ಇರುಳು ಕಳೆಯಿತು.

ಇರುಳು ಕಳೆಯಿತು—

ಆದರೆ ಅವರ ಹೃದಯದಲ್ಲಿ ಕುದಿಯುತ್ತಿದ್ದ ಚಿಂತೆ ತೀರಲಿಲ್ಲ.

ಕಡೆಗೆ ಬೆಳಗಿನ ಜಾವದ ಹೊತ್ತಿನಲ್ಲಿ—

'ಆಯಿತು– ನಾಳೆಯ ದಿನ ಅಮ್ಮನವರ ಗುಡಿಗೆ ಹೋದಾಗ ಶಾಮಣ್ಣ ಮಾವನಿಗೆ, 'ಇವೊತ್ತು ನೀನೇ ಪೂಜೆ ಮಾಡಿಬಿಡು' ಎಂದು ಹೇಳುವುದು.'

—ಎಂದುಕೊಂಡು ಎದ್ದು ಹೋದರು.

* * *

ಈಗ—

ಅಮ್ಮನವರ ದೇವಸ್ಥಾನಕ್ಕೆ ಬಂದಾಗ, ಅಮ್ಮನವರ ಪೂಜೆ ಮಾಡುವ ಮಾತು ಬಂದಾಗ ವೆಂಕಟದಾಸಪ್ಪನವರು, ಹಿಂದಿನ ರಾತ್ರಿ ತಾವು ಮಾಡಿದ ನಿರ್ಧಾರದಂತೆ, ಪೂಜೆ ಮಾಡುವ ಭಾರವನ್ನು ಶಾಮಣ್ಣನ ಮೇಲೆ ಹಾಕಲು ಯತ್ನಿಸಿದ್ದರು.

ಆದರೆ ಆ ಪ್ರಯತ್ನ ವಿಫಲವಾದುದೇ ಅಲ್ಲದೆ, ಅವರ ಆ ಪ್ರಯತ್ನದ ಪರಿಣಾಮ ರಂಗಮ್ಮನ ಕಣ್ಣಂಚಿನಲ್ಲಿ ನೀರಾಗಿ ಕಾಣಿಸಿಕೊಂಡಿತ್ತು.

ತನ್ನ ಕಣ್ಣಿನಲ್ಲಿ ಕಾಣಿಸಿಕೊಂಡ ಹನಿಗೆ ಏನು ಕಾರಣವೆಂದು ರಂಗಮ್ಮ ಬಾಯಿಬಿಟ್ಟು ಹೇಳದಿದ್ದರೂ, ಆಕೆ ಹೇಳಬೇಕಾದುದೆಲ್ಲವನ್ನೂ ಆ ಅಶ್ರು ಬಿಂದುವೇ ಹೇಳಿತು—

'ಹೀಗೇಕೆ ನನಗೆ ಮಾತುಕೊಟ್ಟು ತಪ್ಪಿಸುತ್ತಿದ್ದೀರಿ? ನಾನು ನಿಶ್ಚಿಂತ ಳಾಗಿ, ನಿರ್ಭಯವಾಗಿರುವುದು ನಿಮಗೆ ಒಪ್ಪಿಗೆಯಿಲ್ಲವೇ? ನಾನೇನು ಕೇಳ ಬಾರದುದನ್ನು ಕೇಳಿದೆ ಎಂದು, ಹೀಗೆ ಆಡಿದ ಮಾತು ಮುರಿಯುತ್ತಿದ್ದೀರಿ?'

ಈ ಆಪಾದನೆ, ನೋವು, ಭಯ– ಎಲ್ಲವೂ ಆ ಒಂದು ಅಶ್ರುಬಿಂದು ವಿನಲ್ಲಿ ಹುದುಗಿ, ಆ ಹನಿ, ಸಬಳದ ಮೊನೆಯಂತೆ ಹೊಳೆದು ವೆಂಕಟದಾಸಪ್ಪ ನವರ ಹೃದಯವನ್ನು ಇರಿಯಿತು.

'ನನಗಾಗಿ ಎಂದೂ ನಾನೂ, ನಿಮ್ಮನ್ನು ಇಂಥದು ಕೊಡಿ, ಹೀಗೆ ಮಾಡಿ ಎಂದು ಬೇಡಲಿಲ್ಲ. ನನಗಾಗಿ ಇಷ್ಟನ್ನಾದರೂ ಮಾಡಲಾರಿರಾ?'

—ಎಂದು ರಂಗಮ್ಮನ ನೋಟ ಅವರನ್ನು ಬೇಡಿತು.

ಆಕೆಯ ಆ ಯಾಚನೆಯು ಇರಿದು ಕಲ್ಲಾಗಿ ನಿಲ್ಲುವುದು ವೆಂಕಟ ದಾಸಪ್ಪನವರಿಗೂ ಸಾಧ್ಯವಾಗಲಿಲ್ಲ.

'ತಾಯಿ ಇದೊಂದುದಿನ ನನ್ನನ್ನು ಮನ್ನಿಸು. ಅವಳ ಬಯಕೆಯೂ ನಿನ್ನ ಇಚ್ಛೆಯೆಂದೇ ಅರಿತು ಪೂಜೆ ಮಾಡುತ್ತೇನೆ. ಅದು ಒಪ್ಪಿಗೆಯಾದರೆ ಒಪ್ಪಿಸಿಕೋ. ಇಲ್ಲವೇ– ನಿನ್ನ ಇಚ್ಛೆಯಿದ್ದಂತಾಗಲಿ'.

—ಎಂದು ತಮ್ಮ ಮನಸ್ಸಿನಲ್ಲಿಯೇ ದೇವಿಯನ್ನು ಪ್ರಾರ್ಥಿಸಿ ಬೇರೇನೂ ಮಾತಾಡದೆ, ಕೊಳದ ಬಳಿ ಹೋಗಿ, ಕೈಕಾಲು ತೊಳೆದುಕೊಂಡು, ಪೊದ್ದ

ಉತ್ತರೀಯವನ್ನೇ ಒಡ್ದೆಮಾಡಿ ಉಟ್ಟುಕೊಂಡು ಬಂದು, ಅಮ್ಮನವರ ಪೂಜೆ, ಮಂಗಳಾರತಿ ಮಾಡಿ, ತಾವೇ ಕೈಯಾರ ಎಲ್ಲರಿಗೂ ತೀರ್ಥ ಪ್ರಸಾದ ಕೊಟ್ಟರು. ಅವರು ಕೊಟ್ಟ ಕುಂಕುಮವನ್ನು ಹಣೆಗೆ, ಮಾಂಗಲ್ಯಕ್ಕೆ ಹಚ್ಚಿ ಕೊಂಡ ರಂಗಮ್ಮನಿಗೆ ತನಗೆ ಅವರು ಜೀವದಾನ ಮಾಡಿದಷ್ಟು ಸಂತೋಷ ವಾಗಿ, ಒಂದು ಗಳಿಗೆಯ ಹಿಂದೆ, ಭಯ ವಿಹ್ವಲತೆಗಳಿಂದ ಬಾಡಿದ ಆಕೆಯ ಮೊಗ ತೃಪ್ತಿಯ ಕಾಂತಿಯಿಂದ ಕಳಕಳಿಸಿತು.

ಪೂಜೆ ಮುಗಿದ ಬಳಿಕ, ಎಲ್ಲರೂ ಒಂದು ಗಳಿಗೆ ದೇವಾಲಯದಲ್ಲಿ ಕುಳಿತುಕೊಂಡ ಶಾಸ್ತ್ರಮಾಡಿ, ಬಳಿಕ ಮನೆಯ ಕಡೆ ಹೊರಟರು.

ಎಲ್ಲರೊಂದಿಗೆ ವೆಂಕಟದಾಸಪ್ಪನವರೂ ಹೊರಟರು. ಅದನ್ನು ಕಂಡ ಶಾಮಣ್ಣ—

'ದಾಸಣ್ಣ, ಇಷ್ಟುಬೇಗ ನಾವು ಮನೆಗೆ ಹೋಗಿ ಮಾಡೋದೇನಿದೆ? ಹೆಂಗಸರೆಲ್ಲಾ ಹೋಗಲಿ. ನಾವಿಬ್ಬರೂ ಇನ್ನೂ ಎರಡು ಗಳಿಗೆ ಕುಳಿತಿದ್ದಂ ಆಮೇಲೆ ಹೋಗೋಣ.'

—ಎಂದು ಅಳಿಯನನ್ನು ತನ್ನೊಂದಿಗೆ ನಿಲ್ಲಿಸಿಕೊಂಡ.

ಆದರಂತೆಯೇ, ಎಲ್ಲರೂ ಹೋದ ಬಳಿಕ, ಶಾಮಣ್ಣ, ವೆಂಕಟದಾಸಪ್ಪ ನವರು ಇಬ್ಬರೇ ದೇವಾಲಯದ ಬಳಿ ಉಳಿದುಕೊಂಡರು.

೮

ಎಲ್ಲರೂ ಹೋದ ಬಳಿಕ ಶಾಮಣ್ಣ ಹೆಗಲ ಮೇಲಿದ್ದ ಚೌಕವನ್ನು ಪಾವಟಿಗೆಯ ಕಲ್ಲಿನ ಮೇಲೆ ಹಾಸಿ, ಆದರ ಮೇಲೆ ಕಂಭಕ್ಕೆ ಒರಗಿಕೊಂಡು ವೀಳೆಯದೆಲೆಯಲ್ಲಿಟ್ಟುಕೊಂಡಿದ್ದ ತುಪ್ಪ ಸವರಿದ ಮಡ್ಡಿನಶ್ಯವನ್ನು ಸಣ್ಣ ಸವರಿದ ಅಂಗೈಯ ಮೇಲೆ ಪುಡಿ ಮಾಡಿ, ಒಂದು ಚಿಟಕೆ ಏರಿಸಿ, ತಾವು ಮಾಡುತ್ತಿದ್ದ ಕಲಾಪವನ್ನೇ ನೋಡುತ್ತಾ ಸುಮ್ಮನೆ ಕುಳಿತಿದ್ದ ವೆಂಕಟ ದಾಸಪ್ಪನವರತ್ತ ತಿರುಗಿ, ನಶ್ಯದ ಕರೆ ಹತ್ತಿದ್ದ ಮೂಗನ್ನು, ನಶ್ಯದ ಬಣ್ಣಕ್ಕೇ ತಿರುಗಿದ್ದ ಕರವಸ್ತ್ರದಿಂದ ಒರಸಿಕೊಂಡು—

'ದಾಸಣ್ಣಾ....'

—ಎಂದರು, ನಸ್ಯದ ಘಾಟಿನಿಂದ ಗಾರಾದ ಧ್ವನಿಯಲ್ಲಿ.

'ಏನು ಮಾವ?'

'ನನ್ನ ಹತ್ತಿರ ಮುಚ್ಚುಮರೆ ಏನೂ ಇಲ್ಲ ತಾನೇ?'

'ಅದೆಂಥ ಮಾತು ಮಾವ? ಯಾವತ್ತು ಯಾರ ಮುಂದೆ ಮುಚ್ಚುಮರೆ ಮಾಡಿದ್ದೇಂತ ಇವತ್ತು ನಿನ್ನ ಮುಂದೆ ಮಾಡಲಿ?'

—ಶಾಮಣ್ಣನ ಪ್ರಶ್ನೆ ಅರ್ಥವಾಗದೆ ಕೇಳಿದರು ವೆಂಕಟದಾಸಪ್ಪ.

'ಯಾರಿಗೆ ಗೊತ್ತು? ಹುಟ್ತಾ ಕೆಲವು ವಿದ್ಯೆ ಬರೋ ಹಾಗೆ, ಬೆಳೀತಾಲೂ ಕೆಲವು ವಿದ್ಯೆ ಬರ್‍ತವೆ. ಹಾಗೆ– ನೀನೂ ಏನಾದ್ರೂ ಈ ಹೊಸ ವಿದ್ಯೆ ಅಭ್ಯಾಸ ಮಾಡ್ತಾ ಇದೀಯೋ ಏನೋಂತ ಕೇಳಿದೆ. ಹಾಗೇನೂ ಇಲ್ಲ ತಾನೇ?'

'ಖಂಡಿತ ಇಲ್ಲ'

'ಹಾಗಾದ್ರೆ – ನಾನು ಕೇಳಿದ್ದಕ್ಕೆ ಸರಿಯಾಗಿ ಉತ್ತರ ಹೇಳ್ತೀಯೇನು...'

'ಅಗತ್ಯವಾಗಿ.'

'ಹಾಗಾದ್ರೆ—ಇವತ್ತು ನೀನು ಅಮ್ಮನೋರ ಪೂಜೆ ಮಾಡಿದ್ಯಲ್ಲಾ—

ನೀನೇ ಇಷ್ಟಪಟ್ಟು ಮಾಡಿದೆಯೋ ಅಥವಾ ನಮ್ಮ ಬಲವಂತಕ್ಕೆ ಕಟ್ಟುಬಿದ್ದು ಮಾಡಿದ್ಯೋ?'

—ಬಿಲ್ಲಿನ ಹುರಿಯನ್ನು ಎಳೆದೆಳೆದು ನೋಡಿ, ಗುರಿಯಿಟ್ಟು ಬಾಣ ಬಿಟ್ಟಂತೆ ಕೇಳಿದ ಶಾಮಣ್ಣ.

ಶಾಮಣ್ಣನ ಪ್ರಶ್ನೆ ಕೇಳಿ ವೆಂಕಟದಾಸಪ್ಪನವರು ತಬ್ಬಿಬ್ಬಾದರು. ರಂಗಮ್ಮ ವೆಂಕಟದಾಸಪ್ಪನವರೇ ಪೂಜೆ ಮಾಡಲೆಂದು ಸೂಚಿಸಿದಾಗ ತಮ್ಮ ಮನಸ್ಸಿನಲ್ಲಾದ ಹೊಯ್ದಾಟ, ತಮಗೊಬ್ಬರಿಗಲ್ಲದೆ, ಬೇರೆ ಯಾರಿಗೂ ತಿಳಿಯ ಲಿಲ್ಲವೆಂದೇ ಅವರು ನಂಬಿದ್ದರು. ಎಂತಲೇ ಈಗ ಶಾಮಣ್ಣನ ಪ್ರಶ್ನೆಯನ್ನು ಕೇಳಿ, ವೆಂಕಟದಾಸಪ್ಪನವರ ಮುಖ ತಪ್ಪುಮಾಡ ಹೋಗಿ, ಸಿಕ್ಕುಬಿದ್ದವನ ಮುಖದ ಹಾಗೆ ಕೆಂಪೇರಿತು. ಆದರೂ, ಆಗಲೂ ತಮ್ಮ ದಿಗ್ಭ್ರಾಂತಿ ಶಾಮಣ್ಣ ನಿಗೆ ತಿಳಿಯದಂತೆ ಬೈತಿಡಲು ಯತ್ನಿಸುತ್ತಾ—

'ಅದೇನು ಮಾವ ಹಾಗೆ ಕೇಳ್ತಿ?'

'ಇಲ್ನೋಡು ದಾಸಣ್ಣ—ಈ ಹಾರಿಕೆ ಮಾತೆಲ್ಲಾ ಉಪಯೋಗವಿಲ್ಲ. ನೀನು ಯಾವುದನ್ನ ಯಾರ ಮುಂದು ಮುಚ್ಚುಮರೆ ಮಾಡಿದರೂ ನನ್ನ ಹತ್ತಿರ ಮಾತ್ರ ಆ ಆಟ ಎಲ್ಲಾ ನಡೆಯೋಲ್ಲ. ನೀನು ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದ ಹಾಗೆ ಮಾತಾಡಿದ್ರೆ, ನನಗೇನೂ ಅರ್ಥ ವಾಗೊಲ್ಲಾಂದುಕೊಂಡಿದೀಯಾ? ಅದೆಲ್ಲಾ ಬಿಡು. ನಿನ್ನ ಮನಸ್ಸಿನಲ್ಲಿ ಏನಿತ್ತೋ ಹೇಳು. ನಾನೇನೂ ನಿನಗೆ ಅನ್ಯನಲ್ಲವಲ್ಲಾ.'

'ನಿನ್ನನ್ನು ಎಲ್ಲಿಯಾದರೂ, ನಾನು ಅನ್ಯ ಎಂದು ಭಾವಿಸುತ್ತೇನೆಯೇ ಮಾವ? ಅಣ್ಣ ಹೋದ ಬಳಿಕ ನೀನೇ ನನಗೆ ಆ ಸ್ಥಾನದಲ್ಲಿರುವ ವ್ಯಕ್ತಿ. ರಂಗೂ ಒಬ್ಬಳಿಗೇ ಅಲ್ಲ, ನನಗೂ ನೀನೇ ಈಗ ತಂದೆ.'

—ತುಂಬು ವಿಶ್ವಾಸದಿಂದ ಹೇಳಿದರು ವೆಂಕಟದಾಸಪ್ಪ.

'ಹಾಗಿದ್ರೆ—ಅದೆಲ್ಲಾ ಬಾಯುಪಚಾರದ ಮಾತಲ್ಲ ಅನ್ನುವ ಹಾಗಿದ್ರೆ— ಇವತ್ತು ನೀನು ಪೂಜೆ ಮಾಡೋಕೆ ಯಾಕೆ ಹಿಂದೆಮುಂದೆ ನೋಡಿದೆಯೋ ಹೇಳು.'

ಶಾಮಣ್ಣ ಆಡಿದ ಆ ಮಾತನ್ನು ಕೇಳಿದ ಬಳಿಕ ವೆಂಕಟದಾಸಪ್ಪನವರಿಗೆ ಸತ್ಯವನ್ನು ಹೇಳದೆ ಬೇರೆ ದಾರಿಯೇ ಇಲ್ಲವೆಂದು ತೋರಿತು. ಆದರೂ

"ನನ್ನ ಮಗಳು ಜೀವಭೀತಿಯಿಂದ ತಲ್ಲಣಿಸುತ್ತಾ, 'ನೀವೇ ಪೂಜೆ ಮಾಡಿ ಪ್ರಸಾದ ಕೊಡಿ' ಎಂದು ಬೇಡಿದಾಗಲೂ, ನಾನು "ಈ ಕಾರಣಕ್ಕಾಗಿ ಪೂಜೆ ಮಾಡಲು ಹಿಂಜರಿದೆ" ಎಂದರೆ, ಎಷ್ಟಾದರೂ ಆ ಹೆಣ್ಣಿನ ತಂದೆಯಾದ ಶಾಮಣ್ಣನ ಹೃದಯಕ್ಕೆ ನೋವಾದೀತೋ ಏನೋ ಎಂದು ಹೆದರುತ್ತಲೇ ವೆಂಕಟದಾಸಪ್ಪನವರು—

'ಮಾವ, ನೀನು ಈ ಮಾತಾಡಿ' ನನ್ನ ಬಾಯಿಕಟ್ಟಿಬಿಟ್ಟೆ. ಈಗ ನಾನು ಇದ್ದ ವಿಷಯ ಹೇಳದೆ ಬೇರೆ ದಾರಿಯೇ ಇಲ್ಲ. ಆದ್ದರಿಂದ ಹೇಳು ತ್ತೇನೆ. ಆಮೇಲೆ ನೀನು ನನ್ನ 'ಇವನೆಂಥ ಕಟುಕ ಎಂದು ಬೈಯ್ಯ ಬಾರದು.'

—ಎಂದರು

'ನೋಡು ದಾಸಣ್ಣ, ನಾನು ಹೆಚ್ಚು ಓದಿದೋನಲ್ಲ; ನಾನು ಹೆಚ್ಚು ತಿಳಿದೋನೂ ಅಲ್ಲ. ಆದರೆ ಬ್ರಾಹ್ಮಣನಾಗಿ ಹುಟ್ಟಿದ್ದರಿಂದ, ಗೀತೆ ಉಪ ನಿಷತ್ತು ಇವೆಲ್ಲಾ ಅಷ್ಟಿಷ್ಟು ನನ್ನ ಕಿವಿಯ ಮೇಲೆ ಬಿದ್ದಿವೆ. ಅವು ಹೇಳೋದೆಲ್ಲಾ ಸತ್ಯ ಎಂದು ನಾನು ಒಪ್ಪಿಕೊಂಡಿದ್ದೇನೆ. ಅದರಲ್ಲಿ ನನಗೆ ಒಪ್ಪಿಗೆಯಾಗದೆ ಇರೋದು – ಒಂದೇ ಮಾತು...'

'ಯಾವುದು?'

''ನಬ್ರೂಯಾತ್ ಸತ್ಯಮಪ್ರಿಯಂ' (ಅಪ್ರಿಯವಾದ ಸತ್ಯವನ್ನು ಆಡಬೇಡ) ಎನ್ನುವ ಮಾತು ಮಾತ್ರ ನನಗೆ ಹಿಡಿದಿಲ್ಲ. ನಮ್ಮ ಷಡಾಕ್ಷರಿ ಆಗಾಗ, ಬಸವಣ್ಣನವರ ಒಂದು ವಚನ ಹೇಳ್ತಾ ಇರ್ತಾನೆ. ಆ ಬಸವಣ್ಣನವರು ಹೇಳಿದ್ದರಂತೆ 'ನ್ಯಾಯ ನಿಷ್ಠುರಿ; ದಾಕ್ಷಿಣ್ಯಪರ ನಾನಲ್ಲವಯ್ಯ' ಅಂತ. ನನ್ನದೂ ಅದೇ ಜಾಡು. ಆದ್ದರಿಂದ ನನ್ನ ಹಾಗೇ ನೀನೂ ಆಡಿದರೆ ನನಗೆ ಸಂತೋಷವೇ ವಿನಾ ಅಸಮಾಧಾನವಿಲ್ಲ. ಆದ್ದರಿಂದ ಏನಿದ್ದರೂ—ನಿರ್ದಾಕ್ಷಿಣ್ಯ ವಾಗಿ ಝಾಡಿಸಿ ಬಿಡು. ಹೋದರೆ ಅವರ ಕತ್ತೆ ಹೋಗಲಿ. ಅದರ ಜೊತೆಗೆ ನಮ್ಮ ಹಗ್ಗ, ಗೂಟಾನೂ ಏಕೆ ಹೋಗಬೇಕು?'

—ಎಂದ ಶಾಮಣ್ಣ, ಆ ಮಾತಿನ ಭಾವದಷ್ಟೇ ನಿರ್ದಾಕ್ಷಿಣ್ಯ ತುಂಬಿದ ಧ್ವನಿಯಲ್ಲಿ.

ಆ ಮಾತಿಗೆ ವೆಂಕಟದಾಸಪ್ಪನವರು ಒಂದು ಗಳಿಗೆ ಏನೂ ಉತ್ತರ

ಕೊಡದೆ ಒಂದು ಗಳಿಗೆ ಸುಮ್ಮನೆ ಕುಳಿತಿದ್ದು ಎಲ್ಲ ವಿಷಯವನ್ನೂ ಹೇಗೆ ಹೇಳುವುದೆಂದು ಯೋಚನೆ ಮಾಡಿ, ಬಳಿಕ—

'ನೀವು ಅಷ್ಟು ಹೇಳಿದರೆ, ನನ್ನ ಮೇಲಿನ ಬಹು ದೊಡ್ಡ ಭಾರ ಇಳಿದಂತಾಗುತ್ತದೆ ಮಾವ.'

—ಎಂದು ಪೀಠಿಕೆ ಹಾಕಿಕೊಂಡು, ನಿಧಾನವಾಗಿ, ಜಾತ್ರೆಯ ಸಂದರ್ಭದಲ್ಲಿ ತಮಗಾದ ವಿಚಿತ್ರ ಅನುಭವ, ಆ ಸಂದರ್ಭದಲ್ಲಿ ತಾವು ದೇವಿಗೆ, ಮತ್ತೆಂದೂ ಆಕೆಯ ಇಚ್ಛೆಗೆ ವಿರುದ್ಧವಾಗಿ, ತಮ್ಮ ಇಚ್ಛಾನುಸಾರ ವರ್ತಿಸುವುದಿಲ್ಲವೆಂದು ಮಾತು ಕೊಟ್ಟುದು, ಆ ಸಂದರ್ಭದಲ್ಲಿ ತಮಗೆ ದೇವೀದರ್ಶನವಾಗದಿದ್ದುದಕ್ಕಾಗಿ ತಾವು ಈಗಲೂ ಪಡುತ್ತಿರುವ ಶ್ರಮ, ಆ ಬಯಕೆ ಇಷ್ಟು ದಿನ ಸಫಲವಾಗದಿರುವುದು, ಅದರಿಂದ ತಮ್ಮ ಹೃದಯಕ್ಕಾಗುತ್ತಿರುವ ಯಾತನೆ ಎಲ್ಲವನ್ನೂ ಸವಿವರವಾಗಿ ವಿವರಿಸಿ—

'ಈಗಲೂ ಆಕೆಯ ಇಚ್ಛೆ ಹೇಗಿದೆಯೋ ಹಾಗಾಗಲಿ ಎಂದಿರದೆ, ಹೀಗಾಗಬೇಕು ಎಂದು ಬಯಸಲು ಹೆದರಿ ಹಿಂಜರಿದೆ ಮಾವ. ರಂಗುವಿಗೆ ಹಿಡಿದಿದ್ದ ಭಯ ಬಿಡಿಸಲು ಮಾತು ಕೊಟ್ಟಾಗ ನಾನು ಅಷ್ಟು ಯೋಚನೆ ಮಾಡಿರಲಿಲ್ಲ. ಈಗ ಆ ಭಯ ಬಾಧಿಸುತ್ತಿದೆ.'

—ಎಂದು ತಾವು ಪೂಜೆ ಮಾಡಲು ಹಿಂಜರಿದುದರ ಹಿನ್ನೆಲೆಯನ್ನು ವಿವರಿಸಿದರು.

ಶಾಮಣ್ಣ ನಡುವೆ ಒಂದೂ ಮಾತಾಡದೆ, ವೆಂಕಟದಾಸಪ್ಪನವರು ಹೇಳಿದುದನ್ನೆಲ್ಲಾ ಎಚ್ಚರವಿಟ್ಟು ಕೇಳಿದ. ವೆಂಕಟದಾಸಪ್ಪನವರ ಹೃದಯದಲ್ಲಾಗುತ್ತಿದ್ದ ಹೋರಾಟ, ಅವರ ಬಯಕೆಯ ಬೇಗೆಯನ್ನರಿತು, ಆತನ ಹೃದಯಕ್ಕೂ ನೋವಾಯಿತು. ಆದರೆ ವೆಂಕಟದಾಸಪ್ಪನವರು ಈ ದಿನ ಅಮ್ಮನವರನ್ನು ಸಕಾಮವಾಗಿ ಪೂಜಿಸಲು ಹಿಂಜರಿದುದು ಮಾತ್ರ ಅವನಿಗೆ ಸಮರ್ಪಕವೆಂದು ಕಾಣಲಿಲ್ಲ.

'ನೀನು ಹೇಳಿದುದೆಲ್ಲಾ ಸರಿ ದಾಸಣ್ಣ. ಆದರೆ ಈ ದಿನ ಅಮ್ಮನವರನ್ನು ಪ್ರಾರ್ಥಿಸಿ ಪೂಜೆ ಮಾಡಿದುದು ನನಗೇನೋ ತಪ್ಪು ಎಂದು ತೋರುವುದಿಲ್ಲ.'

—ಎಂದರು.

'ಅದು ಹೇಗೆ ಹಾಗೆ ಹೇಳುತ್ತಿ, ಮಾವ? ದೇವಿ ಎಲ್ಲವೂ ನನ್ನ ಇಚ್ಛೆ ಎಂದಾಗ, ಇದು ಹೀಗಾಗಲಿ ಎಂದು ನಾನು ಆಕೆಯನ್ನು ಪ್ರಾರ್ಥಿಸಿದರೆ, ಅಂಥ ಪೂಜೆ ಒತ್ತಾಯವಾಗುವುದಿಲ್ಲವೇ?'

'ಹಾಗೆಂದು ನನಗೆ ತೋರುವುದಿಲ್ಲ.'

'ಏಕೆ?'

'ನಾವೆಲ್ಲಾ ಆ ಮಹಾತಾಯಿಯ ಮಕ್ಕಳು, ದಾಸಣ್ಣ. ಆ ತಾಯಿ ಇರುವುದೇ ನಮ್ಮ ಇಷ್ಟಾರ್ಥ ಈಡೇರಿಸುವ ಸಲುವಾಗಿ. ಇಲ್ಲವೆಂದರೆ ನಮ್ಮ ಕಷ್ಟನಿಷ್ಠೂರ ನೀಗಿಕೊಳ್ಳಲು ನಾವು ಯಾರಿಗೆ ಮೊರೆಹೋಗಬೇಕು? ದೈವವೂ ಆಶ್ರಯವಲ್ಲವೆಂದಾಗದೆ, ಮನುಷ್ಯನಿಗೆ ಮತ್ಯಾವ ಆಶ್ರಯ? ನಿನ್ನ ಹೆಂಡತಿಯ ಕಷ್ಟ ನೀಗಿಸು ಎಂದು ನೀನು ಬೇಡುವುದು ತಪ್ಪಾದರೆ, ಅದೇ ಲೆಕ್ಕದಿಂದ ಆಕೆಯ ದರ್ಶನ ಬಯಸುವುದೂ ತಪ್ಪಾಗುತ್ತದೆ; ನಿನ್ನದೇನು— ಮಹಾ ಮಹಾ ಮುನಿ, ಜ್ಞಾನಿಗಳು ಮುಕ್ತಿಯನ್ನು ನೀಡು ಎಂದು ಬೇಡಿ ತಪಸ್ಸಾಚರಿಸುವುದೂ ತಪ್ಪಾಗುತ್ತದೆಯಲ್ಲವೇ ?'

—ಬಹು ಮೊನೆಯಾಗಿ ಪ್ರಶ್ನೆ ಮಾಡಿದ ಶಾಮಣ್ಣ.

ವೆಂಕಟದಾಸಪ್ಪನವರಿಗೆ ಆ ಪ್ರಶ್ನೆಗೆ ಏನು ಉತ್ತರ ಹೇಳುವುದೂ ತೋಚಲಿಲ್ಲ. ಎಂತಲೇ ಏನೂ ತೋಚದೆ ಸುಮ್ಮನೆ ಕುಳಿತುಬಿಟ್ಟರು. ಅವರು ಸುಮ್ಮನಿದ್ದುದನ್ನು ಕಂಡು ಶಾಮಣ್ಣನೇ ತನ್ನ ಮಾತನ್ನು ಮುಂದುವರಿಸಿ ಹೇಳಿದ—

'ಆದ್ದರಿಂದ ನೀನು ಈ ಭಯವನ್ನೆಲ್ಲಾ ಬಿಟ್ಟು ಬಿಡು ದಾಸಣ್ಣ. ನಾನು ಇದು ನನ್ನ ಮಂಗಳಿಗೆ ಸಂಬಂಧಿಸಿದ ವಿಷಯ ಎಂದು ವಕೀಲಿ ಮಾಡುತ್ತಿಲ್ಲ. ನೀನು ಬಯಸುತ್ತಿರುವುದು ಆಕೆಯ ದರ್ಶನ—ಅಲ್ಲವೇ?'

'ನಿಜ.'

'ಹೀಗಾದರೆ ಆ ದರ್ಶನವಾಗುತ್ತದೆಯೆಂದು, ಹೀಗೆಯೇ ಪೂಜೆ ಮಾಡಬೇಕೆಂದು ಯಾರು ನಿಶ್ಚಯ ಮಾಡಿದಾರೆ ದಾಸಣ್ಣ. ಎಲ್ಲರೂ ವಸಿಷ್ಠ, ವಿಶ್ವಾಮಿತ್ರರ ಹಾಗೆ ಕಾಡಿಗೆ ಹೋಗಿ ತಪಸ್ಸು ಮಾಡುವುದು ಸಾಧ್ಯವಿದೆಯೇ? ಅದು ಸಾಧ್ಯವಿಲ್ಲವೆಂದೇ ಅಲ್ಲವೆ ಆಚಾರ್ಯರು 'ಯದ್ಯದ್ ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ' ಎಂದು ತಮ್ಮ ಬಾಳೆಲ್ಲವನ್ನು ಶಂಕರನ

ಚರಣಗಳಿಗೆ ಅರ್ಪಿಸಿದುದು. ನನಗೆ ತೋರುತ್ತದೆ ದಾಸಣ್ಣ–ಸಂಸಾರಿಯಾದ ಭಕ್ತನಿಗೆ ಅದಕ್ಕಿಂತ ಬೇರೆ ಮಾರ್ಗವೇ ಇಲ್ಲ. ಆದ್ದರಿಂದ ನಾನು ಹೇಳು ವುದಿಷ್ಟು, ದಾಸಣ್ಣ–ದೈವೇಚ್ಛೆಯು ಪರಿ ಹೇಗಿದೆಯೆಂದು ಕಾಣುವುದು ಹುಲು ಮನುಷ್ಯರಾದ ನನ್ನಿಂದ ನಿನ್ನಿಂದ ಸಾಧ್ಯವಿಲ್ಲ. ಆದ್ದರಿಂದ ನಮಗೆ ಸರಿ ಎಂದು ತೋರಿದುದನ್ನು ಮಾಡುವುದು. ಮಾಡಿದುದನ್ನೆಲ್ಲಾ 'ತಾಯಿ, ನಿನಗೇ ಅರ್ಪಿತವಾಗಲಿ' ಎಂದು ಅಡ್ಡಬೀಳುವುದು. ಅದು ಬಿಟ್ಟು ಬೇರೆ ದಾರಿಯೇ ನಮಗಿಲ್ಲ.'

'ನೀನು ಹೇಳುವುದು ಸರಿ, ಮಾಪಯ್ಯ ಮುಕ್ತಿಗಾಗಿ ದೇವತೆಯನ್ನು ಬೇಡುವುದೂ ಒಂದು ರೀತಿ ಸಕಾಮ ಪೂಜೆಯೇ ಆದರೂ, ನನ್ನ ಹೆಂಡತಿಯನ್ನು ಉಳಿಸು, ನನಗೆ ಮತ್ತೊಂದನ್ನು ಕೊಡು, ಎಂದು ಬೇಡುವುದೂ ಅದೇ ವರ್ಗಕ್ಕೆ ಸೇರುತ್ತದೆಯೇ? ಎರಡು ಬಗೆಯ ಬೇಡಿಕೆಯೂ ಒಂದೇ ಬಗೆಯದೆಂದು ಭಾವಿಸಿದರೆ ತಪ್ಪಾಗುವುದಿಲ್ಲವೇ?'

—ಎಂದು ಮರುಪ್ರಶ್ನೆ ಮಾಡಿದರು ವೆಂಕಟದಾಸಪ್ಪ.

'ಅದು ತಪ್ಪು ಎಂದರೆ, ನಾವು ದಿನವೂ ಮಾಧ್ಯಾಹ್ನಿಕ ಮಾಡುವಾಗ ಸೂರ್ಯನನ್ನು 'ಪಶ್ಯೇಮ ಶರದಶ್ಶತಂ, ಜೀವೇಮ ಶರದಶ್ಶತಂ, ನನ್ದಾಮ ಶರದಶ್ಶತಂ, ಭವಾಮ ಶರದಶ್ಶತಂ, ಶೃಣವಾಮ ಶರದಶ್ಶತಂ, ಪ್ರಭವಾಮ ಶರದಶ್ಶತಂ, ಅಜೀತಾಸ್ಯಾಮ ಶರದಶ್ಶತಂ' ಅಂತ ಬೇಡಿಕೊಳ್ಳುತ್ತೇವೆ ಯಲ್ಲಾ, ಅದೂ ತಪ್ಪಾಗುವುದಿಲ್ಲವೇ? ನನಗೆ ತೋರುವುದಿಷ್ಟು, ದಾಸಣ್ಣ–ಈ ಬಗೆಯ ಬೇಡಿಕೆಗಳು ತಪ್ಪಲ್ಲ.' 'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ' ಅಂತ ಅಡ್ಡ ಬಿದ್ದಮೇಲೆ, ಯಾರಿಗೆ ನಾವು ಅಡ್ಡಬೀಳು ತ್ತೇವೋ ಅವರನ್ನು 'ನಮಗೆ ಬೇಕಾದುದನ್ನು ದಯಪಾಲಿಸಿ' ಎಂದು ಬೇಡಿ ದರೆ, ತಪ್ಪೇನೂ ಅಲ್ಲ. ಅಲ್ಲದೆ ಬ್ರಾಹ್ಮಣನ ಕೆಲಸವೇನು? ದಿನಕ್ಕೆ ಮೂರು ಬಾರಿ, ತಾನು ಪೂಜಿಸುವ ದೇವತೆಗಳೆಲ್ಲವನ್ನೂ 'ಜಗತ್ತೆಲ್ಲವೂ ಸುಖವಾಗಿರಲಿ' ಎಂದು ಪ್ರಾರ್ಥಿಸುವುದೇ ತಾನೇ? ಆ ಜಗತ್ತು ಎನ್ನುವಾಗ 'ನಾನು, ನನ್ನ ಮಡದಿ–ಮಕ್ಕಳು, ನನ್ನ ಮನೆಯನ್ನು ಬಿಟ್ಟು ಉಳಿದ ಜಗತ್ತು' ಎಂದೇನೂ ಹೇಳುವುದಿಲ್ಲವಲ್ಲ. ಆದ್ದರಿಂದ ನನಗೆ ನಿನ್ನ ಈ ಚಿಂತೆ–ಕೊರಗು ಎಲ್ಲಾ ತಪ್ಪೆಂದೇ ತೋರುತ್ತದೆ.'

—ಶಾಮಣ್ಣ ತಾನು ತಿಳಿದುದನ್ನು ಸ್ಪಷ್ಟವಾಗಿ ಹೇಳಿದ.

'ಅಂದರೆ ಈ ಬಗೆಯ ಪೂಜೆ ಮಾಡಬಹುದು ಅನ್ನು. . . .'

'ಭೇಷಕ್ ಮಾಡಬಹುದು. 'ಯಾರಿಗಾದರೂ ಕೇಡಾಗಲಿ, ತೊಂದರೆಯಾಗಲಿ' ಎಂದು ಪ್ರಾರ್ಥಿಸಿ, ಅದಕ್ಕಾಗಿ ನಮ್ಮ ಜಪ-ತಪವನ್ನು ವಿನಿಯೋಗಿಸಿದರೆ, ತಪ್ಪಾಗುತ್ತದೆಯೇ ಹೊರತು, 'ಜಗತ್ತಿಗೆಲ್ಲಾ ಮಂಗಳವಾಗಲಿ; ಜಗತ್ತಿಗೆ ಕ್ಷೇಮವಾಗಿ, ನನಗೂ ಕ್ಷೇಮವಾಗಲಿ' ಅಂತ ಬೇಡುವುದರಲ್ಲಿ ತಪ್ಪೇನೂ ಇಲ್ಲ. ಈ ದೃಷ್ಟಿಯಿಂದ ಪೂಜೆ ಮಾಡಿದರೆ, ದೇವರು ಸಂತುಷ್ಟನಾಗಬಹುದೇ ಹೊರತು ಎಂದೂ ಅಸಂತುಷ್ಟನಾಗಲಾರ.'

'ಇರಬಹುದು, ಆದರೆ. . . .'

'ಮತ್ತೇನು ಅನುಮಾನ?'

'ಇಂಥ ಪೂಜೆಯಿಂದ ನನ್ನ ಬಯಕೆ ಈಡೇರುತ್ತದೆಯೇ?'

'ಯಾವ ಬಯಕೆ?'

'ಅಮ್ಮನವರ ದರ್ಶನವಾಗುವುದು. . . .'

—ಕತ್ತಲಿನಲ್ಲಿರುವವರು ಬೆಳಕಿಗಾಗಿ ಬೇಡುವಂತೆ ಕೇಳಿದರು ವೆಂಕಟದಾಸಪ್ಪ.

'ಅದು ಬೇರೆ ಮಾತಾಯಿತು. . . .'

—ಶಾಮಣ್ಣ ಹೇಳಿದ.

'ಅಂದರೆ. . .'

'ಅದಕ್ಕೆ ಉತ್ತರ ಕೊಡುವ ಶಕ್ತಿ ನನಗಿಲ್ಲ. ದೇವತಾ ದರ್ಶನವನ್ನು ಸಾಧ್ಯ ಮಾಡಿಕೊಳ್ಳುವುದು ಹೇಗೆ ಎಂದು ನನಗೆ ತಿಳಿಯದು ದಾಸಣ್ಣ, ಆದರೆ ಆ ವಿಷಯ ಅಲ್ಲಲ್ಲಿ ಕೇಳಿದ್ದೇನೆ. ಅದಕ್ಕೆ ಹೀಗೆ ಪೂಜೆ ಮಾಡಿದರೆ ಸಾಲದಂತೆ.'

'ಹಾಗಾದರೆ ಹೇಗೆ ಮಾಡಬೇಕು?'

'ಅದಕ್ಕೆ ವಿಶೇಷವಾದ ಜಪ, ತಪ, ಪೂಜೆ, ಹೋಮ, ಹವನ; ಗೊತ್ತಾದ ದಿನಗಳಲ್ಲಿ ವಿಶಿಷ್ಟವಾದ ಕರ್ಮಗಳು ಎಲ್ಲವನ್ನೂ ಮಾಡಬೇಕು ಎಂದು ನಾನು ಕೇಳಿದೇನೆ. ಒಂದೊಂದು ದೇವತೆಗೂ ಒಂದೊಂದು ಬಗೆಯ ವಿಶಿಷ್ಟವಾದ ರೀತಿಯ ಪೂಜಾ ಕ್ರಮವಿದೆಯಂತೆ —ಅದನ್ನು ಮಾಡುವುದಕ್ಕೆ ಮೊದಲು ಸಾಧಕನಿಗೆ ಸರಿಯಾದ ಗುರುವಿನಿಂದ ಮಂತ್ರೋಪ

ದೇಶವಾಗಬೇಕಂತೆ—ಮಂತ್ರೋಪದೇಶವಾದ ಬಳಿಕ ನಿರ್ದಿಷ್ಟ ಪೂಜಾ ವಿಧಿಗಳನ್ನು ಬಹಳ ಕಟ್ಟುನಿಟ್ಟಾಗಿ ಮಾಡಿದರೆ ಬಳಿಕ ದೇವತಾ ದರ್ಶನ ಲಭ್ಯವಾಗುವುದೇನಂ, ಆ ದೇವತೆ ನಾವು ಹೇಳಿದ ಹಾಗೆ ಕೇಳುತ್ತದೆ ಯಂತೆ. ನಿನಗೆ ದೇವತಾ ದರ್ಶನವಾಗಬೇಕು ಎಂಬ ಆಸೆಯಿದ್ದರೆ, ಹಾಗೇನಾದರೂ ಮಾಡಬೇಕು. ಆದರೆ ಅದೆಲ್ಲಾ ಆಡಿದಷ್ಟು ಸುಲಭವಲ್ಲ. ಆ ಕೆಲಸದಲ್ಲಿ ಎಳ್ಳುಕಾಳು ಮುಳ್ಳು ಮೊನೆಯಷ್ಟು ಹೆಚ್ಚು ಕಡಮೆಯಾದರೂ, ಸಾಧಕನ ತಲೆಯೇ ಸಹಸ್ರ ಹೋಳಾಗಿ ಸಿಡಿದು ಹೋಗುತ್ತದೆಯಂತೆ.'

ಶಾಮಣ್ಣ ಹೇಳಿದ ಆ ಮಾತನ್ನು ಕೇಳಿ ವೆಂಕಟದಾಸಪ್ಪನವರ ಮನಸ್ಸಿನಲ್ಲಿ ಹೊಸ ಆಸೆಯೊಂದು ಮೂಡಿ—

'ಆಯಿತು—ಇಷ್ಟು ಹೇಳಿದೆಯಲ್ಲಾ ಮಾವ. ಎಲ್ಲದಕ್ಕೂ ಒಂದು ದಾರಿಯಿದೆ ಎಂದು ತಿಳಿದು ನನಗಿವತ್ತು ಹೊಸ ಧೈರ್ಯ ಬಂತು. ಇಷ್ಟಾಯಿತಲ್ಲಾ— ಪೂಜಾ ವಿಧಾನ, ಕ್ರಮ ಏನೂಂತ ಗೊತ್ತಿದ್ದರೆ ಹೇಳು; ಹಾಗೇ. ಮಂತ್ರೋಪದೇಶವೂ ಗೊತ್ತಿದ್ದರೆ ಹೇಳು. ಅದೆಷ್ಟು ಕಟ್ಟುನಿಟ್ಟಾಗಿ ಮಾಡಬೇಕಾದದ್ದಾದರೂ ಮಾಡುತ್ತೇನೆ.'

—ಎಂದರು.

'ಇದೆಲ್ಲಾ, ಇಷ್ಟು ಹೊತ್ತು ನಾನು ಹೇಳಿದುದು ನನ್ನ ಅನುಭವದ ಮಾತಲ್ಲ ದಾಸಣ್ಣ—ಎಲ್ಲಾ ಕೇಳಿಕೆಯ ಮಾತು. ಮಂತ್ರೋಪದೇಶ ಕೊಡುವುದಿರಲಿ, ಪಡೆಯುವ ಯೋಗ್ಯತೆಯೂ ನನಗಿಲ್ಲ. ನಿನಗೆ ಅಮ್ಮನವರ ಒಲುಮೆಯಿದೆ. ಆ ತಾಯಿಗೆ ನಿನಗೆ ದರ್ಶನ ಕೊಡಬೇಕೆಂಬ ಬಯಕೆಯೂ ಇದೆ. ಅದು ಯಾವ ಕಾಲಕ್ಕೆ, ಯಾರ ಮೂಲಕ, ಯಾವ ಗುರುವಿನ ಅನುಗ್ರಹವಾಗಿ ಆಗಬೇಕೋ—ಹಾಗಾಗುತ್ತದೆ.'

'ಅಂತೂ ಗುರುವಿನ ಅನುಗ್ರಹವಿಲ್ಲದೆ ದರ್ಶನ ದ್ವಾರ ತೆರೆಯುವುದಿಲ್ಲ ಅನ್ನು. . . '

'ಊಹೂ—ಪುರಂದರದಾಸರು ಹೇಳಿಲ್ಲವೇ— 'ಗುರುವಿನ ಗುಲಾಮನಾಗುವ ತನಕ ದೊರಕದಣ್ಣ ಮುಕುತಿ' ಅಂತ. ಆದ್ದರಿಂದ ಗುರುವಿನ ಕರುಣೆಯಾಗುವ ತನಕ, ಇಂಥಾ ದೇವತಾ ಕಾರ್ಯದಲ್ಲಿ ಸಿದ್ಧಿ ದೊರಕುವುದಿಲ್ಲ. ಅದಕ್ಕೆ 'ಅಲ್ಲವೇ ಹಿರಿಯರು ಗುರುವನ್ನು ದೇವರೊಂದಿಗೆ ಸರಿ ಸರಿಯಾದ

ಪೀಠದಲ್ಲಿ ಕೂಡಿಸಿ: 'ಗುರುರ್ಬ್ರಹ್ಮಾ, ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ, ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀ ಗುರುವೇ ನಮಃ' ಎಂದು ಪ್ರಾರ್ಥಿಸಿರುವುದಂ. ಗುರುವಿನ ಅನುಗ್ರಹವಾದರೆ, ದೇವತೆಯು ಅನುಗ್ರಹವಾದಂತೆಯೇ ದಾಸಣ್ಣ; ಗುರು ದರ್ಶನವಾದ ಬಳಿಕ ದೇವತಾ ದರ್ಶನಕ್ಕೆ ಹೆಚ್ಚು ಕಾಲ ಕಾಯಬೇಕಾದದ್ದಿರುವುದಿಲ್ಲ.'

ಶಾಮಣ್ಣ ಹೇಳಿದುದನ್ನು ಕೇಳಿ ವೆಂಕಟದಾಸಪ್ಪನವರು ನಿರಾಶೆಯ ನಗು ನಕ್ಕರು. ಅದನ್ನು ಕಂಡು ಶಾಮಣ್ಣ—

'ಏಕೆ? ನನ್ನ ಮಾತು ಸುಳ್ಳೇ?'

—ಎಂದು ಕೇಳಿದ.

'ಊಹೂ'

'ಮತ್ತೆ ನಕ್ಕದ್ದೇಕೆ?'

'ಇಷ್ಟು ದಿನ 'ತಾಯೀ, ಎಂದು ನಿನ್ನ ದರ್ಶನ ಕೊಡುತ್ತೀಯ' ಎಂದು ಬೇಡಿದ್ದಾಯಿತು. ಆ ಚಿಂತೆಯೇ ಸಾಕಾಗಿತ್ತು. ಈಗ, ಆ ಬಯಕೆ ತೀರುವ ದಿನ ದೂರ ಹೋದದ್ದೇ ಅಲ್ಲ. ಗುರುದರ್ಶನ, ಗುರೂಪದೇಶ, ಗುರುಅನುಗ್ರಹವಾಗದೆ, ಅದು ಸಾಧ್ಯವಾಗುವುದೇ ಇಲ್ಲ ಎಂದು ಹೇಳಿ ಆ ಗುರು ದರ್ಶನಕ್ಕಾಗಿಯೂ ಕಾಯಬೇಕು ಎಂದೆಯಲ್ಲಾ ಮಾವ—ಹಾಗಾದರೆ ನನ್ನ ಬಯಕೆ ಸದ್ಯಕ್ಕೆ ತೀರಿದ ಹಾಗೇ ಆಯಿತಲ್ಲಾ...'

'ಇದೆಲ್ಲಕ್ಕೂ ಅಷ್ಟು ಅವಸರ ಮಾಡಬಾರದು ದಾಸಣ್ಣ....'

—ವೆಂಕಟದಾಸಪ್ಪನವರ ನಿರಾಶೆ ಮನವರಿಕೆಯಾಗಿ ಸಮಾಧಾನ ಮಾಡುತ್ತಾ ಹೇಳಿದ ಶಾಮಣ್ಣ.

'ಅಲ್ಲ ಎಂದರೆ, ಥಣ್ಣಗೆ ಬೆಲ್ಲ ಬಡಿದ ಕಲ್ಲಿನ ಹಾಗೆ ಕುಳಿತಿರಬೇಕು ಎನ್ನುತ್ತೀಯಾ?'

—ಕೊಂಚ ಕಹಿಯಾಗಿ ಕೇಳಿದರು ವೆಂಕಟದಾಸಪ್ಪ.

'ಹಾಗೂ ಅಲ್ಲ....'

'ಅಂದರೆ—'

'ಎಲ್ಲದಕ್ಕೂ ಕಾಲ ಬೇಕು.'

'ಇಷ್ಟು ದಿನ ತಾಯಿಗೆ ಕಾದದ್ದಾಯಿತು; ಈಗ ಗುರುವಿಗೆ ಕಾಯ ಬೇಕು ಅಂದೆ. ಅದೂ ಸಾಲದು ಅಂತ ಈಗ ಕಾಲಕ್ಕೂ ಕಾಯಬೇಕು ಅನ್ನುತ್ತೀಯಲ್ಲ ಮಾವ, ಇದೇನು ಮಾತು?'

'ನೀನು ಈಗ ಬಹಳ ದೊಡ್ಡದಕ್ಕೇ ಏಟು ಹಾಕಿದೀಯ; ಸಣ್ಣ ಪುಟ್ಟ ದಕ್ಕಲ್ಲ. ದೊಡ್ಡದು ನಮ್ಮದಾಗಬೇಕು ಎಂದರೆ, ಅದಕ್ಕೆ ಸಾಕಷ್ಟು ಕಾಯ ಬೇಕು.'

'ಅಂದರೆ—?'

'ನಿನಗೆ ಬೇಕಾದದ್ದು ಭತ್ತವಾದರೆ, ಬಿತ್ತಿದ ಮೂರು ತಿಂಗಳಿಗೋ ಆರು ತಿಂಗಳಿಗೋ ಫಲ ಕೈಸೇರುತ್ತದೆ. ಆದರೆ ತೆಂಗಿನ ಫಸಲೇ ಬೇಕು ಎಂದರೆ ಹತ್ತು ವರ್ಷವಾದರೂ ಕಾಯಬೇಕು. ಹದಿನೈದು ವರ್ಷವಾದರೂ ಕಾಯಬೇಕು. ಅಮಲ್ದಾರರನ್ನು ನೋಡಬೇಕು ಅಂದರೆ ಚಳ್ಳಕೆರೆಗೇ ಹೋದರೂ ಸಾಕು. ಮಹಾರಾಜರನ್ನು ನೋಡಬೇಕು ಅಂದರೆ, ಗಾಡಿ ಕಟ್ಟಿಸಿಕೊಂಡು ಇಪ್ಪತ್ತು ದಿನ ಮೈಸೂರಿಗೆ ಪ್ರಯಾಣ ಮಾಡಬೇಕು: ಹಾಗೆ ಹೋದರೂ, ದಸರಾದಲ್ಲೋ, ವರ್ಧಂತಿಯಲ್ಲೋ ಹೋದರೇನೇ ಅವರ ದರ್ಶನವಾಗಬೇಕಾದರೆ. ಇದಕ್ಕೇ ಇಷ್ಟೆಲ್ಲಾ ಪಟರಂಗವಾಗಬೇಕು ಅಂದರೆ, ಇನ್ನು ದೇವತಾ ದರ್ಶನಕ್ಕೆ ಏನೇನು ಮಾಡಬೇಕೋ, ಎಷ್ಟು ಕಾಯಬೇಕೋ— ಯೋಚನೆ ಮಾಡು ದಾಸಣ್ಣ. ಇಂಥ ವಿಷಯಗಳಲ್ಲಿ ಆತುರ ಸಲ್ಲದು. 'ಆತುರಗಾರನಿಗೆ ಬುದ್ಧಿ ಮಟ್ಟ' ಅಂತ ಗಾದೇನೇ ಇಲ್ಲವೇ?'

'ಅಂತೂ ನಾನು ಏನು ಮಾಡಿದರೂ ಯಾವುದು ಯಾವಾಗ ಆಗ ಬೇಕೋ ಆಗಲೇ ಆಗುತ್ತದೆ; ಅಲ್ಲಿಯವರೆಗೂ ನಾನು ಮಾಡುವ ಪ್ರಯತ್ನ ಪಡುವಶ್ರಮ ಎಲ್ಲವೂ ವಿಫಲ ಅನ್ನು.'

'ನಾನು ಹಾಗೂ ಹೇಳುವುದಿಲ್ಲ.'

'ಅಂದರೆ—'

'ಪ್ರಯತ್ನ ಉಪಯೋಗವಿಲ್ಲ ಅಂದು, ಸುಮ್ಮನೆ ಕುಳಿತಿರುವುದೂ ತಪ್ಪು'.

'ಎಂದರೆ—ಮನುಷ್ಯ ಏನು ಮಾಡಬೇಕು ಅಂತೀಯ'

'ನಾವು ಮಾಡೋ ಪ್ರಯತ್ನ ಮಾಡುತ್ತಲೇ ಇರಬೇಕು ದಾಸಣ್ಣ. ಬೆಳೆ ಬರಬೇಕು ಎಂದರೆ, ಮಳೆ ಕಾದು, ಆಕಾಶ ನೋಡುತ್ತ ಕುಳಿತರೆ

ಆಗುತ್ತದೆಯೇ? ಉತ್ತಬೇಕು, ಬಿತ್ತಬೇಕು, ಕಳೆ ಕೀಳಬೇಕು, ದನಕರು ಬಂದು ಮೇಯದ್ದ ಹೋಗದ ಹಾಗೆ ಬೇಲಿ ಹಾಕಬೇಕು. ಅಲ್ಲವೇ?'

'ನಿಜ.'

'ಇದಕ್ಕೂ ಅಷ್ಟೇ–ಫಲ ಪ್ರಾಪ್ತಿಯಾಗುವವರೆಗೂ ನಾವು ಮಾಡಬೇಕಾದ ಕೃಷಿ ಮಾಡುತ್ತಲೇ ಇರಬೇಕು.'

'ಅಂದರೆ–ಏನು ಮಾಡಬೇಕು? ಇದಕ್ಕೇನು ಕೃಷಿ ಮಾಡಲಿ?'

'ಇದಕ್ಕೆ ಕೃಷಿ ಅಂದರೆ–ತಿಳಿದಷ್ಟು ಪೂಜೆ ಮಾಡುತ್ತಿರುವುದು; ನಮ್ಮ ಬುದ್ಧಿಯನ್ನೆಲ್ಲಾ ಅತ್ತ ಕಡೆ ತಿರುಗಿಸುವುದು; ಆ ಬುದ್ಧಿಯನ್ನು ಶಾಸ್ತ್ರಾಧ್ಯಯನದಿಂದ ಹದ ಮಾಡಿಕೊಳ್ಳಬೇಕು. ಅಷ್ಟು ಕೆಲಸ ಮಾಡುತ್ತಿರು. ಹಾಗೆ ಪೂಜೆ ಮಾಡುವಾಗ– 'ಜಗತ್ತಿಗೆಲ್ಲಾ ಕ್ಷೇಮವಾಗಲಿ, ತಾಯಿ' ಎಂದು ಬೇಡಿಕೋ. ನಿನ್ನ ಪೂಜೆಯಿಂದ ಯಾರಿಗಾದರೂ ಕಷ್ಟ ನಿವಾರಣೆಯಾಗುತ್ತದೆ, ಸುಖ ಪ್ರಾಪ್ತಿಯಾಗುತ್ತದೆ ಎನ್ನುವ ಹಾಗಿದ್ದರೆ, ಅದಕ್ಕೆ ಬೇಡ ಎನ್ನಬೇಡ. ಅಂಥ ಕೆಲಸ ನಿನ್ನ ಪೂಜೆಯ ಮೂಲಕ ಆಗುವ ಹಾಗಿದ್ದರೆ, ಇನ್ನೂ ಹತ್ತು ಹೂವು ಹಾಕಿ ಪೂಜೆ ಮಾಡು. ಹತ್ತು ಜನಕ್ಕೆ ನಿನ್ನಿಂದ ಉಪಕಾರವಾಗಿ, ಆ ಜನ 'ತಾಯಿ, ಇದರಿಂದ ನಮಗೆ ಒಳ್ಳೆಯದಾಯಿತು, ಇವರಿಗೆ ಲೇಸಾಗಲ' ಅಂತ ಹರಸಿದರೆ, ನಿನ್ನ ಪೂಜಾಫಲವಾಗಿ ಅಲ್ಲದೆ ಹೋದರೂ ಹತ್ತು ಜನರ ಬಾಯಿ ಹರಕೆಯಿಂದಲಾದರೂ ನಿನಗೆ ಒಳ್ಳೆಯದಾಗಬಹುದು. ಮಹಾನವಮಿ ದಿನ ಮನೆ ಮನೆ ಬಾಗಿಲಿಗೂ ಬರುವ ಹುಡುಗರನ್ನು ನೀನು ನೋಡಿದೀಯಲ್ಲಾ ದಾಸಣ್ಣ ...'

'ನೋಡಿದೀನಿ.'

'ಹುಡುಗರು–

ಧನಕನಕ ವಸ್ತು ವಾಹನವಾಗಲೆಂದು
ಕನಕ ದಂಡಿಗೆ ಚೌರಿ ನಿಮಗಾಗಲೆಂದು
ದಿನದಿನಕೆ ರಾಜಮನ್ನಣೆ ಹೆಚ್ಚಲೆಂದು
ಅನುದಿನವು ಹರಸಿದೆವು ಬಾಲಕರು।
ಮಳೆ ಬಂದು ಬೆಳೆ ಬೆಳೆದು ಧರೆ ತಣಿಯಲೆಂದು
ತಿಳಿಗೊಳಗಳುಕ್ಕಿ ತುರುಗಳು ಕರೆಯಲೆಂದು

ನಳಿನಮುಖಿಯರು ಸುಪುತ್ರರ ಪಡೆಯಲೆಂದು
ಇಳೆಯೊಳಗೆ ಹರಸಿದೆವು ಬಾಲಕರು ಬಂದು'

—ಅಂತ ಹಾಡು ಹೇಳಿಕೊಂಡು ಬಂದು ಹಳ್ಳೀಲಿ ಇರೋರಿಗೆಲ್ಲಾ ಒಳ್ಳೇಯದಾಗಲಿ ಅಂತಾ ಹರಸಿ ಹೋಗ್ತಾರಲ್ಲಾ. ಊರಿಗೆಲ್ಲಾ ಹರಸಿದಾಗ, ಆ ಹರಸಿದವರಿಗೂ ಅಷ್ಟು ಕಾಳು ಕಡಿ ಸಿಗುತ್ತೋ ಇಲ್ವೋ? ಹಾಗೇ ಅವರವರಿಗೆ ಒಳ್ಳೇಯದಾಗಲಿ ಅಂತ ಹರಸಿದರೆ, ಹಾಗೆಂದು ಅವರ ಪರವಾಗಿ, ಅಮ್ಮನವರಿಗೆ ಪೂಜೆ ಮಾಡಿದರೆ, ಅದರಿಂದ ಅವರಿಗೆ ಒಳ್ಳೆಯದಾಗೋವರ ಜೊತೆಗೆ, ನಿನಗೂ ಅಷ್ಟಿಷ್ಟು ಲೇಸಾಗುತ್ತೆ'.

—ಎಂದ ಶಾಮಣ್ಣ ತನ್ನ ದೃಷ್ಟಿಕೋಣವನ್ನು ವಿವರಿಸಿ.

'ಹಾಗಾದರೆ ತತ್ಕಾಲಕ್ಕೆ ನನಗೆ ಅದೇ ದಾರಿ ಅನ್ನೀಯಾ ಮಾವ?'

'ನಾವು ಮಾಡಬಹುದಾದದ್ದು ಅಷ್ಟೇ ದಾಸಣ್ಣ. ಲೋಕೋಪಕಾರದ ಜಾಡಿನಲ್ಲಿ ನಾವು ನಡೆದರೆ, ಅದರಿಂದ, ನಾವು ಬಯಸಲಿ, ಬಿಡಲಿ, ನಮಗೂ ಅಷ್ಟಿಷ್ಟು ಒಳಿತಾಗುತ್ತದೆ ಅನ್ನುವ ವಿಷಯದಲ್ಲಿ ನನಗೆ ಏನೇನೂ ಸಂದೇಹವಿಲ್ಲ. ಈಗ ನನ್ನ ವಿಷಯಾನೇ ತಗೋ. ನಾನು ಮಾಡೋ ಪೂಜೆ, ಪುರಸ್ಕಾರ ಎಲ್ಲಾ ವರ್ಷದಲ್ಲೊಂದು ರಾಮೋತ್ಸವ ಅಷ್ಟೆ. ಅದು ಮಾಡೋದರಿಂದ ನಾನು ಮುಕ್ತೀನೂ ಬಯಸಲಿಲ್ಲ; ಸಾಮ್ರಾಜ್ಯ ಪಟ್ಟಾಭಿಷೇಕಾನೂ ಬಯಸಲಿಲ್ಲ. ಏನಿಲ್ಲವಾದರೂ ಹೋಗಲಿ—ಹತ್ತು ದಿನ, ಜನ, ದೇವರ ಹೆಸರು ಹೇಳಿಕೊಂಡು ಸಂತೋಷ ಪಡಬಹುದು; ಮಹಾಮಂಗಳಾರತಿಯ ದಿನ ನೂರಾರು ಜನಕ್ಕೆ ಅನ್ನ ಸಂತರ್ಪಣೆಯಾಗಿ ಭೂತತೃಪ್ತಿಯಾಗುತ್ತದೆ ಅಂತ ಎಲ್ಲಾ ಬಿಟ್ಟು ರಾಮೋತ್ಸವದ ಕೆಲಸಕ್ಕೆ ಮುಂದೆ ನುಗ್ಗುತ್ತಾ ಇದ್ದೆ. ನನಗೆ ಬುದ್ಧಿ ತಿಳಿದಂದಿನಿಂದಲೂ ನಾನು ಆ ಉತ್ಸವದ ಮುಂದಾಳಾಗಿದ್ದೇನೆ. ಆದರೆ ಒಂದು ವರ್ಷವಾದರೂ ಅದರಿಂದ ನನಗೆ ಇಂಥ ಒಳ್ಳೆಯದಾಗಲಿ ಅಂತ ನಾನು ಬೇಡಿದ್ದರೆ, ನೀನಿಟ್ಟ ಆಣೆ. ಆದರೂ ಶ್ರೀರಾಮು ಎಂಥೆಂಥವರೋ ಹೇಗಾಗುತ್ತೋ ಅಂತ ಹೆದರೋ ವಾಗಳ ಮದುವೇನ, ನಿನ್ನಂಥ ಅಳಿಯನನ್ನು ಒದಗಿಸಿ, ಹೂವಿನ ಸರ ಎತ್ತಿದಷ್ಟು ಸಲೀಸಾಗಿ ನಡೆಸಿಬಿಟ್ಟ. ಇನ್ನು ಇದಕ್ಕಿಂತ ಬೇರೆ ದೃಷ್ಟಾಂತ ಏನು ಬೇಕು ಹೇಳು?'

—ಎಂದು ಶಾಮಣ್ಣ ವೆಂಕಟದಾಸಪ್ಪನವರನ್ನೇ ಪ್ರಶ್ನೆ ಮಾಡಿದ.

ಶಾಮಣ್ಣನ ಆ ಪ್ರಶ್ನೆ ವೆಂಕಟದಾಸಪ್ಪನವರ ಜೀವನದ ಸಮಸ್ಯೆಗಳಿಲ್ಲದಕ್ಕೂ ಉತ್ತರವಂತೆಯೇ ತೋರಿತು. ಹಾಗನಿಸಿದ ಬಳಿಕ ಮುಂದೆ ಕೇಳಬಹುದಾದ ಪ್ರಶ್ನೆಗಳಾವೂ ಇಲ್ಲವೆಂದೇ ಅವರಿಗೆ ತೋರಿತು. ಹಾಗನಿಸಿ, ಶಾಮಣ್ಣನ ವಾದವನ್ನು ಸಂಪೂರ್ಣವಾಗಿ ಒಪ್ಪಿಕೊಂಡವರಂತೆ–

'ಅಂತೂ ನಿನ್ನ ಮಾತು ಒಪ್ಪಿಕೊಂಡರೆ, ರಂಗೂ ಅಷ್ಟು ಕೇಳಿಕೊಂಡ ಬಳಿಕ ಪೂಜೆ ಮಾಡಲು ಹಿಂಜರಿದಿದ್ದು ತಪ್ಪೆಂದು ತೋರುತ್ತದೆ...'

–ಎಂದರು ವೆಂಕಟದಾಸಪ್ಪ.

'ಆದರೆ–ನನ್ನ ಮಗಳ ಭೀತಿನಿವಾರಣೆಗಾಗಿ ನೀನು ಪೂಜೆ ಮಾಡಲು ಹಿಂಜರಿದೆ ಎಂದು ನಾನು ಇಷ್ಟೆಲ್ಲಾ ಮಾತು ಬೆಳಸಲಿಲ್ಲ ದಾಸಣ್ಣ. ನಿನ್ನ ಬಯಕೆ ನೆರವೇರುವುದಕ್ಕೆ ನನಗೆ ತೋಚಿದ ಉಪಾಯ ಹೇಳಿದೆ. ಆ ಉಪಾಯ ನಿನ್ನ ಆತ್ಮಕ್ಕೆ ಸಮ್ಮತವಾದರೆ ಹಾಗೆ ಮಾಡು. ಅಲ್ಲ ಎನಿಸಿದರೆ ಬಿಟ್ಟು ಬಿಡು'.

–ಎಂದ ಶಾಮಣ್ಣ.

'ನನಗೆ ನಿನ್ನ ಮಾತಿನಲ್ಲಿ ಸಂಶಯವಿಲ್ಲ ಮಾವ...'

'ಅದೇನೋ ಸರಿ. ಆದರೂ, ನನಗೆ ತಿಳಿದ ದಾರಿ ಹೇಳಿದರೂ, ಆ ಜಾಡು ಹಿಡಿಯುವುದು ಬಿಡುವುದು ನಿನ್ನ ಅಂತಸ್ಸಾಕ್ಷಿಗೇ ಸೇರಿದ ಮಾತು ಅಂತ ಹೇಳಬೇಕಾದುದೂ ನನ್ನ ಕರ್ತವ್ಯ.'

'ಅದೇನು ಮಾತು? ಕುರುಡನಿಗೆ ಸರಿಯಾದ ದಾರಿ ತೋರಿಸಿದ ಬಳಿಕಲೂ 'ನಿನ್ನ ಮನಸ್ಸಿಗೆ ಬಂದ ಹಾಗೆ ಹೋಗು' ಎನ್ನಬಹುದೇ?'

'ತಿಳಿದಾತ ಹಾಗೇ ಮಾಡಬೇಕು.'

'ಏಕೆ? ಸರಿ ಎಂದು ತಿಳಿದ ವಿಷಯದಲ್ಲಿ ಹೀಗೆ ಮಾಡು ಎಂದು ಹೇಳುವುದೂ ತಪ್ಪೇ?'

'ನಿಜ, ತಪ್ಪೇ.'

'ಏಕೆ?'

'ನಾನು ಆಗಲೇ ಹೇಳಿದೆನಲ್ಲಾ– ನಾನು ಬ್ರಾಹ್ಮಣನಾಗಿ ಹುಟ್ಟಿದರೂ ಪೂಜೆ, ಪುನಸ್ಕಾರ, ಪಾರಾಯಣ ಯಾವುದೂ ಅಷ್ಟು ಕಟ್ಟು ನಿಟ್ಟಾಗಿ ಇಟ್ಟುಕೊಂಡಿಲ್ಲ ಅಂತ...'

'ನಿಜ'.

'ಹಾಗೇನೂ ಕ್ರಮ ಇಟ್ಟುಕೊಳ್ಳದಿದ್ದರೂ, ಯಾವೊತ್ತಾದರೂ ಬುದ್ಧಿ ತಿರುಗಿದರೆ, ನಮ್ಮಪ್ಪ ನನ್ನ ಪಾಲಿಗೆ ಬಿಟ್ಟು ಹೋದ 'ಶ್ರೀಮದ್ಭಗವದ್ಗೀತೆ' ಯನ್ನು ಓದ್ತಾ ಇರ್ತೇನೆ. ಅದರಲ್ಲಿ ಶ್ರೀಕೃಷ್ಣ ಪರಮಾತ್ಮ ಒಂದು ಮಾತು ಹೇಳಿದಾನೆ...'

ಶಾಮಣ್ಣ ಗೀತೆಯ ಮಾತು ಎತ್ತುತ್ತಿದ್ದ ಹಾಗೇ ವೆಂಕಟದಾಸಪ್ಪನವರ ಕಿವಿ ಚುರುಕಾಗಿ–

'ಏನು ಹೇಳಿದಾನೆ ಮಾಧ?'

–ಎಂದು ಕೇಳಿದರು.

'ಗೀತೆಯಲ್ಲಿ ಪರಮಾತ್ಮ ಪಶುಗಳಾದ ನಮ್ಮಂಥವರು ಬ್ರಹ್ಮಸಾಕ್ಷಾತ್ಕಾರ ಪಡೆಯುವುದಕ್ಕೆ ಬೇಕಾದ ರಾಜಯೋಗ, ಕರ್ಮಯೋಗ, ಜ್ಞಾನ ಯೋಗ– ಎಲ್ಲಾ ಮಾರ್ಗಗಳನ್ನೂ ಬೋಧಿಸಿ ಕೊನೆಗೆ, 'ಹೀಗೇ ಮಾಡು' ಅಂತ ಹೇಳದೆ, ನನ್ನ ನಿನ್ನ ಹಾಗೇ ತನ್ನೆದುರಿಗೆ ಕುಳಿತ ಅರ್ಜುನನಿಗೆ 'ಯಥಾ ಇಚ್ಛಸಿ ತಥಾ ಕುರು ಕೌಂತೇಯ' ಅಂತ ಹೇಳಿ, 'ನನಗೆ ತಿಳಿದದ್ದೆಲ್ಲಾ ಹೇಳಿದ್ದಾಯಿತು. ಇನ್ನು ನಿನ್ನ ದಾರಿ ನೀನು ನೋಡಿಕೋ' ಅಂತ ಹೇಳಿದ. ಎಲ್ಲವನ್ನೂ ಬಲ್ಲ ಭಗವಂತನೇ ಹಾಗೆ ಹೇಳಿದ ಬಳಿಕ, ನನ್ನಂಥ ಪಾಮರನಿಗೆ, ನಿನಗಲ್ಲ, ಯಾರಿಗೆ ಆದರೂ 'ಹೀಗೇ ಮಾಡು' ಅಂತ ಕಡ್ಡಾಯವಾಗಿ ಹೇಳುವುದಕ್ಕೆ ಶಕ್ತಿ ಇದೆಯೇ? ಆದ್ದರಿಂದ ಅಜ್ಞನಾದ ನಾನು ಮತ್ತೇನು ಹೇಳಲಿ? ನನಗೆ ಸರಿ ಎಂದು ತೋರಿದುದನ್ನು ನಿನಗೆ ಹೇಳಿದೆ. ಮುಂದಿನದು ನಿನ್ನ ಇಷ್ಟ.'

—ಎಂದ ಶಾಮಣ್ಣ.

'ಎಲ್ಲವನ್ನೂ ತಿಳಿದ ಜ್ಞಾನಿಗೆ 'ನಿನಗೆ ಬೇಕಾದ ಹಾಗೆ ಮಾಡು' ಎಂದು ಸ್ವಾತಂತ್ರ್ಯ ಕೊಟ್ಟರೆ ಸರಿ. ಆದರೆ ಅವಿವೇಕಿಗೂ ಹಾಗೆ ಹೇಳಿದರೆ ಆದರಿಂದ ಅವನು ತಪ್ಪು ಮಾಡುವುದಕ್ಕೇ ಪ್ರೋತ್ಸಾಹ ಕೊಟ್ಟಂತಾಗುವುದಿಲ್ಲವೇ?'

'ಇರಬಹುದು. ಆದರೆ ಕೊನೆಯ ಘಟ್ಟದಲ್ಲಿ ಯಾರಿಗೆ ಯಾರೂ ಹೊಣೆಗಾರರಲ್ಲ ದಾಸಣ್ಣ. ವಿವೇಕಿ, ಅವಿವೇಕಿ ಅನ್ನುವ ಮಾತೂ ಸಾಪೇಕ್ಷ

ವಾದದ್ದು. ನನಗಿಂತ ಅಜ್ಞನ ಮುಂದೆ ನಾನು ವಿವೇಕಿ; ನನಗಿಂತ ವಿವೇಕಿಯ ಮುಂದೆ ನಾನು ಅಜ್ಞ. ದುರ್ಗದಗುಂಡ್ಡ ದೇವೀಕೆರೆಯ ಗುಡ್ಡದೊಂದಿಗೆ ಹೋಲಿಸಿದಾಗ ದೊಡ್ಡದು; ಹಿಮಾಲಯದೊಂದಿಗೆ ಹೋಲಿಸಿದಾಗ 'ಆಣೋರಣೀಯಾನ್;' ಜಗತ್ತಿನಲ್ಲಿ ಎಲ್ಲವೂ ಹೀಗೇ. ಆದುದರಿಂದಲೇ ಈ ಮಾತು ಅರಿವಾದವನು, ತನಗೆ ತಾನೇ ಸರ್ವಜ್ಞ ಪಟ್ಟ ಕಟ್ಟಿಕೊಂಡು ಸ್ವಯಮಾಚಾರ್ಯಪುರುಷನಾಗೋಲ್ಲ. ತನಗೆ ತಿಳಿದಿದ್ದನ್ನು ಹೇಳಿ, ಮುಂದಿನದನ್ನು ಅವರವರ ಪ್ರಾರಬ್ಧಕ್ಕೆ ಬಿಡುತ್ತಾನೇ ದಾಸಣ್ಣ. ಆದ್ದರಿಂದ ನಿನಗೆ ನಾನು ಹೇಳುವುದೂ ಅಷ್ಟೆ; ನನಗೆ ಸರಿ ಎಂದು ತೋರಿದುದನ್ನು ಹೇಳಿದೇನೆ. ನಿನಗೂ ಅದು ಸರಿ ಎಂದು ಕಂಡರೆ ಹಾಗೆ ಮಾಡು. ಅಲ್ಲ ಏನಿಸಿತೋ—ಹಾಗಂದು ನಿನ್ನ ದಾರಿಯಲ್ಲಿ ನಡೆ.'

—ಎಂದ ಶಾಮಣ್ಣ.

ಆತ ಆ ಮಾತು ಆಡಿದ ಬಳಿಕ ವೆಂಕಟದಾಸಪ್ಪನವರು ಬೇರೇನೂ ಚರ್ಚೆ ಮಾಡದೆ—

'ಸರಿ ಮಾವ'

—ಎಂದಷ್ಟೇ ಹೇಳಿ ಸುಮ್ಮನಾದರು.

ಶಾಮಣ್ಣನೂ ಆ ಮಾತನ್ನು ಮುಂದುವರಿಸಲಿಲ್ಲ. ಅಷ್ಟು ಹೊತ್ತು ಇಬ್ಬರೂ ಸುಮ್ಮನೆ ಕುಳಿತಿದ್ದ ಬಳಿಕ ಶಾಮಣ್ಣ, ಕತ್ತಲು ಕವಿಯುತ್ತಿದ್ದ ಆಕಾಶದ ಕಡೆ ನೋಡಿ—

'ಏಳು —ಸಂಧ್ಯಾವಂದನೆ ಕೆಲಸ ಅಷ್ಟು ಬಾಕಿ ಇದೆಯಲ್ಲ. ಅದನ್ನು ಮುಗಿಸಿಕೊಂಡು ಮನೆಯ ಕಡೆ ಹೋಗೋಣ. ಬೆಳಗಿನ ಜಾವಗಾಡಿ ಕಟ್ಟಿಸಬೇಕು. ಇನ್ನೂ ಸಾಮಾನು— ಸರಂಜಾಮು ಏನೇನು ಹೊಂದಿಸಿಕೊಳ್ಳಬೇಕೋ ಏನೋ. ಆ ಕೆಲಸಕ್ಕಾದರೂ ಹೆಂಗಸರಿಗೆ ಅಷ್ಟು ನೆರವಾಗೋಣ.'

—ಎಂದ.

ಅದರಂತೆಯೇ ಇಬ್ಬರೂ ಸಂಧ್ಯಾವಂದನೆ ಮುಗಿಸಿಕೊಂಡು ಮನೆಯ ಕಡೆ ಹೊರಟರು.

೬

'ನನ್ನ ಮಾತನ್ನು ನಂಬಿದರೆ ನಂಬು, ಬಿಟ್ಟರೆ ಬಿಡು. ನಂಬುವುದು, ಬಿಡುವುದು ಎರಡೂ ನಿನಗೆ ಸೇರಿದ್ದು' ಎಂದು ಶಾಮಣ್ಣ ಹೇಳಿ ಹೋದರೂ, ವೆಂಕಟದಾಸಪ್ಪನವರು, ಆ ಬಗ್ಗೆ, ಅದು ಸರಿಯೋ ತಪ್ಪೋ ಎಂದು ಹೆಚ್ಚು ಹೆಚ್ಚು ವಿಚಾರ ಮಾಡಲು ಯತ್ನಿಸಲಿಲ್ಲ. ಆ ದಿನ ಶಾಮಣ್ಣನೊಂದಿಗೆ ಮಾತನಾಡಿದಾಗಲೇ ಅವರು ತಮಗೆ ತೋರಿದ ಸಂದೇಹಗಳನ್ನೆಲ್ಲಾ ಆತನ ಮುಂದಿಟ್ಟಿದ್ದರು. ಆತ ಅದಕ್ಕೆ ತನಗೆ ತೋಚಿದ ಉತ್ತರ ಹೇಳಿದಾಗ, ಆ ಉತ್ತರಗಳು ವೆಂಕಟದಾಸಪ್ಪನವರಿಗೂ ಅದಷ್ಟು ಸಮರ್ಪಕವಾಗಿ ಕಂಡು ಬಂದು, ಒಮ್ಮೆ ಅದನ್ನು ನಂಬಿದ ಬಳಿಕ ಆ ಜಾಡಿನಲ್ಲಿ ನಡೆಯಲು ನಿರ್ಧರಿಸಿದ್ದರು.

ಆ ನಿರ್ಧಾರ ಮಾಡಿದ ಬಳಿಕ ವೆಂಕಟದಾಸಪ್ಪನವರ ಜೀವನವೂ ಹೊಸ ದಾರಿ ಹಿಡಿಯಿತು.

ದೇವೀದರ್ಶನದ ಬಗ್ಗೆ ಹೃದಯದಲ್ಲಿ ಆರ್ತತೆಯನ್ನೂ, ಕಾತರವನ್ನೂ ತುಂಬಿಕೊಂಡು, ಅದನ್ನು ತೀರಿಸಿಕೊಳ್ಳಲು ದಾರಿಗಾಣದೆ ಕುರುಡಾಗಿ ಹಂಬಲಿ ಸುತ್ತಿದ್ದ ವೆಂಕಟದಾಸಪ್ಪನವರಿಗೆ, ಶಾಮಣ್ಣ ಏನೋ ಒಂದು ದಾರಿ ತೋರಿದ್ದ.

'ನಿನ್ನ ಪೂಜೆ, ಆರಾಧನೆಯಿಂದ ಜಗತ್ತಿಗೆ ಆದಷ್ಟು ಉಪಕಾರವಾಗಲಿ'

—ಎಂದು ಪೂಜೆಗೆ ಒಂದು ಕ್ರಮ ಹೇಳಿದಂತೆಯೇ—

'ಶಾಸ್ತ್ರಾಭ್ಯಾಸದಿಂದ ನಿನ್ನ ಬುದ್ಧಿಯನ್ನು ಕೃಷಿ ಮಾಡು'

—ಎಂದು ಹೇಳಿ, ಕುರುಡಾಗಿ ಅಲೆಯುತ್ತಿದ್ದ ಬುದ್ಧಿಗೊಂದು ಮಾರ್ಗ ವನ್ನು ತೋರಿಸಿದ್ದ.

ಆ ಎರಡನ್ನೂ ಸಮನ್ವಯಗೊಳಿಸಿಕೊಂಡು ವೆಂಕಟದಾಸಪ್ಪನವರ ಬಾಳು ಮುಂದುವರಿಯಿತು.

ಶಾಮಣ್ಣ ಹೇಳಿದ ಪೂಜಾ ಕ್ರಮ ವೆಂಕಟದಾಸಪ್ಪನವರಿಗೆ ಹೆಚ್ಚು ಕಷ್ಟವಾಗಲಿಲ್ಲ. ದಿನವೂ ಅವರೂ ಪೂಜೆ ಮಾಡಿ 'ಸರ್ವಂ ಶ್ರೀ ಬ್ರಹ್ಮಾರ್ಪಣ ಮಸ್ತು' ಎನ್ನುವ ಮೊದಲು 'ಗೋ ಬ್ರಾಹ್ಮಣೇಭ್ಯಃ ಶುಭಂ ಭವತು'

'ಲೋಕಾಃ ಸಮಸ್ತಾ ಸುಖಿನೋ ಭವಂತು' ಎಂದು ಹೇಳಿಯೇ ಹೇಳು ತ್ತಿದ್ದರು. ಇಷ್ಟು ದಿನ ಆ ಮಾತುಗಳನ್ನು ಕುರುಡು ಪಾಠ ಒಪ್ಪಿಸುವಂತೆ ಹೇಳುತ್ತಿದ್ದವರು, ಈಗ ಅದರಲ್ಲಿ ತಮ್ಮ ಇಚ್ಛಾಶಕ್ತಿಯನ್ನು ತುಂಬಿ 'ತಾಯಿ, ಹಾಗಾಗಲಿ' ಎಂದು ಹೇಳಲಾರಂಭಿಸಿದರು.

ಆದರೆ ಶಾಸ್ತ್ರಾಭ್ಯಾಸ, ಅಧ್ಯಯನದ ಕೆಲಸ ಮಾತ್ರ ಅಷ್ಟು ಸುಲಭ ವಾಗಿರಲಿಲ್ಲ.

ಮನೆಯಲ್ಲಿ, ತಲೆತಲಾಂತರದಿಂದ ಸಂಗ್ರಹವಾದ ಓಲೆಗರಿಯ ಶಾಸ್ತ್ರ ಗ್ರಂಥಗಳು ಎಷ್ಟೋ ಇದ್ದವು. ಆ ಎಲ್ಲ ಗ್ರಂಥಗಳೂ ಇದ್ದುದು ಸಂಸ್ಕೃತ ಭಾಷೆಯಲ್ಲಿ. ಎಂತಲೇ, ಆ ಭಾಷೆಯನ್ನು ಆಳವಾಗಿ ಅಭ್ಯಾಸ ಮಾಡದ ವೆಂಕಟದಾಸಪ್ಪನವರ ಪಾಲಿಗೆ, ಕನ್ನಡ ಲಿಪಿಯಲ್ಲಿದ್ದ ಆ ಗ್ರಂಥಗಳನ್ನು ಓದುವುದು ಸಾಧ್ಯವಾದರೂ, ಓದಿದುದನ್ನು ಅರ್ಥಮಾಡಿಕೊಳ್ಳುವುದು ದುಸ್ಸಾಧ್ಯವಾಗಿತ್ತು. ಅಭ್ಯಾಸದೀಪ ಅಲ್ಲೊಂದು ಮಾತು, ಇಲ್ಲೊಂದು ಭಾವ ಅರ್ಥವಾದ ಹಾಗೆ ತೋರಿದರೂ, ಕುರುಡ ತಡಕಿದಂತೆ ಆಗುತ್ತಿತ್ತೇ ಹೊರತು ಪೂರ್ಣ ಭಾವಾರ್ಥ ಅರಿವಾಗಿ, ಅದರಿಂದ ಲಬ್ಧವಾಗುವ ಆನಂದವಾಗು ತ್ತಿರಲಿಲ್ಲ.

ಅಷ್ಟು ದಿನ ಹೇಗಾದರೆ ಹಾಗಾಗಲಿ ಎಂದು ಓದುತ್ತಿದ್ದವರು, ಕೊನೆಗೆ 'ಇದಲ್ಲ, ಯಾರನ್ನಾದರೂ ಹಿಡಿದು, ಅವರಿಂದ ಸಂಪೂರ್ಣವಾಗಿ ಅರ್ಥ ಹೇಳಿಸಿಕೊಂಡು, ತಿಳಿದುಕೊಳ್ಳಬೇಕು' ಎಂಬ ನಿರ್ಧಾರಕ್ಕೆ ಬಂದರು.

ಈ ನಿರ್ಧಾರಕ್ಕೇನೋ ಬಂದದ್ದಾಯಿತು. ಆದರೆ ಆ ಹಳ್ಳಿಕೊಂಪೆಯಲ್ಲಿ ಹೇಳಿಕೊಡುವವರು ಯಾರು?

ದೇವೀಕೆರೆಯಲ್ಲಿ ಇದ್ದದ್ದೇ ನಾಲ್ಕು ಬ್ರಾಹ್ಮಣರ ಮನೆ. ಅದರಲ್ಲಿ ವೆಂಕಟದಾಸಪ್ಪನವರ ಮನೆಯನ್ನು ಬಿಟ್ಟರೆ, ಉಳಿದ ಮೂರರಲ್ಲಿ ಶಾನುಭೋಗ ಶ್ರೀನಿವಾಸರಾಯರ ಮನೆ ಈ ಉದ್ದೇಶದಿಂದ ಕೇವಲ ನಿರುಪಯೋಗಿ ಯಾದದ್ದು. ಲೌಕಿಕ ವ್ಯವಹಾರವನ್ನು ಬೆಳೆಸಿಕೊಂಡ ಶ್ರೀನಿವಾಸರಾಯನಿಗೆ, ಶಾಸ್ತ್ರಾಭ್ಯಾಸ ಮಾಡುವುದಿರಲೀ ಅವುಗಳ ಹೆಸರು ತಿಳಿದುಕೊಳ್ಳುವಷ್ಟೂ ವ್ಯವಧಾನವಿರಲಿಲ್ಲ. ಉಳಿದಿಬ್ಬರು—ವೆಂಕಟಗಿರಿಜೋಯಿಸರು, ಅಚ್ಚಣ್ಣ ಭಟ್ಟರು. ವೆಂಕಟದಾಸಪ್ಪನವರಿಗೆ, ಯಾರಾದರೂ ಮಾರ್ಗದರ್ಶನ ಮಾಡಿಸ

ಬೇಕೆಂದರೆ, ಆ ಇಬ್ಬರಲ್ಲಿ ಒಬ್ಬರಿಂದ ಆ ಕೆಲಸ ಆಗಬೇಕೇ ಹೊರತು ಬೇರೆ ಯಾರಿಂದಲೂ ಅದು ಸಾಧ್ಯವಿರಲಿಲ್ಲ. ಎಂತಲೇ ಯಾರಿಂದಲಾದರೂ, ಶಾಸ್ತ್ರ ಪಾಠ ಹೇಳಿಸಿಕೊಳ್ಳಬೇಕೆಂದುಕೊಂಡ ವೆಂಕಟದಾಸಪ್ಪನವರು, ಆ ಕೆಲಸಕ್ಕಾಗಿ ತಮಗೆ ಹೆಚ್ಚು ಬಳಕೆಯಿದ್ದ ವೆಂಕಟಗಿರಿಜೋಯಿಸರ ಬಳಿ ಮೊದಲು ಹೋದರು.

ವೆಂಕಟದಾಸಪ್ಪನವರು ತಮ್ಮ ಬಳಿ ಬಂದುದಕ್ಕೆ ಕಾರಣವನ್ನು ಅರಿತ ಬಳಿಕ ವೆಂಕಟಗಿರಿಜೋಯಿಸರು–

'ನಿನ್ನ ನಿರ್ಧಾರವೇನೋ ಸಾಧುವಾದದ್ದೇ ದಾಸಣ್ಣ. ಆದರೆ, ಆ ಕೆಲಸಕ್ಕೆ ನಾನು ನಾಲಾಯಖ್ಖು.'

–ಎಂದು ಕೈಯಾಡಿಸಿ ಬಿಟ್ಟರು.

'ಅದೇಕೆ ಜೋಯಿಸರೇ. ಹಾಗೆ ಹೇಳುತ್ತೀರಿ?'

'ನೋಡು ದಾಸಣ್ಣ. ನಮ್ಮ ಮನೇಲೂ ಒಂದು ಪೆಠಾರಿ ತುಂಬು ವಷ್ಟು ಹಳೇ ಓಲೆ ಗ್ರಂಥಗಳಿವೆ. ಆದರೆ ಅವು ಯಾವೊಂತ ಕೂಡ ನಾನು ತಿರುವಿ ಹಾಕಿ ನೋಡಿಲ್ಲ. ಈ ಜ್ಯೋತಿಷ್ಯದ ಗೀಳು ಹಿಡಿದ ಬಳಿಕ ನನಗೆ, ಈ ಶಾಸ್ತ್ರವನ್ನು ಅಭ್ಯಾಸ ಮಾಡುತ್ತಾ ಮಾಡುತ್ತಾ, ಈಜು ಬರದವನು ಸಮುದ್ರಕ್ಕೆ ಬಿದ್ದ ಹಾಗೆ ಆಗಿದೇನೆ. ಇದೊಂದು ಶಾಸ್ತ್ರವನ್ನು ಕಲಿಯುವುದಕ್ಕೇ ನನಗಿರುವ ಆಯುಸ್ಸು ಸಾಲದು ಎನಿಸಿದೆ. ಹೀಗಿರುವಾಗ ಉಳಿದದ್ದನ್ನೆಲ್ಲಾ ಓದಲು ಹೊತ್ತೆಲ್ಲಿಂದ ತರಲಿ? ಮೊದಮೊದಲು ನನಗೂ, ಪೆಟ್ಟಿಗೇಲಿರೋ ಪುಸ್ತಕಗಳನ್ನು ನೋಡಿ. ಅದನ್ನು ಓದಬೇಕು ಅನ್ನೋ ಚಪಲ ವಿತ್ತು. ಯಾವಾಗಲಾದರೂ ಒಂದುಸಲ ಅವನ್ನು ತಿರುವಿ ಹಾಕುತ್ತಿದ್ದೆ. ಈಗೀಗ ಆ ಚಪಲವೂ ಹೋಗಿ ಬಿಟ್ಟಿದೆ. ಆದ್ದರಿಂದ ನೀನು ಜ್ಯೋತಿಷ್ಯ ಕಲಿಯಬೇಕು ಎಂದರೆ ನಾನು, ನನಗೆ ತಿಳಿದಷ್ಟು ಸಹಾಯಮಾಡಬಲ್ಲೆನೇ ಹೊರತು, ಉಳಿದದ್ದಕ್ಕೆ ನಾನೇನೂ ಉಪಯೋಗವಿಲ್ಲ.'

'ಹಾಗಾದರೆ–ಈಗೇನು ಮಾಡುವುದು?'

'ಅದಕ್ಕೇನು–ಅಚ್ಚಣ್ಣಭಟ್ಟರಿದ್ದಾರಲ್ಲಾ, ಅವರನ್ನು ವಿಚಾರಿಸು. ತಲತಲಾಂತರದಿಂದ ಪೌರೋಹಿತ್ಯ ನಡೆಸಿದ ಮನೆತನ ಅವರದು. ಅವರಿಗೂ ಅಷ್ಟಿಷ್ಟು ಶಾಸ್ತ್ರಾಭ್ಯಾಸವಾಗಿರಬೇಕು. ಅವರೂ ಹೆಚ್ಚು ಅಭ್ಯಾಸ ಮಾಡಿ

ದಂತಿಲ್ಲ. ಆದರೆ ಅವರಿಗೆ ತಿಳಿದಷ್ಟನ್ನಾದರೂ ನಿನಗೆ ಹೇಳಿಕೊಟ್ಟರೆ, ಸದ್ಯಕ್ಕೆ ಸಾಕು. ಹೋಗಿ ವಿಚಾರಿಸು.'

—ಎಂದರು ವೆಂಕಟಗಿರಿ ಜೋಯಿಸರು.

ಆದರೆ, ಆ ಮಾತನ್ನು ಕೇಳಿ ವೆಂಕಟದಾಸಪ್ಪನವರು, ತಟಕ್ಕನೆ—

'ಆಯಿತು. ಹಾಗೇ ಮಾಡುತ್ತೇನೆ.'

—ಎಂದು ಹೇಳದೆ, ಏನೋ ಅನುಮಾನಿಸುತ್ತಾ ಕುಳಿತಿದ್ದುದನ್ನು ಕಂಡು ವೆಂಕಟಗಿರಿ ಜೋಯಿಸರೇ—

'ಏನು ಯೋಚನೆ ಮಾಡ್ತಾ ಇದೀಯಲ್ಲ. ಅಚ್ಚಣ್ಣ ಭಟ್ಟರ ಹತ್ತಿರ ಹೋಗಲಿಕ್ಕೆ ಮನಸ್ಸಿಲ್ಲವೇ?'

—ಎಂದು ಕೇಳಿದರು.

'ಅವರ ಹತ್ತಿರ ಹೋಗಲಿಕ್ಕೆ ನನಗೇನೂ ಅಭ್ಯಂತರವಿಲ್ಲ ಜೋಯಿಸರೇ...'

'ಮತ್ತೆ?'

'ಅವರು......ನನಗೆ......ಹೇಳಿಕೊಡಲು...... ಒಪ್ತಾರೋ ಇಲ್ಲೋಂತ......'

'ಏಕೆ?'

'ನನ್ನಿಂದ ಆಗ ಅಷ್ಟು ಹಗರಣ ಆಗಿ, ಆ ಬ್ರಾಹ್ಮಣನಿಗೆ ನನ್ನಿಂದ ಹಳ್ಳಿಯಲ್ಲಿ ಅವಮಾನವಾಯಿತು, ಕೆಟ್ಟ ಹೆಸರು ಬಂತು. ಅಷ್ಟೆಲ್ಲಾ ಮಾಡಿದ, ನಾನು ಈಗ ಅವರ ಹತ್ತಿರಕ್ಕೆ ಹೋಗಿ 'ನಿಮಗೆ ತಿಳಿದದ್ದನ್ನೆಲ್ಲಾ ಹೇಳಿಕೊಡಿ' ಎಂದರೆ, ಕಲಿಸಲು ಒಪ್ಪುತ್ತಾರೋ ಇಲ್ಲವೋಂತ ಅನುಮಾನ...... ಅಷ್ಟೇ...'

—ಎಂದು ವೆಂಕಟದಾಸಪ್ಪನವರು ತಮ್ಮ ಸಂದೇಹವನ್ನು ವಿವರಿಸಿದರು.

ವೆಂಕಟದಾಸಪ್ಪನವರು ಹೇಳಿರುವುದಕ್ಕೆ ವೆಂಕಟಗಿರಿ ಜೋಯಿಸರು ತಟಕ್ಕನೆ ಉತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು ಬಳಿಕ—

'ಅಚ್ಚಣ್ಣ ಭಟ್ಟರು ಈಗ ಮೊದಲಿನ ಅಚ್ಚಣ್ಣಭಟ್ಟರಲ್ಲಾ ದಾಸಣ್ಣ...'

—ಎಂದರು.

'ಅಂದರೆ...'

'ಈ ಜಾತ್ರೆಯು ವಿರಸ ನಡೆದ ಮೇಲೆ ಆ ಬ್ರಾಹ್ಮಣ ಪೂರಾ ಬದಲಾಯಿಸಿ ಹೋಗಿದ್ದಾನೆ. ಮೊದಲಿನ ಹಮ್ಮು-ಬಿಮ್ಮುಗಳೊಂದೂ ಈಗ ಅವರಲ್ಲಿ ಕಾಣ ಬರುತ್ತಿಲ್ಲ. ನನಗೇನೋ ಈ ಜಾತ್ರೆ ಪ್ರಸಂಗ ನಡೆದದ್ದು ಆ ಬ್ರಾಹ್ಮಣನಲ್ಲಿದ್ದ ಕಸಿರನ್ನು ಕಳೆದು ಹಾಕಲಿಕ್ಕೆಂದೇ ತೋರುತ್ತದೆ. ಅದೆಲ್ಲಾ ಆದ ಮೇಲೂ ನಾನು ಆ ಬ್ರಾಹ್ಮಣನೊಂದಿಗೆ ಎಷ್ಟೋ ಸಲ ಮಾತಾಡಿದೇನಲ್ಲಾ- ನಿನ್ನ ವಿಷಯಾನೂ ಮಾತಾಡಿದೇನೆ. ನಿನ್ನಲ್ಲಿ ಅವರಿಗೆ ಅಪಾರ ಗೌರವ ಇದೆ. ಆ ಹಳೆ ದ್ವೇಷಭಾವನೆ ಎಳ್ಳಷ್ಟೂ ಇದ್ದ ಹಾಗಿಲ್ಲ. ಆದ್ದರಿಂದ ಏನೂ ಅನುಮಾನಪಟ್ಟುಕೊಳ್ಳದೆ ಹೋಗಿ ಕೇಳು.'

-ಎಂದರು ವೆಂಕಟಗಿರಿ ಜೋಯಿಸರು.

'ಆದರೂ...ಆದರೂ...'

-ಎಂದು ವೆಂಕಟದಾಸಪ್ಪನವರು ಆಗಲೂ ಅನುಮಾನಿಸಿದುದನ್ನು ಕಂಡು, ಕಡೆಗೆ ಜೋಯಿಸರು ಹೇಳಿದರು.

'ಅಂತೂ ನಿನ್ನ ಮನಸ್ಸಿನಲ್ಲೇ ಅಳುಕು ಉಳಿದಿದೆ ಅನ್ನು. ಆಯಿತು- ನಾನೇ, ಅವರು ಸಿಕ್ಕಾಗ ವಿಚಾರಿಸಿ, ಅವರು ಏನು ಹೇಳುತ್ತಾರೋ ಕೇಳಿ ಹೇಳುತ್ತೇನೆ. ಆದರೆ ಒಂದು ಮಾತು ದಾಸಣ್ಣ...'

'ಏನು ಜೋಯಿಸರೇ?'

'ವಿದ್ಯಾರ್ಥಿಯಾಗಿ ಹೋಗುವವನು, ತನ್ನ ಮನಸ್ಸಿನಲ್ಲಿ ಇಂಥ ಅಳುಕು- ಬಳುಕುಗಳನ್ನು ಇಟ್ಟುಕೊಳ್ಳಬಾರದು. ನಿರ್ಮಲಚಿತ್ತನಾಗಿ, ವಿದ್ಯಾಪೇಕ್ಷೆ ಮಾಡದಿದ್ದರೆ, ಆ ವಿದ್ಯೆ ಹಸ್ತಗತವಾಗುವುದಿಲ್ಲ. ವಿದ್ಯೆ ಕಲಿಸುವವನು ಯಾರೇ ಆದರೂ, ಆತ ಹೇಗೆ, ಏನು ಭಾವನೆಯಿಂದ ಹೇಳಿಕೊಟ್ಟರೂ, ನೀನು ಮಾತ್ರ ಶ್ರದ್ಧೆಯಿಂದ, 'ಗುರು ಹೇಳಿದುದೇ ಸರಿ' ಎಂಬ ನಂಬಿಕೆಯಿಂದ ಕಲಿಯ ಬೇಕು. ನಿನ್ನಲ್ಲಿ ಆ ನಿಷ್ಠೆ ಇದ್ದರೆ, ಮಾತ್ರ ನಿನ್ನ ಬಯಕೆ ಸಫಲವಾಗುತ್ತದೆ. ವಿದ್ಯಾರ್ಥಿ ಏಕಲವ್ಯನ ಹಾಗಾಗಬೇಕು. ದ್ರೋಣಾಚಾರ್ಯರಿಗೆ ಏಕಲವ್ಯನಿಗೆ, ಧನುರ್ವಿದ್ಯೆ ಹೇಳಿಕೊಡಬೇಕೆಂದು ಮನಸ್ಸು ಇತ್ತೆ? ಅರ್ಜುನನಿಗೆ ಹೇಳಿದ ಹಾಗೆ ಪಾಠ ಹೇಳಿದರೆ? ಆದರೂ ಏಕಲವ್ಯ ಅವರನ್ನು ಗುರುಗಳೆಂದು ನಂಬಿ ನಡೆ ದುದರಿಂದ ಅವನಿಗೆ, ಅರ್ಜುನನಿಗಿಂತಲೂ ಹೆಚ್ಚಾದ ಚಾಪ ವಿದ್ಯಾಪಾಂಡಿತ್ಯ ಲಬ್ಧವಾಯಿತು. ನೀನೂ ಹಾಗಾಗಬೇಕು. ಇಲ್ಲವಾದಲ್ಲಿ-ಹೇಳಿಕೊಡುವವನು

ಎಷ್ಟೇ ಮನಸ್ಸಿಟ್ಟು ಹೇಳಿಕೊಟ್ಟರೂ ಸೀಸಕ್ಕೆ ಮೆರುಗು ಕೊಟ್ಟ ಹಾಗಾಗು ತ್ತದೆಯೇ ಹೊರತು, ಚಿನ್ನಕ್ಕೆ ಮೆರುಗು ಕೊಟ್ಟ ಹಾಗಾಗುವುದಿಲ್ಲ.'

'ಅದು ನಿಜ ಜೋಯಿಸರೇ...'

'ಅದು ನಿಜ ಎಂದು ತಲೆಯಾಡಿಸಿಬಿಟ್ಟರೆ ಸಾಲದು ದಾಸಣ್ಣ. ಅಚ್ಚಣ್ಣ ಭಟ್ಟರು ಪಾಠ ಹೇಳಲಿಕ್ಕೆ ಒಪ್ಪಿದರೆ. ಅವರ ಬಳಿ ಹೋಗುವಾಗ, ದೇವಾಲಯಕ್ಕೆ ಹೋಗುವಾಗ, ಎಕ್ಕಡ ಹೊರಗೆ ಬಿಟ್ಟು ಒಳಗೆ ಹೋಗುವ ಹಾಗೆ, ಈ ಆಳಂಕು, ಹಮ್ಮು ಎಲ್ಲಾ ಬಿಟ್ಟು ಹೋಗಬೇಕು.'

'ನನ್ನಾಣೆ. ಹಾಗೇ ಮಾಡುತ್ತೇನೆ.'

—ಎಂದು ಮಾತು ಕೊಟ್ಟರು ವೆಂಕಟದಾಸಪ್ಪ.

'ಆಯಿತು, ನೀನು ಹಾಗೆ ಮಾಡುತ್ತೇನೆ ಎಂದರೆ, ಹಾಗೆ ಮಾಡು ತ್ತೀಯ ಎಂದು ನನಗೆ ನಂಬಿಕೆ ಇದೆ. ಆದಕ್ಕೆ ಆಣೆ— ಪ್ರಮಾಣವೇನೂ ಬೇಡ. ನಾನು ವಿಚಾರಿಸಿ ತಿಳಿಸುತ್ತೇನೆ.'

—ಎಂದರು ವೆಂಕಟಗಿರಿ ಜೋಯಿಸರು.

ಅವರು ಅಷ್ಟು ಹೇಳಿದ ಬಳಿಕ ತಮ್ಮ ಕೆಲಸ ಆದಂತೆಯೇ ಎಂಬ ಸಮಾಧಾನದಿಂದ ವೆಂಕಟದಾಸಪ್ಪನವರೂ ಮನೆಗೆ ಹಿಂತಿರುಗಿದರು.

ಅಚ್ಚಣ್ಣಭಟ್ಟರು ಶಾಸ್ತ್ರಾಧ್ಯಯನ ಮಾಡಿಸುವುದಾದರೆ, ತಾನು ಶ್ರದ್ಧೆಯಿಂದ ಕಲಿಯುತ್ತೇನೆ ಎಂದು ವೆಂಕಟದಾಸಪ್ಪನವರು ಮಾತು ಕೊಟ್ಟಿದ್ದರು.

ಆದರೆ ವೆಂಕಟದಾಸಪ್ಪನವರಿಗೆ ಶಾಸ್ತ್ರಾಭ್ಯಾಸ ಮಾಡಿಸಲು ಅಚ್ಚಣ್ಣಭಟ್ಟರು ಮಾತ್ರ ಬಡಪೆಟ್ಟಿಗೆ ಒಪ್ಪಲಿಲ್ಲ. ಎಲ್ಲಕ್ಕೂ ಮೊದಲು–

'ನನಗೇನು ಗೊತ್ತಿದೆ ಅಂತ ಆತನಿಗೆ ಪಾಠ ಹೇಳಿಕೊಡಲಿಕ್ಕೆ ಹೋಗಲಿ, ವೆಂಕಟಗಿರಿ. ನನಗೆ ಗೊತ್ತಿರೋದೇ ಸಾಸುವೆ ಕಾಳಿನಷ್ಟು. ಅದೂ ಪೂರ್ಣವಾಗಿ ಅರ್ಥವಾಗಿಲ್ಲ. ಕತ್ತೆ ಕಸ್ತೂರಿ ಮೂಟೆ ಹೊತ್ತ ಹಾಗೆ, ಕಲಿತುಕೊಂಡಿದೀನಿ; ಅಷ್ಟೆ'.

–ಎಂದರು.

'ನಿಜ, ನಿಜ, ತಿಳಿದವರು ಯಾರೂ ನಮಗೆ ತಿಳಿದಿದೆ ಅಂತ ಹೇಳುವುದಿಲ್ಲ ಅಚ್ಚಣ್ಣಭಟ್ಟರೇ. ಆದ್ದರಿಂದ ನೀವು ಹೀಗೆ ಹೇಳಿದರೆ ತಪ್ಪೇನೂ ಇಲ್ಲ. ನಿಮಗೆ ತಿಳಿದಷ್ಟನ್ನು ನಮ್ಮ ಹುಡುಗನಿಗೆ ಹೇಳಿಕೊಡಿ. ಅದಕ್ಕೇನೂ ಅಭ್ಯಂತರ ಇಲ್ಲ ತಾನೇ?'

–ಎಂದು ವೆಂಕಟಗಿರಿ ಜೋಯಿಸರು ಪಟ್ಟು ಹಿಡಿದರು.

'ಅಭ್ಯಂತರ–ಆ ಪುಣ್ಯಾತ್ಮ ನನ್ನಿಂದ ಕಲಿಯಲು ಅಪೇಕ್ಷಿಸಿದರೆ ಅದೇ ನನಗೆ ಮಹಾಭಾಗ್ಯ. ಆದಲ್ಲ ನನ್ನ ಕೊರಗು ವೆಂಕಟಗಿರಿ......'

'ಮತ್ತೇನು?'

'ಆತನಿಗೆ ಕಲಿಸಲಿಕ್ಕೆ ನನ್ನ ಹತ್ತಿರ ಸರಕೂ ಇಲ್ಲ. ಅಷ್ಟೇ ಅಲ್ಲ–ನನ್ನಿಂದಾಗಲಿ, ಯಾರಿಂದಲೇ ಆಗಲಿ, ಆತ ಕಲಿಯಬೇಕಾದದ್ದು ತಾನೇ ಏನಿದೆ?'

'ಹಾಗಂದರೇನು ಭಟ್ಟರೇ?'

'ಈ ಎಲ್ಲಾ ಓದೂ ಯಾತಕ್ಕೆ? ಈ ಓದಿನಿಂದೆಲ್ಲಾ ಏನು ಸಾರ್ಥಕ?'

–ಎಂದು ಅಚ್ಚಣ್ಣ ಭಟ್ಟರು ಮರುಪ್ರಶ್ನೆ ಮಾಡಿದರು.

'ಅಂದರೆ...'

'ಗೀತೆ, ಉಪನಿಷತ್ತು, ವೇದ, ಪುರಾಣ, ಪುಣ್ಯಕಥೆ ಎಲ್ಲಾ ಓದೋದೂ ಕಲಿಯೋದೂ, ಅದೃಷ್ಟವಿದ್ದರೆ, ಎಂದಾದರೊಂದು ದಿನ ಆ ಮಹಾತಾಯಿಯ ಮುಖವಿರಲಿ, ಚರಣಾಂಗುಷ್ಠ ನಖ ದರ್ಶನವಾದರೂ ಆಗಲಿ; ಅದಿಲ್ಲದೆ ಹೋದರೂ, ಸಾಯುವ ಕಾಲಕ್ಕೆ ಆಕೆಯ ನಾಮಸ್ಮರಣೆ ಮಾಡುವುದಕ್ಕಾದರೂ ಎಚ್ಚರ ಉಳಿಯಲಿ ಅನ್ನುವುದಕ್ಕೆ ತಾನೇ...'

'ನಿಜ.'

'ಅದಾವುದೂ ಇಲ್ಲದೆ, ಆ ಮಹಾತಾಯಿ ಆತನಿಗೆ ಒಲಿದಿರೋವಾಗ, ಇನ್ನು ಇದೆಲ್ಲಾ ಏಕೆ?'

'ಅದೇನೋ ಸರಿಯೆ, ಭಟ್ಟರೆ. ದಾಸಣ್ಣ ಈ ಮಾತು ನನ್ನ ಮುಂದೆ ಎತ್ತಿದಾಗ ನನಗೂ ಹಾಗನಿಸದೆ ಇರಲಿಲ್ಲ. ಆದರೆ, ವಜ್ರಕ್ಕೂ ಸಾಣೆ ಬೇಕು. ಅದಿಲ್ಲದಿದ್ದರೆ ಎಷ್ಟು ಹೊಳೆಯಬೇಕೋ ಅಷ್ಟು ಹೊಳೆಯುವುದಿಲ್ಲ. ಆ ಕಾರಣ ಕ್ಕಾಗೇ ದಾಸಣ್ಣನಿಗೂ ಶಾಸ್ತ್ರಾಭ್ಯಾಸ ಬೇಕು. ಅಷ್ಟು ಮಾಡಿ, ಆ ಪುಣ್ಯ ನೀವು ಕಟ್ಟಿಕೊಳ್ಳಿ'.

—ಎಂದು ವೆಂಕಟಗಿರಿ ಜೋಯಿಸರು ಹಟ ಹಿಡಿದರು.

ಅವರು ಅಷ್ಟು ಹೇಳಿದ ಬಳಿಕ ಅಚ್ಚಣ್ಣಭಟ್ಟರಿಗೂ ಬೇರೇನೂ ಹೇಳು ವುದು ಅಸಾಧ್ಯವಾಗಿ—

'ನನಗೂ ಶಾಸ್ತ್ರ ವಿಷಯ ಹೆಚ್ಚಾಗಿ ತಿಳಿಯದು. ನಾನು ಹೆಚ್ಚಾಗಿ ಅಭ್ಯಾಸ ಮಾಡಿದ್ದೂ ಪೌರೋಹಿತ್ಯಕ್ಕೆ ಬೇಕಾದ ಮಂತ್ರ— ತಂತ್ರಗಳನ್ನೇ. ಆಯಿತು—ನನಗೆ ತಿಳಿದಷ್ಟು ಹೇಳುತ್ತೇನೆ.'

—ಎಂದು ಹೇಳಿದರು.

ವೆಂಕಟದಾಸಪ್ಪನವರಿಗೆ, ತಮಗೆ ತಿಳಿದ ಮಟ್ಟಿಗೆ ಶಾಸ್ತ್ರಾಭ್ಯಾಸ ಮಾಡಿಸಲು ಅಚ್ಚಣ್ಣಭಟ್ಟರು ಒಪ್ಪಿಕೊಂಡ ಬಳಿಕ, ವೆಂಕಟಗಿರಿ ಜೋಯಿಸರು ಅಧ್ಯಯನಾರಂಭಕ್ಕೆ ಸರಿಯಾದ ದಿನ, ಮುಹೂರ್ತವನ್ನು ನಿಶ್ಚಯಿಸಿಕೊಟ್ಟರು. ಅಂದಿನಿಂದ ವೆಂಕಟದಾಸಪ್ಪನವರ ಅಧ್ಯಯನ ಆರಂಭವಾಯಿತು. ಹೆಂಡತಿ ತವರುಮನೆಗೆ ಹೋಗಿದ್ದುದು ವೆಂಕಟದಾಸಪ್ಪನವರಿಗೆ ಅಭ್ಯಾಸಕ್ಕೆ ಮತ್ತಷ್ಟು ಅನುಕೂಲವಾಯಿತು.

ವೆಂಕಟದಾಸಪ್ಪನವರಿಗೆ ಹೇಳುವ ಸಲುವಾಗಿ, ಅಚ್ಚಣ್ಣಭಟ್ಟರ ಮನೆಯ ಪೆಟ್ಟಿಗೆಯಲ್ಲಿ ಎಂದಿನಿಂದಲೋ ಧೂಳು ತಿನ್ನುತ್ತಾ ಬಿದ್ದಿದ್ದ ಹಳೆಯ ತಾಳೆಯ ಗರಿಯ ಪುಸ್ತಕಗಳೆಲ್ಲವೂ ಹೊರಗೆ ಬಂದವು. ಎಲ್ಲಕ್ಕೂ ಮೊದಲಾಗಿ, ಅಚ್ಚಣ್ಣ ಭಟ್ಟರು, ವೆಂಕಟದಾಸಪ್ಪನವರಿಗೆ ಶಂಕರಾಚಾರ್ಯರ ಭಾಷ್ಯಾನುಸಾರವಾಗಿ ಉಪನಿಷತ್ತುಗಳನ್ನು ವಿವರಿಸತೊಡಗಿದರು. ಪ್ರಥಮತಃ ಅವರು ಆರಂಭಿಸಿದ್ದು ಗಾತ್ರದಲ್ಲಿ ಅತ್ಯಂತ ಕಿರಿದೂ, ಮಹಿಮೆಯಲ್ಲಿ ಅತ್ಯಂತ ಹಿರಿದೂ, ಸಕಲ ವೇದೋಪನಿಷತ್ಸಾರಸ್ವರೂಪವೂ ಆದ 'ಈಶಾವಾಸ್ಯೋಪನಿಷತ್ತು'.

ಅಂದಿನವರೆಗೆ 'ಭಗವದ್ಗೀತೆ'ಯೊಂದನ್ನಲ್ಲದೆ, ಬೇರಾವ ದರ್ಶನ ಗ್ರಂಥವನ್ನೂ ಓದದಿದ್ದ ವೆಂಕಟದಾಸಪ್ಪನವರಿಗೆ 'ಈಶಾವಾಸ್ಯೋಪನಿಷತ್ತಿ'ನ ಮೊದಲ ಶ್ಲೋಕ, ಶಾಂತಿಪಾಠ–

ಪೂರ್ಣಮದಃ ಪೂರ್ಣಮಿದಂ। ಪೂರ್ಣಾತ್‌ಪೂರ್ಣ ಮುದುಚ್ಯತೇ।
ಪೂರ್ಣಸ್ಯ ಪೂರ್ಣಮಾದಾಯ। ಪೂರ್ಣಮೇವಾವಶಿಷ್ಯತೇ॥

[ಅದೂ ಪೂರ್ಣ; ಇದೂ ಪೂರ್ಣವು. ಪೂರ್ಣದಿಂದ ಪೂರ್ಣವು ಲಬ್ಧವಾಗುತ್ತದೆ. ಪೂರ್ಣದ ಪೂರ್ಣವನ್ನು ತೆಗೆದ ಮೇಲೆಯೂ ಪೂರ್ಣವೇ ಉಳಿಯುತ್ತದೆ]

–ಎಂಬ ಶ್ಲೋಕದ ಗಂಭೀರ ಘೋಷವನ್ನು ಕೇಳುತ್ತಿದ್ದ ಹಾಗೇ ವೆಂಕಟದಾಸಪ್ಪನವರನ್ನು ಹೊಡೆದು ಎಚ್ಚರಿಸಿದಂತಾಯಿತು. ಆ ಶ್ಲೋಕಾರ್ಥದ ಸರಳ–ಕ್ಲಿಷ್ಟತೆ ಅವರ ಮಿದುಳಿಗೆ ಏನೋ ಒಂದು ಬಗೆಯ ಮೋಡಿ ಮಾಡಿ, ಅದುವರೆಗೂ ಅವರು ಕಂಡು, ಕೇಳಿ ಅರಿಯದ ಯಾವುದೋ ವಿನೂತನ ವಿಚಾರ ಲೋಕಕ್ಕೆ ಅವರನ್ನು ಕೊಂಡೊಯ್ದಿತು.

ನಾಲ್ಕೇ ನಾಲ್ಕು ಮಾತು. ಆ ಕಿರಿ ಮಾತುಗಳಲ್ಲಿ, ಹನಿಯಲ್ಲಿ ಕಡಲು ಹುದುಗಿದ ಹಾಗೆ, ವಿಶ್ವ ಸತ್ಯದ ಸಾರ ಸರ್ವಸ್ವವೂ ಹುದುಗಿದೆ.

'ಅದೂ ಪೂರ್ಣ–ಇದೂ ಪೂರ್ಣ. ಸೃಷ್ಟಿ ಕಾರಣವಾದ ಆದಿ ಶಕ್ತಿಯೂ ಪೂರ್ಣ; ಆಕೆಯಿಂದ ಸೃಷ್ಟಿಯಾದ ಈ ಜಗತ್ತೂ ಪೂರ್ಣ. ಇವೆರಡರ ಸಂಗಮದಲ್ಲೂ ಪೂರ್ಣತೆ; ಒಂದರಿಂದ ಒಂದು ದೂರವಾದಾಗಲೂ ಪೂರ್ಣತೆ. ಎಲ್ಲಿಯೂ ಅರಕೆಯಿಲ್ಲ, ಅಭಾವವಿಲ್ಲ. ಪೂರ್ಣ, ಪೂರ್ಣ,

ಪೂರ್ಣ..."

ಪೂರ್ಣ—

ಎರಡಕ್ಷರಗಳ ಆ ಮಾತಿನಲ್ಲಿ ಪರಮ ಸತ್ಯ, ಪರಮ ಸೌಂದರ್ಯ, ಪರಮ ಮಾಧುರ್ಯವೆಲ್ಲವೂ ಹುದುಗಿದಂತೆ, ಆ ಎರಡಕ್ಷರಗಳನ್ನು, ನುಡಿದಾಗ ಅವೆಲ್ಲವೂ ಕಣ್ಣೆದಿರು ಮೈ ತಳೆದು ಬಂದು ನಿಂತಂತೆಯೋ ಭಾಸವಾಯಿತು ವೆಂಕಟದಾಸಪ್ಪನವರಿಗೆ. ಹಾಗನಿಸಿ ಅವರ ಗಂಟಲು ಗದ್ಗದಿತವಾಯಿತು; ಕಣ್ಣು ತೇವವಾಯಿತು.

ಅದರಂತೆಯೇ, 'ಈಶಾವಾಸ್ಯೋಪನಿಷತ್ತಿ'ನ ಕೊನೆಯ ನಾಲ್ಕು ಪ್ರಾರ್ಥನಾ ಶ್ಲೋಕಗಳನ್ನು ಓದಿದಾಗಲೂ.

ಆ ಶ್ಲೋಕಗಳು—

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ
ತತ್ತ್ವಂ ಪೂಷನ್ನಪಾವೃಣು ಸತ್ಯ ಧರ್ಮಾಯ ದೃಷ್ಟಯೇ॥

(ಹೇ ಪೂಷನ್, ಜ್ಯೋತಿರ್ಮಯವಾದ ಮುಚ್ಚಳದಿಂದ ಸತ್ಯದ ಮುಖವು ಮುಚ್ಚಲ್ಪಟ್ಟಿದೆ. ಸತ್ಯಧರ್ಮನಾದ ನನಗೆ, ಆ ಸತ್ಯವು ಗೋಚರಿಸು ವಂತೆ, ಆ ಮುಚ್ಚಳವನ್ನು ನೀನು ತೆಗೆದುಹಾಕು]

ಪೂಷನ್ನೇಕರ್ಷೇ ಯಮ ಸೂರ್ಯ ಪ್ರಜಾಪತ್ಯ
ವ್ಯೂಹ ರಶ್ಮೀನ್ ಸಮೂಹ ತೇಜೋ।
ಯತ್ತೇ ರೂಪಂ ಕಲ್ಯಾಣತಮಂ ತತ್ತೇ
ಪಶ್ಯಾಮಿ ಯೋಽಸಾವಸೌ ಪುರುಷಃ ಸೋಽಹಮಸ್ಮಿ॥

[ಹೇ ಪೂಷನ್, ಏಕಾಕಿಯಾಗಿ ಚರಿಸುವವನೆ, ಯಮನೇ ಸೂರ್ಯನೇ ಪ್ರಜಾಪತ್ಯನೇ, ನಿನ್ನ ರಶ್ಮಿಗಳನ್ನು ತೆಗೆ; ನಿನ್ನ ತೇಜಸ್ಸನ್ನು ಹಿಂತೆಗೆದುಕೋ. ನಿನ್ನ ಕಲ್ಯಾಣತಮವಾದ ರೂಪವು ಯಾವುದೋ ಅದನ್ನು ನಿನ್ನ ಅನುಗ್ರಹದಿಂದ ನೋಡುತ್ತೇನೆ. ಆ ಪುರುಷನು ಯಾವನೋ ಅವನೇ ನಾನಾಗಿದ್ದೇನೆ.]

ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಂ।
ಓಂ ಕ್ರತೋ ಸ್ಮರ ಕೃತಂ ಸ್ಮರ ಕ್ರತೋಸ್ಮರ ಕೃತಂ ಸ್ಮರ॥

[ಈಗ ನನ್ನ ಪ್ರಾಣವಾಯುವು ಸಾವಿಲ್ಲದ ಅನಿಲವನ್ನು ಸೇರಲಿ; ಈ

ದೇಹವು ಬೂದಿಯಾಗಲಿ. ಓಂ ಕ್ರತುವೇ ಮಾಡಿದುದನ್ನು ಸ್ಮರಿಸು, ಓಂ ಕ್ರತುವೇ ಸ್ಮರಿಸು; ಮಾಡಿದುದನ್ನು ಸ್ಮರಿಸು.]

ಅಗ್ನೇ ನಯ ಸುಪಥಾರಾಯೇ ರಾಯೇ ಅಸ್ಮಾನ್
ವಿಶ್ವಾನಿದೇವ ವಯುನಾನಿ ವಿದ್ವಾನ್।
ಯುಯೋಧ್ಯಸ್ಮಜ್ಜುಹುರಾಣಮೇನೋ
ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ॥

[ಹೇ ಅಗ್ನಿ, ಕರ್ಮಫಲದ ಭೋಗಕ್ಕಾಗಿ ನಮ್ಮನ್ನು ಒಳ್ಳೆಯ ಮಾರ್ಗ ದಲ್ಲಿ ಕರೆದುಕೊಂಡು ಹೋಗು. ಹೇ, ದೇವ, ನೀನು ಎಲ್ಲ ಕರ್ಮಗಳನ್ನೂ ತಿಳಿದಿರುವವನು. ನಮ್ಮ ಕುಟಿಲವಾದ ಪಾಪಗಳನ್ನು ನಾಶ ಮಾಡು. ನಿನಗೆ ಪುನಃ ಪುನಃ ನಮಸ್ಕಾರ ವಚನವನ್ನು ಹೇಳುತ್ತೇವೆ.]

ಈ ಶ್ಲೋಕ ಚತುಷ್ಟಯ–

ವೆಂಕಟದಾಸಪ್ಪನವರ ಪಾಲಿಗೆ, ಈಶಾವಾಸ್ಯೋಪನಿಷತ್ತಿನಲ್ಲಿ ಓದಿದ ಹದಿನೆಂಟರಲ್ಲಿ ನಾಲ್ಕು ಶ್ಲೋಕಗಳಾಗಲಿಲ್ಲ. ಅವರ ಹೃದಯದಲ್ಲಿ ಆಳವಾಗಿ ಹುದುಗಿದ್ದ ಬಯಕೆಯನ್ನೇ, ದಿವ್ಯ ಜ್ಞಾನಿಯಾದ, ದ್ರಷ್ಟಾರನಾದ ಮಹರ್ಷಿ ಎಂದೋ, ಸಹಸ್ರಾರು ವರ್ಷಗಳ ಹಿಂದೆಯೇ ಅರಿತುಕೊಂಡು ಹೇಳಿದ ಮಾತಿನಂತೆ ತೋರಿ, ಮತ್ತೆ ಮತ್ತೆ ಅದನ್ನು ಓದಿದರು; ಮನನ ಮಾಡಿಕೊಂಡು ತಮಗೆ ತಾವೇ ಹೇಳಿಕೊಂಡರು. ಹಾಗೆ ಹಠಿಸುತ್ತಾ, ಹಠಿಸುತ್ತಾ, ಬರೀ ಶಬ್ದಗಳಾಗಿದ್ದ ಆ ಶ್ಲೋಕಗಳು ಅವರ ಪಾಲಿಗೆ ಜೀವಂತವಾಣಿಯಾಗಿ, ದಿಕ್ಕು ದಿಕ್ಕುಗಳಿಂದಲೂ ಮೂಡಿ ಬಂದು ಅವರ ಕಿವಿಗಳಲ್ಲಿ ಮೊಳಗಿದವು. ದಶ ದಿಕ್ಕುಗಳಿಂದ ಮೂಡಿ ಬಂದ ಆ ಮೊಳಗನ್ನೇ ಅವರ ಹೃದಯವೂ ಮಾರ್ದನಿಸಿ, ಆ ಮಂತ್ರ ನಾದದ ಅಲೆಗಳು, ಅವರ ದೇಹವನ್ನು, ನೆಲದಿಂದ ಮೇಲೆತ್ತಿ ಮತ್ತಾವುದೋ ಊರ್ಧ್ವ ಲೋಕಕ್ಕೆ ಕೊಂಡೊಯ್ಯುತ್ತಿರುವಂತೆ ತೋರಿತು.

ಆ ಅನುಭವವಾದಾಗ ಅವರಿಗೆ, ಶಾಸ್ತ್ರಾಧ್ಯಯನದ ಆರಂಭಕಾಲದ ಲ್ಲೊಂದು ದಿನ, ಅಚ್ಚಣ್ಣಭಟ್ಟರು ಮಂತ್ರಗಳ ಮಹಿಮೆಯನ್ನು ವಿವರಿಸುತ್ತಾ–

'ಮಂತ್ರ ಎಂದು ಎಲ್ಲದಕ್ಕೂ ಹೇಳುವುದಿಲ್ಲ ದಾಸಣ್ಣ. ಅಕ್ಷರಗಳ ಸಂಕಲನದಿಂದ ಸೃಷ್ಟಿಯಾದ ಶಬ್ದಗಳೆಲ್ಲವೂ– ಅವು ಏನೇ ಆಗಬಹುದು;

ಪುರಾಣವಾಗಬಹುದು, ಕಾವ್ಯವಾಗಬಹುದು, ನಾಟಕವಾಗಬಹುದು—ಮಂತ್ರ ವಾಗುವುದಿಲ್ಲ. ಮಂತ್ರವಾಗಬಲ್ಲ ಶಬ್ದ ಒಂದು ವಿಶೇಷ ಕರ್ತವ್ಯವನ್ನು ಮಾಡಬೇಕು. ಆ ಗುರಿಯನ್ನು ಸಾಧಿಸಿದಾಗಲೇ ಆ ಶಬ್ದ, ಆ ಶ್ಲೋಕ ಮಂತ್ರವಾಗುತ್ತದೆ. ಇದೆಲ್ಲವನ್ನೂ ಕ್ರೋಢೀಕರಿಸಿಯೇ ಹಿರಿಯರು, ಮಂತ್ರ ಶಬ್ದಾರ್ಥವನ್ನು ನಿಷ್ಕರ್ಷಿಸಿ 'ಮನನಾತ್ ತ್ರಾಯತೇ ಮನ್ತ್ರಃ,' —ಮನನ ದಿಂದ ಉದ್ಧರಿಸಬಲ್ಲುದೇ ಮಂತ್ರ ಎಂದು ಹೇಳಿದ್ದಾರೆ. ಜಪತಪಾದಿ ಕರ್ಮ ಗಳ ಬಂಧನವಿಲ್ಲದೆ, ಯಾವ ಮಾತು, ಅದನ್ನು ಪುನಃ ಪುನಃ ಮನನ ಮಾಡು ವುದರಿಂದಲೇ, ಮಾನವನನ್ನು ಉದ್ಧರಿಸಬಲ್ಲುದೋ, ಅಂಥ ಮಾತು ಮಂತ್ರ ವಾಗುತ್ತದೆ. ಮಾತು ಬಲ್ಲವರೆಲ್ಲರೂ ಮಂತ್ರಸೃಷ್ಟಿ ಮಾಡುವುದು ಸಾಧ್ಯ ವಿಲ್ಲ, ಒಂದು ಜನ್ಮದ ಪೂರ್ಣ ತಪಸ್ಸು ಗೊಬ್ಬರವಾಗಿ, ದೈವಾನುಗ್ರಹದ ಮಳೆ ಕರೆದಾಗ, ಸಾಧಕನ ಹೃದಯಂದಲ್ಲಿನ ಬಯಕೆಯ ಬೀಜ ಮಂತ್ರಪುಷ್ಪವಾಗಿ ಅರಳುತ್ತದೆ. ಮನುಷ್ಯನಿಗೆ ತಾನೇ ಹೊತ್ತಿಸಿದ ದೀಪ, ಹೇಗೆ ತನಗೇ ಮಾರ್ಗ ದರ್ಶನ ಮಾಡಿಸಿ, ಉಳಿದವರಿಗೂ ದಾರಿ ತೋರುತ್ತದೆಯೋ, ಅಂತೆಯೇ ಇಂಥ ಮಂತ್ರ ಅದನ್ನು ಸೃಷ್ಟಿಸಿದಾತನನ್ನು ಉದ್ಧರಿಸುವುದಲ್ಲದೆ, ಅವರೊಂದಿಗೆ ಜಗತ್ತನ್ನೂ ಉದ್ಧರಿಸುತ್ತದೆ. ವಿಶ್ವಾಮಿತ್ರ ಮಹರ್ಷಿ ಸೃಷ್ಟಿಸಿದ ಗಾಯತ್ರೀ ಮಂತ್ರ ಆತನಿಗೆ ಬ್ರಹ್ಮರ್ಷಿತ್ವವನ್ನು ದಯಪಾಲಿಸಿದುದೇ ಅಲ್ಲದೆ, ಇಂದೂ ಜಗತ್ತಿನ ಜೀವ ಕೋಟಿಯೆಲ್ಲವನ್ನೂ ಉದ್ಧರಿಸುತ್ತಿಲ್ಲವೇ? ಇದು ಮಂತ್ರದ ಮಹಿಮೆ. ಉಪನಿಷತ್ತುಗಳೆಲ್ಲವೂ, ಇಂಥ ದ್ರಷ್ಟಾರರಾದ ಮಹರ್ಷಿಗಳಿಂದ ರಚಿತವಾದ ಮಂತ್ರವಾಕ್ಕುಗಳಿಂದ ತುಂಬಿವೆ. ಅದಕ್ಕಾಗಿಯೇ ಅವನ್ನು ಪಠಿಸುವಾಗ ಭಕ್ತಿಯಿಂದ ಪಠಿಸಬೇಕು ಎಂದು ಹಿರಿಯರು ಎಚ್ಚರಿಸುವುದು'— ಎಂದು ಹೇಳಿದ್ದರು.

ಅಂದು ಅಜ್ಜಣ್ಣಭಟ್ಟರು ಹೇಳಿದ ಮಾತು, ಇಂದು ವೆಂಕಟದಾಸಪ್ಪ ನವರಿಗೆ ಜೀವಂತ ಅನುಭವವಾಗಿತ್ತು.

ಈ ಅನುಭವ—

ನೆಲದ ಮೇಲಿದ್ದ ದೇಹವನ್ನು ಬೇರಾವುದೋ ಮೇಲಿನ ಶುದ್ಧವಾಯು, ಬೆಳಕು ತುಂಬಿದ ಲೋಕಕ್ಕೆ, ಕೊಂಡೊಯ್ಯುವ ಅನುಭವ—

ಹಿಂದೆಂದೋ ಯಾರೋ ಯಾರಿಗೋ ಆಡಿದ ಮಾತು, ಅಂದೇ ತಮಗಾಗಿ, ತಮ್ಮ ಉದ್ಧಾರಕ್ಕಾಗಿ ಆಡುತ್ತಿರುವಂತೆ ಕೇಳಿಸುವ ಅನುಭವ–

ಅವರ ಮೈಯ ನರ ನರವನ್ನು ಪುಲಕಿತಗೊಳಿಸಿ, ಆ ನರನರವೂ ವಸಂತ ಕಾಲದ ಬಳ್ಳಿಯಂತೆ, ಹೂ– ಚಿಗುರು ಬಿಟ್ಟು ಕಳಕಳಿಸುವಂತೆ ಮಾಡುವ ಅನುಭವ–

ವೆಂಕಟದಾಸಪ್ಪನವರ ಉಪನಿಷತ್ತುಗಳ ಅಧ್ಯಯನ ಮುಂದುವರಿದಂತೆ ದಿನ ದಿನವೂ ಆಗತೊಡಗಿತು.

ಈ ಎಲ್ಲ ಅನುಭವಗಳಿಗೂ ಮಿಗಿಲಾಗಿ ಅವರ ಬಾಳ ಬಳ್ಳಿಯನ್ನೇ, ಇದ್ದೆಡೆಯಿಂದ ಕಿತ್ತು ಬೇರೊಂದೆಡೆ ನಾಟಿ ಬೆಳೆಸಿದಂತೆ ಆದ ಅನುಭವ, ಅವರಿಗೆ 'ಕೇನೋಪನಿಷತ್ತಿ'ನ ಅಭ್ಯಾಸಕಾಲದಲ್ಲಾಯಿತು.

ಎಲ್ಲದರ ಮೂಲಶಕ್ತಿ, ಸರ್ವಶಕ್ತಿಗಳ ಪ್ರಚೋದಕ ಶಕ್ತಿ ಯಾವುದು ಎಂದು ಅರಿಯ ಹೊರಟ ಜಿಜ್ಞಾಸುವಿಗೆ, ಉಪನಿಷತ್ಕಾರನಾದ ಮಹರ್ಷಿ, ಸಾಧಕನಿಗೆ ಅಹಂಭಾವದಿಂದ ಉಂಟಾಗುವ ಅನಾಹುತವನ್ನು ವಿವರಿಸುತ್ತ. ಇಂದ್ರಾಗ್ನಿವಾಯುಗಳ ಅಹಂಕಾರ ವಿಮೋಚನೆಯಾದ ಬಗೆಯನ್ನು ಹೇಳುತ್ತಾನೆ.

"ದೇವತೆಗಳಿಗೂ, ಅಸುರರಿಗೂ ಯುದ್ಧವಾಗಿದೆ. ಆ ಯುದ್ಧದಲ್ಲಿ ಬ್ರಹ್ಮಾನುಗ್ರಹದಿಂದ ದೇವತೆಗಳಿಗೆ ಗೆಲುವಾಗಿದೆ. ಆದರೆ ಇಂದ್ರಾದಿ ದೇವತೆಗಳು, ಆ ವಿಜಯ ತಮ್ಮ ಸಾಹಸದ ಫಲವೆಂದೇ ಭ್ರಮಿಸುತ್ತಾರೆ. ಆಗ ದೇವತೆಗಳ ಈ ಅಹಂಕಾರ ಮೂಲವಾದ ಭ್ರಮೆಯನ್ನು ನಿವಾರಿಸುವ ಸಲುವಾಗಿ ಬ್ರಹ್ಮವು ಯಕ್ಷರೂಪವಾಗಿ ಕಾಣಿಸಿಕೊಳ್ಳುತ್ತದೆ. ಆದರೆ ಅಹಂಕಾರದಿಂದ ಕುರುಡರಾದ ಇಂದ್ರಾದಿ ದೇವತೆಗಳು, ಆ ಯಕ್ಷದ ಸತ್ಯವನ್ನು ಅರಿಯದೆ, ಅದು ಯಾವುದೆಂದು ಅರಿಯಲು ಯತ್ನಿಸುತ್ತಾರೆ. ಆಗ ಅಗ್ನಿ ಎಲ್ಲರಿಗೂ ಮೊದಲು ಆ ಯಕ್ಷ ಯಾರೆಂದು ತಿಳಿಯಲು ಹೋಗುತ್ತಾನೆ. ತನ್ನನ್ನು ಪ್ರಶ್ನಿಸ ಬಂದ ಅಗ್ನಿಗೆ ಯಕ್ಷ–

'ನೀನು ಯಾರು? ನಿನ್ನ ಶಕ್ತಿಯೇನು?'

–ಎಂದು ಕೇಳುತ್ತಾನೆ.

'ನಾನು ಅಗ್ನಿ. ಎಲ್ಲವನ್ನೂ ಸುಡಬಲ್ಲೆ'

–ಎಂದು ಅಗ್ನಿ ಉತ್ತರ ಕೊಡುತ್ತಾನೆ.

'ಹಾಗೋ. ಹಾಗಾದರೆ ಇದನ್ನು ಸುಡು'

–ಎಂದು ಯಕ್ಷ ಅಗ್ನಿಯ ಮುಂದೆ ಹುಲ್ಲುಕಡ್ಡಿಯನ್ನಿಡುತ್ತಾನೆ.

ಅಗ್ನಿ ತನ್ನ ಸರ್ವಶಕ್ತಿಯನ್ನು ಉಪಯೋಗಿಸಿಯೂ ಅದನ್ನು ಸುಡಲಾಗದೆ, ನಾಚಿ ಹಿಂದಿರುಗುತ್ತಾನೆ.

ಇದೇ ರೀತಿ ವಾಯುವೂ ಯಕ್ಷ ಪರೀಕ್ಷೆ ಮಾಡಲು ಹೋಗಿ, ತನ್ನ ಶಕ್ತಿಯನ್ನು ಪ್ರದರ್ಶಿಸಲೆತ್ನಿಸಿ, ಹುಲ್ಲುಕಡ್ಡಿಯನ್ನು ಎತ್ತಲಾಗದೆ ಹಿಂದಿರುಗುತ್ತಾನೆ.

ಹೀಗೇ ಇಂದ್ರನು ಯತ್ನಿಸಿದಾಗ ಯಕ್ಷ ಅವನಿಗೆ ಕಾಣಿಸಿಕೊಳ್ಳದೆ ಮಾಯವಾಗುತ್ತಾನೆ.

ಈ ರೀತಿ, ತಮ್ಮ ತಮ್ಮ ಶಕ್ತಿಗಳೆಲ್ಲವೂ ತಮ್ಮದೇ ಎಂದುಕೊಂಡ ದೇವತೆಗಳ ಗರ್ವಭಂಗವಾದ ಬಳಿಕ, ಇಂದ್ರನು, ಬಹು ಶೋಭಾಯಮಾನಳಾಗಿ ಥಳಥಳಿಸುತ್ತಿರುವ ಉಮಾ–ಹೈಮವತಿಯನ್ನು 'ಈ ಯಕ್ಷ ಶಕ್ತಿಯಾವುದು?' ಎಂದು ಪ್ರಶ್ನಿಸಿದಾಗ, ಆಕೆ 'ಇದೇ ಬ್ರಹ್ಮ, ಇದರಿಂದಲೇ ನಿಮ್ಮ ಗೆಲವು' ಎಂದು ಹೇಳುತ್ತಾಳೆ. ಆಗ ಆ ದೇವತೆಗಳಿಗೆ ತಮ್ಮದು ಎಂದುಕೊಂಡದ್ದು ತಮ್ಮದಲ್ಲ, ಒಬ್ಬೊಬ್ಬರಲ್ಲಿ ಒಂದೊಂದು ವಿಧವಾಗಿ ಪ್ರಕಾಶಿಸುತ್ತಿರುವ ಎಲ್ಲ ಶಕ್ತಿಗಳ ಮೂಲವೂ ಆ ಬ್ರಹ್ಮವೇ ಎಂದು ಅರಿವಾಗುತ್ತದೆ.

ಈ ಸತ್ಯವನ್ನು ದೇವತೆಗಳಿಗೆ ಹೇಳಿದ ದೇವಿ–

"ಯೋವಾ ಏತಾಮೇವಂ ವೇದಾಪಹತ್ಯ ಪಾಪ್ಮಾನಮನಂತೇ

ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ, ಪ್ರತಿತಿಷ್ಠತಿ"

[ಯಾವನು ಇದನ್ನು ಹೀಗೆ ತಿಳಿಯುತ್ತಾನೋ ಅವನು ಪಾಪವನ್ನು ಕಳೆದುಕೊಂಡು, ಅನಂತವೂ, ಸರ್ವ ಮಹತ್ತ್ವವೂ ಆದ ಸ್ವರ್ಗಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ; ಪ್ರತಿಷ್ಠಿತನಾಗುತ್ತಾನೆ.'

–ಎಂದು ಸಾರಿ ಸಾರಿ ಹೇಳುತ್ತಾಳೆ."

'ಕೇನೋಪನಿಷತ್ತಿ'ನ ಮೂರು—ನಾಲ್ಕನೆಯ ಖಂಡವಲ್ಲಿ ಬರುವ ಈ ದೃಷ್ಟಾಂತವನ್ನು ವಿವರಿಸಿ ಹೇಳಿದಾಗ, ವೆಂಕಟದಾಸಪ್ಪನವರಿಗೆ ತಟಕ್ಕನೆ ಮಿಂಚು ಮುಟ್ಟಿದಂತಾಯಿತು.

ಉಮಾ—ಹೇಮವತಿದೇವಿಯ ದಿವ್ಯವಾಣಿಯನ್ನು ಕೇಳಿದಾಗ ವೆಂಕಟದಾಸಪ್ಪನವರ ಅರಿವಿನ ಗೋಪುರದಲ್ಲಿ, ಜಾತ್ರೆಯ ಹಿಂದಿನ ರಾತ್ರಿ ತಾವು ಕನಸು ಕಂಡಾಗ, ಆ ಕನಸಿನಲ್ಲಿ ದೇವಿ, ಗಹಗಹಿಸಂತ್ತಾ—

'ಎಲ್ಲವೂ ನಾನೇ... ಎಲ್ಲವೂ ನನ್ನ ಇಷ್ಟ.'

—ಎಂದು ಹೇಳಿದುದು ನೆನಪಾಗಿ, ಅವರ ಮೈ ಬಿರುಗಾಳಿಗೆ ಸಿಲುಕಿದಂತೆ ಕಂಪಿಸಿ ಕಣ್ಣಿನಿಂದ ನೀರು ಹನಿಗಳು ತೊಟಕಿದವು. ಪ್ರಜ್ಞಾಹೀನರಂತೆ ಸುಮ್ಮನೆ ಕುಳಿತು ಬಿಟ್ಟರು.

ಹಾಗೆ ಕುಳಿತಾಗ ಅವರ ಕಿವಿಯಲ್ಲಿ ಕೇನೋಪನಿಷತ್ತಿನ ಋಷಿವಾಣಿ ಮೊರೆಯುತ್ತಿತ್ತು—

"ಇಹ ಚೇದವೇದೀದಥ ಸತ್ಯಮಸ್ತಿ
ನ ಚೇದಿಹಾವೇದೀ ನ್ಮಹತೀ ವಿನಷ್ಟಿಃ।
ಭೂತೇಷು ಭೂತೇಷು ವಿಚಿತ್ಯ ಧೀರಾಃ
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ॥

[ಇದನ್ನು ಇಲ್ಲಿಯೇ ಅರಿದುಕೊಂಡರೆ ಆಗ ಸತ್ಯವುಂಟು. ಇಲ್ಲಿ ಅರಿತುಕೊಳ್ಳದಿದ್ದರೆ ದೊಡ್ಡ ವಿನಾಶವಾಗಂತ್ತದೆ. ವಿವೇಕಿಗಳು ಸರ್ವ ಪ್ರಾಣಿಗಳಲ್ಲಿಯೂ ಆತ್ಮತತ್ತ್ವವನ್ನು ಅರಿತುಕೊಂಡು, ಈ ಲೋಕದಿಂದ ಹೋಗಿ ಅಮೃತರಾಗುತ್ತಾರೆ.]

ಕಿವಿಯಲ್ಲಿ, ನೆರೆನೀರಿನಂತೆ ತುಂಬಿ ಮೊರೆಯುತ್ತಿದ್ದ ಆ ಉಪನಿಷದ್ವಾಣಿಯನ್ನು ಕೇಳಕೇಳುತ್ತಾ ವೆಂಕಟದಾಸಪ್ಪನವರು 'ತಾಯೀ... ತಾಯೀ... ತಾಯೀ...' ಎಂದು ಪಿಸುಧ್ವನಿಯಲ್ಲಿ ಬಿಕ್ಕುತ್ತ ಕುಳಿತು ಬಿಟ್ಟರು.

ಅವರ ಆ ಅವಸ್ಥೆಯನ್ನು ಕಂಡು, ಅವರ ಎದುರಿಗೆ ವ್ಯಾಸಪೀಠದಲ್ಲಿ ಉಪನಿಷತ್ತಿನ ಓಲೇಗರಿಯ ಗ್ರಂಥವನ್ನಿಟ್ಟುಕೊಂಡು ಕುಳಿತ ಅಚ್ಚಣ್ಣಭಟ್ಟರಿಗೆ ಗರಬಡಿದಂತಾಗಿ ಅವರೂ ಸುಮ್ಮನೆ ಕುಳಿತು ಬಿಟ್ಟರು. ಅಷ್ಟು ಹೊತ್ತು ಅವರ ಬಾಯಿಂದಲೂ ಮಾತು ಹೊರಡಲಿಲ್ಲ. ವೆಂಕಟದಾಸಪ್ಪನವರಿಗಂತೂ ಇಹ

ಲೋಕ ಪ್ರಜ್ಞೆಯೇ ಇದ್ದಂತಿರಲಿಲ್ಲ.

ಇಬ್ಬರೂ ಅಷ್ಟು ಹೊತ್ತು ಹಾಗಿದ್ದ ಬಳಿಕ ಅಚ್ಚಣ್ಣಭಟ್ಟರೇ ಎಚ್ಚರ ತಂದುಕೊಂಡು, ಶಿಲಾವಿಗ್ರಹದಂತೆ ಕುಳಿತ ವೆಂಕಟದಾಸಪ್ಪನವರನ್ನು ನೇವರಿಸಿ—

'ದಾಸಣ್ಣಾ... ದಾಸಣ್ಣಾ... ಎಚ್ಚರ ತಂದುಕೋ ದಾಸಣ್ಣ'

—ಎಂದು ಹೇಳಿದರು.

ಅಚ್ಚಣ್ಣಭಟ್ಟರು ತಮ್ಮ ಮೈ ಮುಟ್ಟಿದುದರಿಂದ, ತಮ್ಮನ್ನು ಮಾತನಾಡಿಸಿದುದರಿಂದ ವೆಂಕಟದಾಸಪ್ಪನವರನ್ನು ಕವಿದಿದ್ದ ಸ್ವಪ್ನ ಸ್ಥಿತಿ ಮಾಯವಾಗಿ, ಇಹಲೋಕ ಪ್ರಜ್ಞೆ ಬಂದು, ಕಣ್ಣಿನಿಂದ ಹರಿಯುತ್ತಿದ್ದ ಅಶ್ರುಧಾರೆಯನ್ನು ಒರೆಸಿಕೊಂಡು, ಅಸಹಾಯಕತೆ ತುಂಬಿದ ದೃಷ್ಟಿಯಿಂದ ಅಚ್ಚಣ್ಣಭಟ್ಟರತ್ತ ನೋಡಿದರು. ಆದರೆ ಅವರ ಬಾಯಿಂದ ಮಾತೇನೂ ಹೊರಡಲಿಲ್ಲ.

ಅದನ್ನು ಕಂಡು ಅಚ್ಚಣ್ಣಭಟ್ಟರೇ—

'ಇದೇನು ದಾಸಣ್ಣಾ... ಹೀಗೇಕಾಯಿತು?'

—ಎಂದು ಕೇಳಿದರು.

'ಈ ಮಾತೆಲ್ಲಾ... ಈ... ಮಾತೆಲ್ಲಾ... ತಾಯಿ... ಅವತ್ತೇ... ಅವತ್ತೇ... ನನಗೆ ಹೇಳಿದ್ದಳು... ಅಚ್ಚಣ್ಣಭಟ್ಟರೆ...'

—ಎಂದರು ವೆಂಕಟದಾಸಪ್ಪ ಆಗಲೂ ಬಿಕ್ಕುತ್ತ.

'ಹೌದೇ? ಯಾವ ಮಾತು?'

—ವೆಂಕಟದಾಸಪ್ಪನವರ ಮಾತೆ ಅರ್ಥವಾಗದಂತೆ ಕೇಳಿದರು ಅಚ್ಚಣ್ಣಭಟ್ಟರು.

'ಇವೊತ್ತು ನೀವು ಕೇನೋಪನಿಷತ್ತಿನಲ್ಲಿ ಓದಿ ಹೇಳಿದಿರಲ್ಲಾ—ಆ ಮಾತು'.

'ಆ್ಞ! ಯಾವತ್ತು?'

'ಜಾತ್ರೆ ಹಿಂದಿನ ದಿನ ನಾನು ಪೂಜೆ ಮಾಡುವುದು ಬೇಡಾಂತ ಓಡಿಹೋಗಿದ್ದೆನಲ್ಲಾ, ಅವತ್ತು ಕನಸಿನಲ್ಲಿ ಕಾಣಿಸಿಕೊಂಡು 'ಎಲ್ಲವೂ ನಾನೇ, ಎಲ್ಲವೂ ನನ್ನ ಇಷ್ಟ' ಎಂದಿದ್ದಳು... ಭಟ್ಟರೆ... ಅವತ್ತು ನನಗಿದೆಲ್ಲಾ

ಅರ್ಥವಾಗಿರಲಿಲ್ಲ, ಇಂದ್ರಾಗ್ನಿಗಳ ಹಾಗೆ ನಾನೂ ಶಕ್ತಿ ಪರೀಕ್ಷೆ ಮಾಡಲೆತ್ನಿಸಿ ಕೆಟ್ಟೆ; ಕೆಟ್ಟಮೇಲೇ ನನಗೂ ವಿವೇಕ ಬಂತು.'

ವೆಂಕಟದಾಸಪ್ಪನವರು ಹೇಳಿದುದನ್ನು ಕೇಳಿ ಅಚ್ಚಣ್ಣಭಟ್ಟರಿಗೆ ದಿಗ್ಭ್ರಮೆಯಾದಂತಾಯಿತು.

'ಹೌದೆ. . . . ಹೌದೇ. . . ಕನಸಿನಲ್ಲಿ ಅಮ್ಮನವರು ಹಾಗೆ ಅಪ್ಪಣೆ ಕೊಡಿಸಿದ್ದರೇ. . . .'

'ಹೂ. . . . . . .ಆ ಕನಸನ್ನು ನಂಬದಿದ್ದಾಗ, ಹಿಂದೇ ಬಂದು ಹೇಳಿದಳು...'

'ಆ್ಹ!'

'ಹೌದು. . . ಅಚ್ಚಣ್ಣಭಟ್ಟರ. . . ಆ ದಿನ ನಾನು ಮಾಡಿದ ಪಾಪಕ್ಕೆ ಇತಿಮಿತಿಯೇ ಇಲ್ಲ. . . .'

'ಪಾಪ. . . ಪಾಪ! ನಿನಗೆ ಪಾಪವಿಲ್ಲ. ಅಷ್ಟೇ ಅಲ್ಲ—ಸಾಕ್ಷಾತ್ ಅಮ್ಮನವರಿಂದಲೇ ಸಕಲ ವೇದೋಪನಿಷತ್ತುಗಳ ಸಾರಾರ್ಥವನ್ನು ಹೇಳಿಸಿಕೊಂಡ ನಿನ್ನನ್ನು ನೋಡಿದ ನಮ್ಮಂಥವರ ಪಾಪವೂ ಪರಿಹಾರವಾಗುತ್ತದೆ.. ದಾಸಣ್ಣ...ನಿನಗೆ...ನಿನಗೆ......ನಾನು ಉಪನಿಷತ್ತಿನ ಪಾಠ ಹೇಳುತ್ತೇನೆ ಅಂದೆನಲ್ಲಾ ನಾನೆಂಥ ಅಜ್ಞ...ಮೂಢ...ನಿನಗೆ ನಾನೇನೂ ಹೇಳಬೇಕಾದುದಿಲ್ಲ ದಾಸಣ್ಣ...ನನ್ನಿಂದ ನೀನು ಕಲಿಯಬೇಕಾದುದೂ ಏನು ಇಲ್ಲ...'

—ಎಂದರು ಅಚ್ಚಣ್ಣಭಟ್ಟರೂ ಭಾವೋದ್ರಿಕ್ತರಾಗಿ.

'ತಾವು ಹಾಗೆ ಹೇಳಬಾರದು ಅಚ್ಚಣ್ಣಭಟ್ಟರೇ. ನಾನು ಏನೂ ಅರಿಯದ ಅಜ್ಞ.'

'ಹಿಂದೆ ಹಾಗಿದ್ದಿರಬಹುದು; ಈಗಲ್ಲ.'

'ಅಂದರೆ ...'

'ತಾಯಿಯ ಅನುಗ್ರಹವಾದ ಮೇಲೆ, ಯಾರೂ ಅಜ್ಞಾನಿಗಳಾಗಿ ಉಳಿಯುವುದಿಲ್ಲ ದಾಸಣ್ಣ. ಆಕೆ ಕಲಿಸಲಾಗದುದನ್ನು ಯಾರೇನು ಕಲಿಸಬಲ್ಲರು! ವೇದಗಳೂ ಬೇಡ, ಉಪನಿಷತ್ತುಗಳೂ ಬೇಡ ದಾಸಣ್ಣ—ಮನುಷ್ಯ ಕೋರಬೇಕಾದದ್ದು ಆಕೆಯ ಅನುಗ್ರಹವೊಂದನ್ನೇ. ಅದೊಂದಾದರೆ ಏನಾಗಲಾರದು....'

—ಆ ಮಾತು ಆಡುತ್ತಾ ಆಡುತ್ತಾ ಅಚ್ಚಣ್ಣಭಟ್ಟರಿಗೇ ಬೇರೊಂದು ಮಾತು ನೆನಪಾಗಿ—

'ದಾಸಣ್ಣ...ಅಮ್ಮನವರು ಒಂದು ಮಾತು ಅಪ್ಪಣೆ ಕೊಡಿಸಿದಾರೆ ಕೇಳಿದೀಯಾ?'

—ಎಂದು ಪ್ರಶ್ನೆ ಮಾಡಿದರು.

'ಏನು ಮಾತು?'

'ದೇವೀ ಸೂಕ್ತದಲ್ಲಿ ಅಮ್ಮನವರು ಹೇಳಿದಾರೆ. ಸಾಕ್ಷಾತ್ತಾಗಿ ಅಮ್ಮನವರೇ ಅಪ್ಪಣೆ ಕೊಡಿಸಿದ್ದು ಅದು. 'ಇದು ನಾನೇ ಹೇಳಿದ್ದು' ಎಂದೇ ಹೇಳಿದ್ದಾರೆ...'

'ಏನು ಹೇಳಿದಾರೆ?'

'ಹೇಳಿದಾರೆ—

ಅಹಮೇವ ಸ್ವಯಮಿದಂ ವದಾಮಿ
ಜುಷ್ಟಂ ದೇವೇಭಿರುತ ಮಾನುಷೇಭಿಃ।
ಯಂ ಕಾಮಯೇ ತಂತಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್॥

[ನಾನೇ ಇದನ್ನು ಹೇಳುತ್ತಿದ್ದೇನೆ: 'ನಾನು ಯಾರನ್ನು ಪ್ರೀತಿಸುತ್ತೇನೋ ಅವನನ್ನು ಬಲಿಷ್ಠನನ್ನಾಗಿ ಮಾಡುತ್ತೇನೆ; ಬ್ರಹ್ಮನನ್ನಾಗಿ ಮಾಡುತ್ತೇನೆ; ಋಷಿಯನ್ನಾಗಿ ಮಾಡುತ್ತೇನೆ; ಪ್ರಾಜ್ಞನನ್ನಾಗಿ ಮಾಡುತ್ತಾನೆ.]

—ಎಂದು.

ಅಚ್ಚಣ್ಣಭಟ್ಟರು ಹೇಳಿದ ಆ ಮಾತನ್ನು ಕೇಳಿ ವೆಂಕಟದಾಸಪ್ಪನವರಿಗೆ, ಹಿಂದೊಂದು ದಿನ, ತಮ್ಮ ದೇವರ ಮನೆಯಲ್ಲಿ, ಮಂದಾಸನದ ಇದಿರು ನಿಂತಾಗ, ತಮ್ಮ ಕಿವಿಯಲ್ಲಿ ಯಾರೋ ಆ ಮಾತನ್ನು ಉಸಿರಿದಂತಾದುದು ನೆನಪಾಗಿ, ಆ ನೆನಪಿನ ಹಿಂದೆ ಬಗೆ ಬಗೆಯ ನೆನಪುಗಳು ನುಗ್ಗಿ ಅವರಿಗೆ ಉಸಿರು ಕಟ್ಟಿಸಿದಂತಾಯಿತು.

'ಎಲ್ಲವನ್ನೂ ಎಲ್ಲೋ ಕೇಳಿದೇನೆ; ಸ್ವಯಂ ತಾಯಿಯೆ ಹೇಳಿದಾಳೆ. ಎಲ್ಲವನ್ನೂ ಹೇಳಿದಾಳೆ; ಮುಖವನ್ನು ಮಾತ್ರ ತೋರಿಸಲಿಲ್ಲ.

ಇಷ್ಟು ಅಭಿಮಾನವಿದ್ದೂ, ಅದೊಂದನ್ನೇಕೆ ದಯಪಾಲಿಸಲಿಲ್ಲ? ಎಂದು ಆ ಅನುಗ್ರಹ?'

ಈ ಬಾರಿ ಆ ಪ್ರಶ್ನೆ ಅವರ ಮಿದುಳಿನಲ್ಲಿ ಮೂಡಿದಾಗ ಹಿಂದಿನಂತೆ ಅವರ ಚಿತ್ತ ಉದ್ವಿಗ್ನವಾಗಲಿಲ್ಲ.

ತಾವು ಹೇಳಿದುದನ್ನು ಕೇಳಿ ವೆಂಕಟದಾಸಪ್ಪನವರು ಎತ್ತಲೋ ಯೋಚಿಸುತ್ತಾ ಕುಳಿತಿದ್ದುದನ್ನು ಕಂಡು ಅಚ್ಚಣ್ಣಭಟ್ಟರು—

'ಏನು ದಾಸಣ್ಣ ಬಹಳ ಯೋಚಿಸುತ್ತಿದ್ದೀಯ?'

—ಎಂದು ಕೇಳಿದರು.

'ಏನು ಇಲ್ಲ ಭಟ್ಟರೆ. ನಾನು ಯೋಚಿಸುವುದು ಏನಿದೆ? ತಾಯಿ—ನನ್ನ ಯೋಚನೆಗೆ ಏನೂ ಉಳಿಸಿಲ್ಲ.'

'ನಿಜ, ನಿಜ, ನಿನಗೆ ಯೋಚಿಸಲೂ ಉಳಿಸಿಲ್ಲ; ನನಗೆ ಕಲಿಸಲೂ ಉಳಿಸಿಲ್ಲ. ನಾನೊಂದು ಮಾತು ಹೇಳುತ್ತೀನಿ—ತಪ್ಪು ತಿಳಿಕೊಳ್ಳದೇ ಕೇಳುತ್ತೀಯಾ ದಾಸಣ್ಣ?'

'ಹೇಳಿ'.

'ಇನ್ನು ಈ ಕಲಿಯುವ ಶ್ರಮ ಬಿಟ್ಟುಬಿಡು'.

'ಏಕೆ?'

'ವೇದಾಭ್ಯಾಸ ಜಡ' ಎನ್ನುವ ಮಾತು ನೀನು ಕೇಳಿಲ್ಲ ಎಂದು ಕಾಣುತ್ತದೆ.'

'ಊಹೂ ಇಲ್ಲ. ಹಾಗೆಂದರೇನು?'

'ಹೀಗೇ—ಅತಿಯಾಗಿ ಶಾಸ್ತ್ರ ಓದಿದ ಮನುಷ್ಯ ಎಂತ. ಯಾರಿಗೆ ಕೇವಲ ಪಾಂಡಿತ್ಯವೇ ಗುರಿಯೋ, ಅವರು ಲೋಕದಲ್ಲಿ ಎಷ್ಟು ಶಾಸ್ತ್ರವಿದೆಯೋ ಅಷ್ಟನ್ನೂ ಓದಬೇಕು. ನಿನ್ನ ಉದ್ದೇಶ ಅದಲ್ಲ; ಅಲ್ಲವೆ?'

'ನಿಜ—ಅಲ್ಲ. ಶಾಮಣ್ಣ ಮಾವ ಶಾಸ್ತ್ರಾಧ್ಯಯನದಿಂದ ಬುದ್ಧಿ ಪಕ್ವವಾಗಿ, ದೇವತಾ ದರ್ಶನ ಸುಲಭ ಸಾಧ್ಯವಾಗುತ್ತದೆ ಅಂದ. ಅದಕ್ಕಾಗಿ ನಾನು ಇದನ್ನು ಆರಂಭಿಸಿರುವುದು.'

'ಹೌದು ತಾನೇ? ಆದರೆ ಅತಿ ಅಭ್ಯಾಸವೂ ಆ ಬಯಕೆಗೆ ಅಡ್ಡಿ

ಯಾಗುತ್ತದೆ ಎಂತ ನಾನು ಕೇಳಿದೇನೆ. ಪಂಡಿತರಾರೂ ಕವಿಗಳಾಗುವುದಿಲ್ಲ-ನಿನಗೆ ಗೊತ್ತು ತಾನೆ?'

'ಇಲ್ಲ. ಗೊತ್ತಿಲ್ಲ.'

'ನಿಜ—ಆಗಿಲ್ಲ; ಪಂಡಿತರು ಕವಿಗಳಾಗುವುದು ಸಾಧ್ಯವೂ ಇಲ್ಲ. ಅದಕ್ಕೆ ಇಷ್ಟೇ ಕಾರಣ—ಪಾಂಡಿತ್ಯ ಪ್ರಬಲಿಸಿದಂತೆ, ಸಂದೇಹಗಳು ಬೆಳೆಯುತ್ತಾ ಹೋಗಿ, ಬುದ್ಧಿ ಭೀತಿಗೆ ವಶವಾಗುತ್ತದೆ. ಅಷ್ಟೇ ಅಲ್ಲ—ಅದು ಹಾಗೇಕೆ, ಇದು ಹೀಗೇಕೆ ಎಂದು ಪ್ರಶ್ನೆ ಮಾಡಬೇಕೆಂಬ ಚಪಲವೂ ಬೆಳೆಯುತ್ತದೆ; ಯಾವುದರಲ್ಲೂ ನಂಬಿಕೆ ಉಳಿಯುವುದಿಲ್ಲ. ಆದ್ದರಿಂದ ಇನ್ನು ಕಲಿಯುವುದನ್ನು ಬಿಟ್ಟು ಬಿಡು. ಮುಕ್ತಿಗೆ ಈ ಓದೆಲ್ಲಾ ಬೇಕೆ? ಮುಕ್ತಿಗೆ 'ತಾಯಿ' ಎಂಬ ಆ ಎರಡಕ್ಷರ ಹೇಳುವುದು ತಿಳಿದಿದ್ದರೆ ಸಾಕು. ಅಷ್ಟು ತಿಳಿದಿದ್ದವರಿಗೇ ದೇವತಾ ದರ್ಶನವಾಗಿರುವುದು.'

'ಹಾಗೆಂದರೆ ನಾನೇನು ಮಾಡಬೇಕು ಭಟ್ಟರೇ?'

'ಈಗ ಇದುವರೆಗೆ ಓದಿದ್ದು ನಿನ್ನ ಮನಸ್ಸಿನಲ್ಲಿದ್ದರೆ ಸಾಕು. ಮುಕ್ತಿಗೆ ಒಂದು ಮಂತ್ರ ಸಾಲದೆ? ಈಗೊಂದು ಹದಿನೈದು ದಿನಗಳ ಕೆಳಗೆ ಕೇನೋಪನಿಷತ್ತಿನ ಅಭ್ಯಾಸ ಆರಂಭ ಮಾಡಿದಾಗ ಓದಿದೆನಲ್ಲಾ ಆ ಶಾಂತಿ ಪಾಠ, ಅದೊಂದು ನಿನ್ನ ಮನಸ್ಸಿನಲ್ಲಿದ್ದರೂ ಸಾಕು ದಾಸಣ್ಣ. ಆ ಶಾಂತಿ ಮಂತ್ರ, ನಮಗೆ—

ಆಪ್ಯಾಯಂತು ಮಮಾಂಗಾನಿ ವಾಕ್ ಪ್ರಾಣಶ್ಚಕ್ಷು
ಶ್ರೋತ್ರಮಥೋ ಬಲಮಿಂದ್ರಿಯಾಣಿ ಚ ಸರ್ವಾಣಿ
ಸರ್ವಂಬ್ರಹ್ಮೋಪನಿಷದಂ ಮಾಹಂ ಬ್ರಹ್ಮನಿರಾಕುರ್ಯಾಂ
ಮಾ ಮಾ ಬ್ರಹ್ಮ ನಿರಾಕರೋದ ನಿರಾಕರಣ ಮಸ್ತ್ವ
ನಿರಾಕರಣಂ
ಮೇಸ್ತು ತದಾತ್ಮನಿ ನಿರತೇ ಯ ಉಪನಿಷತ್ಸು
ಧರ್ಮಾಸ್ತೆ ಮಯಿ ಸಂತು ತೇ ಮಯಿ ಸಂತು॥

[ನನ್ನ ಅವಯವಗಳೂ ಮಾತೂ ಪ್ರಾಣವೂ ಕಣ್ಣು ಕಿವಿಗಳೂ ಬಲವೂ ಮತ್ತು ಎಲ್ಲ ಇಂದ್ರಿಗಳೂ ಪುಷ್ಟಿಯನ್ನು ಹೊಂದಲಿ; ಎಲ್ಲವೂ ಉಪನಿಷತ್ತು

ಗಳಲ್ಲಿ ಉಕ್ತವಾಗಿರುವ ಬ್ರಹ್ಮವೇ. ನಾನು ಬ್ರಹ್ಮನನ್ನು ನಿರಾಕರಿಸದಂತಿರಲಿ; ಬ್ರಹ್ಮವೂ ನನ್ನನ್ನು ನಿರಾಕರಿಸದಂತಿರಲಿ; ನಿರಾಕರಣವೆಂಬುದೇ ಇಲ್ಲದಿರಲಿ; ನನ್ನಿಂದಾದರೂ ನಿರಾಕರಣೆ ಇಲ್ಲದಿರಲಿ. ಉಪನಿಷತ್ತುಗಳಲ್ಲಿ ಉಕ್ತವಾದ ಧರ್ಮಗಳು ಆತ್ಮನಿರತನಾದ ನನ್ನಲ್ಲಿ ನೆಲಸಿರಲಿ; ಅವುಗಳು ನನ್ನಲ್ಲಿ ನೆಲಸಿರಲಿ.]

—ಎಂದು ದಿನವೂ ಹೇಳಿಕೊ, ಎಂದು ಹೇಳಿದೆ. ಆ ಮಾತು ಸಾಕು. ಉಳಿದ ತವಡು ಕುಟ್ಟುವ ಕೆಲಸವೇಕೆ?'

—ಎಂದರು ಅಚ್ಚಣ್ಣಭಟ್ಟರು.

ಇನ್ನು ಕಲಿಯುವುದು ಸಾಕು ಎನ್ನುವುದಕ್ಕೆ ಅವರು ಕೊಟ್ಟ ಕಾರಣ, ತರ್ಕಯುಕ್ತವಾದಂತೆಯೇ ಇದ್ದರೂ ವೆಂಕಟದಾಸಪ್ಪನವರಿಗೆ ಅದನ್ನೆ ದೃಷ್ಟಿಯಲ್ಲಿಟ್ಟುಕೊಂಡು ಆ ಮಾತು ಹೇಳಿದರು ಎಂದು ತೋರಲಿಲ್ಲ. ಅದಕ್ಕೆ ಬೇರೇನೋ ಕಾರಣ ಇರಬೇಕು ಎನಿಸಿ—

'ನಿಮ್ಮ ಯಾವ ಮಾತನ್ನೂ ಸಂದೇಹಿಸಲು ನನಗೆ ಅಧಿಕಾರವಿಲ್ಲ, ಅಚ್ಚಣ್ಣಭಟ್ಟರೆ. ಆದರೂ ಒಂದು ಪ್ರಶ್ನೆ ಕೇಳುತ್ತೇನೆ—ದಯವಿಟ್ಟು ಉತ್ತರ ಹೇಳುತ್ತೀರಾ?'

—ಎಂದು ಕೇಳಿದರು.

'ಏನು ಬೇಕಾದರೂ ಕೇಳು'.

'ನನಗೆ ಮುಂದಕ್ಕೆ ಕಲಿಸಲು ನೀವು ಏಕೋ ಹಿಂಜರಿಯುತ್ತಿರುವಂತೇ ನನಗೆ ತೋರುತ್ತಿದೆ. ಅದೇಕೆ—ಹೇಳಿ?'

'ಹೇಳಿದೆನಲ್ಲಾ'

'ಹೇಳಿದಿರಿ. ಆದರೆ ಅಷ್ಟೇ ಕಾರಣ ಎಂದು ನನಗೆ ನಂಬಿಕೆಯಾಗಲಿಲ್ಲ, ಮತ್ತೇನೋ ಇರುವ ಹಾಗಿದೆ. ಅದೇನಿದ್ದರೂ ಹೇಳಿ'.

—ಎಂದು ವೆಂಕಟದಾಸಪ್ಪನವರು ಒತ್ತಾಯ ಮಾಡಿದರು.

ಆ ಮಾತಿಗೆ ಅಚ್ಚಣ್ಣಭಟ್ಟರು ಸ್ವಲ್ಪ ಹೊತ್ತು ಉತ್ತರ ಕೊಡಲಿಲ್ಲ. ಅವರ ಮನಸ್ಸಿನಲ್ಲಿದ್ದುದನ್ನು ತಟಕ್ಕನೇ ಹೇಳಲು ಅಡ್ಡಿಯಾಗಿ ಅವರ ಮಾನಸ್ಸಿನಲ್ಲಿ ಏನೋ ಹೊಯ್ದಾಟವಾಗುತ್ತಿದ್ದಂತಿತ್ತು. ಕೊನೆಗೆ ನಿರ್ಧಾರಕ್ಕೆ ಬಂದು—

'ನಿಜ ದಾಸಣ್ಣ, ಹಾಗೆ ನಾನು 'ಈ ದಿನ' ಹೇಳುವುದಕ್ಕೆ ಇನ್ನೂ ಒಂದು ಕಾರಣವಿದೆ.'

ಅವರು ಆ ಮಾತು ಹೇಳಿದ ಬಳಿಕ 'ಆದದ್ದಾಗಲಿ, ಹೇಳಿಕೊಡಿ ಎಂದು ಕೇಳಲು ವೆಂಕಟದಾಸಪ್ಪನವರಿಗೂ ಬಾಯಿ ಬರಲಿಲ್ಲ.

—ಎಂದರು.

ಅವರು ಮಾತಿನಲ್ಲಿ 'ಈ ದಿನ' ಎಂಬ ಶಬ್ದದ ಮೇಲೆ ಹಾಕಿದ ಭಾರವನ್ನು ಅರಿತು, ವೆಂಕಟದಾಸಪ್ಪನವರ ಕುತೂಹಲ ಕೆರಳಿತು.

''ಈ ದಿನ' ಅಂಥದು ಏನಾಯಿತು?'

'ಮೊದಲಿನಿಂದಲೂ ನಿನಗೆ ಗುರುವಾಗಲೂ ನಾನು ತಕ್ಕವನಲ್ಲ ಎಂಬ ಸಂಕೋಚ ನನಗೆ ಇದ್ದೇ ಇತ್ತು. ಆದರೂ ವೆಂಕಟಗಿರಿಯ ಮಾತಿಗೆ ಕಟ್ಟು ಬಿದ್ದು, ತಿಳಿದದ್ದು ಹೇಳಲು ಒಪ್ಪಿದೆ. ಈ ದಿನ, ನನಗೆ ನನ್ನ ಅನರ್ಹತೆ ಸಂಪೂರ್ಣವಾಗಿ ಮನವರಿಕೆಯಾಯಿತು.'

'ಅದು ಹೇಗೆ?'

'ಯಾರಿಗೆ ಸ್ವಯಂ ದೇವಿಯ ದೃಷ್ಟಾಂತರೂಪವಾಗಿ, ಸತ್ಯ ಸರ್ವಸ್ವವನ್ನೂ ತಿಳಿಸಿರುವಳೋ, ಅಂಥವರಿಗೆ ಗುರುಸ್ಥಾನದಲ್ಲಿ ಕುಳಿತು ಹೇಳುವ ಯೋಗ್ಯತೆ ನನಗಿಲ್ಲ.'

'ನಿಮ್ಮದು ಅತಿ ಸಂಕೋಚ ಭಟ್ಟರೆ. ತಾವು ಖಂಡಿತ ಹಾಗೆ ಭಾವಿಸಬಾರದು.'

'ನೀನು ಹೇಳಿದ ಹಾಗೆ ನನ್ನದು ಅತಿ ಸಂಕೋಚವಿದ್ದರೂ ಇರಬಹುದು ದಾಸಣ್ಣ. ಆದರೆ ಇಂಥ ವಿಷಯಗಳಲ್ಲಿ ಎಷ್ಟು ಹೆದರಿ ನಡೆದರೆ ಅಷ್ಟು ಮೇಲು. ನಮಸ್ಕಾರ ಮಾಡಿಸಿಕೊಳ್ಳುವುದು ಸುಲಭದ ಕೆಲಸವಲ್ಲ ಎಂದು ನಾನು ಕೇಳಿದ್ದೇನೆ. ಆತನಿಗೆ ತನಗೆ ನಮಸ್ಕಾರ ಮಾಡಿದವರನ್ನು ಹರಸುವ ಯೋಗ್ಯತೆ ಇರಬೇಕು. ಇಲ್ಲವಾದಲ್ಲಿ ಅಂಥ ನಮಸ್ಕಾರ ಸ್ವೀಕಾರ ಅಶ್ರೇಯಸ್ಸಿಗೆ ಕಾರಣವಾಗುತ್ತದೆ ಎಂದೂ ಕೇಳಿದೇನೆ. ಆದ್ದರಿಂದ ಅದನ್ನು ಪರೀಕ್ಷಿಸುವ ಧೈರ್ಯ ನನಗಿಲ್ಲ. ಒಮ್ಮೆ ಮುಂದುಹರಿದು ಹೋದುದ್ದಕ್ಕೆ ನಾನಿನ್ನೂ ಪಶ್ಚಾತ್ತಾಪ ಪಡುತ್ತಿದ್ದೇನೆ. ಆದ್ದರಿಂದ ದಯವಿಟ್ಟು, ಇದೊಂದು ವಿಷಯ ಮಾತ್ರ ನನಗೆ ಒತ್ತಾಯ ಮಾಡಬೇಡ'.

—ಎಂದರು ಅಚ್ಚಣ್ಣಭಟ್ಟರು, ಬೇಡುವ ಧ್ವನಿಯಲ್ಲಿ.

ಅವರು ಆ ಮಾತು ಹೇಳಿದ ಬಳಿಕ 'ಆದದ್ದಾಗಲಿ, ಹೇಳಿಕೊಡಿ' ಎಂದು ಕೇಳಲು ವೆಂಕಟದಾಸಪ್ಪನವರಿಗೂ ಬಾಯಿ ಬರಲಿಲ್ಲ

'ಹಾಗಾದರೆ ಈಗೇನು ಮಾಡುವುದು ಭಟ್ಟರೇ? ದಶೋಪನಿಷತ್ತುಗಳನ್ನಾದರೂ ತಿಳಿದುಕೊಳ್ಳಬೇಕು ಎಂದಿದ್ದ ನನ್ನ ಬಯಕೆ ಇಲ್ಲಿಗೆ ತುಂಡಾದ ಹಾಗಾಯಿತಲ್ಲಾ.'

—ಎಂದು ಕೇಳಿದರು.

'ನೀನು ಓದುವ ಅಗತ್ಯವಿಲ್ಲ ದಾಸಣ್ಣ. ಆದರೂ ನಿನಗೆ ಓದಬೇಕು ಎಂದಿದ್ದರೆ, ಓದಿ, ಅರ್ಥ ಹೇಳುತ್ತೇನೆ; ಕೇಳು. ಆದರೆ —ನಾನು ಹೇಳುವುದು ನೀನು ಕೇಳುವುದು—ಎರಡೂ ಗುರು ಶಿಷ್ಯ ಭಾವದಿಂದಾಗ ಕೂಡದು.'

'ಮತ್ತೆ—?'

'ಸಹಾಧ್ಯಾಯಿಗಳಂತೆ ಓದೋಣ. ಅಷ್ಟಾದರೆ ಮಾತ್ರ ನನ್ನಿಂದ ಸಾಧ್ಯ'.

—ಎಂದು ಖಡಾಖಂಡಿತವಾಗಿ ಹೇಳಿದರು ಅಚ್ಚಣ್ಣಭಟ್ಟರು.ಅವರು ಹಾಗೆ ಹೇಳಿದ ಬಳಿಕ, ಅದಕ್ಕೆ ಒಪ್ಪದೆ ವೆಂಕಟದಾಸಪ್ಪನವರಿಗೂ ಬೇರೆ ದಾರಿ ಇರಲಿಲ್ಲವಾಗಿ,—

'ಆಯಿತು. ನಿಮ್ಮ ಇಷ್ಟವಿದ್ದಂತೆ ಮಾಡಿ'.

—ಎಂದರು.

'ಹಾಗಾದರೆ ಸರಿ. ನಿನ್ನಂಥವನೊಂದಿಗೆ ಉಪನಿಷತ್ತು ಓದಿದ ಪುಣ್ಯ ನನಗೂ ಅಷ್ಟು ಬರಲಿ. ಹೇಗೂ ಇವತ್ತಿಗೆ ಕೇನೋಪನಿಷತ್ತು ಓದುವುದು ಮುಗಿಯಿತಲ್ಲ. ಶಾಂತಿಮಂತ್ರವನ್ನು ನೀನೂ ನನ್ನೊಂದಿಗೆ ಹೇಳು.'

—ಎಂದರು.

ಇಬ್ಬರೂ ಜೊತೆ ಜೊತೆಯಾಗಿ ಹೇಳಿದರು—

'ಓಂ, ಸಹ ನಾವವತು ಸಹನೌ ಭುನಕ್ತು, ಸಹ ವೀರ್ಯಂ ಕರವಾವಹೈ
ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾವ ಹೈ
ಓಂ ಶಾಂತಿಃ ಶಾಂತಿಃ ಶಾಂತಿಃ

[ಓಂ. ನಮ್ಮಿಬ್ಬರನ್ನು ಜೊತೆಯಾಗಿ ಕಾಪಾಡಲಿ; ನಮ್ಮಿಬ್ಬರನ್ನು ಜೊತೆಯಾಗಿ ಪೋಷಿಸಲಿ; ನಾವು ಜೊತೆಯಾಗಿ ಸಾಮರ್ಥ್ಯವನ್ನು ಉಂಟು ಮಾಡುವಂತಾಗಲಿ, ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಲಿ; ನಾವು ಪರಸ್ಪರ ದ್ವೇಷ ಮಾಡದೆ ಇರುವಂತಾಗಲಿ]

ಆ ಶಾಂತಿ ಮಂತ್ರವನ್ನು ಜೊತೆಜೊತೆಯಾಗಿ ಹೇಳುತ್ತಾ ಆ ಇಬ್ಬರಿಗೂ ಗಂಟಲು ಬಿಗಿದು, ಕಣ್ಣು ತೇವವಾಯಿತು.

೧೧

ಒಂಧು ಗಳಿಗೆ. ಇನ್ನು ನಿಂತೇ ಹೋಗುವುದೇನೋ ಎಂದು ವೆಂಕಟ ದಾಸಪ್ಪನವರು ಹೆದರಿದ್ದ ಆವರ ಶಾಸ್ತ್ರಾಧ್ಯಯನ ಮತ್ತೆ ಮುಂದುವರಿಯಿತು. ಅಧ್ಯಯನ ಮುಂದುವರಿದಂತೆ, ವೆಂಕಟದಾಸಪ್ಪನವರ ಹೃದಯ ಆಳ ಹೆಚ್ಚಿ, ದಿನದಿನಕ್ಕೂ ಆವರ ಬುದ್ಧಿ ಅಂತರ್ಮುಖವಾಗತೊಡಗಿತು. ಎಲ್ಲಕ್ಕಿಂತ ಹೆಚ್ಚಾಗಿ ಅವರ ಅಧ್ಯಯನ, ಆ ಪರವಾದ ಚಿಂತನೆ ಮುಂದುವರಿದಂತೇ ವೀಣೆಯ ಬಿಗಿದ ತಂತಿ, 'ಈ ನಾದಭಾರವನ್ನು ನಾನು ಹೊರಲಾರೆ. ಮಿಡಿದು ಅದನ್ನು ಹೊರ ಹೊಮ್ಮಿಸಿ, ನನ್ನ ಎದೆಯನ್ನು ಹಗುರ ಮಾಡು' ಎಂದು ಬೇಡಿ, ಸುಳಿ ಗಾಳಿಯಲ್ಲೂ ಸುಯ್ಯುವಂತೆ– ಅಂಥ ಯಾವುದೋ ಭಾವ ಅವರ ಹೃದಯ ನಾಡಿಗಳನ್ನು ಮಿಡಿದಂತೆ ಭಾಸವಾಗುತ್ತಿತ್ತು.

ಆ ಭಾವವೂ ಏಕರೀತಿಯದಲ್ಲ.

ಒಮ್ಮೆ ಹರ್ಷ, ಒಮ್ಮೆ ವಿಷಾದ; ಒಮ್ಮೆ ಆನಂದ, ಮತ್ತೊಮ್ಮೆ ದುಃಖ–

ಒಮ್ಮೊಮ್ಮೆ ಇವೆಲ್ಲವನ್ನು ಮೀರಿದ ಬೇರೇನೋ ಒಂದು ಭಾವ.

ಭಾವ ಯಾವುದೇ ಆದರೂ, ಅದು ಸುಳಿಗಾಳಿಯಂತೆ ಬರುವುದಿಲ್ಲ. ಬಿರುಗಾಳಿಯಂತೆ ಹುಯ್ಯಲಿಟ್ಟು ಬೀಸಿ, ಅದನ್ನು ಭಾರಿಸುವುದು ಸಾಧ್ಯವಿಲ್ಲ. ಎನಿಸಿ, ಆ ಭಾವದ ಭಾರಕ್ಕೆ ಅವರ ಹೃದಯ, ಒಣಗಲಾರಂಭಿಸಿದ ತೊಟ್ಟಿನ ಆಧಾರದ ಮೇಲೆ ಕೊಂಬೆಗೆ ಅಂಟಿ ನಿಂತ ಫಲದಂತೆ ಬೀಳಲೆತ್ನಿಸಿ ತೂಗು ತ್ತದೆ.

ಹಾಗಾದಾಗ ಒಮ್ಮೆ ಅಳಬೇಕು ಎನಿಸಿದರೆ, ಮತ್ತೊಮ್ಮೆ ನಗಬೇಕು ಎನಿಸುತ್ತದೆ. ಒಮ್ಮೆ ತಮಗೆ ಅನಿಸಿದುದನ್ನು ಕೂಗಿ ಕೂಗಿ ಹೇಳಬೇಕು ಎನಿಸುತ್ತದೆ.

ನಿಜ, ಹೇಳಬೇಕು; ಏನೋ ಹೇಳಬೇಕು ಎಂದು ಅವರ ಮನಸ್ಸಿನ ಸಿಹಿಯನ್ನು ಕಂಡ ನಾಲಗೆ ತಾನಾಗಿಯೇ ಚಪ್ಪರಿಸುವಂತೆ ತವಕಪಡುತ್ತದೆ.

ಇದೇಕೆ ಹೀಗೆ? ತಮಗೇ ಹೀಗನಿಸುತ್ತದೆ ಎಂದು ಎಷ್ಟೋ ಬಾರಿ

ತಾವೇ ಚಿಂತಿಸಿ, ತಮ್ಮ ಮನಸ್ಸಿನ ಸ್ಥಿತಿಯ ಕಾರಣವನ್ನು ಅರ್ಥಮಾಡಿ ಕೊಳ್ಳಲು ಯತ್ನಿಸಿದರು ವೆಂಕಟದಾಸಪ್ಪ.

ಎಷ್ಟು ಯೋಚಿಸಿದರೂ ಹೀಗೇಕೆ ಎನ್ನುವುದೂ ಅರ್ಥವಾಗಲಿಲ್ಲ. ಅರ್ಥ ವಾಗದ ಈ ಭಾವದ ಬಿಗಿತವನ್ನು ನಿವಾರಿಸಿಕೊಳ್ಳುವ ಮಾರ್ಗವೂ ಕಾಣಲಿಲ್ಲ.

ಇದು ದುಃಖವೆಂದರೆ ದುಃಖವಲ್ಲ. ಸುಖವೆಂದರೆ ಸುಖವಲ್ಲ: ಆದಾ ವುದೂ ಅಲ್ಲದ ಸಮಸ್ಥಿತಿಯೂ ಅಲ್ಲ, ಒಲೆಯ ಮೇಲಿಟ್ಟ ಹಾಲಿನಂತೆ ಸುಮ್ಮನೆ ಉಕ್ಕುತ್ತಿದೆ.

ಅದು ಒಮ್ಮೆ ಉಕ್ಕಿ ಹರಿದು, ಆ ಉಕ್ಕು ಇಳಿದು ಹೋಗದೆ. ಮತ್ತೆ ತಮ್ಮ ಮನಸ್ಸು, ತಮ್ಮ ಹೃದಯ ತಮ್ಮದಾಗದು ಎನಿಸುತ್ತದೆ ವೆಂಕಟ ದಾಸಪ್ಪನವರಿಗೆ.

ಇದಕ್ಕೇನು ಮಾಡಬೇಕು?

ದಿನದಿನವೂ ಉಳಿದೆಲ್ಲ ಚಿಂತೆಗಳಿಗಿಂತಲೂ ವೆಂಕಟದಾಸಪ್ಪನವರಿಗೆ ಈ ಚಿಂತೆ ಹಿರಿದಾಯಿತು. ಅರ್ಥವಾಗದ ನರಗಳ ಬಿಗಿತ, ಪರಿಹಾರ ಮಾರ್ಗ ಕಾಣದ ಅವರ ಚಿಂತೆಯನ್ನು ಹೊತ್ತು ವೆಂಕಟದಾಸಪ್ಪನವರು ಓಡಾಡಲಾರಂಭಿಸಿದರು. ಈ ಪರಿಸ್ಥಿತಿಯಲ್ಲಿ ಅವರಿಗೆ ತಮ್ಮ ಮನಸ್ಸೇ ಜಗತ್ತಾಗಿ, ಅದರಾಚೆಗೆ ಇರುವ ಸಂಸಾರದ ವಿಷಯವೂ ಮರೆತುಹೋಗಿತ್ತು. ಲಕ್ಷ್ಮೀದೇವಮ್ಮ ಅವರಿಗೆ–

'ರಂಗೂ ತವರಿಗೆ ಹೋಗಿ, ಮೂರು ತಿಂಗಳಿಗೆ ಬಂತಲ್ಲ ದಾಸಣ್ಣ ಒಂದು ಸಲ ಹೋಗಿ ಅವಳು ಹೇಗಿದಾಳೋ ನೋಡಿಕೊಂಡಾದ್ರು ಬರಬೇಡ ವೇನೋ? ಅತ್ಲಾಗೆ ಅವಳನ್ನು ಕಳಿಸಿಬಿಟ್ಟು, ನೀನಿಲ್ಲಿ ಹೀಗೆ ಥಣ್ಣಗೆ ಕುಳಿತು ಬಿಟ್ರೆ, ಆ ಹುಡುಗಿ ಈ ಹೊತ್ತಿನಲ್ಲಿ ಏನಂದುಕೊಳ್ಳಲಿಕ್ಕಿಲ್ಲ. ಗಂಡ, ಅತ್ತೆ, ತಾಯಿ, ತಂದೆ ಎಲ್ಲಾ ಇರಬೇಕೂಂತ ಬಯಸೋದು. ಇಂಥ ಹೊತ್ತಿನಲ್ಲಿ ಹತ್ತಿರ ಇರಲೀಂತ ತಾನೇ. ಹೇಗಿದಾಳೋ ಏನೋ, ಹೋಗಿ ನೋಡಿ ಕೊಂಡಾದ್ರೂ ಬಾ'

–ಎಂದು ಒಂದು ದಿನ ಅವರಿಗೆ ಹೇಳಿದಾಗ ಅವರಿಗೆ, ತಮ್ಮ ಸಂಸಾರದ ವಿಷಯ ನೆನಪಾಯಿತು.

ಆದರೆ ಅದನ್ನು ಇದ್ದದ್ದಕ್ಕಿಂತ ದೊಡ್ಡದು ಮಾಡಲು ಇಚ್ಛೆಯಿಲ್ಲದೆ,–

'ಬಿಡವ್ಮಾ, ಅವಳೇನು ಕಾಡಿಗೆ ಹೋಗಿದಾಳೇಂತ ಅಷ್ಟು ಯೋಚನೆ ಮಾಡ್ತೀಯಾ? ಅಕ್ಕಪಕ್ಕದಲ್ಲಿ ಅಪ್ಪ ಅಮ್ಮ ಇದ್ದಾರೆ. ಅಲ್ಲದೆ, ರಾಜೇಶ್ವರೀನೂ ದಿನಾ ಹೋಗಿ ನೋಡಿಕೊಂಡು ಬರ್‍ತಾನೇ ಇರ್‍ತಾಳೆ. ಅಷ್ಟು ಜನರ ಮಧ್ಯೆ ಅವಳಿಗೇನು ಭಯ ಬಂದಿದೆ. ಹಾಗೂ ಅಂಥದೇನಾದ್ರೂ ಇದ್ದಿದ್ರೆ ಶಾಮಣ್ಣ ಮಾವ ಕಾಗದ ಬರೀತಾ ಇದ್ದ. ಯಾರಿಗೂ ಇಲ್ಲದ ಭಯ ಹಚ್ಚಿಕೊಂಡು, ನೀನೇಕೆ ಸುಮ್ನೆ ಕೊರಗ್ತೀಯಾ?'

—ಎಂದು ಎಲ್ಲ ಮಾತನ್ನ ತೇಲಿಸಿ, ಆ ಮಾತನ್ನು ಅಲ್ಲಿಗೇ ತಾವೂ ಮರೆತು ಬಿಡಲು ಯತ್ನಿಸುತ್ತಿದ್ದರು.

ಲಕ್ಷ್ಮೀದೇವಮ್ಮನ ಹಾಗೇ ಗೌರಮ್ಮನೂ ಆಗಾಗ, ಯಾವಾಗಲಾದರೊಮ್ಮೆ ರಂಗಮ್ಮನ ವಿಷಯ ಜ್ಞಾಪಿಸಿಕೊಳ್ಳುತ್ತಿದ್ದಳು.

'ಅಲ್ಲಿಂದಾನೂ ಕಾಗ್ದ ಪತ್ರ ಇಲ್ಲ; ನೀವೂ ಹೋಗ್ಲಿಲ್ಲ. ಇಂಗಾದ್ರೆಂಗೆ?'

—ಎಂದು ಗೊಣಗುತ್ತಿದ್ದಳು.

ಆಕೆಗೂ, ವೆಂಕಟದಾಸಪ್ಪನವರು ತಮ್ಮ ತಾಯಿಗೆ ಹೇಳಿದ ಹಾಗೇ ಉತ್ತರ ಹೇಳಿ, ಮಾತು ತಟಾಯಿಸಲು ಯತ್ನಿಸುತ್ತಿದ್ದರು. ಆದರೆ ಗೌರಮ್ಮ ಲಕ್ಷ್ಮೀದೇವಮ್ಮನಷ್ಟು ಸುಲಭವಾಗಿ, ಆ ಮಾತನ್ನು ಅಲ್ಲಿಗೆ ಬಿಡುತ್ತಿರಲಿಲ್ಲ.

'ನೀವು ಹಿಂಗೆಲ್ಲಾ ಮಾಡಿದ್ರೆ ಊರಜನ ನನ್ನ ಅಂದು ಶಪಿಸ್ತಾರೆ? ರಂಗಕ್ಕನೂ ಬೇಜಾರು ಮಾಡಿಕೋಬೋದು. ಹೋಗಿ ಎರಡ್ಡದಿನಾನಾದ್ರೂ ಇದ್ದುಬನ್ನಿ.'

—ಎಂದು ಬಲವಂತ ಮಾಡುತ್ತಿದ್ದಳು.

ವೆಂಕಟದಾಸಪ್ಪನವರನ್ನು ಬಲವಂತಮಾಡುವುದಷ್ಟೇ ಅಲ್ಲ, ಎಷ್ಟೋ ಬಾರಿ ಅವರಿಗಿಲ್ಲದ ಚಿಂತೆಯನ್ನು ತಾನು ಹಚ್ಚಿಕೊಂಡು ಮುಖ, ಮೂತಿ ಮಾಡಿ. ತಲೆಯ ಮೇಲೆ ಕೈಹೊತ್ತು ಯೋಚಿಸುತ್ತಾ ಕುಳಿತು ಬಿಡುವಳು. ಗೌರಮ್ಮನ ಚಿಂತೆಯನ್ನು ಕಂಡು ಒಮ್ಮೊಮ್ಮೆ ವೆಂಕಟದಾಸಪ್ಪನವರಿಗೆ ಕರುಳು ಚುರುಕ್ ಎಂದರೆ. ಒಮ್ಮೊಮ್ಮೆ ನಗು ಬರುವುದು.

ಹಾಗೆ ನಗಲು ಯತ್ನಿಸಿದಾಗಲೇ ಅವರ ಹೃದಯಕ್ಕೆ, ಒಂದು ದಿನ ಆದುವರೆಗೂ ಇಲ್ಲದ ಮುಳ್ಳು ಮುರಿಯಿತು.

## ೧೨

ಒಂದು ದಿನ ಸಂಜೆ, ತಮ್ಮ ಸಾಯಂಸಂಧ್ಯಾವಂದನೆಯ ಕೆಲಸ ಮುಗಿಸಿಕೊಂಡು, ವೆಂಕಟದಾಸಪ್ಪನವರು ವೀರಣ್ಣನ ಮನೆಗೆ ಹೋದಾಗ, ದಿನವೂ ತೆರೆದಿರುತ್ತಿದ್ದ ಮನೆಯ ಬಾಗಿಲು ಹಾಕಿತ್ತು. ಮನೆಯ ತಲೆಬಾಗಿಲಿಗೆ ಹತ್ತಿಸಿದ ಬೀಗ, ಗಂಡ—ಹೆಂಡರಿಬ್ಬರೂ ಮನೆಯಲ್ಲಿ ಇಲ್ಲವೆಂದು ಹೇಳಿತು. ಹಿಂದಿನ ದಿನ ಅಲ್ಲಿಗೆ ಹೋದಾಗ, ವೀರಣ್ಣನಾಗಲಿ, ಗೌರಮ್ಮನಾಗಲಿ, ವೆಂಕಟದಾಸಪ್ಪನವರಿಗೆ 'ಮರುದಿನ ತಾವು ಮನೆಬಿಟ್ಟು ಎಲ್ಲಿಯೋ ಹೋಗಬೇಕಾದ ಕೆಲಸ ಇದೆ' ಎನ್ನುವ ವಿಷಯ ಹೇಳಿರಲಿಲ್ಲ. ಇದ್ದಕ್ಕಿದ್ದ ಹಾಗೇ, ಹೇಳದೆ—ಕೇಳದೆ ಇವರು ಎಲ್ಲಿಗೆ ಹೋಗಿರಬಹುದು ಎಂದುಕೊಂಡು, ಪಕ್ಕದ ಮನೆಯವರನ್ನು,—

'ವೀರಣ್ಣ ಯಾವ್ದಾದರೂ ಊರಿಗೆ ಹೋದನಾ? '

—ಎಂದು ಕೇಳಿದರು. ಅದಕ್ಕೆ—

'ಇಲ್ಲ, ಇಲ್ಲೇ ಎಲ್ಲೋಹೊರಗೆ ಹೋಗಿರ್‍ಬೇಕ, ಮಜ್ಜಾನದಗಂಟ ಮನೆಲೇ ಇದ್ರು. ಹಂಗೆಲ್ಲಾರ ಊರು ಬಿಟ್ಟು ಹೋಗೋದಿದ್ರೆ ಹೇಳಿ ಹೋಗೊರು. ಇನ್ನೇನು ದೀಪ ಹತ್ತಿಸೋ ಹೊತ್ತಾಯ್ತು—ಎಲ್ಲೋಗಿದ್ರೂ ಬರ್‍ತಾರೆ.'

—ಎಂದು ಉತ್ತರ ಬಂತು.

ವೆಂಕಟದಾಸಪ್ಪನವರಿಗೂ ಹಾಗೆಂದೇ ತೋರಿತು. 'ಆಯಿತು—ಒಂದು ಹತ್ತು ನಿಮಿಷ ಕಾದು ನೋಡುವುದು, ಬರಬಹುದು' ಎಂದುಕೊಂಡು, ಮನೆಯ ಮುಂದಿನ ಜಗಲಿಯ ಮೇಲೆ ಅವರು ಬರುವುದನ್ನೇ ಕಾದು ಕುಳಿತರು. ಅವರು ಹಾಗೆ ಕುಳಿತ ಸ್ವಲ್ಪ ಹೊತ್ತಿನಲ್ಲೇ ಗಂಡ ಹೆಂಡರಿಬ್ಬರೂ ಮನೆಗೆ ಬಂದರು, ಗೌರಮ್ಮ ರೇಶಿಮೆಯ ಸೀರೆ ಉಟ್ಟಿದ್ದನ್ನು ಕಂಡು, ವೆಂಕಟದಾಸಪ್ಪನವರು—

'ಇದೇನು ಇವತ್ತು ಎಲ್ಲೂ ಇಲ್ಲದ ಸಡಗರ'

—ಎಂದು ನಗುತ್ತ ಪ್ರಶ್ನೆಮಾಡಿದರು.

'ಸಡಗರಾನೂ ಇಲ್ಲ, ಬಡಿವಾರಾನೂ ಇಲ್ಲ, ಎಲ್ಲಾ ಮಾಮೂಲೇ.'

—ಎಂದಳು ಗೌರಮ್ಮ.

'ಮತ್ತೆ—ಪಟ್ಟೆ ಸೀರೆ ಉಟ್ಕೊಂಡಿದೀಯಾ? ಎಲ್ಲಾದ್ರೂ ಮದುವೆ ಇತ್ತೆ?'

'ಸೈ,ಸೈ ಮದುವೇಗೆ ಹೋಗೊಕೇ ಪಟ್ಟೆಸೀರೆ ಉಟ್ಕೊಬೇಕೇ?'

'ಹಾಗಾದ್ರೆ—ಎಲ್ಹೋಗಿದ್ರಿ?'

'ಇವತ್ತು ಯಾವ ವಾರ ಅನ್ನೋದಾದ್ರೂ ನಿಮ್ಗೆ ನೆಪ್ಪೈತಾ? ಬುದ್ಧೋರು ಈ ಲೋಕಾದಾಗಿಲ್ಲ. ನೀವು ಹೇಳಿ, ನಾನು ಬೀಗ ತೆಗೆದು ದೀಪ ಹತ್ಸಿನಿ'

—ಎಂದು ಗಂಡನಿಗೆ ಹೇಳಿ, ಗೌರಮ್ಮ ಬಾಗಿಲು-ಬೀಗತೆಗೆದು ಒಳಗೆ ಹೋದಳು.

ಗೌರಮ್ಮ ತಮ್ಮ ಪ್ರಶ್ನೆಗೆ ಉತ್ತರ ಕೊಡದಿದ್ದುದನ್ನು ಕಂಡು ವೆಂಕಟ ದಾಸಪ್ಪನವರು, ತಮ್ಮ ಪಕ್ಕದಲ್ಲಿ ಬಂದು ಕುಳಿತ ವೀರಣ್ಣನತ್ತ ತಿರುಗಿ—

'ಬರ್‍ತಾ ಬರ್‍ತಾ ಗೌರಿ ಭಾಳ ಮಾತು ಕಲಿತು ಬಿಟ್ಲು, ಎಲ್ಹೋಗಿದ್ರಿ ವೀರಣ್ಣ'

—ಎಂದು ಕೇಳಿದರು.

'ಅವಳು ಹೇಳಿದ್ದೇ ಸರಿ. ಇವತ್ತು ಯಾವ ವಾರ ಅಂತಾದ್ರೂ ಗೊತ್ತಿಲ್ವಾ?'

—ವೀರಣ್ಣನೂ ಗೌರಮ್ಮನ ಹಾಗೇ ಕೇಳಿದ.

ಅವನೂ ಹಾಗೆಹೇಳಿದುದನ್ನು ಕಂಡು ವೆಂಕಟದಾಸಪ್ಪನವರು ಸಕ್ಕ—

'ನೀವಿಬ್ರೂ ನನಗೇನು ತಲೆ ಕೆಟ್ಟಿದೆ ಅಂತ ಅಂದ್ಕೊಂಡಿದೀರಾ? ಯಾವ ವಾರ ಅನ್ನೋದೂ ತಿಳೀವಷ್ಟು ಮರವು ಬಂದಿದೆಯಾ ನನಗೆ?'

—ಎಂದು ಕೇಳಿದರು.

'ಹಾಗಿದ್ರೆ—ಇವತ್ತು ಯಾವ ವಾರ ಹೇಳು?'

'ಶನಿವಾರ.'

'ಸರಿ, ಮತ್ತೆ. ಅದು ಗೊತ್ತಿದ್ರೆ ಎಲ್ಹೋಗಿದ್ರಿ ಅಂತ ಕೇಳೋದ್ಯಾಕೆ?

ಹೊಸಳ್ಳಿ ಹನುಮಪ್ಪನ ಗುಡಿಗೆ ಹಣ್ಣು ಕಾಯಿ ಮಾಡಿಸಿಕೊಂಡು ಬರೋಕೆ ಹೋಗಿದ್ರು.'

'ಅದೇನು –ಯಾವತ್ತೂ ಇಲ್ಲದ್ದು ಇವತ್ತು ಹೊಸಹಳ್ಳಿಗೆ–?''

'ಹಿಂಗೆ ಕೇಳದೆ ನೀನೇನು ಮಾಡಿಯಾ ಹೇಳು ದಾಸಣ್ಣ? ದೊಡ್ಡ ಬುದ್ಧಿಯೋರು ಇರೋಗಂಟ ಶನಿವಾರ ಇರಲಿ, ಒಂದು ದಿನಾನೂ ಹೊಸಳ್ಳಿಗೆ ಹೋಗಿ ಹನುಮಪ್ಪನ ಪೂಜೆ ಮಾಡಿಕೊಂಡು ಬರೋದು ತಪ್ತಿಸ್ತಿರಲಿಲ್ಲ. ನಿನಗೆ ದೊಡ್ಡ ಅಪ್ನೋರು ಸಿಕ್ಕು ಬಿಟ್ರು; ಬಡ ಹನುಮಪ್ಪನ್ನ ಮರೆತು ಬಿಟ್ಟೆ. ಇವತ್ತು ಹೊಸಹಳ್ಳಿಗೆ ಹೋದಾಗ, ಅಲ್ಲಿ ಜನ ಎಲ್ಲಾ ಆಡ್ಕೋ ಹೇಳಿಕೊಂಡ್ರು–'ನರಸಪ್ಪ ಬುದ್ಧಿಯೋರು ಹೋದ್ವೇ ಹೋದ್ರು, ನಮ್ಮ ಹನು–ಮಪ್ಪನ್ನ ಕೇಳೋರೇ ದಿಕ್ಕಿಲ್ದಂಗಾಯ್ತು.' ಅಂತ, ಪಟೇಲನಂತೂ ಮುಟ್ಟೋ. ಹಂಗೇ ಹೇಳ್ದ...'

'ಏನಂದ?'

"ಈರಣ್ಣ ಲೋಕಾರೂಢೀನೇ ಹಂಗೈತೆ– ಮೀಸೆ ಬಂದವ್ನಾಕೆ ಮೂಗ್ನಾರು ಕೇಳ್ತಾರೆ? ದಾಸಣ್ಣ ಬುದ್ನೋರು ನಮ್ಮ ಬಡ ಹನುಮಪ್ಪನ್ನ ಮರೆಯೋದೇ ನ್ಯಾಯ. ಅಪ್ನೋರು ಪೂಜೆ ಮಾಡಿದ್ರೆ ಕಾಳುಕಡಿ. ನಗ ನಾಣ್ಯ, ಸೀರೆ ಕುಪ್ಪಸ ಬರ್ತಾವೆ. ಕಾಡ್ನಾಗೆ ಕಾಯಿ ಕಸಿರು ತಿನ್ನೋ ನಮ್ಮ ಹನುಮಪ್ಪ ಅವರಿಗೇನು ಕೊಟ್ಟಾನು?'' ಅಂದ. ನೀನಿಂಗೆ ಮಾಡ್ಬೋದಾ ದಾಸಣ್ಣ? ಹನುಮಪ್ಪ ಪೂಜೆ. ಪುನಸ್ಕಾರ ಇಲ್ದೆ ನವೀತಿದ್ರೆ. ಸತ್ತು ಸ್ವರ್ಗದಾಗಿರೋ ದೊಡ್ಡ ಬುದ್ನೋರ ಆತ್ಮಕ್ಕೆ ಸಂತೋಸ ಆದೀತಾ?'

–ವೀರಣ್ಣ ಬಹುವಾಗಿ ನೊಂದುಕೊಂಡು ಕೇಳಿದ.

ವೀರಣ್ಣ ವೆಂಕಟದಾಸಪ್ಪನವರ ಮೇಲೆ ಹೊರೆಸಿದ ಆಪಾದನೆ ನಿಜವಾಗಿತ್ತು. ನರಸಪ್ಪನವರು ತೀರಿಕೊಂಡ ಬಳಿಕ, ವೆಂಕಟದಾಸಪ್ಪನವರು ಹೆಚ್ಚಾಗಿ ಹೊಸಹಳ್ಳಿ ದೇವಾಲಯಕ್ಕೆ ಹೋಗುತ್ತಿರಲಿಲ್ಲ. ಎಂದಾದರೊಂದು ಶನಿವಾರ, ಅದೂ ಲಕ್ಷ್ಮಿ ದೇವಮ್ಮ ಜ್ಞಾಪಿಸಿದರೆ, ಹೋಗಿ ಹಣ್ಣು ಕಾಯಿ ಮಾಡಿಕೊಂಡು ಬರುತ್ತಿದ್ದರೇ ವಿನಾ, ಉಳಿದ ವೇಳೆಯಲ್ಲಿ ಅವರಿಗೆ ಹನುಮಪ್ಪನ ನೆನಪೂ ಬರುತ್ತಿರಲಿಲ್ಲ. ದೇವಿಯ ಚಿಂತೆಗೆ ಮೀಸಲಾಗಿದ್ದ ಅವರ ಬುದ್ಧಿಯಲ್ಲಿ, ಉಳಿದಾವುದಕ್ಕೂ ಎಡೆಯಿರಲಿಲ್ಲ.

ಈಗ ವೀರಣ್ಣ ಮೊನೆಯಾಗಿ ಹೇಳಿದ ಮಾತನ್ನು ಕೇಳಿ; ಅವರ ಮನಸ್ಸು 'ನಾನೆಂಥ ತಪ್ಪು ಮಾಡಿದೆ?' ಎಂದು ಮರುಗಲಾರಂಭಿಸಿತು. ಮನದಲ್ಲಿ ಮೂಡಿದ ಸೋಲಿವಿಸಲ್ಲಿ ಏನೂ ಉತ್ತರ ಕೊಡಲಾಗದಾಗಿ, ಸುಮ್ಮನೆ ತಲೆ ತಗ್ಗಿಸಿ ಕುಳಿತರು.

ಅವರು ಹಾಗೆ ಮಾತನಾಡುತ್ತಿರುವಾಗಲೇ, ಮನೆಯೊಳಗೆ ದೀಪ ಹೊತ್ತಿಸಿ, ತಲೆ ಬಾಗಿಲಿಗೆ ಬಂದ ಗೌರಮ್ಮ, ವೀರಣ್ಣ ಹೇಳಿದ ಮಾತನ್ನು ಕೇಳಿಸಿಕೊಂಡು—

'ಸೈ—ಸೈ— ಕಟುಕನ ಮುಂದೆ ಬಸವ ಪುರಾಣ ಓದಿದಂಗೆ, ಅವರ ಮುಂದೆ ಅದೆಲ್ಲಾ ಏನು ಹೇಳ್ತೀರ ಬಿಡಿ. ಹೆಂಡಿರು ಮಕ್ಕಳ ನೆನಪಿದ್ದರೆ ತಾನೇ ಅವರಿಗೆ ದೇವರ ದಿಂಡಿರ ನೆನಪಿರೋದು. ಅದೆಲ್ಲಾ ಎಲ್ಲೀ ಮಾತು— ಒಳೀಕ್ಬನ್ನಿ. ಪ್ರಸಾದ ಕೊಡ್ತೀನಿ.'

—ಎಂದಳು.

ಗೌರಮ್ಮನ ಮಾತು ಕೇಳಿ, ವೀರಣ್ಣನ ಮಾತಿನಿಂದ ವೆಂಕಟದಾಸಪ್ಪ ನವರ ಹೃದಯಕ್ಕೆ ನಾಟಿದ ಮುಳ್ಳು ಮತ್ತಷ್ಟು ಆಳವಾಗಿ ಇಳಿಯಿತು. ಆ ಮಾತುಗಳಿಂದ ಬಹುವಾಗಿ ನೊಂದುಕೊಂಡು—

'ಅನ್ರಿ, ಅನ್ರಿ ಇವತ್ತು ನಿಮ್ಮಿಬ್ಬರಿಗೂ ಒಂದಲ್ಲಾ, ಎರಡೆರಡು ನಾಲಿಗೆ ಬಂದಿದೆ— ನನ್ನ ಅನ್ನೋಕೆ. ನೀವೇನು ಮಾಡ್ತೀರಾ— ಎಲ್ಲಾರ ಕೈಲೂ, ಎಲ್ಲದಕ್ಕೂ ಅನ್ನಿಸಿಕೊಳ್ಳಬೇಕೂಂತ ನನ್ನ ಹಣೇಲಿ ಬರೆದಿರೋವಾಗ, ಅಂದಿದ್ದಾಯ್ತಲ್ಲ— ಇನ್ನು ಪ್ರಸಾದಾನಾದ್ರೂ ಕೊಡು'

—ಎಂದರು ವೆಂಕಟದಾಸಪ್ಪ ಮನೆಯೊಳಗೆ ಬಂದು.

ತಪ್ಪು ಮಾತಿನಿಂದ ವೆಂಕಟದಾಸಪ್ಪನವರು ನೊಂದುಕೊಂಡರೆಂಬುದು ಅರಿವಾದ, ವೀರಣ್ಣನ ಮನಸ್ಸಿಗೂ ನೋವಾಯಿತು.

'ನಿನ್ನ ಅನ್ನ ಬೇಕು ಅಂತ ಯಾರೂ ಅನ್ನಲಿಲ್ಲ ದಾಸಣ್ಣ. ನಿನ್ನ ಬೇರ್ಯೋರು ಅಂದ್ರೆ ನಮಗೂ ನೋವಾಗಾಕಿಲ್ವಾ? ಅದು ತಡೀಲಾರ್ದೆ, ಇದ್ದ ಮಾತು ಹೇಳ್ದೆ.'

—ಎಂದ ವೀರಣ್ಣ ಸಮಾಧಾನ ಮಾಡಲೆತ್ನಿಸಿ.

'ಅದೆಲ್ಲಾ ಪಂಚಾಯ್ತಿ ಏನೇಳ್ತೀರ ಬಿಡಿ. ಅಂಥಾ ನೊಂದುಕೊಳ್ಳೋದು, 'ಅಯ್ಯೋ ಪಾಪ' ಅನ್ನೋದು ಎಲ್ಲಾ ನಾವು, ನಮ್ಮೋರು, ನಮ್ಮದು ತಮ್ಮದು ಅಂತ ಹಚ್ಚಿಕೊಂಡಿರೋ ನಮ್ಮಂಥ ಬಡಪಾಯಿಗಳಿಗೆ. ಬುದ್ಧ್ಯೋರಿಗೆ ಅದೆಲ್ಲಾ ಎಲ್ಲಿದೆ?'

—ಎಂದು ಗೌರಮ್ಮ ಕಟುವಾಗಿ ಹೇಳಿದಳು.

'ಅಂತೂ —ಇವತ್ತು ಸಾಯಂಕಾಲ ನಿಮ್ಮ ಕೈಲಿ ಅನ್ನಿಸಿಕೊಳ್ಳೋದಕ್ಕೆ ಹುಡುಕಿಕೊಂಡು ಬಂದ ಹಾಗಾಯ್ತು—ನಾನು.'

'ಹೌದು ಮತ್ತೆ— 'ಮಾಡಿದ್ದುಣ್ಣೋ ಮಾರಾಯ!'

ಮಾತಿಗೆ ಮಾತು ಹುಟ್ಟಿಸಿ, ಕೊಂಚವೂ ಸೋಲದೆ ಹೇಳಿದಳು ಗೌರಮ್ಮ.

'ಆಯ್ತು. ನಾನು ಮಾಡಿದ್ದು ನಾನು ಉಣ್ತೇನಿ. ನೀನೇನೂ ತಪ್ಪಿಸಲಿಕ್ಕೆ ಬರಬೇಡ. ಆದಿರಲಿ—ಈಗ ನಾನು ಅಂಥ ಮಾಡಬಾರದ್ದೇನು ಮಾಡಿದೆ ಹೇಳು? ಹೊಸಳ್ಳಿ ಆಂಜನೇಯನ ಗುಡಿಗೆ ಹೋಗಿ ಬರ್ತ್ತಾಯಿಲ್ಲಾ ಅನ್ನೋದಷ್ಟೇ ತಾನೇ'

—ನೋವು ಸಹಿಸಲಾಗದಾಗಿ ಕೊಂಚ ಅಸಹನೆಯಿಂದ ಸಿಡುಗುಟ್ಟುತ್ತಾ ಕೇಳಿದರು ವೆಂಕಟದಾಸಪ್ಪ.

'ನೀವು ಹೊಸಳ್ಳಿಗೆ ಹೋಗಿ ಹನುಮಪ್ಪನ ಪೂಜೆ ಮಾಡಿದ್ರೆಷ್ಟು, ಬಿಟ್ಟರೆಷ್ಟು? ಆದೆಲ್ಲಾ ಕಟ್ಟಿಕೊಂಡು ನನಗೇನಾಗಬೇಕಾಗಿದೆ? ನೀವುಂಟು— ನಿಮ್ಮ ಹನುಮಪ್ಪ ಉಂಟು. ಅವನಿಗೆ ಬೇಕಾದ್ರೆ ನಿಮ್ಮ ಕೈಲಿ ಒದ್ದು ಪೂಜೆ ಮಾಡಿಸ್ಕೋತಾನೇ. ನೀವು ಮಾಡೋಲ್ಲಾಂದ್ರೆ ಅಮ್ಮನೋರು ಬಿಟ್ರಾ? ಹನುಮಪ್ಪನೂ ಹಂಗೆ. ಅದಕ್ಕೆ ನಾನ್ಯಾಕೆ ಅಳಲಿ?'

'ಹಾಗಾದ್ರೆ—ಮತ್ತಿನ್ಯಾಕೆ ಹೀಗೆಲ್ಲಾ ಮಾತಾಡ್ತಾ ಇದೀಯ?'

'ನಮ್ಮ ವಸ್ತು ಕಷ್ಟ ಸುಖ ನೋಡೋಕೆ ದಿಕ್ಕುದಾಯಿ ಯಾರೂ ಇಲ್ದಂಗಾಯ್ತಲ್ಲಾಂತ ನಾನಿಷ್ಟು ಮಾತಾಡ್ತಾ ಇರೋದು?. '

'ಆದ್ಯಾವ್ದು ಅಂಥ ವಿಶೇಷ ವಸ್ತು? ಇಲ್ಲಿ ನೋಡು— ಈ ಸುತ್ತು ಬಳಸು ಮಾತೆಲ್ಲಾ ಬಿಟ್ಟು ಬಿಟ್ಟು, ನಿನ್ನ ಮನಸ್ಸಿನಲ್ಲಿ ಏನಿದ್ರೆ ಅದನ್ನು

ನೇರವಾಗಿ ಹೇಳಿ ಬಿಡು. ಯಾರಿಗೆ ನಾನೇನು ಅಂಥ ಮಾಡಬಾರದ ಅನ್ಯಾಯಂ ಮಾಡಿದೀನಿ?'

ಮತ್ತಷ್ಟು ಸಿಡುಕುತ್ತಾ ಕೇಳಿದರು ವೆಂಕಟದಾಸಪ್ಪ.

'ಅವ್ರು ಇವ್ರು ವಿಷಯ ತಗೊಂಡು ನನಗಾಗಬೇಕಾದದ್ದೇನು? ಹೊರಗಿನೋರು ಯಾರ ವಿಷಯಾನೂ ನಾನು ಮಾತಾಡ್ತಾ ಇಲ್ಲ. ನಾನು ಆಡ್ತಾ ಇರೋದು ರಂಗಕ್ಕನ ವಿಷಯ...'

'ನಿಮ್ಮ ರಂಗಕ್ಕನಿಗೆ ನಾನೇನು ಅನ್ಯಾಯಂ ಮಾಡಿದೀನಿ?'

'ಮಾಡೋದು ಬಿಡೋದು ಇರಲಿ– ಇಷ್ಟು ದಿನ ಆಯ್ತಲ್ಲ ಆಕೇನ ತವರಿಗೆ ಕಳಿಸಿ, ಒಂದು ಸಲಾನಾದ್ರೂ ಹೋಗಿ ನೋಡಿಕೊಂಡು ಬಂದ್ರಾ? ಅದೂ ಹೋಗ್ಲಿ– ನಿಮ್ಮ ವಂಶ ಬೆಳಸೋಕೆ ಆಕೆ ಇವತ್ತು ಗರ್ಭಿಣಿ ಆಗಿದಾಳಲ್ಲಾ– ಆಕೆ ಹ್ಯಾಗಿದಾಳೋ ಏನೋ ಅನ್ನೋ ಮಾತಾದ್ರೂ ಅಪ್ಪಿ ತಪ್ಪಿ ನಿಮ್ಮ ಬಾಯಿಂದ, ಒಂದು ದಿನನಾದ್ರೂ ಬಂದಿದ್ಯಾ? ಜಗತ್ತಿನಲ್ಲಿ ಎಲ್ಲಾ ಗಂಡಂದ್ರೂ ನಿಮ್ಮ ಹಾಗೇ ಇದ್ದು ಬಿಟ್ರೆ, ಈ ಭೂಮಿ ಉಳಿದಂಗೇ ಆಯ್ತು.'

–ಗೌರಮ್ಮ ನೋವು–ಆಪಾದನೆಗಳು ಸಮಸಮವಾಗಿ ಬೆರೆತ ಧ್ವನಿಯಲ್ಲಿ ಹೇಳಿದಳು.

ಬೇರೆಯ ಹೊತ್ತಿನಲ್ಲಾಗಿದ್ದರೆ ವೆಂಕಟದಾಸಪ್ಪನವರು, ಆ ಮಾತು ಕೇಳಿ ನಕ್ಕು ಬಿಡುತ್ತಿದ್ದರೋ ಏನೋ. ಆದರೆ ಗೌರಮ್ಮನ ವಾಕ್ಪ್ರಹಾರದಿಂದ ಸಿಡಿಗೊಂಡ ಅವರ ಮನಸ್ಸು ಆ ಸವಾಲು ಸಿದ್ಧವಾಗಿರಲಿಲ್ಲ. ಅದರೊಂದಿಗೆ ಆಕೆಯ ಮಾತಿನಲ್ಲಿದ್ದ ಸತ್ಯಾಂಶವೂ ಅವರ ಮನಸ್ಸನ್ನು ಇರಿಯಿತು. ಆ ಪ್ರಕ್ಷುಬ್ಧ ಮನೋಭಾವದಲ್ಲೇ–

'ಯಾರೋ ಬಸುರಾದ್ದಕ್ಕೆ ಇಷ್ಟೆಲ್ಲಾ ಮಾತಾಡ್ತೀಯಲ್ಲಾ– ಇನ್ನು ನೀನೇ ಬಸುರಾಗಿದ್ರೆ ಇನ್ನೆಷ್ಟು ಮಾತಾಡ್ತಾ ಇದ್ದೆ?'

–ಎಂದು ಮಾತನ್ನು ಚಾವಟಿಯಂತೆ ಝಳಪಿಸಿದರು.

ಆಕಸ್ಮಿಕವಾದ ಆ ಮಾತಿನ ಕರಾಘಾತದ ಇದಿರು ಗೌರಮ್ಮ ತತ್ತರಿಸಿ ಹೋದಳು. ಒಂದು ಗಳಿಗೆ ಆಕೆಗೆ ಬಾಯಿ ಕಟ್ಟಿದಂತಾಗಿ, ಮುಖ ಬಿಳಚಿಕೊಂಡು, ಬಿಳಿದಾದ ಮುಖದಲ್ಲಿ ಮತ್ತಷ್ಟು ಅಗಲವಾಗಿ ಕಾಣಿಸುವ ಕಣ್ಣುಗಳಲ್ಲಿ

ನೀರು ತುಂಬಿ ಹರಿಯಿತು. ಒಂದು ಕ್ಷಣಕಾಲ ತಲೆ ತಗ್ಗಿಸಿ ನಿಂತಿದ್ದು ಬಳಿಕ–

'ಅನ್ನಿ, ಅನ್ನಿ. ಆ ಮಾತೂ ನೀವು ಅನ್ನಬೇಕಾದ್ದೇ. ಅದೊಂದು ಪುಣ್ಯ ನಾನು ಕೇಳಿಕೊಂಡು ಬರ್ಲಿಲ್ಲ...'

–ಎಂದು ಕಣ್ಣಿನಿಂದ ಹರಿಯುತ್ತಿದ್ದ ನೀರನ್ನೂ ಒರೆಸಿಕೊಳ್ಳಲೆತ್ನಿಸದೆ ಒಳಗೆ ಹೋದಳು.

ಯಾವುದೋ ಉದ್ವೇಗದಲ್ಲಿ, ಕನಸು ಮನಸ್ಸಿನಲ್ಲಿಯೂ ಉದ್ದೇಶಿಸದ ಮಾತನ್ನಾಡಿದ ವೆಂಕಟದಾಸಪ್ಪನವರಿಗೂ, ಅದರ ಪ್ರತಿಕ್ರಿಯೆಯನ್ನು ಕಂಡು, ದಿಗ್ಭ್ರಾಂತಿಯಾಗಿತ್ತು. ಅವರಿಗೂ ಬಾಯಿ ಕಟ್ಟಿದಂತಾಗಿ ನಿಂತು ಬಿಟ್ಟರು. ಅಷ್ಟು ಹೊತ್ತು ಅವರಿಬ್ಬರೂ ಮಾತನಾಡುವಾಗ ನಡುವೆ ಒಂದೂ ಮಾತನಾಡದಿದ್ದ ವೀರಣ್ಣ ಮಾತು ಪ್ರಕೋಪಕ್ಕೆ ಹೋದದ್ದನ್ನು ಕಂಡು–

'ಇವತ್ಯಾಕೋ. ಯಾರಿಗೂ ಎದ್ದ ಹೊತ್ತು ನೆಟ್ಟಗಿಲ್ಲಾಂತ ಕಾಣುತ್ತೆ. ಎಲ್ಲೀ ಮಾತು ಬಿಡು ದಾಸಣ್ಣ? ಗೌರೀ ಆಡಿದ ಮಾತ್ಯಾವ್ದೂ ನೀನು ಮನಸ್ಸಿಗೆ ಹಚ್ಚಿಕೋಬೇಡ. ಅವಳೇನಾಡಿದ್ರೂ ಹೊಟ್ಟೇಲಿ ವಿಷ ಇಟ್ಕೊಂಡು ಆಡಿದ್ದಲ್ಲ. ಬೆಳಗ್ನಿಂದ ರಂಗಕ್ಕನ ಯೋಚ್ನೆ ಮಾಡ್ತಾ ಇದ್ಲು. ಚಂಜೇಕಡೀಗೆ, ಹೊಸ ಕ್ಳೀಗೆ ಹೋಗಿ ಹನುಮಪ್ಪನಿಗೆ ಹಣ್ಣು ಕಾಯಿ ಮಾಡಿಸಿಕೊಂಡು ಬರೋಣಾಂತ ನನ್ನೂ ಕರಕೊಂಡು ಹೋಗಿದ್ಲು. ನಿಂಗೂ ಗೊತ್ತಲ್ಲ–ಅವಳ ಮನಸ್ಸು ಒಳ್ಳೇದು. ಮಾತೂ ಹಿಂಗಾಡ್ತಿರಲಿಲ್ಲ. ಇವತ್ತೇನಾಯ್ತೋ–ಆಡಬಾರದ್ದು ಆಡಿಬಿಟ್ಲು.'

–ಎಂದು ವೆಂಕಟದಾಸಪ್ಪನವರನ್ನು ಸಂತೈಸಲು ಯತ್ನಿಸಿದ.

ಆದರೆ ಆ ಸಂತೈಸುವಿಕೆ ವೆಂಕಟದಾಸಪ್ಪನವರ ಹೃದಯದ ಮೇಲೆ ಏನೂ ಪರಿಣಾಮ ಮಾಡಲಿಲ್ಲ. ಉದ್ರೇಕದಲ್ಲಾಡಿದ ಮಾತು, ಬಿರುಗಾಳಿಯಂತೆ ಅವರ ಬುದ್ಧಿಯನ್ನು ಕಲಕುತ್ತಿತ್ತು. ಎಂತಲೇ ವೀರಣ್ಣನ ಮಾತಿಗೂ ಏನೊಂದೂ ಉತ್ತರ ಕೊಡದೆ, ಅಲ್ಲಿಂದ ಹೊರಟುಬಿಟ್ಟರು. ಅದನ್ನು ಕಂಡ ವೀರಣ್ಣ, ತನಗೆ ತಾನೇ ಹೇಳಿಕೊಳ್ಳುವವನಂತೆ ಹೇಳಿದ–

''ಮಾತಿಂಗೆ ಮಾತು ಮಥಿಸಲ್ಕೆ ವಿಧಿ ಬಂದು ತಾನಾತುಕೊಂಡಿಹುದು ಸರ್ವಜ್ಞ' ಅಂತ ಹೇಳಿದ್ದು ಸುಳ್ಳಲ್ಲ.'

ನೇರವಾಗಿ ಹೇಳಿ ಬಿಡು. ಯಾರ್‍ಗೆ ನಾನೇನು ಅಂಥ ಮಾಡಬಾರದ ಅನ್ಯಾಯ ಮಾಡಿದೀನಿ?'

ಮತ್ತಷ್ಟು ಸಿಡುಕುತ್ತಾ ಕೇಳಿದರು ವೆಂಕಟದಾಸಪ್ಪ.

'ಅವ್ರು ಇವ್ರು ವಿಷಯ ತಗೊಂಡು ನನಗಾಗಬೇಕಾದದ್ದೇನು? ಹೊರಗಿನೋರು ಯಾರ ವಿಷಯಾನೂ ನಾನು ಮಾತಾಡ್ತಾ ಇಲ್ಲ. ನಾನು ಆಡ್ತಾ ಇರೋದು ರಂಗಕ್ಕನ ವಿಷಯ...'

'ನಿಮ್ಮ ರಂಗಕ್ಕನಿಗೆ ನಾನೇನು ಅನ್ಯಾಯ ಮಾಡಿದೀನಿ?'

'ಮಾಡೋದು ಬಿಡೋದು ಇರಲಿ– ಇಷ್ಟು ದಿನ ಆಯ್ತಲ್ಲ ಆಕೇನ ತವರಿಗೆ ಕಳಿಸಿ, ಒಂದು ಸಲಾನಾದ್ರೂ ಹೋಗಿ ನೋಡಿಕೊಂಡು ಬಂದ್ರಾ? ಅದೂ ಹೋಗ್ಲಿ– ನಿಮ್ಮ ವಂಶ ಬೆಳಸೋಕೆ ಆಕೆ ಇವತ್ತು ಗರ್ಭಿಣಿ ಆಗಿದಾಳಲ್ಲಾ– ಆಕೆ ಹ್ಯಾಗಿದಾಳೋ ಏನೋ ಅನ್ನೋ ಮಾತಾದ್ರೂ ಆಪ್ಪಿ ತಪ್ಪಿ ನಿಮ್ಮ ಬಾಯಿಂದ, ಒಂದು ದಿನನಾದ್ರೂ ಬಂದಿದ್ಯಾ? ಜಗತ್ತಿನಲ್ಲಿ ಎಲ್ಲಾ ಗಂಡಂದ್ರೂ ನಿಮ್ಮ ಹಾಗೇ ಇದ್ದು ಬಿಟ್ರೆ, ಈ ಭೂಮಿ ಉಳಿದಂಗೇ ಆಯ್ತು.'

–ಗೌರಮ್ಮ ನೋವು–ಆಪಾದನೆಗಳು ಸಮಸಮವಾಗಿ ಬೆರೆತ ಧ್ವನಿಯಲ್ಲಿ ಹೇಳಿದಳು.

ಬೇರೆಯ ಹೊತ್ತಿನಲ್ಲಾಗಿದ್ದರೆ ವೆಂಕಟದಾಸಪ್ಪನವರು, ಆ ಮಾತು ಕೇಳಿ ನಕ್ಕು ಬಿಡುತ್ತಿದ್ದರೋ ಏನೋ. ಆದರೆ ಗೌರಮ್ಮನ ವಾಕ್ಪ್ರಹಾರದಿಂದ ಏಟುಗೊಂಡ ಅವರ ಮನಸ್ಸು ಆ ಸಹನೆಯನ್ನು ಸಿದ್ಧವಾಗಿರಲಿಲ್ಲ. ಅದರೊಂದಿಗೆ ಆಕೆಯ ಮಾತಿನಲ್ಲಿದ್ದ ಸತ್ಯಾಂಶವೂ ಅವರ ಮನಸ್ಸನ್ನು ಇರಿಯಿತು. ಆ ಪ್ರಕ್ಷುಬ್ಧ ಮನೋಭಾವದಲ್ಲೇ–

'ಯಾರೋ ಬಸುರಾದ್ದಕ್ಕೆ ಇಷ್ಟೆಲ್ಲಾ ಮಾತಾಡ್ತೀಯಲ್ಲಾ– ಇನ್ನು ನೀನೇ ಬಸುರಾಗಿದ್ರೆ ಇನ್ನೆಷ್ಟು ಮಾತಾಡ್ತಾ ಇದ್ದೆ?'

–ಎಂದು ಮಾತನ್ನು ಚಾವಟಿಯಂತೆ ಝಳಪಿಸಿದರು.

ಆಕಸ್ಮಿಕವಾದ ಆ ಮಾತಿನ ಕರಾಘಾತದ ಇದಿರು ಗೌರಮ್ಮ ತತ್ತರಿಸಿ ಹೋದಳು. ಒಂದು ಗಳಿಗೆ ಆಕೆಗೆ ಬಾಯಿ ಕಟ್ಟಿದಂತಾಗಿ, ಮುಖ ಬಿಳಚಿಕೊಂಡು, ಬಿಳಿದಾದ ಮುಖದಲ್ಲಿ ಮತ್ತಷ್ಟು ಅಗಲವಾಗಿ ಕಾಣಿಸುವ ಕಣ್ಣುಗಳಲ್ಲಿ

ನೀರು ತುಂಬಿ ಹರಿಯಿತು. ಒಂದು ಕ್ಷಣಕಾಲ ತಲೆ ತಗ್ಗಿಸಿ ನಿಂತಿದ್ದು ಬಳಿಕ—

'ಅನ್ನಿ, ಅನ್ನಿ. ಆ ಮಾತೂ ನೀವು ಅನ್ನಬೇಕಾದ್ದೇ. ಅದೊಂದು ಪುಣ್ಯ ನಾನು ಕೇಳಿಕೊಂಡು ಬರ್ಲಿಲ್ಲ...'

—ಎಂದು ಕಣ್ಣಿನಿಂದ ಹರಿಯುತ್ತಿದ್ದ ನೀರನ್ನೂ ಒರೆಸಿಕೊಳ್ಳಲೆತ್ನಿಸದೆ ಒಳಗೆ ಹೋದಳು.

ಯಾವುದೋ ಉದ್ವೇಗದಲ್ಲಿ, ಕನಸು ಮನಸ್ಸಿನಲ್ಲಿಯೂ ಉದ್ದೇಶಿಸದ ಮಾತನ್ನಾಡಿದ ವೆಂಕಟದಾಸಪ್ಪನವರಿಗೂ, ಅದರ ಪ್ರತಿಕ್ರಿಯೆಯನ್ನು ಕಂಡು, ದಿಗ್ಭ್ರಾಂತಿಯಾಗಿತ್ತು. ಅವರಿಗೂ ಬಾಯಿ ಕಟ್ಟಿದಂತಾಗಿ ನಿಂತು ಬಿಟ್ಟರು. ಅಷ್ಟು ಹೊತ್ತು ಅವರಿಬ್ಬರೂ ಮಾತನಾಡುವಾಗ ನಡುವೆ ಒಂದೂ ಮಾತನಾಡದಿದ್ದ ವೀರಣ್ಣ,ಮಾತು ಪ್ರಕೋಪಕ್ಕೆ ಹೋದದ್ದನ್ನು ಕಂಡು—

'ಇವತ್ಯಾಕೋ. ಯಾರಿಗೂ ಎದ್ದ ಹೊತ್ತು ನೆಟ್ಟಗಿಲ್ಲಾಂತ ಕಾಣುತ್ತೆ. ಎಲ್ಲೀ ಮಾತು ಬಿಡು ದಾಸಣ್ಣ? ಗೌರೀ ಆಡಿದ ಮಾತ್ಯಾವ್ದೂ ನೀನು ಮನಸ್ಸಿಗೆ ಹಚ್ಚಿಕೋಬೇಡ. ಅವಳೇನಾಡಿದ್ರೂಹೊಟ್ಟೇಲಿ ವಿಷ ಇಟ್ಕೊಂಡು ಆಡಿದ್ದಲ್ಲ. ಬೆಳಗ್ನಿಂದ ರಂಗಕ್ಕನ ಯೋಚ್ನೆ ಮಾಡ್ತಾ ಇದ್ಲು. ಚಂಜೇಕಡೀಗೆ, ಹೊಸ ಕ್ಕೀಗೆ ಹೋಗಿ ಹನುಮಪ್ಪನಿಗೆ ಹಣ್ಣು ಕಾಯಿ ಮಾಡಿಸಿಕೊಂಡು ಬರೋಣಾಂತ ನನ್ನೂ ಕರಕೊಂಡು ಹೋಗಿದ್ಲು. ನಿಂಗೂ ಗೊತ್ತಲ್ಲ—ಅವಳ ಮನಸ್ಸು ಒಳ್ಳೇದು. ಮಾತೂ ಹಿಂಗಾಡ್ತಿರಲಿಲ್ಲ. ಇವತ್ತೇನಾಯ್ತೋ—ಆಡ ಬಾರದ್ದು ಆಡಿಬಿಟ್ಲು.'

—ಎಂದು ವೆಂಕಟದಾಸಪ್ಪನವರನ್ನು ಸಂತೈಸಲು ಯತ್ನಿಸಿದ.

ಆದರೆ ಆ ಸಂತೈಸುವಿಕೆ ವೆಂಕಟದಾಸಪ್ಪನವರ ಹೃದಯದ ಮೇಲೆ ಏನೂ ಪರಿಣಾಮ ಮಾಡಲಿಲ್ಲ. ಉದ್ರೇಕದಲ್ಲಾಡಿದ ಮಾತು. ಬಿರುಗಾಳಿ ಯಂತೆ ಅವರ ಬುದ್ಧಿಯನ್ನು ಕಲಕುತ್ತಿತ್ತು. ಎಂತಲೇ ವೀರಣ್ಣನ ಮಾತಿಗೂ ಏನೊಂದೂ ಉತ್ತರ ಕೊಡದೆ, ಅಲ್ಲಿಂದ ಹೊರಟುಬಿಟ್ಟರು. ಅದನ್ನು ಕಂಡ ವೀರಣ್ಣ, ತನಗೆ ತಾನೇ ಹೇಳಿಕೊಳ್ಳುವವನಂತೆ ಹೇಳಿದ—

"ಮಾತಿಂಗೆ ಮಾತು ಮಥಿಸಲ್ಕೆ ವಿಧಿ ಬಂದು ತಾನಾತುಕೊಂಡಿಹುದು ಸರ್ವಜ್ಞ' ಅಂತ ಹೇಳಿದ್ದು ಸುಳ್ಳಲ್ಲ.'

## ೧೩

ವೀರಣ್ಣನ ಮನೆಯಿಂದ ಹೊರಬಿದ್ದ ವೆಂಕಟದಾಸಪ್ಪನವರ ಚಿತ್ತ, ಹತ್ತಾರು ಕೆರಳಿದ ಸರ್ಪಗಳು ಬುಸುಗರೆಯುತ್ತಿರುವ ಹಾವಿನ ಹೇಳಿಗೆಯಂತಾಗಿತ್ತು.

'ಏನಾಡಿದೆ? ನಾನು ಏನು ಮಾಡಿದೆ?'

'ನನ್ನ ಜೀವನ ಎಂಥ ಅಪರಾಧಗಳ ಸರಮಾಲೆ?

'ಎಲ್ಲರೂ ರಂಗುವಿನ ಕ್ಷೇಮ ಚಿಂತನೆಯ ವಿಷಯದಲ್ಲಿ ಕಾತರರಾಗಿದಾರೆ? ಆದರೆ, 'ಧರ್ಮೇಚ, ಅರ್ಥೇಚ, ಕಾಮೇಚ, ನಾತಿಚರಾಮಿ' ಎಂದು ಹೇಳಿ ಅವಳ ಕೈ ಹಿಡಿದ ನನಗೆ ಮಾತ್ರ ಆ ಕಡೆಯ ಯೋಚನೆಯಿಲ್ಲ. ನನ್ನ ಮರೆವಿಗಾಗಿ ರಂಗೂ ಎಷ್ಟು ಕೊರಗುತ್ತಿರಬಹುದು—ನಿಜಕ್ಕೂ ನಾನು ಅವಳ ವಿಷಯದಲ್ಲಿ ಅಪರಾಧಿ.

'ಗೌರಿ—

'ನನ್ನ ಹಿತಕ್ಕಾಗಿ, ನನ್ನವರ ಕ್ಷೇಮಕ್ಕಾಗಿ ಅಹರ್ನಿಶಿಯೂ ಚಿಂತಿಸುತ್ತ, ನನಗಾಗಿ ತನ್ನ ಬಾಳನ್ನೇ ಮೀಸಲಾಗಿರಿಸಿದ ಹೆಣ್ಣು ಅವಳು. ಆ ಹೆಣ್ಣು ನನ್ನಿಂದ ಎಂದೂ, ಏನನ್ನೂ ಬಯಸಲಿಲ್ಲ. ನನ್ನಿಂದ ಇರಲಿ, ದೇವರಿಂದಲೂ ಏನನ್ನೂ ತನಗಾಗಿ ಬೇಡಿದ ಹೆಣ್ಣಲ್ಲ ಅವಳು. ಎಂದೂ ಇಂಥದು ತನಗೆ ಬೇಕು, ಇಂಥದು ತನಗೆ ಇಲ್ಲವಾಯಿತು ಎಂದು ಕೊರಗಿದವಳಲ್ಲ. ಆದರೂ ಆಕೆಯಲ್ಲಿ ಒಂದೇ ಒಂದು ಬಯಕೆಯ ಕಿಡಿ ಅಡಗಿತ್ತು.—

'ಸ್ತ್ರೀ ಸಹಜವಾದ ಮಾತೃತ್ವದ ಬಯಕೆ.'

'ಅದನ್ನು ಅವಳು ಬಾಯಿಬಿಟ್ಟು ಹೇಳಿರಲಿಲ್ಲವಾದರೂ, ಅವಳ ಚಿತ್ತದಾಳದಲ್ಲಿ ಆ ಕೊರಗಿನ ಕಿಡಿ ಹುದುಗಿತ್ತೆಂಬುದು ನನಗೂ ತಿಳಿದಿತ್ತು.'

'ತನಗೆ ಈ ಬಯಕೆ ಇರುವಾಗ, ತನಗೆ ಸವತಿಯಾದ ಹೆಣ್ಣು ಗರ್ಭಿಣಿಯಾದಾಗ, ಎಲ್ಲರಂತೆ ಗೌರಿ ಅಸೂಯೆಪಡಲಿಲ್ಲ. ಅದಕ್ಕೆ ಪ್ರತಿಯಾಗಿ ತಾಯ್ತನದ ಭಾಗ್ಯವನ್ನು ಪಡೆದ ತನ್ನ ಸವತಿಯ ಕ್ಷೇಮ ಚಿಂತನೆಯ ವಿಷಯದಲ್ಲಿ ಕಾತರಳಾಗಿದ್ದಳು. ಅವಳು ಸುಖವಾಗಿ, ಮಗುವಿನ ಭಾಗ್ಯದಿಂದ ತನ್ನ

ತೋಳು ತುಂಬಿಕೊಂಡು ಬರಲಿ ಎನ್ನುವ ಸಲುವಾಗಿ ದೇವರಿಗೆ ಹಣ್ಣು ಕಾಯಿ ಮಾಡಿಸಲು ಹೋಗಿದ್ದಳು. ಅದೊಂದೇ ಕಾರಣಕ್ಕಾಗಿ ತನ್ನೊಂದಿಗೂ ಜಗಳವಾಡಿದ್ದಳು.'

'ಅವಳ ಇದಾವ ಚರ್ಯೆಯಲ್ಲಿಯೂ ಸ್ವಾರ್ಥದ ಕಸಿರಿರಲಿಲ್ಲ.'

'ಆದರೆ ನಾನು ಮಾತ್ರ ಇದಾವುದನ್ನು ಯೋಚಿಸದೆ, ಅವಳ ಜೀವನ ಏಕೈಕ ಆಕಾಂಕ್ಷೆಯ ಬಗ್ಗೆ ಸಹಾನುಭೂತಿಯನ್ನೂ ತೋರದೆ, ಆಕೆಯ ಸ್ವಾರ್ಥ ರಹಿತ, ಕಲ್ಯಾಣಾಕಾಂಕ್ಷೆಯನ್ನೇ ಅಪರಾಧವೆಂದೆನಿಸಿ, ಆಕೆಯ ಕೊರಗಿನ ಕೊರಲಗಿನಿಂದ ಆಕೆಯ ಕಣ್ಣನ್ನು ತಿವಿದೆ—ನಾನೆಂಥ ಪಾಪಿ!'

'ಅವಳ ವಿಷಯದಲ್ಲೂ ನಾನು ಅಪರಾಧಿ.'

'ಅಪರಾಧಿ—ನಿಜ—ಅಪರಾಧಿ—'

'ನನ್ನ ಬಾಳಿನೊಂದಿಗೆ ತಮ್ಮ ಬಾಳನ್ನು ಹೆಣೆದ ಮಾನವಜೀವಗಳ ವಿಷಯದಲ್ಲಷ್ಟೇ ಅಲ್ಲ—ದೇವರ ವಿಷಯದಲ್ಲೂ ನಾನು ಅಪರಾಧಿ.

'ನನ್ನ ತಂದೆ ದಿನದಿನವೂ ಪೂಜಿಸಿದ ದೇವರನ್ನು ಮರೆತ ಅಪರಾಧಿ.'

ಈ ಬಗೆಯ ಒಂದೊಂದು ಯೋಚನೆಯೂ—

'ನಿನ್ನ ಬಾಳು ಭಯಂಕರ ಅಪರಾಧದಿಂದ ಕಲಂಕಿತವಾಗಿದೆ'.

—ಎಂದು ಹಲ್ಲುಮಸೆದು ಹೇಳುತ್ತಿದ್ದರೆ, ಅದರೊಂದಿಗೆ, ಅದೆಲ್ಲದರ ಧ್ವನಿಯನ್ನೂ ತಗ್ಗಿಸಿ ಭೀತಿ ಘೋರ್ಗರೆಯುತ್ತಿತ್ತು.

'ನೀವು ದೊಸಳ್ಳಿ ಹನುಮಪ್ಪನಿಗೆ ಪೂಜೆ ಮಾಡಿದರೆಷ್ಟು, ಬಿಟ್ಟರೆಷ್ಟು? ಅದರಿಂದ ನನಗೇನು? ನಿಮ್ಮ ಕೈಲಿ ಪೂಜೆ ಮಾಡಿಸಿಕೊಳ್ಳೋದಿದ್ದರೆ, ಹನುಮಪ್ಪ ಒದ್ದು ಮಾಡಿಸ್ಕೋತಾನೆ. ನೀವು ಪೂಜೆ ಮಾಡೊಲ್ಲಾಂದ್ರೆ ಅಮ್ಮನೋರು ಬಿಟ್ರೆ? ಹನುಮಪ್ಪನೂ ಹಾಗೇ.'

—ಎಂದ ಗೌರಮ್ಮನ ಮಾತು ನೆನಪಾದರೆ, ವೆಂಕಟದಾಸಪ್ಪನವರ ಮೈಯ ನರನರದಲ್ಲಿದ್ದ ಶಕ್ತಿಯೂ ಉಡುಗಿ ಹೋದಂತಾಗುತ್ತಿತ್ತು.

'ಅಮ್ಮನವರ ವಿಷಯದಲ್ಲಿ ಅಪಚಾರ ಮಾಡಲು ಯತ್ನಿಸಿದ್ದಕ್ಕೆ ಅಷ್ಟೆಲ್ಲಾ ಆಯಿತು. ಇನ್ನೂ ಅದರ ಕಾವು ಹೋಗಿಲ್ಲ.'

'ಈಗ ಹನುಮಪ್ಪನೂ ಮುನಿದು ಕೂತರೆ'

ಆ ಯೋಚನೆಗೆ ವೆಂಕಟದಾಸಪ್ಪನವರ ಮೈ ಬೆವರಿ ಗಡಗಡ ನಡುಗಿತು. ಅವರ ಸುತ್ತಲೂ ನೆಲ ಮುಗಿಲನ್ನಾವರಿಸಿದ ಕತ್ತಲೆ, ಕೇಕೆಹಾಕಂತ್ತ, ಬೀಡು ಬಿಟ್ಟಂತಾಗಿ, ಆ ಭಾವನೆಯು ಒತ್ತಡವನ್ನು ತಾಳಲಾರದೆ 'ಮಾರುತಿರಾಯ ನನ್ನನ್ನು ಮನ್ನಿಸು ಸ್ವಾಮಿ' ಎಂದು ಹೆಜ್ಜೆ ಹೆಜ್ಜೆಗೂ ಬೇಡಂತ್ತ, ಹೊಸ ಹಳ್ಳಿಯ ಕಡೆ ಹೊರಟರು.

ವೆಂಕಟದಾಸಪ್ಪನವರು ಹೊಸಹಳ್ಳಿಯನ್ನು ಸೇರುವ ವೇಳೆಗೆ ರಾತ್ರಿ ಎಂಟುಗಂಟೆಯ ವೇಳೆಯಾದುದರಿಂದ, ಶನಿವಾರವಾದರೂ ದೇವಾಲಯದಲ್ಲಿ ಜನರಾರೂ ಇರಲಿಲ್ಲ. ದೇವಾಲಯದ ಮುಂದಿನ ಹಜಾರದಲ್ಲಿ ಕತ್ತಲು ವ್ಯಾಪಿಸಿ, ಮುಚ್ಚಿದ್ದ ಕದದ ಹಿಂದೆ, ದೇವರ ಮುಂದೆ ಹೊತ್ತಿಸಿದ ನಂದಾ ದೀಪದ ಬೆಳಕು, ಸಣ್ಣಗೆ ಹೊಳೆಯುತ್ತಿತ್ತು. ತಮ್ಮ ಭೀತಾವಸ್ಥೆಯಲ್ಲಿ ಕಾಲು ತೊಳೆದುಕೊಂಡು ದೇವಾಲಯವನ್ನು ಪ್ರವೇಶಿಸಬೇಕೆಂಬುದನ್ನೂ ಮರೆತು ವೆಂಕಟದಾಸಪ್ಪನವರು ನೇರವಾಗಿ ಗರ್ಭಗುಡಿಯ ಸಮೀಪಕ್ಕೆ ಹೋಗಿ ಮುಚ್ಚಿದ ಬಾಗಿಲನ್ನು ದಬ್ಬಿದರು.

ಆ ದಿನ ಯಾರೋ ಭಕ್ತರು ಹನುಮಪ್ಪನಿಗೆ ಹರಸಿಕೊಂಡು ಬಾಳೆಯ ದೆಲೆಯ ಚಪ್ಪರ ಕಟ್ಟಿಸಿದ್ದರು. ಹಸಿರಾದ ಬಾಳೆಯೆಲೆಗಳ ಮಧ್ಯದಲ್ಲಿ ಕೆಂಪು, ಬಿಳುಪು ಕಣಗಿಲು ಹೂವುಗಳಿಂದ ಅಲಂಕೃತವಾದ ಮಾರುತಿಯ ಕೃಷ್ಣವಿಗ್ರಹ, ನಂದಾದೀವಿಗೆಯ ಕ್ಷೀಣಕಾಂತಿಯಲ್ಲಿ ಇದ್ದದ್ದಕ್ಕೆ ಎರಡರಷ್ಟು ದೊಡ್ಡದಾಗಿ ಕಾಣಿಸಿತು. ಅದರ ಹಣೆಯ ಮೇಲಿನ ಬೆಳ್ಳಿಯ ನಾಮ, ಬೆಳ್ಳಿಯ ಕಣ್ಣುಗಳು, ಥಳಥಳ ಹೊಳೆಯುತ್ತಿದ್ದವು.

ಗರ್ಭಗೃಹದ ಬಾಗಿಲನ್ನು ತೆರೆದ ವೆಂಕಟದಾಸಪ್ಪನವರು, ನೋಡಿದ ಕಣ್ಣು ತುಂಬುವಂಥ, ಆಳೆತ್ತರದ ಮಾರುತಿಯ ಭೀಮ–ಸಮ್ಮೋಹಕ ಮೂರ್ತಿ ಯನ್ನು ಬಿಟ್ಟ ಕಣ್ಣು ಬಿಟ್ಟ ಹಾಗೇ ನೋಡುತ್ತ ನಿಂತುಬಿಟ್ಟರು. ಹಾಗೆ ನೋಡುತ್ತ ನಿಂತಾಗ, ಆಳೆತ್ತರದ ಮೂರ್ತಿ ಇದ್ದಕ್ಕಿದ್ದ ಹಾಗೇ ಮುಗಿಲೆತ್ತ ರಕ್ಕೆ ಬೆಳೆದು ನಿಂತಂತಾಯಿತು.

ಮುಗಿಲತಾರೆಗಳೆಲ್ಲವೂ ಮುಕುಟವಾಗಿ ಅಲಂಕರಿಸಿದಂತೆ, ದಿವ್ಯ ಶೋಭಾಯಮಾನವಾಗಿಹೊಳೆವ ಕಿರೀಟವನ್ನು ಧರಿಸಿ, ಆದಿಶೇಷನ ಅವತಾರ ದಂತಿರುವ, ಲಾಂಗೂಲವನ್ನು ಶಿರದ ಮೇಲೆ ನಿಮಿರಿಸಿ ಜಗತ್ತನ್ನೇ ಹಿಡಿದು

ತೂಗಬಲ್ಲಂಥ ಪ್ರಚಂಡ ತೋಳಿನಲ್ಲಿ, ಪರ್ವತದಂಥ ಗದೆಯನ್ನು ಹಿಡಿದು ಘೋರಾಕಾರದ ರಕ್ಕಸನನ್ನು ಹುಳುವಿನಂತೆ ಮೆಟ್ಟಿನಿಂತ ವೀರಾಂಜನೇಯನ ಭವ್ಯಮೂರ್ತಿಯನ್ನು ಕಂಡು ವೆಂಕಟದಾಸಪ್ಪನವರ ದೇಹದಲ್ಲಿ ಒಮ್ಮೆಲೇ, ನೂರಾರು ಮಿಂಚುಗಳು ಸಂಚರಿಸಿದಂತಾಗಿ ಮಂತ್ರಮುಗ್ಧರಾದವರಂತೆ ನಿಂತು ಬಿಟ್ಟರು. ಒಂದುಗಳಿಗೆ, ಒಂದೇ ಒಂದು ಕ್ಷಣಕಾಲ ಅವರ ಮನಸ್ಸಿನಲ್ಲಿ–

'ಈ ಸ್ವಾಮಿ, ಮುನಿದ ಗಳಿಗೆಯಲ್ಲೇ ರಕ್ಕಸನಗರಿಯನ್ನು ತನ್ನ ಕ್ರೋಧಾಗ್ನಿಗೆ ತುತ್ತು ಮಾಡಿ ದಹಿಸಿದ ಪವನತನಯ, ರಕ್ಕಸಕೋಟಿ ಯನ್ನು ತರಿತರಿದು ಇಳೆಗೊರಗಿಸಿದ ಪ್ರಚಂಡ ಪರಾಕ್ರಮಿ, ನೂರು ಯೋಜನ ದೂರದ ಕಡಲನ್ನು ಲಂಘಿಸಿದ ವೀರಾಧಿವೀರ ನನ್ನ ಮೇಲೆಮುನಿದರೇನು ಗತಿ?

–ಎಂಬ ಭಯ ವೆಂಕಟದಾಸಪ್ಪನವರ ಹೃದಯದಲ್ಲಿ ಸಂಚರಿಸಿ, ಅವರ ಮೈ ಥರಥರ ಕಂಪಿಸಿತು.

ಆ ಭಯದಲ್ಲಿ ನಿಲ್ಲಲಾಗದೆ, ನೆಲದ ಮೇಲೆ ಕುಸಿದು ಹೊರಳಿದರು. ಧಾರೆಗಟ್ಟಿ ಹರಿವ ಕಣ್ಣೀರಿನಿಂದ ಆಂಜನೇಯನ ಕಾಲನ್ನು ತೊಳೆಯುತ್ತಾ–

'ಸ್ವಾಮಿ...ಹನುಮಪ್ಪಾ... ಆಂಜನೇಯಾ.........
ನನ್ನನ್ನು ಮನ್ನಿಸು ಪ್ರಭೂ...'

–ಎಂದು ಬಿಕ್ಕಿ ಬಿಕ್ಕಿ ತೊದಲಿದರು.

'ಮನ್ನಿಸು ಪ್ರಭೂ... ನನ್ನನ್ನು ಕ್ಷಮಿಸಿ ಕಾಪಾಡು..............ನಿನ್ನ ಕ್ರೋಧಕ್ಕೆ ನಾನು ಈಡಲ್ಲ ಸ್ವಾಮೀ...'

–ಎಂದು ಬೇಡಿದರು.

ಬರಬರುತ್ತಾ ಆ ಮಾತೂ ಬತ್ತಿಹೋಯಿತು. ಕಂಬನಿ ತುಂಬಿದ ಕಣ್ಣುಗಳಿಂದ ಆಂಜನೇಯನ ವಿಗ್ರಹವನ್ನೇ ನೋಡುತ್ತ ಕುಳಿತರು.

ಹಾಗೇ ಕುಳಿತಿದ್ದರು.

ಅವರ ಕಣ್ಣುಗಳಿಂದ ನೀರು ಹರಿಯುತ್ತಿತ್ತು.

ಅವರ ಹೃದಯ ಆಂಜನೇಯನನ್ನು ಬೇಡುತ್ತಿತ್ತು.

ಅಷ್ಟುಹೊತ್ತು ಮೂಕವಾಗಿದ್ದ ಅವರ ನಾಲಗೆ, ಬಳಿಕ ಅವರಿಗೇ ಅರಿವಾಗದಂತೆ ಏನೋ ನುಡಿಯಲಾರಂಭಿಸಿತು–

'ಶ್ರೀ ಮಾರುತೀಶ ಪೊರೆಯೈ...ಶ್ರೀ ಮಾರುತೀಶ ಪೊರೆಯೈ... ಶ್ರೀ ಮಾರುತೀಶ ಪೊರೆಯೈ...'

ಮೊದಲು ಹನಿ ಹನಿಯಾಗಿ ತೊಟಕಲು ಆರಂಭಿಸಿದ ಮಳೆ ಬರಬರುತ್ತಾ ಕುಂಭದ್ರೋಣವಾಗಿ ಕರೆಯುವಂತೆ, ಬಿಡಿಬಿಡಿಯಾಗಿ ಮೂಡಿದ ಮಾತುಗಳು ಎಲ್ಲಿಂದಲೋ ಬಲ ಪಡೆದು, ಕಟ್ಟು ಕಿತ್ತ ಹೊಳೆಯಂತೆ ನುಗ್ಗಿತು—

'ಶ್ರೀ ಮಾರುತೀಶ ಪೊರೆಯೈ
ರಾಮಕಿಂಕರಾ, ಕರುಣಾಕರ—ಶ್ರೀ ಮಾರುತೀಶ ಪೊರೆಯೈ॥
ಭದ್ರತರದಿ ಪೊಗಿನೀ ಸ
ಮುದ್ರವನ್ನು ದಾಂಟಿ ರಾಮ
ಭದ್ರನ ರಾಣಿಗೆ ಪರತರ
ಮುದ್ರಿಕೆಯ ಕೊಟ್ಟದಿಟ್ಟ॥ ಶ್ರೀ ಮಾರುತೀಶ ಪೊರೆಯೈ॥
ಅಹಿತರಾದ ದನುಜರನ್ನು
ಮಹಿಗೆ ಬಲಿಯ ಕೊಡುತಲಿನ್ನು
ದಹಿಸಿದೆ ಲಂಕೆಯನ್ನು ಕ್ಷಣದೊಳ್
ಮಹನೀಯನೆ ಬಹು ಬಲಾಢ್ಯ॥ ಶ್ರೀ ಮಾರುತೀಶ ಪೊರೆಯೈ॥
ನಂಬಿದವರ ಮನಕೆ ಪರಮ
ಸಂಭ್ರಮವನು ಕರುಣಿಸುತ್ತ
ಕುಂಭಿನಿಯೊಳು ಹೊಸಹಳ್ಳಿ ವಾಸ
ಜಂಭಾರಿ ಪ್ರಮುಖ ವಿನುತ॥ ಶ್ರೀ ಮಾರುತೀಶ ಪೊರೆಯೈ॥

ಬಿಡಿನುಡಿ, ನುಡಿನುಡಿಯಾಗಿ, ನುಡಿಮಾಲೆಯಾಗಿ, ಹಾಡಾಗಿ ತಮ್ಮ ಮುಖದಿಂದ ಹೊರಹೊಮ್ಮುತ್ತಿದ್ದುದೂ ವೆಂಕಟದಾಸಪ್ಪನವರಿಗೆ ಅರಿವಿರಲಿಲ್ಲ.

ಮತ್ತೊಮ್ಮೆ, ಮತ್ತೊಮ್ಮೆ, ಆಡಿದುದನ್ನೇ ಆಡುತ್ತ, ಹಾಡಿದು ದನ್ನೇ ಹಾಡುತ್ತ ಕುಳಿತಿದ್ದರು. ತಾವು ಹಾಡುತ್ತಿರುವುದೂ ಅವರಿಗೆ ಅರಿವಿರಲಿಲ್ಲ. ಯಾರೋ ಹಾಡುತ್ತಿರುವುದನ್ನು ಕಿವಿಯಲ್ಲಿ ತುಂಬಿಕೊಂಡು ಕೇಳುತ್ತಿರುವವ ರಂತೆ ಕುಳಿತಿದ್ದರು.

ಹಾಡಿರುವುದನ್ನೇ ಹಾಡುತ್ತಿದ್ದರು. ಮತ್ತೆ ಮತ್ತೆ ಕಡಲ ಒಡಲಿಂದ ಮೂಡಿ, ದಡದತ್ತ ಧಾವಿಸುವ ತೆರೆಗಳಂತೆ 'ಶ್ರೀ ಮಾರುತೀಶ ಪೊರೆಯೈ' ಎಂಬ ಚರಣ ಬಾಯಿಂದ ನುಡಿಯುತ್ತಿತ್ತು.

ಅಷ್ಟು ಹೊತ್ತು ಅವರಿಗೆ ಅದರ ಅರಿವಿರಲಿಲ್ಲ.

ಬಳಿಕ ಅವರಿಗೆ ಅರಿವಾಯಿತು–

'ನಾನು ಹಾಡುತ್ತಿದ್ದೇನೆ'

'ಹಾಡುತ್ತಿದ್ದೇನೆ. ಹಾಡು ನನ್ನ ಮುಖದಿಂದಲೇ ಹೊರಹೊಮ್ಮುತ್ತಿದೆ. ಹಾಡು–ನನ್ನದೇ ಹಾಡು! ನನ್ನ ಹೃದಯದ ಭಾವವೇ ಹಾಡಾಗಿ ಹೊರ ಹೊಮ್ಮುತ್ತಿದೆ.

'ನಾನು ಹಾಡುತ್ತಿದ್ದೇನೆ. ನನ್ನ ಪಾಡನ್ನೇ ನಾನು ಹಾಡಾಗಿ ಮಾಡಿ ಹಾಡುತ್ತಿದ್ದೇನೆ'.

ಇದು ಅರಿವಾಗಿ ವೆಂಕಟದಾಸಪ್ಪನವರು ದಿಗ್ಗನೆ ಎದ್ದು ನಿಂತರು.

'ನಾನು ಹಾಡಿದೆ;ಸ್ವಾಮಿ– ನನಗೆ ಹಾಡುವ ಶಕ್ತಿ ಕೊಟ್ಟೆ. ಮಾತು ಬರದ ನನಗೆ ಹಾಡು ರಚಿಸಿ ಹೇಳುವ ಶಕ್ತಿ ಕೊಟ್ಟೆ. ನಿಜವೇ– ಇದು ನಿಜವೇ?

'ನಾನು ಹಾಡುತ್ತಿದ್ದೇನೆಯೇ? ನನ್ನ ಹೃದಯದಿಂದ ಹಾಡು ಮೂಡಿ ಹರಿಯುತ್ತಿದೆಯೇ? ಆ ಶಕ್ತಿ ನನಗಿದೆಯೇ?'

ಒಂದುಗಳಿಗೆ ಏನೊಂದೂ ಅರ್ಥವಾಗದವರಂತೆ ನಿಂತರು ವೆಂಕಟ ದಾಸಪ್ಪನವರು. ಕಣ್ಣುಗಳಲ್ಲಿ ಕಂಬನಿ ಹರಿಸುತ್ತ ನಿಂತಾಗ ಅವರಿಗೆ ತಮ್ಮ ಕಿವಿಯಲ್ಲಿ ಯಾರೋ–

'ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಂ
ಯತ್ಕೃಪಾ ತಮಹಂ ವಂದೇ ಪರಮಾನಂದ ಮಾಧವಂ॥

–ಎಂದು ಉಸಿರಿದಂತಾಯಿತು.

ಆ ವಾಣಿಯನ್ನು ಕೇಳುತ್ತಿದ್ದ ಹಾಗೇ ವೆಂಕಟದಾಸಪ್ಪನವರು ತಟಕ್ಕನೆ ಎಚ್ಚರವಾಗಿ, ತಮ್ಮ ಕಿವಿಯಲ್ಲಿ ಯಾರು ಉಸಿರುತ್ತಿರುವರೆಂದು ಲಕ್ಷ್ಯವಿಟ್ಟು ಪರೀಕ್ಷಿಸಿದರು. ಯಾವುದೋ ವಾಣಿ, ಸ್ಫುಟಸ್ಪಷ್ಟ, ವೃದ್ಧಕಂಠ, ಆತ್ಮೀಯತೆ ತುಂಬಿ ಸೂಸುವಧ್ವನಿಯಲ್ಲಿ ಹೇಳುತ್ತಿದೆ–

'ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯಂತೇ ಗಿರಿಂ
ಯತ್ಕೃಪಾ ತಮಹಂ ವಂದೇ ಪರಮಾನಂದ ಮಾಧವಂ॥
(ಪರಮಾನಂದ ಸ್ವರೂಪನಾದ ಮಾಧವನ ಕೃಪೆಯಾದರೆ, ಮೂಕನೂ ಮಾತಾಡುತ್ತಾನೆ; ಕುಂಟನೂ ಬೆಟ್ಟವನ್ನು ಹಾರುತ್ತಾನೆ.)

ಆ ಮಾತು ಕೇಳಿ ವೆಂಕಟದಾಸಪ್ಪನವರ ಹೃದಯಕ್ಕೆ ಅನಿರ್ವಚನೀಯವಾದ ಆನಂದವಾಯಿತು.

'ನಾನು ಹಾಡುತ್ತಿದ್ದೇನೆ. ಈ ಹಾಡಿನ ರೂಪದಲ್ಲಿ ಪರಮಾತ್ಮನ ಕೃಪೆ ನನ್ನ ಮೇಲಾಗುತ್ತಿದೆ.'

ಹಾಗನಿಸಿ, ಅವರಿಗೆ ನಿಂತ ನೆಲದಿಂದ ಕುಪ್ಪಳಿಸಿ ಕುಣಿಯಬೇಕೆನಿಸಿತು. ಆನಂದರಸವಾರಿಧಿಯ ಕೋಟಿ ತೆರೆಗಳು ಅವರ ರಕ್ತದ ಅಣುಅಣುವಿನಲ್ಲೂ ತೆರೆಯುಪ್ಪಳಿಸಿ 'ನಾನು ಧನ್ಯ, ನಾನು ಧನ್ಯ' ಎಂದು ಹುಚ್ಚಾಗಿ ಕೂಗುವಂತೆ ಮಾಡಿತು. ಆ ಹುಚ್ಚಿನಲ್ಲಿಯೇ, ಎದುರಿಗಿದ್ದ ಆಂಜನೇಯನ ವಿಗ್ರಹಕ್ಕೆ ಮತ್ತೆ ಮತ್ತೆ ಪ್ರಣಾಮ ಮಾಡುತ್ತ ಹೇಳಿದರು—

"ಸುಳ್ಳಲ್ಲ—ಇದು ಸುಳ್ಳಲ್ಲ
ಇಲ್ಲ—ನೀನೆನ್ನನು ಕೈ ಬಿಡಲಿಲ್ಲ.
ವೇದೋಪನಿಷತ್ತುಗಳೆಲ್ಲಾ ಸಾರಿದುದದು—ಸುಳ್ಳಲ್ಲ ॥ಪ॥
ನಂಬಿ ನಡೆದ ನರ ಭಕ್ತರಿಗೆಲ್ಲ
ಅಂಬೆಯು ಕೃಪೆಯನು ದೊರಕಿಪೆಯೆಂಬುದು—ಸುಳ್ಳಲ್ಲ—॥ಅ.ಪ॥
ಶರಣ ಜನಕೆ ನೀ ಸುರಧೇನು
ಪರಮ ಪದವು ನಿನ್ನಾಶ್ರಯವು।
ಚರಣಕೆ ಎರಗಿದ ಭಕ್ತರಿಗೆಲ್ಲ
ವರ ಮುಕ್ತಿಯನೀಯುವೆಯೆಂಬುದು—ಸುಳ್ಳಲ್ಲ॥
ನೂರು ತಪ್ಪುಗಳ ನಾ ಮಾಡಿದರೇನು
ಅರಿಯದೆ ಮಾಡಿದೆ ಮನ್ನಿಸು ಎನಲು
ಪರಮ ದಯಾನಿಧಿ ಮಾತೆಯ ತೆರದಿ
ಮರೆತು ಪೊರೆಯುವೆ ನೀ ಪ್ರಭುಯೆಂಬುದು—ಸುಳ್ಳಲ್ಲ॥

ದೇವ ದಯಾಕರನೀ ಕರುಣಾಳು
ದೇವರದೇವನು ಭಕ್ತರ ಅಡಿಯಾಳು
ದೇವೀಕೆರೆಯಲಿ ಜನಿಸಿದ ದಾಸನು
ಭಾವಿಸಿ ಬೇಡಲು ಪೊರೆದನೀನೆಂಬುದು–ಸುಳ್ಳಲ್ಲ॥

ಬಾರಿಬಾರಿಗೂ ಪ್ರಣಾಮ ಮಾಡುತ್ತ, ಕಣ್ಣುಗಳಿಂದ ಅಶ್ರುದಾರೆಯನ್ನು ಕರೆಯುತ್ತ ವೆಂಕಟದಾಸಪ್ಪನವರು ಗದ್ಗದ ಕಂಠರಾಗಿ ಹಾಡುತ್ತಿದ್ದರು.

ವೆಂಕಟದಾಸಪ್ಪನವರು ಹಾಡುತ್ತಿದ್ದರು.

ಅರ್ಧನಿಮೀಲಿತ ನೇತ್ರನಾಗಿ ಆಂಜನೇಯ ನಿಂತು ಕೇಳುತ್ತಿದ್ದ.

ಗರ್ಭಗೃಹವನ್ನು ಆವರಿಸಿದ ಕತ್ತಲೆಯಲ್ಲಿ ನಂದಾದೀಪದ ಹೊಳಪು ಕುಡಿ, ತೆರೆದ ಕಣ್ಣಿನಂತೆ ಉರಿಯುತ್ತಿತ್ತು.

೧

ಹೃದಯದ ಉದ್ವೇಗ, ಆರ್ತತೆ, ಆವೇಗಗಳು ಹಾಡಾಗಿ ಹರಿದ ದಿನದಿಂದ ವೆಂಕಟದಾಸಪ್ಪನವರ ಜೀವನವೇ ಹೊಸ ಜಾಡು ಹಿಡಿಯಿತು. ಆಗಾಗ ಅವರ ಹೃದಯವನ್ನು ನಲುಗಿಸುತ್ತಿದ್ದ ಬಗೆಬಗೆಯ ಭಾವಗಳ ಬಿಗಿತ ವನ್ನು ಪರಿಹರಿಸಿಕೊಳ್ಳಲು, ಅವರಿಗೊಂದು ಪರಿಹಾರೋಪಾಯ ಕಂಡಿತು ಸುಖವೋ, ದುಃಖವೋ, ಆನಂದವೋ ಆತುರ–ಕಾತರವೋ, ವಿರಹ ಭಾವವೋ–ವಿಷಾದ ಭಾವವೋ, ಯಾವುದೂ ಈಗ ಅಪರಿಹಾರ್ಯ ಯಾತನೆಯಾಗಿ ಅವರನ್ನು ಕಾಡುವುದಿಲ್ಲ. ಎಲ್ಲವೂ ಹಾಡಾಗಿ ಮೂಡಿಬಂದು. ಹರಿದು ಹೋಗಿ, ಮತ್ತೆ ಅವರ ಹೃದಯ ಹೊಸದಾಗಿ ಕಳಕಳಿಸುವಂತೆ ಮಾಡುತ್ತವೆ.

ದಿನದಿನವೂ ಹೃದಯದಲ್ಲಾಗುತ್ತಿದ್ದ ಈ ಭಾವ ತುಮುಲ ತಪ್ಪಿದ ಬಳಿಕ, ಅವರ ಹೃದಯದಲ್ಲಿ ನೆಲೆಸಿದ ಶಾಂತಿ, ಅವರ ಬಾಳನ್ನೂ ವ್ಯಾಪಿಸಿತು

ಈಗ ಅವರ ಬಾಳಿನಲ್ಲಿ ಯಾವ ಉಗ್ರಭಾವದ ಸಂಚಾರವೂ ಇಲ್ಲದೆ, ಮಳೆ ತೊಳೆದು, ಶುಭ್ರನೀಲಿಯ ನಗು ನಗುವ ಬಾಂದಳದಂತಾಗುತ್ತಿತ್ತು ವೆಂಕಟದಾಸಪ್ಪನವರ ಬಾಳು.

ಅವರ ಅಂತರಂಗಿತ ಜೀವನದ ಶಾಂತತೆಯನ್ನು ಬಿಂಬಿಸುವ ರನ್ನಗನ್ನಡಿ ಯಿದ್ದಂತಿತ್ತು ಅವರ ಸಂಸಾರ.

ಚೊಚ್ಚಲು ಹೆರಿಗೆಗೆಂದು ಪರಶುರಾಮಪುರಕ್ಕೆ ಹೋಗಿ, ಗಂಡುಮಗುವಿನ ತಾಯಾಗಿ ಹಿಂದಿರುಗಿದ ರಂಗಮ್ಮ, ಅದು ಕಳೆದ ಮೂರು ವರ್ಷಕ್ಕೆ ಮತ್ತೊಂದು ಗಂಡುಮಗುವಿನ ತಾಯಿಯಾದಳು. ಅದರ ಬೆನ್ನಹಿಂದೆ ಮತ್ತೆರಡುವರ್ಷಕ್ಕೆ ಇನ್ನೊಂದು ಹೆಣ್ಣು ಮಗುವಾಯಿತು. ಹೀಗೆ ದಿನಗಳೆದಂತೆ ಅವರ ಸಂಸಾರ ಬೆಳೆಯುತ್ತಿತ್ತು. ಆದರೆ ವೆಂಕಟದಾಸಪ್ಪನವರ ಪಾಲಿಗೆ ಆ ಸಂಸಾರವೂ ಹೊರೆಯೆಂದು ಕಾಣಿಸಲಿಲ್ಲ. ಅದರ ಚಿಂತೆಯೂ ಅವರಿಗಿರಲಿಲ್ಲ.

'ಸಕಲಕೆಲ್ಲಕು ನೀನೇ ಆಧಾರವ ಶ್ರೀಮಾತೆ
ಇನ್ನೇಕೆ ಎನಗಿನ್ನು ಈ ಭವದ ಚಿಂತೆ॥'

—ಎಂದು ಹಾಡಿ, ಎಲ್ಲವನ್ನೂ ದೇವಿಯ ರಕ್ಷಣೆಗೆ ಒಪ್ಪಿಸಿ ಬಿಟ್ಟಿದ್ದರು. ಅವರು ಸಕಲ ಸಂಸಾರ ಭಾರವನ್ನೂ ದೇವಿಗೆ ಒಪ್ಪಿಸಿದ್ದರು.

ದೇವಿಯೂ ಆ ರಕ್ಷಣಾ ಭಾರವನ್ನು ಹೊತ್ತಿದ್ದಳು—ಅವರ ಮಡದಿ ರಂಗಮ್ಮನ ರೂಪವಾಗಿ.

ರಂಗಮ್ಮ ಅವರಿಗೆ ತಕ್ಕ ಮಡದಿಯಾಗಿದ್ದಳು. ತನ್ನ ಪತಿಗೆ ಸಂಸಾರದಲ್ಲಿ ವಿರಕ್ತಿ ಇಲ್ಲವಾದರೂ, ಇದೇ ಸರ್ವಸ್ವವೆಂಬಷ್ಟು ಅನುರಕ್ತಿ ಇಲ್ಲದಿರುವುದನ್ನು ಅರಿತುಕೊಂಡ ರಂಗಮ್ಮ, ಸಂಸಾರ ಅವರಿಗೆ ಕಾಲ್ತೊಡರಾಗದಂತೆ ಎಚ್ಚರವಹಿಸಿದಳು. ದೇವರು ಕೊಟ್ಟಷ್ಟರಲ್ಲಿ, ಮಿತವಾಗಿ, ಓತಣವಾಗಿ ಸಂಸಾರ ಮುಗಿಸಿಕೊಂಡು ಹೋಗುತ್ತಿದ್ದಳು. ಎಷ್ಟೋ ವೇಳೆ, ಕಾಳುಕಡಿಯ ಕೊರತೆ ಬಂದರೂ, ಗಂಡನಿಗೆ ಅದಾವುದೂ ಅರ್ಥವಾಗದ ಹಾಗೆ ಜಾಣತನದಿಂದ, ಓಪಿಗೆಯಿಂದ ಸಂಸಾರವನ್ನು ನಿರ್ವಹಿಸುತ್ತಿದ್ದಳು.

ಈ ಅನುಕೂಲ ಪರಿಸ್ಥಿತಿಯಲ್ಲಿ ವೆಂಕಟದಾಸಪ್ಪನವರ ಆಧ್ಯಾತ್ಮ ಜೀವನ ದಿನದಿನಕ್ಕೂ ವಿಕಾಸವಾಗಿ. ಅವರ ಬಾಳು ಅಂತರ್ಮುಖವಾಯಿತು. ಎಲ್ಲಿರಲಿ. ಯಾರೊಂದಿಗಿರಲಿ, ಅವರು ತಾವೇ ಪ್ರತ್ಯೇಕವಾಗಿದ್ದಂತೆ ಇರುತ್ತಿದ್ದರು' ಅವರು ಎಲ್ಲರೊಂದಿಗೂ ಸರಳವಾಗಿ, ಸಹಜವಾಗಿ, ಹಸನ್ಮುಖರಾಗಿ ಬೆರೆಯುತ್ತಿದ್ದರೂ, ಯಾರೊಬ್ಬರಿಗೂ, ಆ ಸರಳತೆಯನ್ನು ಅಗ್ಗ ಮಾಡುವ ಧೈರ್ಯವಾಗುತ್ತಿರಲಿಲ್ಲ. ಎಲ್ಲರಿಗೂ ಅವರನ್ನು ಕಂಡರೆ ಏನೋ ಒಂದು ಬಗೆಯ ಗೌರವಭಾವ ಮಿಶ್ರಿತವಾದ ಭಯ.

ದೇವೀಕೆರೆಯ ಜನಕ್ಕೆಲ್ಲಕ್ಕೂ ವೆಂಕಟದಾಸಪ್ಪನವರೆಂದರೆ, 'ಅಮ್ಮನವರ ಮಕ್ಕಳು. ಅವರ ಹತ್ತಿರ ಅತಿ ಸದರ ಕೂಡದು' ಎಂಬ ಭಾವವಿತ್ತು. ಆದರೆ ಹಾಗೆಂದು ಜನ ಅವರಿಂದ ದೂರವಿರುತ್ತಿರಲಿಲ್ಲ. ಹಳ್ಳಿಯಲ್ಲಿಯ ಎಲ್ಲರನ್ನೂ ವೆಂಕಟದಾಸಪ್ಪನವರು ಸೂಜಿಗಲ್ಲಿನಂತೆ, ತಮ್ಮತ್ತ ಆಕರ್ಷಿಸುತ್ತಿದ್ದರು.

ಅದಕ್ಕೆ ಮೊದಲ ಕಾರಣ—ವೆಂಕಟದಾಸಪ್ಪನವರ ಬಳಿ ನಿವೇದಿಸಿಕೊಂಡರೆ ಎಂಥ ಕಷ್ಟ, ಕಾರ್ಪಣ್ಯವಾದರೂ ನಿವಾರಣೆಯಾಗುತ್ತದೆ ಎಂಬ ನಂಬಿಕೆ.

ಯಾರು ಏನೇ ಕಷ್ಟ ಹೇಳಿಕೊಂಡು ಬರುವುದಕ್ಕೂ ವೆಂಕಟದಾಸಪ್ಪನವರ ಮನೆ ಮುಕ್ತದ್ವಾರವಾಗಿತ್ತು. ಎಲ್ಲರ ಕಷ್ಟ ನಿವಾರಣೆಗೂ, ಅವರಿಗೆ

ಗೊತ್ತಿದ್ದ ಏಕೈಕ ಪರಿಹಾರೋಪಾಯ—ಅಮ್ಮನವರ ಪ್ರಸಾದ.

ವೆಂಕಟದಾಸಪ್ಪನವರ ಮನೆಯಲ್ಲಿ ಪ್ರತಿ ದಿನವೂ ಪ್ರಾತಃಕಾಲ, ಸಂಜೆ ಅಮ್ಮನವರ ಪೂಜೆ, ಮಂಗಳಾರತಿಯಾಗುವುದು. ಶುಕ್ರವಾರ ಅಮ್ಮನವರ ಆಲಯದಲ್ಲಿಯೂ, ಶನಿವಾರ ಹೊಸಹಳ್ಳಿಯ ಮಾರುತಿಯ ಮಂದಿರದಲ್ಲಿಯೂ, ಅವರೇ ವಿಶೇಷ ಪೂಜೆ ಮಾಡುವರು. ಆ ದಿನಗಳಲ್ಲಿ ಹಳ್ಳಿಯ ಜನ ಆ ದೇವಾಲಯಗಳಲ್ಲಿ ಕಿಕ್ಕಿರಿದು, ದೇವತಾಸನ್ನಿಧಿಯಲ್ಲಿ ತಮ್ಮ ಕಷ್ಟ ಕಾರ್ಪಣ್ಯ ಗಳನ್ನು ನಿವೇದಿಸಿಕೊಂಡು, ವೆಂಕಟದಾಸಪ್ಪನವರಿಂದ ತೀರ್ಥ—ಪ್ರಸಾದ ಪಡೆದುಹೋಗುತ್ತಿದ್ದರು.

ಜಾತ್ರೆಯಲ್ಲಿ ಸರ್ಪ ಪ್ರಸಂಗ ನಡೆದ ವರ್ಷದಿಂದಲೂ ಜನ ಈ ಕಾರಣ ಕ್ಕಾಗಿ ಅವರ ಮನೆಗೆ ಬರುತ್ತಿದ್ದರು. ಆಗ ವೆಂಕಟದಾಸಪ್ಪನವರು ಎಂದಿನಂತೆ ಪೂಜೆ ಮಾಡಿ ಪ್ರಸಾದ ಕೊಡುತ್ತಿದ್ದರು. ಆದರೆ, ಈಗ ಶಾಮಣ್ಣ 'ಕಷ್ಟ ನಿವಾರಣೆಗೆಂದೇ ಪೂಜೆ ಮಾಡು. ಹತ್ತು ಜನ ನಿನ್ನನ್ನು ಹರಸಿದರೆ, ಆ ಹರಕೆಯೇ ನಿನಗೆ ಅಮ್ಮನವರ ದರ್ಶನ ಭಾಗ್ಯವನ್ನು ಒದಗಿಸಿ ಕೊಡುತ್ತದೆ' ಎಂದು ಹೇಳಿದಂದಿನಿಂದ, ಯಾರು ಏನು ತೊಂದರೆಹೇಳಿಕೊಂಡು ಬಂದರೂ 'ತಾಯಿ ಅವರ ದುಃಖ ನಿವಾರಣೆ ಮಾಡು' ಎಂದು ಬೇಡಿ, ನಾಲ್ಕು ಹೂವು ಹಾಕಿ ಬಳಿಕ ತೀರ್ಥ—ಪ್ರಸಾದ ಕೊಡುತ್ತಿದ್ದರು.

ವೆಂಕಟದಾಸಪ್ಪನವರ ಶಕ್ತಿ ವಿಶೇಷವೋ, ಅಥವಾ ಜನರ ಶ್ರದ್ಧಾಬಲವೇ, ಕಾರಣವಾಗಿಯೋ— ಅಂತೂ ಅವರ ಬಳಿ ಬಂದವರ ಕಷ್ಟ ನಿವಾರಣೆ ಯಾಗುತ್ತಿತ್ತು. ಅದರಿಂದಾಗಿ ದಿನ ದಿನಕ್ಕೆ ವೆಂಕಟದಾಸಪ್ಪನವರ ಕೀರ್ತಿ ಬೆಳೆಯುತ್ತಿತ್ತು.

ಮೊದಮೊದಲು ದೇವೀಕೆರೆ, ಹೊಸಹಳ್ಳಿಗಳಲ್ಲಿ ಮಾತ್ರ ಹರಡಿದ್ದ ವೆಂಕಟದಾಸಪ್ಪನವರ ಕೀರ್ತಿ, ದಿನಗಳೆದಂತೆ ಸುತ್ತಲ ಹತ್ತಾರು ಹಳ್ಳಿಗಳಲ್ಲಿ ವ್ಯಾಪಿಸಿ, ಹತ್ತಿಪ್ಪತ್ತು ಮೈಲಿಗಳಿಂದಲೂ ಜನ ಅವರ ಮನೆಗೆ ಬಂದು ಮುಕುರಲಾರಂಭಿಸಿದರು. ಎಂಥ ಕಷ್ಟಕ್ಕೂ ವೆಂಕಟದಾಸಪ್ಪನವರಿಂದ ತಮಗೆ ಪರಿಹಾರ ದೊರೆಯುತ್ತದೆ ಎಂದು ನಂಬಿದ ಜನ 'ದೊತೆಯಪರೆಗೆ ದೂರು ಎಂಬ ಗಾದೆ ಯನ್ನೇ ಬದಲಿಸಿ, 'ದಾಸಣ್ಣನೋರ ವರೆಗೆ ದೂರು' ಎಂದು ಬದಲಾಯಿಸಿ, ಅವರ ಕೀರ್ತಿಯನ್ನು ಮತ್ತಷ್ಟು ಬಿತ್ತರಿಸಿದರು.

 

ಇದು ಅವರ ಜನಪ್ರಿಯತೆಗೆ ಮೊದಲ ಕಾರಣವಾದರೆ, ಅವರ ಹಾಡನು ರಚಿಸುವ ಪ್ರತಿಭೆ ಮತ್ತೊಂದು ಕಾರಣವಾಯಿತು. ಅವರು ಯಾವ ಹಾಡನ್ನೂ ಕುಳಿತು ರಚಿಸುತ್ತಿರಲಿಲ್ಲ. ಯಾವುದನ್ನೂ ಬರೆದಿಡುತ್ತಿರಲಿಲ್ಲ. ಅವರೂ ತಾನಾಗಿ ಅವರ ಮುಖದಿಂದ ಮೂಡಿ ಬರುವ ಹಾಡನ್ನು ಒಮ್ಮೆ ಕೇಳಿದವರಿಗೆ ಅವು ಎಂದೆಂದೂ ಮನಸ್ಸಿನಿಂದ ಮಾಸುತ್ತಿರಲಿಲ್ಲ, ಹೀಗೆ ಅವರಿಂದ ನೇರವಾಗಿ ಕೇಳಿ ನೆನಪಿಟ್ಟುಕೊಂಡವರು ಒಬ್ಬರಾದರೆ, ಆ ಒಬ್ಬರಿಂದ ಕೇಳಿ, ಬರೆದುಕೊಂಡವರು ಹತ್ತು ಜನರಾಗಿ, ಹತ್ತಾರು ಹಳ್ಳಿಗಳ ಜನದ ಬಾಯಲ್ಲಿ, ಸಾಮಾನ್ಯವಾಗಿ 'ದಾಸಣ್ಣನವರು ರಚಿಸಿದ ಪದವಿದು ದೇವೀಕೆರೆ ಗ್ರಾಮದಲ್ಲಿ' ಎಂಬ ಮುದ್ರಿಕೆಯುನ್ನುಳ್ಳ ಹಾಡುಗಳು, ನಲಿದು ವೆಂಕಟದಾಸಪ್ಪ ನವರ ಕೀರ್ತಿಯುನ್ನು ಹಾಡಿದವು.

ಅವರ ಈ ಶಕ್ತಿ ಹಳ್ಳಿಯುವರ ಮೆಚ್ಚಿಗೆಗೆ ಕಾರಣವಾದಂತೆ, ಅಚ್ಚರಿಗೂ ಕಾರಣವಾಗಿತ್ತು.

ಹಿಂದೊಮ್ಮೆ ಹಟಕ್ಕೆ ಬಂದಾಗ ವೆಂಕಟದಾಸಪ್ಪನವರು ಹಳ್ಳಿಯು ಜನ ಆಡಲು ಒಂದು ನಾಟಕವನ್ನು ರಚಿಸಿಕೊಟ್ಟಿದ್ದರು, ನಿಜ. ಆದರೆ ಆ ಬಳಿಕ ಮತ್ತೆ ಆ ಶಕ್ತಿ ಎಲ್ಲೋ ಅಡಗಿ ಹೋಗಿದ್ದು, ಈಗ ಮತ್ತೊಮ್ಮೆ, ಎಲ್ಲೋ ಹಳ್ಳವಾಗಿ ಕಾಣಿಸಿಕೊಂಡ ಗುಪ್ತಗಂಗೆ, ಮತ್ತೊಂದೆಡೆಯಲ್ಲಿ ಪ್ರಚಂಡ ಪ್ರವಾಹವಾಗಿ ಕಾಣಿಸಿಕೊಳ್ಳುವಂತೆ ಕಾಣಿಸಿಕೊಂಡಿತ್ತು. 'ಇಷ್ಟು ದಿನ ಈ ಶಕ್ತಿ ಎಲ್ಲಿ ಹುದುಗಿತ್ತು?, ಈಗ ಹೇಗೆ ಪ್ರಕಟವಾಯಿತು?' ಎಂದು ಆಶ್ಚರ್ಯ ಪಡುತ್ತಿದ್ದರು.

ಆದರೆ ಊರ ಜನಕ್ಕೆ ಇದ್ದ ಆಶ್ಚರ್ಯ ವೆಂಕಟದಾಸಪ್ಪನವರಿಗೆ ಇರಲಿಲ್ಲ. ಯಾವಾಗಲಾದರೊಂದು ಸಂದರ್ಭದಲ್ಲಿ ತಮ್ಮ ಬಾಯಿಂದ ತಟಕ್ಕನೆ ಹಾಡು ಮೂಡಿದಾಗ 'ಈ ಹಾಡು ನನ್ನ ಹೃದಯದಲ್ಲಿ ಎಲ್ಲಿ ಹುದುಗಿತ್ತು?' ಎನಿಸಿ ದರೆ, ಮರು ಗಳಿಗೆಯೇ, ದೇವೀ ಸೂಕ್ತದ—

'ಅಹಮೇವ ಸ್ವಯುಮಿದಂ ವದಾಮಿ
ಜುಷ್ಟಂ ದೇವೇಭಿರುತ ಮಾನುಷೇಭಿಃ
ಯಂ ಕಾಮಯೇ ತಂತ್ರಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್॥

[ದೇವತೆಗಳಿಂದಲೂ ಮನುಷ್ಯರಿಂದಲೂ ಸೇವಿಸಲ್ಪಡುವ ನಾನೇ ಸ್ವಯಂ ಹೇಳುತ್ತಿದ್ದೇನೆ: 'ನಾನು ಯಾರನ್ನು ಪ್ರೀತಿಸುತ್ತೇನೋ, ಅವನನ್ನು ಬಲಿಷ್ಟನನ್ನಾಗಿ ಮಾಡುತ್ತೇನೆ; ಬ್ರಹ್ಮನನ್ನಾಗಿ ಮಾಡುತ್ತೇನೆ; ಋಷಿಯನ್ನಾಗಿ ಮಾಡುತ್ತೇನೆ; ಪ್ರಾಜ್ಞನನ್ನಾಗಿ ಮಾಡುತ್ತೇನೆ!]

—ಎಂಬ ಶ್ಲೋಕ ನೆನಪಾಗಿ 'ಆ ತಾಯಿಗೆ, ಈ ಮರದ ಬುರುಡೆಯಿಂದ ಹಾಡು ಹಾಡಿಸುವುದು ಹೆಚ್ಚೆ?' ಎನಿಸಿ, ಆ ಶಕ್ತಿಯ ಇದಿರು ತಲೆ ಬಾಗುವರು,

ಎಷ್ಟೋ ಬಾರಿ ಈ ಸಮಾಧಾನ ಹೇಳಿಕೊಂಡು ಸುಮ್ಮನಾದರೂ, ಒಮ್ಮೊಮ್ಮೆ ಅವರ ಮನಸ್ಸು ಆ ಬಗ್ಗೆ ಆಳವಾಗಿ ಚಿಂತಿಸುವುದು.

'ಇದು ಆ ಮಹಾತಾಯಿಯ ಅನುಗ್ರಹ ಎನ್ನುವುದರಲ್ಲಿ ಸಂಶಯವಿಲ್ಲ. ಆದರೂ ಆಕೆಯಿಂದ ನಾನು ಈ ಅನುಗ್ರಹವನ್ನು ಎಂದೂ ಬಯಸಲಿಲ್ಲ ಆದರೂ ಇದು ನನ್ನದಾದುದೇಕೆ?'

—ಎಂದು ಆಲೋಚಿಸುವರು.

ಬಹು ದಿನ ಅವರ ಈ ಪ್ರಶ್ನೆಗೆ ಉತ್ತರ ದೊರಕಲಿಲ್ಲ. ಆದರೆ ಒಂದು ಶುಕ್ರವಾರ ಅವರು, ದೇವರ ಮನೆಯಲ್ಲಿ ಒಂಟಿಯಾಗಿ ಕುಳಿತು 'ಲಲಿತಾ ಸಹಸ್ರನಾಮ' ವನ್ನು ಹೇಳಿಕೊಂಡು ಅಮ್ಮನವರಿಗೆ ಕುಂಕುಮ ಪೂಜೆ ಮಾಡಲು ಉಪಕ್ರಮಿಸಿ, ಪೀಠಿಕಾ ಪ್ರಕರಣದ ಹಯಗ್ರೀವ—ಅಗಸ್ತ್ಯರ ಸಂಭಾಷಣೆಯನ್ನು ಹೇಳುತ್ತಿರುವಾಗ, ಮಧ್ಯದಲ್ಲಿ—

'ತತ್ರ ಹೇತುಂ ಪ್ರವಕ್ಷ್ಯಾಮಿ ಶೃಣುತ್ವಂ ಕುಮ್ಭಸಮ್ಭವ
ಪುರಾ ಶ್ರೀ ಲಲಿತಾದೇವೀ ಭಕ್ತಾನಾಂ ಹಿತ ಕಾಮ್ಯಯಾ॥

—ಎಂಬ ಪಾದಗಳನ್ನು ಹೇಳುತ್ತಿರುವಾಗ, ಅವರಿಗೆ ತಮ್ಮ ನಾಲಗೆಯ ಓಟವನ್ನು ಯಾರೋ ತಡೆದು 'ಎಚ್ಚರವಿಟ್ಟು ಓದು' ಎಂದು ಹೇಳಿದಂತಾಯಿತು. 'ಇದೇಕೆ ಹೀಗನಿಸುತ್ತಿದೆ?' ಎಂದುಕೊಂಡು, ಓದಿದ ಭಾಗವನ್ನೇ ಮತ್ತೆ ಬಹು ಎಚ್ಚರವಾಗಿ ಓದಲಾರಂಭಿಸಿದರು:

'ತತ್ರಹೇತುಂ ಪ್ರವಕ್ಷ್ಯಾಮಿ ಶೃಣುತ್ವಂ ಕುಂಭಸಂಭವ
ಪುರಾ ಶ್ರೀ ಲಲಿತಾದೇವೀ ಭಕ್ತಾನಾಂ ಹಿತ ಕಾಮ್ಯಯಾ॥
ವಾಗ್ದೇವೀರ್ವಶಿನೀ ಮುಖ್ಯಾಸ್ಸಮಾಹೂಯೇದಮಬ್ರವೀತ್
ವಾಗ್ದೇವತಾ ವಶಿನ್ಯಾದ್ಯಾ ಶೃಣುಧ್ವಂ ವಚನಂ ಮಮ॥

ಭವತ್ಯೋ ಮತ್ಪ್ರಸಾದೇನ ಪ್ರೋಲ್ಲಸದ್ವಾಗ್ವಿಭೂತಯಃ
ಮದ್ಭಕ್ತಾನಾಂ ವಾಗ್ವಿಭೂತಿ ಪ್ರದಾನೇ ವಿನಿಯೋಜಿತಾಃ॥
ಮಚ್ಚಕ್ರಸ್ಯ ರಹಸ್ಯಜ್ಞಾ ಮಮ ನಾಮ ಪರಾಯಣಾಃ
ಮಮಸ್ತೋತ್ರ ವಿಧಾನಾಯ ತಸ್ಮಾದಾಜ್ಞಾಪಯಾಮಿವಃ ॥
ಕುರುಧ್ವ ಮಂಕಿತಂ ಸ್ತೋತ್ರಂ ಮಮ ನಾಮ ಸಹಸ್ರಕೈಃ
ಯೇನ ಭಕ್ತೈಸ್ಸ್ತುತಾಯಾ ಮೇ ಸದ್ಯಃ ಪ್ರೀತಿಃ ಪರಾಭವೇತ್
ಇತ್ಯಜ್ಞಪ್ತಾ ವಚೋದೇವ್ಯೋ ದೇವ್ಯಾ ಶ್ರೀ ಲಲಿತಾಮ್ಬಯಾ
ರಹಸ್ಯೈ ರ್ನಾಮಭಿರ್ದೇವ್ಯಾಶ್ಚಕ್ರ ಸ್ತೋತ್ರ ಮನುತ್ತಮಮ್॥

"ಎಲೈ ಕುಂಭಸಂಭವನೇ ಇದರ ಕಾರಣವನ್ನು ಹೇಳುತ್ತೇನೆ ಕೇಳು:
'ಪೂರ್ವದಲ್ಲಿ, ಒಮ್ಮೆ, ಶ್ರೀ ಲಲಿತಾದೇವಿಯು ತನ್ನ ಭಕ್ತರಿಗೆ ಹಿತವನ್ನು ಮಾಡಬೇಕು ಎಂಬ ಇಚ್ಛೆಯಿಂದ ವಶಿನಿ ಮೊದಲಾದ ವಾಗ್ದೇವತೆಯರನ್ನು ಕರೆದು ಹೀಗೆ ಹೇಳಿದಳು:

'ವಶಿನಿ ಮೊದಲಾದ ವಾಗ್ದೇವತೆಯರಿರಾ, ನನ್ನ ಮಾತನ್ನು ಆಲಿಸಿ. ನನ್ನ ಅನುಗ್ರಹದಿಂದ ಕಳಕಳಿಸುವ ವಾಕ್ಸಂಪತ್ತನ್ನುಳ್ಳ ನಿಮ್ಮನ್ನು, ನನ್ನ ಭಕ್ತರಿಗೆ ವಾಗ್ವಿಲಾಸವನ್ನು ಕೊಡುವುದಕ್ಕೆ ನೇಮಿಸಿರುವೆನು. ನೀವು ನನ್ನ ಶ್ರೀ ಚಕ್ರದ ರಹಸ್ಯವನ್ನು ಬಲ್ಲಿರಿ. ಅಲ್ಲದೆ, ನೀವು ನನ್ನ ನಾಮಸಂಕೀರ್ತನ ದಲ್ಲಿ ಆಸಕ್ತರಾಗಿರುವಿರಿ. ಆದುದರಿಂದ ನನ್ನ ಸ್ತೋತ್ರವನ್ನು ರಚಿಸಲು ನಿಮ್ಮನ್ನು ಆಜ್ಞಾಪಿಸುವೆನು. ಭಕ್ತರಿಂದ ಸ್ತುತಿಯಿಸಲ್ಪಟ್ಟ ನನಗೆ ಯಾವುದ ರಿಂದ ಪರಮ ಪ್ರೀತಿಯುಂಟಾಗುವುದೋ ಅಂಥ, ಸಹಸ್ರ ನಾಮಾಂಕಿತವಾದ ನನ್ನ ಸ್ತೋತ್ರವನ್ನು ರಚಿಸಿ'

ಈ ರೀತಿ ದೇವಿಯಿಂದ ಆಜ್ಞಪ್ತರಾದ ವಶಿನ್ಯಾದಿ ವಾಗ್ದೇವತೆಯರು ರಹಸ್ಯವಾದ ನಾಮಗಳಿಂದ ಕೂಡಿದ ಉತ್ತಮೋತ್ತಮವಾದ ದೇವಿಯ ಸ್ತೋತ್ರ ವನ್ನು ಮಾಡಿದರು. ಅದೇ, ರಹಸ್ಯವೂ, ಉತ್ತಮವೂ ಆದ ಸಹಸ್ರನಾಮ ವೆಂದು ಪ್ರಸಿದ್ಧವಾಯಿತು.''

ಈ ಭಾಗವನ್ನು ಒಂದು ಬಾರಿ, ಎರಡು ಬಾರಿ, ಮೂರು ನಾಲ್ಕುಬಾರಿ, ಮತ್ತೆ ಮತ್ತೆ ಪಠಿಸಿದರು ವೆಂಕಟದಾಸಪ್ಪನವರು. ಮತ್ತೆ ಮತ್ತೆ ಹಾಗೆ

ಅದನ್ನು ಓದುತ್ತ, ಅವರ ಕಣ್ಣ ಮುಂದೆ ಹರಡಿದ ಮಬ್ಬುತೆರೆ, ನಸುನಸು ವಾಗಿ ಸರಿದಂತಾಯಿತು. ಆ ಮಬ್ಬು ಸರಿಯುತ್ತ ಸಹಸ್ರನಾಮ ಪಠನದ ಫಲ-ಶ್ರುತಿಯಲ್ಲಿ ಹೇಳಿದ ಮಾತೂ ನೆನಪಾಯಿತು.

'ಮಾಸಮೇಕಂ ಪ್ರತಿದಿನಂ ತ್ರಿವಾರಂ ಯಃ ಪಠೇನ್ನರಃ
ಭಾರತೀ ತಸ್ಯ ಜಿಹ್ವಾಗ್ರರಂಗೇ ನೃತ್ಯತಿ ನಿತ್ಯಶಃ॥

[ಈ ಸಹಸ್ರನಾಮವನ್ನು, ಯಾವನು ಪ್ರತಿದಿನವೂ, ದಿನಕ್ಕೆ ಮೂರು ಬಾರಿಯಂತೆ ಒಂದು ತಿಂಗಳ ಕಾಲ ಪಠಿಸುತ್ತಾನೋ, ಅಂಥವನ ನಾಲಿಗೆಯ ರಂಗದಲ್ಲಿ ಶಾರದಾದೇವಿಯು ದಿನದಿನವೂ ನರ್ತಿಸುತ್ತಾಳೆ].

ಇದೆಲ್ಲ ಭಾವವೂ ಅರ್ಥವಾಗಿ, ವೆಂಕಟದಾಸಪ್ಪನವರ ಕಣ್ಣೆದಿರು ಬೆಳಕು ಮೂಡಿದಂತಾಯಿತು.

'ನಿಜ. ಇದಾವುದೂ ನನ್ನದಲ್ಲ. ಎಲ್ಲವೂ ಆಕೆಯ ಅನುಗ್ರಹ. ತನ್ನ ನಾಮಪಾರಾಯಣ ಮಾಡಿದವರಿಗೆ, ತಾಯಿ ವಾಕ್ಶಕ್ತಿಯನ್ನು ಕರುಣಿಸುತ್ತಾಳೆ, ಅಷ್ಟೇ ಅಲ್ಲ. ಆಕೆಯ ಅನುಗ್ರಹಲಬ್ಧವಾದ ಶಕ್ತಿ ಅಪವ್ಯಯವಾಗದಂತೆ, ಆ ವಾಕ್ಶಕ್ತಿ ಲೋಕಕಲ್ಯಾಣಕರವಾದ ಆಕೆಯ ಸ್ತೋತ್ರವೇ ಆಗಿ, ಹಾಡಿದವನೂ ಕೇಳಿದವನೂ ಇಬ್ಬರೂ ಪುನೀತರಾಗುವಂತೆ ರಕ್ಷಿಸುತ್ತಾಳೆ. ಆ ತಾಯಿಗೆ ತನ್ನ ಮಕ್ಕಳಲ್ಲಿ ಎಷ್ಟು ಪ್ರೇಮ. ಎಷ್ಟು ಎಚ್ಚರಿಕೆ!

'ಅಲ್ಲದೆ ನನ್ನ ತಾಯಿ ಎಷ್ಟು ಜಾಣೆ! ಆಕೆ ಬಿತ್ತಿದ ಒಂದು ಬೀಜ, ಎರಡು ಫಲ ಕೊಡುತ್ತದೆ. ನನ್ನನ್ನು ಹರಸುವ ರೂಪದಲ್ಲಿ ತಾಯಿ ಜಗತ್ತನ್ನೇ ಹರಸಿದಳಲ್ಲವೇ—ನನ್ನ ಹುಲುನಾಲಿಗೆಯಿಂದ ತನ್ನ ನಾಮಸಂಕೀರ್ತನೆಯನ್ನು ಹಾಡಿಸಿ.

'ನಾನೆಂಥ ಅಜ್ಞ. ನನ್ನನ್ನು ಮೆಚ್ಚಿ, ಹಾಡು ರಚಿಸುವ ಶಕ್ತಿಯನ್ನು ನೀನಂ ನನಗೆ ಕರುಣಿಸಿದೆ ಎಂದು ನಾನು ಭ್ರಮಿಸಿದ್ದೆನಲ್ಲಾ. ನಿನ್ನ ಶಕ್ತಿವಿಲಾಸ ದಿಂದ ಸೃಜಿತರಾದ ವಾಗ್ದೇವಿಯರನ್ನು ಹೇಗೆ ಲೋಕಕಲ್ಯಾಣ ಕಾರ್ಯಕ್ಕೆ ನಿಯೋಜಿಸಿದೆಯೋ, ಅಂತೇ ನಿನ್ನ ಕಾರುಣ್ಯದ ಕೈಗೂಸಾದ ನನ್ನಲ್ಲೂ ನಿನ್ನ ಶಕ್ತಿಯ ವಾಣಿಯನ್ನು ನುಡಿಸುತ್ತಿರುವೆಯಾ? ನಿನ್ನ ವಾಣಿಗೆ ನನ್ನನ್ನು ವೀಣೆಯಾಗಿ ಮಾಡಿಸಿಕೊಂಡು ಅನುಗ್ರಹಿಸಿದೆಯಾ?

'ಆಯಿತು ತಾಯಿ—ನಿನ್ನ ಕೈಯ ಮರದ ಕೊರಡು ನಾನು, ನಿನ್ನಿಚ್ಛೆಯಿದ್ದಂತೆ ನುಡಿಸು. ನುಡಿದು ನಾನು ಧನ್ಯನಾಗುತ್ತೇನೆ.'

—ಎಂದು ಹೇಳಿ ನಮಸ್ಕರಿಸಿದರು. ಹಾಗೆ ನಮಸ್ಕರಿಸುತ್ತಿರುವಾಗ ಅವರ ಹೃದಯದಲ್ಲಿ ಕೃತಜ್ಞತಾ ಭಾವ ತುಂಬಿಬಂದು, ಅವರ ನಾಲಿಗೆ ನುಡಿಯಿತು—

ನಿನ್ನ ಕರುಣೆಯು ಉಸಿರು ತಾನೆನ್ನ ನುಡಿಸುತಿರಲು
ಕಾಡ ಬಿದುರಿನ ತುಂಡು, ನಾನಾದೆ ಕೊಳಲು ॥ಪ॥

ನಾನುಡಿದ ನುಡಿ, ಅವರ ಭಾವವು ಅರ್ಥ
ಎಲ್ಲವೂ ನೀನಹುದು ನಾನೆಂಬುದದು ವ್ಯರ್ಥ ॥ಅ. ಪ॥

ಕಡಲ ಒಡಲಿನೊಳೆಲ್ಲೋ ಕ್ರಿಮಿಕೀಟದಿಂ ಜನಿಸಿರ್ದ
ಶಂಖದೊಳು ಓಂಕಾರ ಮೂಡಿಸುವ ತೆರದ।
ರಸಭಾವ ವ್ಯಾಕರಣ ಏನೊಂದನೂ ಅರಿಯದಿಹ
ಎನ್ನ ಜಡಜಿಹ್ವೆಯಲಿ ನೀನೆ ಹಾಡಾಗಿರುವೆ॥

ನೀನು ನಡೆಸಲು ನಡದೆ, ನೀನೆ ನುಡಿಸಲು ನುಡಿದೆ
ನಾನೆಂಬುದಿದು ತಾ ನನ್ನದಲ್ಲ।
ಎನ್ನ ಬಾಳಿದು ನೋಡು—ನೀನೇ ಹಾಡಿದ ಹಾಡು
ಎಂತಿದ್ದರೇನಂತೆ ಚಿಂತೆ ನನಗಿಲ್ಲ॥

ನಿನ್ನ ಗುಟ್ಟಿದು ತಾಯಿ, ಬಲ್ಲವರು ಯಾರಿಲ್ಲ
ಅರಿಯದಲೆ ಜಗವೆನ್ನ ಹೊಗಳುವುದು ನೋಡು।
ಸ್ತುತಿ ನಿಂದೆಗೆಂದುದು ಬಳುಕದಿಹ ಮನುವನು ನೀಡು
ಈ ದಾಸ ನಿನ್ನವನು, ಒಡತಿ ನೀ ಕಾಪಾಡು॥

# ೨

'ನುಡಿಯುವವ ನಾನಲ್ಲ, ನುಡಿಯು ತಾ ನನದಲ್ಲ
ನುಡಿ ನುಡಿತವೆರಡಕೂ ಒಡತಿ ನೀ ಜಗದಂಬೆ'

—ಎಂಬ ಸರ್ವಾರ್ಪಣ ಭಾವಕ್ಕೆ ವೆಂಕಟದಾಸಪ್ಪನವರು ತಮ್ಮ ಬಾಳನ್ನು ಪಸಾಯನದಾನವಾಗಿ ಕೊಟ್ಟ ಬಳಿಕ, ಅವರಿಗೆ ಇದ್ದ ಅಲ್ಪ ಸ್ವಲ್ಪ ಸಂಸಾರ ಚಿಂತೆಯೂ ಕಡಿದು ಹೋಯಿತು.

ಮೂರು ಹೊತ್ತೂ ಅವರಾಯಿತು, ಅವರ ದೇವಿಯ ಚಿಂತನೆಯಾಯಿತು-ಉಳಿದ ಯಾವುದಕ್ಕೂ ಅವರ ಬಾಳಿನಲ್ಲಿ ಎಡೆ ಉಳಿಯಲಿಲ್ಲ.

ತಾವು ದೇವಿಯ ಕೈಯ ಅಸ್ತ್ರ ಎಂದು ವೆಂಕಟದಾಸಪ್ಪನವರು ನಂಬಿದ ಬಳಿಕ,ಅವರ ಮನೆ ಆಕೆಯ ಹೆಸರು ಹೇಳಿಕೊಂಡು ಬರುವವರಿಗೆ ಮುಕ್ತದ್ವಾರವಾಯಿತು. ಅವರಿಗೇನೋ ಜಗತ್ತಿನ ಜನ ತಮ್ಮ ಬಳಿ ಬರುವುದು, ಬಿಡುವುದು ಒಂದೂ ಬೇಕಿರಲಿಲ್ಲ. ಆದರೆ ತಮ್ಮ ಬಳಿಗೆ ಯಾರು ಬಂದರೂ ಅವರು ಬೇಡವೆನ್ನುತ್ತಿರಲಿಲ್ಲ. ಹಾಗೆ ಬಂದು ಹೋಗುವವರಿಗೆ ಹೊತ್ತುಗೊತ್ತಿನ ನಿಯಮವೂ ಇರಲಿಲ್ಲ.

ಯಾರಾದರೂ ಬರಲಿ, ಎಷ್ಟು ಹೊತ್ತಿನಲ್ಲಾದರೂ ಬರಲಿ-ವೆಂಕಟದಾಸಪ್ಪನವರು ತಮ್ಮ ಕೆಲಸ ಏನಿದ್ದರೂ ಬಿಟ್ಟು ಅವರ ಯೋಗ-ಕ್ಷೇಮ ವಿಚಾರಿಸುವ ಕೆಲಸಕ್ಕೆ ನಿಲ್ಲುವರು. ಅದಕ್ಕೆ ತೊಡಗಿದಾಗ ಅವರು ಸಂಸಾರದ ಚಿಂತೆ ಮಾಡುವುದಿರಲಿ, ತಮ್ಮ ನಿದ್ರೆ ನೀರಡಿಕೆಯ ಚಿಂತೆಯನ್ನೂ ಮಾಡುತ್ತಿರಲಿಲ್ಲ.

ಸ್ಥಳದವರಾದಂರತೂ ಸರಿಯೆ; ಪರಸ್ಥಳದವರು ಬಂದರೆ, ಅವರಿಗೆ ಊಟ ಉಪಚಾರ ಎಲ್ಲವೂ ಅವರ ಮನೆಯಲ್ಲೇ ಆಗಬೇಕು.

'ಈ ಮನೆ ನನ್ನದಲ್ಲ, ದೇವಿಯದು. ಎಲ್ಲರೂ ಆಕೆಯ ಮಕ್ಕಳು ಆದ್ದರಿಂದ ತಾಯಿ ಮನೆಗೆ ಬಂದವರು ಊಟೋಪಚಾರಕ್ಕೆ ಅಲ್ಲಲ್ಲಿ ಎಡತಾಕಬೇಕೇ? ಅದು ಕೂಡದು. ನನ್ನದೆಲ್ಲವೂ ಆಕೆಯದು ಎಂದ ಬಳಿಕ, ತನ್ನ

ಮನೆಯಲ್ಲಿರುವ ದವಸ ಧಾನ್ಯ ಆಕೆಯ ಮಕ್ಕಳ ಹಿತಕ್ಕೆ ತಾನೇ? ನಾನಂ ಆಕೆಯ ಆಳಾದ ಬಳಿಕ ನನ್ನಮಡದಿ, ಮಕ್ಕಳೂ, ಆಕೆಯ ಮಕ್ಕಳ ಆಳುಗಳಂತೆ ಬಂದವರ ಯೋಗಕ್ಷೇಮ ವಿಚಾರಿಸಬೇಕು. ಆ ವಿಷಯದಲ್ಲಿ ಪೊತ್ತುಗೊತ್ತು, ಇದೆ–ಇಲ್ಲ ಎಂದು ವಿಚಾರಿಸುವುದೂ ತಾಯಿಗೆ ಅಪಚಾರ,

—ಎಂಬ ಸಿದ್ಧಾಂತದ ದಾರಿಯಲ್ಲಿ ಅವರ ಬಾಳು ನಡೆದಾಗ, ವೆಂಕಟ ಾಸಪ್ಪನವರು ಆ ಯಾತ್ರೆಯಲ್ಲಿ ಉಪವಾಸ–ವನವಾಸ ಏನು ಬಂದರೂ ದನಗುನಗುತ್ತಾ ಅನುಭವಿಸಲು ಸಿದ್ಧರಾಗಿದ್ದರು.

ಅವರಾಡಿದುದೇ ವೇದವಾಕ್ಯವೆಂದು ನಂಬಿದ ರಂಗಮ್ಮನಿಗೆ ಅವರ ಆ ರೀತಿ ಇರುವುದೂ ಹಿತವಾಗಿತ್ತು.

ಆದರೆ ಆ ಗಂಡ ಹೆಂಡಿರ ಔದಾರ್ಯವನ್ನು, ಅರ್ಪಣ ಭಾವವನ್ನು ಭರಿಸಬಲ್ಲಷ್ಟು ಬಲವಾಗಿರಲಿಲ್ಲ, ಆ ಸಂಸಾರದ ಆರ್ಥಿಕ ಚಪ್ಪರ.

ವೆಂಕಟದಾಸಪ್ಪನವರೇನೋ ಯಾರೂ ತಮ್ಮ ಬಳಿಗೆ ಬರಬೇಕು ಎಂದು ಬಯಸುತ್ತಿರಲಿಲ್ಲ. ಆದರೆ ಅವರಿಂದ ತಮ್ಮ ಕಷ್ಟ ನಿವಾರಣೆಯಾಗುತ್ತ ದೆಂದು ನಂಬಿದ ಜನ, ಯಾರ ಆಹ್ವಾನಕ್ಕೂ ಕಾಯದೆ ಹಿಂಡು ಹಿಂಡಾಗಿ ಅವರ ಮನೆಯ ಬಾಗಿಲಿಗೆ ಬರುತ್ತಿತ್ತು. ಹಾಗೆ ಬರುವವರೂ ಬರಿಗೈಯಲ್ಲಿ ಬರುತ್ತಿರಲಿಲ್ಲ. ಅರಮನೆ, ಗುರುಮನೆ, ದೇವಾಯತನಗಳಿಗೆ ಯಾರಾದರೂ ಬರಿಗೈಯಲ್ಲಿ ಬರುವುದುಂಟೆ? ಹಿಟ್ಟೋ ಸೊಪ್ಪೋ–ಏನೋ ತಮಗೆ ದೇವರು ಕೊಟ್ಟದ್ದನ್ನು ತರುತ್ತಿದ್ದರು. ಆದರೆ ಅವರು ದೇವೀಕೆರೆಯನ್ನು ಬಿಟ್ಟು ಹೋಗುವುದರೊಳಗಾಗಿ, ಅವರು ತಂದದ್ದರೊಂದಿಗೆ ಮನೆಯಲ್ಲಿ ಇದ್ದುದ್ದು ಕರಗಿ ಹೋಗುತ್ತಿತ್ತು. ಬಂದವರು ಉಂಡು ಹೋಗಿದ್ದರೆ, ಯಾರೂ ಅಷ್ಟು ಚಿಂತಿಸಬೇಕಾಗಿರಲಿಲ್ಲ. ವೆಂಕಟದಾಸಪ್ಪನವರ ಅತಿಥಿ ಸತ್ಕಾರ ಬರೀ ಅನ್ನ ಸಂತರ್ಪಣೆಯಲ್ಲೇ ಮುಕ್ತಾಯವಾಗಿದ್ದರೆ, ದೇವೀಕೆರೆಯ ಜನ ತಮ್ಮಿಂದ ಆದಷ್ಟು ನೆರವು ನೀಡಲು ಸಿದ್ಧರಾಗಿದ್ದರು. ಆದರೆ ಯಾರಾದರೂ ಬಡವರು ಬಂದಾ.., ವೆಂಕಟದಾಸಪ್ಪನವರು ಅವರನ್ನು ಅವರು ಇದ್ದಷ್ಟು ದಿನ ಇಟ್ಟು ಕೊಂಡು ಊಟ ಉಪಚಾರ ಮಾಡಿ ಕಳಿಸುತ್ತಿದ್ದುದೇ ಅಲ್ಲದೆ, ಅದರೊಂದಿಗೆ ಅವರ ಮೈಮೇಲೆ ಗಟ್ಟಿ ಬಟ್ಟೆ ಇಲ್ಲದಿದ್ದರೆ, ತಮಗೆ ಮರು ದಿನ ಉಡುಗೆ

ಪಂಚೆ ಇದೆಯೋ ಇಲ್ಲವೋ, ರಂಗಮ್ಮನಿಗೆ ಸೀರೆ ಇದೆಯೋ ಇಲ್ಲವೋ ಎಂಬುದನ್ನೂ ಯೋಚಿಸದೆ, ಕೈಗೆ ಸಿಕ್ಕ ಬಟ್ಟೆಯನ್ನು ಅವರಿಗೆ ಉಡಿಸಿ ಕಳಿಸುತ್ತಿದ್ದರು.

ಅವರ ಈ ವಿಚಿತ್ರ ಅತಿಥಿ ಸತ್ಕಾರ ರೀತಿಯಿಂದಾಗಿ ಅವರ ಮನೆಯಲ್ಲಿ ಬಹು ಬೇಗ ಬಡತನದ ಕರಾಳ ಮುದ್ರೆ ಮೂಡಿತು.

ಆ ಗಂಡ ಹೆಂಡಿರಿಬ್ಬರಿಗೂ ಆ ಬಡತನವೂ ಹಿತವಾಗಿತ್ತು. ಮನೆಯಲ್ಲಿ ಆ ಗಂಡ ಹೆಂಡಿರಿರಲಿ, ಸುಖವಾಗಿ ಉಂಡುಟ್ಟು ನಲಿಯಬೇಕಾದ ವಯಸ್ಸಿನ ಮಕ್ಕಳೂ ಹೊತ್ತುಗೊತ್ತಿಗೆ ಊಟವಿಲ್ಲದೆ, ಉಟ್ಟುಕೊಳ್ಳಲು ಒಪ್ಪವಾದ ಬಟ್ಟೆ ಇಲ್ಲದೆ, ಕೈಗೆ ಸಿಕ್ಕ ಚಿಂದಿ ಕೋರಿ ಉಟ್ಟು ತಮ್ಮ ಮನೆಯಲ್ಲೂ ಪರದೇಶಿಗಳಂತೆ ಅಲೆಯುವುದನ್ನು ಕಂಡು, ಲಕ್ಷ್ಮೀದೇವಮ್ಮನ ಹೃದಯಕ್ಕೆ ಕೊಳ್ಳಿ ಇಟ್ಟಂತಾಗುತ್ತಿತ್ತು. ತನ್ನ ಮೊಮ್ಮಕ್ಕಳ ಆ ದುಸ್ಥಿತಿಯನ್ನು ನೋಡಿ ಸಹಿಸಲಾರದೆ ಆಕೆ ಒಮ್ಮೆ ಮಗನ ಮೇಲೆ, ಒಮ್ಮೆ ಸೊಸೆಯ ಮೇಲೆ ಮತ್ತೊಮ್ಮೆ ಇದೆಲ್ಲವನ್ನೂ ಬದುಕಿದ್ದು ನೋಡುವ ದುರವಸ್ಥೆಯನ್ನು ತಮಗೆ ತಂದಿಟ್ಟ ವಿಧಿಯ ಮೇಲೆ, ಮಗುದೊಮ್ಮೆ ತನ್ನ ಮಗನನ್ನು ಹುಚ್ಚು ಹಾದಿಯಲ್ಲಿ ನಡೆಸುತ್ತಿರುವ ಅಮ್ಮನವರ ಮೇಲೆ ರೇಗುವಳು. ಆದರೆ ಅದು ಮಗನ ಮೇಲಾಗಲಿ, ಸೊಸೆಯ ಮೇಲಾಗಲಿ ಏನೂ ಪರಿಣಾಮ ಮಾಡದ್ದನ್ನು ಕಂಡು ತನ್ನನ್ನು ತಾನು ಶಪಿಸಿಕೊಂಡು ಸುಮ್ಮನಾಗುತ್ತಿದ್ದಳು.

ವೆಂಕಟದಾಸಪ್ಪನವರ ಸಂಸಾರಸ್ಥಿತಿಯನ್ನು ಕಂಡು ಲಕ್ಷ್ಮೀದೇವಮ್ಮ ಪಡುತ್ತಿದ್ದ ಪರಿತಾಪವನ್ನೇ, ಊರಿನಲ್ಲಿದ್ದ ಅವರ ಹಿತೈಷಿಗಳೂ ಪಡುತ್ತಿದ್ದರು ಆದರೆ ಯಾರೇನು ಹಿತವಾದ ಹೇಳಿದರೂ ವೆಂಕಟದಾಸಪ್ಪನವರು ಅದನ್ನು ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲವಾದುದರಿಂದ ಏನು ಹೇಳಿದರೂ, ನಕ್ಕು ಸುಮ್ಮನಾಗುತ್ತಿದ್ದುದರಿಂದ, ಯಾರೇನು ಮಾಡುವುದಕ್ಕೂ ಸಾಧ್ಯವಾಗದೆ, ಮೂಗುಬ್ಬಸಪಟ್ಟು ಸುಮ್ಮನಾಗುತ್ತಿದ್ದರು.

ಈ ಪರಿಸ್ಥಿತಿ ಒಂದು ದಿನ ತೀರಾ ಪ್ರಕೋಪಕ್ಕೆ ಹೋಯಿತು.

ಒಂದುದಿನ ವೆಂಕಟಗಿರಿ ಜೋಯಿಸರ ಹೆಂಡತಿ ಲಲಿತಮ್ಮ, ವೆಂಕಟದಾಸಪ್ಪನವರ ಮನೆಯಹಿತ್ತಲಿನಲ್ಲಿದ್ದ ಸಿಹಿನೀರು ಭಾವಿಯಿಂದ ತನ್ನ ಮನೆಗೆ

ನೀರು ಸೇದಿಕೊಂಡು ಹೋಗಲೆಂದು ಬಂದವಳು, ರಂಗಮ್ಮನನ್ನು ಮಾತಾಡಿಸಿ ಹೋಗಲೆಂದು ಮೂರು ನಾಲ್ಕು ಬಾರಿ ಕೂಗಿದರೂ ಆ ಕರೆಗೆ ರಂಗಮ್ಮ ಉತ್ತರ ಕೊಡಲಿಲ್ಲ. ಅದನ್ನು ಕಂಡು ಲಲಿತಮ್ಮ ಹಿತ್ತಲಿನಲ್ಲಿ ಆಟ ಆಡುತ್ತಿದ್ದ ರಂಗಮ್ಮನ ಎರಡನೆಯ ಮಗನನ್ನು—

'ನಿಮ್ಮಮ್ಮ ಮನೇಲಿ ಇಲ್ವೇನೊ?'

—ಎಂದು ಕೇಳಿದಳು.

'ಇದಾಳೆ'.

—ಎಂದು ಆ ಮಗು ಉತ್ತರ ಕೊಟ್ಟಿತು.

'ಎಲ್ಲಿ?'

'ಅಡಿಗೇಮನೇಲಿದಾಳೆ.'

ಮಗುವಿನ ಮಾತುಕೇಳಿ ಲಲಿತಮ್ಮನಿಗೆ ಆಶ್ಚರ್ಯವಾಯಿತು. 'ಮನೆಯಲ್ಲಿದ್ದುಕೊಂಡೂ, ತಾನಿಷ್ಟು ಕರೆದರೂ ರಂಗಮ್ಮ ಏಕೆ ಓ ಅನ್ನಲಿಲ್ಲ. ಮೈಯಲ್ಲಿ ಚೆನ್ನಾಗಿಲ್ಲದೆ, ಮಾತಾಡಲೂ ಆಗದೆ ಮಲಗಿದಾಳೆಯೋ' ಏನೊ ಅನಿಸಿ, ಮನಸ್ಸಿಗೆ ಕಳವಳವಾಗಿ, ಏನೋ ಎಂತೋ ವಿಚಾರಿಸುವುದಕ್ಕೆಂದು, ಕೈಯಲ್ಲಿದ್ದ ನೀರು ತುಂಬಿದ ಕೊಡವನ್ನು ಹಿತ್ತಲಿನಲ್ಲಿಯೇ ಇಟ್ಟು, ಅಡಿಗೆಯ ಮನೆಗೆ ಹೋದಳು. ಅಡಿಗೆಯ ಮನೆಯಲ್ಲಿ ತನ್ನ ಕಣ್ಣಿಗೆ ಬಿದ್ದ ದೃಶ್ಯವನ್ನು ಕಂಡು ಲಲಿತಮ್ಮನಿಗೆ ಹೊಟ್ಟೆಯಲ್ಲಿ ಕೆಂಡ ಸುರಿದಂತಾಯಿತು.

ರಂಗಮ್ಮ ಉಟ್ಟ ಸೀರೆಯನ್ನು ಅರ್ಧ ಬಿಚ್ಚಿಕೊಂಡು ಬಿಚ್ಚಿದ ಭಾಗದಲ್ಲಿ ಹರಿದು ಹೋದುದನ್ನು ತೇಪೆ ಹಾಕುತ್ತ ಕುಳಿತಿದ್ದಳು. ಹೊಲಿಗೆ ಹಾಕಲು ತಲೆ ತಗ್ಗಿಸಿದ ರಂಗಮ್ಮನ ಕಣ್ಣಿನಿಂದ, ಒಂದೊಂದಾಗಿ ಕಣ್ಣೀರಿನ ದಪ್ಪ ಬಿಂದು ಉರುಳುತ್ತಿತ್ತು.

'ಅಯ್ಯೋ ಇದೇನೇ ರಂಗೂ, ಉಟ್ಟ ಸೀರೇನೇ ಬಿಚ್ಚಿಕೊಂಡು ತೇಪೆ ಹಾಕ್ತಾ ಇದೀಯಲ್ಲೇ? ಇದೇನು ಅವಸ್ಥೆ?'

—ಎಂದಳು ಲಲಿತಮ್ಮ.

ಆಕೆಯ ಪ್ರಶ್ನೆಗೆ ರಂಗಮ್ಮ ಏನೂ ಉತ್ತರ ಕೊಡಲಿಲ್ಲ. ಸುಮ್ಮನೆ

ಮೊಳಕಾಲಲ್ಲಿ ಮುಖ ಮುಚ್ಚಿಕೊಂಡು ಕುಳಿತಳು. ರಂಗಮ್ಮ ಬಾಯಿಬಿಟ್ಟು ಹೇಳಲಾಗದ 'ಬೇರೆಸೀರೆಯಿಲ್ಲ' ಎಂಬ ವಿಷಯವನ್ನು ಆಕೆಯ ಸ್ಥಿತಿಯೇಹೇಳಿತು. ಅದನ್ನು ಕಂಡು ಲಲಿತಮ್ಮನಿಗೆ ಮೈಮೇಲೆ ಎಚ್ಚರ ತಪ್ಪುವಷ್ಟು ಸಿಟ್ಟು ಬಂತು.

ಆದೇನು ಕೇಡುಗಾಲಕ್ಕೆ ಗಂಡ-ಹೆಂಡಿರು ನಿಮಗೆಂತ ಬುದ್ಧಿ ಬಂದಿದೆಯೋ ನಾನು ಬೇರೆ ಕಾಣೆ. ಇದು ನೋಡಿ ನೋಡಿ ಹೊಟ್ಟೆ ಉರುಕೊಳ್ಳೋದು ನಮಗೆ ಬಂದಿದೆ. ...'

—ಎಂದುಕೊಂಡು ದುಮುದುಮಿಸುತ್ತಲೇ, ಬೇರೇನೂ ಮಾತಾಡದೆ, ಹಿತ್ತಲಿಗೆ ಹೋಗಿ, ತುಂಬಿದ ಕೊಡವನ್ನು ಸೊಂಟದ ಮೇಲೆ ಕುಕ್ಕಿಕೊಂಡು ತನ್ನ ಮನೆಗೆ ಹಿಂತಿರುಗಿ, ಕೊಡವನ್ನು ಅಡಿಗೆಯ ಮನೆಯಲ್ಲಿ ಇಡಲೂ ವ್ಯವಧಾನವಿಲ್ಲದವಳಂತೆ, ನಡುಮನೆಯಲ್ಲೇ ಕುಕ್ಕಿ, ತನ್ನಸೀರೆಗಳಿದ್ದ ಪೆಟ್ಟಿಗೆಯ ಬಾಗಿಲು ತೆರೆದು ಹುಡುಕಲಾರಂಭಿಸಿದಳು.

ನಡುಮನೆಯಲ್ಲೇ ಏನೋ ಓದಿಕೊಳ್ಳುತ್ತಾ ಕುಳಿತಿದ್ದ ವೆಂಕಟಗಿರಿ ಜೋಯಿಸರು, ಹೆಂಡತಿಯ ಈ ವಿಚಿತ್ರಾವಸ್ಥೆಯನ್ನು ಕಂಡು ಚಕಿತರಾಗಿ—

'ಏನೇ—ಇದೇನಿದು? ಏನು ಹುಡುಕ್ತಾ ಇದೀಯ?'

—ಎಂದು ಕೇಳಿದರು.

'ಹುಡುಕೋದೇನು—ನನ್ನ ಮೊಳಕಾಲ್ಮುರು ಸೀರೆ ಎಲ್ಲಿಟ್ಟಿದೀನಿಂತ ನೋಡ್ತಾ ಇದೀನಿ!'

'ಅದ್ಯಾಕೆ ಇದ್ದಕ್ಕಿದ್ದ ಹಾಗೆ ಅದರ ಜ್ಞಾಪಕ ಬಂತು. ಈಗದನ್ನು ಉಟ್ಟುಕೋಬೇಕೇನು?'

'ಊಹೂ.'

'ಮತ್ತೆ?'

'ರಂಗೂಗೆ ತಗೊಂಡು ಹೋಗಿ ಕೊಟ್ಟು ಬರ್‍ತೀನಿ. ಗಂಡ ಎನ್ನಿಸಿಕೊಂಡ ಧರ್ಮರಾಯ ಹೆಂಡತಿಗೆ ಉಟ್ಟುಕೊಳ್ಳಲಿಕ್ಕೆ ಎರಡು ಗಟ್ಟಿ ಕೋರೀನೂ ಇಲ್ಲದಹಾಗೆ ಮಾಡಿ ಮೆರೀತಾ ಇದಾನೆ. ಆ ಮಕ್ಕಳತಾಯಿ ಊರಿಗೆಲ್ಲಾ ಧರ್ಮಮಾಡಿ, ಉಟ್ಟಸೀರೆಗೇ, ಕಣ್ಣೀರಿಟ್ಟುಕೊಂಡು ತೇಪೆ ಹಾಕ್ತ ಇದ್ರೆ ಈ ಊರು ಉರಿದುಹೋಗುತ್ತೆ.'

—ದುಮುದುಮುಸುತ್ತಲೇ ಹೇಳಿದಳು ಲಲಿತಮ್ಮ.

'ಆಹ! ಹೌದೇ? ಸ್ಥಿತಿ ಇಲ್ಲಿಗೆ ಬಂತೆ?'

—ಚಕಿತರಾಗಿ ಕೇಳಿದರು ವೆಂಕಟಗಿರಿ ಜೋಯಿಸರು.

'ನೀವೆಲ್ಲಾ ಹೀಗೇ ಹೇಳಿದ್ದಕ್ಕೆಲ್ಲಾ' 'ಹಾ, ಹೂ' ಅಂದ್ಕೊಂಡು ಕೂತಿರಿ. ಆ ಮಹಾರಾಯ ಮನೆಭಾವಣೇನೂ ಬಿಚ್ಚಿಸಿ, ಇದ್ದ ಗಳ ಹಗ್ಗ ಎಲ್ಲಾ ದಾನ-ಮಾಡಿ, ಮರದ ಕೆಳಗೆ ಸಂಸಾರ ಹೂಡ್ತಾನೆ. ದೊಡ್ಡೋರೂಂತ ಅನ್ನಿ-ಸ್ಕೊಂಡಿರೋರು ನೀವಾದ್ರೂ ವಿವೇಕ ಹೇಳಬಾರದೆ? ಎಲ್ಲಾದಕ್ಕೂ ಬಿದ್ದು ಹೊಡಕೊಳ್ಳೋದನ್ನ ಆ ಹಾಳು ಭಗವಂತ ನಮ್ಮಂಥ ಹೆಂಗಸರ ಹಣೇಲೇ ಬರದಿದಾನೆ. ಅದೇನು ಅವನಿಗೂ ಹೆಂಗಸರೂಂದರೆ ಅಷ್ಟು ಹೊಟ್ಟೇ ಉರೀನೋ'.

—ಸಿಟ್ಟು ಕಂಬನಿಯಾಗಿ ಕರಗಿ, ಹೇಳಿದಳು ಲಲಿತಮ್ಮ.

'ಹೂ, ನೀನು ಯಾವ ಸೀರೆ ಬೇಕೋ ತಗೊಂಡು ಹೋಗಿ ರಂಗೂಗೆ ಕೊಟ್ಟುಬಾ. ದಾಸಣ್ಣನ್ನ ನಾನು ವಿಚಾರಿಸಿಕೋತೀನಿ.'

—ಎಂದು ಕೈಲಿದ್ದ ಪುಸ್ತಕವನ್ನು ಒಂದು ಮೂಲೆಗೆಸೆದು, ಮೈಮೇಲೆ ಉತ್ತರೀಯವನ್ನೂ ಹಾಕಿಕೊಳ್ಳದೆ ವೆಂಕಟದಾಸಪ್ಪನವರ ಮನೆಯ ಕಡೆ ನಡೆದರು.

೩

'ದಾಸಣ್ಣಾ...ಏ...ದಾಸಣ್ಣಾ'

—ಎಂದು ಮನೆಯಬಾಗಿಲಿನಲ್ಲಿ ಏರುಧ್ವನಿಯಲ್ಲಿ ಕರೆದ ಜೋಯಿಸರ ಧ್ವನಿಯನ್ನು ಕೇಳಿ, ಮನೆಯೊಳಗಿದ್ದ ವೆಂಕಟದಾಸಪ್ಪನವರು ಹೊರಗೆ ಬಂದು—

'ಏನು ಜೋಯಿಸರೇ ಒಳಗೆ ಬನ್ನಿ'

—ಎಂದು ಕರೆದರು.

'ಒಳಗೂ ಬರೋಲ್ಲ, ಹೊರಗೂ ಇರೋಲ್ಲ; ನಿನ್ನ ಹಾಳು ಬುದ್ಧಿ ನೀನು ಬದಲಾಯಿಸ್ದೆ ಹೋದ್ರೆ, ಇನ್ಮೇಲೆ ನಿನ್ನ ಮನೆ ಹೊಸಲೂ ಮೆಟ್ಟೋದಿಲ್ಲ.

—ಕಣ್ಣು ಕೆಂಪಗೆ ಮಾಡಿಕೊಂಡು ಬಿರುಸಾದ ಧ್ವನಿಯಲ್ಲಿ ಹೇಳಿದರು ವೆಂಕಟಗಿರಿಜೋಯಿಸರು.

'ಆ ಶಪಥ ಎಲ್ಲಾ ಆಮೇಲಾಗಲಿ. ಮೊದಲು—ಈಗ್ಯಾಕೆ ನನ್ನ ಮೇಲೆ ಸಿಟ್ಟಾಗಿದೀರೋ ಹೇಳಿ. ನಾನೇನೂ ಈಗ ಅಂಥ ಮಾಡಬಾರದ್ದು ಮಾಡಿದೆ?'

—ವೆಂಕಟಗಿರಿಜೋಯಿಸರ ಒರಟು ಮಾತಿನಿಂದ ನೊಂದು ಕೇಳಿದರು ವೆಂಕಟದಾಸಪ್ಪ.

'ಮಾಡೋದೇನು ಬಂತು? ಮನೇನ ಸ್ಮಶಾನ ಮಾಡಿ, ಹೆಂಡಿರು ಮಕ್ಕಳನ್ನ ಬೀದಿ ಭಿಕಾರಿಗಳನ್ನು ಮಾಡಿ, ಏನೂ ತಿಳೀದವನ ಹಾಗೆ 'ನಾನೇನ್ಮಾಡ್ದೆ?' ಅಂತ ಕೇಳ್‌ತ್ತಯಲ್ಲಾ? ಹಾಗೆ ಕೇಳೋಕೆ ನಾಚಿಕೆ ಆಗೋಲ್ವೆ?'

—ವೆಂಕಟದಾಸಪ್ಪನವರ ಪ್ರಶ್ನೆಯಿಂದ ಮತ್ತಷ್ಟೂ ಸಿಟ್ಟು ಏರಿ ಕೇಳಿದರು ವೆಂಕಟಗಿರಿಜೋಯಿಸರು.

ಆ ಸಿಟ್ಟಿನ ಪ್ರಶ್ನೆಗೆ ಏನು ಉತ್ತರ ಕೊಡಲೂ ವೆಂಕಟದಾಸಪ್ಪನವರಿಗೆ ತೋಚಲಿಲ್ಲ. ಒಂದು ಗಳಿಗೆ ಸುಮ್ಮನಿದ್ದು 'ಅವರು ಇಷ್ಟು ಸಿಟ್ಟಾಗುವಂಥ ಕೆಲಸ ನಾನೇನು ಮಾಡಿದೆ?' ಎಂದು ತಮ್ಮನ್ನೇ ತಾವು ಕೇಳಿಕೊಂಡರು ಎಷ್ಟೇಷ್ಟು ಯೋಚಿಸಿದರೂ ಅವರಿಗೆ ಏನೂ ಕಾರಣ ಹೊಳೆಯುಲಿಲ್ಲ.

'ಜೋಯಿಸರೇ—ನೀವ್ಯಾಕೆ ನನ್ನ ಮೇಲೆ ಇಷ್ಟು ಸಿಟ್ಟಾಗಿದೀರೋ—ಎಷ್ಟು ಯೋಚಿಸಿದರೂ ನನಗಂತೂ ಕಾರಣ ತಿಳಿಯೋಲ್ಲ. ನಾನೇನು ತಪ್ಪು ಮಾಡಿದೆ ನೀವೇ ಹೇಳಿ. ತಪ್ಪು ಮಾಡಿದ್ದರೆ ಆಗತ್ಯವಾಗಿ ತಿದ್ದಿಕೋತೀನಿ,

ಪಸುಮಗುವಿನಂಥ ಮುಗ್ಧತೆಯಿಂದ ಅವರು ಆಡಿದ ಮಾತನ್ನು ಕೇಳಿ. ಆ ಮುಗ್ಧತೆ ಅಭಿನಯವಲ್ಲವೆಂಬುದನ್ನು ಬಲ್ಲ ವೆಂಕಟಗಿರಿಜೋಯಿಸರಿಗೆ, ತಮ್ಮ ಸಿಟ್ಟಿಗಾಗಿ ಪಶ್ಚಾತ್ತಾಪವಾಯಿತು. ಆ ಪಶ್ಚಾತ್ತಾಪದಲ್ಲಿ, ಆದುವರೆಗೂ ನಿಂತಿದ್ದವರು, ಹಾಗೇ ಜಗಲಿಯ ಮೇಲೆ ಕುಳಿತು—

'ಈಗ ಮಾಡಿದ್ದು ಬಿಟ್ಟಿದ್ದು ಎಲ್ಲಾ ಆಮೇಲಾಗಲಿ. ಮೊದಲು ನೀನ್ಯಾವತ್ತು ಸಂಸಾರಿ ಆಗ್ತೀಯಾಂತ ಹೇಳು?'

—ಎಂದು ಕೇಳಿದರು.

'ಈಗ ನಾನು ಸಂಸಾರಿ ಅಲ್ದೆ ಸನ್ಯಾಸಿ ಆಗಿದೇನೆಯೇ ಜೋಯಿಸರೇ?'

—ತಾವೂ ಇದಿರು ಬದಿಯ ಜಗಲಿಯ ಮೇಲೆ ಕುಳಿತು ಮಾರು ಪ್ರಶ್ನೆ ಮಾಡಿದರು.

'ಸನ್ಯಾಸಿ ಅಲ್ಲ, ಅವರಪ್ಪ! 'ಊರ ದನ ಕಾದು ಬಡವಾದ ದೊಡ್ಡ ಬೋರೇಗೌಡ' ಅನ್ನೋ ಹಾಗೆ ಮಾಡಿಕೊಂಡಿದೀಯಲ್ಲಾ ಸಂಸಾರಾನಾ—ಇದಕ್ಕೇನು ಅಳಬೇಕೋ ನಗಬೇಕೋ?'

'ಅಂಥಾದ್ದು—ನಾನೇನು ಮಾಡಿದೆ?'

'ಏನು ಮಾಡಿಲ್ಲ ಅದು ಹೇಳು? ದಾನ, ಧರ್ಮ ಮಾಡಬೇಕಾದದ್ದು ಎಲ್ಲಾ ವಿಹಿತವೇ; ಬ್ರಾಹ್ಮಣನಾಗಿ ಹುಟ್ಟಿದೋನು ಮಾಡಬೇಕಾದ್ದೇ? ಆದರೆ ಅದರಲ್ಲಿ ವಿವೇಕ ಬೇಕೋ ಬೇಡವೋ? ಅದರಲ್ಲೂ ಸಂಸಾರಿಯಾದೋನು, ತನ್ನ ಕೈ ಎಷ್ಟುದ್ದ ಇದೆ ಅಂತ ನೋಡಿ ಚಾಚಬೇಕೋ ಬೇಡವೋ? ಅದು ಬಿಟ್ಟು ದೇವರು ಧರ್ಮ ಅಂತ ಕೈಹಿಡಿದ ಹೆಂಡಿರು ಮಕ್ಕಳನ್ನು ಕಾಡುಪಾಲು ಮಾಡಿದರೆ, ಯಾವ ದೇವರು ಮೆಚ್ತಾನೆ? ಸಂಸಾರಿ ಏನು ಮಾಡಿದರೂ 'ಇವತ್ತು, ಹೀಗೆ ಮಾಡಿದರೆ ನಾಳೆ ಏನಾದೀತು' ಅಂತ ಆಲೋಚನೆ ಮಾಡಬೇಕು. ಆಕಾಶಕ್ಕೆ ಚಳಿ ಅಂತ ಕಂಬಳಿ ಹೊದಿಸೋದು ನನಗೆ, ನಿನಗೆ ಸಾಧ್ಯವೇ?'

'ಆ ಶಕ್ತಿ ನನ್ನಂಥ ಹುಲು ಮಾನವನಿಗೆಲ್ಲಿಬಂತು ಜೋಯಿಸರೇ? ಕೊಡೋ ಉಪ್ಪು ಸೊಪ್ಪನ್ನೂ ಧಾರಾಳವಾಗಿ ಕೊಡೋ ಯೋಗ್ಯತೆಯೂ ನಮಗಿಲ್ಲ. ಅಲ್ಲದೆ ಕೊಡೋಕೆ ನಮ್ಮ ಹತ್ತಿರ ಏನಿದೆ?'

'ನಿನ್ನ ಮಾತು ಕೇಳಿದರೆ ನನಗೊಂದು ಕಥೆ ಜ್ಞಾಪಕಕ್ಕೆ ಬರುತ್ತೆ ದಾಸಣ್ಣ!...'

'ಯಾವುದು?'

'ಒಂದು ಸಲ ಒಬ್ಬನು, ಲಕ್ಷಣವಾಗಿ ಬಟ್ಟೆಬರೆ ಹಾಕಿಕೊಂಡು ಹೋಗುತ್ತ ಇದ್ದನಂತೆ. ಆಗ ಅವನೆದುರಿಗೆ ಇನ್ನೊಬ್ಬ ಬಂದ. ಬಂದೋನು ಪೂರಾ ಬೆತ್ತಲೆಯಾಗಿದ್ದ. ಅದನ್ನು ಕಂಡು ಈತ 'ಅಯ್ಯೋ ಪಾಪ. ಇಷ್ಟು ಚಳಿ; ಅದರ ಮೇಲೆ ನೂರಾರು ಜನ ಓಡಾಡೋ ಬೀದಿ. ಇಂಥ ಬೀದೀಲಿ ನೀನು ಬೆತ್ತಲೆ ತಿರುಗೋದು ಶುದ್ಧ ಅನ್ಯಾಯ. ಹೀಗಿರಬಾರದು. ಇಗೋ– ಇದನ್ನು ಹಾಕಿಕೋ' ಅಂದು , ತನ್ನ ಮೈಮೇಲಿದ್ದದ್ದನ್ನೆಲ್ಲಾ ತೆಗೆದು. ಬೆತ್ತಲೆ–ಯವನಿಗೆ ತೊಡಿಸಿ, ಅವನಿಗೆ ಹೇಳಿದ ಬುದ್ಧಿವಾದ ತನಗೂ ಅನ್ವಯಿಸುತ್ತೆ ಅನ್ನೋದನ್ನ ಮರೆತು ತಾನು ಬೀದೀಲಿ ಬೆತ್ತಲೆ ಹೋದನಂತೆ. ಹಾಗೇ ಆಗಿದೆ ನಿನ್ನ ಸಂಸಾರ ಸ್ಥಿತಿ. ದಾನ ಮಾಡೋವಾಗ–ನಮ್ಮ ಮರ್ಯಾದೆ ಮುಚ್ಚಿಕೊಳ್ಳೋಕೆ ಎಷ್ಟು ಬೇಕೋ ಅಷ್ಟನ್ನೂ ಇಟ್ಟುಕೊಳ್ಳದೆ ದಾನ ಮಾಡಿದರೆ, ಅದನ್ನು ದಾನ ಅನ್ನೋಲ್ಲಅವಿವೇಕ ಅನ್ತಾರೆ. ನೀನು ಸನ್ಯಾಸೀನೂ ಅಲ್ಲ,' ಓಡೊಕ್ಕಲೂ ಅಲ್ಲ; ಸಂಸಾರಿ. ನಿನಗಷ್ಟು ಪ್ರಜ್ಞೆ ಇರಬೇಕೊ ಬೇಡವೋ?'

'ನೀವು ಹೇಳಿದ್ದೆಲ್ಲಾ ಸರಿ, ಜೋಯಿಸರೇ. ನನ್ನದನ್ನು ನಾನು ದಾನ ಮಾಡೋವಾಗ ನೀವು ಹೇಳೋ ವಿವೇಚನೆ ಎಲ್ಲಾ ಇರಬೇಕು. ಸರಿಯೇ? ಆದರೆ ಈಗ ದಾನ ಮಾಡೋಕೆ ನನ ಹತ್ತಿರ ಏನಿದೆ?'

'ನಿನ್ನ ಹತ್ತಿರ ಏನೂ ಇಲ್ಲ; ಅಲ್ವೇ? ಹಾಗಾದ್ರೇನು ಕಂಡೋರ ಮನೆ ಗಂಟು ಹೊಡೆದು ಈ ವಿಚಿತ್ರ ದಾನ 'ಧರ್ಮ ಮಾಡ್ತಾ ಇದೀಯಾ?'

—ಕೊಂಚ ಕಾವೇರಿ ಕೇಳಿದರು ಜೋಯಿಸರು.

'ಅಷ್ಟಲ್ಲದೆ–ಭೂಮಿತಾಯಿ ಬೆಳೆದ ಹೂವನ್ನ ಅಮ್ಮನೋರ ತಲೆ ಮೇಲಿಟ್ಟ ಮಾತ್ರಕ್ಕೆ ಆ ಹೂವು ನನ್ನದಾಯಿತೇ ಜೋಯಿಸರೇ? ನಮ್ಮ ಹಣೆ ಬರಹ ಎಲ್ಲಾ ಇಷ್ಟೇ: 'ಕೆರೆಯ ನೀರನು, ಕೆರೆಗೆ ಚೆಲ್ಲಿ ವರನ ಪಡೆಯುವರಂತೆ

ಕಾಣೆರೋ!' ಎಲ್ಲವೂ ಆಕೆಯದೇ ಜೋಯಿಸರೇ, ಎಲ್ಲವೂ ಆಕೆಯ ಇಚ್ಛೆ ಎಲ್ಲೋ ಬೆಳೆದ ಹೂವನ್ನ ನನ್ನ ಕೈಲಿ ಪೂಜೆ ಮಾಡಿಸಿಕೊಳ್ಳಬೇಕು ಅಂತ ಇಷ್ಟವಾದರೆ, ತಾನೆ ನನ್ನ ಕೈಲಿ ತಂದಿಡ್ತಾಳೆ. ಇನ್ನು ಯಾರಿಗೋ ಏನಾದ್ರೂ ಕೊಡೋದಿದ್ದು, ನನ್ನ ಮೂಲಕ ಅದು ಸಲ್ಲಲಿ ಅಂತ ಅನಿಸಿದರೆ, ಆ ವಸ್ತುನ ನನ್ನ ಮನೇಲಿಟ್ಟು, ಅದು ಯಾರಿಗೆ ಸಲ್ಲಬೇಕೋ ಅವನನ್ನು ಇಲ್ಲಿಗೆ ಕಳಿಸ್ತಾಳೆ. ಇವರಲ್ಲಿ ನನ್ನ ದೊಡ್ಡಸ್ತಿಕೆ ಏನು ಬಂತು ಜೋಯಿಸರೇ? ಹಾಗೂ ಇವರಲ್ಲಿ ನಾನು, ನನ್ನ ಲೋಭದಿಂದ 'ಹೇರು ಯಾರಿಗಾದ್ರೂ, ರವೆಯಷ್ಟಾದರೂ ನನಗಿರಲಿ' ಅಂತ ನನ್ನದಲ್ಲದ್ದಕ್ಕೆ ಆಸೆಪಟ್ಟರೆ ತಾಯಿ ಸುಮ್ಮನಿರ್ತಾಳೆಯೇ ಜೋಯಿಸರೇ—ನಾನು ಉಳಿಸಿಕೊಂಡಿದ್ದರ ಜೊತೆಗೆ ಇದ್ದದ್ದನ್ನೂ, ಒದ್ದು ಕಿತ್ತುಕೋತಾಳೆ. ಅದು ಗೊತ್ತಿದ್ದೂ ನಾನು ಮೋಸ ಮಾಡಲಿಕ್ಕೆ ಹೋಗಲೇ?'

—ಕಕ್ಕುಲತೆಯಿಂದ ಹೇಳಿದರು ವೆಂಕಟದಾಸಪ್ಪನವರು.

'ಅಂತೂ ಹಾಗಾದ್ರೆ ನಿನ್ನ ಸಂಸಾರ ಹೀಗೇ ಇರಬೇಕೂನ್ನೂ?...'

—ವೆಂಕಟದಾಸಪ್ಪನವರ ಮಾತಿಗೆ ಉತ್ತರ ಹೇಳಲಾಗದೆ ನಿರಾಸೆಯಿಂದ ಕೇಳಿದರು ವೆಂಕಟಗಿರಿ ಜೋಯಿಸರು.

'ಹೀಗಿರಬೇಕು, ಹಾಗಿರಬೇಕು ಅಂತಹೇಳೋಕೆನಾನು ಯಾರು ಜೋಯಿಸರೇ. ಕಡಲೆಲ್ಲಾ ಒಬ್ಬರದಾದರೆ, ಅದರಲ್ಲಿ ಹುಟ್ಟಿದ ಒಂದು ಅಲೆ ಮಾತ್ರ ಬೇರೆಯೋರದು ಆಗೋದು ಸಾಧ್ಯವೇ? ಈ ಜಗತ್ತೆಲ್ಲಾ ಆಕೆಯ ಸಂಸಾರ. ಅದರಲ್ಲಿ ನನ್ನದು ಅನ್ನೋ ಸಂಸಾರವೂ ಒಂದು. ಇದು ಹ್ಯಾಗಿರಬೇಕು ಅಂತ ಆಕೆ ಇಚ್ಛೆ ಇದೆಯೋ ಹಾಗಾಗುತ್ತೆ? 'ತೇನಾವಿನಾ ತೃಣಮಪಿ ನಚಲತಿ 'ಅನ್ನೋ ಮಾತು ಕೇಳಿಯೂ ಕೂಡಾ, ನಾನು ಬಾಲ ಸುಟ್ಟುಕೊಂಡ ಬೆಕ್ಕಿನ ಹಾಗೆ 'ಹಾಗಾಯ್ತು, ಹೀಗಾಗ್ಲಿಲ್ಲ' ಅಂತ ಎಗರಾಡಿದರೆ, ನೋಡಿದೋರು ನನ್ನ ಅವಿವೇಕ ಕಂಡು ನಗೋದಿಲ್ಲವೇ? ನನಗಿಂತ ನೀವು ಹಿರಿಯರು, ತಿಳಿದೋರು. ನೀವೇ ಹೇಳಿ'.

'ಅದೆಲ್ಲಾ ಹೇಗಾದ್ರಾಗ್ಲಿ ದಾಸಣ್ಣ. ನಿನ್ನ ಹೆಂಡತಿ ಉಟ್ಟುಕೊಳ್ಳೋಕೆ ಸೀರೆ ಇಲ್ದೆ. ಕೋರಿ ಉಟ್ಟುಕೊಂಡ್ರೆ ಜನ ನಗೋದಿಲ್ಲವೇ?

'ಜನ ನಕ್ಕರೆ ನಗಲಿ ಜೋಯಿಸರೇ. ಆ ತಾಯಿಗಿಂತ ಜನವೇನೂ ದೊಡ್ಡದಲ್ಲ. ಜನ ನಗುತ್ತಾರೆ ಅಂತ ಹೆದರಿ, ಆಕೆ ಕೈಲಿ 'ಅವಿವೇಕಿ!' ಅಂತೆ

ಅನ್ನೋ ಕೆಲಸಮಾತ್ರ ನಾನು ಮಾಡೊಲ್ಲ. ನಾನು ದಿನಾಗ್ಲೂ ಆಕೇನ ಬೇಡೋದು ಅಷ್ಟೆ: 'ಏನಾದ್ರಾಗಲಿ, ಅಂಥ ಅವಿವೇಕ ಮಾತ್ರ ಕೊಡಬೇಡ' ಅಂತ.'

ವೆಂಕಟದಾಸಪ್ಪನವರು ಆ ಮಾತನ್ನು ಹೇಳಿದ ಬಳಿಕ, ಆ ಮಾತಿಗೆ ಬೇರೇನೂ ಉತ್ತರ ಹೇಳುವುದು ಸಾಧ್ಯವಾಗದೆ, ಜೋಯಿಸರು, ಅಸಹಾಯ ಕತೆಯ ನಿಟ್ಟುಸಿರು ಬಿಟ್ಟು—

'ಸರಿ ನಿನ್ನಿಷ್ಟ. ನಿನ್ನಂಥೋರಿಗೆ ಯಾರೇನು ಹೇಳೋಕೆ ಸಾಧ್ಯ? ಏನಾದ್ರೂ ಮಾಡಿಕೋ'.

—ಎಂದು ಹೇಳಿ ಎದ್ದು ಹೋದರು.

'ನನ್ನಿಷ್ಟ–ಅಂಥದೂ ಒಂದಿದೆಯೇ?' ಹೂಂ. ಈಗ ಹೀಗೆ ಪರೀಕ್ಷೆ ಮಾಡ್ತಾ ಇದೀಯಾ ತಾಯಿ, ಮಾಡು, ಮಾಡು, ಏನೇನು ಮಾಡಿ, ಯಾರ ಯಾರ ಕೈಲಿ ಏಷ್ಟೆಷ್ಟು ನನ್ನನ್ನು ಅನ್ನಿಸಬೇಕೂಂತ ನಿನಗೆ ಆಸೆ ಇದೆಯೋ-ಅದು ತೀರಿ ಹೋಗಲಿ. ಅದೇನೇನು ಆಟ ಆಡ್ತೀಯೋ ಆಡು; ನಾನೂ ನೋಡ್ತಾ ಇರ್ತೀನಿ.'

—ಎಂದು ತಮಗೆ ತಾವೇ ಹೇಳಿಕೊಂಡು ನಕ್ಕರು ವೆಂಕಟದಾಸಪ್ಪ.

## ೪

ತಮ್ಮ ಜೀವನದಲ್ಲಿ ವೆಂಕಟದಾಸಪ್ಪನವರು ಅವಲಂಬಿಸಿದ ಈ ದೃಷ್ಟಿಯಿಂದಾಗಿ, ಅವರ ಸಂಸಾರಕ್ಕೆ ಎಷ್ಟೇ ಕಷ್ಟ ನಿಷ್ಠೂರವಾದರೂ, ಅದರಿಂದ ಜನಕ್ಕೆ ಮಾತ್ರ ಅನುಕೂಲವಾಯಿತು. ದಿನದಿನಕ್ಕೆ ಅವರ ಮಾತಿನಲ್ಲಿ ಸಿದ್ಧಿ ಶಕ್ತಿ ಬೆಳೆಯುತ್ತಾ ಬಂದು, ದಿನದಿನಕ್ಕೆ ಜನ ಬಂದುಹೋಗುವುದು ಹೆಚ್ಚಾಯಿತು. 'ದಾಸಣ್ಣನೋರ ಕೈಯಿಂದ ಒಂದು ಉದ್ಧರಣೆ ತೀರ್ಥ ಬಿದ್ದರೆ, ಯಮ ಕೂಡಾ ಹೆದರಿಕೊಂಡು ಹೋಗ್ತಾನೆ' ಎಂಬ ಮಾತು, ಜನಗಳ ಬಾಯಲ್ಲಿ ಸಾಮಾನ್ಯವಾಗಿ, ವೆಂಕಟದಾಸಪ್ಪನವರ ಮನೆಯಲ್ಲಿ ಪ್ರತಿದಿನವೂ ಯಾರಾದರೂ ಹೊರಗಿನವರು ಒಬ್ಬರೋ ಇಬ್ಬರೋ ಇರುವುದು ಸಾಮಾನ್ಯವಾಯಿತು. ಇದರಿಂದ ವೆಂಕಟದಾಸಪ್ಪನವರ ಸಂಸಾರ ಪರಿಸ್ಥಿತಿಗಾಗುತ್ತಿದ್ದ ಧಕ್ಕೆಯನ್ನು ನೋಡಲಾರದೆ, ಶಾನುಭೋಗ ಶ್ರೀನಿವಾಸರಾಯ ಎಷ್ಟು ಪರಿಹಾರವಾದರೆ ಅಷ್ಟಾಗಲಿ ಎಂದು ಶತಪ್ರಯತ್ನ ಪಟ್ಟು, ಅದುವರೆಗೂ ತನ್ನ ಅಧೀನದಲ್ಲಿದ್ದ ಛತ್ರದ ಪಾರುಪತ್ತೇಗಾರಿಕೆಯನ್ನು ವೆಂಕಟದಾಸಪ್ಪನವರಿಗೆ ತಗಲು ಹಾಕಿದ.

ಉಳಿದವರಾಗಿದ್ದರೆ, ಆ ಛತ್ರದ ಪಾರುಪತ್ತೇಗಾರಿಕೆಯಿಂದ ಕಂಡ ಹಾಗೆ ಮೂರಾದರೆ, ಕಾಣದ ಹಾಗೆ ಆರು' ಅಂತ ಗಿಟ್ಟಿಸಿಕೊಳ್ಳಲು ಅವಕಾಶವಿತ್ತು. ಆದರೆ, ವೆಂಕಟದಾಸಪ್ಪನವರಿಗೆ, ಆ ಕೆಲಸ ವಹಿಸಿಕೊಂಡುದರಿಂದ ಅಷ್ಟಿಷ್ಟು ದುಡಿತ ಹೆಚ್ಚಿತೇ ವಿನಾ ಹೆಚ್ಚಿನ ಅನುಕೂಲವೇನೂ ಆಗಲಿಲ್ಲ. ಆದರೆ ವೆಂಕಟದಾಸಪ್ಪನವರು ಮಾತ್ರ ತಮಗೆ ದುಡಿತ ಹೆಚ್ಚಿತು ಎಂದು ಕೊರಗಲಿಲ್ಲ. ಅದಕ್ಕೆ ಪ್ರತಿಯಾಗಿ—

'ತಾಯಿ, ಆಕೆಯ ಮಕ್ಕಳ ಸೇವೆ ಮಾಡೋಕೆ ಇದೂ ಒಂದು ಅವಕಾಶ ಕಲ್ಪಿಸಿಕೊಟ್ಟಳು'

—ಎಂದು ಸಂತೋಷಪಟ್ಟುಕೊಂಡರು.

ಅವರ ಸಂತೋಷದಿಂದ ಅವರಿಗೆ ಹೀಗಾದರೂ ಅನುಕೂಲವಾಗಲಿ ಎಂದುಕೊಂಡವರಿಗೆ ಮಾತ್ರ ಸಂತೋಷವಾಗಲಿಲ್ಲ. ಇವರಿಗೆ ಏನು ಮಾಡಂ

ವುದು ಎಂಬ ಅವರ ಚಿಂತೆ ತೀರಲಿಲ್ಲ.

ಉಳಿದೆಲ್ಲರಿಗಿಂತಲೂ ಈ ವಿಷಯದಲ್ಲಿ ಹೆಚ್ಚು ಚಿಂತಿಸುತ್ತಿದ್ದವನು, ವೆಂಕಟದಾಸಪ್ಪನವರ ಪಟ್ಟ ಶಿಷ್ಯನಾದ ಗಿರಿಯಮ್ಮನ ಹಳ್ಳಿಯ ಬುಡನ ಸಾಬಿ.

ವೆಂಕಟದಾಸಪ್ಪನವರು, ಬುಡನ ಸಾಬಿಯ ಪ್ರಾಣಕ್ಕಿಂತಲೂ ಪ್ರಿಯವಾದ ಕುದುರೆ 'ಟೀಪು' ವಿನ ಪ್ರಾಣ ಉಳಿಸಿದಂದಿನಿಂದ ಬುಡನ ಸಾಬಿಯ ದೃಷ್ಟಿಯಲ್ಲಿ ವೆಂಕಟದಾಸಪ್ಪನವರು 'ಖುದಾ ಪರವರ್ದಿಗಾರ್' ನ ಅವತಾರವಾಗಿದ್ದರು.* ಕಂಟ್ರಾಕ್ಟ ವೃತ್ತಿಯಿಂದ ಬೇಕಾದಷ್ಟು ಹಣ ಗಳಿಸಿದ ಬುಡನ ಸಾಬಿ ವೆಂಕಟದಾಸಪ್ಪನವರು ಬಯಸಿದ್ದರೆ, ಅವರ ಮನೆಯ ನೆಲ, ಛಾವಣಿ ಎರಡನ್ನೂ ಬೆಳ್ಳಿಯ ತಗಡಿನಿಂದ ಮುಚ್ಚಲು ಸಿದ್ಧನಾಗಿದ್ದ. ಆದರೆ ಅವರು ಮಾತ್ರ ಅವನಿಂದ ಕುರುಡು ಕವಡೆಯನ್ನು ಸ್ವೀಕರಿಸಲು ಸಿದ್ಧರಾಗಿರಲಿಲ್ಲ. ಹತ್ತಾರು ಬಾರಿ, ವೆಂಕಟದಾಸಪ್ಪನವರಿಗೆ, ಏನಾದರೊಂದು ರೀತಿಯಲ್ಲಿ ಹಣಸಿಗುವಂತೆ ಮಾಡಬೇಕು ಎಂದು ಯತ್ನಿಸಿ ವಿಫಲನಾಗಿದ್ದರೂ ಬುಡನ ಸಾಬಿಗೆ, ಎಂದಾದರೊಂದು, ಅವರ ಮನೆ ಇರುವಷ್ಟು ದಿನವೂ ನಿಲ್ಲಬಲ್ಲಂಥ ಏನಾದರೊಂದು ಸೇವೆಯನ್ನು ಅವರಿಗೆ ಸಲ್ಲಿಸಬೇಕು ಎಂಬ ಬಯಕೆ ಮಾತ್ರ ಹೋಗಿರಲಿಲ್ಲ.

ಆ ದೃಷ್ಟಿಯಿಂದ ಅವನು ಯೋಚಿಸಿದಾಗ ಅವನ ಕಣ್ಣಿಗೆ ಬೀಳುತ್ತಿದ್ದವನು, ವೆಂಕಟದಾಸಪ್ಪನವರ ಹಿರಿಯಮಗ ರಾಮಚಂದ್ರ.

ಎಂಟು–ಒಂಭತ್ತು ವರ್ಷ ವಯಸ್ಸಿನ ರಾಮಚಂದ್ರನನ್ನು ಕಂಡರೆ ಸ್ವಂತ ಮಕ್ಕಳಿಲ್ಲದ ಬುಡನಸಾಬಿಗೆ ಪಂಚಪ್ರಾಣ. ಯಾವಾಗ ವೆಂಕಟದಾಸಪ್ಪನವರ ಮನೆಗೆ ಬಂದರೂ ರಾಮಚಂದ್ರನಿಗೆಂದು ಏನಾದರೂ ಹಣ್ಣೋ, ತಿಂಡಿಯನ್ನೋ ತರದೆ ಬರುತ್ತಿರಲಿಲ್ಲ. ನೋಡುವುದಕ್ಕೆ ಲಕ್ಷಣವಾಗಿ ಸುಟಿಯಾಗಿ ಮಾತನಾಡುತ್ತಿದ್ದ ಆ ಹುಡುಗನಕೈಲಿ ಗಂಟೆಗಟ್ಟಲೆ ಹರಟೆ ಹೊಡೆಯುತ್ತಿದ್ದ. ತನ್ನ ಸಾರೋಟಿನಲ್ಲಿ ಅವನನ್ನು ಕೂಡಿಸಿಕೊಂಡು ಸುತ್ತಾಡಿಸಿಕೊಂಡು ಬರುತ್ತಿದ್ದ.

---

*ಟೀಪುವಿನ ಪ್ರಾಣದಾನ ಪ್ರಸಂಗ 'ಮೊದಲ ಸೋಟ' ದಲ್ಲಿ ಸವಿವರವಾಗಿ ಚಿತ್ರಿತವಾಗಿದೆ.

ತನ್ನ ವಿಷಯದಲ್ಲಿ ಇಷ್ಟು ಆಕ್ಕರೆಯನ್ನು ತೋರುತ್ತಿದ್ದ ಬುಡನ ಸಾಬಿಯ ವಿಷಯದಲ್ಲಿ ರಾಮಚಂದ್ರನೂ ಅಷ್ಟೇ ಪ್ರೇಮವನ್ನಿಟ್ಟಿದ್ದ. ಬುಡನ್ ಸಾಬಿಯ ಧ್ವನಿಕೇಳುತ್ತಿದ್ದ ಹಾಗೇ ತಲೆಬಾಗಿಲಿಗೆ ಓಡಿ 'ಮಾವಾ' ಎಂದು ಎಳೆಯ ಮಗುವಿನಹಾಗೆ ಅವನ ಕುತ್ತಿಗೆಗೆ ಜೋತು ಬೀಳುತ್ತಿದ್ದ; ಊಟ ತಿಂಡಿಯನ್ನೂ ಮರೆತು ಅವನೊಂದಿಗೆ ಹರಟೆ ಹೊಡೆಯುತ್ತ ಕುಳಿತು ಕೊಳ್ಳುತ್ತಿದ್ದ.

ಅವರಿಬ್ಬರಲ್ಲಿ ಅಷ್ಟು ಸ್ನೇಹ ಬೆಳದಂದಿನಿಂದ ಬುಡನಸಾಬಿಯ ಮನಸ್ಸು ವೆಂಕಟದಾಸಪ್ಪನವರ ಉಳಿದ ಮಕ್ಕಳಿಗಿಂತ ಹೆಚ್ಚಾಗಿ ರಾಮಚಂದ್ರ ನಿಗಾಗಿ ಮರುಗತೊಡಗಿತು.

ತಾನು, ಯಾರನ್ನು ದೇವರ ಅಪರಾವತಾರವೆಂದು ಭಾವಿಸಿದ್ದನೋ, ಅಂಥ ವೆಂಕಟದಾಸಪ್ಪನವರ ಹಿರಿಯಮಗ, ಹೊತ್ತುಗೊತ್ತಿಗೆ ಊಟ ತಿಂಡಿ ಯಿಲ್ಲದೆ ಒಣಕಲು ಕಡ್ಡಿಯಾಗಿ, ಎಂಥದೋ ಚಿಂದಿಯನ್ನುಟ್ಟು ಓಡಾಡು ವುದನ್ನು ನೋಡಿದಾಗ ಬುಡನಸಾಬಿಯ ಕರುಳಿಗೆ ಕೊಳ್ಳಿ ಕೊಟ್ಟಂತಾಗು ತ್ತಿತ್ತು. ಅವನ ಜಾಣತನದ ಮಾತುಗಳನ್ನು ಕೇಳಿದಾಗ 'ಈ ಹುಡುಗ ಹಾರುವರ ವಿದ್ಯೆ ಕಲಿಯೋದು ಬಿಟ್ಟು, ಫರಂಗಿಯೋರ ವಿದ್ಯೆ ಕಲಿತರೆ, ಈ ಸೀಮೇನೆ ಆಳಬಲ್ಲ' ಎನ್ನಿಸುತ್ತಿತ್ತು. ಹಾಗನಿಸಿದಾಗ ಅವನಿಗೆ, ಹೇಗಾದರೂ ವೆಂಕಟ ದಾಸಪ್ಪನವರನ್ನು ಒಪ್ಪಿಸಿ, ಈ ಹುಡುಗನನ್ನು ಚಿತ್ರದುರ್ಗದಲ್ಲಿದ್ದ ಸರಕಾರಿ ಶಾಲೆಗೆ ಸೇರಿಸಿದರೆ, ಬುದ್ಧಿವಂತನಾದ ರಾಮಚಂದ್ರ ಬಹುಬೇಗ ವಿದ್ಯೆ ಕಲಿತು, ಕೈತುಂಬ ದುಡಿಯುವಹಾಗಾಗಿ, ವೆಂಕಟದಾಸಪ್ಪನವರ ವೃದ್ಧಾಪ್ಯದಲ್ಲಿ ಅವರಿಗೆ ನೆರವಾಗುವುದೇ ಅಲ್ಲದೆ, ಇಡೀ ಸಂಸಾರಕ್ಕೆ ಊರುಗೋಲಾಗ ಬಹುದು ಎಂದು ತೋರಿತು.

ಒಂದೆರಡು ಬಾರಿ, ಸೂಕ್ಷ್ಮವಾಗಿ ತನ್ನ ಬಯಕೆಯನ್ನು ವೆಂಕಟದಾಸಪ್ಪ ನವರ ಇದಿರು ಆಡಿತೋರಿಸಿದ. ಆದರೆ ಅವರು ಅಮಾತು ಕಿವಿಯ ಮೇಲೆ ಬೀಳದವರಂತೆ ಇದ್ದು ಬಿಟ್ಟರು. ರಂಗಮ್ಮನ ಎದುರಿಗೆ—

'ಏನು ಬಹೆನ, ನಿನ್ನ ಮಗನ್ನ ಏನು ಮಾಡ್ತಿಯಾ? ನಿನ್ನ ಗಂಡನ ಹಾಗೆ ಫಕೀರನ್ನ ಮಾಡ್ತಿಯೋ, ನಮ್ಮ ಹಾಗೆ ಸಂಸಾರೀನ ಮಾಡ್ತಿಯೋ?'

ಎಂದು ನಗುತ್ತಾ ಕೇಳಿದಾಗ, ಆಕೆ, ರಾಮಚಂದ್ರ ತನ್ನ ಮಗನೇ ಅಲ್ಲವೆಂಬಷ್ಟು ನಿರ್ವಿಕಾರವಾಗಿ—

'ಏನೋ—ನಾನು ಮಾಡೋದೇನಿದೆ? ಅವರ ಹಾಗೆ ರಾಮೂನ ಮಾಡೋದು ನನ್ನಿಂದ ನಿನ್ನಿಂದ ಸಾಧ್ಯವೇ ಬುಡನ ಅಣ್ಣ. ಅದಕ್ಕೆ ಪೂರ್ವ ಜನ್ಮದ ಸುಕೃತ ಪಡೆದುಬರಬೇಕು. ಅವನ ಹಣೇಲಿ ಹೇಗಾಗಬೇಕೂಂತ ಬರೆದಿದೆಯೋ—ಹಾಗಾಗುತ್ತಾನೆ.'

—ಎಂದು ಮಾತನ್ನು ಮುಗಿಸಿದ್ದಳು.

ಆ ಗಂಡ ಹೆಂಡಿರಿಬ್ಬರೂ 'ಕಂತೆಗೆ ತಕ್ಕ ಬೊಂತೆ' ಎಂದು ಎಂದೋ ನಿರ್ಧರಿಸಿದ್ದ ಬುಡನ ಸಾಬಿ, ತನ್ನ ಬಯಕೆಗೆ ಆ ದಂಪತಿಗಳಿಂದ ಎಂದೂ ಪ್ರೋತ್ಸಾಹಸಿಗದೆಂದು ಸುಮ್ಮನಾದ. ಆದರೆ ಆ ಚಪಲ ಅವನ ಹೃದಯ ದಿಂದ ತೊಲಗಿ ಹೋಗಿರಲಿಲ್ಲ. ರಾಮಚಂದ್ರನನ್ನು ನೋಡಿದಾಗಲೆಲ್ಲಾ ಮತ್ತೆ, ಮತ್ತೆ, ಆ ಬಯಕೆ ಅವನ ಹೃದಯದಲ್ಲಿ ಚಿಗುರೊಡೆಯುತ್ತಿತ್ತು.

ಈ ಪರಿಸ್ಥಿತಿಯಲ್ಲಿ ಕೊನೆಗೊಂದು ದಿನ ರಾಮಚಂದ್ರನೇ ಮುಂದೆ ತಾನು ಏನಾಗಬೇಕು ಎಂಬುದನ್ನು ನಿಶ್ಚಯಿಸಿದ. ಆದಾದದ್ದು ಹೀಗೆ,'

'ಪ್ರತಿ ವರ್ಷವೂ ತಾಲ್ಲೂಕಿನ ಬೇರೆ ಬೇರೆ ಭಾಗಗಳಲ್ಲಿ ನಡೆಯುತ್ತಿದ್ದ ಹುಜೂರ್ ಜಮಾಬಂದಿ ಆ ವರ್ಷ ದೇವೀಕೆರೆಯಲ್ಲಿಯೇ ನಡೆಯುವುದೆಂದು ನಿಶ್ಚಯವಾಯಿತು. ಆ ವರ್ಷದ ಹುಜೂರ್ ಜಮಾಬಂದಿಗೆ ಮಾಮೂಲಾಗಿ ಬರುತ್ತಿದ್ದ ಸಬ್‌ಡಿವಿಜನ್ ಅಧಿಕಾರಿಗಳೇ ಅಲ್ಲದೆ, ಖುದ್ದಾಗಿ ಡೆಪ್ಯುಟಿ ಕಮೀಷನರ ಸಾಹೇಬರೇ ಬರುತ್ತಾರೆಂದು ಅಮಲ್ದಾರರು, ಜಮಾಬಂದಿಗೆ ಬೇಕಾದ ಸಿದ್ಧತೆಗಳನ್ನು ಮಾಡುವ ಹೊಣೆಗಾರಿಕೆಯನ್ನು ಹೊತ್ತ ಶಾನಭೋಗ ಶ್ರೀನಿವಾಸರಾಯರಿಗೆ ಎಚ್ಚರ ಕೊಟ್ಟಿದ್ದರಿಂದ, ಅಪರೂಪಕ್ಕೆ ತಮ್ಮಲ್ಲಿ ಸಾಕ್ಷಾತ್ ಡೆಪ್ಯುಟಿಕಮೀಷನರ್ ಸಾಹೇಬರ ನೇತೃತ್ವದಲ್ಲೇ ನಡೆಯುವ ಜಮಾಬಂದಿಗಾಗಿ, ಶ್ರೀನಿವಾಸರಾಯ ಎಲ್ಲರ ಕೈಲೂ ಸೈ ಎನಿಸಿಕೊಳ್ಳಬೇಕೆಂಬ ಹುಮ್ಮಸ್ಸಿನಿಂದ ಅಭೂತಪೂರ್ವವಾದ ಸಿದ್ಧತೆಗಳನ್ನು ಮಾಡತೊಡಗಿದ್ದ.

ಒಂದು ಮದುವೆಯನ್ನು ಸಂಬಂಧಪಟ್ಟವರಾರೂ ಅಸಂತೃಪ್ತರಾಗದಂತೆ ಮಾಡಿ ಮುಗಿಸುವುದು ಅಶ್ವಮೇಧ ಯಾಗ ಮಾಡಿ ಮುಗಿಸಿದಷ್ಟು ಪ್ರಯಾಸದ ಕೆಲಸ ಎಂಬುದನ್ನು, ಆ ಕೆಲಸ ಮಾಡಿ, ಕೈ ಸುಟ್ಟುಕೊಂಡವ—ರೆಲ್ಲರೂ ಬಲ್ಲರು. ಜಮಾಬಂದಿ ಎಂದರೆ, ಅಂಥ ಹತ್ತು ಮದುವೆಯನ್ನು ಮಾಡುವಷ್ಟು ಕಷ್ಟದ ಕೆಲಸ. ಆ ಜಮಾಬಂದಿಗಾಗಿ ಬರುವ ನೂರಾರು ಶಾನುಭೋಗರು, ರೈತರು, ಗುಮಾಸ್ತರು ಅಧಿಕಾರಿಗಳು—ಎಲ್ಲರೂ ಒಪ್ಪುವಂತೆ

ಸಿದ್ಧತೆಗಳನ್ನು ಮಾಡಬೇಕಾದರೆ, ಆ ಕೆಲಸದ ಹೊಣೆಗಾರಿಕೆಯನ್ನು ಹೊತ್ತ ಮನುಷ್ಯ ಹಣ್ಣುಗಾಯಿ ನೀರುಗಾಯಿ ಆಗಿಹೋಗುತ್ತಾನೆ.

ಇಷ್ಟು ಕಷ್ಟದ ಕೆಲಸವನ್ನು ಹೆಗಲಮೇಲೆ ಹೊತ್ತ ಶ್ರೀನಿವಾಸರಾಯ ಎಲ್ಲಕ್ಕೂ ಮೊದಲು ವೆಂಕಟದಾಸಪ್ಪನವರ ಕೈಲಿ ಅಮ್ಮನವರಿಗೆ ಮಂಗಳಾರತಿ ಮಾಡಿಸಿ, ಎಲ್ಲವೂ ನಿಷ್ಕಂಟಕವಾಗಿ, ಶುಭವಾಗಿ ಮುಗಿಯುತ್ತದೆ ಎಂಬ ಆಶ್ವಾಸನೆ ಪಡೆದು, ಹಗುರಾದ ಮನಸ್ಸಿನಿಂದ ಆ ಕೆಲಸ ಕಾರ್ಯಗಳಿಗೆ ಕೈಯಿಟ್ಟಿದ್ದ.

ಶ್ರೀನಿವಾಸರಾಯನೊಂದಿಗೆ ಅಕ್ಕ ಪಕ್ಕದ ಹಳ್ಳಿಗಳ ಶಾನಭೋಗ ಪಟೇಲರೂ, ರೈತರೂ ಸಹಕರಿಸಿದುದರಿಂದ, ಆತನ ಕೆಲಸ ಬಹು ಮಟ್ಟಿಗೆ ಹಗುರವಾಯಿತು. ಇವರೆಲ್ಲರಿಗಿಂತಲೂ ಹೆಚ್ಚಾಗಿ ಬುಡನಸಾಬಿಯೂ ಬಹು ಉತ್ಸಾಹವಾಗಿದ್ದ. 'ಆಪದ್ದಾಗಲಿ, ಯಾರೂ ಇನ್ನು ಹತ್ತು ವರ್ಷ ಆದ್ರೂ ದೇವೀಕೆರೆ ಜಮಾಬಂದೀನ ಮರೀಬಾರದು. ಅಷ್ಟು ಅದ್ದೂರಿಯಾಗಿ ಮಾಡಿ ಬಿಡಬೇಕು' ಎಂದು ಹೇಳಿದ ಬುಡನ ಸಾಬಿ ಅದನ್ನು ಕಾರ್ಯಗತ ಮಾಡಲು ತನಗಿದ್ದ ಧನಬಲ, ಜನ ಬಲವನ್ನು ಸಂಪೂರ್ಣವಾಗಿ ಆ ಕೆಲಸಕ್ಕೆ ತಿರುಗಿಸಿದ್ದ. ಆವನ ರಸ್ತೆಗೆಲಸದ ಕೂಲಿಗಳೆಲ್ಲರೂ ಸೇರಿ ರೈತರಿಂದ ಸಂಗ್ರಹಿಸಿದ ಅಡಕೆಯ ಮರ, ತೆಂಗಿನ ಗರಿ, ಬಾಳೆಯ ಗಿಡಗಳಿಂದ, ಬಹು ವಿಶಾಲವಾದ ಹಸಿರು ಚಪ್ಪರವನ್ನು ಸಿದ್ಧಗೊಳಿಸಿ, ಚಿತ್ರದುರ್ಗದಿಂದ ತಂದ ಬಣ್ಣದ ಕಾಗದದ ಹೂವು, ಕುಚ್ಚುಗಳು, ಬಣ್ಣ ಬಣ್ಣದ ಬಟ್ಟೆಯ ಕಮಾನುಗಳು ಗುಳೂಪುಗಳಿಂದ ಆ ಚಪ್ಪರವನ್ನು ಅಲಂಕರಿಸಿದರು. ಆ ದಿನ ಆಗಮಿಸುವ ಡೆಪ್ಯುಟಿ ಕಮಿಷನರ ಸಾಹೇಬರಿಗೆ ಅರ್ಪಿಸಲೆಂದು ದುರ್ಗದಿಂದ ಆಳ ಹೊರಲಾರದಷ್ಟು ದೊಡ್ಡ ಹಾರ, ಬಗೆ ಬಗೆಯ ಫಲಗಳನ್ನು ತರಿಸುವ ಏರ್ಪಾಟೂ ಆಯಿತು.

ಆ ಚಪ್ಪರವನ್ನು ಕಂಡ ಎಲ್ಲರೂ 'ಇಂದ್ರನ ಆಸ್ಥಾನವೂ ಇದಕ್ಕಿಂತ ಸೊಗಸಾಗಿರಲಾರದು' ಎಂದರೂ, ಬುಡನಸಾಬಿಗೆ, ಆ ಚಪ್ಪರವನ್ನು ವೆಂಕಟ ದಾಸಪ್ಪನವರು ನೋಡಿ ಒಪ್ಪುವವರೆಗೂ ತೃಪ್ತಿ ಇರಲಿಲ್ಲ. 'ಯಾರು ಒಪ್ಪಿದ ರೆಷ್ಟು ಬಿಟ್ಟರೆಷ್ಟು? ದಾಸಣ್ಣ ಬುದ್ಧಿಯೋರು ಒಪ್ಪಿ ಸೈ ಅಂದ್ರೆ, ಖುದಾನೆ ಶಭಾಸ್ ಅಂದಹಾಗಾಗ್ತದೆ' ಎಂದು ವೆಂಕಟದಾಸಪ್ಪನವರನ್ನು ಬಲವಂತ,

ವಾಗಿ ಆ ಚಪ್ಪರಕ್ಕೆ ಕರೆತಂದು, ಅವರು 'ಭೇಷಾಗಿದೆ' ಎಂದದ್ದು ಕೇಳಿ, ತನಗೆ ಸ್ವರ್ಗಾಧಿಪತ್ಯವೇ ದೊರೆತಷ್ಟು ಸಂತುಷ್ಟನಾಗಿದ್ದ.

ಆ ಚಪ್ಪರದ ಸೌಂದರ್ಯವನ್ನು ಕಂಡು ಮೆಚ್ಚಿದ ವೆಂಕಟದಾಸಪ್ಪನವರು—

'ಸಾಹೇಬರೇ, ನೀವು ಹಾಕಿಸಿರೋ ಚಪ್ಪರ ನೋಡೋಕೆ ನಾಲ್ಕು ಕಣ್ಣು ಸಾಲದು. ಇವತ್ತಿದನ್ನು ತೋರಿಸಿ, ನನ್ನ ಕಣ್ಣು ಇದ್ದದ್ದಕ್ಕೆ ಸ್ವಾರ್ಥಕ ಪಡಿಸಿದಿರಿ. ಇನ್ನೊಂದು ಕೆಲಸ ಮಾಡಬೇಕಲ್ಲಾ......'

—ಎಂದರು.

'ಏನು ಹೇಳಿ ದಾಸಣ್ಣ ಬುದ್ಧಿ'

'ಮನುಷ್ಯರ ಉತ್ಸವಕ್ಕೇ ಇಷ್ಟೆಲ್ಲಾ ಮಾಡಿದ್ದೀರಿ. ಇನ್ನು ನೀವು ದೇವರ ಉತ್ಸವಕ್ಕಾದರೆ ಹೇಗೆ ಅಲಂಕಾರ ಮಾಡುತ್ತೀರೊ ನೊಡಬೇಕೊಂತ ನನ್ನ ಕಣ್ಣು ಆತರಿಸುತ್ತ ಇದೆ. ಆ ಆಸೇನ ಯಾವಾಗಲಾದರೂ ಒಂದು ಸಲ ತೀರಿಸಿ ಬಿಡಿ.'

'ಅಷ್ಟೇತಾನೇ, ಅದೇನು ದೊಡ್ಡದು ಬಿಡಿ ಬುದ್ಧಿ. ನೀವೂ ಹೂಂದ್ರೆ ನಾಳೇನೇ ಆಯ್ತು ಅನ್ನಿಸಿ ಬಿಡ್ತೀನಿ.

—ಎಂದ ಬುಡನ್‌ಸಾಬಿ,

'ಆ ಭಾರ ನಮಗೂ ಅಷ್ಟೀರಲಿ ಬುಡನ್‌ಸಾಬಿ. ಈ ಸಲ ನವರಾತ್ರೀಲಿ ಅಮ್ಮನೋರ ಉತ್ಸವಾನ ದೀನ್ ದೀನ್ ಅನ್ನೋಹಾಗೆ ಮಾಡಿಬಿಡೋಣ. ಆದ್ರೆ ಅದಕ್ಕೆ ಮುಂಚೆ ದಾಸಣ್ಣ ನಮಗೊಂದು ಸಣ್ಣ ಕೆಲಸ ಮಾಡಿಕೊಡ ಬೇಕಲ್ಲ.'

—ಎಂದ ಶ್ರೀನಿವಾಸರಾಯನೂ ಆ ಮಾತಿನಲ್ಲಿ ಬೆರೆತು,

'ಏನು? ನನ್ನಿಂದ ಏನಾಗಬೇಕು ?'

—ವೆಂಕಟದಾಸಪ್ಪ ಕೇಳಿದರು.

'ದೊಡ್ಡದೇನೂ ಅಲ್ಲ ದಾಸಣ್ಣ. ಡೆಪ್ಯುಟಿ ಕಮಿಷನರ್ ಸಾಹೇಬರು ಬರ್ತಾರಲ್ಲಾ ಅವರ ಮುಂದೆ ಹಾಡಿಸೋಕೆ ಒಂದು ಸಣ್ಣ ಸ್ವಾಗತ ಪದ್ಯ ಬೇಕಲ್ಲ. ಬರೆದು ಕೊಟ್ಟು ಬಿಡು. ಅದೊಂದು ಇಲ್ಲವಲ್ಲಾ ಅಂತ ಕೊರತೆ ಯಾಗಿದೆ.'

—ಎಂದಾ ಶ್ರೀನಿವಾಸರಾಯ.

‚ಆಗ್ಲಿ –ಅಮ್ಮನೋರ ಅಪ್ಪಣೆಯಾದರೆ ಅದೇನು ದೊಡ್ಡದು ?'

—ಎಂದರು ವೆಂಕಟದಾಸಪ್ಪ.

‚ಅದಕ್ಕೂ ಅಮ್ಮನೋರ ಅಪ್ಪಣೆಯಾಗಬೇಕೇ ? '

—ಶ್ರೀನಿವಾಸರಾಯ ನಗುತ್ತಾ ಕೇಳಿದ.

‚ಮತ್ತೆ–ಬೇಕಾದಾಗ, ಬೇಕಾದದ್ದನ್ನು ಬರೆದು ಕೊಡೋಕೆ ನಾನೇನು ಬೃಹಸ್ಪತಿ ಅಂದುಕೊಂಡ್ಯಾ ?'

‚ಕೂತು ಹತ್ತಿರ, ನಿಂತ ಹತ್ತಿರ ಹಾಡುಕಟ್ಟೀಯ. ನೀನು ಬೃಹಸ್ಪತಿ ಅಲ್ಲಾಂದ್ರೆ–ಮತ್ತೇನು ?'

‚ಬೃಹಸ್ಪತೀನೂ ಅಲ್ಲ, ಭಾರತೀನೂ ಅಲ್ಲ ; ಅಮ್ಮನೋರ ಅನುಗ್ರಹದ ಬಿಸಿಲುಬಿದ್ದಾಗ ಹೊಳೆಯೋ ಬೆಣಚುಕಲ್ಲಿನ ಚೂರು. ಅಷ್ಟೆ. ಹೋಗಲಿ, ಈಗ್ಯಾಕೆ ಆ ಚರ್ಚೆ? ಬರೆಯೊದಕ್ಕೆ ಇನ್ನು ಎರಡು ಮೂರು ದಿನ ಅವಕಾಶ ಇದೆಯಲ್ಲ. ನೋಡೋಣ.'

—ಎಂದು ಆ ಮಾತನ್ನು ಅಲ್ಲಿಗೇ ಮುಗಿಸಿದರು.

ಆ ಮಾತನ್ನು ಅಲ್ಲಿಗೆ ಬಿಟ್ಟರೂ, ಹತ್ತುಜನ ತಮಗೆ ಬೇಕಾದವರ ವಿಶ್ವಾಸಕ್ಕೆ ಕಟ್ಟುಬಿದ್ದು, ಮನಸ್ಸಿಲ್ಲದಿದ್ದರೂ ವೆಂಕಟದಾಸಪ್ಪನವರು ಸ್ವಾಗತ ಗೀತೆಯನ್ನು ಬರೆಯಲೇಬೇಕಾದುದಲ್ಲದೆ ಅದನ್ನು ಹಾಡಲು, ರಾಮಚಂದ್ರನನ್ನು ಕಳಿಸಲೂ ಒಪ್ಪಬೇಕಾಯಿತು. ಇದೆಲ್ಲವನ್ನೂ ಅವರು ನಗುನಗುತ್ತ ಮಾಡಿದರೂ ಅವರ ಮನಸ್ಸಿನೊಳಗೆ ಮಾತ್ರ ಏನೋ ಅಶಾಂತಿಯ ಘಾಟು ಹೊಗೆ ತುಂಬಿತ್ತು.

ಸ್ವಾಗತಗೀತೆಯನ್ನು ರಚಿಸಿದ ದಿನ ವೆಂಕಟದಾಸಪ್ಪನವರ ಹೃದಯದಲ್ಲಿ ಮೂಡಿದ ಅಶಾಂತಿ ದಿನದಿನಕ್ಕೆ ತಗ್ಗದೆ, ದಿನ ಕಳೆದಂತೆ ಹೆಚ್ಚುತ್ತಾ ಹೋಯಿತು. ಆ ಅಶಾಂತಿಯನ್ನು ಪೂಜೆಯಲ್ಲಿ ಮರೆಯಲೆತ್ನಿಸಿದರೆ, ಪೂಜೆಯಿಂದಲೂ ಅವರ ಮನಸ್ಸಿಗೆ ಶಾಂತಿ ಮರಳಲಿಲ್ಲ. ಏನೋ ಒಂದು ಬಗೆಯ ಅಶಾಂತಿ, ಅಶುಭ ಶಂಕೆ ಅವರ ಹೃದಯವನ್ನು ಹೊಕ್ಕು ಕುಟ್ರೆ ಹುಳದಂತೆ ಕಾಡತೊಡಗಿತು. ಸಣ್ಣಗೆ, ಮನಸ್ಸಿನಲ್ಲಿ ಆರಂಭವಾದ ಈ ಅಶಾಂತಿ, ಅಶುಭಶಂಕೆ ಅವರ ಹೃದಯವನ್ನು ಹೊಕ್ಕು ವ್ಯಾಪಿಸಿ, ಜಮಾಬಂದಿಯ ದಿನ, ಊರೆಲ್ಲಾ

ಉತ್ಸಾಹವಾಗಿರುವಾಗ, ವೆಂಕಟದಾಸಪ್ಪನವರ ಮೈ ಮಾತ್ರ ಜ್ವರಬಂದಂತೆ ತಾಪಪಡತೊಡಗಿತು.

ಊರ ಹೊರಗೆ, ಡೆಪ್ಯುಟಿ ಕಮೀಷನರನ್ನು ಸ್ವಾಗತಿಸುವ ಸಲುವಾಗಿ ಕಹಳೆ, ಭೇರಿ, ಡೋಲು ತಮಟೆಗಳು ಮೊರೆಯುತ್ತಿರುವಾಗ, ಊರ ಜನ ವೆಲ್ಲರೂ, ಆ ವೈಭವವನ್ನು ನೋಡಲು ಚಪ್ಪರದ ಬಳಿ ಓಡುತ್ತಿದ್ದಾಗ, ವೆಂಕಟದಾಸಪ್ಪನವರು ಮಾತ್ರ–

'ರಂಗೂ. ಯಾರು ಬಂದರೂ ನನ್ನನ್ನೀಗ ನೋಡಲು ಅವಕಾಶವಿಲ್ಲ ವೆಂದು ಹೇಳಿಬಿಡು.'

—ಎಂದು ಹೇಳಿ ಸ್ನಾನ ಮುಗಿಸಿ, ದೇವರಮನೆ ಸೇರಿಕೊಂಡು ಬಿಟ್ಟರು.

೫

ಕೇವಲ ಸರಕಾರೀ ಕಂದಾಯ ವಸೂಲಾತಿಯ ಲೆಕ್ಕಪತ್ರಗಳ ತನಿಖೆ ಯಾವ ಹುಜೂರು ಜಮಾಬಂದಿಗೂ ತಮಗೂ ಏನೂ ಸಂಬಂಧವಿಲ್ಲದಿದ್ದರೂ, ಉತ್ಸವದ ಒಂದು ದಿನವಾದರೂ ಇದ್ದು ಹೋಗಲೇಬೇಕೆಂಬ ಬಂಡನಸಾಬಿಯ ಒತ್ತಾಯಕ್ಕೆ ಕಟ್ಟುಬಿದ್ದು, ಬಾಲಾಜಿರಾಯರೂ ಆದಿನ ದೇವೀಕೆರೆಗೆ ಬಂದಿದ್ದರು.

ಅಂಥ ಹತ್ತಾರು ಸಮಾರಂಭಗಳನ್ನು ತಾವೇ ನಡೆಸಿದ ಬಾಲಾಜಿ ರಾಯರಿಗೆ, ಆ ಉತ್ಸವದ ವೈಭವದಲ್ಲಿ ವಿಶೇಷವೇನೂ ಕಾಣಲಿಲ್ಲ. ಆದರೆ ಅಲ್ಲಿ ವಿಶೇಷವೆನಿಸಿದ್ದು, ರಾಮಚಂದ್ರನ ಸ್ವಾಗತ ಗೀತಾವಾಚನ.

ನೂರಾರು ಜನ ಕಿಕ್ಕಿರಿದು ತುಂಬಿದ, ಅಂಥ ಸಮಾರಂಭಗಳಲ್ಲಿ ಅಷ್ಟಿಷ್ಟು ಪಳಗಿದ ವಯಸ್ಕರಿಗೂ ಮಾತನಾಡಲು ಕೈಕಾಲು ನಡುಗುವಂಥ ಆ ಸಭೆಯಲ್ಲಿ, ಏಳೆಂಟು ವರ್ಷದ ರಾಮಚಂದ್ರ ಕೊಂಚವೂ ಅಳುಕದೆ, ಬಳುಕದೆ, ಧೃಢಗಂಭೀರ, ಮಧುರಸ್ವರದಲ್ಲಿ ಸ್ವಾಗತಗೀತೆಯನ್ನು ಹಾಡಿ ಎಲ್ಲರನ್ನೂ ಮೆಚ್ಚಿಸಿದ್ದನ್ನು ಕಂಡು, ಬಡಕಲಾದರೂ ಖಳೆಯಾದ ಆತನ ಮುಖವನ್ನು ನೋಡಿ, ಬಾಲಾಜಿರಾಯರಿಗೆ 'ಇದು ಒಳ್ಳೆ ಭವಿಷ್ಯವಿರುವ ಬಿತ್ತು' ಎನಿಸಿತು.

ಎಂತಲೇ ಸಭೆಯ ಕಾರ್ಯಕಲಾಪಗಳೆಲ್ಲವೂ ಮುಗಿದ ಮೇಲೆ ಬಂಡನ ಸಾಬಿಯನ್ನು ಕರೆದು—

'ಸಾಹೇಬರೇ, ಆ ಹುಡುಗ ಯಾವ ಪುಣ್ಯವಂತನ ಮಗ?'

—ಎಂದು ಕೇಳಿದರು.

'ಯಾವ ಹುಡುಗ ಬುದ್ಧಿ?'

'ಅದೇ ಸ್ವಾಗತಗೀತೆ ಹಾಡಿದನಲ್ಲಾ ಆ ಹುಡುಗ'

'ರಾಮಣ್ಣನೇ, ದಾಸಣ್ಣ ಬುದ್ಧಿಯೋರ ಮಗ.'

'ಯಾರು—ದಾಸಣ್ಣ?'

'ನಾನು ನಿಮ್ಮ ಮುಂದೆ ಹೇಳ್ತಾ ಇದ್ನಲಾ ಬುದ್ಧಿ ನಮ್ಮ ಟೀಪೂಗೆ ಪ್ರಾಣ ಉಳಿಸಿದ ಪುಣ್ಯಾತ್ಮರೂಂತ—ಆ ವೆಂಕಟದಾಸಪ್ಪನೋರ ಮಗ'

—ಎಂದು ವಿವರಿಸಿದ ಬುಡನಸಾಬಿ.

'ಹಾಗೇ, ಸರಿಸರಿ. ಅಂಥ ಪುಣ್ಯಾತ್ಮರಿಗಲ್ಲದೆ, ಸಾಮಾನ್ಯರಿಗೆ ಇಂಥ ಮಕ್ಕಳು ಹುಟ್ಟುವುದಿಲ್ಲ.'

'ಹೌದು ಬುದ್ಧಿ, ಹುಡುಗ ಬಹಳ ಚಾಲೂಕಿ, ಏನು ಹೇಳಿಕೊಟ್ರೂ ಜಟ್ನೆ ಕಲಿಯೋ ಬುದ್ಧಿ ಐತೆ. ಆದ್ರೇನ್ಮಾಡೋದು...'

—ಎಂದು ನಿಟ್ಟುಸಿರೆಳೆದ ಬುಡನಸಾಬಿ.

'ಅದ್ಯಾಕೆ ಹಾಗಂತೀಯ?'

'ಮತ್ತೇನೈತೆ—ಇಂಥ ಕಾಡು ಹಳ್ಳೀಲಿ ಒಳ್ಳೆ ಹುಡುಗ್ರಿಗೆ ಕಲಿಯೋಕೆ ಇಸ್ಕೂಲು ಪಸ್ಕೂಲು ಒಂದೂ ಇಲ್ಲ. ಎಲ್ಲಾ ಹಳ್ಳಿ ಅಯ್ನೋರತವ ಅಮರ ಗಿಮರ ಕಲ್ತುಕೊಂಡು, ಹೀಗೆ ಬೆಳೆದೋಗ್ತವೆ.'

'ದಾಸಣ್ಣನೋರು—ನಿನಗಷ್ಟು ಬೇಕಾದೋರಲ್ಲಾ, ಅವರಿಗೆ ಹೇಳಿ ಹುಡುಗನನ್ನು ದುರ್ಗಕ್ಕೆ ಕಳಿಸಬೇಕಾಗಿತ್ತು. ನಮ್ಮ ಮನೇಲಿದ್ದುಕೊಂಡು ಓದ್ತಾ ಇದ್ದ. ನಿನಗಷ್ಟು ಹೇಳಲಿಕ್ಕಾಗಲಿಲ್ವೆ?'

'ದಾಸಣ್ಣನೋರ ವಿಷಯ ನಿಮಗೆ ತಿಳೀದು ಬುದ್ಧಿ.'

'ಏಕೆ?'

ಆ ಪುಣ್ಯಾತ್ಮ ಒಂದು ಥರಾ ಮನುಷ್ಯರು. ಈ ಜಗತ್ತೇ ಅವರಿಗೆ ಬೇಕಿಲ್ಲ. ಮೂರುಹೊತ್ತು ಅವರಾಯ್ತು ಅವರ ಅಯ್ನೋರಾಯ್ತು; ಯಾವದೂ ಕಿವಿಮೇಲೆ ಹಾಕಿಕೊಳ್ಳೋಲ್ಲ.'

'ಏನಾದರೂ ಇಷ್ಟು ಚುರುಕಾಗಿರೋ ಹುಡುಗ ಕಾಡಾಗಿ ಬೆಳೆಯೋಕೆ ಬಿಡಬಾರದು. ನೀನು ಅವರಿಗೆ ಹೇಳೋಹಾಗೆ ಹೇಳಲಿಲ್ಲಾಂತ ಕಾಣುತ್ತೆ. ದಾಸಣ್ಣನೋರು ಇಲ್ಲಿಗೆ ಬಂದಿದಾರೇನು—ನೋಡು, ನಾನೇ ಅವರಿಗೆ ಹೇಳುತ್ತೇನೆ'

—ಎಂದರು ಬಾಲಾಜಿರಾಯರು.

'ಊಹೂ—ಅವರಿಲ್ಲಿಗೆ ಬಂದಿಲ್ಲ.'

'ಏಕೆ?'

'ಏಕೋ–ಯಾರು ಬಲ್ಲರು, ನಾನೂ ಅವ್ರು ಬರ್‍ತಾರೆ ಅಂತ ಆಸೆ ಹಚ್ಕೊಂಡಿದ್ದೆ. ಆದ್ರೆ ಬೆಳಗ್ನಿಂದ ದೇವರಮನೆ ಸೇರ್ಕೊಂಡಿದಾರೆ. ಯಾರು ಹೋದ್ರೂ ಮೊಖಾನೇ ತೋರಿಸಾಕಿಲ್ಲ. ಅವರತ್ತಿರ ಚರ್ಚೆ ಮಾಡೋ ತಾಖತ್ತು ನಮಗಿಲ್ಲ'.

'ಅಷ್ಟು ಸಿಟ್ಟಿನ ಮನುಷ್ಯನೇ ಆತ?'

'ಛೀ ಛೀ, ದಾಸೊಣ್ಣೋರು ಅಂದ್ರೆ ಥೇಟ್ ಜೇನುತುಪ್ಪ. ಅವರು ಪೂಜೆ ಮಾಡೋ ಅಪ್ನೋರು ಬೇರೆ ಅಲ್ಲ ಅವರು, ಬೇರೆ ಅಲ್ಲ'.

'ಮತ್ತೆ ?'

'ಅವರು ನಗ್ತಾ ನಗ್ತಾ 'ಬೇಡಾ' ಅಂದ್ರೂ ಬದಲು ಮಾತಾಡೋಕೆ ಬಾಯಿ ಒಣಗಿ ಹೋಗುತ್ತೆ. ಅವರು ನಗ್ತಾಲೇ ಇದ್ರೂ ಎದುರಿಗೆ ಬೆಂಕಿ ಮುದ್ದೆ ಇದ್ದಂಗಿರ್‍ತದೆ, ಅವರ ಮುಂದೆ ಕೂತಿದ್ರೆ. ನಾನು ಹೇಳಿದ್ರೆ ನೀವು ನಂಬಾಕಿಲ್ಲಾ ಬುದ್ಧಿ. ಕಣ್ಣಾಗೆ ನೋಡಬೇಕು. ಅವರೊಂದು ಮಾತಾಡಿದ್ರೆ, ಖುದಾನೇ ಬಂದು ಮಾತಾಡಿಸ್ದಂಗೆ ಇರ್‍ತದೆ.'

—ಎಂದು ಅಭಿಮಾನದಿಂದ ಹೇಳಿದ ಬುಡನಸಾಬಿ.

'ಸರಿ, ಸರಿ, ನೀನು ಅಷ್ಟು ಹೇಳಬೇಕಾದರೆ ಅವರಲ್ಲಿ ಏನೋ ಶಕ್ತಿ ವಿಶೇಷವಿದ್ದೇ ಇರಬೇಕು. ನಡಿ–ನಾವೇ ಅವರ ಮನೆಗೆ ಹೋಗಿ, ಅವರ ದರ್ಶನ ಮಾಡಿ, ಹಾಗೇ ಅಮ್ಮನವರಿಗೂ ಹಣ್ಣು ಕಾಯಿ ಮಾಡಿಸಿಕೊಂಡು ಬರೋಣ. ಇಲ್ಲಿ ಕೆಲಸ ಎಲ್ಲಾ ಆಯ್ತಲ್ಲ. ಆ ಹುಡುಗನನ್ನು ಕರಿ. ನಮ್ಮ ಜೋತೇಲೇ ಕರಕೊಂಡು ಹೋಗೋಣ.'

—ಎಂದರು ಬಾಲಾಜಿರಾಯರು.

ಒಮ್ಮೆ ಅವರು ಬಂದು ಮಾತಾಡಿಷ ಬಳಿಕ, ಅದಕ್ಕೆ ಪ್ರತಿಯಾಡುವುದು ಸಾಧ್ಯವಿಲ್ಲವೆಂದು ಅರಿತ ಬುಡನಸಾಬಿ, ಶಾನುಭೋಗ ಶ್ರೀನಿವಾಸರಾಯನಿಗೆ, 'ನಮಗಾಗಿ ಯಾರೂ ಊಟಕ್ಕೆ ಕಾಯಬಾರದು. ದೊಡ್ಡ ಖಾವಂದರಿಗೂ ನಮ್ಮ ಸಲಾಂ ಹೇಳಿಬಿಡಿ' ಎಂದು ಹೇಳಿ, ಬಾಲಾಜಿರಾಯರೊಂದಿಗೆ ಹೊರಡಲು ಸಿದ್ಧನಾದ.

ಬಾಲಾಜಿರಾಯರ ಸಾರೋಟಿನಲ್ಲೇ ಎಲ್ಲರೂ ವೆಂಕಟದಾಸಪ್ಪನವರ ಮನೆಯ ಕಡೆ ನಡೆದರು. ಮನೆಗೆ ಹೋಗುವ ದಾರಿಯಲ್ಲಿ, ಉದ್ದಕ್ಕೂ ರಾಮ-

ಚಂದ್ರನೊಂದಿಗೆ ಮಾತಾಡಿಕೊಂಡು ಬಂದ ಬಾಲಾಜಿರಾಯರಿಗೆ, ತಮ್ಮ ಪ್ರಶ್ನೆಗಳಿಗೆ ರಾಮಚಂದ್ರ ಕೊಟ್ಟ ಚುರುಕಾದ ಉತ್ತರವನ್ನು ಕೇಳಿ, ಅವನ ಬಗ್ಗೆ ಮೂಡಿದ್ದ ವಿಶ್ವಾಸ ಮತ್ತಷ್ಟು ಬೆಳೆದು. ಏನಾದರಾಗಲಿ, ಈ ಹುಡುಗ ಅಭಿವೃದ್ಧಿಗೆ ಬರಲು ತಮ್ಮಿಂದಾದುದನ್ನು ಮಾಡಬೇಕೆಂಬ ನಿಶ್ಚಯ ಮಾಡಿದರು.

೬

ಬೆಳಗಿನಿಂದಲೂ ಗಂಡ ಏನೋ ಒಂದು ತರಹ ಇದ್ದುದನ್ನು ಕಂಡು. ತಾನೂ ಮಂಕಾಗಿ ಎತ್ತಲ ಯೋಚನೆಯಲ್ಲೋ ಅಡಿಗೆ ಮಾಡುತ್ತಾ ಕುಳಿತಿದ್ದ ರಂಗಮ್ಮ, ನಡುಮನೆಯೊಳಗೆ ಆಡಿಕೊಳ್ಳುತ್ತಿದ್ದ ಹುಡುಗರು—

'ಕುದ್ರೆ ಗಾಡಿ ಬಂತು, ಕುದ್ರೆ ಗಾಡಿ ಬಂತು.'

—ಎಂದು ಕೂಗಿಕೊಂಡು ಓಡಿದ್ದನ್ನು ಕಂಡು ಯಾರು ಬಂದರೊ ಎಂದು ಯೋಚಿಸುತ್ತಾ, ತಾನೂ ತಲೆಬಾಗಿಲವರೆಗೆ ಹೋಗಿ ನೋಡಿದಳು.

ಹೊರಗೆ ಕುದುರೆ ಸಾರೋಟೇನೋ ನಿಂತಿತ್ತು. ಆದರೆ ಅದು ಆಕೆಗೆ ಪರಿಚಯವಿದ್ದ ಬುಡನಸಾಬಿಯ ಕುದುರೆ ಸಾರೋಟಾಗಿರಲಿಲ್ಲವಾದುದರಿಂದ 'ಇದುಯಾರಿರಬಹುದು' ಎಂದು ಆಕೆ ಯೋಚಿಸುತ್ತಿರುವಾಗಲೇ. ರಾಮಚಂದ್ರ ನೊಂದಿಗೆ ಬುಡನಸಾಬಿಯೂ ಗಾಡಿಯಿಂದ ಕೆಳಗಿಳಿದ. ಅವರ ಹಿಂದೇ ಬಾಲಾಜೀರಾಯರೂ ಇಳಿದರು.

ಹೊಸಬರನ್ನು ಕಂಡ ರಂಗಮ್ಮ ಬಾಗಿಲ ಹಿಂದೆ ಮರೆಯಾಗಿ ನಿಂತಳು.

ರಾಮಚಂದ್ರ, ತಾನು ಸ್ವಾಗತಗೀತೆ ಹಾಡಿದ್ದಕ್ಕಾಗಿ ದೊರೆತ ಹಣ್ಣು ಹಂಪಲನ್ನು ತಂದಿದ್ದ. ಅದನ್ನು ಕಂಡ ಹುಡುಗರು 'ನನಗೆ ತನಗೆ' ಎಂದು ಕೂಗಾಡುತ್ತಿರುವಾಗಲೇ, ಬುಢನಸಾಬಿ ಮನೆಯ ಬಳಿ ಬಂದು—

'ರಂಗಕ್ಕಾ, ದಾಸಣ್ಣ ಬುದ್ಧಿಯೋರು ಮನೇಲಿದಾರಾ?'

—ಎಂದು ಕೇಳಿದ.

'ಇದಾರೆ.'

'ಎಲ್ಲವ್ರೆ? ಇನ್ನೂ ಮಡೀಲಿದಾರಾ?

'ಹೂ ಬೆಳಿಗ್ಗೆ ಕೂತವರು ಇನ್ನೂ ಮೇಲಕ್ಕೇ ಎದ್ದಿಲ್ಲ'

'ಎಬ್ಬಿಸಲಿಕ್ಕಾಗೋಕಿಲ್ವಾ...?'

'ಏನು ಹೇಳಾರೋ ಏನೋ. ಬೆಳಗಿನಿಂದ ಒಂದು ಥರಾ ಇದಾರೆ.

'ಏನಾರ ಅಂದ್ರೆ ಅದು ನನಗಿರಲಿ, ದುರ್ಗದಿಂದ ದಾಸಣ್ಣ ಬುದ್ಧಿಯೋರ್ನ ನೋಡಬೇಕೂಂತ ನಮ್ಮ ಬಾಳಾಜೀರಾವ್ ಧಣಿ ಬಂದಿದಾರೆ. ಈ ಸುದ್ದಿ ಅವರ

ಕಿವಿಮ್ಯಾಲೆ ಹಾಕ್ಬಿಡು'

—ಎಂದ.

ಕಡೆಗೆ ಬುಡನಸಾಬಿ ಅತಿಯಾಗಿ ಬಲವಂತ ಮಾಡಿದ ಮೇಲೆ, ಗಟ್ಟಿಯಾಗಿ 'ಇಲ್ಲ' ಎಂದು ಹೇಳುವುದೂ ಸಾಧ್ಯವಾಗದೆ, ರಂಗಮ್ಮ ರಾಮಚಂದ್ರನಿಗೆ, ಚಾಪೆ ಹಾಸಿ ಬಂದವರನ್ನು ಕೂಡಿಸುವಂತೆ ಹೇಳಿ, ತಾನು ದೇವರ ಮನೆಯ ಕಡೆ ನಡೆದಳು.

ದೇವರ ಮುಂದೆ ಕುಳಿತಿದ್ದ ವೆಂಕಟದಾಸಪ್ಪನವರು ಪೂಜೆಯಲ್ಲಿ ನಿರತರಾಗದೆ, ಕಣ್ಣುಬಿಟ್ಟುಕೊಂಡು ಯೋಚಿಸುತ್ತಾ ಕುಳಿತಿದ್ದುದನ್ನು ಕಂಡು, ಮೃದುವಾಗಿ—

'ಬುಡನಸಾಹೇಬರು ಬಂದಿದಾರೆ...'

—ಎಂದಳು.

ಆ ಮಾತಿಗೆ ವೆಂಕಟದಾಸಪ್ಪನವರು ಏಕೆ, ಏನು ಎಂದೂ ವಿಚಾರಿಸದೆ—

'ಹೂ'

—ಎಂದಷ್ಟೇ ಹೇಳಿ ಸುಮ್ಮನಾದುದನ್ನು ಕಂಡು, ರಂಗಮ್ಮನೇ—

'ಅವರ ಜೊತೇಲಿ, ದುರ್ಗದವರು ಯಾರೋ ಬಾಲಾಜಿರಾಯರಂತೆ—ಅವರೂ ನಿಮ್ಮನ್ನು ನೋಡಲು ಬಂದಿದಾರೆ. ಒಂದು ಗಳಿಗೆ ಹಾಗೆ ಬಂದು ಹೋದರೂ ಸಾಕು ಅಂದರು ಬುಡನಸಾಹೇಬರು.'

—ಎಂದಳು.

'ಸರಿಬಂದವರು ನನಗಾಗಿ ಏಕೆ ಕಾಯಬೇಕು'

—ಎಂದವರೇ ವೆಂಕಟದಾಸಪ್ಪನವರು ಕುಳಿತಿದ್ದ ಹಾಗೇ ದೇವರಿಗೆ ಅಡ್ಡ ಬಿದ್ದು ಮೇಲೆದ್ದು ಹೊರಗೆ ಹೊರಟರು.

ಕೆಂಪು ಮುಗುಟವನ್ನುಟ್ಟು, ಹಣೆಯಲ್ಲಿ ವಿಭೂತಿಯನ್ನು ಧರಿಸಿ, ಭ್ರೂಮಧ್ಯದಲ್ಲಿ ಕುಂಕುಮವನ್ನಿಟ್ಟು, ತಲೆಯ ಕೂದಲನ್ನು ಹಾಗೆಯೇ ಬೆನ್ನ ಮೇಲೆ ಇಳಿಬಿಟ್ಟು, ದೇವರ ಮನೆಯಿಂದ, ನೇರವಾಗಿ ತಮ್ಮನ್ನು ಕಾಣಲು ಬಂದ ವೆಂಕಟದಾಸಪ್ಪನವರನ್ನು ನೋಡಿ ಬಾಲಾಜಿರಾಯರಿಗೂ, ಬುಡನಸಾಬಿ 'ಅವರ ಎದುರಿಗೆ ಕೂತಿದ್ರೆ ಬೆಂಕಿ ಮುದ್ದೆ ಎದುರಿಗೆ ಕೂತ ಹಾಗಿರ್ತದೆ' ಎಂದ ಮಾತು ಸುಳ್ಳಲ್ಲ ಎನಿಸಿತು.

ಬುಡನಸಾಬಿ ಅವರಿಬ್ಬರಿಗೂ ಪರಸ್ಪರ ಪರಿಚಯ ಮಾಡಿಸಿ ಒಬ್ಬರಿಗೊಬ್ಬರು ನಮಸ್ಕಾರ ಹೇಳಿದ ಮೇಲೆ, ಬಾಲಾಜಿರಾಯರೇ—

'ತಾವು ಪೂಜೆ ಮಾಡ್ತಾ ಇದ್ದಿರೀಂತ ಕಾಣುತ್ತೆ, ನಡುವೆ ಬಂದು ತೊಂದರೆ ಕೊಟ್ಟಹಾಗಾಯಿತು.'

—ಎಂದರು.

'ಪೂಜೆಗೆ ಕೊನೆ ಮೊದಲೆಂಬುದಿದೆಯೇ? ಎಷ್ಟು ಮಾಡಿದರೂ ಸಾಲದು. 'ಮಾಡಿದ್ದೆಲ್ಲಾ ಪೂಜೆ ಅಂತ ಒಪ್ಪಿಕೋ' ಅಂತ ಹೇಳಿದ ಮೇಲೆ ಅದಕ್ಕೆ ವಿಘ್ನವೆಲ್ಲಿಂದ ಬಂತು. ಅದರಲ್ಲೂ ತಮ್ಮಂತಹ ದೊಡ್ಡವರು, ಅಷ್ಟು ದೂರದಿಂದ ನೋಡಬೇಕು ಎಂದು ಬಂದಿರುವಾಗ, ತಮ್ಮ ದರ್ಶನವೂ ನಮಗೆ ತಾಯಿಯ ಅನುಗ್ರಹವೇ.'

—ಎಂದರು ವೆಂಕಟದಾಸಪ್ಪ.

ಅವರು ಗಂಭೀರವಾಗಿ ಹೇಳಿದ ಆ ಮಾತನ್ನು ಕೇಳಿ ಬಾಲಾಜಿರಾಯರಿಗೆ, ಈ ಸ್ಥಾನದಲ್ಲಿ ಔಪಚಾರಿಕ ಮಾತುಕತೆಗಳ ಅಗತ್ಯವಿಲ್ಲವೆಂಬುದು ಮನವರಿಕೆಯಾಗಿ—

'ತಾವು ಹಾಗೆ ಹೇಳಿದರೆ ಅದೇ ನಮಗೆ ಆಶೀರ್ವಾದ. ನಮ್ಮ ಬುಡನ ಸಾಹೇಬರು ತಮ್ಮ ವಿಷಯ, ನಮ್ಮಲ್ಲಿಗೆ ಬಂದಾಗಲೆಲ್ಲಾ ಹೇಳುತ್ತಿದ್ದರು. ಅವರು ಹೇಳಿದ್ದನ್ನು ಕೇಳಿ, ನಮಗೂ ಒಮ್ಮೆ ತಮ್ಮ ದರ್ಶನ ಮಾಡಿ, ಅಮ್ಮನವರಿಗೆ ಕಾಣಿಕೆ ಒಪ್ಪಿಸಿ ಹೋಗಬೇಕು ಎಂತ ಬಹು ದಿನಗಳಿಂದಲೂ ಆಸೆ ಇತ್ತು. ಈಶ್ವರಾನುಗ್ರಹದಿಂದ ಈ ದಿನ ತಮ್ಮ ದರ್ಶನವಾಯಿತು. ಅಮ್ಮನವರಿಗೆ ಮಂಗಳಾರತಿ ಮಾಡಿ ಪ್ರಸಾದ ಕೊಟ್ಟರೆ ಕೃತಾರ್ಥನಾಗುತ್ತೇನೆ.'

—ಎಂದರು.

'ನನ್ನ ವಿಷಯದಲ್ಲಿ ತಾವು ಅಷ್ಟು ದೊಡ್ಡ ಮಾತಾಡಬಾರದು. ನಾನು ಅಲ್ಪ. ದೊಡ್ಡವರ ಆಳಿಗೂ, ಮನೆಯವರ ದೊಡ್ಡಸ್ಥಿಕೆಯ ಗಾಳಿ ಬೀಸುವ ಹಾಗೆ, ಅಮ್ಮನವರ ಪೂಜೆ ಮಾಡುವವನು ಅಂತ ನನಗೂ ಜನ ಅಷ್ಟು ಗೌರವ ತೋರಿಸುತ್ತಾರೆ. ಅಷ್ಟು ಬಿಟ್ಟರೆ ನಮ್ಮಲ್ಲಿ ಹೆಚ್ಚಿನದೇನೂ ಇಲ್ಲ. ಮೇಲಾಗಿ, ಬುಡನಸಾಹೇಬರು ನನ್ನ ಸ್ನೇಹಿತರು. ನನ್ನಲ್ಲಿ ಸಾಸಿವೆ ಕಾಳಿನಷ್ಟಿದ್ದರೆ, ಜನಕ್ಕೆ ಕುಂಬಳಕಾಯಿಗಾತ್ರ ಮಾಡಿ ಹೇಳುತ್ತಾರೆ. ಅದಾವುದನ್ನೂ ತಾವು

ನಂಬಬಾರದಾ. ಆಯಿತು–ಬರೀ ಮಾತೇಕೆ? ಮಂಗಳಾರತಿ ಮಾಡಿಕೊಂಡು ಬಂದುಬಿಡುತ್ತೇನೆ.'

—ಎಂದು ವೆಂಕಟದಾಸಪ್ಪನವರು ಮೇಲೆದ್ದರು.

'ಒಂದು ನಿಮಿಷ ನಿಧಾನಿಸಬೇಕು–ಅಮ್ಮನವರಿಗೆ ನಾನು ಕೊಂಚ ಕಾಣಿಕೆ ಅರ್ಪಿಸಬೇಕಾದದ್ದಿದೆ. ಅದನ್ನು ಅಮ್ಮನವರಿಗೆ ಒಪ್ಪಿಸಿಬಿಡಿ. ಒಂದು ಸಣ್ಣ ತಟ್ಟೆ ತರಿಸುತ್ತೀರಾ?'

—ಎಂದು ಕೇಳಿದರು ಬಾಲಾಜಿರಾಯರು.

'ಸರಿಯೇ. ರಂಗೂ...ರಂಗೂ...ಒಂದು ತಟ್ಟೆ ತಂದುಕೊಡು'

—ಎಂದು ವೆಂಕಟದಾಸಪ್ಪನವರು ಹೆಂಡತಿಗೆ ಕೂಗಿ ಹೇಳಿದರು. ಅವರ ಮಾತಿನಂತೆ ರಂಗಮ್ಮ ಹಣ್ಣುಕಾಯಿ ಇಡುವಂಥ ಒಂದು ಹಿತ್ತಾಳೆಯ ತಟ್ಟೆಯನ್ನು ತಂದು, ಅವರ ಬಳಿ ಇಟ್ಟು ಹೋದಳು.

ಬಾಲಾಜಿರಾಯರು ಆ ತಟ್ಟೆಯನ್ನು ತಮ್ಮ ಮುಂದಕ್ಕೆ ಎಳೆದುಕೊಂಡು ತಮ್ಮ ಮುಚ್ಚು ಕಾಲರಿನ ಕೋಟಿನ ಗುಂಡಿಯನ್ನು ಬಿಚ್ಚಿ, ಒಳಗಿನ ಜೇಬಿನಿಂದ ಎರಡು ಥೈಲಿಗಳನ್ನು ಹೊರತೆಗೆದು. ಅವೆರಡರಲ್ಲೂ ಇದ್ದ ರೂಪಾಯಿಗಳನ್ನೂ. ನೂರು ರೂಪಾಯಿ ಮೌಲ್ಯದ ಎರಡು ನೋಟುಗಳನ್ನೂ ತಟ್ಟೆಯಲ್ಲಿಟ್ಟು—

'ಬರುವಾಗ ಹಣ್ಣು ಕಾಯಿ ತರುವುದು ಮರೆತುಹೋಯಿತು. ಇದನ್ನೇ ಒಪ್ಪಿಸಬೇಕು'

—ಎಂದು ವೆಂಕಟದಾಸಪ್ಪನವರಿಗೆ ಹೇಳಿದರು.

ಅದನ್ನು ಕಂಡ ವೆಂಕಟದಾಸಪ್ಪನವರ ಮುಖ ಗಂಭೀರವಾಯಿತು. ಬಾಲಾಜಿರಾಯರು ತಮ್ಮತ್ತ ಸರಿಸಿದ ತಟ್ಟೆಯನ್ನು ಕೈಯಿಂದಲೂ ಮುಟ್ಟದೆ–

'ತಾವು ಇನ್ನೆಲ್ಲಿಗೋ ಹೋಗಬೇಕು ಎಂದುಕೊಂಡು. ದಾರಿ ತಪ್ಪಿ ಇಲ್ಲಿಗೆ ಬಂದಿರುವ ಹಾಗಿದೆ'.

—ಎಂದರು ಕೊಂಚ ಬಿರುಸಾದ ಧ್ವನಿಯಲ್ಲಿ.

'ಏಕೆ?'

—ಚಕಿತರಾಗಿ ಕೇಳಿದರು ಬಾಲಾಜಿರಾಯರು.

'ಪಂತ್ರೆ—ಇಷ್ಟು ಹಣ ಸ್ವೀಕರಿಸುವ ದೇವರು ನಮ್ಮ ಮನೆಯಲ್ಲಿಲ್ಲ. ನಮ್ಮ ತಾಯಿ ಕೇಳುವುದೆಲ್ಲಾ ಒಂದಾಣೆಯ ಕಾಯಿ, ಕರ್ಪೂರ; ಅಷ್ಟೆ.

'ಜಗದ್ಧಾತ್ರಿಗೆ ಈ ಪಣ ಹೆಚ್ಚಿನದೇ? ಇದೇನು ಮಹಾ?'

'ನಿಮಗಿದೇನು 'ಮಹಾ' ಅಲ್ಲ ಆದರೆ ನನ್ನ ತಾಯಿಗೆ ಇದು ಹೆಚ್ಚು; ನಾನು ಹುಟ್ಟಿದಂದಿನಿಂದ ಆಕೆಗೆ ಒಂದು ಹಿಡಿ ಕುಂಕುಮ, ಎರಡು ಹೂವು ಇಷ್ಟುವಿನಾ ಹೆಚ್ಚೇನೂ ಕೊಟ್ಟು ಕಳಿಸಿಲ್ಲ. ಈಗ ಆಕೆಗೆ ಇಷ್ಟು ಹಣ ತೆಗೆದುಕೊಳ್ಳುವುದನ್ನು ಕಲಿಸಿದರೆ, ನಾಳೆಯೂ ಇಷ್ಟೇ ಆಗಬೇಕು ಎಂದು ಕೇಳುತ್ತಾಳೆ. ನಾನು ಬಡವ, ಎಲ್ಲಿಂದ ತರಲಿ. ಆದ್ದರಿಂದ ಇದು ಇಲ್ಲಿಗೆ ಬೇಡ.'

'ಅಮ್ಮನವರಿಗೆ ಒಪ್ಪಿಸಬೇಕು ಎಂದು ಕೊಟ್ಟಿದ್ದನ್ನು ಹಿಂದಕ್ಕೆ ತೆಗೆದು ಕೊಳ್ಳುವುದು ಅಪಚಾರವಾಗುವುದಿಲ್ಲವೇ?'

'ಇರಬಹುದು.'

'ಹಾಗಾದರೆ—?'

'ನಿಮಗಷ್ಟು ಇಷ್ಟ ಇದ್ದರೆ, ಇದನ್ನು ಶಾನುಭೋಗರ ಕೈಗೆ ಕೊಟ್ಟುಬಿಡಿ. ಅವರು ಊರಿನ ಅಮ್ಮನವರಿಗೆ ಏನಾದರೂ ನಗನಾಣ್ಯ ಮಾಡಿಸಿ ಹಾಕುತ್ತಾರೆ.'

—ಎಂದು, ಆ ತಟ್ಟೆಯಲ್ಲಿದ್ದ ಹಣದಲ್ಲಿ, ಒಂದು ರೂಪಾಯಿ ತೆಗೆದು ಕೊಂಡು, ಉಳಿದದ್ದನ್ನು ತಟ್ಟೆಯಲ್ಲಿ ಬಿಟ್ಟು, ಆ ತಟ್ಟೆಯನ್ನು ಬಾಲಾಜಿ ರಾಯರತ್ತ ಜರುಗಿಸಿ, ಮುಂದೇನು ಮಾತಾಡದೆ, ಅವರೂ ಮಾತನಾಡಲು ಅವಕಾಶ ಕೊಡದೆ, ವೆಂಕಟದಾಸಪ್ಪನವರು ಎದ್ದು ಹೋದರು.

ಅದನ್ನು ಕಂಡು ಬಾಲಾಜಿರಾಯರಿಗೆ ಬಾಯಿ ಕಟ್ಟಿಹೋದಂತಾಯಿತು. ಅನಿರೀಕ್ಷಿತವಾಗಿ ಮನೆಬಾಗಿಲಿಗೆ ಇಷ್ಟು ಹಣ ಬಂದಾಗ, ಅದನ್ನು ಕಸ ದಂತೆ ಕಂಡು ತಳ್ಳಿ ಹೋದವರು ಯಾರನ್ನೂ ಅವರು ನೋಡಿರಲಿಲ್ಲ. ಆ ವಿಸ್ಮಯದಲ್ಲಿ—

'ಸಾಹೇಬರೇ, ದೊಡ್ಡ ಸ್ಥಳದಲ್ಲಿ ನನ್ನಿಂದ ಅಪಚಾರವಾಯಿತು.'

—ಎಂದರು ಪಕ್ಕದಲ್ಲಿ ಕುಳಿತ ಬುಡನಸಾಬಿಗೆ.

'ಯಾವತ್ತೂ ಅವರು ಅಷ್ಟೇ. ಅವರು ಕೊಟ್ಟಿದ್ದನ್ನು ತಗೋಳ್ಳೋ ಹಾಗಿದ್ದರೆ, ನಾನೇ ಈ ಮನೇಲಿ ರೂಪಾಯಿ ಮಳೆ ಸುರಿಸಿಬಿಡ್ತಾ ಇದ್ದೆ. ಊಹೂ ಆ ಬುದ್ಧೀನೇ ಇಲ್ಲ. ತಮ್ಮ ಬಡತನಾನೇ ಬಂಗಾರದ ಗಣಿ ಅನ್ನೋ ಹಾಗೆ ಜೋಪಾನ ಮಾಡ್ತಾರೆ ಈ ಗಂಡ ಹೆಂಡಿರು. ಹೋಗಲಿ ಬಿಡಿ ಬುದ್ಧಿ'

—ಎಂದ ಬುಡನಸಾಬಿ.

'ಸರಿ—ಹಾಗಿದ್ದರೆ ಇದನ್ನು ಅವರು ಹೇಳಿದ ಹಾಗೆ ಶಾನುಭೋಗರಿಗೆ ಕೊಟ್ಟುಬಿಡು. ಹೇಗೆಬೇಕೋ ಹಾಗೆ ವಿನಿಯೋಗವಾಗಲಿ.'

—ಎಂದರು ಬಾಲಾಜಿರಾಯರು ತಾವೂ ಆ ಹಣವನ್ನು ಕೈಯಿಂದ ಮುಟ್ಟದೆ. ಅವರು ಸಮಾಧಾನವಾಗಿ ಆಡಿದ ಆ ಮಾತಿನಲ್ಲೂ ತಾವು ಕೊಟ್ಟುದನ್ನು ವೆಂಕಟದಾಸಪ್ಪನವರು ಸ್ವೀಕರಿಸಲಿಲ್ಲವಲ್ಲ ಎಂಬ ಖಿನ್ನತೆಯೂ ಇದ್ದಿತು.

ಅವರಿಬ್ಬರೂ ಹೀಗೆ ಮಾತನಾಡುತ್ತಿರುವಾಗಲೇ, ವೆಂಕಟದಾಸಪ್ಪನವರು, ಮಂಗಳಾರತಿಯನ್ನು ಮುಗಿಸಿ, ಮಂಗಳಾರತಿ ತಟ್ಟೆಯನ್ನು ಹಿಡಿದು ಹೊರಬಂದರು.

ದೇವರ ಮನೆಗೆ ಹೋಗುವಾಗ ಕೊಂಚ ಪ್ರಕ್ಷುಬ್ಧವಾಗಿದ್ದ ಅವರ ಮುಖ ಈಗ ಮತ್ತೆ ಪ್ರಶಾಂತವಾಗಿತ್ತು. ಶಾಂತವಾಗಿಯೇ ಅವರಿಗೆ ಆರತಿ, ತೀರ್ಥ, ಕುಂಕುಮವನ್ನು ಕೊಟ್ಟು—

'ಅಮ್ಮನವರಿಗೆ ನೈವೇದ್ಯ ಅರ್ಪಿಸುವ ಹೊತ್ತಿಗೆ ಸರಿಯಾಗಿ ಬಂದಿದ್ದೀರಿ. ಇಲ್ಲೇ ಊಟ ಮುಗಿಸಿಕೊಂಡು ಹೋಗಬೇಕು.'

—ಎಂದರು.

ಆ ಮಾತನ್ನು ಕೇಳಿ 'ಆ ತೊಂದರೆ ಏಕೆ?' ಎಂದು ಹೇಳಬೇಕೆನಿಸಿದರೂ ಬಾಲಾಜಿರಾಯರಿಗೆ ಆ ಮಾತಾಡಲು ನಾಲಿಗೆ ಮೇಲೇಳಲಿಲ್ಲ.

'ದೈವಚಿತ್ತ'

—ಎಂದರು ಕೈಮುಗಿದು.

ಅವರ ಮನೆಗೆ ಮಧ್ಯಾಹ್ನದ ವೇಳೆಗೆ ಬಂದ ಬಳಿಕ ಊಟ ಮಾಡದೆ ಹಾಗೇ ಹೋಗುವುದು ಸಾಧ್ಯವೇ ಇಲ್ಲವೆಂಬುದನ್ನು ಅನುಭವದಿಂದ ಅರಿತ ಬುಡನಸಾಬಿ, ಬೇರೆ ಮಾತಾಡದೆ—

'ರಾಮಣ್ಣ, ಒಂದು ತಂಬಿಗೆ ನೀರು ತಾ'

—ಎಂದು ಕೂಗಿ ಹೇಳಿ, ಬಾಲಾಜಿರಾಯರಿಗೆ—

'ಬಟ್ಟೆ ತಗದ್ಹಾಡಿ ಬುದ್ಧಿ. ಇಲ್ಲಿಗೆ ಬಂದ ಮೇಲೆ ದೂಸರಾ ಮಾತೇ ಇಲ್ಲ.'

—ಎಂದು ಹೇಳಿದ.

## ೭

ಅವರೆಲ್ಲರದೂ ಊಟವಾದ ಬಳಿಕ, ಮೂವರೂ ನಡುಮನೆಯಲ್ಲಿ ವೀಳ್ಯ ಹಾಕಿಕೊಳ್ಳುತ್ತಾ, ಮಾತಾಡುತ್ತಾ ಕುಳಿತರು. ಆ ಮಾತಿನಲ್ಲಿ, ಬಾಲಾಜಿರಾಯರು ಆದಿನವೇ ದುರ್ಗಕ್ಕೆ ಹೊರಡಲಿರುವರೆಂಬುದನ್ನು ತಿಳಿದ ವೆಂಕಟದಾಸಪ್ಪನವರೇ—

'ಎರಡು ದಿನ ಇದ್ದು ಹೋಗಿದ್ದರೂ ಚೆನ್ನಾಗಿತ್ತು.'

—ಎಂದರು.

'ಅಂದರೆ—ಎರಡುದಿನದ ಮೇಲೆ ನಾವು ಇಲ್ಲಿರಬಾರದೇ?

—ಬಾಲಾಜಿರಾಯರು ನಗುತ್ತ ಪ್ರಶ್ನಿಸಿದರು.

'ರಾಮ, ರಾಮ! ಹಾಗೆಲ್ಲಾದರೂ ಉಂಟೆ? ಇದು ತಮ್ಮ ಮನೆ. ತಮಗೆ ಅಪೇಕ್ಷೆ ಇದ್ದಷ್ಟುದಿನ ಇರಬಹುದು.

ಈ ಬಾರಿ ಇರಲು ಅನುಕೂಲವಿಲ್ಲ. ಆದರೆ, ಅಪ್ಪ, ಅಪ್ಪಣೆಯಾದರೆ, ಯಾವಾಗಲಾದರೂ ಒಂದು ಸಲ ನಿಧಾನವಾಗಿ ಮನೆಯವರೆಲ್ಲರೊಂದಿಗೆ ಬಂದು ಅಮ್ಮನವರ ಸೇವೆ ಮಾಡಿಕೊಂಡು ಹೋಗಬೇಕು ಅಂತ ಆಸೆ ಇದೆ.'

'ಆಗತ್ಯವಾಗಿ—ತಮಗೆ ಎಂದು ಬೇಕು ಎನಿಸಿದರೆ ಅಂದು ಬರಬಹುದು. ಕರೆಯಬೇಕು, ಕರೆಸಿಕೊಳ್ಳಬೇಕು, ಎಂಬ ಸಂಕೋಚವನ್ನು ಮಾತ್ರ ಈ ಮನೆಯ ವಿಷಯದಲ್ಲಿ ಇಟ್ಟುಕೊಳ್ಳಬಾರದು.'

'ಅಷ್ಟಾದರೆ ಧನ್ಯನಾದೆ—'

—ಎಂದು ಮಾತನ್ನು ಮಧ್ಯದಲ್ಲಿಯೇ ನಿಲ್ಲಿಸಿ, ಏನೋ ಯೋಚಿಸ ಲಾರಂಭಿಸಿದರು.

ಅದನ್ನು ಕಂಡು, ಅವರು ಯಾವ ಮಾತನ್ನೋ ಹೇಳಬೇಕೆಂದುಕೊಂಡು, ಅದನ್ನು ನೇರವಾಗಿ ಹೇಳಲಾಗದೆ ಸಂಕೋಚಪಟ್ಟುಕೊಳ್ಳುತ್ತಿದ್ದಾರೆ ಎಂಬು ದನ್ನು ಅರ್ಥಮಾಡಿಕೊಂಡ ವೆಂಕಟದಾಸಪ್ಪನವರು—

ಏಕೆ, ಏನು ಹೇಳುವುದಕ್ಕೋ ಅಪೇಕ್ಷಿಸಿ, ದಾಕ್ಷಿಣ್ಯ ಮಾಡಿಕೊಳ್ಳು ತ್ತಿರುವ ಹಾಗಿದೆಯಲ್ಲಾ? ಏನು ಹೇಳಿ?'

—ಎಂದು ತಾವೇ ಕೇಳಿದರು.

'ತಾವು ಏನೂ ಅಂದುಕೊಳ್ಳದಿದ್ದರೆ, ತಮ್ಮನ್ನು ಒಂದು ವಿಷಯ ಕೇಳಬೇಕೆಂದು ಆಸೆ ಇತ್ತು...'

'ಏನು ಹೇಳಿ ? ತಮ್ಮ ಆಸೆ, ನಮಗೆ ಅಪ್ಪಣೆ'

'ನನ್ನ ಆಸೆಯ ವಿಷಯದಲ್ಲಿ ತಾವು ಅಷ್ಟುದೊಡ್ಡ ಮಾತಾಡಬಾರದು. ಆ ಯೋಗ್ಯತೆ ನನಗಿಲ್ಲ. ಈ ದಿನ ಬೆಳಿಗ್ಗೆ ನಿಮ್ಮ ಹುಡುಗನನ್ನು ನೋಡಿದೆ ...'

'ಯಾರನ್ನು ರಾಮಚಂದ್ರನನ್ನೇ?'

'ಹೂ, ತುಂಬಾ ಚೂಟಿಯಾದ ಹುಡುಗ ಮುಂದೆ ಒಳ್ಳೇ ಬುದ್ಧಿವಂತ ನಾಗುವ ಲಕ್ಷಣಗಳಿವೆ.'

'ಹೇಗಾಗುತ್ತದೆಯೋ—ಅದು ದೈವೇಚ್ಛೆ'

'ಅದು ನಿಜ. ಆ ಹುಡುಗನ ಶಕ್ತಿ ದೈವದತ್ತವಾದದ್ದೇ. ಅದರಲ್ಲಿ ಏನೂ ಸಂಶಯವಿಲ್ಲ. ಆದರೆ ದೈವೇಚ್ಛೇ ಸಫಲವಾಗುವುದಕ್ಕೆ ಮನುಷ್ಯ ಪ್ರಯತ್ನವೂಅಷ್ಟು ಬೇಕಲ್ಲವೇ?'

'ನನಗದರಲ್ಲಿ ನಂಬಿಕೆಯಿಲ್ಲ.'

'ಯಾವುದರಲ್ಲಿ?'

'ದೈವೇಚ್ಛೆಯ ಇದಿರು ಮಾನವ ಯತ್ನಕ್ಕೆ ಏನಾದರೂ ಬೆಲೆ, ಬಲ ಇದೆಯೆಂಬುದರಲ್ಲಿ ದೈವೇಚ್ಛೆ ಅಪ್ರತಿಹತವಾದದ್ದು. ಮನುಷ್ಯ ಪ್ರಯತ್ನ ವೆಂದುದೂ, ಆ ದೈವೀ ಇಚ್ಛೇಯಿಂದ ಪ್ರೇರೇಪಿತವಾದದ್ದೆ. ಆ ಶಕ್ತಿಯ ಒಂದು ಕೊನೆ ದೈವೀಇಚ್ಛೇಯಾಗಿ ಕಾಣಿಸಿಕೊಂಡರೆ ಮತ್ತೊಂದು ಕೊನೆ ಮನುಷ್ಯ ಯತ್ನವಾಗಿ, ಮಾನುಷ ಸಿದ್ಧಿಯಾಗಿ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಯಾವು-ದಕ್ಕೂ ಮನುಷ್ಯ ಪ್ರಯತ್ನ ಎಂದು ಹೆಸರಿಡುವುದೂ ತಪ್ಪೆಂದೇ ನನ್ನ ಅಭಿಪ್ರಾಯ.'

—ವೆಂಕಟದಾಸಪ್ಪನವರು ಖಚಿತವಾಗಿ ಹೇಳಿದರು.

ಅವರು ಹಾಗೆ ಹೇಳಿದ ಬಳಿಕ ಬಾಲಾಜಿರಾಯರಿಗೆ ಆ ಬಗ್ಗೆ, ಅವರೊಂದಿಗೆ ವಾದಿಸಲೂ ಧೈರ್ಯವಾಗಲಿಲ್ಲ.

'ತಮ್ಮೊಂದಿಗೆ ವಾದ ಮಾಡುವಷ್ಟು ಶಕ್ತಿ ನನಗಿಲ್ಲ. ಆದರೂ ಒಂದು ಮಾತು ಹೇಳುತ್ತೇನೆ...'

'ಹೇಳಿ?'

'ನಿಸರ್ಗಜನ್ಯವಾದ ವಜ್ರವೂ, ಸಂಪೂರ್ಣ ಕಾಂತಿಯುಂಥ ಪೊಳೆಯು ಬೇಕಾದರೆ ಕಡೆತಬೇಕು ತಾನೇ?'

'ನಿಜ ಬೇಕು?'

'ನನಗಿರುವ ಆಸೆಯೂ ಅಷ್ಟೆ—'

'ಅಂದರೆ—?'

'ತಾಯಿ ನಿಮ್ಮ ಮಗನಿಗೆ ಪ್ರತಿಭೆಯನ್ನು ಉದಾರವಾಗಿ ನೀಡಿದಾಳೆ. ಆ ವಜ್ರಕ್ಕೆ, ಇಲ್ಲಿ, ಯುಕ್ತವಾದ ಕಡೆತ ಸಿಗಲು ಅವಕಾಶವಿಲ್ಲ.'

'ತಮ್ಮ ಮಾತು ನನಗೆ ಸರಿಯಾಗಿ ಅರ್ಥವಾಗಲಿಲ್ಲ.'

'ಇನ್ನೇನೂ ಇಲ್ಲ ದಾಸಣ್ಣ ಬುದ್ಧಿ. ಬಾಲಾಜಿರಾವ್ ಧಣಿಗಳಿಗೆ ರಾಮಣ್ಣನ್ನ ದುರ್ಗಕ್ಕೆ ಕರಕೊಂಡು ಹೋಗಿ ಓದಿಸಬೇಕೂಂತ ಆಸೆ ಆಗಿದೆ. ಅದ್ನೆ—ಹಿಂಗೆ ಹೇಳ್ತಾ ಇದಾರೆ.

—ಎಂದು ಬುಡೇನಸಾಬಿ ಬಾಲಾಜಿರಾಯರು ಮುಚ್ಚು ಮಾತಿನಲ್ಲಿ ಹೇಳಲು ಯತ್ನಿಸುತ್ತಿದ್ದುದನ್ನು ಬಿಚ್ಚು ಮಾತಿನಲ್ಲಿ ಹೇಳಿದ.

'ಹೌದೇ?'

—ವೆಂಕಟದಾಸಪ್ಪನವರು, ಬಾಲಾಜಿರಾಯರನ್ನು ಕೇಳಿದರು.

'ಹೌದು'

'ಆದರೆ ಇಲ್ಲೂ ಅವನಿಗೆ ಶಿಕ್ಷಣವಾಗುತ್ತಿದೆಯಲ್ಲಾ. ದಿನವೂ ಕೂಲಿ ಮಠಕ್ಕೆ ಹೋಗುತ್ತಿದ್ದಾನೆ. ಅಚ್ಚಣ್ಣಭಟ್ಟರ ಹತ್ತಿರ ಅಮರಾನೂ ಹೇಳಿಸ್ತಾ ಇದೀನಿ.'

—ಎಂದರು ವೆಂಕಟದಾಸಪ್ಪ.

'ನಾನು ಆ ಓದಿನ ವಿಷಯ ಹೇಳಲಿಲ್ಲ.'

'ಮತ್ತೆ ಯಾವ ಓದಿನ ವಿಷಯ...?'

'ಈಚೆಗೆ ಸರಕಾರದವರು ನಮ್ಮ ಹುಡುಗರನ್ನು ಬುದ್ಧಿವಂತರನ್ನಾಗಿ ಮಾಡಲು ಇಂಗ್ಲಿಷ ಕಲಿಸಲು ಎಲ್ಲಾ ಕಡೆಯಲ್ಲೂ ಹೊಸ ಶಾಲೆಗಳನ್ನು ತೆರೆಯುತ್ತಿದ್ದಾರೆ. ಚಿತ್ರದುರ್ಗದಲ್ಲೂ ಅಂಥ ಶಾಲೆ ಆರಂಭವಾಗಿದೆ: ತಮ್ಮ ಹುಡುಗ ಅಲ್ಲಿ ಕಲಿಯಬೇಕು ಎಂದು ನನ್ನ ಅಪೇಕ್ಷೆ.

'ಹಾಗೋ, ಆ ವಿಷಯ ನನಗೆ ತಿಳಿಯದು. ಆಯಿತು—ಆ ಓದಿನಿಂದ ಏನು ಉಪಯೋಗ?

'ಆ ಓದು ಓದಿದರೆ, ಅಲ್ಲಿ ಕಲಿತು ಬುದ್ಧಿವಂತನಾದರೆ, ಮನುಷ್ಯ ದೊಡ್ಡ ಪದವಿಗೆ ಬರಬಹುದು. ಬೇಕಾದ ಹಾಗೆ ದುಡಿಯಬಹುದು. ಅಲ್ಲಿ ಕಲಿಯದಿದ್ದವರಿಗೆ, ಸರಕಾರಿ ನೌಕರಿಯಲ್ಲಿ ಹೆಚ್ಚಿನ ಉದ್ಯೋಗಕ್ಕೆ ಪ್ರವೇಶವಿರುವುದಿಲ್ಲ'

'ಹಾ—ಹಾಗನ್ನಿ. ಅಂದರೆ ಅವು ಶಾಲೆಗಳಲ್ಲ.'

'ಅಂದರೆ—?'

ಅವು ಸರಕಾರದವರು ತಮ್ಮ ಗುಲಾಮಗಿರಿಗೆ ಉತ್ತಮರಾದವರು ಯಾರು ಅಂತ ಆರಿಸಲು ಈ ಉಪಾಯ ಹುಡುಕಿದಾರೆ. ಯಾರಿಗೆ ಕೇವಲ ಭುಕ್ತಿ ಬೇಕೋ ಅಂಥವರು ಮಾತ್ರ ಅಲ್ಲಿಗೆ ಹೋಗಬೇಕು. ಕೇವಲ ಮುಕ್ತಿ ಕಾಮಿಗಳಾದವರಿಗೆ ಆ ಓದು ಏಕೆ ಬೇಕು? ಗೀತೋಪನಿಷತ್ತುಗಳು ಹೇಳಿ ಕೊಡಲಾಗದ ಹೊಸ ಮಾತನ್ನು ಅಲ್ಲೇನು ಕಲಿಸಬಲ್ಲರು?'

'ತಾವು ಹೇಳುವುದು ನಿಜ—ಮುಕ್ತಿಕಾಮಿಗಳಾದವರಿಗೆ ಆ ಓದೇನೂ ಬೇಡ. ಆದರೆ ಜಗತ್ತಿನಲ್ಲಿ ಜನಿಸಿದವರೆಲ್ಲರೂ ಕೇವಲ ಮುಕ್ತಿಕಾಮಿಗಳಾಗಿ, ಅಲ್ಪ ತೃಪ್ತರಾಗಿ ತಮ್ಮಂತೆ ಇರುವುದು ಸಾಧ್ಯವೇ? ಹೊಟ್ಟೆಯನ್ನು ಬೆನ್ನಿಗೆ ಹತ್ತಿಸಿಕೊಂಡ ಮನುಷ್ಯನಿಗೆ ನೂರು ಬೇಕೆಂಬ ಚಪಲವಿರುತ್ತದೆ. ಅಲ್ಲವೇ?'

'ನಿಜ, ಇರುತ್ತದೆ ಐದೂ ಬೆರಳೂ ಒಂದೇ ಸಮ ಇರುವುದು ಎಲ್ಲಿ ಸಾಧ್ಯ ?'

'ಹಾಗಿರುವಾಗ—ತಮ್ಮ ಜೀವನ ಹೀಗೇ ಕಳೆದುಹೋಯಿತು. ಆದರೆ ನಿಮ್ಮ ಮಕ್ಕಳಿಗೂ ನಿಮ್ಮ ಹಾಗೆ ಇರಬೇಕು ಎನ್ನುವ ಆಸೆ ಇರುತ್ತದೆಯೇ?,'

'ನನ್ನ ಆಸೆ ಅವನಿಗೂ ಇರಬೇಕು ಎನ್ನುವುದು ನನ್ನ ಅಪೇಕ್ಷೆ'

'ಅಂದರೆ—ನಿಮ್ಮ ಅಪೇಕ್ಷೆ.ಬರೀ ಅಪೇಕ್ಷೆಯೇ ಅಲ್ಲ, ಅಧಿಕಾರ ವಾಣಿಯೂ ಆಯಿತು—ಅನ್ನಿ.'

'ಶಿವಶಿವಾ—ಏನೂ, ಯಾರ ಮೇಲೂ ನಾನು ಅಧಿಕಾರ ಮಾಡಲಾರೆ. ಆ ಶಕ್ತಿಯೇ ನನಗಿಲ್ಲ. ಇಲ್ಲಿ ಬೆಳೆಯೋ ಹುಲ್ಲು ಕಡ್ಡೀನ ಅಲ್ಲಿ ಬೆಳಿ ಅಂತ ಹೇಳುವುದಕ್ಕೂ ಶಕ್ತಿಯಿಲ್ಲದ ನಾನು, ಇನ್ನು ಬೇರೆಯವರ ಮೇಲೆ ಅಧಿಕಾರ

ಮಾಡುತ್ತೇನೆಯೇ? ನಾನು ಹಾಗೆ ಮಾಡುತ್ತೇನೆ ಎಂದರೂ ಅದು ನಡೆಯು ತ್ತದೆಯೇ? ಆ ಚಪಲವೇ ನನಗಿಲ್ಲ.'

'ಅಂದರೆ–ನಿಮ್ಮ ಹುಡುಗ ಅಪೇಕ್ಷಿಸಿದರೆ, ಅವನು ಆ ಓದು ಓದಲು ನಿಮ್ಮ ಅಭ್ಯಂತರವೇನೂ ಇಲ್ಲವಷ್ಟೆ?'

'ಅಭ್ಯಂತರವಿಲ್ಲ'.

'ಹಾಗಾದರೆ ಕೇಳಿ ನೋಡಿ–ಏನು ಹೇಳುತ್ತಾನೋ?'

–ಎಂದರು ಬಾಲಾಜಿರಾಯರು.

'ಛಿ. ಛಿ, ಅದು ಹುಡುಗ. ಅದಕ್ಕೇನು ತಿಳಿಯುತ್ತೆ. ದೊಡ್ಡವರು ಏನು ಹೇಳಿದರೆ ಹಾಗೆ ಕೇಳುತ್ತಾನೆ'.

–ಎಂದು ಬುಡನ್‌ಸಾಬಿ ನಡುವೆ ಮಾತಾಡಿದ.

'ವಯಸ್ಸು ಮುಖ್ಯವಲ್ಲ ಸಾಹೇಬರೇ. ದೊಡ್ಡ ಮಣ್ಣಿನ ಗಡಿಗೆ, ಗಾತ್ರದಲ್ಲಿ ದೊಡ್ಡದಾದ ಮಾತ್ರಕ್ಕೆ ಚಿಕ್ಕ ಚಿನ್ನದ ಗೆಜ್ಜೆಯ ಸದ್ದು ಮಾಡು ವುದಕ್ಕೆ ಸಾಧ್ಯವಿದೆಯೇ? ಅದೃಷ್ಟಕ್ಕೆ ತಕ್ಕ ಮಾತೇ ಬಾಯಿಂದ ಬರುವುದು. ಅದಕ್ಕೆ ವಯಸ್ಸಿನದೇನು ಲೆಕ್ಕ. ಇವತ್ತು ಈ ರೂಪದಲ್ಲಿ ತಾಯಿ ರಾಮಣ್ಣನ ಪರೀಕ್ಷೆ ಮಾಡುತ್ತಿದ್ದಾಳೆ. ಅದೂ ನಡೆದು ಹೋಗಲಿ?'

–ಎಂದು ಗಂಭೀರವಾಗಿ ಹೇಳಿ–

'ರಾಮಣ್ಣಾ...ರಾಮಣ್ಣಾ ...'

–ಎಂದು ಮಗನನ್ನು ಕೂಗಿದರು, ವೆಂಕಟದಾಸಪ್ಪ.

ಅವರ ಕೂಗನ್ನು ಕೇಳಿ, ಒಳಗೆ ತನ್ನ ತಾಯಿಯೊಂದಿಗೆ ಏನೋ ಮಾತನಾಡುತ್ತಾ ಕುಳಿತುಕೊಂಡಿದ್ದ ರಾಮಚಂದ್ರ–

'ಏನಣ್ಣಾ?'

–ಎಂದು ಕೂಗಿಕೊಂಡು, ನಡುಮನೆಗೆ ಬಂದ.

'ಬಾ, ಅಲ್ಲಿ ಕೂತುಕೋ. ರಾಯರು ಏನೋ ನಿನ್ನ ಪ್ರಶ್ನೆ ಕೇಳ ಬೇಕೂಂತ ಇದಾರೆ. ಅವರು ಕೇಳಿದ್ದಕ್ಕೆ ಉತ್ತರ ಕೊಡು'.

–ಎಂದು ಮಗನಿಗೆ ಹೇಳಿ, ಬಾಲಾಜಿರಾಯರತ್ತ ತಿರುಗಿ–

'ಆಯಿತು, ಏನು ಬೇಕೋ ತಾವೇ ಪ್ರಶ್ನೆಮಾಡಿ.'

–ಎಂದು ಹೇಳಿದರು ವೆಂಕಟದಾಸಪ್ಪ.

ರಾಮಚಂದ್ರನನ್ನು ಪ್ರಶ್ನಿಸುವ ಹೊಣೆಯನ್ನು ವೆಂಕಟದಾಸಪ್ಪನವರು ತಮ್ಮ ಮೇಲೆ ಹೇರಿದುದನ್ನು ಕಂಡು, ಬಾಲಾಜಿರಾಯರಿಗೆ ಒಂದು ಗಳಿಗೆ ಏನು ಕೇಳಲೂ ತೋಚಲಿಲ್ಲ. ಒಂದುಕ್ಷಣ ಸುಮ್ಮನೆ, ಕುತೂಹಲದಿಂದ ಕಣ್ಣರಳಿಸಿ, ತಮ್ಮತ್ತಲೇ ನೋಡುತ್ತಿರುವ ರಾಮಚಂದ್ರನ ಬಾಲಮುಖವನ್ನು ನೋಡಿ. ಬಳಿಕ, ಮೃದುವಾಗಿ—

'ರಾಮಣ್ಣ ಮುಂದೆ ನಿನಗೆ ಏನಾಗಬೇಕೊಂತ ಆಸೆ'.

— ಎಂದು ಕೇಳಿದರು.

ಅವರ ಪ್ರಶ್ನೆ ರಾಮಚಂದ್ರನಿಗೆ ಅರ್ಥವಾಗಲಿಲ್ಲ. ಏನೆಂದು ಉತ್ತರ ಹೇಳುವುದಕ್ಕೂ ತೋಚದೆ, ಕಕ್ಕಾಬಿಕ್ಕಿಯಾಗಿ ಬಾಲಾಜಿರಾಯರು, ಬುಡನ್ ಸಾಬಿ, ತನ್ನ ತಂದೆ, —ಎಲ್ಲರ ಮುಖವನ್ನೂ ನೋಡುತ್ತಾ ಕುಳಿತ. ಅವನ ಮುಖವನ್ನು ನೋಡಿ, ಬಾಲಾಜಿರಾಯರ ಪ್ರಶ್ನೆ ಅವನಿಗೆ ಅರ್ಥವಾಗಿಲ್ಲವೆಂದು ಅರಿತುಕೊಂಡ ಬುಡನ್‌ಸಾಬಿ—

'ಬಾಲಾಜಿರಾವ್ ಬುದ್ಧಿಯೋರು ಕೇಳಿದ್ದು ಏನಂತ ಅರ್ಥ ಆಯ್ತು ರಾಮಣ್ಣ?'

—ಎಂದು ಕೇಳಿದ.

'ಊಹೂ.'

—ರಾಮಚಂದ್ರ ತಲೆಯಾಡಿಸಿ ಹೇಳಿದ.

'ಅವರು ಕೇಳಿದ್ದು, ನೀನು ದೊಡ್ಡೋನಾದ ಮೇಲೆ ನಿನಗೆ ಏನಾಗ ಬೇಕೊಂತ ಆಸೆ ಇದೆ ಅಂತ. ಅಂದ್ರೆ—ನೀನು ದೊಡ್ಡೋನಾದ ಮೇಲೆ ದಾಸಣ್ಣ ಬುದ್ಧಿಯೋರ ಹಾಗೇ ಇರ್‍ತೀಯೋ, ಅಥವಾ ಇವತ್ತು ನೋಡಿದ್ಯಲ್ಲಾ ಡೆಪ್ಯುಟಿ ಕಮೀಷನರ್ ಸಾಹೇಬ್ರು—ಹಾಗಾಗ್ತೀಯೋ?'

—ಬುಡನ್‌ಸಾಬಿ, ಬಾಲಾಜಿರಾಯರ ಮಾತು, ರಾಮಚಂದ್ರನಿಗೆ ಚೆನ್ನಾಗಿ ಅರ್ಥವಾಗುವಂತೆ ವಿವರಿಸಿ ಹೇಳಿದ.

ಬುಡನ್ ಸಾಬಿ ಹೇಳಿದುದನ್ನು ಕೇಳಿ, ರಾಮಚಂದ್ರನ ಮನಸ್ಸಿನಲ್ಲಿ ತಟಕ್ಕನೆ ಏನೋ ಆಸೆ ಮಿಂಚಿ, ಅದರ ಬೆಳಕಿನಿಂದ ಅವನ ಕಣ್ಣು ಥಳಥಳಿಸಿ, ಏನೋ ಮಾತು ಹೇಳಬೇಕೆಂದು ಹೊರಟವನು, ಮರುಗಳಿಗೆಯೇ ನಾಲಗೆಯನ್ನು ತಡೆ

ಹಿಡಿದು, ವೆಂಕಟದಾಸಪ್ಪನವರ ಮುಖವನ್ನು 'ಮನಸ್ಸಿನಲ್ಲಿರುವುದನ್ನು ಹೇಳಲೋ ಬೇಡವೋ' ಎಂಬಂತೆ ನೋಡಿದ.

'ಹೇಳು, ನಿನಗೆ ತಾಯಿ ಏನು ಬುದ್ಧಿ ಕೊಟ್ಟರೆ ಆ ಮಾತನ್ನು ನಿರ್ಭಯವಾಗಿ ಹೇಳು'.

–ಎಂದು ವೆಂಕಟದಾಸಪ್ಪನವರು ಅಭಯ ನೀಡಿ ಮಗನ ಬೆನ್ನು ತಟ್ಟಿದರು.

ಅವರು ನಿರ್ಭಯವಾಗಿ ಮಾತನಾಡು ಎಂದು ಹೇಳಿದ ಬಳಿಕ, ಏನು ಹೇಳುವುದೆಂದು ರಾಮಚಂದ್ರ ಯೋಚಿಸಿದ. ಅವನು ಸುಮ್ಮನಿರುವುದನ್ನು ಕಂಡು ಬುಡನ್‌ಸಾಬಿ ಮತ್ತೊಮ್ಮೆ ಪ್ರಶ್ನೆ ಮಾಡಿದ–

'ನೀನು ದಾಸಣ್ಣ ಬುದ್ಧಿಯೋರ್ಹಂಗೆ ಇರ್‍ತಿಯೋ, ಅಥವಾ ಡೆಪ್ಯುಟಿ ಕಮೀಷನರು ಸಾಹೇಬ್ರು ಹಾಗಾಗ್ತಿಯೋ?'

ಬುಡನ್ ಸಾಬಿ ಹೇಳಿದುದನ್ನು ಕೇಳಿ, ರಾಮಚಂದ್ರನ ಕಣ್ಣೆದಿರು ಅಂದು ಬೆಳಗ್ಗೆ ನೋಡಿದ ಡೆಪ್ಯುಟಿ ಕಮೀಷನರ ಚಿತ್ರ ಹಾದುಹೋಯಿತು.

ಡೆಪ್ಯುಟಿ ಕಮೀಷನರು ಬರುತ್ತಾರೆ ಎಂದು ನೂರಾರು ಜನ ಸೊಂಟಕ್ಕೆ ಪಟ್ಟಿಕಟ್ಟಿಕೊಂಡು ಕಾದು ನಿಂತಿದ್ದರು. ಅವರು ಬರುತ್ತಾರೆಂದೇ ಅಷ್ಟು ದೊಡ್ಡ ಚಪ್ಪರ ಹಾಕಿಸಿದ್ದರು. ಅವರು ಬಂದಾಗ ದೇವರು ಬಂದಾಗ ಬಾರಿಸುವಂತೆ ವಾದ್ಯಗಳನ್ನು ಬಾರಿಸಿದ್ದರು. ನೂರಾರು ಜನ ಅವರ ಕಾಲಿಗೆರಗಿ, ಅವರ ಕತ್ತಿಗೆ ಹೂವಿನ ಹಾರ ಹಾಕಿದ್ದರು. ಅವರ ಸುತ್ತಮುತ್ತ ದವಾಲಿ ಹಾಕಿದ ಜವಾನರು ಓಡಾಡುತ್ತಿದ್ದರು. ಮನುಷ್ಯ ಮಾತ್ರದವನಿಗೆ ಅಷ್ಟು ವೈಭವ, ಅಜೂಜಮಾದಿ ನಡೆದದ್ದನ್ನು ರಾಮಚಂದ್ರ ಎಂದೂ ಕಂಡಿರಲಿಲ್ಲ. ಎಂತಲೇ ಅಂದು ಅವನ್ನು ಕಂಡು ಅವನ ಕಣ್ಣು ಕೋರೈಸಿತ್ತು.

ತಾನೂ ಹಾಗಾಗುವುದಾದರೆ, ಆಗುವುದು ಸಾಧ್ಯವಿದ್ದರೆ–ಏಕೆ ಬೇಡ? ಹಾಗಾದರೆ–

ತಾನೂ ಅವರ ಹಾಗೇ ದೊಡ್ಡ ಕುದುರೆಗಳ ಸಾರೋಟಿನಲ್ಲಿ ಬರಬಹುದು. ಆ ಸಾರೋಟಿನಲ್ಲಿ ತನ್ನ ತಮ್ಮ, ತಂಗಿ, ತಮ್ಮ, ಅಣ್ಣ ಎಲ್ಲರನ್ನೂ ಕೂಡಿಸಿಕೊಂಡು ಮೆರೆಯಬಹುದು.

ಬೇಕಾದ್ದು ಮಾಡಬಹುದು–

ಹೂವಿನ ಹಾರ ಹಾಕಿಸಿಕೊಳ್ಳಬಹುದು–

ಎಲ್ಲರೂ ತನಗೆ ನಮಸ್ಕರಿಸುತ್ತಾರೆ; ತಾನು ಬಂದರೆ ಚಪ್ಪರ ಹಾಕಿಸುತ್ತಾರೆ...

ಆ ಬಯಕೆಗಳು ಬಲಿದು, ಆದರೂ ಅದನ್ನು ಆಶಿಸಲು ಹೆದರುತ್ತಲೇ–

'ನಾನು...ನಾನು... ಡೆಪ್ಯುಟಿಕಮೀಷನರ್ ಆಗ್ತೀನಿ.'

–ಎಂದ.

ತಮ್ಮ ಮಗ ವ್ಯಕ್ತಪಡಿಸಿದ ಆಶೆಯನ್ನು ಕಂಡು ವೆಂಕಟದಾಸಪ್ಪನವರಿಗೆ ಸಿಡಿಲೆರಗಿದಂತಾಗಿ, ಅವರ ಮುಖದಲ್ಲಿ ಕಾರ್ಮೋಡ ಕವಿಯಿತು. ಒಂದು ಗಳಿಗೆ ಹಾಗೆ ಹುಬ್ಬು ಗಂಟು ಹಾಕಿಕೊಂಡೇ, ಮಗನ ಮುಖ ನೋಡಿದರು.

ಅವರ ನೋಟದ ಝಳ ತಾಕಿ ಒಂದು ಗಳಿಗೆಯ ಹಿಂದೆ ಏನೋ ಆಸೆಯಿಂದ ಅರಳಿದ್ದ ರಾಮಚಂದ್ರನ ಮುಖ, ಬಿಸಿಲು ಬಡಿದ ಪಾರಿಜಾತದ ಹೂವಿನ ಹಾಗೆ ಬಾಡಿಹೋಯಿತು.

'ನಾನು... ನಾನು... ನಾನು... ಹೇಳಿದ್ದು...
ತಪ್ಪಾಯ್ತಣ್ಣ.'

–ಎಂದ ತೊದಲುತ್ತಾ, ಆ ಮಾತಿನ ಹಿಂದೆ 'ನಾನೂ ಇಲ್ಲೇ ಇದೀನಿ' ಎಂದು ಹೇಳುವಂತೆ ಅಳು ಇಣಿಕು ಹಾಕುತ್ತಿತ್ತು.

ಅವನ ಆ ಮಾತನ್ನು ಕೇಳಿ, ವೆಂಕಟದಾಸಪ್ಪನವರು ಘಟಕ್ಕನೆ ಗಟ್ಟಿಯಾಗಿ ನಕ್ಕುಬಿಟ್ಟರು. ಆ ನಗೆ ಬಾಲಾಜಿರಾಯರಿಗೆ, ಬುಡನ್‌ಸಾಬಿಗೆ ನಗುವಿನಂತೆ ಕೇಳಿಸದೆ, ವೀಣೆಯ ತಂತಿ ಹರಿದುಹೋದಾಗ ಕೇಳುವ ಒಡಕು ಸದ್ದಿನಂತೆ ಕೇಳಿತು. ಆ ನಗುವನ್ನು ಕೇಳಿದ ಬಳಿಕ ಅವರಿಗೆ ಏನು ಮಾತಾಡಲೂ ಧೈರ್ಯವಾಗದೆ ಸುಮ್ಮನೆ ಕುಳಿತಿದ್ದರು.

ಒಂದು ಗಳಿಗೆ ಯಾರೂ ಮಾತಾಡದೆ, ಮನೆಯಲ್ಲಿ ಬಹು ಗಂಭೀರವಾದ ಮೌನ ವ್ಯಾಪಿಸಿತು. 'ಯಾರು ಬಾಯಿ ಬಿಟ್ಟರೂ ಅವರನ್ನು ನುಂಗುತ್ತೇನೆ' ಎಂದು ಬೆದರಿಸುವ ಬಾವುಗನಂತಿತ್ತು ಆ ಗಂಭೀರ ಮೌನ.

ಕೊನೆಗೆ ವೆಂಕಟದಾಸಪ್ಪನವರೇ ಸಾಹಸ ಮಾಡಿ, ಆ ಮೌನವನ್ನು ಮುರಿದು–

'ಸರಿ– ನಿನ್ನ ಹಣೆಯಲ್ಲಿ ಗುಲಾಮರ ಗುಲಾಮನಾಗಬೇಕೆಂದು ಬರೆದಿದೆ. ಆ ಅದೃಷ್ಟಕ್ಕೆ ತಕ್ಕ ಬಯಕೆಯನ್ನೇ ಆಡಿದೆ. ಆಟ ಆಡಿಕೋ ಹೋಗು'.

–ಎಂದು ಮಗನಿಗೆ ಹೇಳಿದರು.

ಅವರ ಕಣ್ಣ ನೋಟವನ್ನು ಕಂಡು ಬೆದರಿ ಬೆವರುತ್ತ ಕುಳಿತಿದ್ದ ರಾಮ ಚಂದ್ರ ಅವರು ಅಷ್ಟು ಹೇಳಿದುದೇ ಸಾಕೆಂದು. ಬಲೆಯಿಂದ ಬಿಡುಗಡೆಯಾದ ಜಿಂಕೆಯ ಹಾಗೆ ಓಡಿಹೋದ.

ಅವನು ಓಡಿಹೋದ ಬಳಿಕ ವೆಂಕಟದಾಸಪ್ಪನವರು, ಬಾಲಾಜಿರಾಯ ರತ್ತ ತಿರುಗಿ–

'ಆಯಿತು ಸ್ವಾಮಿ. ಇನ್ನು ಅವನನ್ನು ನಿಮ್ಮ ವಶಕ್ಕೆ ಒಪ್ಪಿಸಿದೀನಿ. ಯಾವಾಗ ಬೇಕಾದರೂ ಕರೆದುಕೊಂಡು ಹೋಗಿ'

–ಎಂದರು ಬಹು ನೀರಸವಾದ ಧ್ವನಿಯಲ್ಲಿ.

ಆ ಮಾತನ್ನು ಕೇಳಿ ಬಾಲಾಜಿರಾಯರಿಗೆ ಹೊಟ್ಟೆಯಲ್ಲಿ ಕಸವಿಸಿಯಾ ಯಿತು. ಆ ಸಂಕಟದಲ್ಲೇ–

'ಏನೋ ಹುಡುಗ ಬುದ್ಧಿ– ಆತನಿಗೆ ತೋಚಿದ್ದು ಹೇಳಿದ. ಮುಖ್ಯ ವಾಗಿ ಅವನನ್ನು ಪರೀಕ್ಷೆ ಮಾಡಹೊರಟಿದ್ದು ನಮ್ಮ ತಪ್ಪು. ತಾವು ಹುಡುಗನ ಮೇಲೆ ಸಿಟ್ಟಾಗಬಾರದು'

–ಎಂದರು.

ಆ ಮಾತಿಗೆ ವೆಂಕಟದಾಸಪ್ಪನವರು ನಕ್ಕು ಹೇಳಿದರು–

'ಅವನು ಹುಡುಗನೋ, ನಾನು ಹುಡುಗನೋ ನಾನರಿಯೆ ಬಾಲಾಜಿ ರಾಯರೇ. ನನಗೆ ಗೊತ್ತಿರುವುದೊಂದೇ...'

'ಏನು?'

'ತೇನವಿನಾ ತೃಣಮಪಿ ನಚಲತಿ.'

ಮಾತನ್ನು ವೆಂಕಟದಾಸಪ್ಪನವರು ನಗುತ್ತಲೇ ಹೇಳಿದರು. ಆದರೆ ಬಾಲಾಜಿರಾಯರ ಕಿವಿಗೆ ಆ ನಗು, ನಗುವಿನಂತೆ ಕೇಳಿಸದೆ, ಬರಲಿರುವ ಜಂಝಾವಾತ ಸೂಚಕವಾದ ಗುಡುಗಿನ ಮೊಳಗಿನಂತೆ ಕೇಳಿಸಿತು. ಆ ಭಯ ದಲ್ಲೇ ಬಾಲಾಜಿರಾಯರು–

'ದಾಸಣ್ಣನವರೇ—ನಾನು ಏನೂ ತಿಳಿಯಂಪ ಅಜ್ಞ. ನನ್ನಿಂದೇನಾದರೂ ತಪ್ಪಾಗಿದ್ದರೆ ಕ್ಷಮಿಸಬೇಕು.'

—ಎಂದರು.

'ತಪ್ಪೇನೂ ಇಲ್ಲ, ಬಾಲಾಜಿರಾಯರೇ. ಎಲ್ಲಾ ಆಗಬೇಕಾದದ್ದೇ. ಆಯಿತು—ಅವನನ್ನು ಎಂದು ಕರೆದುಕೊಂಡು ಹೋಗುತ್ತೀರಿ?'.

—ಎಂದು ಕೇಳಿದರು, ಹಸುವನ್ನು ಮಾರಿದವರು. ಆ ಹಸುವನ್ನು ಕೊಂಡವನನ್ನು ಕೇಳುವ ಹಾಗೆ.

'ತಮ್ಮ ಅಪ್ಪಣೆ ಆದ ದಿನ'.

'ನನಗೇನು—ಈಗಲೇ ಕರೆದುಕೊಂಡುಹೋಗಿ ಎನ್ನುತ್ತೇನೆ. ಆದರೆ ಆ ಮಗನ ತಾಯಿ, ಹಾಗೇ ನಿಂತಕಾಲಲ್ಲೇ ತನ್ನ ಮಗನನ್ನು ಕಳಿಸಲು ಒಪ್ಪುವುದಿಲ್ಲ. ಬಟ್ಟೆಬರೆ ನೋಡಬೇಕು, ತಲೆಗೆ ಎಣ್ಣೆನೀರು ಹಾಕಬೇಕು. ಆದ್ದರಿಂದ ಇವತ್ತು ಇಲ್ಲಿಯೇ ಇದ್ದು ನಾಳೆ ಕರೆದುಕೊಂಡು ಹೋಗಿ.'

—ಎಂದರು ವೆಂಕಟದಾಸಪ್ಪನವರು.

'ಅಷ್ಟು ಅವಸರವೇನೂ ಇಲ್ಲ...,

'ನಿಧಾನದಿಂದ ಆಗಬೇಕಾದದ್ದೇನೂ ಇಲ್ಲ. ಆಗಲೇ ಬೇಕಾದದ್ದು ಎಷ್ಟು ಬೇಗ ಆದರೆ ಅಷ್ಟು ಒಳಿತು.'

—ಎಂದು ಹೇಳಿ. ಅಷ್ಟು ಹೇಳುವವರೆಗೂ ಕುಳಿತಿದ್ದ ವೆಂಕಟದಾಸಪ್ಪ ನವರು ತಟಕ್ಕನೆ ಎದ್ದುನಿಂತು—

'ನಾನೊಂದು ಗಳಿಗೆ ಹಾಗೆ ಹೋಗಿ ಬರುತ್ತೇನೆ. ನೀವೂ ವಿಶ್ರಾಂತಿ ತೆಗೆದುಕೊಳ್ಳಿ.

—ಎಂದು ಹೇಳಿ, ಅವರ ಪ್ರತ್ಯುತ್ತರಕ್ಕೂ ಕಾಯದೆ ಮನೆಯಿಂದ ಹೊರಗೆ ಹೊರಟರು.

ಅವರ ಮಾತು, ವರ್ತನೆ—ಒಂದೂ ಸ್ಪಷ್ಟವಾಗಿ ಅರ್ಥವಾಗದ ಬುಡನ ಸಾಬಿ, ಬಾಲಾಜಿರಾಯರಿಬ್ಬರೂ ಪೆಚ್ಚಾಗಿ ಒಬ್ಬರ ಮುಖ ಒಬ್ಬರು ನೋಡಿ ಕೊಂಡರು.

## ೮

ಹಾಗೆ ಅವರನ್ನು ಮನೆಯಲ್ಲಿ ಬಿಟ್ಟು ಹೊರಟ ವೆಂಕಟದಾಸಪ್ಪನವರು ಮನೆಯಿಂದ ಹೊರಬಂದು ಎತ್ತ ಹೋಗಬೇಕೆಂದು ತೋಚದೆ, ಒಂದುಗಳಿಗೆ ಬಿಸಿಲಿನಲ್ಲಿ ಹಾಗೆ ನಿಂತರು.

ಅವರ ಮುಖ ಪ್ರಶಾಂತವಾಗಿದ್ದರೂ, ತಮ್ಮ ಮಗನ ಭವಿಷ್ಯ ನಿರ್ಧಾರವನ್ನು ಕೇಳಿದ ಬಳಿಕ ಅವರ ಹೃದಯ ಬಹು ಪ್ರಕ್ಷುಬ್ಧವಾಗಿತ್ತು.

'ತಾಯೀ, ನನ್ನ ಮಗನಿಗೆ ಇಂಥ ಬುದ್ಧಿಯನ್ನೇಕೆ ಕೊಟ್ಟೆ?'

—ಎಂಬ ಪ್ರಶ್ನೆ ಕಡೆಗೋಲಾಗಿ ಅವರ ಹೃದಯವನ್ನು ಕಡೆಯುತ್ತಿತ್ತು.'

'ನಾನು ಯಾರು? ಅವನು ಯಾರು? ನಮ್ಮಿಬ್ಬರಲ್ಲಿ ಯಾರಿಗೆ ಯಾರು ಹೊಣೆ? ನಾವೆಲ್ಲಾ ಸಂಸಾರಸಾಗರದಲ್ಲಿ ದೈವೀ ಇಚ್ಛಾನುಸಾರವಾಗಿ ಮೂಡಿ ಮುಳುಗುವ ಬುದ್ಬುದಗಳು. ಹಾಗಿರುವಾಗ ಅದು ಹೀಗೇಕಾಯಿತು ಎಂದು ನಾನು ಚಿಂತಸಲೇಕೆ? ತಾಯಿ ತನ್ನ ಮನಸ್ಸಿಗೆ ಬಂದ ಮಾತನ್ನು ಅವನ ಬಾಯಿ ಮೂಲಕ ಆಡಿಸಿವಳು. ಅದಕ್ಕೆನಾನೇಕೆ ಕೊರಗಬೇಕು.

—ಎಂದು ಎಷ್ಟೇಷ್ಟು ಬಗೆಯ ಸಮಾಧಾನವನ್ನು ತಮಗೆ ತಾವೇ ಹೇಳಿ ಕೊಳ್ಳಲೆತ್ನಿಸಿದರೂ, ಅದರಿಂದ ಅವರ ಬುದ್ಧಿಗೆ ಸಮಾಧಾನವಾಯಿತೇ ವಿನಾ ಹೃದಯಕ್ಕೆ ಸಮಾಧಾನವಾಗಲಿಲ್ಲ. ಅವರ ಕರುಳು ಬಳ್ಳಿ, ಎಲ್ಲೋ ಉರಿಹೊತ್ತಿದಂತೆ ಚಡಪಡಿಸುತ್ತಿತ್ತು.

'ನನ್ನ ಮಗ ಹೀಗಾದ; ನನ್ನ ಮಗನಿಗೆ ಇಂಥ ಬುದ್ಧಿ ಬಂತು. ಶಾಶ್ವತ ಸುಖವನ್ನು ನೀಡುವ ತಾಯಿಯ ಸೇವೆಯನ್ನು ಕ್ಷುಲ್ಲಕವೆನಿಸಿ, ಕಂಡವರ ಕಾಲೊತ್ತುವ ಗುಲಾಮಗಿರಿಯೇ ಹಿರಿದೆಂದು ಭಾವಿಸಿದ. ಅವನ ಬಾಳಮೊಗ್ಗು ಅರಳುತ್ತಿರುವಾಗಲೇ ಅವನಲ್ಲಿ ಇಂಥ ಬುದ್ಧಿ ಅರಳಿತಲ್ಲಾ.'

—ಎಂಬ ಕೊರಗು ಅವರ ಹೃದಯ ತಿರುಗಿದತ್ತ ಚುರುಕು ಮುಟ್ಟಿಸುತ್ತಿತ್ತು.

ಒಮ್ಮೆ 'ನನ್ನಮಗ ಇಂಥ ಅಶಾಶ್ವತವಾದುದನ್ನು ಬಯಸಿದನಲ್ಲಾ' ಎಂಬ ಕೊರಗಾದರೆ, ಮತ್ತೊಮ್ಮೆ 'ನನಗೆ ಇಂಥ ಮಗ ಹುಟ್ಟಬಹುದೇ? ನನಗೆ

ಇಂಥ ಮಗನಾಗುವುದಕ್ಕೆ ನಾನೇನು ಮಾಡಿದ್ದೆ? ನಾನು ಮಾಡಿದ ಯಾವ ಪಾಪದಫಲ ಈ ಮಗ...ಎಂಬ ಕೊರಗು.

ಹೀಗೇ ಒಂದೊಂದು ಗಳಿಗೆಗೆ ಒಂದೊಂದು ಬಗೆಯ ಕೊರಗು.

ಆ ಕೊರಗಿನಲ್ಲಿ, ಅವರ ಮೈಯ ಚರ್ಮವನ್ನು ಸುಲಿದು ಆ ಹಸಿ ಗಾಯದ ಮೇಲೆ ಯಾರೋ ಗಳಿಗೆಗೊಮ್ಮೆ ಉಪ್ಪುನೀರನ್ನು ತೊಟಕಿಸುತ್ತಿರುವಂತಿತ್ತು.

ಆ ವೇದನೆಯನ್ನು ತಾಳಲಾರದೆ ವೆಂಕಟದಾಸಪ್ಪನವರು, ಆ ಉರಿ ಬಿಸಿಲಿನಲ್ಲಿ ನಿಲ್ಲಲೂ ಆಗದೆ, ಎಲ್ಲಿಯಾದರೂ ತಣ್ಣಗಿರುವ ತಂಪು ಸ್ಥಳಕ್ಕೆ ಹೋಗಿ ಕುಳಿತುಕೊಳ್ಳಬೇಕೆಂದು ಯೋಚಿಸಿದರು.

ಎಲ್ಲಿಗೆ ಹೋಗುವುದು?

ತಮ್ಮ ಮನೆಯನ್ನು ಬಿಟ್ಟರೆ, 'ಇದೂ ನನ್ನ ಮನೆಯೇ' ಎಂದುಕೊಂಡು ಅವರು ಹೋಗಬಹುದಾಗಿದ್ದ ಮತ್ತೊಂದು ಮನೆ—ಗೌರಮ್ಮನ ಮನೆ. ಅಲ್ಲಿಗೆ ಹೋಗಲೇ ಎಂದು ಒಂದು ಕ್ಷಣ ಕಾಲ ಯೋಚಿಸಿದರು. ಆದರೆ, ಮರು ಗಳಿಗೆಯೇ ಅದೂ ಬೇಡವೆನಿಸಿತು. ಆಹೊತ್ತಿನಲ್ಲಿ ಅವರಿಗೆ ಏಕೋ ಸಮ್ಮ ತಮ್ಮವರು ಯಾರ ಮುಖವನ್ನು ನೋಡುವುದು ಇಷ್ಟವಾಗಲಿಲ್ಲ.

ಕೊನೆಗೆ ಈ ಮನುಷ್ಯ ಸಂಪರ್ಕವೇ ಬೇಡವೆಂದು ನಿಶ್ಚಯಿಸಿ, 'ಈ ಉರಿ ಬಿಸಿಲಿನ ಹೊತ್ತಿನಲ್ಲಿ, ಅಮ್ಮನವರ ದೇವಸ್ಥಾನದಲ್ಲಾದರೆ ಯಾವ ನರ ಪ್ರಾಣಿಯೂ ಇರುವುದಿಲ್ಲ' ಎಂದು ಆಲೋಚಿಸಿ ಅತ್ತ ಕಡೆ ನಡೆದರು.

ಸುತ್ತ ಬೆಳೆದ ದೊಡ್ಡ ಮರಗಳ ನೆರಳಿನಲ್ಲಿದ್ದ ದೇವಾಲಯದಲ್ಲಿ ಕುಳಿತು, ತೀಡಿ ಸೂಸುತ್ತಿದ್ದ ತಂಗಾಳಿ ಮೈಯನ್ನು ನೇವರಿಸಿದಾಗ ವೆಂಕಟದಾಸಪ್ಪನವರಿಗೆ, ತಟಕ್ಕನೆ ಯಾರೋ—

'ಇದೇ ನಿಜವಾದ ಮನೆ. ನಿನಗೊಬ್ಬನಿಗೆ ಅಲ್ಲ—ಮಾನವರೆಲ್ಲರಿಗೂ ಇದೇ ನಿಜವಾದ ಮನೆ! ಜಗತ್ತಿನಲ್ಲಿ ನೀನು ಆಶ್ರಯವೆಂದುಕೊಂಡವೆಲ್ಲವೂ ದೂರವಾದಾಗ, ನಿನ್ನದಾಗಿ ಉಳಿಯುವುದು ಇದೊಂದೇ ಮನೆ.'

—ಎಂದು ಹೇಳಿದಂತಾಗಿ, ಆ ಮಾತನ್ನು ಕೇಳಿಸಿಕೊಂಡ ವೆಂಕಟದಾಸಪ್ಪನವರು, ತಮಗೆ ತಾವೇ—

ನಿಜ ನಿಜ. ಇದೊಂದೇ ಮನೆ. ಇದೊಂದೇ ಶಾಶ್ವತವಾದ ಮನೆ. ಉಳಿದದ್ದೆಲ್ಲಾ ಅಶಾಶ್ವತ. ತಾಯಿಮರವಿನ್ನೂ ನೂರು ಕೊಂಬೆಗಳನ್ನು ಆಡಿಸುತ್ತಾ ಉಳಿದಿರುವಾಗ, ಒಂದು ಎಲೆ ನೆರಳು ತಪ್ಪಿಹೋಯಿತೆಂದು ನಾನಿಷ್ಟು ದುಃಖಿಸುವುದೇಕೆ? ಇದೇನು ನನ್ನ ಬುದ್ಧಿಗೆ ಹೀಗೆ. ಗಳಿಗೆ ಗಳಿಗೆಗೂ ಮಂಕು ಕವಿಯುತ್ತದೆ. ನನ್ನ ಬುದ್ಧಿ ಇನ್ನೂ, ಇಷ್ಟು ವರ್ಷಗಳಮೇಲೂ, ಇಷ್ಟು ಹಸಿಯಾಗೇ ಉಳಿದಿದೆಯಲ್ಲಾ—ಇದು ಗಟ್ಟಿಯಾಗುವುದೆಂದು? ದಿನದಿನವೂ—

'ನಾಹಂ ದೇಹೋನೇಂದ್ರಿಯಾಣ್ಯಂತರಂಗಂ
ನಾಹಂಕಾರಃ ಪ್ರಾಣವರ್ಗೋನ ಬುದ್ಧಿಃ।
ದಾರಾಪತ್ಯಕ್ಷೇತ್ರವಿತ್ತಾದಿ ದೂರಃ
ಸಾಕ್ಷೀ ನಿತ್ಯಃ ಪ್ರತ್ಯಗಾತ್ಮಾ ಶಿವೋಽಹಮ್॥

[ನಾನು ದೇಹವಲ್ಲ. ಇಂದ್ರಿಯವಲ್ಲ; ಮನಸ್ಸಲ್ಲ ಅಹಂಕಾರವಲ್ಲ. ಪ್ರಾಣವರ್ಗವಲ್ಲ. ಬುದ್ಧಿಯೂ ಅಲ್ಲ; ಹೆಂಡತಿ, ಮಕ್ಕಳು, ಭೂಮಿ, ಐಶ್ವರ್ಯಗಳಿಂದ ದೂರವಾದವನು ನಾನು. ನಿತ್ಯನೂ. ಸಾಕ್ಷಿಯೂ, ಪ್ರತ್ಯಗಾತ್ಮನೂ ಆದ ಸಾಕ್ಷಾತ್ ಶಿವನೇ ನಾನು.]

—ಎಂದು ಹೇಳಿಕೊಳ್ಳುತ್ತೇನಲ್ಲ, ಆ 'ನನ್ನ' ಹಣೆಬರಹ ಇಷ್ಟೇನೆಯೇ? ಈ ಲಂಪಟತ್ವದಿಂದ ನನಗೆ ಮುಕ್ತಿ ದೊರೆಯುವುದೆಂದು? ನನ್ನ ಬುದ್ಧಿಯನ್ನು 'ನಾನು–ನನ್ನದು' ಎಂಬ ವ್ಯಾಮೋಹದ ದಾರಿಯಲ್ಲಿ ಹರಿಯದಂತೆ, ತಡೆಯಲು ಎಷ್ಟೆಷ್ಟು ಬಗೆಯ ಆಣೆಕಟ್ಟು ಕಟ್ಟಲೆತ್ನಿಸಿದರೂ, ಒಂದೊಂದು ಬಾರಿಯೂ ಒಮ್ಮೊಮ್ಮೆಯೂ ಅದು ಮಕ್ಕಳು ಹಸಿ ಮರಳಿನಲ್ಲಿ ಕಟ್ಟಿದ ಮರಳಿನ ಗೋಪುರದಂತೆ ಕುಸಿದುಬೀಳುತ್ತಿರುವುದೇಕೆ? ನನ್ನ ಪ್ರಯತ್ನಗಳೆಲ್ಲವೂ ಹೀಗೆಯೇ ವಿಫಲವಾಗುವುದಾದರೆ, ನನಗೆಂದು ಮುಕ್ತಿ? ಮೂರು ಮಕ್ಕಳ ತಂದೆಯಾದೆ; ಮೂರು ಕತ್ತೆಯ ವಯಸ್ಸೂ ಆಯಿತು. ಸಂಸಾರದ ಸುಖ ದುಃಖಗಳನ್ನೆಲ್ಲಾ ಕಂಡದ್ದಾಯಿತು. ಆಗಾ–ಭೋಗವೆಲ್ಲಾ ಮುಗಿದ ಮೇಲೂ, ನನಗಿನ್ನೂ ಇವುಗಳಲ್ಲಿ ಕ್ರೋಧ–ಮೋಹ ಹೋಗಿಲ್ಲವಲ್ಲ? ಇದೆಲ್ಲದರಲ್ಲಿಯೂ ನಾನು ಪಾಲುಗಾರನೆಂಬ ಭಾವನೆ ಹೋಗಿ, ಸಾಕ್ಷೀ ಭಾವ ಪ್ರಾಪ್ತವಾಗಿಲ್ಲವಲ್ಲಾ?

ಈ ಅಲ್ಪವನ್ನೂ ಸಾಧಿಸಲಾಗದ ನನಗೆ, ಎಂದಾದರೂ ದೇವಿಯ ದರ್ಶನ-ವಾಗುವುದುಂಟೆ? ಮುಕ್ತಿ ಲಭಿಸುವುದುಂಟೆ?

—ಎಂದುಕೊಳ್ಳುತ್ತಾ, ಉಳಿದುದೆಲ್ಲವನ್ನೂ ಮರೆತು, ತಮ್ಮ ಚಿತ್ತದ ದೌರ್ಬಲ್ಯವನ್ನು ಕುರಿತು ಚಿಂತಿಸಲು ಯತ್ನಿಸಿದರು.

ಹೀಗೆ ಬುದ್ಧಿಯನ್ನು ಎತ್ತೆತ್ತ ತಿರುಗಿಸಲು ಯತ್ನಿಸಿದರೂ. ಆ ಬುದ್ಧಿಯ ಅಂತರಾಳದಲ್ಲಿಯೂ ಧ್ವನಿಯೊಂದು ಮಾತ್ರ—

'ನನ್ನ ಮಗ. ನನ್ನ ಮಗ, ಶಾಶ್ವತ ಶಿವ ಪದವಿಯನ್ನು ದೊರಕಿಸಿ ಕೊಡುವ ಭಕ್ತ ವೃತ್ತಿಯನ್ನು ಬಿಟ್ಟು, ಸಂಸಾರ ಕಾಸಾರದ ಕೆಸರಿನಲ್ಲಿ ಮತ್ತಷ್ಟು ಆಳವಾಗಿ ತಳ್ಳುವ, ಕೇವಲ ಭುಕ್ತಿಗೆ ಮಾತ್ರ ಮಾರ್ಗವಾದ ದಾಸವೃತ್ತಿಯನ್ನು ಬಯಸಿದನಲ್ಲಾ? ನನ್ನ ಮಗ ಹೀಗಾಗಬಹುದೇ?'

—ಎಂದು ಮಯ್ಯುತ್ತಲೇ ಇತ್ತು.

ಒಮ್ಮೊಮ್ಮೆ ಆ ಮಯ್ಯಲು ಅವರ ಒಳಗಿವಿಯನ್ನು ಸೋಕಿದಾಗ ಅವರ ಮೈಗೆ ಬೆಂಕಿಯನ್ನು ಲೇಪಿಸಿದಂತಾಗಿ, ಅವರ ಮೈಯ ನರನರವೂ ಆ ಆಮಯ್ಯಲನ್ನು ಮಾರ್ದನಿಸಿದಂತೆ—

'ಅಯ್ಯೋ—ನನ್ನ ಮಗ ತಪ್ಪು ದಾರಿ ತುಳಿದನಲ್ಲಾ...'

—ಎಂದು ಮಯ್ಯಲಿಟ್ಟು, ವೆಂಕಟದಾಸಪ್ಪನವರನ್ನು ಮತಿವಿಕಳರನ್ನಾಗಿ ಮಾಡುತ್ತಿದ್ದವು. ಆ ವಿಕಳಾವಸ್ಥೆಯಿಂದ ಪ್ರಕ್ಷುಬ್ಧವಾದ ಚಿತ್ತದ ಹೊಯ್ದಾಟವನ್ನು ಭರಿಸಲಾಗದೆ—

'ತಾಯಿ—ನನ್ನನ್ನು ಈ ದುಃಖ ಬೇಗೆಯಿಂದ ಪಾರು ಮಾಡು. ನೀನೊಬ್ಬಳಲ್ಲದೆ ಬೇರಾರೂ ನನ್ನನ್ನು ಉದ್ಧರಿಸಲಾರರು.

—ಎಂದು ಬೇಡುತ್ತಾ, ಆ ಯಾತನೆಯನ್ನು ಸಹಿಸಲಾಗದೆ, ಚಾವಡಿಯ ತಂಪಾದ ಕಲ್ಲು ನೆಲದ ಮೇಲೆ ಮೈಯನ್ನು ಚಾಚಿದರು.

ಹಾಗೇ, ಮನಸ್ಸಿನ ಯಾತನೆ ತೀರದೆ. ಅದನ್ನು ತೀರಿಸಿಕೊಳ್ಳುವ ದಾರಿಯೂ ಕಾಣದೆ ಅಷ್ಟುಹೊತ್ತು ಮಲಗಿಯೇ ಇದ್ದರು ವೆಂಕಟದಾಸಪ್ಪ.

೯

ಹಾಗೆ ಅವರು ಮಲಗಿರುವಾಗ ಹತ್ತಿರದಲ್ಲಿ ಯಾರೋ ಕೆಮ್ಮಿದ ಸದ್ದು ಕೇಳಿ, 'ಈ ಹೊತ್ತಿನಲ್ಲಿ ಇಲ್ಲಿಗೆ ಯಾರೂ ಬರುವುದಿಲ್ಲವೆಂದುಕೊಂಡು ಬಂದರೆ, ಇಲ್ಲಿಗೂ 'ಯಾರೋ ಬಂದರಲ್ಲ' ಎಂಬ ಬೇಸರವಾಗಿ, 'ಯಾರೋ' ಎಂದು ಮಲಗಿದಂತೆಯೇ ಮೈ ಹೊರಳಿಸಿ ನೋಡಿದರು.

ದೇವಸ್ಥಾನಕ್ಕೆ ಇದಿರಾಗಿ ಬೆಳೆಸಿದ ಅಶ್ವತ್ಥ ವೃಕ್ಷದ ಕಟ್ಟೆಯ ಮೇಲೆ, ಯಾರೋ ಒಬ್ಬ ಸನ್ಯಾಸಿ ಕುಳಿತಿದ್ದ.

ಸನ್ಯಾಸಿ—ನಿಜ—ಸನ್ಯಾಸಿ.

ಆತ ಧರಿಸಿದ ಕಾವಿಯ ಅಂಗಿ, ತಲೆಯ ಮೇಲಿನ ಕಾವಿಯ ಬಣ್ಣದ ಬಟ್ಟೆಯ ಟೋಪಿ. ಆತ ತನ್ನ ಪಕ್ಕದಲ್ಲಿರಿಸಿದ ಹಸಿಬೆಯ ಚೀಲದ ಪಕ್ಕದಲ್ಲಿದ್ದ ಮರದ ದಂಡ, ಹಿತ್ತಾಳೆಯ ಕಮಂಡಲ—ಎಲ್ಲವೂ ಆತ ಸನ್ಯಾಸಿಯೆಂಬುದಕ್ಕೆ ಸಾಕ್ಷಿಯಾಗಿದ್ದವು.

'ಯಾರೋ ವೈರಾಗಿ—ಪಕ್ಕದ ಹಳ್ಳಿಯಿಂದ ದೇವೀಕೆರೆಗೆ ಬರಬೇಕೆಂದು ಹೊರಟು, ಬಿಸಿಲಿನಲ್ಲಿ ನಡೆದ ದಣಿವನ್ನು ಆರಿಸಿಕೊಳ್ಳಲು ಇಲ್ಲಿ ಬಂದು ಕುಳಿತುಕೊಂಡಿರಬೇಕು. ಹೋಗಲಿ ಯಾರಾದರೆ ನನಗೇನು?'

—ಎಂದುಕೊಂಡು ತಲೆಯನ್ನು ಬೇರೆ ಕಡೆಹೊರಳಿಸಿ ಮಲಗಿದರು.

'ಆತ ಯಾರಾದರೇನು—ಸನ್ಯಾಸಿ. ಎದ್ದು ಹೋಗಿ ನಮಸ್ಕರಿಸಿ, ಆತನ ಯೋಗಕ್ಷೇಮ ವಿಚಾರಿಸು.'

—ಎಂದು ಅವರ ಒಳದನಿ ಹೇಳುತ್ತಿದ್ದರೂ ಅದಕ್ಕೆ ಕಿವುಡಾಗಿ ಮಲಗಿದ್ದರು.

ಅವರು ಹಾಗೆ ಮಲಗಿರುವಾಗಲೇ, ದೇವಾಲಯದ ಕಲ್ಲುಮೆಟ್ಟಲುಗಳ ಮೇಲೆ, ಆವನ ಕಾಲಿನ ಮರದ ಹಾವುಗೆಗಳ 'ಖಟ್-ಖಟ್' ಎಂಬ ಸದ್ದಾಗಿ, ಆತ ದೇವಾಲಯದೊಳಕ್ಕೆ ಬಂದನೆಂಬುದು ಅರಿವಾಗಿ, ಆಗಲೂ ಮಲಗಿರಲು ಸಾಧ್ಯವಾಗದೆ ಎದ್ದು ಕುಳಿತರು. ಅವರು ಎದ್ದು ಕುಳಿತು ನೋಡಿದಾಗ ಸನ್ಯಾಸಿ,

ದೇವಾಲವಯನ್ನು ಪ್ರವೇಶಿಸಿ, ಗರ್ಭಗುಡಿಯ ಬಾಗಿಲ ಬಳಿಹೋಗಿ, ತನ್ನ ಕೈಯಲ್ಲಿದ್ದ ಹಸಿಬೆ, ದಂಡ, ಕಮಂಡಲಗಳನ್ನು ನೆಲದ ಮೇಲಿಟ್ಟು—

'ನಮೋ ದೇವ್ಯೈ ಮಹಾ ದೇವ್ಯೈ ಶಿವಾಯೈ ಸತತಂ ನಮಃ
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾ ಸ್ಮತಾಮ್॥

—ಎಂದು ಕೈ ಮುಗಿದು ಹೇಳಿಕೊಂಡು, ಪ್ರದಕ್ಷಿಣೆ ನಮಸ್ಕಾರ ಮಾಡಿ, ಹೊಸ್ತಿಲ ಮೇಲಿದ್ದ ಧೂಳನ್ನು ಹಣೆಗೆ ಲೇಪಿಸಿಕೊಂಡು, ತಾನೂ ಅಲ್ಲಿಯೇ ಒಂದು ಕಂಭಕ್ಕೆ ಒರಗಿ ಕುಳಿತು ವೆಂಕಟದಾಸಪ್ಪನವರತ್ತ ನೋಡಿ—

'ನಮಸ್ಕಾರ ಮಹಾರಾಜ್'

—ಎಂದ.

ಆತ ಆ ಮಾತನ್ನು ಹೇಳಿದ ಬಳಿಕ ವೆಂಕಟದಾಸಪ್ಪನವರಿಗೆ ತಮ್ಮ ಕರ್ತವ್ಯ ನೆನಪಾಗಿ ನಾಚಿಕೆಯಾಯಿತು.

'ಆತ ಸನ್ಯಾಸಿ, ನಾನು ಸಂಸಾರಿ—'

'ಸನ್ಯಾಸಿಯ ದರ್ಶನವಾಗುತ್ತಿದ್ದ ಹಾಗೇ ಹೋಗಿ ನಮಸ್ಕರಿಸಿ, ಆತನಿಂದ ಆಶೀರ್ವಾದ ಪಡೆಯಬೇಕಾದುದು ಸಂಸಾರಿಯಾದ ನನ್ನ ಕರ್ತವ್ಯ. ದುಃಖದ ಕುರುಡಿನಲ್ಲಿ ನಾನು ಕರ್ತವ್ಯಭ್ರಷ್ಟನಾಗಿ, ಆತನೇ ಮೊದಲು ನನಗೆ ನಮಸ್ಕರಿಸುವಂತೆ ಮಾಡಿಕೊಂಡೆನಲ್ಲಾ, ನಾನೆಂಥ ಮೂರ್ಖ.'

—ಎಂದು ಪಶ್ಚಾತ್ತಾಪ ಪಡುತ್ತಾ, ನಾಚುತ್ತಾ, ಕುಳಿತಿದ್ದವರು ಮೇಲೆದ್ದು ಸನ್ಯಾಸಿಯಬಳಿ ಸಾರಿ—

'ನನ್ನಿಂದ ಅಪರಾಧವಾಯಿತು. ಮನ್ನಿಸಬೇಕು ಸ್ವಾಮಿ'

'—ಎಂದು ಹೇಳಿ, ಸಾಷ್ಟಾಂಗ ಪ್ರಣಾಮ ಮಾಡಿದರು.

ಅವರ ಮಾತನ್ನು ಕೇಳಿ ಸನ್ಯಾಸಿ ಗಟ್ಟಿಯಾಗಿ ನಕ್ಕುಬಿಟ್ಟು—

'ಈ ಸಂಸಾರಿಗಳ ಹಣೆಬರಹವೇ ಇಷ್ಟು ಮಹಾರಾಜ್, ತಪ್ಪು ಮಾಡುತ್ತಾ ಇರೋದು, ಕ್ಷಮಿಸು ಅಂತ ಬೇಡೋದು. ಮತ್ತೆ ತಪ್ಪು ಮಾಡೋದು. ನಡೆಯಲಿ'—

—ಎಂದು ಹೇಳಿದ.

ಆತ ನಗುತ್ತಾ ಹೇಳಿದ ಮಾತನ್ನು ಕೇಳಿ, ವೆಂಕಟದಾಸಪ್ಪನವರಿಗೆ ತಮ್ಮ ನರನರಗಳನ್ನೂ ಹಿಡಿದು ಕಲುಕಿದಂತಾಯಿತು. ಆತ ಜಗತ್ತಿನ ಎಲ್ಲ ಸಂಸಾರಿ-

ಗಳಿಗೂ ಅನ್ವಯಿಸಿ ಹೇಳಿದ ಆ ಮಾತುಗಳು, ವೆಂಕಟದಾಸಪ್ಪನವರಿಗೆ ತಮಗೇ ಗುರಿಯಿಟ್ಟು, ಹೇಳಿದಂತೆ ತೋರಿ–

'ನಿಜ, ನಿಜ,ಸ್ವಾಮಿ. ಮತ್ತೆ ನನ್ನಿಂದ ಎಂದೂ ಇಂಥ ಅವಿವೇಕವಾಗದಂತೆ. ಹರಸಬೇಕು, ನಾನು ಪಾಪಿ.–

ಪಾಪೋಽಹಂ, ಪಾಪ ಕರ್ಮಾಣಾಂ
ಪಾಪಾತ್ಮಾ ಪಾಪ ಸಂಭವಾ
ತ್ರಾಹಿಮಾಂ ಕೃಪಯಾ ದೇವ। ಶರಣಾಗತವತ್ಸಲ॥
ಅನ್ಯಥಾ ಶರಣಂ ನಾಸ್ತಿ। ತ್ವಮೇವ ಶರಣಂ ಮಮ
ತಸ್ಮಾತ್ ಕಾರುಣ್ಯ ಭಾವೇನ। ರಕ್ಷರಕ್ಷೋಽ ಜನಾರ್ಧನ॥

—ಎಂದು ಹೇಳಿ, ಸನ್ಯಾಸಿಯ ಎರಡೂ ಕಾಲನ್ನು ಗಟ್ಟಿಯಾಗಿ ಹಿಡಿದು ಬೇಡಿದರು. ಅವರ ಆ ಬೇಡಿಕೆಗೆ ಉತ್ತರವಾಗಿ ಸನ್ಯಾಸಿ–

'ವಿವೇಕ ಪ್ರಾಪ್ತಿರಸ್ತು'

—ಎಂದು ವೆಂಕಟದಾಸಪ್ಪನವರ ತಲೆಯನ್ನು ನೇವರಿಸಿ ಆಶೀರ್ವದಿಸಿ–

'ಏಳಿ ಮಹಾರಾಜ್'

—ಎಂದು ಹೇಳಿದ.

ಸನ್ಯಾಸಿ ಆಶೀರ್ವದಿಸಿದ ಬಳಿಕ ವೆಂಕಟದಾಸಪ್ಪನವರು ಎದ್ದು ಕುಳಿತು, ಸನ್ಯಾಸಿಯತ್ತ ನೋಡಿದರು. ಅವನ ಮುಖದ ಮೇಲೆ ಪ್ರಶಾಂತವಾದ ಮಂದ ಹಾಸ ಮಿನುಗುತ್ತಿತ್ತು. ಆ ನಗುವನ್ನು ಕಂಡು ವೆಂಕಟದಾಸಪ್ಪನವರಿಗೆ, ತಮಗೇ ಏನೋ ಅಭಯ ದೊರೆತಂತಾಗಿ, ತಮ್ಮ ಹೃದಯವನ್ನು ನಲುಗಿಸು ತ್ತಿದ್ದ ಯಾತನೆಯನ್ನು ಆತನ ಮುಂದೆ ತೋಡಿಕೊಂಡರೆ, ಅದು ಪರಿಹಾರ ವಾಗಬಹುದೆಂಬ ಆಸೆ ಮಿನುಗಿತು. ಅವರು ಅದನ್ನು ಯೋಚಿಸುತ್ತಿರುವಾಗ, ಸನ್ಯಾಸಿಯೂ ಅವರ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದವನು—

'ಏನೋ ಕೇಳಬೇಕು ಎಂದು ಯೋಚಿಸುತ್ತಿರುವಂತಿದೆಯಲ್ಲಾ– ಅದೇನು ಕೇಳಿ ಮಹಾರಾಜ್.'

—ಎಂದ.

'ತಾವು ಎಲ್ಲಿಂದಲೋ ಬಹು ದೂರದಿಂದ ನಡೆದುಬಂದು ಬಳಲಿ, ಇಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ಕುಳಿತಿರುವ ಹಾಗಿದೆ. ಹಾಗಿರುವಾಗ...

'ಈ ಘಟ ಹುಟ್ಟಿರುವುದೇ ಅದಕ್ಕೆ ಮಹಾರಾಜ್ ದಣಿದಣಿದು ಸವೆದು ಒಂದು ದಿನ ಸಿಡಿದುಹೋಗುವುದಕ್ಕೆ...ಹಾಗಿರೋ ಘಟಕ್ಕೆ ಕಷ್ಟ ಇಷ್ಟು ಹೆಚ್ಚು, ಇಷ್ಟು ಕಡಿಮೆ ಎನ್ನುವುದೇನು ಬಂತು. ಅದೇನು ಬೇಕೋ ಕೇಳಿ?'

## ೧೦

'ಸನ್ಯಾಸಿ ಕೇಳಿ' ಎಂದು ಆಶ್ವಾಸ ಕೊಟ್ಟ, ಬಳಿಕ ವೆಂಕಟದಾಸಪ್ಪನವರಿಗೆ ತಮ್ಮ ಹೃದಯವನ್ನು ಪಾವನವಾದಂತೆ ದಹಿಸುತ್ತಿದ್ದ ಪ್ರಶ್ನೆಯನ್ನು ಕೇಳಲು ಧೈರ್ಯವಾಗಿ ಕೇಳಿದರು:

'ಈ ದುಃಖಗಳಿಂದ ನನಗೆಂದು ಮುಕ್ತಿಯಾಗುತ್ತದೆ ಸ್ವಾಮಿ?'

'ದುಃಖ ಕಾರಣ ನಿವಾರಣೆಯಾದೆಂದು 'ಮಹಾರಾಜ್'.

'ನಾನು, ತಾವು ಸೂಕ್ಷ್ಮವಾಗಿ ಹೇಳಿದುದನ್ನು ಅರ್ಥ ಮಾಡಿಕೊಳ್ಳುವಷ್ಟು ಜ್ಞಾನಿಯಲ್ಲ. ಆದ್ದರಿಂದ ವಿವರಿಸಿ ಹೇಳುವ ಕೃಪೆ ಮಾಡಬೇಕು.'

'ಇದು ಅರ್ಥವಾಗದಷ್ಟು ತೊಡಕಾದ ಸಮಸ್ಯೆಯೇನೂ ಅಲ್ಲ ಮಹಾರಾಜ್, ತಿಳಿದುಕೊಳ್ಳಬೇಕು ಎಂಬ ಮನಸಿದ್ದರೆ ಬಹು ಸುಲಭ. ಈ ದೇಹಕ್ಕೋ ಈ ದೇಹಕ್ಕೆ ವಶವಾದ ಇಂದ್ರಿಯಗಳಿಗೆ ದುಃಖ ಪ್ರಾಪ್ತಿಯಾಗುವುದು, ಅನೈಸರ್ಗಿಕಕಾರ್ಯ ನಡೆಯುವುದರಿಂದ. ಯಾವುದು ಪ್ರಕೃತಿನಿಯಮಕ್ಕೆ ವಿರುದ್ಧವೋ ಅದೇ ಪಾಪ. ಆ ಪಾಪವೇ ದುಃಖ ಕಾರಣ. ಪಾಪಕ್ಕೆ ಪ್ರಾಯಶ್ಚಿತವಾದಂದು, ಪಾಪ ನಿವಾರಣೆಯಾಗುತ್ತದೆ. ತನ್ಮೂಲಕ ಪಾಪಜನ್ಯವಾದ ದುಃಖವೂ ನಿವಾರಣೆಯಾಗುತ್ತದೆ. ನೀವು ಏನು ಅಂಥ ಪಾಪ ಮಾಡಿದ್ದೀರಿ ಎಂದು ಯೋಚಿಸಿ ಮಹಾರಾಜ್. ಅದಕ್ಕೆ ಸಲ್ಲಬೇಕಾದ ಪ್ರಾಯಶ್ಚಿತ ಸಂದಲ್ಲಿ, ದುಃಖ ನಿರ್ಮೂಲವಾಗುತ್ತದೆ.

—ಆ ಕಾರ್ಯ ಬಹಳ ಸುಲಭವಾಗಿರುವಂತೆ ಹೇಳಿದ ಸನ್ಯಾಸಿ.

'ನಾನು ಪಾಪ ಮಾಡಿರುವುದೂ ಉಂಟು...ಅದಕ್ಕಾಗಿ ಪಶ್ಚಾತ್ತಾಪ ಪಟ್ಟಿರುವುದೂ ಆಗಿದೆ. ಆದರೂ ಮತ್ತೆ ಮತ್ತೆ ನನಗೆ ಈ ಬಗೆಯ ದುಃಖ ಒದಗುತ್ತಿರುವುದೇಕೆ?

—ದಿಕ್ಕರಿಯದವನಂತೆ ಕೇಳಿದರು. ವೆಂಕಟದಾಸಪ್ಪ.

'ಅಲ್ಲೇ...ಅಲ್ಲೇ...ನೀವು ತಪ್ಪು ಮಾಡುತ್ತಿದ್ದೀರಿ ಮಹಾರಾಜ್...'

'ಅಂದರೆ—?'

'ಪಾಪಕ್ಕೆ ಪಶ್ಚಾತ್ತಾಪವೇ ಪ್ರಾಯಶ್ಚಿತ್ತ ಎಂದು ತಾವು ಭ್ರಮಿಸಿರು ಹಂತಿದೆ. ದೇವರ ಲೆಕ್ಕಾಚಾರ ಹಾಗಿಲ್ಲ.'

'ತಮ್ಮ ಮಾತು ಅರ್ಥವಾಗಲಿಲ್ಲ.'

'ಇಷ್ಟೇ—ಗಾಯವಾದರೆ ನೋವಾಗುವ ಹಾಗೆ, ನಮ್ಮಿಂದ ಪಾಪಕೃತ್ಯ ಘಟಿಸಿದಾಗ ಪಶ್ಚಾತ್ತಾಪವಾಗುತ್ತದೆ. ಅದು ಸಹಜ ಪ್ರತಿಕ್ರಿಯೆ. ಗಾಯಕ್ಕೆ ನೋವು ಹೇಗೆ ಔಷಧವಲ್ಲವೋ ಹಾಗೇ ಪಾಪಕ್ಕೆ ಪಶ್ಚಾತ್ತಾಪವೂ ಮದ್ದಲ್ಲ. ಅದು—ತೀರಬೇಕು ಎಂದರೆ, ಗಾಯಕ್ಕೆ ಔಷಧ ಕಟ್ಟುವ ಹಾಗೆ, ಪಾಪಕ್ಕೆ ಪ್ರಾಯಶ್ಚಿತ್ತವ ಬಲಿ ಒಪ್ಪಿಸಬೇಕು. ಆದಾಗದೆ ದುಃಖ ತೀರುವುದಿಲ್ಲ. ಇದು ದೈವೀ ನಿಯಮ.'

'ಸರಿಯೆ—ದಿನವೂ ಆ ಪಾಪಶಮನಕ್ಕೆಂದೇ ಪೂಜೆ. ಉಪವಾಸ ಎಲ್ಲವನ್ನೂ ಮಾಡುತ್ತೇನಲ್ಲ.

'ಅದು ಮೋಸ'

—ನಿಷ್ಠುರವಾಗಿ ಹೇಳಿದ ಸನ್ಯಾಸಿ.

'ಅಂದರೆ—?

—ಗಾಬರಿಯಾಗಿ ಕೇಳಿದರು ವೆಂಕಟದಾಸಪ್ಪ.

'ನಿಮ್ಮ ಪೂಜೆ ಪ್ರಾಯಶ್ಚಿತ್ತರೂಪವಾದುದಲ್ಲ. ಪೂಜೆ ಮಾಡುವುದೇ ಬೇರೆ ಉದ್ದೇಶವಾಗಿ. ನಿಮ್ಮ ಉಪಾಸನೆಗೆ ಒಂದು ಉದ್ದೇಶವಿಲ್ಲವೇ? ನನಗೇನೂ ಬೇಡ ಎಂದು ಪೂಜೆ ಮಾಡುತ್ತಿದ್ದೀರಾ?

'ಇಲ್ಲ ನನಗಾಗಿ ನಾನೇನೂ ಬೇಡಿಲ್ಲ. ಆದರೆ ಲೋಕದ ದುಃಖ ಪರಿಹರಿಸು ಎಂದು ಬೇಡುತ್ತೇನೆ.'

'ಆಯಿತು. ನೀವು ಪೂಜೆ ಮಾಡಿದ್ದಕ್ಕೆ ಅಷ್ಟು ಫಲ ಸಿಕ್ಕಿದೆಯೋ ಇಲ್ಲವೋ?

ಅಷ್ಟಾಗಿದೆ ಎನ್ನಬೇಕು.

ಅಲ್ಲಿಗೆ ಮುಗಿದು ಹೋಯಿತು. ನಿಮ್ಮ ಪೂಜೆಯ ಖಾತೆಯಲ್ಲಿ ದೇವಿ ನಿಮಗೆ ಸಲ್ಲಬೇಕಾದ ಬಾಕಿ ಸಲ್ಲಿಸಿದ್ದಾಳೆ. ಆದರೆ ನಿಮ್ಮ ಖಾತೆಯಲ್ಲಿ ಮಾತ್ರ ಪಾಪಋಣ ಉಳಿದೇ ಇದೆ. ಅದಕ್ಕೆ ಈಗ ದುಃಖಕೊಟ್ಟು ಆ ಸಾಲ ತೀರಿಸಿ ಕೊಳ್ಳುತ್ತಿದ್ದಾಳೆ. ಆದ್ದರಿಂದ ದುಃಖಹೆಚ್ಚಿದಷ್ಟೂ, ನನ್ನ ಪಾಪಋಣ ಕಡಿಮೆ

ಯಾಗುತ್ತಿದೆ ಎಂದು ಸಂತೋಷಪಡದೆ. ಅಳುತ್ತಿದ್ದೀರಲ್ಲಾ– ಅದು ನ್ಯಾಯವೇ ಯೋಚಿಸಿ–ಮಹಾರಾಜ್, 'ಲೋಕಹಿತಾಯಚ' ಎಂದು ಪೂಜೆ ಮಾಡುವ ಜನ ಇನ್ನೂ ಒಂದು ಮಾತು ಯೋಚಿಸಬೇಕು...'

'ಅದೇನು ಹೇಳಿ ಮಹಾರಾಜ್?'

'ಲೋಕ ಹಿತಾಯಚ ಎಂದು ಪೂಜೆ ಮಾಡುವವರು, ದೇವಿಯನ್ನು ತಮಗಾಗಿ ಏನೂ ಕೇಳಬಾರದು. ಹಾಗೆ ಕೇಳಿದರೆ ಚಕ್ರಬಡ್ಡಿಯ ಸಾಲ ಪತ್ರಕ್ಕೆ ರುಜುಹಾಕಿದ ಹಾಗಾಗುತ್ತದೆ.'

'ಅಂದರೆ—?'

'ದೇವಿಯನ್ನು ನಿಮಗಾಗಿ ನೀವು ಏನೂ ಬೇಡುತ್ತಿಲ್ಲವೇ?'

'ಇಲ್ಲವೆನ್ನಲಾರೆ–ಆಕೆಯ ದರ್ಶನವನ್ನು ಬೇಡುತ್ತಿದ್ದೇನೆ.'

'ಅಂದರೆ ನಿಮಗೆ ಆಕೆಯ ದರ್ಶನವಾಗಬೇಕು; ಲೋಕಕ್ಕೂ ಒಳ್ಳೆಯ ದಾಗಬೇಕು. ಅಲ್ಲವೇ?'

'ನಿಜ.'

'ಅಂದರೆ–ನಿಮ್ಮ ಲೆಕ್ಕಾಚಾರ ಹೀಗಿದೆ; ನಾನು ಕೊಡೋದು ಒಂದು; ಅದಕ್ಕೆ ನೀನು ಎರಡು ಕೊಡು ಅಂತ ಕೇಳಿದ ಹಾಗಾಯಿತು. ಇದು ನ್ಯಾಯವೇ? ಲೆಕ್ಕಾಚಾರವೇ?

'ಲೆಕ್ಕಾಚಾರದ ಮಾತಾಡಲು ತಾಯಿ ಕೋಮಟಿಯಲ್ಲವಲ್ಲ...'

'ಕೋಮಟಿಯಲ್ಲ ಕೋಮಟಿಯ ಅಪ್ಪ! ನಿಮಗದು ತಿಳಿಯದು ಮಹಾರಾಜ್, ಅದಕ್ಕೆ ಹೀಗೆ ಹೆಜ್ಜೆಹೆಜ್ಜೆಗೂ ಎಡವುತ್ತಿದ್ದೀರ. ನಿಮಗೆ ಸಾಲ ಕೊಟ್ಟ ಶೆಟ್ಟಿ, ಬಡ್ಡಿಯನ್ನು ಕೇಳದೆ ಸಾಧ್ಯಸ್ತನ ಹಾಗಿದ್ದು, ಕೊನೆಗೆ ಅಡವಿಟ್ಟ ದ್ದನ್ನೆಲ್ಲಾ ಎತ್ತಿ ಹಾಕುವುದಿಲ್ಲವೇ? ದೇವಿಯೂ ಅಂಥ ಮೋಸಗಾತಿಯೇ! ನೀವು ದರ್ಶನ ಕೊಡು ಎಂದು ಪೂಜೆ ಮಾಡುತ್ತಿದ್ದರೆ ಆಗಾಗ ಅಷ್ಟು ಫಲ ಕೊಡುತ್ತಾಳೆ. ನೀವಾಡಿದಮಾತು ನಡೆಯುವ ಹಾಗೆ ಮಾಡುತ್ತಾಳೆ; ನೀವು ಕೊಟ್ಟ ನೀರಿಗೆ ಅಮೃತದ ಶಕ್ತಿ ಬರುವಹಾಗೆ ಮಾಡುತ್ತಾಳೆ. ಇವೆಲ್ಲವೂ ತನ್ನ ವಿಷಯದಲ್ಲಿ ತಾಯಿ ತೋರಿಸಿದ ಅನುಗ್ರಹ ವಿಶೇಷ ಎಂದು ಸಾಧಕ ಭ್ರಮಿಸುತ್ತಾನೆ. ಅಲ್ಲವೇ?'

'ನಿಜ'.

'ಆದರೆ ಅದು ಅನುಗ್ರಹವಲ್ಲ; ಅನುಗ್ರಹರೂಪದ ಮೋಸ!'

'ಅದು ಹೇಗೆ?'

'ಬರೀ ಮೋಸವಷ್ಟೇ ಅಲ್ಲ, ಶುದ್ಧ ಹಗಲು ದರೋಡೆ. ಆ ಅಲ್ಪ ಶಕ್ತಿಗಳ ವಿಷಯದಲ್ಲಿ ನೀವು ಎಚ್ಚರವಾಗಿದ್ದು ಅದನ್ನು ಬಳಸಲಿಲ್ಲವೋ ಬದುಕಿದಿರಿ. ಹಾಗಲ್ಲದೆ ಬಳಸಿದಿರೋ—ನಿಮ್ಮ ಪುಣ್ಯಶಕ್ತಿ ಕಡಿಮೆಯಾಗು ವುದಷ್ಟೇ ಅಲ್ಲ, ಪಾಪ ಭಾರ ದಿನದಿನಕ್ಕೆ ಬೆಳೆಯುತ್ತದೆ'

'ಅದು ಹೇಗೆ?'

'ಅದೂ ಒಂದು ತರಹ ಕೋಪುಟಿಯ ಲೆಕ್ಕವೇ.' ನೀವು ಪೂಜೆ ಮಾಡಿದ್ದಕ್ಕೆ ತಾಯಿ 'ನಿನ್ನ ಋಣ ನನಗೆ ಬೇಡ ಈ ಶಕ್ತಿ ತೆಗೆದುಕೋ' ಎನ್ನುತ್ತಾಳೆ ಸಾಧಕನಿಗೆ. ಸಾಧಕ ಆ ಶಕ್ತಿಯ ನಿಜರೂಪವನ್ನರಿಯದೆ, ಲೋಕೋಪಕಾರವೆಂಬ ಮಾಯಾಮೃಗಕ್ಕೆ ಮೋಹಿಸಿ ಆ ಕಾರ್ಯದಲ್ಲಿ ಅದನ್ನು ಬಳಸುತ್ತಾನೆ. ಹಾಗೆ ಬಳಸಿದಾಗ, ಅವನು ಪಡೆದ ಈ ಶಕ್ತಿ ಹೋಯಿತು, ಅದರೊಂದಿಗೆ ಬೇರೆಯವರ ಪಾಪಭಾರ ಅವನ ಹೆಗಲೇರಿತು.'

'ಅದುಹೇಗೆ?'

'ಎಲ್ಲ ದುಃಖವೂ ಪಾಪ ಜನಿತವಾದದ್ದು ಎನ್ನಲಿಲ್ಲವೆ?' ಆ ದುಃಖ ವ್ಯಾಧಿರೂಪವಾಗಿ, ಬಡತನದ ರೂಪವಾಗಿ, ಮೃತ್ಯುರೂಪವಾಗಿ—ಹೇಗೆಹೇಗೋ ಕಾಣಿಸಿಕೊಳ್ಳುತ್ತದೆ. ಅಂಥವನು ತನ್ನ ಕೈಯಲ್ಲಿ ಅದನ್ನು ನಿವಾರಿಸಿಕೊಳ್ಳಲು ಶಕ್ತಿ ಇಲ್ಲದಿದ್ದಾಗ. ಬಡವ ಸಾಹುಕಾರನ ಬಳಿ ಓಡಿಬರುವ ಹಾಗೆ ಸಾಧಕನ ಬಳಿ ಓಡಿ ಬರುತ್ತಾನೆ. ಸಾಧಕ 'ಇದು ತಗೋ' ಎಂದು ನಿವಾರಣೆಯನ್ನು ಕೊಟ್ಟರೆ, ಸಾಲಕೊಟ್ಟ ಸಾಹುಕಾರನ ಬಂಡವಾಳ ಕಡಿಮೆಯಾಗುವ ಹಾಗೆ, ಸಾಧಕನ ಶಕ್ತಿಹೋಗುತ್ತದೆ. ಅಲ್ಲದೆ ಅವನ ಪಾಪ ಸಾಧಕನ ಹೆಗಲಮೇಲೆ ಕುಳಿತುಕೊಳ್ಳುತ್ತದೆ.'

'ನಿಮ್ಮ ವಾದ ನನಗೆ ಅರ್ಥವಾಗಲಿಲ್ಲ'.

'ನಾನು ಮೊದಲೇ ಹೇಳಲಿಲ್ಲವೇ ಮಹಾರಾಜ್—ಪ್ರಾಯಶ್ಚಿತ್ತವಿಲ್ಲದೇ ಪಾಪ ನಿವಾರಣೆಯಾಗುವುದಿಲ್ಲವೆಂದು. ನೀವು ಮತ್ತೊಬ್ಬರ ಪಾಪ ನಿವಾರಣೆ ಯಾಗಲಿ ಎಂದರೆ, ಪಾಪ ಅವರನ್ನು ಬಿಟ್ಟಿತು. ಅದು ಎಲ್ಲಿ ಹೋಗಬೇಕು?

ಅವರನ್ನು ಬಿಟ್ಟು ನಿಮ್ಮ ಹೆಗಲು ಹತ್ತುತ್ತದೆ. ಆ ಎಲ್ಲ ಪಾಪಕ್ಕೂ ನೀವು ಪ್ರಾಯಶ್ಚಿತ್ತ ಒಪ್ಪಿಸಿದ ಬಳಿಕವೇ ಆ ಪಾಪಕ್ಕೂ ಮುಕ್ತಿ.ನಿಮಗೂ ಮುಕ್ತಿ.

'ಹಾಗಾದರೆ ಇಷ್ಟೇನೇ ಆ ಅನುಗ್ರಹ ಅನ್ನೋದು?'

'ಅಷ್ಟೆ. ಆಕೆ ಕೊಡುವ ಇಂಥ ಅಲ್ಪ ಶಕ್ತಿಗಳ ಹಣೆಬರಹವೆಲ್ಲಾ ಇಷ್ಟೆ.' ಅವುಗಳಿಂದ ಪಾಪನಿವಾರಣೆ ಮಾಡುವ ಶಕ್ತಿ ಬರುವುದಿಲ್ಲ. ಮತ್ತೊಬ್ಬರ ಪಾಪವನ್ನು ಹೊರಬಲ್ಲ ಬಲ ಮಾತ್ರ ಬರುತ್ತದೆ.'

'ತನ್ನನ್ನು ಆರಾಧಿಸುವ ಭಕ್ತನಿಗಾಗಿ ತಾಯಿ ಅಷ್ಟೂ ಮಾಡುವುದಿಲ್ಲವೇ?'

'ಅವಳಿಗೇನು ಗ್ರಹಚಾರ. ಆ ಸಾಲದ ಹೊಣೆ ಹೊತ್ತುಕೊಂಡವರು ನೀವು; ನೀವೇ ತೀರಿಸಬೇಕು. ಅದು ಬಿಟ್ಟು ಅದೆಲ್ಲಾ ನೀನುಹೊರ ಬೇಕೆಂದರೆ ಆಕೆ ಏಕೆ ಒಪ್ಪಿಯಾಳು? ನೀವೇನು ಆಕೆಯ ಉದ್ಧಾರಕ್ಕೆ ಪೂಜೆ ಮಾಡಿದಿರಾ? ನಿಮ್ಮ ಬಯಕೆ ತೀರಿಸಿಕೊಳ್ಳಲು ಆಕೆಯ ಪೂಜೆ ಮಾಡಿದಿರಿ. ಅದಕ್ಕೆ ಆಕೆ ನಿಮ್ಮ ಬಾಕಿ ಉಳಿಸಿಕೊಳ್ಳದೆ. ಆಗಿಂದಾಗ್ಗೆ ಅಷ್ಟಷ್ಟು ಕೊಡುತ್ತ ಬಂದಳು. ಸುಮ್ಮನಿದ್ದು. ಆ ಪೂಜೆಯನ್ನು ಹಾಗೇ ಮುಂದುವರಿಸಿಕೊಂಡುಹೋಗಿದ್ದರೆ ನಿಮ್ಮ ಬಯಕೆಯನ್ನು ತೀರಿಸುತ್ತಿದ್ದಳು. ಅದು ಬಿಟ್ಟು ಮೂರನೆಯವರ ವ್ಯವಹಾರಕ್ಕೆ ತಲೆ ಹಾಕಿದ ಮೇಲೆ, ಅದರ ಫಲ ನೀವೇ ಅನುಭವಿಸಬೇಕು. ದೇವರ ಲೆಕ್ಕಾಚಾರ ಹೀಗಿದೆ ಮಹಾರಾಜ್. ಆದ್ದರಿಂದಲೇ ಕೇವಲ ದರ್ಶನಾಕಾಂಕ್ಷಿಯಾದ ಸಾಧಕ, ಈ ಲೋಕವ್ಯವಹಾರಕ್ಕೆ ಸಿಕ್ಕಿಹಾಕಿಕೊಳ್ಳಬಾರದು. ಇಲ್ಲವೇ ಅದೇ ದೊಡ್ಡದು ಎಂದರೆ ದರ್ಶನಾಕಾಂಕ್ಷೆಯನ್ನು ಬಿಟ್ಟುಬಿಡಬೇಕು. ಎರಡನ್ನೂ ಮಾಡುತ್ತೇನೆ ಎಂದು ಹೋದರೆ—ಇನ್ನೆಲ್ಲಾ ಅನುಭವಿಸಬೇಕು. ಅನುಭವಿಸಿ—ಅದಕ್ಕೆ ಆಕೆಯನ್ನೇಕೆ ಬಯ್ಯುತ್ತೀರಿ? ಈಗ ಹೇಳಿ ನಿಮ್ಮಿಂದ ಈ ಬಗೆಯ ಪಾಪಸಂಚಯನವಾಗಿಲ್ಲವೇ?'

ಸನ್ಯಾಸಿ ಅಷ್ಟು ವಿವರಿಸಿ ಕೇಳಿದ ಬಳಿಕ 'ಇಲ್ಲ' ಎಂದುಹೇಳಲು ವೆಂಕಟದಾಸಪ್ಪನವರಿಗೆ ಧೈರ್ಯವಾಗಲಿಲ್ಲ.

'ಆಗಿದೆ ಮಹಾರಾಜ್'

'ಸರಿ—ಅದಕ್ಕೆ ಏನೇನು ಅನುಭವಿಸಬೇಕೋ' ನಗುನಗುತ್ತ 'ಅನುಭವಿಸಿ ಆಕೆ ಕೇಳಿದ ಪ್ರಾಯಶ್ಚಿತ್ತ ಕೊಟ್ಟುಬಿಡಿ, ಇನ್ನಾದರೂ ಇಂಥ ಶಕ್ತಿ ಕ್ಷಯ

ಮಾಡಿಕೊಳ್ಳುವ ಕೆಲಸಕ್ಕೆ ಕೈ ಹಾಕಬೇಡಿ.'

'ಹಾಗಾದರೆ ಆಕೆಯ ದರ್ಶನ ಲಭಿಸುತ್ತದೆಯೇ?'

'ಲಭಿಸುತ್ತದೆ. ಆದರೆ ಅದೂ ಅಷ್ಟು ಒಳ್ಳೆಯ ಗುರಿಯಲ್ಲ, ಬಹಳ ಅಲ್ಪ ಬಯಕೆ.'

'ಅದಕ್ಕಿಂತಲೂ ಹಿರಿದಾದ ಬಯಕೆಯಿದೆಯೇ?'

'ಇದೆ.'

'ಯಾವುದದು?'

'ನಾವೇ ಆಕೆಯಾಗುವುದು! ಮಹಾರಾಜರನ್ನು ನೋಡಬೇಕು ಎನ್ನುವದಕ್ಕಿಂತ ನಾನೇ ಮಹಾರಾಜನಾಗಬೇಕು ಎನ್ನುವುದು ಹಿರಿಯ ಬಯಕೆಯಲ್ಲವೇ?'

'ನಿಜ'.

'ಸರಿ ಈಗ ನಿಮಗೇನಾಗಬೇಕೋ ಅದನ್ನು ಬಯಸಿ'.

'ನಾವೇ ದೇವಿಯಾಗುವುದು ಸಾಧ್ಯವಿದೆಯೇ?'

'ಇದೆ'.

'ಹೇಗೆ ಹನಿ ಕಡಲಿನಲ್ಲಿ ಬಿದ್ದರೆ ಹನಿಯಾಗುತ್ತದೆಯೋ, ಕಡಲಾಗುತ್ತದೆಯೋ'

'ಕಡಲಾಗುತ್ತದೆ.'

'ಇದೂ ಹಾಗೆ'.

'ಆದರೂ ...ಆದರೂ...'

'ಏನು?

'ಆ ತಾಯಿಯನ್ನು ಒಮ್ಮೆ ಕಾಣಬೇಕೆಂದು ನನಗೆ ಆಸೆಯಿದೆ.'

'ಇರಲಿ. ನೀವೇ ಆಕೆಯಾದ ಬಳಿಕ ಆಕೆಯನ್ನು ಕಾಣುವುದು ಅಸಾಧ್ಯವೇನಲ್ಲ .

'ಅದು ಹೇಗೆ ಸಾಧ್ಯ?'

'ಕನ್ನಡಿಯಲ್ಲಿ ನೋಡಿಕೊಂಡರೆ, ನಿನ್ನ ಮುಖ ನಿನಗೆ ಕಾಣಿಸುವುದಿಲ್ಲವೇ?

'ಕಾಣಿಸುತ್ತದೆ,'

'ಸರಿ—ಹಾಗೆ, ನೀನೇ ಆಕೆಯಾದ ಬಳಿಕ, ಕನ್ನಡಿಯಲ್ಲಿ ನೋಡಿಕೊಳ್ಳಿ'.

'ಆ ಕನ್ನಡಿ ಯಾವುದು?'

ಸಕಲ ಚರಾಚರವಸ್ತುವನ್ನು ಒಳಗೊಂಡಿರುವ ಜಗತ್ತೇ ತಾಯಿಯ ಕೈಯಲ್ಲಿರುವ ರತ್ನಮುಕುರ. ಇಲ್ಲಿ ಕಾಣುವುದೆಲ್ಲಾ ಆಕೆಯೇ. ಆ ಮರ, ಈ ಕೊಳ ಈ 'ನಾನು' ಆ 'ನೀನು' ಈ ದೇವಸ್ಥಾನ—ಎಲ್ಲವೂ ಆಕೆಯೇ? ನೋಡು—ಎಲ್ಲ ಕಡೆಯಲ್ಲೂ ಆಕೆಯೇ ಕಾಣಿಸುತ್ತಾಳೋ ಇಲ್ಲವೋ? ನೋಡು ದೃಷ್ಟಿ ಇಟ್ಟು ನೋಡು. ಅಲ್ಲಿ. ಇಲ್ಲಿ ಎಲ್ಲೆಲ್ಲಿಯೂ—ರಾಜರಾಜೇಶ್ವರಿಯೇ!

'ಎಲ್ಲಿ ಎಲ್ಲಿ...'

—ಸನ್ಯಾಸಿಯ ಮಾತುಕೇಳಿ ವೆಂಕಟದಾಸಪ್ಪನವರು ಹುಚ್ಚು ಹಿಡಿದಂತೆ ಕೇಳಿದರು.'

'ಇಲ್ಲಿ'

—ಎಂದು ಸನ್ಯಾಸಿ ವೆಂಕಟದಾಸಪ್ಪನವರ ಕುಂಕುಮಾಂಕಿತವಾದ ಭ್ರೂಮಧ್ಯವನ್ನು ತನ್ನ ಬೆರಳಿನಿಂದ ತಿವಿದ.

## ೧೧

ತಮ್ಮ ಭ್ರೂಮಧ್ಯದಲ್ಲಿ ಸನ್ಯಾಸಿಯ ಕರಾಂಗುಲಿ ಸ್ಪರ್ಶವಾಯಿತು. ಅಷ್ಟು ವೆಂಕಟದಾಸಪ್ಪನವರಿಗೆ ತಿಳಿಯಿತು.

ಮುಂದೆ—

ತಟಕ್ಕನೆ ವೆಂಕಟದಾಸಪ್ಪನವರಿಗೆ ಮೈಮೇಲೆ ಎಚ್ಚರ ಹಾರಿ ಹೋಯಿತು. ಅದುವರೆಗೂ ಅವರ ಕಣ್ಣು ಕಾಣುತ್ತಿದ್ದುದೆಲ್ಲವೂ ಯಾವುದೋ ಅಲೆ ಅವನ್ನು ತೊಳೆಯುತ್ತಿರುವಂತೆ ಮಸಕುಮಸಕಾಗಿ, ಎಲ್ಲವೂ ಅಳಿಸಿ ಹೋಗಿ. ಎಲ್ಲೆಲ್ಲಿಯೂ ಅಲೆಗಳು ತೂಗಲಾರಂಭಿಸಿತು.

'ಅಲೆ...ಅಲೆ...ಎಲ್ಲೆಲ್ಲಿಯೂ ಅಲೆ...'

ಬೆಳದಿಂಗಲೇ ಕರಗಿ ನೀರಾದಂತೆ ಹರಿಯುವ ಅಲೆ; ಕರಗಿಸಿದ ಬೆಳ್ಳಿಯಂಥ ಹೊಳಪು ಅಲೆ...ಆ ಬೆಳ್ಳಿಯ ಕಡಲಿನಲ್ಲಿ ಬೆಣ್ಣೆಯ ಮುದ್ದೆ ಯಂತೆ ಏನೋ ತೇಲುತ್ತಿವೆ. ಅಲ್ಲ— ಆ ಬೆಳಕಿನ ಮುದ್ದೆಯೇ ಕರಗುತ್ತಾ, ಬೆಳ್ಳಿಯ ಅಲೆಗಳಾಗಿ ಎಲ್ಲೆಡೆಯಲ್ಲೂ ವ್ಯಾಪಿಸುತ್ತಿವೆ.

ಆ ಅಲೆಗಳು ಒಂದನ್ನೊಂದು ತಾಕುತ್ತಾ, ಆ ತಾಕು–ನೂಕಾಟದಲ್ಲಿ 'ಓಂ' ಎಂದು ಸದ್ದು ಮಾಡುತ್ತಿದೆ.

ಹಾಗೆ ಸದ್ದು ಮಾಡುತ್ತಾ, ಆ ಬೆಳಕಿನ ಮುದ್ದೆಯಿಂದ ಜನಿಸಿದ ಅಲೆಗಳು, ಅಷ್ಟು ದೂರ ಕುಪ್ಪಳಿಸುತ್ತಾ ಹೋಗಿ, ಮತ್ತೆ ಹಾಗೆ ಹಿಂದಿರುಗಿ ಬಂದು ಆ ಬೆಳಕಿನ ಮುದ್ದೆಯಲ್ಲೇ ಬೆರೆತುಹೋಗುತ್ತಿವೆ.

ಎಲ್ಲೆಲ್ಲಿಯೂ ಬೆಳಕು; ಬರೀ ಬೆಳಕು, ಶುದ್ಧ ಸ್ಫಟಿಕ ವರ್ಣದ ಬೆಳಕು— ಅದೇ ಆದಿ–ಅದೇ ಅಂತ್ಯ.

ಆ ಬೆಳಕೇ ಆಕಾರವಾಗಿ, ಶಬ್ಧ ರೂಪವಾಗಿ, ಕಾಣಿಸುತ್ತದೆ; ಕೇಳಿಸುತ್ತದೆ ಮತ್ತೆ–ನಿರಾಕಾರವಾಗುತ್ತದೆ.

ವೆಂಕಟದಾಸಪ್ಪನವರ ಅಂತಶ್ಚಕ್ಷು ಆ ರೂಪವನ್ನು ನೋಡುತ್ತಿರುವಾಗ, ಅವರ ಬಹಿಃಶ್ಚಕ್ಷುಗಳು ಕಂಬನಿಗರೆಯುತ್ತಿದ್ದವು. ಆನಂದೋದ್ರೇಕದಿಂದ ಬಿಗಿದ ಅವರ ಕಂಠ ತನಗೆ ತಾನೇ ಹೇಳಿಕೊಳ್ಳುತ್ತಿತ್ತು...

'ಕಂಡೆ ನಾನಿಂದು ಶ್ರೀರೂಪವ ಕಂಡೆ
ರೂಪವಿರೂಪವ ಮೀರಿರುವಂಥ ಪರಮ ಶ್ರೀರೂಪವ-ಕಂಡೇ॥
ಅದೇ ಎಲ್ಲದಕೂ ಮೊದಲು
ಅದೆ ತಾನೆಲ್ಲದಕೂ ಕೊನೆಯು।
ಕೊನೆ ಮೊದಲೆಲ್ಲವು ತಾನೇ ತಾನಾಗಿಹ
ಚಿನ್ಮಯ ಮೂರುತಿ ರಾಜರಾಜೇಶ್ವರಿ ರೂಪವ-ಕಂಡೆ॥

ಹಾಡು ಹೇಳಿದ ವೆಂಕಟದಾಸಪ್ಪನವರಿಂದ ಕಣ್ಣೀರು ಹರಿಯುತ್ತಿತ್ತು.

ಹಾಗೆ ಹೇಳುತ್ತಿರುವ ವೆಂಕಟದಾಸಪ್ಪನವರನ್ನು ನೋಡಿದ, ಅವರು ಹೇಳುತ್ತಿದ್ದ ಹಾಡನ್ನು ಕೇಳುತ್ತಿದ್ದ ಸನ್ಯಾಸಿಯ ಕಣ್ಣುಗಳಿಂದಲೂ ನೀರು ಧಾರೆಯಾಗಿ ಹರಿಯುತ್ತಿತ್ತು.

